ಪದವಿಪೂರ್ವ ಶಿಕ್ಷಣ ಇಲಾಖೆ
ಅನುಮೋದಿಸಿದ ಪಠ್ಯಪುಸ್ತಕ

ಪಿ.ಯು.ಸಿ. ಎರಡನೇ ವರ್ಷ

# ಅರ್ಥಶಾಸ್ತ್ರ



ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

## ಪಠ್ಯಪುಸ್ತಕ ರಚನಾ ಕೇಂದ್ರ

### ಸಲಹಾ ಸಮಿತಿ

**ಅಧ್ಯಕ್ಷರು**

ಡಾ. ಬಿ.ಎ. ವಿವೇಕ ರೈ

ಕುಲಪತಿಗಳು

**ಸದಸ್ಯರು**

ಡಾ. ಕೆ.ವಿ.ನಾರಾಯಣ

ಪ್ರೊ. ಲಕ್ಷ್ಮಣ್ ತೆಲಗಾವಿ

ಡಾ. ಕರೀಗೌಡ ಬೀಚನಹಳ್ಳಿ

ಡಾ. ಹಿ.ಚಿ.ಬೋರಲಿಂಗಯ್ಯ

**ನಿರ್ದೇಶಕರು**

ಡಾ. ಟಿ.ಆರ್.ಚಂದ್ರಶೇಖರ

**ಸಹಾಯಕ ನಿರ್ದೇಶಕರು**

ಜೈನುಲ್ಲಾ ಬಳ್ಳಾರಿ

ಪದವಿಪೂರ್ವ ಶಿಕ್ಷಣ ಇಲಾಖೆ
ಅನುಮೋದಿಸಿದ ಪಠ್ಯಪುಸ್ತಕ

ಪಿ ಯು ಸಿ ಎರಡನೇ ವರ್ಷ

# ಅರ್ಥಶಾಸ್ತ್ರ


ಸಂಪಾದಕ

ಡಾ. ಸಿ.ಕೆ. ರೇಣುಕಾರ್ಯ






ಪ್ರಸಾರಾಂಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಸಂಪಾದಕರ ಮಾತು

ಪ್ರಥಮ ಪಿ.ಯುಸಿ.ಗೆ ಕನ್ನಡ ವಿಶ್ವವಿದ್ಯಾಲಯ ಪ್ರಕಟಿಸಿರುವ 'ಅರ್ಥಶಾಸ್ತ್ರ' ಪುಸ್ತಕಕ್ಕೆ ಜ್ಞಾಪಕವಾದ ಶ್ಲಾಘನೆ ದೊರೆತಿರುವುದು ನನಗೆ ಸಂತಸ ತಂದಿದೆ. ಹೀಗಾಗಿ, ಹುಮ್ಮಸ್ಸಿನಿಂದ ಎರಡನೆಯ ಪಿ.ಯು.ಸಿ.ಯ ಪುಸ್ತಕವನ್ನು ಹೊರ ತರುತ್ತಿದ್ದೇವೆ. ಎರಡನೆಯ ಪಿ.ಯು.ಸಿ.ಯ ಪರಿಷ್ಕೃತ ಪಠ್ಯಕ್ರಮಕ್ಕನುಗುಣವಾಗಿ ಈ ಪುಸ್ತಕ ರಚಿತವಾಗಿದೆ. ನಮ್ಮ ರಾಜ್ಯದ ಅತ್ಯಂತ ಹಿರಿಯ ಅಧ್ಯಾಪಕರು ಈ ಗ್ರಂಥಕ್ಕೆ ತಮ್ಮ ಅಮೂಲ್ಯ ಕೊಡುಗೆಯನ್ನು ಕೊಟ್ಟಿದ್ದಾರೆ. ಅವರೆಲ್ಲರಿಗೂ ನಾನು ಆಭಾರಿಯಾಗಿದ್ದೇನೆ. 'ಭಾರತದ ಆರ್ಥಿಕತೆ'ಯ ಮೇಲೆ ಪುಸ್ತಕ ರಚಿಸುವುದು ಕಷ್ಟ. ಹೀಗಿದ್ದರೂ ನನ್ನ ಸ್ನೇಹಿತರು ಈ ವಿಷಯದಲ್ಲಿ ಸಹಕರಿಸಿದ್ದಾರೆ. ನಾನು ಅಂದುಕೊಂಡಿದ್ದಕ್ಕಿಂತ ತುಂಬಾ ತಡವಾಗಿ ಪುಸ್ತಕ ಪ್ರಕಟವಾಗುತ್ತಿದೆ. ಇದಕ್ಕಾಗಿ ವಿಷಾದವಿದೆ. ಆದರೆ ಇದು ತುಂಬಾ ಅನಿವಾರ್ಯವಾಗಿತ್ತೆಂದು ಸಹ ಹೇಳಬಯಸುತ್ತೇನೆ. ಕನ್ನಡ ವಿಶ್ವವಿದ್ಯಾಲಯ ನನ್ನ ಮೇಲೆ ನಂಬಿಕೆಯಿಟ್ಟು ಈ ಜವಾಬ್ದಾರಿಯನ್ನು ಕೊಟ್ಟಿರುವುದಕ್ಕಾಗಿ ಅವರಿಗೆ ವಂದನೆಗಳನ್ನು ಸಲ್ಲಿಸುತ್ತೇನೆ. ಈ ಪುಸ್ತಕ ಪ್ರಕಟಣೆಗೆ ನೆರವಾಗುತ್ತಿರುವ ಎಲ್ಲರಿಗೂ ನಾನು ಕೃತಜ್ಞ. ಈ ಪುಸ್ತಕ ಪ್ರಕಟವಾಗುತ್ತಿರುವ ವೇಳೆಯಲ್ಲಿ ವಿಶ್ವವಿದ್ಯಾಲಯದ ಈಗಿನ ಕುಲಪತಿಗಳಾದ ಡಾ. ಬಿ.ಎ. ವಿವೇಕ ರೈ ಅವರನ್ನು ಹಿಂದಿನ ಕುಲಪತಿಗಳನ್ನು ನೆನೆಯುತ್ತೇನೆ. ಪ್ರಕಟಿಸಿದ ಪ್ರಸಾರಾಂಗಕ್ಕೂ ಅದರ ನಿರ್ದೇಶಕರಿಗೂ ನನ್ನ ಕೃತಜ್ಞತೆಗಳು.

ಮೈಸೂರು

ಡಾ. ಸಿ.ಕೆ. ರೇಣುಕಾರ್ಯ

# ವಿಸ್ತೃತ ಪಠ್ಯಕ್ರಮ

## ಅಧ್ಯಾಯ ೧

## ಪ್ರಸ್ತಾವನೆ (೧೬ ಗಂಟೆ)

**೧.೧. ಮೂಲ ಪರಿಕಲ್ಪನೆಗಳು ಮತ್ತು ಅಭಿವೃದ್ಧಿ ಸೂಚಿಗಳು (೬ ಗಂಟೆ)**

ಆರ್ಥಿಕ ಬೆಳೆವಣಿಗೆ ಆರ್ಥಿಕ ಅಭಿವೃದ್ಧಿ ಆರ್ಥಿಕ ಬೆಳವಣಿಗೆ ಮತ್ತು ಅಭಿವೃದ್ಧಿ ನಡುವೆ ಮೂಲಭೂತ ವ್ಯತ್ಯಾಸಗಳು. ಜೈವಿಕ ಪರಿಸರಕ್ಕೆ ಸಂಬಂಧಿಸಿದಂತೆ, ಸುಸ್ಥಿರಗತಿಯ ಅಭಿವೃದ್ಧಿ. ರಾಷ್ಟ್ರಗಳ ವರ್ಗೀಕರಣ. ಅಭಿವೃದ್ಧಿ ಹೊಂದಿದ ಆರ್ಥಿಕತೆಗಳಲ್ಲಿ ಕಂಡುಬರುವ ಪ್ರಮುಖ ಲಕ್ಷಣಗಳು. ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರವಾಗಿ ಭಾರತ. ಆರ್ಥಿಕತೆಯ ಲಕ್ಷಣಗಳು. ಜೀವನದ ಭೌತಿಕ ಗುಣಮಟ್ಟ ಸೂಚಿ ಮಾನವ ಅಭಿವೃದ್ಧಿ ಸೂಚಿ. ಮತ್ತು ಜೀವನ ಮಟ್ಟ ಸೂಚಿ ಪ್ರಶ್ನೆಗಳು ಪಾರಿಭಾಷಿಕ ಪದಗಳು ಸಾರಾಂಶ.

**೧.೨. ಸಂಖ್ಯಾ ಮಾಹಿತಿ ವಿಧಗಳು ಮತ್ತು ಅಂಕಿ ಸಂಖ್ಯೆಗಳ ವಿವರಣೆ (೪ ಗಂಟೆ)**

ಅಂಕಿ ಅಂಶ ಮಾಹಿತಿಯ ಬಗೆಗಳು ಮತ್ತು ಸಂಖ್ಯಾಮಾಹಿತಿಯ ವಿವರಣೆ. ಸಮಯ ಸಂಖ್ಯಾಶ್ರೇಣಿ, ನಿಶ್ಚಿತ ಅವಧಿಯ ಸಂಖ್ಯಾಶ್ರೇಣಿ ಮತ್ತು ಪುನರ್ ಪರಿಶೀಲನಾ ಸಂಖ್ಯಾಶ್ರೇಣಿ ಅಂಕಿಅಂಶಗಳ ಸಂಗ್ರಹಣಾ ಕ್ರಮ. ಪ್ರಾಥಮಿಕ ಮೂಲದಿಂದ ಅಂಕಿಅಂಶ ಸಂಗ್ರಹಣಾ ವಿಧಾನ ಪರಿಷ್ಕರಣ ವರ್ಗೀಕರಣ ಸಂಖ್ಯಾ ಮಾಹಿತಿಯ ನಕ್ಷಾನಿರೂಪಣೆ. ಆರ್ಥಿಕ ಬೆಳಣಿಗೆಯ ಲೆಕ್ಕಾಚಾರ. ಪ್ರಶ್ನೆಗಳು.

**೧.೩. ರಾಷ್ಟ್ರೀಯ ವರಮಾನದ ಬೆಳವಣಿಗೆ (೩ ಗಂಟೆ)**

ಒಟ್ಟು ದೇಶೀಯ ಉತ್ಪನ್ನದ ಬೆಳವಣಿಗೆ. ಉತ್ಪಾದನಾಂಗ ಬೆಲೆಯಲ್ಲಿ ಒಟ್ಟು ದೇಶೀಯ ಉತ್ಪನ್ನದ ಪ್ರವೃತ್ತಿ. ಒಟ್ಟು ದೇಶೀಯ ಉತ್ಪನ್ನದಲ್ಲಿ ವಿವಿಧ ವಲಯಗಳ ಪಾಲು ಮತ್ತು ಸಂಯೋಜನೆ. ತಲಾ ಆದಾಯದ ಬೆಳವಣಿಗೆ.

**೧.೪. ಆರ್ಥಿಕ ಸುಧಾರಣೆಗಳು : ಒಂದು ಪ್ರವೇಶ (೩ ಗಂಟೆ)**

ಸ್ಥಿರೀಕರಣ ಮತ್ತು ರಚನಾತ್ಮಕ ಹೊಂದಾಣಿಕೆಗಳ ಕಾರ್ಯಕ್ರಮಗಳು. ಕೋಶೀಯ ಸುಧಾರಣೆಗಳು.ಕೈಗಾರಿಕಾ ವಲಯದ ಸುಧಾರಣೆಗಳು. ಹಣಕಾಸು ವಲಯದ ಸುಧಾರಣೆಗಳು. ಸಾರ್ವಜನಿಕ ವಲಯದ ಸುಧಾರಣೆಗಳು. ಬಾಹ್ಯವಲಯದ ಸುಧಾರಣೆಗಳು. ಪ್ರಶ್ನೆಗಳು

## ಅಧ್ಯಾಯ ೨

## ಮಾನವ ಸಂಪನ್ಮೂಲ ಅಭಿವೃದ್ಧಿ (೧೧ ಗಂಟೆ)

### ೨.೧. ಜನಸಂಖ್ಯೆ (೫ ಗಂಟೆ)

ಒಟ್ಟು ಜನಸಂಖ್ಯೆ ಗಾತ್ರ, ಜನಸಂಖ್ಯೆಯ ಬೆಳವಣಿಗೆ, ಜನಸಂಖ್ಯಾ ರಚನೆ, ವಯಸ್ಸು ಲಿಂಗ ಮತ್ತು ಗ್ರಾಮೀಣ ನಗರ ಜನಸಂಖ್ಯಾ ರಚನೆ, ಜನಸಾಂದ್ರತೆ.

ಉದ್ಯೋಗ ಆಧಾರಿತ ಜನಸಂಖ್ಯಾ ವಿಶ್ಲೇಷಣೆ, ಪ್ರಾಥಮಿಕ, ದ್ವಿತೀಯ, ತೃತೀಯ ವಲಯಗಳಲ್ಲಿ ಜನಸಂಖ್ಯೆ ಹಂಚಿಕೆ.

ಜನಸಂಖ್ಯೆ ಬೆಳವಣಿಗೆಯ ನಿಯಂತ್ರಣ ಕ್ರಮಗಳು, ಕುಟುಂಬ ಕಲ್ಯಾಣ ಕಾರ್ಯಕ್ರಮ, ಉದ್ದೇಶಗಳು, ಮಾತೃತ್ವ ಹಾಗೂ ಶಿಶು ಆರೋಗ್ಯ ಸೇವೆಗಳ ಕ್ರಮಗಳು, ಮತ್ತು ಜನನ ನಿಯಂತ್ರಣ ಕ್ರಮಗಳು, ರಾಷ್ಟ್ರೀಯ ಜನಸಂಖ್ಯಾ ರೀತಿ ೨೦೦೨ ಉದ್ದೇಶ ಮತ್ತು ಗುರಿಗಳು.

### ೨.೨. ಬಡತನ ಮತ್ತು ನಿರುದ್ಯೋಗ (೩ ಗಂಟೆ)

ಯೋಜನಾ ಆಯೋಗದ ಬಡತನ ರೇಖೆಯ ವ್ಯಾಖ್ಯಾನ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಬಡತನದ ರೇಖೆಯ ಕೆಳಗಿರುವ ಒಟ್ಟು ಜನಸಂಖ್ಯೆ. ನಿರುದ್ಯೋಗದ ಅರ್ಥ ನಿರುದ್ಯೋಗದ ವಿಧಗಳು, ರಾಷ್ಟ್ರೀಯ ಮಾದರಿ ಸಮೀಕ್ಷಾ ಸಂಘಟನೆ ವ್ಯಾಖ್ಯಾನದಂತೆ ತೆರೆದ ಮತ್ತು ಮರೆಮಾಡಿದ ನಿರುದ್ಯೋಗ ರೂಢಿಗತ, ವಾರದ ಸ್ಥಿತಿಯ ಮತ್ತು ದೈನಂದಿನ ಸ್ಥಿತಿ ನಿರುದ್ಯೋಗ, ಬಡತನ, ಬಡತನ ನಿವಾರಣೆ ಮತ್ತು ಉದ್ಯೋಗ ಸೃಷ್ಟಿ ಕಾರ್ಯಗಳು.

### ೨.೩ ಆರೋಗ್ಯ ಮತ್ತು ಶಿಕ್ಷಣ (೩ ಗಂಟೆ)

ಸಾಮಾಜಿಕ ಮೂಲಭೂತ ಸೌಕರ್ಯವಾಗಿ ಆರೋಗ್ಯ ಮತ್ತು ಶಿಕ್ಷಣದ ಮಹತ್ವ, ಆರೋಗ್ಯ ಮತ್ತು ಶಿಕ್ಷಣ ಸ್ಥಿತಿಯು ಸೂಚಕಗಳು, ಸ್ತ್ರೀ ಮತ್ತು ಪುರುಷ ಸಾಕ್ಷರತೆ ಪ್ರಮಾಣ, ಮತ್ತು ಗ್ರಾಮೀಣ ನಗರ ವಿಧಿಗಳು, ಜೀವಿತಾವಧಿ, ಕಚ್ಚಾ ಜನಪದ ಮತ್ತು ಮರಣದ ಶಿಶು ಮರಣದರ.

## ಅಧ್ಯಾಯ ೩

## ಕೃಷಿ

### ೩.೧ ಭೂಮಿಯ ಬಳಕೆ (೨ ಗಂಟೆ)

ಭೂಮಿಯ ಬಳಕೆಯ ಅರ್ಥ, ಭೂಮಿಯ ಬಳಕೆಯ ಪ್ರಧಾನ ಕ್ರಮಗಳು, ಬೆಳೆಯ ಪ್ರದೇಶ ಮತ್ತು ನಿವ್ವಳ ಬಿತ್ತನೆ ಪ್ರದೇಶಗಳ ನಡುವಣ ವ್ಯತ್ಯಾಸ, ಮಣ್ಣಿನ ಸವಕಳಿಯ ಅರ್ಥ, ಸವಕಳಿಯ ಕಾರಣ ಮತ್ತು ಪರಿಣಾಮಗಳು, ಸಾರ ಸಂರಕ್ಷಣೆಯ ಕ್ರಮಗಳು.

**೩.೨ ನೀರಾವರಿ (೪ ಗಂಟೆ)**

ಸಣ್ಣ, ಮಧ್ಯಮ, ದೊಡ್ಡ - ಅರ್ಥ ಮತ್ತು ವ್ಯಾಪ್ತಿ, ನೀರಾವರಿ ಅರ್ಥ - ಒಣಭೂಮಿ ಬೇಸಾಯದ ಅರ್ಥ ಮತ್ತು ವ್ಯಾಪ್ತಿ. ನೀರಿನ ಮೂಲಗಳ ಸಂರಕ್ಷಣೆಯ ಅರ್ಥ ಮತ್ತು ಅಗತ್ಯ, ನೀರಿನ ಸಂರಕ್ಷಣಾ ಕ್ರಮಗಳು, ಹನಿನೀರಾವರಿ ಮತ್ತು ತುಂತುರು ನೀರಾವರಿ, ಬಾವಿ ಮತ್ತು ಕೆರೆಗಳ ಹೂಳೆತ್ತುವಿಕೆ ಮಳೆ ನೀರು ಕೊಯ್ಲು.

**೩.೩ ಆಹಾರ ಸಮಸ್ಯೆ (೨ ಗಂಟೆ)**

ಆಹಾರ ಸಮಸ್ಯೆಯ ಸ್ವರೂಪ, ಒಟ್ಟು ಆಹಾರೋತ್ಪಾದೆ, ತಲಾಲಭ್ಯತೆ ಮತ್ತು ಅನುಭೋಗ, ಆಹಾರ ಭದ್ರತಾ ಕ್ರಮಗಳ ಮೂಲಕ ಆಹಾರ ಲಭ್ಯತೆ, ಆಹಾರಧಾನ್ಯಗಳ ಸಾರ್ವಜನಿಕ ವಿತರಣಾ ವ್ಯವಸ್ಥೆ - ಅರ್ಥ ಮತ್ತು ಕಾರ್ಯ ವಿಧಾನ.

**೩.೪ ವಿಜ್ಞಾನ ಮತ್ತು ತಂತ್ರಜ್ಞಾನದ ಬಳಕೆ (೩ ಗಂಟೆ)**

ಕೊಯ್ಲು ಪೂರ್ವದ ತಂತ್ರಜ್ಞಾನ, ಹಸಿರುಕ್ರಾಂತಿ, ಕೊಯ್ಲು ನಂತರದ ತಂತ್ರಜ್ಞಾನ ಉಗ್ರಾಣ, ಮಾರುಕಟ್ಟೆ ಮತ್ತು ಶೀತಲ ಗೃಹ ಸವಲತ್ತುಗಳು - ಇದರ ಅನ್ವಯಿಕೆಗಳು ಹಸಿರು, ನೀರು, ಶ್ವೇತ ಮತ್ತು ಹಳದಿಕ್ರಾಂತಿ.

## ಅಧ್ಯಾಯ ೪

## ಕೈಗಾರಿಕಾಭಿವೃದ್ಧಿ (೯ ಗಂಟೆ)

**೪.೧. ಕೈಗಾರಿಕೆಗಳ ವರ್ಗೀಕರಣ (೨ ಗಂಟೆ)**

೪.೧.೧. ಸಣ್ಣ ಪ್ರಮಾಣದ, ಮಧ್ಯಮ ಮತ್ತು ದೊಡ್ಡ ಪ್ರಮಾಣದ ಕೈಗಾರಿಕೆಗಳ ಅರ್ಥ

೪.೧.೨. ತಯಾರಿಕಾ ಕೈಗಾರಿಕೆಗಳ ಮತ್ತು ಸೇವಾ ಕೈಗಾರಿಕೆಗಳ ನಡುವಣ ವ್ಯತ್ಯಾಸ

೪.೧.೩. ಭಾರತ ಕೆಲವು ಪ್ರಮುಖ ದೊಡ್ಡ ಕೈಗಾರಿಕೆಗಳು

**೪.೨. ಕೈಗಾರಿಕೆಗಳ ಅಭಿವೃದ್ಧಿಯ ತಂತ್ರ (೩ ಗಂಟೆ)**

**೪.೩. ಸಣ್ಣ ಪ್ರಮಾಣದ ಕೈಗಾರಿಕೆಗಳ ಉತ್ತೇಜನ (೪ ಗಂಟೆ)**

೪.೩.೧. ಸಣ್ಣ ಪ್ರಮಾಣದ ಕೈಗಾರಿಕೆಗಳ ಉತ್ತೇಜನ

೪.೩.೨. ಸಣ್ಣ ಪ್ರಮಾಣದ ಕೈಗಾರಿಕೆಗಳ ಸಮಸ್ಯೆಗಳು

೪.೩.೩. ಸಣ್ಣ ಪ್ರಮಾಣದ ಕೈಗಾರಿಕೆಗಳ ಅಸ್ವಸ್ಥತೆ. ಸಾರಾಂಶ

**ಪಾರಿಭಾಷಿಕ ಕೋಶ, ಪ್ರಶ್ನೆಗಳು**

## ಅಧ್ಯಾಯ ೫

## ಕಾರ್ಮಿಕ ನೀತಿ (೧೧ ಗಂಟೆ)

**೫.೧. ಕೃಷಿ ಕಾರ್ಮಿಕರು (೩ ಗಂಟೆ)**

ಕೃಷಿ ಕಾರ್ಮಿಕರ ಗಾತ್ರ, ಕೃಷಿ ಕಾರ್ಮಿಕರು ಮತ್ತು ಕೃಷಿಕರ ನಡುವಣ ವ್ಯತ್ಯಾಸ, ಕೃಷಿ ಕಾರ್ಮಿಕರ ಸಾಮಾಜಿಕ, ಆರ್ಥಿಕ ಸ್ಥಾನಮಾನ, ಜಾತಿ ಮತ್ತು ಲಿಂಗ ಸಂರಚನೆ, ಜೀತ ಪದ್ಧತಿ ವ್ಯವಸ್ಥೆ ಮತ್ತು ಅದರ ನಿರ್ಮೂಲನೆ. ಬಾಲ ಕಾರ್ಮಿಕರು ಮತ್ತು ಅದರ ನಿರ್ಮೂಲನೆ, ಅಸಂಘಟಿತ ಕಾರ್ಮಿಕ ಮಾರುಕಟ್ಟೆಗಳು. ಸಾಮಾಜಿಕ ಭದ್ರತಾ ಕ್ರಮಗಳು ಮತ್ತು ಕೃಷಿ ಕೂಲಿ ಪದ್ಧತಿಯ ಪ್ರವೃತ್ತಿಗಳು, ನೈಜ ಕೂಲಿ, ಹಣ ರೂಪಿಕೂಲಿ, ಕನಿಷ್ಠ ಕೂಲಿ ಕಾಯಿದೆ.

**೫.೨. ಕೈಗಾರಿಕಾ ಕಾರ್ಮಿಕರು**

ಕೈಗಾರಿಕಾ ಕಾರ್ಮಿಕರ ಗಾತ್ರ, ಕೈಗಾರಿಕಾ ಕಾರ್ಮಿಕರಿಗೆ ಖಾಸಗಿ ಮತ್ತು ಸಾರ್ವಜನಿಕ ಕ್ಷೇತ್ರದ ಕೊಡುಗೆ, ಸಂಘಟಿತ ಕಾರ್ಮಿಕ ಸಂಘಟನೆಗಳು, ಕಾರ್ಮಿಕ ಸುಧಾರಣೆಗಳು, ಎರಡನೆಯ ರಾಷ್ಟ್ರೀಯ ಕಾರ್ಮಿಕ ಆಯೋಗದ ಶಿಫಾರಸ್ಸುಗಳು. ಕೈಗಾರಿಕಾ ಕಾರ್ಮಿಕರಿಗೆ ಸಾಮಾಜಿಕ ಭದ್ರತಾಕ್ರಮಗಳು, ರಾಷ್ಟ್ರೀಯ ಪುನರಾವರ್ತನ ನಿಧಿಯ ಮಹತ್ವ.

**೫.೩. ಮಹಿಳೆಯ ಸಬಲೀಕರಣ**

ಆರ್ಥಿಕ ಅಭಿವೃದ್ಧಿಯಲ್ಲಿ ಮಹಿಳೆಯರ ಪಾತ್ರ - ಮಹಿಳಾ ದುಡಿಮೆಗಾರರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳು - ಕೂಲಿಯಲ್ಲಿನ ವ್ಯತ್ಯಯಗಳು-ಕೂಲಿಯೇತರ/ ಕೂಲಿರಹಿತ ದುಡಿಮೆ. ದುಡಿಮೆ ಸಹಭಾಗಿತ್ವ ಪ್ರಮಾಣ - ಮಹಿಳಾ ಸಬಲೀಕರಣ ಕಾರ್ಯಕ್ರಮಗಳು - ಮಹಿಳಾ ಸ್ವಸಹಾಯ ಗುಂಪುಗಳು

## ಅಧ್ಯಾಯ ೬

## ಆರ್ಥಿಕ ಮೂಲ ಸೌಲಭ್ಯಗಳು (೧೯ ಗಂಟೆ)

**೬.೧. ಸಾರಿಗೆ (೩ ಗಂಟೆ)**

ಅಭಿವೃದ್ಧಿಯಲ್ಲಿ ಸಾರಿಗೆ ಮಹತ್ವ, ಸಾರಿಗೆ ರಚನೆ, ಪ್ರಸ್ತುತ ಸ್ಥಿತಿಗತಿ, ರಸ್ತೆ, ರೈಲು, ಜಲ ಮತ್ತು ವಾಯುಮಾರ್ಗಗಳಿಗೆ ಸಂಬಂಧಿಸಿದ ಸುಧಾರಣೆಗಳು.

| ವಲಯ | ರಚನೆ | ಪ್ರಸ್ತುತ ಸ್ಥಿತಿ | ಸುಧಾರಣೆ |
|---|---|---|---|
| ರಸ್ತೆ | ವಿಧಗಳು, ರಾಷ್ಟ್ರೀಯ / ರಾಜ್ಯ ಹೆದ್ದಾರಿಗಳು ಜಿಲ್ಲಾ ಮುಖ್ಯರಸ್ತೆಗಳು ಹಳ್ಳಿ ರಸ್ತೆಗಳು | ವಿವಿಧ ಬಗೆಯ ರಸ್ತೆಗಳ ಉದ್ದ | ರಸ್ತೆ ಮತ್ತು ಸೇತುವೆಗಳ ನಿರ್ಮಾಣದಲ್ಲಿ ಖಾಸಗಿ ಸಾರ್ವಜನಿಕ ವಲಯಗಳ ಸಹಭಾಗಿತ್ವ, ನಿರ್ಮಾಣ |

| | | | |
|---|---|---|---|
| | | | ಮಾಲಿಕತ್ವ, ನಿರ್ವಹಣೆ ವರ್ಗಾವಣೆ |
| ರೈಲು | ವಿಧಗಳು ಕಿರು ರೈಲು ಮಾರ್ಗ ಮೀಟರ್ ರೈಲು ಮಾರ್ಗ ಅಗಲ ರೈಲುಮಾರ್ಗ | ರೈಲು ಮಾರ್ಗಗಳ ಉದ್ದ, ಪ್ರಯಾಣಿಕರ ಸಾಗಣೆ, ಸರಕುಗಳ ಸಾಗಣೆ | ರೈಲು ಸೇವೆಯ ಖಾಸಗೀಕರಣ ಏಕರೂಪ ರೈಲು ಮಾರ್ಗ. ಡೀಸೆಲ್ ಮತ್ತು ವಿದ್ಯುತ್ ಚಾಲಿತ ರೈಲುಗಳು |
| ಜಲಸಾರಿಗೆ | ವಿಧಗಳು ಒಳನಾಡು ಜಲಸಾರಿಗೆ ಸಮುದ್ರ ಜಲ ಸಾರಿಗೆ | ಪ್ರಯಾಣಿಕರ ಹಡಗು ಸರಕು ಸಾಗಣೆ ಹಡಗು ಸಾರಿಗೆ ಕಂಪನಿಗಳ | ಬಂದರುಗಳ ನಿರ್ಮಾಣ ದಲ್ಲಿ ಖಾಸಗಿ ಮತ್ತು ಸಾರ್ವಜನಿಕ ಸಹಭಾಗಿತ್ವ, ನಿರ್ಮಾಣ, ಮಾಲಿಕತ್ವ ನಿರ್ವಹಣೆ ಮತ್ತು ವರ್ಗಾವಣೆ |
| ವಾಯುಸಾರಿಗೆ | ವಿಧಗಳು ಆಂತರಿಕ ಮತ್ತು ಬಾಹ್ಯ | ವಾಯುಸಾರಿಗೆ ಕಂಪನಿಗಳು ಪ್ರಯಾಣಿಕರ ಸಾಗಣೆ ಮತ್ತು ಸರಕು ಸಾಗಣೆ | ಆಂತರಿಕ ವಾಯುಯಾನದ ಖಾಸಗೀಕರಣ, ಜೆಟ್ ಮತ್ತು ಸಹರಾ ಕಂಪನಿಗಳು |

**೬.೨. ಸಂಪರ್ಕ (೩ ಗಂಟೆ)**

ಆರ್ಥಿಕ ಅಭಿವೃದ್ಧಿಯಲ್ಲಿ ಸಂಪರ್ಕದ ಪಾತ್ರ - ದೂರಸಂಪರ್ಕ ವ್ಯವಸ್ಥೆಯ ರಚನೆ, ಅಂಚೆ ಮತ್ತು ತಂತಿ, ದೂರವಾಣಿ ಮತ್ತು ಫ್ಯಾಕ್ಸ್, ಮಾಹಿತಿ ತಂತ್ರಜ್ಞಾನ ದೂರಸಂಪರ್ಕ ವ್ಯವಸ್ಥೆಯ ಪ್ರಸ್ತುತ ಸ್ಥಿತಿ. ಅಂಚೆ ಕಚೇರಿ, ದೂರವಾಣಿ ಕಚೇರಿ, ದೂರವಾಣಿ ವಿನಿಮಯ ಕೇಂದ್ರ ಹಾಗೂ ಜನಸಂಖ್ಯೆ ನಡುವಣ ಅನುಪಾತ. ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಅಂತರ್ಜಾಲ (ಇಂಟರ್‌ನೆಟ್) ಸಂಪರ್ಕ. ದೂರಸಂಪರ್ಕ ವಲಯದಲ್ಲಿ ಸುಧಾರಣೆಗಳು. ಖಾಸಗೀಕರಣ. ಸಂಚಾರಿ (ಮೊಬೈಲ್) ದೂರವಾಣಿ ಸೇವೆ.

**೬.೩. ಹಣಕಾಸು ವಲಯ (೧೦ ಗಂಟೆ)**

ಹಣ ಮಾರುಕಟ್ಟೆ ಹಾಗೂ ಕರೆ ಹಣ ಮಾರುಕಟ್ಟೆಗಳ ಅರ್ಥ ಮತ್ತು ಭಿನ್ನತೆಗಳು. ಬಂಡವಾಳ ಮಾರುಕಟ್ಟೆ ಅರ್ಥ ಮತ್ತು ವಿಧಗಳು : ಪ್ರಾಥಮಿಕ ಮತ್ತು ದ್ವಿತೀಯ ಬಂಡವಾಳ ಮಾರುಕಟ್ಟೆಗಳು.

ಭಾರತೀಯ ವಾಣಿಜ್ಯ ಬ್ಯಾಂಕುಗಳ ರಚನೆ - ಸಾರ್ವಜನಿಕ ಮತ್ತು ಖಾಸಗಿ ವಲಯದ ಬ್ಯಾಂಕುಗಳು - ಭಾರತೀಯ ಮತ್ತು ವಿದೇಶಿ ಬ್ಯಾಂಕುಗಳು. ವಾಣಿಜ್ಯ ಬ್ಯಾಂಕುಗಳ ಬೆಳವಣಿಗೆ - ಶಾಖೆಗಳ ವಿಸ್ತರಣೆ - ಠೇವಣಿಗಳ ಸಂಗ್ರಹಣೆ - ವಾಣಿಜ್ಯ ಬ್ಯಾಂಕುಗಳಿಂದ ಆದ್ಯತಾ ವಲಯಗಳಿಗೆ ಸಾಲ. ಬ್ಯಾಂಕಿಂಗ್ ವಲಯದ ಸುಧಾರಣೆ - ಎಂ. ನರಸಿಂಹಮ್ ಸಮಿತಿಯ ಶಿಫಾರಸ್ಸುಗಳು - ಠೇವಣಿಗಳು ಹಾಗೂ ಸಾಲದ ಬಡ್ಡಿಯ ಅನಿಯಂತ್ರಣ. ಮಾರುಕಟ್ಟೆ ನಿರ್ದೇಶಿತ ಬಡ್ಡಿದರ. ಸಹಕಾರಿ ವಲಯ - ವರ್ಗೀಕರಣ ಮತ್ತು ಬೆಳವಣಿಗೆ. ಭಾರತೀಯ ರಿಸರ್ವ ಬ್ಯಾಂಕು - ಕಾರ್ಯಗಳು - ಹಣಕಾಸು ನೀತಿ - ಬೆಲೆ ಏರಿಕೆಯ ನಿಯಂತ್ರಣ - ಹಣದುಬ್ಬರ ಸೂಚಿಯಾಗಿ ಸಗಟು ಬೆಲೆಗಳ ಸೂಚ್ಯಂಕ - ನಗದು ಮೀಸಲು ಅನುಪಾತ - ಶಾಸನಾತ್ಮಕ ದ್ರವ್ಯ ಅನುಪಾತ

**೬.೪. ಇಂಧನ (೩ ಗಂಟೆ)**

ಸಂಪ್ರದಾಯಿಕ ಇಂಧನದ ಮೂಲಗಳು - ಶಾಖೋತ್ಪನ್ನ ಇಂಧನ - ಜಲವಿದ್ಯುತ್ - ತೈಲ - ನೈಸರ್ಗಿಕ ಅನಿಲ, ಪರಮಾಣು ಇಂಧನ - ಅಸಂಪ್ರದಾಯಿಕ ಇಂಧನದ ಮೂಲಗಳು - ಜೈವಿಕ ಅನಿಲ, ವಾಯು ಇಂಧನ - ಸೌರಶಕ್ತಿ - ಭಾರತದಲ್ಲಿ ಇಂಧನದ ಬೇಡಿಕೆ ಮತ್ತು ನೀಡಿಕೆ.

## ಅಧ್ಯಾಯ ೭

## ವಿದೇಶಿ ವ್ಯಾಪಾರ (೧೨ ಗಂಟೆ)

**೭.೧. ರಫ್ತು ಮತ್ತು ಆಮದು (೩ ಗಂಟೆ)**

ಭಾರತದ ರಫ್ತುಗಳು (ರೂಪಾಯಿಗಳಲ್ಲಿ ಮತ್ತು ಚಾಲ್ತಿ ಬೆಲೆಗಳಲ್ಲಿ) ಒಟ್ಟು ರಫ್ತುವಿನ ಬೆಳವಣಿಗೆ - ರಫ್ತುವಿನ ವಾರ್ಷಿಕ ಬೆಳವಣಿಗೆ ಪ್ರಮಾಣ - ರಫ್ತುವಿನ ಸಂಯೋಜನೆ - ಪ್ರಾಥಮಿಕ ಸರಕುಗಳು - ಕೈಗಾರಿಕಾ ಸರಕುಗಳು - ಸೇವೆಗಳು - ರಫ್ತುಗಳು ತಲುಪುವ ದೇಶಗಳು ಮತ್ತು ಪ್ರದೇಶಗಳು ಭಾರತದ ಆಮದುಗಳು (ರೂಪಾಯಿಗಳಲ್ಲಿ ಮತ್ತು ಚಾಲ್ತಿ ಬೆಲೆಗಳಲ್ಲಿ) ಒಟ್ಟು ಆಮದುವಿನ ಬೆಳವಣಿಗೆ - ಆಮದುವಿನ ವಾರ್ಷಿಕ ಬೆಳವಣಿಗೆ ಪ್ರಮಾಣ ಆಮದುವಿನ ಸಂಯೋಜನೆ - ಮುಖ್ಯ ಆಮದು ವಿಧಗಳು ಆಮದು ಮೂಲ ದೇಶಗಳು.

**೭.೨. ಪಾವತಿ ಶುಲ್ಕ (೩ ಗಂಟೆ)**

ಚಾಲ್ತಿ ಖಾತೆ ಮತ್ತು ಬಂಡವಾಳ ಖಾತೆಗಳ ಅರ್ಥ - ಚಾಲ್ತಿ ಖಾತೆಯ ಬಾಬತ್ತುಗಳು - ಸರಕುಗಳು - ದೃಗ್ಗೋಚರ, ಸೇವೆಗಳು - ಅಗೋಚರ ವ್ಯಾಪಾರ ಶಿಲ್ಕುವಿನ ವ್ಯಾಖ್ಯೆ - ಚಾಲ್ತಿ ಖಾತೆ ಶಿಲ್ಕು - ವಿದೇಶಿ ವಿನಿಮಯ ನಿಧಿಯ ಅರ್ಥ - ಆಮದು ಪಾವತಿ ಸಂಬಂಧಿಸಿದ ವಿದೇಶಿ ವಿನಿಮಯ ಪ್ರಮಾಣ - ಭಾರತದ ವಿದೇಶಿ ಶಿಲ್ಕುವಿನ ಇಂದಿನ

ಸ್ಥಿತಿಗತಿ.

**೭.೩. ವ್ಯಾಪಾರ ವಲಯದ ಸುಧಾರಣೆ (೩ ಗಂಟೆ)**

ಪ್ರಸ್ತುತ ಆಮದು-ರಫ್ತು ನೀತಿಯ ಉದ್ದೇಶಗಳು. ರಫ್ತು ಪ್ರೋತ್ಸಾಹ ಕ್ರಮಗಳು - ಆಮದು ಉದಾರೀಕರಣ. ಪರಿಮಾಣಾತ್ಮಕ ನಿಯಂತ್ರಣಗಳ ರದ್ಧತಿ.

**೭.೪. ವಿಶ್ವ ವ್ಯಾಪಾರ ಸಂಸ್ಥೆ (೩ ಗಂಟೆ)**

ಉದ್ದೇಶ ಮತ್ತು ಸದಸ್ಯತ್ವ - ಬಹು ಪಕ್ಷೀಯ ಒಪ್ಪಂದದ ಸಂಯೋಜನೆ - ಗ್ಯಾಟ್ (ಜಿ.ಎ.ಟಿ.ಟಿ.) ಗ್ಯಾಟ್ಸ್ (ಜಿ.ಎ.ಟಿ.ಎಸ್) ಟ್ರಿಪ್ಸ್ (ಟಿಆರ್ಐಪಿಎಸ್) ಟ್ರಿಮ್ಸ್ (ಟಿಆರ್ಐಎಮ್ಎಸ್) ಭಾರತ ಮತ್ತು ಡಬ್ಲುಟಿಒ.

## ಅಧ್ಯಾಯ ೮

## ಸಾರ್ವಜನಿಕ ಹಣಕಾಸು (೧೦ ಗಂಟೆ)

**೮.೧. ಕೋಶೀಯ ನೀತಿ ಮತ್ತು ಬಜೆಟ್ (೨ ಗಂಟೆ)**

ಕೋಶೀಯ ನೀತಿಯ ಅರ್ಥ ಮತ್ತು ಉದ್ದೇಶಗಳು ಕೋಶೀಯ ನೀತಿಯ ಕ್ರಮಗಳು ಆಯವ್ಯಯ (ಬಜೆಟ್) - ಅರ್ಥ - ವಿವಿಧ ಭಾಗಗಳು - ಆಯವ್ಯಯದ ವಿಧಗಳು - ಸಮತೋಲನ ಆಯವ್ಯಯ ಆಯಾದಿತ್ಯ ಆಯವ್ಯಯ ವ್ಯಯಾದಿತ್ಯ ಆಯವ್ಯಯ

**೮.೨. ಸಾರ್ವಜನಿಕ ಆದಾಯ (೩ ಗಂಟೆ)**

ಸಾರ್ವಜನಿಕ ಆದಾಯದ ಮೂಲಗಳು - ಆದಾಯದ ಪ್ರಮಾಣ, ತೆರಿಗೆ ಮತ್ತು ತೆರಿಗೆಯೇತರ ಮೊತ್ತ, ಬಂಡವಾಳ ಆಯ ಆಂತರಿಕ ಮತ್ತು ಬಾಹ್ಯ ಸಾಲಗಳು - ಮೌಲ್ಯವರ್ಧಿತ ತೆರಿಗೆ ಅರ್ಥ ಮಹತ್ವ.

**೮.೩. ಸಾರ್ವಜನಿಕ ವೆಚ್ಚ (೨ ಗಂಟೆ)**

ಸಾರ್ವಜನಿಕ ವೆಚ್ಚದ ವರ್ಗೀಕರಣ, ರೆವಿನ್ಯೂ ವೆಚ್ಚ ಮತ್ತು ಬಂಡವಾಳ ವೆಚ್ಚ ಯೋಜನಾ ವೆಚ್ಚ ಮತ್ತು ಯೋಜನೇತರ ವೆಚ್ಚ.

**೮.೪. ಸಾರ್ವಜನಿಕ ಋಣ (೨ ಗಂಟೆ)**

ಸಾರ್ವಜನಿಕ ಋಣದ ಅರ್ಥ. ಸಾರ್ವಜನಿಕ ಋಣದ ಬಾಬತ್ತುಗಳು. ಆಂತರಿಕ ಋಣ ಮತ್ತು ಬಾಹ್ಯ ಋಣ, ಸಾರ್ವಜನಿಕ ಋಣದ ಗಾತ್ರ.

**೮.೫. ಬಜೆಟ್ ಕೊರತೆಗಳು (೩ ಗಂಟೆ)**

ಬಜೆಟ್ ಕೊರತೆಯ ವಿಧಗಳು ರೆವಿನ್ಯೂ ಕೊರತೆಯ ವ್ಯಾಖ್ಯೆ, ಕೋಶೀಯ ಕೊರತೆ, ಪ್ರಾಥಮಿಕ ಕೊರತೆ, ಕೋಶೀಯ ವಲ[illegible]ವ ಸುಧಾರಣೆ

# ಅಧ್ಯಾಯ ೯

## ಆರ್ಥಿಕ ಯೋಜನೆ (೪ ಗಂಟೆ)

### ೯.೧. ಆರ್ಥಿಕ ಯೋಜನೆ ಸಂಸ್ಥೆಗಳು (೪ ಗಂಟೆ)

ಭಾರತದಲ್ಲಿ ಆರ್ಥಿಕ ಯೋಜನೆ ರೂಪಿಸುವ ಸಂಸ್ಥೆಗಳು, ರಾಷ್ಟ್ರೀಯ ಯೋಜನಾ ಆಯೋಗದ ರಚನೆ ಮತ್ತು ಕಾರ್ಯಗಳು, ರಾಷ್ಟ್ರೀಯ ಅಭಿವೃದ್ಧಿ ಮಂಡಳಿಯ ರಚನೆ ಮತ್ತು ಕಾರ್ಯಗಳು, ಒಂಬತ್ತನೆಯ ಯೋಜನೆಯ ಉದ್ದೇಶಗಳು ಮತ್ತು ಸಾಧನೆಗಳು. ಹತ್ತನೆಯ ಯೋಜನೆಯ ಉದ್ದೇಶಗಳು. ಕರ್ನಾಟಕದಲ್ಲಿ ಯೋಜನೆ ರೂಪಿಸುವ ಸಂಸ್ಥೆ, ರಾಜ್ಯ ಯೋಜನಾ ಮಂಡಳಿಯ ರಚನೆ ಮತ್ತು ಕಾರ್ಯಗಳು.

# ಪರಿವಿಡಿ

# ಅಧ್ಯಾಯ ೧

# ಮೂಲ ಪರಿಕಲ್ಪನೆಗಳು ಮತ್ತು ಅಭಿವೃದ್ಧಿ ಸೂಚಿಗಳು

## ಪ್ರಸ್ತಾವನೆ

ಜನಸಂಖ್ಯೆಯ ದೃಷ್ಟಿಯಿಂದ ವಿಶ್ವದಲ್ಲಿ ೨ನೆಯ ಸ್ಥಾನವನ್ನೂ, ಭೂ ವಿಸ್ತಾರದಲ್ಲಿ ೭ನೆಯ ಸ್ಥಾನವನ್ನೂ ಹೊಂದಿರುವ ಭಾರತ ದೀರ್ಘಕಾಲದ ವಿದೇಶಿ ಆಳ್ವಿಕೆ ಹಾಗೂ ಸಾಂಪ್ರದಾಯಿಕ ಸಮಾಜದ ವ್ಯವಸ್ಥೆ ಹೊಂದಿತ್ತು ಹಾಗೂ ಆರ್ಥಿಕವಾಗಿ ತೀರಾ ಹಿಂದುಳಿದಿತ್ತು. ಸ್ವಾತಂತ್ರ್ಯಾನಂತರದ ಆರ್ಥಿಕ ಯೋಜನೆಗಳ ಮೂಲಕ, ಭಾರತ ಹೆಚ್ಚಿನ ಅಭಿವೃದ್ಧಿ ಸಾಧಿಸುತ್ತಿದೆ. ಇದು ಮೂರನೆ ವಿಶ್ವದ ರಾಷ್ಟ್ರಗಳ ಮುಂಚೂಣಿಯಲ್ಲಿದೆ. ೧೯೯೧ರ ನಂತರ ಜಾಗತೀಕರಣದ ಪ್ರವಾಹದಲ್ಲಿ ಸೇರಿ ಏಳು ಬೀಳುಗಳೊಡನೆ ಮುನ್ನಡೆಯುತ್ತಿದೆ. ಇದರ ಅಧ್ಯಯನಕ್ಕೆ ಪೂರಕವಾಗುವಂತೆ, ಪ್ರಗತಿಯ ಮೂಲಭೂತ ಪರಿಕಲ್ಪನೆಗಳನ್ನೂ, ಅದನ್ನು ಅಳೆಯುವ, ಅರಿಯುವ ವಿಧಾನಗಳನ್ನು ತಿಳಿದುಕೊಳ್ಳುವುದು ಅವಶ್ಯಕ.

## ೧.೧. ಅಭಿವೃದ್ಧಿಯ ಮೂಲ ಪರಿಕಲ್ಪನೆಗಳು ಹಾಗೂ ಸೂಚಿಗಳು

ಈಗಿನ ಆರ್ಥಿಕ ಸ್ಥಿತಿಯನ್ನು ಇನ್ನೂ ಉತ್ತಮ ಸ್ಥಿತಿಗೆ ಕೊಂಡೊಯ್ಯುವ ಪ್ರಯತ್ನಗಳನ್ನು ವಿಶ್ವದ ರಾಷ್ಟ್ರಗಳು ಕೈಗೊಳ್ಳುತ್ತಿದ್ದು, ಆರ್ಥಿಕ ಚಟುವಟಿಕೆಗಳು ಹಾಗೂ ವ್ಯವಸ್ಥೆಯಲ್ಲಿ ಪರಿಮಾಣಾತ್ಮಕ ಹಾಗೂ ಗುಣಾತ್ಮಕ ಬದಲಾವಣೆಗಳು, ಪ್ರಮುಖವಾಗಿ ಏರುಮುಖ ಬದಲಾವಣೆಗಳು ಉಂಟಾಗುತ್ತಿವೆ. ಇಂತಹ ಪರಿಸ್ಥಿತಿಯನ್ನು ಆರ್ಥಿಕ ಬೆಳವಣಿಗೆ ಹಾಗೂ ಆರ್ಥಿಕ ಅಭಿವೃದ್ಧಿ ಎಂದು ಪರಿಗಣಿಸಲಾಗಿದೆ. ಜನಸಾಮಾನ್ಯರು ಈ ಎರಡೂ ಪದಗಳನ್ನು ಸಮಾನ ಅರ್ಥದಲ್ಲಿ ಬಳಸುತ್ತಾರೆ. ಆದರೆ ಅರ್ಥಶಾಸ್ತ್ರಜ್ಞರು, ಈ ಎರಡೂ ಪರಿಕಲ್ಪನೆಗಳ ನಡುವೆ ಕೆಲವು ಮೂಲಭೂತ ಹಾಗೂ ಸೂಕ್ಷ್ಮ ವ್ಯತ್ಯಾಸಗಳನ್ನು ಗುರುತಿಸಿ ಅವೆರಡನ್ನು ಬೇರೆ ಬೇರೆಯಾಗಿ ಪರಿಗಣಿಸುತ್ತಾರೆ.

### ಅ. ಆರ್ಥಿಕ ಬೆಳವಣಿಗೆ

ಗೆರಾಲ್ಡ್ ಎಂ. ಮೆಯರ್ ಮತ್ತು ರಾಬರ್ಟ್ ಇ. ಬಾಲ್ಡ್‌ವಿನ್ ಅವರ ಪ್ರಕಾರ ಆರ್ಥಿಕ ಬೆಳವಣಿಗೆ ಎಂಬುದು, ಒಂದು ಆರ್ಥಿಕತೆಯ ಒಟ್ಟು ರಾಷ್ಟ್ರೀಯ ಉತ್ಪನ್ನವನ್ನು

ದೀರ್ಘಾವಧಿಯಲ್ಲಿ ಹೆಚ್ಚಿಸುವ ಪ್ರಕ್ರಿಯೆ. ಆದರೆ ಜನಸಂಖ್ಯೆಯ ಬೆಳವಣಿಗೆ ತೀವ್ರವಾದಾಗ ಒಟ್ಟು ರಾಷ್ಟ್ರೀಯ ಉತ್ಪನ್ನ ಹೆಚ್ಚಿದರೂ ತಲಾ ರಾಷ್ಟ್ರೀಯ ಉತ್ಪನ್ನ ಹೆಚ್ಚದಿರಬಹುದು ಅಥವಾ ಕಡಿಮೆಯಾಗಬಹುದು. ಅದು ಆರ್ಥಿಕ ಪ್ರಗತಿ ಎನಿಸಲಾರದು. ಸೈಮನ್ ಕುಜ್‌ನೆಟ್ಸ್ ಅವರ ಪ್ರಕಾರ ಒಂದು ದೇಶದ ಆರ್ಥಿಕ ಬೆಳವಣಿಗೆಯನ್ನು, ಅದರ ಜನಸಂಖ್ಯೆ ಮತ್ತು ತಲಾ ಉತ್ಪನ್ನದಲ್ಲಿ ದೀರ್ಘಾವಧಿಯಲ್ಲಿ ಸತತವಾಗಿ ಉಂಟಾಗುವ, ಸುಸ್ಥಿರಗತಿಯ ಹೆಚ್ಚಳ ಎಂದು ವ್ಯಾಖ್ಯಾನಿಸಬಹುದು.

ಪ್ರೊ. ಫ್ರೀಡ್‌ಮನ್ ಅವರು ಹೇಳುವಂತೆ ಆರ್ಥಿಕ ವ್ಯವಸ್ಥೆಯ ಮೂಲಭೂತ ರಚನೆಯಲ್ಲಿ ಬದಲಾವಣೆಯಾಗದೆ, ಒಂದು ಅಥವಾ ಹೆಚ್ಚು ಆಯಾಮಗಳಲ್ಲಿ ಅದು ವಿಸ್ತರಿಸುವುದು ಆರ್ಥಿಕ ಬೆಳವಣಿಗೆ ಎನಿಸುತ್ತದೆ.

ಆರ್ಥಿಕ ಬೆಳವಣಿಗೆ ಎಂಬುದು ನೈಜ ತಲಾ ಆದಾಯದ ಹೆಚ್ಚಳವನ್ನು ಪ್ರಮುಖವಾಗಿ ಸೂಚಿಸುತ್ತದೆ. ಮುಂದುವರಿದ ಆರ್ಥಿಕತೆಗಳಲ್ಲಿ ಮೂಲಭೂತ ಆರ್ಥಿಕ ವ್ಯವಸ್ಥೆಯ ಸಂರಚನೆ ಸದೃಢವಾಗಿದ್ದು ಅವುಗಳಲ್ಲಿ ಹೆಚ್ಚಿನ ಬದಲಾವಣೆ ಅಗತ್ಯವಿರುವುದಿಲ್ಲ. ಆದ್ದರಿಂದ ನೈಜ ತಲಾವರಮಾನದ ಹೆಚ್ಚಳವೇ ಪ್ರಮುಖ ಅಂಶವಾಗಿರುತ್ತದೆ. ಆದ್ದರಿಂದ ಮುಂದುವರೆದ ಆರ್ಥಿಕತೆಗಳಲ್ಲಿ ಆರ್ಥಿಕ ಬೆಳವಣಿಗೆ ಪ್ರಮುಖವಾಗಿ ಗೋಚರವಾಗುತ್ತದೆ.

ಒಂದು ಆರ್ಥಿಕತೆಯಲ್ಲಿ ಯಾವುದಾದರೂ ಎರಡು ವರ್ಷಗಳಲ್ಲಿ ಒಟ್ಟು ಆಂತರಿಕ ಉತ್ಪನ್ನಗಳ ನಡುವಿನ ವ್ಯತ್ಯಾಸವೇ, ಉತ್ಪನ್ನದ ಬೆಳವಣಿಗೆ ಅಥವಾ ಆರ್ಥಿಕ ಬೆಳವಣಿಗೆ.

$G = g_t - g_{t-1}$

G = (Growth) ಬೆಳವಣಿಗೆ

gt = t ಅವಧಿಯಲ್ಲಿ ಒಟ್ಟು ಆಂ.ಉತ್ಪನ್ನ

$g_t$-1 = t ಗಿಂತ ಹಿಂದಿನ ಒಂದು ನಿರ್ದಿಷ್ಟ ಅವಧಿಯಲ್ಲಿ ಒಟ್ಟು ಆಂ.ಉ.

$$Gr = \frac{g_t - g_{t-1}}{gt-1}$$

Gr = (Growth rate) ಬೆಳವಣಿಗೆ ದರ

**ಆ. ಆರ್ಥಿಕ ಅಭಿವೃದ್ಧಿ**

ಪ್ರೊ. ಬರ್ನಾರ್ಡ್ ಓಕೋನ್ ಮತ್ತು ರಿಚರ್ಡ್‌ಸನ್ ಅವರ ಪ್ರಕಾರ ಆರ್ಥಿಕ ಸರಕು ಸೇವಗಳಲ್ಲಿ ಹೆಚ್ಚಳ ಹಾಗೂ ಇದರಿಂದ ಉಂಟಾಗುವ ದೀರ್ಘಾವಧಿ ಯೋಗಕ್ಷೇಮ ಸುಧಾರಣೆಯೇ ಆರ್ಥಿಕ ಅಭಿವೃದ್ಧಿ. ಅಂದರೆ ಆರ್ಥಿಕ ಉತ್ಪನ್ನ ಹೆಚ್ಚಳ ಮಾತ್ರವಲ್ಲದೆ ಇದರ ಬಳಕೆಯಿಂದ ಕ್ಷೇಮಸಾಧನೆ ಉಂಟಾದರೆ ಅದು ಆರ್ಥಿಕ ಅಭಿವೃದ್ಧಿ.

ಎಂ.ಪಿ.ಟೊಡಾರೋ ಅವರ ಪ್ರಕಾರ ಸಾಮಾಜಿಕ ವ್ಯವಸ್ಥೆಯ ಮೂಲ ರಚನೆಯಲ್ಲಿ ಬದಲಾವಣೆ, ಸಾರ್ವತ್ರಿಕ ಮನೋಭಾವ ಹಾಗೂ ರಾಷ್ಟ್ರೀಯ ಸಂಸ್ಥೆಗಳಲ್ಲಿ ಬದಲಾವಣೆ, ಉಂಟುಮಾಡುವ, ಆರ್ಥಿಕ ಬೆಳವಣಿಗೆಯನ್ನು ವೇಗಗೊಳಿಸುವ, ಬಡತನ ನಿರ್ಮೂಲನೆ

ಮಾಡಿ, ಅಸಮಾನತೆ ಕಡಿಮೆ ಮಾಡುವ ಬಹುಮುಖ ಕಾರ್ಯ ವಿಧಾನವನ್ನು ಆರ್ಥಿಕ ಅಭಿವೃದ್ಧಿ ಎಂದು ಕರೆಯಬಹುದು.

ಕಿಂಡ್ಲ್‌ಬರ್ಗರ್ ಅವರು ಹೇಳುವಂತೆ, ಆರ್ಥಿಕ ಅಭಿವೃದ್ಧಿ ಎಂಬುದು ಉತ್ಪಾದನೆ ಮತ್ತು ಆದಾಯದ ವಿತರಣೆಯ ತಂತ್ರಜ್ಞಾನದ ಮತ್ತು ಸಾಂಸ್ಥಿಕ ವ್ಯವಸ್ಥೆಯಲ್ಲಿನ ಬದಲಾವಣೆ.

ವಿಶ್ವ ಸಂಸ್ಥೆ ತಜ್ಞರ ಸಮಿತಿಯ ಪ್ರಕಾರ ಅಭಿವೃದ್ಧಿ ಎಂಬುದು ಆರ್ಥಿಕ ಬೆಳವಣಿಗೆ ಮಾತ್ರವಾಗಿರದೆ, ಸಾಮಾಜಿಕ, ಸಾಂಸ್ಕೃತಿಕ, ಸಾಂಸ್ಥಿಕ ಮತ್ತು ಆರ್ಥಿಕ ಬದಲಾವಣೆಗಳನ್ನು ಒಳಗೊಂಡಿರುತ್ತದೆ.

ಡಡ್ಲಿ ಸೀರ್ಸ್ ಅವರ ಪ್ರಕಾರ ಬಡನತ, ನಿರುದ್ಯೋಗ, ಅಸಮಾನತೆ ಇವು ಕಡಿಮೆ ಯಾಗುತ್ತಿದ್ದರೆ ಒಂದು ದೇಶ ಅಭಿವೃದ್ಧಿ ಹೊಂದುತ್ತಿದೆ ಎಂಬುದರಲ್ಲಿ ಅನುಮಾನವಿಲ್ಲ. ಆದರೆ ಇವುಗಳಲ್ಲಿ ಒಂದೆರಡು ಅಥವಾ ಎಲ್ಲಾ ಸಮಸ್ಯೆಗಳು ಭೀಕರವಾಗುತ್ತಿದ್ದರೆ, ತಲಾ ಆದಾಯ ದ್ವಿಗುಣವಾದರೂ ಅದನ್ನು ಅಭಿವೃದ್ಧಿ ಎಂದು ಕರೆಯುವುದು ಅನುಚಿತ ವೆನಿಸುತ್ತದೆ.

ಕಿಂಡಲ್‌ಬರ್ಗ್‌ರ್ ಮತ್ತು ಬ್ರೂಸ್‌ಹೆರಿಕ್ ಇವರ ಪ್ರಕಾರ ಅಭಿವೃದ್ಧಿ ಕೆಳಕಂಡ ಅಂಶಗಳನ್ನು ಒಳಗೊಂಡಿರುತ್ತದೆ.

ಅತಿ ಕಡಿಮೆ ಆದಾಯದ ವರ್ಗದ ಜನರ ಭೌತಿಕ ಕ್ಷೇಮ ವೃದ್ಧಿಸುತ್ತದೆ. ಬಡತನ ಅನಕ್ಷರತೆ, ರೋಗಗಳು, ಅಲ್ಪಾಯು ಮರಣ ಇವುಗಳ ನಿವಾರಣೆ ಆಗುತ್ತದೆ.

ಕೃಷಿಯಿಂದ ಕೈಗಾರಿಕೆ ಉತ್ಪಾದನೆಯ ಪ್ರಾಧಾನ್ಯತೆಗೆ ಮೂಲಭೂತ ರಚನೆಯಲ್ಲಿ ಬದಲಾವಣೆ ಉಂಟಾಗುತ್ತದೆ. ದುಡಿಯುವ ವಯೋಮಿತಿಯ ಎಲ್ಲಾ ಜನರಿಗೆ ಲಾಭದಾಯಕ ಉದ್ಯೋಗ ದೊರಕುವಂತೆ ವ್ಯವಸ್ಥೆಯಾಗುತ್ತದೆ.

ತಮ್ಮ ಕ್ಷೇಮಸಾಧನೆಯ ಗುರಿಗಳನ್ನು ನಿರ್ಧರಿಸುವಲ್ಲಿ ಆರ್ಥಿಕತೆಯಲ್ಲಿನ ವಿಶಾಲ ಗುಂಪುಗಳು ಭಾಗವಹಿಸುವುವು. ಅಂದರೆ ರಾಷ್ಟ್ರೀಯ ಉತ್ಪನ್ನ ಹೆಚ್ಚಳ ಮಾತ್ರವಲ್ಲದೆ, ಉತ್ಪಾದನಾ ವ್ಯವಸ್ಥೆಯಲ್ಲಿ ಮೂಲಭೂತ ಬದಲಾವಣೆ, ಸಾಮಾನ್ಯ ಜನರ ಕ್ಷೇಮಸಾಧನೆ, ಎಲ್ಲಾ ಜನರಿಗೆ ಸಮಾನ ಆರ್ಥಿಕ ಅವಕಾಶ ಮತ್ತು ನಿರ್ಧಾರಗಳನ್ನು ಕೈಗೊಳ್ಳುವಲ್ಲಿ ಪ್ರಾತಿನಿಧ್ಯ ದೊರಕುವಂತೆ ಮಾಡುವ ಪ್ರಕ್ರಿಯೆ ಆರ್ಥಿಕ ಅಬಿವೃದ್ಧಿ.

ಹಿಂದುಳಿದ ಹಾಗೂ ಮುಂದುವರೆಯುತ್ತಿರುವ ರಾಷ್ಟ್ರಗಳಲ್ಲಿ ಆರ್ಥಿಕ ಬೆಳವಣಿಗೆಗಿಂತ ಆರ್ಥಿಕ ಪ್ರಗತಿಯ ಸಾಧನೆ ಮುಖ್ಯವಾಗಿರುತ್ತದೆ.

### ೩. ಆರ್ಥಿಕ ಬೆಳವಣಿಗೆ ಮತ್ತು ಅಭಿವೃದ್ಧಿ ನಡುವೆ ಮೂಲಭೂತ ವ್ಯತ್ಯಾಸಗಳು

ಆರ್ಥಿಕ ಬೆಳವಣಿಗೆ ಮತ್ತು ಅಭಿವೃದ್ಧಿಯಲ್ಲಿ ಪ್ರಮುಖ ವ್ಯತ್ಯಾಸಗಳಿವೆ. ಶ್ರೀಮತಿ ಉರ್ಜುಲಾ ಹಿಕ್ಸ್ ಅವರ ಪ್ರಕಾರ, ಆರ್ಥಿಕ ಅಭಿವೃದ್ಧಿ ಎಂಬುದು, ಅಭಿವೃದ್ಧಿ ಹೊಂದದೆ

ಇರುವ ರಾಷ್ಟ್ರಗಳ ಸಮಸ್ಯೆಗೆ ಸಂಬಂಧಿಸಿದ್ದರೆ, ಆರ್ಥಿಕ ಬೆಳವಣಿಗೆ ಮುಂದುವರೆದ ರಾಷ್ಟ್ರಗಳ ಸಮಸ್ಯೆಗಳಿಗೆ ಸಂಬಂಧಿಸಿದೆ.

ಸಿ.ಪಿ.ಕಿಂಡ್ಲ್‌ಬರ್ಗ್‌ರ್ ಅವರ ಪ್ರಕಾರ ಆರ್ಥಿಕ ಬೆಳವಣಿಗೆ ಉತ್ಪನ್ನದ ಹೆಚ್ಚಳವನ್ನು ಮಾತ್ರ ಸೂಚಿಸುತ್ತದೆ. ಆದರೆ ಆರ್ಥಿಕ ಅಭಿವೃದ್ಧಿಯು ಉತ್ಪಾದನಾ ತಂತ್ರಜ್ಞಾನ, ಸಾಂಸ್ಥಿಕ ವ್ಯವಸ್ಥೆ ಮತ್ತು ಆದಾಯದ ಹಂಚಿಕೆಯಲ್ಲಿನ ಬದಲಾವಣೆಗಳನ್ನೂ ಒಳಗೊಂಡಿರುತ್ತದೆ.

ಜಿ.ಕೆ.ಮೆಹತಾರವರು, ಬೆಳವಣಿಗೆ ಮತ್ತು ಅಭಿವೃದ್ಧಿಗಳ ನಡುವಿನ ವ್ಯತ್ಯಾಸದ ಸಾರಾಂಶವನ್ನು ಹೀಗೆ ಹೇಳುತ್ತಾರೆ. ಬೆಳವಣಿಗೆ ಎಂಬುದು ಪರಿಮಾಣಾತ್ಮಕ ಪ್ರಾಮುಖ್ಯತೆಯನ್ನು, ಅಭಿವದ್ಧಿ ಎಂಬುದು ಗುಣಾತ್ಮಕ ಪ್ರಾಮುಖ್ಯತೆಯನ್ನು ಹೊಂದಿದ. ವ್ಯಾಪ್ತಿ, ಸ್ವರೂಪ, ಮಾಪನ, ಕಾಲಾವಧಿ ಮುಂತಾದ ವಿಷಯಗಳಲ್ಲಿ ಆರ್ಥಿಕ ಬೆಳವಣಿಗೆ ಮತ್ತು ಅಭಿವೃದ್ಧಿಗಳ ನಡುವೆ ವ್ಯತ್ಯಾಸವನ್ನು ಕೆಳಕಂಡಂತೆ ವಿವರಿಸಬಹುದು.

೧. ಬೆಳವಣಿಗೆಯ ವ್ಯಾಪ್ತಿ ಕಿರಿದಾಗಿದ್ದು ಅದು ಆದಾಯದ ಹೆಚ್ಚಳವನ್ನು ಮಾತ್ರ ಪರಿಗಣಿಸುತ್ತದೆ. ಅಭಿವೃದ್ಧಿಯ ವ್ಯಾಪ್ತಿ ವಿಸ್ತಾರವಾಗಿದ್ದು, ಆದಾಯದ ಬೆಳವಣಿಗೆಯೊಂದಿಗೆ ಆರ್ಥಿಕ ವ್ಯವಸ್ಥೆಯಲ್ಲಿನ ಮೂಲಭೂತ ರಚನೆಯ ಬದಲಾವಣೆಗಳು ತಾಂತ್ರಿಕ ಮತ್ತು ಸಾಮಾಜಿಕ ಬದಲಾವಣೆಗಳನ್ನು ಪರಿಗಣಿಸುತ್ತದೆ. ಬೆಳವಣಿಗೆಯು ಒಂದೇ ಆಯಾಮವನ್ನು ಹೊಂದಿದ್ದರೆ, ಅಭಿವೃದ್ಧಿಯ ಹಲವು ಆಯಾಮಗಳನ್ನು ಹೊಂದಿದೆ.

೨. ಬೆಳವಣಿಗೆಯು ರಾಷ್ಟ್ರೀಯ ಉತ್ಪನ್ನದ ಪರಿಮಾಣಾತ್ಮಕ ಬದಲಾವಣೆಯನ್ನು ಸೂಚಿಸುತ್ತದೆ. ಅಭಿವೃದ್ಧಿಯು ಆದಾಯದ ಪ್ರಮಾಣ ಮಾತ್ರವಲ್ಲದೆ ಅದರ ರಚನೆಯಲ್ಲಿನ ಬದಲಾವಣೆಗಳನ್ನು, ಗುಣಮಟ್ಟದ ಬದಲಾವಣೆಗಳನ್ನು ಆದಾಯದಲ್ಲಿ ವಿವಿಧ ಆರ್ಥಿಕವಲಯಗಳ ಸಾಪೇಕ್ಷ ಪಾಲಿನಲ್ಲಿ ಉಂಟಾಗುವ ಬದಲಾವಣೆಗಳನ್ನು ಸೂಚಿಸುತ್ತದೆ.

೩. ಆದಾಯದ ಬೆಳವಣಿಗೆಯನ್ನು ಸುಲಭವಾಗಿ ಕರಾರುವಕ್ಕಾಗಿ ಅಳೆಯಬಹುದು. ಅಭಿವೃದ್ಧಿಯಲ್ಲಿ ಕಾಣಬರುವ ಮಾನವೀಯ ಅಭಿವೃದ್ಧಿ, ಸಾಮಾಜಿಕ ಬದಲಾವಣೆಗಳು, ಕ್ಷೇಮಾಭಿವೃದ್ಧಿಗಳನ್ನು ಅಳೆಯುವುದು ಕಷ್ಟ.

೪. ಆರ್ಥಿಕ ಅಭಿವೃದ್ಧಿ ಆಗದಿದ್ದರೂ ಬೆಳವಣಿಗೆ ಸಾಧ್ಯ. ಆದರೆ ಬೆಳವಣಿಗೆಯಾಗದೆ ಅಭಿವೃದ್ಧಿ ಆಗಲಾರದು.

೫. ಈಗಾಗಲೇ ಅಭಿವೃದ್ಧಿ ಸಾಧಿಸಿರುವ ರಾಷ್ಟ್ರಗಳಲ್ಲಿ ಆರ್ಥಿಕ ಬೆಳವಣಿಗೆಯೇ ಪ್ರಧಾನ ಅಂಶ. ಆದರೆ ಮುಂದುವರೆಯುತ್ತಿರುವ ರಾಷ್ಟ್ರಗಳಲ್ಲಿ ಅಭಿವೃದ್ಧಿಯೇ ಪ್ರಮುಖ ಅಗತ್ಯವಾಗಿರುತ್ತದೆ.

೬. ಆರ್ಥಿಕ ಬೆಳವಣಿಗೆ, ಸ್ಥಿರವಾದ, ನಿರಂತರವಾದ ದೀರ್ಘಕಾಲಿಕ ವಿದ್ಯಮಾನವಾಗಿದೆ. ಆರ್ಥಿಕ ಅಭಿವೃದ್ಧಿ ಸ್ಥಿರವಾಗಿಲ್ಲದ, ನಿರಂತರವಲ್ಲದ, ಏರು ಪೇರುಗಳಿಂದ ಕೂಡಿದ ಕ್ರಿಯೆ ಆಗಿರುತ್ತದೆ.

೭. ಆರ್ಥಿಕ ಬೆಳವಣಿಗೆಯು ಸ್ವಯಂಪ್ರೇರಿತ ಕ್ರಿಯೆ. ಇದಕ್ಕೆ ರಾಷ್ಟ್ರೀಯ ಯೋಜನೆ, ಸರ್ಕಾರದ ಹಸ್ತಕ್ಷೇಪ ಹಾಗೂ ಹೆಚ್ಚಿನ ನಿರ್ಬಂಧಗಳಿರುವುದಿಲ್ಲ. ಆದರೆ ಪ್ರಗತಿ ಸಾಧಿಸುವಲ್ಲಿ ರಾಷ್ಟ್ರೀಯ ಯೋಜನೆಗಳು ಅಗತ್ಯ. ಇದರ ಅನುಷ್ಠಾನ ಹಾಗೂ ಆದಾಯದ ಮರುಹಂಚಿಕೆ ಮತ್ತು ಸಾಮಾಜಿಕ ಪ್ರಗತಿ ಸಾಧನೆಯಲ್ಲಿ ಸರ್ಕಾರದ ಮಧ್ಯಪ್ರವೇಶ, ನಿರ್ದೇಶನ, ನೆರವು ಹೆಚ್ಚಾಗಿರುತ್ತದೆ.

**ಈ. ಜೈವಿಕ ಪರಿಸರಕ್ಕೆ ಸಂಬಂಧಿಸಿದಂತೆ, ಸುಸ್ಥಿರಗತಿಯ ಅಭಿವೃದ್ಧಿ**

ಅಭಿವೃದ್ಧಿ ಹೊಂದಿದ ರಾಷ್ಟ್ರಗಳು ಹೆಚ್ಚಿನ ಅಭಿವೃದ್ಧಿ ಸಾಧಿಸಲು ಹಾಗೂ ಇತರೆ ರಾಷ್ಟ್ರಗಳ ಮೇಲೆ ಹಿಡಿತ ಸಾಧಿಸಲು ತೀವ್ರ ಪೈಪೋಟಿ ನಡೆಸುತ್ತಿದೆ. ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳು ತಮ್ಮ ಸಮಸ್ಯೆಗಳನ್ನು ಪರಿಹರಿಸಿ ಹೆಚ್ಚಿನ ಆದಾಯ ಸಾಧಿಸಲು ಹೆಣಗಾಡುತ್ತಿವೆ. ಈ ಪ್ರಯತ್ನದಲ್ಲಿ ಸಂಪನ್ಮೂಲಗಳ ಬಳಕೆ ಅಪಾರವಾಗಿದೆ. ಹಲವು ಬಾರಿ ಅಗತ್ಯಕ್ಕಿಂತ ಹೆಚ್ಚು ಬಳಕೆ ಹಾಗೂ ವಿವೇಚನಾರಹಿತ ಬಳಕೆ, ವ್ಯರ್ಥ ಬಳಕೆ ಆಗುತ್ತಿದೆ.

ಅದರ ಪರಿಣಾಮ ಸಂಪನ್ಮೂಲಗಳ ಬರಿದಾಗುವಿಕೆ, ಕೊರತೆ, ಪರಿಸರ ಮಾಲಿನ್ಯ, ಪರಿಸರದ ಅಸಮತೋಲನ ಉಂಟಾಗಿ ಜೀವ ವೈವಿಧ್ಯತೆಯ ನಾಜೂಕಾದ ಸಮತೋಲನದಲ್ಲಿ ಏರು ಪೇರು ಉಂಟಾಗಿದೆ.

ಶುದ್ಧ ಜಲಮೂಲಗಳ ನಾಶ, ವಾಯುಮಾಲಿನ್ಯದಿಂದ ರೋಗಗಳ ಹರಡುವಿಕೆ, ಭೂಮಿಯ ಫಲವತ್ತತೆಯ ನಾಶ, ಅರಣ್ಯಗಳ ನಾಶ, ಹಸಿರುಮನೆ ಪರಿಣಾಮ, ಓಜೋನ್ ಪದರದ ಹಾಳಾಗುವಿಕೆ, ಆಮ್ಲದ ಮಳೆ ಉಂಟಾಗುತ್ತಿದೆ. ಇದರಿಂದ ಇಂದಿನ ಪೀಳಿಗೆಯ ಜೀವನ ದುಸ್ಥರವಾಗಿದ್ದು ಮುಂದಿನ ಪೀಳಿಗೆಗೆ ಉತ್ತಮ ಜೀವನದ ಎಲ್ಲಾ ಅವಶ್ಯಕ ಸೌಲಭ್ಯಗಳ ಕೊರತೆಯಾಗಲಿದೆ.

ಆದ್ದರಿಂದ ಈಗಿನ ಪೀಳಿಗೆಯ ಅವಶ್ಯಕತೆಗಳನ್ನು ಪೂರೈಸುವುದಲ್ಲದೆ ಮುಂದಿನ ಪೀಳಿಗೆಗಳ ಉತ್ತಮ ಜೀವನಕ್ಕೆ ಅಗತ್ಯವಾದ ಸಂಪನ್ಮೂಲಗಳು, ಪರಿಸರ ಹಾಗೂ ಪರಿಸ್ಥಿತಿಗಳನ್ನು ಸೃಷ್ಟಿಸುವ ಬಗ್ಗೆ ಪರಿಸರವನ್ನು ಸಂರಕ್ಷಿಸುವ ಹಾಗೂ ಉತ್ತಮವಾಗಿ ಬಳಸುವ ಕಡೆಗೆ ಹೆಚ್ಚಿನ ಗಮನ ನೀಡಬೇಕಾಗಿದೆ. ಇದಕ್ಕಾಗಿ ಸುಸ್ಥಿರಗತಿಯ ಅಭಿವೃದ್ಧಿಯ ಪರಿಕಲ್ಪನೆ ರೂಪಿಸಲಾಗಿದೆ.

ಪರಿಸರ ಸಂರಕ್ಷಣೆಯೊಂದಿಗೆ ಪ್ರಗತಿ ಸಾಧಿಸುವ ಕುರಿತು ಅಧ್ಯಯನ ಮಾಡಲು ವಿಶ್ವ ಸಂಸ್ಥೆಯು ೧೯೮೩ರಲ್ಲಿ ಬ್ರಂಟ್‌ಲ್ಯಾಂಡ್ ಸಮಿತಿ ರಚಿಸಿತು. ಸಮಿತಿಯು ೧೯೮೭ರಲ್ಲಿ "ಅವರ್ ಕಾಮನ್ ಫ್ಯೂಚರ್" ಎಂಬ ಶೀರ್ಷಿಕೆಯ ವರದಿ ಸಲ್ಲಿಸಿತು. ಬ್ರಂಟ್‌ಲ್ಯಾಂಡ್ ಸಮಿತಿಯ ಪ್ರಕಾರ, "ಮುಂದಿನ ಪೀಳಿಗೆಗೆಳು ಅವರ ಅಗತ್ಯಗಳನ್ನು ಪೂರೈಸಿಕೊಳ್ಳಲು ಅವಶ್ಯಕವಾದ ಸಾಮರ್ಥ್ಯದೊಡನೆ ರಾಜಿ ಮಾಡಿಕೊಳ್ಳದೆ ಸದ್ಯದ ಪೀಳಿಗೆಯ ಅಗತ್ಯಗಳು ಮಹದಾಸೆಗಳನ್ನು ಒದಗಿಸಲು ಪ್ರಯತ್ನಿಸುವುದು ಸುಸ್ಥಿರಗತಿಯ ಅಭಿವೃದ್ಧಿ."

ಎಂದರೆ ಈಗಿನ ಪೀಳಿಗೆಯ ಅಗತ್ಯಗಳನ್ನು ಪೂರೈಸುವಾಗ, ಮುಂದಿನ ಪೀಳಿಗೆಗಳಿಗೆ ಅವಶ್ಯಕವಾದ ಸಂಪನ್ಮೂಲ, ಸಂಪತ್ತು ಮತ್ತು ವ್ಯವಸ್ಥೆಗಳ ನಾಶಮಾಡದಂತೆ, ಅವುಗಳನ್ನು ಸಂರಕ್ಷಿಸುವಂತಹ ಪ್ರಕ್ರಿಯೆ, ಅಭಿವೃದ್ಧಿಯನ್ನು ಮುಂದೆಯೂ ಸ್ಥಿರವಾಗಿರಿಸಬಲ್ಲ ಪ್ರಗತಿ, ಸುಸ್ಥಿರಗತಿಯ ಅಭಿವೃದ್ಧಿ. ಇದು ಆರ್ಥಿಕ ಪ್ರಗತಿ ದೀರ್ಘಕಾಲ ಮುಂದುವರೆಯಲು ಅನುವು ಮಾಡಿಕೊಡುವ ಅಭಿವೃದ್ಧಿ.

ಡಿ.ಡಬ್ಲ್ಯೂ, ಪಿಯರ್ಸ್ ಮತ್ತು ಇ.ಬಾರ್ಬಿಯರ್ ಅವರು ಸೂಚಿಸುವಂತೆ, ನೈಸರ್ಗಿಕ ಸಂಪನ್ಮೂಲಗಳು, ಮೂಲಗುಣಮಟ್ಟ ಕಳೆದುಕೊಳ್ಳಲು ಅವಕಾಶ ನೀಡದಂತಹ ಅಭಿವೃದ್ಧಿ ವ್ಯವಸ್ಥೆಯೆ ಸುಸ್ಥಿರಗತಿ ಅಭಿವೃದ್ಧಿ.

ಕಾಲಾಂತರದಲ್ಲಿ ಒಟ್ಟಾರೆ ಬಂಡವಾಳ ಆಸ್ತಿಗಳ ಪ್ರಮಾಣ ಸ್ಥಿರವಾಗಿ ಉಳಿದರೆ ಅಥವಾ ಹೆಚ್ಚಾದರೆ ಮಾತ್ರ ಸುಸ್ಥಿರಗತಿ ಸಾಧ್ಯ.

ಪ್ರಗತಿ ಸತತವಾಗಿ ಮುಂದುವರೆಯ ಬೇಕಾದರೆ ನೈಸರ್ಗಿಕ ಬಂಡವಾಳ ಆಸ್ತಿಯ ಪ್ರಮಾಣವನ್ನು ಈಗಿರುವ ಪ್ರಮಾಣ ಹಾಗೂ ಗುಣಮಟ್ಟದಲ್ಲಿ ಉಳಿಸಿಕೊಳ್ಳಬೇಕು ಅಥವಾ ಅವು ಲಾಭದಾಯಕ ಬಳಕೆಗೆ ಬರುವಂತೆ ಅವುಗಳ ಗುಣಮಟ್ಟ ಕಾಯ್ದುಕೊಳ್ಳಬೇಕು.

ಆದ್ದರಿಂದ ಸುಸ್ಥಿರಗತಿ ಅಭಿವೃದ್ಧಿಯು ನೈಜತಲಾ ಉತ್ಪನ್ನದ ಹೆಚ್ಚಳ ಮಾತ್ರವಲ್ಲದೆ ನೈಸರ್ಗಿಕ ಸಂಪನ್ಮೂಲಗಳ ಸಂರಕ್ಷಣಾತ್ಮಕ ಅಭಿವೃದ್ಧಿ ಕಾರ್ಯವೂ ಆಗಿದೆ.

ಅಭಿವೃದ್ಧಿ ಹೊಂದಿದ ರಾಷ್ಟ್ರಗಳು ತಾವು ಈಗ ಸಾಧಿಸಿರುವ ಬೆಳವಣಿಗೆ ಪ್ರಮಾಣ ಮುಂದುವರೆಸಿಕೊಂಡು ಹೋಗಲು, ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳು ಸತತವಾಗಿ ತೀವ್ರ ಆರ್ಥಿಕ ಪ್ರಗತಿ ಸಾಧಿಸಲು ಇದು ನೆರವಾಗುತ್ತದೆ.

ವಸ್ತುಗಳ ಉತ್ಪಾದನೆ, ಸೇವೆಗಳ ಸೃಷ್ಟಿ ಹಾಗೂ ಉತ್ತಮ ಜೀವನ ಸ್ಥಿತಿ ರೂಪಿಸುವಲ್ಲಿ ವ್ಯಾಪಕವಾಗಿ ನೈಸರ್ಗಿಕ ಸಂಪನ್ಮೂಲಗಳ ಬಳಕೆಯಾಗುತ್ತದೆ. ಆದ್ದರಿಂದ ಪ್ರಗತಿಯ ವೆಚ್ಚದ ಲೆಕ್ಕ ಮಾಡುವಾಗ ಆರ್ಥಿಕ ಸಂಪನ್ಮೂಲಗಳ ವೆಚ್ಚದೊಡನೆ ಪರಿಸರದ ಬಳಕೆಯ ಪ್ರಮಾಣವನ್ನು ಸಮನ್ವಯಗೊಳಿಸಿ ಲೆಕ್ಕ ಮಾಡುವುದು ಅವಶ್ಯಕ. ಇದು ಪರಿಸರದ ಲೆಕ್ಕಾಚಾರ. ನಿರ್ದಿಷ್ಟ ಪ್ರಮಾಣದ ಆದಾಯದ ಉತ್ಪನ್ನದ ಹೆಚ್ಚಳ ಸಾಧಿಸುವಲ್ಲಿ ಅದಕ್ಕಿಂತ ಹೆಚ್ಚಿನ ಪ್ರಮಾಣದ ಪರಿಸರ ನಾಶವಾಗುವುದಾದರೆ ಅದು ಋಣಾತ್ಮಕ ಲೆಕ್ಕದ ಬಾಕಿ ಎನಿಸುತ್ತದೆ. ಆದ್ದರಿಂದ ಆರ್ಥಿಕತೆಗೆ ಆಗಿರುವ ಲಾಭಕ್ಕಿಂತ ಪರಿಸರಕ್ಕೆ ಆಗಿರುವ ನಷ್ಟ ಕಡಿಮೆ ಇರುವಂತೆ ಯೋಜಿಸುವುದು ಅವಶ್ಯಕ. ಇದು ಸುಸ್ಥಿರಗತಿ ಅಭಿವೃದ್ಧಿಯಿಂದ ಸಾಧ್ಯವಾಗುತ್ತದೆ.

ಭಾರತದಲ್ಲಿ ರಾಷ್ಟ್ರೀಯ ಉತ್ಪನ್ನದಲ್ಲಿ ಹೆಚ್ಚಳ ಉಂಟಾಗುತ್ತಿದೆ. ತಲಾ ಆದಾಯದಲ್ಲಿ ಅಷ್ಟೇ ಪ್ರಮಾಣದ ಹೆಚ್ಚಳವಾಗುತ್ತಿಲ್ಲ. ನೈಸರ್ಗಿಕ ಸಂಪನ್ಮೂಲಗಳ ಬಳಕೆ ಸಮರ್ಪಕವಾಗಿಲ್ಲ. ಪರಿಸರ ಮಾಲಿನ್ಯ ಜೀವ ವೈವಿಧ್ಯಮತೆಯಲ್ಲಿ ಅಸಮತೋಲನ, ಭೂ

ಜಲ ಅರಣ್ಯ ಸಂಪತ್ತಿನ ನಾಶ ಅವುಗಳ ಗುಣಮಟ್ಟದಲ್ಲಿ ಕುಸಿತ ಕಂಡುಬರುತ್ತಿದೆ. ಆದ್ದರಿಂದ ಭಾರತದಲ್ಲಿ ಸುಸ್ಥಿರಗತಿ ಅಭಿವೃದ್ಧಿ ಅವಶ್ಯಕವಾಗಿದೆ. ನೈಸರ್ಗಿಕ ಸಂಪನ್ಮೂಲಗಳ ರಕ್ಷಣೆಗೆ ಪರಿಸರದ ಸಂರಕ್ಷಣೆಗೆ ಹಾಗೂ ಅಭಿವೃದ್ಧಿಗೆ ಸರಕಾರ ಹಲವು ಕಾರ್ಯಕ್ರಮಗಳನ್ನು ಹಾಕಿಕೊಂಡಿವೆ.

**ಉ. ರಾಷ್ಟ್ರಗಳ ವರ್ಗೀಕರಣ**

ವಿಶ್ವದ ಎಲ್ಲಾ ರಾಷ್ಟ್ರಗಳನ್ನು ಅವು ಸಾಧಿಸಿರುವ ಪ್ರಗತಿಯ ಆಧಾರದ ಮೇಲೆ

೧. ಪ್ರಗತಿ ಹೊಂದಿದ, ಮುಂದುವರೆದ ರಾಷ್ಟ್ರ ಎಂತಲೂ

೨. ಪ್ರಗತಿ ಹೊಂದದೆ ಇರುವ ಹಿಂದುಳಿದ ರಾಷ್ಟ್ರ ಎಂತಲೂ ವರ್ಗೀಕರಿಸಬಹುದು.

ರಾಷ್ಟ್ರೀಯ ಉತ್ಪನ್ನ ಹಾಗೂ ತಲಾರಾಷ್ಟ್ರೀಯ ಉತ್ಪನ್ನದ ಆಧಾರದ ಮೇಲೆ ಶ್ರೀಮಂತ ಮತ್ತು ಬಡರಾಷ್ಟ್ರಗಳೆಂದು ವರ್ಗೀಕರಿಸಬಹುದು.

ಹಿಂದುಳಿದ ರಾಷ್ಟ್ರಗಳೂ ಆರ್ಥಿಕ ಪ್ರಗತಿಯ ಪ್ರಯತ್ನ ನಡೆಸಿದ್ದು ನಿಧಾನಗತಿಯ ಬೆಳವಣಿಗೆ ಹೊಂದಿದ್ದು ವಿಶ್ವಸಂಸ್ಥೆಯ ಇತ್ತೀಚಿನ ಅಧ್ಯಯನಗಳಲ್ಲಿ ಅವುಗಳನ್ನು ಅಭಿವೃದ್ಧಿ ಹೊಂದುತ್ತಿರುವ ದೇಶಗಳೆಂದು ಪರಿಗಣಿಸಲಾಗಿದೆ.

ಅದರಂತೆ ವಿಶ್ವದ ಎಲ್ಲಾ ರಾಷ್ಟ್ರಗಳನ್ನು ಅಭಿವೃದ್ಧಿಹೊಂದಿದ ಹಾಗೂ ಅಭಿವೃದ್ಧಿ ಹೊಂದುತ್ತಿರುವ ದೇಶಗಳೆಂದು ವರ್ಗೀಕರಿಸಲಾಗಿದೆ.

ವಿಶ್ವ ಅಭಿವೃದ್ಧಿ ವರದಿಗಳಲ್ಲಿ ಎಲ್ಲಾ ದೇಶಗಳನ್ನು ನೈಜ ತಲಾ ರಾಷ್ಟ್ರೀಯ ಉತ್ಪನ್ನದ ಆದಾರದ ಮೇಲೆ ಕೆಳಕಂಡಂತೆ ವರ್ಗೀಕರಿಸಿದೆ.

೧. ಉನ್ನತ ಆದಾಯದ ದೇಶಗಳು

೨. ಮಧ್ಯಮ ಪ್ರಮಾಣದ ಆದಾಯದ ದೇಶಗಳು

೩. ಕಡಿಮೆ ಆದಾಯದ ರಾಷ್ಟ್ರಗಳು.

ಅಮೆರಿಕ ಸಂಯುಕ್ತ ಸಂಸ್ಥಾನ, ಜಪಾನ್, ಪಶ್ಚಿಮ ಯುರೋಪಿನ ಕೆಲವು ಹೆಚ್ಚಿನ ಆದಾಯದ ದೇಶಗಳೊಡನೆ ಹೋಲಿಕೆಯ ಆಧಾರದ ಮೇಲೆ ಈ ವರ್ಗೀಕರಿಣ ಮಾಡಲಾಗಿದೆ.

೨೦೦೫ರ ವಿಶ್ವ ಅಭಿವೃದ್ಧಿ ವರದಿಯಲ್ಲಿ ರಾಷ್ಟ್ರಗಳ ಆದಾಯಾವಾರು ವರ್ಗೀಕರಣ ಕೆಳಕಂಡಂತಿದೆ. ೨೦೦೩ರ ತಲಾ ರಾಷ್ಟ್ರೀಯ ಆದಾಯದ ಆಧಾರದ ಮೇಲೆ.

**೧. ಹೆಚ್ಚಿನ ಆದಾಯದ ರಾಷ್ಟ್ರಗಳು**

**ಡಾಲರ್ ೯೩೮೬ಕ್ಕಿಂತ ಹೆಚ್ಚಿನ ತಲಾ ರಾಷ್ಟ್ರೀಯ ಆದಾಯ ಹೊಂದಿರುವ ದೇಶಗಳು:** ಇದರಲ್ಲಿ ಆಸ್ಟ್ರೇಲಿಯಾ, ಅ.ಸಂ.ಸಂ.(ಯು.ಎಸ್.ಎ.) ಕೆನಡ, ಡಾಲರ್ ನ್ಯೂಜಿಲೆಂಡ್, ಜಪಾನ್ ಮತ್ತು ಪಶ್ಚಿಮ ಯುರೋಪಿನ ಹಾಗೂ ಓ.ಇ.ಸಿ.ಡಿ. ದೇಶಗಳು ಸೇರಿವೆ.

೨. ಮಧ್ಯಮ ಆದಾಯದ ರಾಷ್ಟ್ರಗಳು

**೭೬೬ ರಿಂದ ೯೩೮೫ ರವರೆಗೆ ತಲಾ ರಾಷ್ಟ್ರೀಯ ಆದಾಯ ಹೊಂದಿರುವ ದೇಶಗಳು:** ಹೆಚ್ಚಿನ ಪೂರ್ವಏಷ್ಯಾದ ದೇಶಗಳು ಪೂರ್ವ ಯೂರೋಪ್ ಮತ್ತು ಮಧ್ಯ ಏಷ್ಯಾದ ದೇಶಗಳು (ರಷ್ಯನ್ ಒಕ್ಕೂಟ ಸೇರಿ) ಲ್ಯಾಟಿನ್ ಅಮೆರಿಕನ್ ದೇಶಗಳು ದಕ್ಷಿಣ ಏಷ್ಯಾದ ಒಂದೆರಡು ದೇಶಗಳು ಸಹರಾ ಹೊರತುಪಡಿಸಿದ ಕೆಲವು ಆಫ್ರಿಕನ್ ದೇಶಗಳು ಈ ಗುಂಪಿಗೆ ಸೇರಿವೆ.

**೩. ಕಡಿಮೆ ಆದಾಯದ ರಾಷ್ಟ್ರಗಳು**

**ಡಾಲರ್ ೭೬೫ ಮತ್ತು ಅದಕ್ಕಿಂತ ಕಡಿಮೆ ತಲಾರಾಷ್ಟ್ರೀಯ ಆದಾಯ ಹೊಂದಿರುವ ದೇಶಗಳು:** ಪೂರ್ವಏಷ್ಯಾ, ಮಧ್ಯ ಏಷ್ಯಾ, ಪೂರ್ವಯುರೋಪಿನ ಕೆಲವೇ ದೇಶಗಳು, ಲ್ಯಾಟಿನ್ ಅಮೆರಿಕಾದ ಒಂದೆರಡು ದೇಶಗಳು ದಕ್ಷಿಣ ಏಷ್ಯಾದ (ಭಾರತ ಸೇರಿದಂತೆ) ಮತ್ತು ಸಹರಾ ಹೊರತುಪಡಿಸಿದ ಆಫ್ರಿಕಾದ ಹೆಚ್ಚಿನ ದೇಶಗಳು ಈ ಗುಂಪಿಗೆ ಸೇರಿವೆ.

**ಮಧ್ಯಮ ಆದಾಯದ ರಾಷ್ಟ್ರಗಳಲ್ಲಿ ೨ ವಿಭಾಗಗಳನ್ನು ಗುರುತಿಸಲಾಗಿದೆ.**

**ಅ. ಮೇಲ್ಮಟ್ಟದ ಮಧ್ಯಮ ಆದಾಯದ ದೇಶಗಳು**

ಡಾಲರ್ ೩೦೩೫ ರಿಂದ ಡಾಲರ್ ೯೩೮೫ರವರೆಗೆ ತಲಾ ಆದಾಯ ಹೊಂದಿರುವ ದೇಶಗಳು.

**ಆ. ಕೆಳಮಟ್ಟದ ಮಧ್ಯಮ ಆದಾಯದ ದೇಶಗಳು**

ಡಾಲರ್ ೭೬೬ ರಿಂದ ಡಾಲರ್ ೩೦೩೪ ರವರೆಗೆ ತಲಾ ಆದಾಯ ಹೊಂದರುವ ದೇಶಗಳು.

ಹೆಚ್ಚಿನ ಆದಾಯದ ದೇಶಗಳು ವಿಶ್ವದ ಜನಸಂಖ್ಯೆಯಲ್ಲಿ ಕಡಿಮೆ ಪ್ರಮಾಣವನ್ನೂ ವಿಶ್ವದ ಒಟ್ಟು ಆದಾಯದಲ್ಲಿ ಹೆಚ್ಚಿನ ಪಾಲನ್ನು ಆದ್ದರಿಂದ ಹೆಚ್ಚಿನ ತಲಾ ಆದಾಯವನ್ನು ಹೊಂದಿರುವುದನ್ನು ಕೆಳಕಂಡ ಪಟ್ಟಿ ತೋರಿಸುತ್ತದೆ.

## ವರ್ಷ ೨೦೦೩ರಲ್ಲಿ ವಿಶ್ವದ ಜನಸಂಖ್ಯೆ ಮತ್ತು ಆದಾಯದ ಹಂಚಿಕೆ

| ಕ್ರ.ಸಂ. | | ಜನಸಂಖ್ಯೆ (ದ.ಲ.ಗಳಲ್ಲಿ) | ಒಟ್ಟು ರಾ.ಉತ್ಪನ್ನ ಪಿ.ಪಿ.ಪಿ. (ಬಿಲಿಯನ್ ಗಳಲ್ಲಿ) | ಸರಾಸರಿ ತಲಾ ರಾಷ್ಟ್ರೀಯ ಉತ್ಪನ್ನ (ಯು.ಎಸ್‌ಗಳಲ್ಲಿ) |
|---|---|---|---|---|
| ೧. | ಕಡಿಮೆ ಆದಾಯದ ದೇಶಗಳು | ೨೩೧೦.೩ (೩೬.೮೪) | ೫೦೫೨ (೯.೭೯) | ೪೫೦ |
| ೨. | ಮದ್ಯಮ ಆದಾಯದ ದೇಶಗಳು | ೨೯೯೦.೧ (೪೭.೬೨) | ೧೭೯೩೩ (೩೪.೭೬) | ೧೯೨೦ |
| ೩. | ಹೆಚ್ಚಿನ ಆದಾದ ದೇಶಗಳು | ೯೭೧.೪ (೧೫.೪೯) | ೨೮೬೦೩ (೫೫.೪೫) | ೨೮೫೫೦ |
| | ಒಟ್ಟು ವಿಶ್ವ | ೬೨೭೧.೭ (೧೦೦) | ೫೧೫೮೮ (೧೦೦) | ೫೫೦೦ |
| | ಭಾರತ | ೧೦೬೪ (೧೬.೯೬) | ೩೦೬೮ (೫.೯) | ೫೩೦ |

ಮೂಲ : ವಿಶ್ವ ಅಭಿವೃದ್ಧಿ ವರದಿ ೨೦೦೫. ಆವರಣದಲ್ಲಿರುವ ಅಂಕಿ ಅಂಶಗಳು ವಿಶ್ವದ ಶೇಕಡ ಭಾಗವನ್ನು ಸೂಚಿಸುತ್ತದೆ.

ವರ್ಷ ೨೦೦೩ರಲ್ಲಿ ವಿಶ್ವದ ಕೆಲವು ರಾಷ್ಟ್ರಗಳ ತಲಾ ರಾಷ್ಟ್ರೀಯ ಆದಾಯ (ಯು.ಎಸ್.ಎ. ಡಾಲರ್‌ಗಳಲ್ಲಿ)

ನಾರ್ವೇ ೪೩೩೫೦, ಸ್ವಿಟ್ಜರ್‌ಲ್ಯಾಂಡ್ ೩೯೮೮೦, ಯು.ಎಸ್.ಎ. ೩೭೬೧೦, ಜಪಾನ್ ೩೪೫೧೦, ಡೆನ್ಮಾರ್ಕ್ ೩೩೭೫೦, ಚೀನಾ ೧೧೦೦, ಭಾರತ ೫೩೦.

### ೠ. ಅಭಿವೃದ್ಧಿ ಹೊಂದಿದ ಆರ್ಥಿಕತೆಗಳ ಲಕ್ಷಣ

ಹೆಚ್ಚಿನ ರಾಷ್ಟ್ರೀಯ ಆದಾಯ ಮತ್ತು ತಲಾ ಆದಾಯ, ಉನ್ನತವಾದ ಜೀವನ ಮಟ್ಟ, ಆಧುನಿಕ ಉತ್ಪಾದನಾ ವಿಧಾನಗಳ ಬಳಕೆ ಹಾಗೂ ಪ್ರಗತಿಪರ ಸಾಮಾಜಿಕ ಮನೋಭಾವ, ಆರ್ಥಿಕ ಸುಭಿಕ್ಷತೆ ಹಾಗೂ ಸಾಮಾಜಿಕ ಕ್ಷೇಮ ಸಾಧಿಸಿರುವ ಆರ್ಥಿಕತೆಗಳು ಅಭಿವೃದ್ಧಿ ಹೊಂದಿದ ದೇಶಗಳು. ೨೦೦೩ರ ವಿಶ್ವ ಅಭಿವೃದ್ಧಿ ವರದಿಯ ಪ್ರಕಾರ ಇವು ಡಾಲರ್ ೯೩೮೬ಕ್ಕಿಂತ ಹೆಚ್ಚಿನ ತಲಾ ರಾಷ್ಟ್ರೀಯ ಉತ್ಪನ್ನ ಹೊಂದಿರುವ ದೇಶಗಳು. ಉದಾ: ಅಮೆರಿಕ ಸಂಯುಕ್ತ ಸಂಸ್ಥಾನ, ಕೆನಡ, ಆಸ್ಟ್ರೇಲಿಯಾ, ನ್ಯೂಜಿಲ್ಯಾಂಡ್, ಪಶ್ಚಿಮ ಯೂರೋಪಿನ ದೇಶಗಳು ಜಪಾನ್ ಮುಂತಾದವು.

ಕೆಲವು ತೈಲ ರಾಷ್ಟ್ರಗಳ ತಲಾ ಆದಾಯವು ಹೆಚ್ಚಾಗಿದ್ದು ಅವು ಶ್ರೀಮಂತ ರಾಷ್ಟ್ರಗಳ ಸಾಲಿಗೆ ಸೇರಿದ್ದರೂ ಎಲ್ಲಾ ಆರ್ಥಿಕ ವಲಯಗಳಲ್ಲಿ ಹೆಚ್ಚಿನ ಪ್ರಗತಿ ಸಾಧಿಸಿಲ್ಲ.

**ಅಭಿವೃದ್ಧಿ ಹೊಂದಿದ ಆರ್ಥಿಕತೆಗಳಲ್ಲಿ ಕಂಡುಬರುವ ಪ್ರಮುಖ ಲಕ್ಷಣಗಳೆಂದರೆ**

೧. ರಾಷ್ಟ್ರೀಯ ಮತ್ತು ತಲಾ ಆದಾಯ ಹೆಚ್ಚಾಗಿರುತ್ತದೆ. ೨೦೦೫ರ ವಿಶ್ವ ಅಭಿವೃದ್ಧಿ ವರದಿಯ ಪ್ರಕಾರ ವರ್ಷ ೨೦೦೩ರಲ್ಲಿ ಈ ರಾಷ್ಟ್ರಗಳಲ್ಲೂ ತಲಾ ಆದಾಯ ಡಾಲರ್ ೯೩೮೬ರ ಕ್ಕಿಂತ ಹೆಚ್ಚಾಗಿರುತ್ತದೆ. ಸ್ವಿಟ್ಜರ್‌ಲ್ಯಾಂಡ್‌ನಲ್ಲಿ ಡಾಲರ್ ೩೯೮೮೦, ನಾರ್ವೆಯಲ್ಲಿ ಡಾಲರ್ ೪೩೩೫೦, ಜಪಾನ್‌ನಲ್ಲಿ ಡಾಲರ್ ೩೪೫೧೦ ಅ.ಸಂ.ಸಂ.ದಲ್ಲಿ ಡಾಲರ್ ೩೭೬೧೦ ಇದ್ದು ಡಾಲರ್ ರಾಷ್ಟ್ರಗಳ ಸರಾಸರಿ ತಲಾ ಆದಾಯ ಡಾಲರ್ ೨೮೫೫೦.

೨. ಹೆಚ್ಚಿನ ಕೈಗಾರಿಕಾಭಿವೃದ್ಧಿ ಮತ್ತು ಸೇವಾವಲಯದ ಹೆಚ್ಚಿನ ಬೆಳವಣಿಗೆ ಉಂಟಾಗಿರುತ್ತದೆ. ರಾಷ್ಟ್ರೀಯ ಉತ್ಪನ್ನ ಹಾಗೂ ಉದ್ಯೋಗ ಕಲ್ಪಿಸುವಲ್ಲಿ ಸೇವಾ ವಲಯ ಮತ್ತು ಕೈಗಾರಿಕೆಗಳು ಅತಿ ಹೆಚ್ಚು ಪಾಲನ್ನು ಪಡೆದಿರುತ್ತದೆ.

೩. ಕೃಷಿಯ ಮೇಲಿನ ಅವಲಂಬನೆ ಕಡಿಮೆ. ಒಟ್ಟು ಜನಸಂಖ್ಯೆ ೧೦ಕ್ಕೂ ಕಡಿಮೆ ಭಾಗ ಕೃಷಿಯನ್ನವಲಂಬಿಸಿರುತ್ತದೆ. ಕೃಷಿಯು ರಾಷ್ಟ್ರೀಯ ಆದಾಯದ ಶೇ. ೨೦ರಷ್ಟನ್ನು ಮಾತ್ರ ಒದಗಿಸುತ್ತದೆ.

೪. ಬಡತನ ಮತ್ತು ನಿರುದ್ಯೋಗಗಳು ಅತಿ ಕಡಿಮೆಯಾಗಿರುತ್ತದೆ. ನಿರುದ್ಯೋಗ ಕೇವಲ ತಾತ್ಕಾಲಿಕ ಪರಿಸ್ಥಿತಿಯಾಗಿರುತ್ತದೆ. ಕೆಲವು ದೇಶಗಳಲ್ಲಿ ನಿರುದ್ಯೋಗ ಭತ್ಯೆಯನ್ನೂ, ವಿಮೆಯ ಸೌಲಭ್ಯವನ್ನು ಒದಗಿಸುಲಾಗುತ್ತದೆ.

೫. ಉಳಿತಾಯ ಮತ್ತು ಬಂಡವಾಳ ಸಂಚಯನ ಹೆಚ್ಚಾಗಿರುತ್ತದೆ. ರಾಷ್ಟ್ರೀಯ ಉತ್ಪನ್ನದ ಸುಮಾರು ಶೇ. ೩೩ ಉಳಿತಾಯ ಮತ್ತು ಹೂಡುವಿಕೆ ಇದ್ದು ಉತ್ಪಾದನೆಗೆ ಹೆಚ್ಚಿನ ಉತ್ತೇಜನ ದೊರಕುತ್ತದೆ.

೬. ಆಧುನಿಕ ಯಂತ್ರಗಳು, ತಂತ್ರಜ್ಞಾನ, ವೈಜ್ಞಾನಿಕ ಉತ್ಪಾದನಾ ವಿಧಾನಗಳ ಬಳಕೆ ಇದ್ದು ದೊಡ್ಡ ಪ್ರಮಾಣದ ಉತ್ಪಾದನೆ ಕಡಿಮೆ ಉತ್ಪಾದನಾ ವೆಚ್ಚ ಹೆಚ್ಚಿನ ಲಾಭ ಉಂಟಾಗುತ್ತದೆ. ಇಲ್ಲಿ ಸಂಪನ್ಮೂಲಗಳ ಅತ್ಯುತ್ತಮ ಬಳಕೆಯಾಗುತ್ತದೆ.

೭. ಶ್ರಮ ವಿಭಜನೆ ಅತ್ಯುನ್ನತ ಮಟ್ಟದಲ್ಲಿ ಅನುಸರಿಸಲಾಗಿದ್ದು ಉತ್ಕೃತ್ತಮ ಗುಣಟ್ಟದ ಉತ್ಪನ್ನಗಳು ಪೈಪೋಟಿದರಗಳಲ್ಲಿ ಅಂತರಾಷ್ಟ್ರೀಯ ಮರುಕಟ್ಟೆಗೂ ದೊರಕುತ್ತದೆ.

೮. ಸಾಮಾಜಿಕ ಮತ್ತು ಆರ್ಥಿಕ ಸೌಲಭ್ಯಗಳು ಉತ್ತಮವಾಗಿ ದೊರಕುತ್ತವೆ. ಶಿಕ್ಷಣ ತಾಂತ್ರಿಕ ಜ್ಞಾನ, ಆರೋಗ್ಯ, ಮುಂತಾದ ಸೇವೆಗಳ ಪೂರೈಕೆ ಉತ್ತಮವಾಗಿದ್ದು ಜೀವನ ಮಟ್ಟ ಉತ್ತಮವಾಗಿರುತ್ತದೆ. ಸಾರಿಗೆ ಸಂಪರ್ಕ ವಿದ್ಯುತ್, ನೀರಾವರಿ,

ಹಣಕಾಸಿನ ಸಂಸ್ಥೆಗಳು ಆಡಳಿತ ವ್ಯವಸ್ಥೆಗಳೂ ಉತ್ತಮವಾಗಿದ್ದು ಹೆಚ್ಚಿನ ಉತ್ಪಾದನೆಗೆ ಸಹಕಾರಿಯಾಗುತ್ತದೆ.

೯. ಈ ಆರ್ಥಿಕತೆಗಳಲ್ಲಿ ಜನನ ಪ್ರಮಾಣ ಮರಣ ಪ್ರಮಾಣಗಳೆರಡೂ ಕಡಿಮೆಯಾಗಿದ್ದು ಜನಸಂಖ್ಯೆ ಹೆಚ್ಚಳ ಅತಿ ಕಡಿಮೆಯಾಗಿರುತ್ತದೆ. ಅತಿ ಹೆಚ್ಚು ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ಜನಸಂಖ್ಯೆ ಹೆಚ್ಚದೇ ಇರಬಹುದು, ಕಡಿಮೆಯೂ ಆಗಬಹುದು.

೧೦. ನಗರೀಕರಣ ಅತಿ ಹೆಚ್ಚಾಗಿದ್ದು ಜನಸಂಖ್ಯೆಯ ಬಹುಭಾಗ ಪಟ್ಟಣ, ನಗರಗಳಲ್ಲಿ ವಾಸಿಸುತ್ತಾರೆ. ಹೆಚ್ಚಿನ ಜೀವನ ಸೌಲಭ್ಯಗಳನ್ನು ಅನುಭವಿಸುತ್ತಾರೆ. ಗ್ರಾಮೀಣ ಜನಸಂಖ್ಯೆ ಅತಿ ಕಡಿಮೆಯಾಗಿರುತ್ತದೆ.

೧೧. ಈ ದೇಶಗಳ ವಿದೇಶೀ ವ್ಯಾಪಾರದ ಗಾತ್ರ ಮತ್ತು ಮೌಲ್ಯ ಹೆಚ್ಚಾಗಿರುತ್ತದೆ. ಇವು ತಯಾರಿಸಿದ ವಸ್ತುಗಳನ್ನು ಹೆಚ್ಚಾಗಿ ರಫ್ತು ಮಾಡುತ್ತದೆ. ಇವರ ಪೈಪೋಟಿ ಸಾಮರ್ಥ್ಯ ಹೆಚ್ಚು. ಇವು ಸಾಮಾನ್ಯವಾಗಿ ಲಾಭದಾಯಕ ವ್ಯಾಪಾರಿಶುಲ್ಕವನ್ನು ಹೊಂದಿರುತ್ತದೆ.

ಅಭಿವೃದ್ಧಿ ಹೊಂದಿದ ಆರ್ಥಿಕತೆಗಳು ಮೂರನೇ ವಿಶ್ವದ ಬಡ ರಾಷ್ಟ್ರಗಳ ಆರ್ಥಿಕ ಸಂಪನ್ಮೂಲಗಳು ಸಂಸ್ಥೆಗಳು ಮತ್ತು ಆಡಳಿತದ ಮೇಲೆ ಪ್ರಭಾವ ಹಾಗೂ ನಿಯಂತ್ರಣ ಹೊಂದಿದ್ದು ತಮ್ಮ ಲಾಭಕ್ಕಾಗಿ ಬಳಸಿಕೊಳ್ಳುತ್ತಿದೆ. ಇದಕ್ಕಾಗಿ ತಮ್ಮ ತಮ್ಮಲ್ಲೇ ತೀವ್ರ ಪೈಪೋಟಿ ನಡೆಸುತ್ತದೆ.

## ಊ. ಅಭಿವೃದ್ಧಿ ಹೊಂದುತ್ತಿರುವ ಆರ್ಥಿಕತೆಗಳು

ಅಮೆರಿಕ ಸಂಯುಕ್ತ ಸಂಸ್ಥಾನ, ಜಪಾನ್, ಜರ್ಮನಿಯಂತಹ ದೇಶಗಳಿಗೆ ಹೋಲಿಸಿದರೆ, ಕಡಿಮೆ ಉತ್ಪನ್ನ, ಆದಾಯ, ಕೈಗಾರಿಕಾ ಪ್ರಗತಿ ಹೊಂದಿರುವ ದೇಶಗಳು ಹಿಂದುಳಿದ ದೇಶಗಳು.

ರ್‍ಯಾಗ್ನಾರ್ ನರ್ಕ್ ಅವರ ಪ್ರಕಾರ ಮುಂದುವರೆದ ದೇಶಗಳಿಗೆ ಹೋಲಿಸಿದರೆ ಜನಸಂಖ್ಯೆ ಮತ್ತು ನೈಸರ್ಗಿಕ ಸಂಪನ್ಮೂಲಗಳ ಬಳಕೆಗೆ ಸಂಬಂಧಿಸಿದಂತೆ ಬಂಡವಾಳ ಕೊರತೆ ಹೊಂದಿರುವ ರಾಷ್ಟ್ರಗಳು ಅಭಿವೃದ್ಧಿ ಹೊಂದಿಲ್ಲದ ಅನಾಭಿವೃದ್ಧಿ ರಾಷ್ಟ್ರಗಳು.

ಭಾರತದ ಯೋಜನಾ ಆಯೋಗದ ಅಭಿಪ್ರಾಯದಂತೆ ಒಂದು ಅನಭಿವೃದ್ಧ ಆರ್ಥಿಕತೆಯು ಒಂದು ಕಡೆ ಬಳಸದೆ ಇರುವ ಅಥವಾ ಕಡಿಮೆ ಬಳಕೆಗೆ ಒಳಪಡಿಸಿರುವ ಮಾನವ ಶಕ್ತಿ ಇನ್ನೊಂದು ಕಡೆ ಉಪಯೋಗಿಸದೆ ಇರುವ ನೈಸರ್ಗಿಕ ಸಂಪನ್ಮೂಲಗಳು ಜೊತೆ ಜೊತೆಯಾಗಿ ಕಂಡುಬರುವ ಲಕ್ಷಣವನ್ನು ಹೊಂದಿರುತ್ತದೆ. ವಿಶ್ವ ಅಭಿವೃದ್ಧಿ ವರದಿಯ ಪ್ರಕಾರ ವರ್ಷ ೨೦೦೩ರಲ್ಲಿ ೯೩೫ ಗಿಂತ ಕಡಿಮೆ ಹಾಗೂ ೭೬೫೫ಕ್ಕಿಂತ ಹೆಚ್ಚಾದ ಮಾಧ್ಯಮ ಆದಾಯದ ದೇಶಗಳು ಹಾಗೂ ೭೬೫೫ಕ್ಕಿಂತ ಕಡಿಮೆ ತಲಾ ಹೊಂದಿರುವ

ದೇಶಗಳು ಕಡಿಮೆ ಆದಾಯದ ಬಡ ದೇಶಗಳು ವಿಶ್ವ ಸಂಸ್ಥೆಯ ಅಧ್ಯಯನಗಳಲ್ಲಿ ಆರ್ಥಿಕ ಪ್ರಗತಿಯ ಪ್ರಯತ್ನ ಮಾಡುತ್ತಿರುವ ಇಂತಹ ರಾಷ್ಟ್ರಗಳನ್ನು ಅಭಿವೃದ್ಧಿ ಹೊಂದಿರುತ್ತಿರುವ ಆರ್ಥಿಕತೆಗಳೆಂದು ಪರಿಗಣಿಸಲಾಗಿದೆ.

ಚೀನಾ, ಭಾರತ, ಪಾಕಿಸ್ತಾನ, ಬಾಂಗ್ಲಾದೇಶ, ಸೇರಿದಂತೆ ಹೆಚ್ಚಿನ ಏಷ್ಯಾದ ರಾಷ್ಟ್ರಗಳು, ಆಫ್ರಿಕಾದ, ದಕ್ಷಿಣ ಅಮೆರಿಕಾದ ರಾಷ್ಟ್ರಗಳು ಕಡಿಮೆ ತಲಾ ವರಮಾನ ಹೊಂದಿರುವ ರಾಷ್ಟ್ರಗಳಾಗಿವೆ.

**ಅಭಿವೃದ್ಧಿ ಹೊಂದುತ್ತಿರುವ ಆರ್ಥಿಕತೆಗಳ ಪ್ರಮುಖ ಲಕ್ಷಣಗಳು**

ರಾಷ್ಟ್ರೀಯ ಉತ್ಪನ್ನ ಹಾಗೂ ತಲಾ ರಾಷ್ಟ್ರೀಯ ಉತ್ಪನ್ನ ಕಡಿಮೆಯಾಗಿರುತ್ತದೆ. ಜೀವನ ಮಟ್ಟ ಕಡಿಮೆ. ಬಡತನ ವ್ಯಾಪಕವಾಗಿದ್ದು, ಬಡತನದ ವಿಷಯವೃತ್ತಿ ಆರ್ಥಿಕ ಪ್ರಗತಿಗೆ ಅಡ್ಡಿ ಉಂಟುಮಾಡುತ್ತದೆ.

ಉಳಿತಾಯ ಮತ್ತು ಹೂಡುವಿಕೆ ದರ ಕಡಿಮೆ ಇದ್ದು ಬಂಡವಾಳ ಸಂಚಯನ ಕಡಿಮೆ. ಆದ್ದರಿಂದ ಬಂಡವಾಳದ ತೀವ್ರ ಕೊರತೆ ಇರುತ್ತದೆ. ಇದು ಕೆಳಮಟ್ಟ ಉತ್ಪಾದನೆಗೆ ಕಾರಣವಾಗುತ್ತದೆ.

ಜನಸಂಖ್ಯೆ ಹೆಚ್ಚಾಗಿರುತ್ತದೆ ಜನನ ಪ್ರಮಾಣ ಮರಣ ಪ್ರಮಾಣಕ್ಕಿಂತ ಬಹಳ ಹೆಚ್ಚಾಗಿದ್ದು ಜನಸಂಖ್ಯೆ ತೀವ್ರವಾಗಿ ಬೆಳೆಯುತ್ತಿದೆ. ಇದರಿಂದ ನಿರುದ್ಯೋಗ ಮತ್ತು ಅರೆ ಉದ್ಯೋಗ ಹೆಚ್ಚುತ್ತದೆ. ಗ್ರಾಮೀಣ ಜನಸಂಖ್ಯೆ ಹೆಚ್ಚಾಗಿದ್ದು ಗ್ರಾಮೀಣ ಪ್ರದೇಶಗಳಲ್ಲಿ ಮೂಲಭೂತ ಜೀವನ ಸೌಲಭ್ಯಗಳ ಕೊರತೆ, ಉದ್ಯೋಗ ಅವಕಾಶಗಳ ಕೊರತೆ ಇದ್ದು ಸಾಮಾನ್ಯ ಜೀವನ ಮಟ್ಟ ಕಡಿಮೆಯಾಗಿರುತ್ತದೆ. ಅಕ್ಷರಜ್ಞಾನ ಕಡಿಮೆ ಇರುತ್ತದೆ.

ಕೃಷಿಯ ಮೇಲಿನ ಅವಲಂಬನೆ ಹೆಚ್ಚಾಗಿರುತ್ತದೆ. ಉದ್ಯೋಗಕ್ಕಾಗಿ ಜನರು ಕೃಷಿಯನ್ನೆ ಅವಲಂಬಿಸಿರುತ್ತಾರೆ. ರಾಷ್ಟ್ರೀಯ ಆದಾಯದ ಪ್ರಮುಖ ಪಾಲನ್ನು ಕೃಷಿ ಒದಗಿಸುತ್ತದೆ. ಕೃಷಿಯು ಹಿಂದುಳಿದಿದ್ದು ಉತ್ಪಾದಕತೆ ಕಡಿಮೆಯಾಗಿದ್ದು ಅನಿಶ್ಚತೆಯಿಂದ ಕೂಡಿದೆ.

ಕೈಗಾರಿಕಾ ಮತ್ತು ಸೇವಾವಲಯಗಳು ಸಾಕಷ್ಟು ಅಭಿವೃದ್ಧಿ ಹೊಂದಿರುವುದಿಲ್ಲ. ಈ ವಲಯಗಳಲ್ಲಿ ದೊರಕುವ ಉದ್ಯೋಗದ ಪ್ರಮಾಣ ಕಡಿಮೆ, ರಾಷ್ಟ್ರೀಯ ಉತ್ಪನ್ನದಲ್ಲಿ ಇವುಗಳ ಪಾಲು ಕಡಿಮೆ. ನೈಸರ್ಗಿಕ ಸಂಪನ್ಮೂಲಗಳನ್ನು ಅಭಿವೃದ್ಧಿ ಪಡಿಸಿರುವದಿಲ್ಲ. ಅವುಗಳ ಸಂಪೂರ್ಣ ಬಳಕೆ, ಅತ್ಯುತ್ತಮ ಬಳಕೆ ಆಗಿರುವುದಿಲ್ಲ. ಸಂಪನ್ಮೂಲಗಳ ವ್ಯರ್ಥ ಬಳಕೆಯಾಗುತ್ತದೆ.

ಉತ್ಪಾದನಾ ವಿಧಾನ ಆಧುನಿಕವಾಗಿರುವುದಿಲ್ಲ. ವೈಜ್ಞಾನಿಕ ಹಾಗೂ ತಾಂತ್ರಿಕ ವಿಧಾನಗಳ ಬಳಕೆ ಕಡಿಮೆ. ಆದ್ದರಿಂದಲೇ ಉತ್ಪಾದಕತೆ ಕಡಿಮೆ. ಹಾಗೂ ಉತ್ಪನ್ನಗಳ ಗುಣಮಟ್ಟ ಉತ್ತಮವಾಗಿರುವ ಖಾತ್ರಿ ಇಲ್ಲ. ವಿವೇಚನಾಶೀಲ ಹಾಗೂ ಸಾಹಸಿ ಉದ್ಯಮಿಗಳ ಕೊರತೆ ಇರುತ್ತದೆ.

ವಿದೇಶಿ ವ್ಯಾಪಾರದ ಗಾತ್ರ ಕಡಿಮೆ. ಪ್ರಾಥಮಿಕ ವಸ್ತುಗಳ, ನೈಸರ್ಗಿಕ ಸಂಪನ್ಮೂಲಗಳ ರಫ್ತು ಹಾಗೂ ಉತ್ಪಾದಿಸಿದ ವಸ್ತುಗಳ, ಆಮದು ಹೆಚ್ಚು. ಸಾಮಾನ್ಯವಾಗಿ ವ್ಯಾಪಾರ ಶಿಲ್ಕಿನ ಕೊರತೆ, ಹೆಚ್ಚಿನ ವಿದೇಶಿ ಸಾಲದ ಭಾರ ಕಂಡುಬರುತ್ತದೆ. ತೀವ್ರ ಆರ್ಥಿಕಾಭಿವೃದ್ಧಿಗೆ ಅವಶ್ಯಕವಾದ ಆರ್ಥಿಕ ಸಂಸ್ಥೆಗಳು, ಮೂಲಭೂತ ಸೌಲಭ್ಯಗಳ ಕೊರತೆ ಇರುತ್ತದೆ

ಆದಾಯ ಮತ್ತು ಸಂಪತ್ತಿನ ಅಸಮಾನ ಹಂಚಿಕೆಯಾಗಿರುತ್ತದೆ. ರಾಜಕೀಯ ಅಸ್ಥಿರತೆ, ಕಠಿಣ ಆರ್ಥಿಕ ಕ್ರಮಗಳನ್ನು ಕೈಗೊಳ್ಳುವಲ್ಲಿ ಇಚ್ಛಾಶಕ್ತಿಯ ಕೊರತೆ, ಲಂಚಗುಳಿತನ, ಪಕ್ಷಪಾತ ಮುಂತಾದ ಪರಿಸ್ಥಿತಿಗಳು ಪ್ರಗತಿಪರ ನೀತಿಗಳನ್ನು ರೂಪಿಸಲು ಹಾಗೂ ಅವುಗಳನ್ನ ಅನುಷ್ಠಾನಕ್ಕೆ ತರಲು ಸಹಾಯಕವಾಗಿರುವುದಿಲ್ಲ.

ಸಾಮಾಜಿಕ ಹಿಂದುಳಿದಿರುವಿಕೆ, ಸಾಂಪ್ರದಾಯಿಕ ಹಾಗೂ ಸಂಕುಚಿತ ಮನೋಭಾವ, ರಾಷ್ಟ್ರೀಯ ಭಾವನೆಯ ಅಭಾವ ಮುಂತಾದ ಪ್ರಗತಿ ವಿರೋಧಿ ಪರಿಸ್ಥಿತಿಗಳಿರುತ್ತವೆ.

## ೩. ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರವಾಗಿ ಭಾರತದ ಆರ್ಥಿಕತೆಯ ಲಕ್ಷಣಗಳು

ಅಮೇರಿಕ ಸಂಯುಕ್ತ ಸಂಸ್ಥಾನ, ಸ್ವಿಟ್ಜರ್ ಲ್ಯಾಂಡ್, ಜಪಾನ್ ಮುಂತಾದ ಅಭಿವೃಧಿ ಹೊಂದಿದ ದೇಶಗಳಿಗೆ ಹೋಲಿಸಿದರೆ ಭಾರತದ ರಾಷ್ಟ್ರೀಯ ಮತ್ತು ತಲಾ ಉತ್ಪನ್ನ, ಜೀವನ ಮಟ್ಟ ಕಡಿಮೆ, ಕೈಗಾರಿಕಾಭಿವೃದ್ಧಿ ಕಡಿಮೆ. ಭಾರತವನ್ನು ಬಡ ರಾಷ್ಟ್ರವೆಂದೂ ಹಿಂದುಳಿದ ಆರ್ಥಿಕತೆ ಎಂದೂ ಪರಿಗಣಿಸಲಾಗಿತ್ತು. ದೀರ್ಘಕಾಲದ ಬ್ರಿಟಿಷರ ಆಳ್ವಿಕೆಯಿಂದ ಸ್ವಾತಂತ್ರ್ಯ ಹೊಂದಿ, ಯೋಜನೆಗಳ ಮೂಲಕ ಆರ್ಥಿಕ ಪ್ರಗತಿ, ವೈಜ್ಞಾನಿಕ ಪ್ರಗತಿ ಸಾಧಿಸುತ್ತಿದೆ. ಆದರೂ ಇನ್ನೂ ಹಲವು ಪ್ರಮುಖ ಸಮಸ್ಯೆಗಳನ್ನು ಎದುರಿಸುತ್ತಿದೆ. ಅಬಿವೃದ್ಧಿ ಹೊಂದುತ್ತಿರುವ ಆರ್ಥಿಕತೆಯಾಗಿ ಭಾರತದಲ್ಲಿ ಕೆಳಕಂಡ ಪ್ರಮುಖ ಲಕ್ಷಣಗಳನ್ನು ಗಮನಿಸಬಹುದು.

೧. ಭಾರತದ ರಾಷ್ಟ್ರೀಯ ಹಾಗೂ ತಲಾ ಉತ್ಪನ್ನ ಮುಂದುವರೆದ ದೇಶಗಳಿಗಿಂತ ಕಡಿಮೆ, ಆದರೆ ಅವು ನಿಧಾನಗತಿಯಲ್ಲಿ ಹೆಚ್ಚುತ್ತಿವೆ. ವರ್ಷ ೨೦೦೩ರಲ್ಲಿ ತಲಾ ಆದಾಯ ನಾರ್ವೇಯಲ್ಲಿ ಡಾಲರ್ ೪೩೩೫೦, ಯು.ಎಸ್.ಎ.ದಲ್ಲಿ ಡಾಲರ್ ೩೭೬೧೦, ಜಪಾನ್ ನಲ್ಲಿ ಡಾಲರ್ ೩೪೫೧೦ ಇದ್ದರೆ ಭಾತದಲ್ಲಿ ಅದು ೫೩೦ ಆಗಿತ್ತು. ೧೯೫೦ ರಿಂದ ಡಾಲರ್ ೨೦೦೦ದ ಅವಧಿಯಲ್ಲಿ ಭಾರತದ ರಾಷ್ಟ್ರೀಯ ಉತ್ಪನ್ನ ವಾರ್ಷಿಕ ಸರಾಸರಿ ಡಾಲರ್ ಶೇ. ೪.೪೩ರಲ್ಲಿ ಹೆಚ್ಚಿದೆ. ೮ ಮತ್ತು ೯ನೇ ಯೋಜನೆ ಅವಧಿಯಲ್ಲಿ ಡಾಲರ್ ಹೆಚ್ಚಳ ಕ್ರಮವಾಗಿ ವಾರ್ಷಿಕ ಶೇ. ೬.೭ ಮತ್ತು ಶೇ. ೫.೫ ಆಗಿತ್ತು.

ಜನಸಂಖ್ಯೆಯ ತೀವ್ರ ಹೆಚ್ಚಳದಿಂದಾಗಿ, ತಲಾ ಆದಾಯದಲ್ಲಿನ ಹೆಚ್ಚಳ ರಾಷ್ಟ್ರೀಯ ಉತ್ಪನ್ನದ ಹೆಚ್ಚಳಕ್ಕಿಂತ ಕಡಿಮೆ. ಕಳೆದ ೫೦ ವರ್ಷಗಳಲ್ಲಿ ತಲಾ ರಾಷ್ಟ್ರೀಯ ಉತ್ಪನ್ನದ ಹೆಚ್ಚಳ ಕೇವಲ ಶೇ. ೨.೧೬ ೧೯೯೭-೨೦೦೨ರ ಅವಧಿಯಲ್ಲಿ ಇದು ಶೇ. ೩.೭ಕ್ಕೆ ಹೆಚ್ಚಿತು.

೨. ಭಾರತದಲ್ಲಿ ಜೀವನ ಮಟ್ಟ ಕಡಿಮೆ ಇದೆ. ಕಡಿಮೆ ರಾಷ್ಟ್ರೀಯ ಹಾಗೂ ತಲಾ ಉತ್ಪನ್ನ, ಆದಾಯದ ತೀವ್ರ ಅಸಮಾನತೆ, ಸಾಮಾಜಿಕ ಸೌಲಭ್ಯಗಳ ಕೊರತೆಯಿಂದಾಗಿ ಜೀವನ ಮಟ್ಟ ಕಡಿಮೆ ಇದೆ. ಉತ್ತಮವಲ್ಲದ ಆರೋಗ್ಯ, ಹೆಚ್ಚಿನ ಶಿಶುಮರಣ, ಕಡಿಮೆಯಾಗಿರುವ ನಿರೀಕ್ಷಿತ ಜೀವಿತಾವಧಿ, ಕಡಿಮೆ ವಿದ್ಯಾಭ್ಯಾಸ ಮಟ್ಟಗಳಿಂದಾಗಿ ಮಾನವ ಅಭಿವೃದ್ಧಿ ಸೂಚಿ ಹಾಗೂ ಜೀವನದ ಭೌತಿಕ ಗುಣಮಟ್ಟದ ಸೂಚಿ ಮೌಲ್ಯ ಕಡಿಮೆಯಾಗಿದೆ. ವರ್ಷ ೨೦೦೦ದಲ್ಲಿ ವಿಶ್ವದ (ಹೆಚ್.ಡಿ.ಐ.) ಮಾನವ ಅಭಿವೃದ್ಧಿ ಸೂಚಿಪಟ್ಟಿಯಲ್ಲಿ ಭಾರತ ೧೨೪ನೇ ಸ್ಥಾನದಲ್ಲಿದ್ದಿತು.

೩. ಭಾತದಲ್ಲಿ ಬಡತನ ವ್ಯಾಪಕವಾಗಿದೆ, ಭಾರತದ ಬಡತನ ವಿಷ ವೃತ್ತದಲ್ಲಿ ಸಿಲುಕಿದೆ. ೧೯೯೯-೨೦೦೦ದ ಸಮೀಕ್ಷೆಯಂತೆ ಒಟ್ಟು ಜನಸಂಖ್ಯೆಯು ಶೇ. ೨೮.೬ರಷ್ಟು ಜನ ಬಡತನದ ರೇಖೆಯ ಕೆಳಗಿದ್ದಾರೆ. ಇದು ಚೀನಾದಲ್ಲಿ ಶೇ. ೪.೬ ಆಗಿತ್ತು. ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ಬಡತನ ಅತಿ ಕಡಿಮೆಯಾಗಿರುತ್ತದೆ.

೪. ಜನಸಂಖ್ಯೆಯ ತೀವ್ರ ಹೆಚ್ಚಳ ಉಂಟಾಗಿ ಅವಲಂಬಿತರ ಅನುಪಾತ ಹೆಚ್ಚಾಗಿದೆ. ಕಳೆದ ೩೦ ವರ್ಷಗಳಲ್ಲಿ ಮರಣ ಪ್ರಮಾಣದಲ್ಲಿ ಹೆಚ್ಚಿನ ಇಳಿಕೆ ಉಂಟಾಗಿದ್ದು, ಜನನ ಪ್ರಮಾಣದಲ್ಲಿ ಕಡಿಮೆ ಇಳಿಕೆ ಉಂಟಾಗಿದೆ. ಆದ್ದರಿಂದ ಜನಸಂಖ್ಯೆಯ ತೀವ್ರ ಹೆಚ್ಚಳ ಉಂಟಾಗುತ್ತಿದೆ. ಜನಸಂಖ್ಯೆ ಹೆಚ್ಚಳದ ದರ ೧೯೫೧ರ ವೇಳೆಗೆ ವಾರ್ಷಿಕ ಶೇ. ೧.೨೫ ಇತ್ತು. ೧೯೮೧ರ ವೇಳೆಗೆ ಇದು ವಾರ್ಷಿಕ ಶೇ. ೨.೫ಕ್ಕೆ ಏರಿತು, ೨೦೦೧ರ ವೇಲೆಗೆ ಶೇ. ೧.೫೭ಕ್ಕೆ ಇಳಿದಿದೆ. ಮುಂದುವರೆದ ರಾಷ್ಟ್ರಗಳಲ್ಲಿ ಜನಸಂಖ್ಯೆಯ ಹೆಚ್ಚಳ ವಾರ್ಷಿಕ ಶೇ. ೧ಕ್ಕು ಕಡಿಮೆ ಇರುತ್ತದೆ.

ಒಟ್ಟು ಜನಸಂಖ್ಯೆಯಲ್ಲಿ ದುಡಿಯುವ ವಯೋಮಿತಿಯ (೧೫ ರಿಂದ ೬೪ ವರ್ಷಗಳು) ಜನರ ಪ್ರಮಾಣ ಮುಂದುವರೆದ ದೇಶಗಳಲ್ಲಿ ಸುಮಾರು ೭೦ ಇದ್ದರೆ, ಭಾರತದಲ್ಲಿ ಅದು ಸುಮಾರು ೬೦. ಅಂದರೆ ದುಡಿಯಲಾಗದೆ ಇರುವ ಅವಲಂಬಿತರ ಸಂಖ್ಯೆ ಭಾರತದಲ್ಲಿ ಹೆಚ್ಚಾಗಿದೆ.

೫. ನಿರುದ್ಯೋಗ, ಅರೆ ಉದ್ಯೋಗ, ಮರೆಮಾಚಿದ ನಿರುದ್ಯೋಗಗಳು ಹೆಚ್ಚಾಗಿವೆ ಹಾಗೂ ಹೆಚ್ಚುತ್ತಿವೆ. ಇವುಗಳ ಕರಾರುವಕ್ಕಾದ ಅಂದಾಜು ಲೆಕ್ಕಾಚಾರ ಇರುವುದಿಲ್ಲ. ಭಾರತದಲ್ಲಿ ನಿರುದ್ಯೋಗ ತಾತ್ಕಾಲಿಕವಲ್ಲ, ದೀರ್ಘಕಾಲಿಕವಾಗಿರುತ್ತದೆ. ೨೦೦೧ರ ವೇಳೆಗೆ ಜನಸಂಖ್ಯೆ ವಾರ್ಷಿಕ ಶೇ. ೧.೫೭ ದರದಲ್ಲಿ ಹೆಚ್ಚಿದರೆ, ದುಡಿಯುವ ವಯೋಮಿತಿಯ ಜನಸಂಖ್ಯೆ ಪ್ರಮಾಣದಲ್ಲಿ ವಾರ್ಷಿಕ ಶೇ. ೨.೪ರ ಹೆಚ್ಚಳ ಉಂಟಾಗಿದೆ (ಉದ್ಯೋಗ ಬೇಡುವವರ ಪ್ರಮಾಣ) ಆದರೆ ಅಷ್ಟೆ ಪ್ರಮಾಣದಲ್ಲಿ ಉದ್ಯೋಗ ಅವಕಾಶಗಳು ಹೆಚ್ಚುತ್ತಿಲ್ಲ. ನಿರುದ್ಯೋಗಿಗಳ ಪ್ರಮಾಣ ೧೯೫೧ರಲ್ಲಿ ಸುಮಾರು ೮.೮ ದಶಲಕ್ಷ, ೧೯೮೫ರಲ್ಲಿ ಸುಮಾರು ೧೪ ದಶಲಕ್ಷ, ೨೦೦೦ದಲ್ಲಿ

ಸುಮಾರು ೨೬.೫೮ ದಶಲಕ್ಷ. ಭಾರದಲ್ಲಿ ಸೂಕ್ತವಾದ ಮಾನವ ಶಕ್ತಿ ಯೋಜನೆ ಕೈಗೊಂಡಿಲ್ಲ.

೬. ಕೃಷಿಯ ಮೇಲೆ ಅಧಿಕ ಅವಲಂಬನೆ ಇದೆ. ೧೯೫೧ರಲ್ಲಿ ಜನಸಂಖ್ಯೆಯ ಶೇ. ೭೦ಕ್ಕೂ ಹೆಚ್ಚು ಕೃಷಿಯನ್ನೇ ಉದ್ಯೋಗಕ್ಕಾಗಿ ಅವಲಂಬಿಸಿತ್ತು. ಈಗಲೂ ಸುಮಾರು ಶೇ. ೬೫ರಷ್ಟು ಜನಸಂಖ್ಯೆ ಕೃಷಿಯನ್ನು ಅವಲಂಬಿಸಿದೆ. ಅಮೆರಿಕ ಸಂಯುಕ್ತ ಸಂಸ್ಥಾನ ಮತ್ತು ಇಂಗ್ಲೆಂಡ್‌ಗಳಲ್ಲಿ ಕೃಷಿ ಅವಲಂಬಿತ ಜನರ ಪ್ರಮಾಣ ಕ್ರಮವಾಗಿ ಶೇ. ೪ ಮತ್ತು ಶೇ. ೩ ರಾಷ್ಟ್ರೀಯ ಆದಾಯದಲ್ಲಿ ಕೃಷಿಯ ಪಾಲು ೧೯೬೫ರಲ್ಲಿ ಶೇ. ೪೭ ಇತ್ತು ೨೦೦೧ರಲ್ಲಿ ಇದು ಶೇ. ೨೪ ಆಗಿತ್ತು. ರಾಷ್ಟ್ರೀಯ ಆದಾಯದಲ್ಲಿ ಕೃಷಿ ಪಾಲು ಇತರೆ ಕೆಲವು ದೇಶಗಳಲ್ಲಿ ಹೀಗಿದೆ. ಚೀನಾದಲ್ಲಿ ಶೇ. ೧೫, ಬ್ರೆಜಿಲ್‌ನಲ್ಲಿ ಶೇ. ೮, ಅಮೆರಿಕಾ ಸಂಯುಕ್ತ ಸಂಸ್ಥಾನದಲ್ಲಿ ಶೇ. ೨. ಅಗತ್ಯಕ್ಕಿಂತ ಹೆಚ್ಚು ಜನಸಂಖ್ಯೆ ಕೃಷಿಯಲ್ಲಿ ನಿರತವಾಗಿದ್ದು, ಅನಿಶ್ಚಿತವಾದ ಮಳೆಯ ಮೇಲೆ ಹೆಚ್ಚಿನ ಅವಲಂಬನೆ ಇದ್ದು, ಹಳೆಯ ತಂತ್ರಜ್ಞಾನ, ಹೆಚ್ಚು ಉತ್ಪಾದಕವಲ್ಲದ ಸಂಪನ್ಮೂಲಗಳನ್ನು ಬಳಸುತ್ತಿದ್ದು, ಕೃಷಿಯ ಉತ್ಪಾದಕತೆ (ಇಳುವರಿ) ಕಡಿಮೆ ಹಾಗೂ ಪ್ರತಿ ವ್ಯಕ್ತಿಗೆ ದೊರಕುವ ಉತ್ಪನ್ನದ ಪಾಲು ಕಡಿಮೆ.

೭. ಕೈಗಾರಿಕೆಗಳು ಮತ್ತು ಸೇವಾ ವಲಯ ಹೆಚ್ಚು ಅಭಿವೃದ್ಧಿ ಹೊಂದಿಲ್ಲ. ಪಂಚವಾರ್ಷಿಕ ಯೋಜನೆಗಳಲ್ಲಿ ಹಲವಾರು ಕೈಗಾರಿಕೆಗಳನ್ನು ಸಾರ್ವಜನಿಕ ಹಾಗೂ ಖಾಸಗಿ ವಲಯದಲ್ಲಿ ಸ್ಥಾಪಿಸಲಾಗಿದೆ. ಮೂಲಭೂತ ಸೇವಾ ಸೌಲಭ್ಯಗಳನ್ನು ಸರ್ಕಾರವೇ ನಿರ್ಮಿಸಿದೆ. ರಾಷ್ಟ್ರೀಯ ಉತ್ಪನ್ನದಲ್ಲಿ ಕೈಗಾರಿಕೆಗಳ ಪಾಲು ೫೦ರ ದಶಕದಲ್ಲಿ ಸುಮಾರು ಶೇ. ೨೫, ೨೦೦೧-೦೨ ರಲ್ಲಿ ಶೇ. ೨೨ ಇದ್ದಿತು. ಇದೇ ಅವಧಿಯಲ್ಲಿ ಸೇವೆಗಳ ಪಾಲು ಶೇ. ೨೮ ರಿಂದ ಶೇ. ೩೯ ಕ್ಕೆ ಹಾಗೂ ಶೇ. ೫೪ಕ್ಕೆ ಹೆಚ್ಚಿತ್ತು. ಮುಂದುವರೆದ ದೇಶಗಳಲ್ಲಿ ಕೈಗಾರಿಕೆ ಮತ್ತು ಸೇವೆ ಎರಡೂ ವಲಯಗಳು ರಾಷ್ಟ್ರೀಯ ಉತ್ಪನ್ನದ ಶೇ. ೯೦ಕ್ಕೂ ಹೆಚ್ಚು ಪಾಲನ್ನು ಒದಗಿಸುತ್ತವೆ. ಕೆಲವು ಕೈಗಾರಿಕೆಗಳು ಸಂಪರ್ಕವಲಯ, ಮಾಹಿತಿ ತಂತ್ರಜ್ಞಾನ ವಲಯದಲ್ಲಿ ಕಳೆದ ೧೦ ವರ್ಷಗಳಲ್ಲಿ ಅಪಾರವಾದ ಬೆಳವಣಿಗೆ ಉಂಟಾಗಿದೆ.

೮. ಉಳಿತಾಯ ಮತ್ತು ಹೂಡುವಿಕೆ ದರ ಕಡಿಮೆ ಇದ್ದು ಬಂಡವಾಳದ ಕೊರತೆ ಇದೆ. ೧೯೫೦-೫೧ರಲ್ಲಿ ಉಳಿತಾಯ ಮತ್ತು ಹೂಡುವಿಕೆ, ರಾಷ್ಟ್ರೀಯ ಉತ್ಪನ್ನದ ೯ರಷ್ಟಿತ್ತು. ವರ್ಷ ೨೦೦೦-೦೧ರಲ್ಲಿ ಉಳಿತಾಯದ ದರ ಶೇ. ೨೪ ಹೂಡುವಿಕೆ ದರ ಶೇ. ೨೩.೭ ಆಗಿತ್ತು. ಅಭಿವೃದ್ಧಿ ಹೊಂದಿರುವ ದೇಶಗಳು ಹಾಗೂ ತೀವ್ರ ಅಭಿವೃದ್ಧಿ ಸಾಧಿಸುತ್ತಿರುವ ಏಷ್ಯಾದ ಕೆಲವು ದೇಶಗಳಲ್ಲಿ ಉಳಿತಾಯ ಮತ್ತು ಹೂಡುವಿಕೆ ರಾಷ್ಟ್ರೀಯ ಉತ್ಪನ್ನದ ಶೇ. ೩೫ರಷ್ಟಿದೆ. ಯೋಜನೆಗಳ ಆರಂಭ ದಿಂದಲೂ ಬಂಡವಾಳಕ್ಕಾಗಿ ವಿದೇಶಿ ಅವಲಂಬನೆ ಹೆಚ್ಚಾಗಿದೆ. ೧೯೯೧ರ ಆರ್ಥಿಕ

ಉದಾರೀಕರಣದ ನೀತಿಯಿಂದ ಹೆಚ್ಚು ವಿದೇಶಿ ಬಂಡವಾಳ ಭಾರತಕ್ಕೆ ಹರಿದು ಬರುತ್ತಿದೆ. ಭಾರತದಲ್ಲಿ ಹಣಕಾಸಿನ ಹಾಗೂ ಬಂಡವಾಳ ಮಾರುಕಟ್ಟೆಗಳು ಅಭಿವೃದ್ಧಿ ಹೊಂದುತ್ತಿವೆ.

೯. ಭಾರತದಲ್ಲಿ ಉತ್ಪಾದನಾ ವಿಧಾನ ಆಧುನಿಕವಾಗಿಲ್ಲ. ಬಂಡವಾಳದ ಕೊರತೆ ಯಿಂದಾಗಿ ಆಧುನಿಕ ತಂತ್ರಜ್ಞಾನ ಹಾಗೂ ವೈಜ್ಞಾನಿಕ ವಿಧಾನಗಳ ಬಳಕೆ ಕಡಿಮೆ. ಕೃಷಿ, ಸಣ್ಣ ಕೈಗಾರಿಕೆಗಳು ಮತ್ತು ಗ್ರಾಮೀಣ ಉದ್ದಿಮೆಗಳಲ್ಲಿ ಇದು ಪ್ರಮುಖವಾಗಿ ಕಂಡುಬರುತ್ತದೆ. ಸಂಪನ್ಮೂಲಗಳ ಅತ್ಯುತ್ತಮ ಬಳಕೆ ಆಗುತ್ತಿಲ್ಲ, ಕೆಲವು ನೈಸರ್ಗಿಕ ಸಂಪನ್ಮೂಲಗಳ ಅತೀವ ಬಳಕೆ, ವ್ಯರ್ಥ ಬಳಕೆಯಿಂದಾಗಿ ಪರಿಸರ ಸಂಬಂಧಿ ಸಮಸ್ಯೆಗಳುಂಟಾಗುತ್ತಿವೆ. ಅಲ್ಲದೇ ಭಾರತದ ಕಾರ್ಮಿಕರ ದಕ್ಷತೆಯೂ ಕಡಿಮೆ ಎಂದು ಪರಿಗಣಿಸಲಾಗಿದೆ. ಉತ್ತಮ ಆರೋಗ್ಯ, ದೈಹಿಕ ಸ್ಥಿತಿ, ಶಿಕ್ಷಣ ಹಾಗೂ ತಾಂತ್ರಿಕ ಜ್ಞಾನ, ಆಧುನಿಕ ಯಂತ್ರೋಪಕರಣಗಳ ಬಳಕೆ, ದುಡಿಮೆಯ ಮನೋಭಾವ ಮುಂತಾದ ಅಂಶಗಳಲ್ಲಿನ ಕೊರತೆಯಿಂದಾಗಿ ಶ್ರಮದ ದಕ್ಷತೆ ಕಡಿಮೆ.

ಇವುಗಳ ಪರಿಣಾಮವಾಗಿ ಉತ್ಪಾದಕತೆ ಕಡಿಮೆ, ವೆಚ್ಚ ಹೆಚ್ಚು, ಉತ್ಪನ್ನಗಳ ಉತ್ತಮ ಗುಣಮಟ್ಟದ ಖಾತ್ರಿ ಇಲ್ಲ. ಆದ್ದರಿಂದ ಭಾರತೀಯ ಉತ್ಪನ್ನಗಳು ವಿದೇಶಿ ಮಾರುಕಟ್ಟೆಗಳಲ್ಲಿ ಮಾತ್ರವಲ್ಲದೆ ಜಾಗತೀಕರಣ ನೀತಿಯಿಂದಾಗಿ ದೇಶದೊಳಗಿನ ಮಾರುಕಟ್ಟೆಯಲ್ಲಿಯೂ ವಿದೇಶಿ ವಸ್ತುಗಳಿಂದ ಪೈಪೋಟಿ ಎದುರಿಸುತ್ತಿವೆ.

ಭಾರತದಲ್ಲಿ ಯಶಸ್ವಿ ಉದ್ಯಮಶೀಲದ ಕೊರತೆಯೂ ಇದೆ. ಒಂದು ಜೀವಿತಾವಧಿಯಲ್ಲಿ ತೀವ್ರ ಯಶಸ್ಸು ಸಾಧಿಸಿದ ಕೆಲವು ಉದ್ಯಮಿಗಳು ಅಂತರಾಷ್ಟ್ರೀಯ ಸಾಧನೆ ತೋರಿರುವ ಭಾರತೀಯ ಉದ್ಯಮಿಗಳಿದ್ದರೂ ಅವರ ಸಂಖ್ಯೆ ಕಡಿಮೆ.

೧೦. **ಮೂಲಭೂತ ಆರ್ಥಿಕ ಸೌಲಭ್ಯಗಳ ಕೊರತೆ**

ಯೋಜನೆಗಳ ಆರಂಭದಿಂದ ನೀರಾವರಿ, ವಿದ್ಯುತ್ ಉತ್ಪಾದನೆ, ಕಬ್ಬಿಣ ಮತ್ತು ಉಕ್ಕು, ಸಿಮೆಂಟ್, ಯಂತ್ರೋಪಕರಣಗಳು, ಸಾರಿಗೆ ಸಂಪರ್ಕ, ತಾಂತ್ರಿಕ ಶಿಕ್ಷಣ, ಹಣಕಾಸು ಸಂಸ್ಥೆಗಳು, ಮಾರುಕಟ್ಟೆಗಳು ಮುಂತಾದ ಮೂಲಭೂತ ಸೌಲಭ್ಯಗಳನ್ನು ಸತತವಾಗಿ ವಿಸ್ತರಿಸಲಾಗಿದೆ. ಆದರೂ ಹೆಚ್ಚುತ್ತಿರುವ ಜನಸಂಖ್ಯೆ, ಬಡತನ ನಿರ್ಮೂಲನ ಕ್ರಮಗಳು ಹಾಗೂ ಆರ್ಥಿಕ ಅಭಿವೃದ್ಧಿಯ ಬೇಡಿಕೆಗಳನ್ನು ಸಮರ್ಪಕವಾಗಿ ಪೂರೈಸಲು ಸಾಧ್ಯವಾಗುತ್ತಿಲ್ಲ. ಇದು ತೀವ್ರ ಆರ್ಥಿಕ ಪ್ರಗತಿಗೆ ಉತ್ತೇಜಕವಾಗಿಲ್ಲ.

೧೧. ಹೆಚ್ಚಿನ ಆದಾಯದ ಅಸಮಾನತೆ ಹಾಗೂ ದ್ವಂದ್ವ ಆರ್ಥಿಕ ವ್ಯವಸ್ಥೆ ಕಂಡು ಬರುತ್ತದೆ. ಅತಿ ಹೆಚ್ಚಿನ ಆದಾಯದ ವರ್ಗಕ್ಕೆ ಸೇರಿದ ೧೦ ಜನಸಂಖ್ಯೆ ರಾಷ್ಟ್ರೀಯ ಉತ್ಪನ್ನದ ಶೇ. ೩೩ ಪಾಲು ಪಡೆದಿದೆ. ಅತಿ ಕಡಿಮೆ ಆದಾಯದ ವರ್ಗಕ್ಕೆ ಸೇರಿದ

ಶೇ. ೨೦ ಜನಸಂಖ್ಯೆ ರಾಷ್ಟ್ರೀಯ ಉತ್ಪನ್ನದ ಕೇವಲ ಶೇ. ೮ ಪಾಲು ಪಡೆದಿದೆ. ಹೆಚ್ಚಿನ ಆದಾಯದ ವರ್ಗ ಹೆಚ್ಚಿನ ಉಳಿತಾಯ, ಹೂಡುವಿಕೆ, ಸಂಪನ್ಮೂಲಗಳ ಹಾಗೂ ಉತ್ಪದನಾಂಗಗಳ ಮೇಲೆ ಹೆಚ್ಚಿನ ನಿಯಂತ್ರಣ ಹೊಂದಿದ್ದು, ಹೆಚ್ಚು ಲಾಭಗಳಿಸುತ್ತದೆ. ಇದರೊಡನೆ ಪ್ರಾದೇಶಿಕ ಅಸಮಾನತೆಯೂ ಕಂಡುಬರುತ್ತದೆ. ಹೆಚ್ಚು ಸೌಲಭ್ಯ, ಉದ್ಯೋಗವಕಾಶ, ಆದಾಯ ಹೊಂದಿದ ನಗರ ಪ್ರದೇಶಗಳು, ಕೈಗಾರಿಕಾ ಮತ್ತು ವಾಣಿಜ್ಯ ಕೇಂದ್ರಗಳು, ತೀವ್ರ ಬಡತನ, ನಿರುದ್ಯೋಗ, ಮೂಲಭೂತ ಸೌಲಭ್ಯಗಳ ಕೊರತೆ, ಸಾಮಾಜಿಕ ಹಾಗೂ ಶೈಕ್ಷಣಿಕ ಹಿಂದುಳಿದಿರುವಿಕೆ ಇರುವ ಗ್ರಾಮೀಣ ಪ್ರದೇಶಗಳು ಇವೆ. ಭಾರತದಲ್ಲಿ ಕೃಷಿ ಹಾಗೂ ಕೈಗಾರಿಕೆಗಳಲ್ಲಿ ಸಾಂಪ್ರದಾಯಿಕ ಶ್ರಮ ಪ್ರಧಾನ ತಂತ್ರಜ್ಞಾನ ಹಾಗೂ ಸರಳ ಉಪಕರಣಗಳನ್ನು ಬಳಸುವ ಸಣ್ಣ ಘಟಕಗಳೂ, ಆಧುನಿಕ ಬಂಡವಾಳ ಪ್ರಧಾನ ತಂತ್ರಜ್ಞಾನ ಹಾಗೂ ಯಂತ್ರೋಪಕರಣಗಳನ್ನು ಬಳಸುವ ದೊಡ್ಡ ಘಟಕಗಳೂ ಜೊತೆ ಜೊತೆಯಾಗಿ ಇದ್ದು, ದ್ವಂದ್ವ ಆರ್ಥಿಕ ವ್ಯವಸ್ಥೆ ಕಂಡುಬರುತ್ತದೆ.

ಭಾರತದ ವಿದೇಶಿ ವ್ಯಾಪಾರದ ಗಾತ್ರ ಕಡಿಮೆ, ವ್ಯಾಪಾರ ಶಿಲ್ಕಿನ ಕೊರತೆ ಸತತವಾಗಿದ್ದು ವಿದೇಶಿ ಸಾಲದ ಭಾರ ಹೆಚ್ಚಾಗಿದೆ. ವಿಶ್ವ ಅಭಿವೃದ್ಧಿ ವರದಿ ಪ್ರಕಾರ ವರ್ಷ ೨೦೦೩ರಲ್ಲಿ ಒಟ್ಟು ವಿದೇಶಿ ವ್ಯಾಪಾರದ ಗಾತ್ರ ಯು.ಎಸ್.ಎ.ನಲ್ಲಿ ೧೩೭೮೦೫೪ ದಶಲಕ್ಷ ಡಾಲರ್, ಜರ್ಮನಿಯಲ್ಲಿ ೧೨೪೨೦೮೭ ದಶಲಕ್ಷ ಡಾಲರ್, ಜಪಾನಿನಲ್ಲಿ ೮೫೪೮೯೩ ದಶಲಕ್ಷ ಡಾಲರ್, ಚೈನಾದಲ್ಲಿ ೮೫೧೨೧೦ ದಶಲಕ್ಷ ಡಾಲರ್, ಭಾರತದಲ್ಲಿ ೧೨೪೪೮೩ ದಶಲಕ್ಷ ಡಾಲರ್. ಒಟ್ಟು ವಿಶ್ವ ವ್ಯಾಪಾರದಲ್ಲಿ ಯು.ಎಸ್.ಎ.ದ ಪಾಲು ಶೇ. ೯.೧೨, ಜರ್ಮನಿಯದು ಶೇ. ೮.೨೨ ಜಪಾನಿನದು ಶೇ. ೫.೬೬, ಚೀನಾದ್ದು ಶೇ. ೫.೬೩ ಮತ್ತು ಭಾರತದ್ದು ಶೇ. ೦.೮೨ ಆಗಿತ್ತು. ನಮ್ಮ ಆಮದುಗಳು ರಫ್ತುಗಳಿಗಿಂತ ಹೆಚ್ಚಾಗಿದ್ದು, ಸತತವಾದ ವಿದೇಶಿ ವ್ಯಾಪಾರದ ಶಿಲ್ಕಿನ ಕೊರತೆ ಹಾಗೂ ವಿದೇಶಿ ಪಾವತಿಯ ಶಿಲ್ಕಿನ ಕೊರತೆ ಉಂಟಾಗಿದೆ. ಇದರಿಂದ ವಿದೇಶಿ ಸಾಲವು ಹೆಚ್ಚುತ್ತಿದೆ. ೧೯೯೧ರಲ್ಲಿ ಇದು ರಾಷ್ಟ್ರೀಯ ಉತ್ಪನ್ನದ ಶೇ. ೨೮.೭ರಷ್ಟು, ೨೦೦೨ರಲ್ಲಿ ಶೇ. ೨೦.೯ ಆಗಿತ್ತು. ಸಾಲದ ಮರುಪಾವತಿ ಸರ್ಕಾರದ ವೆಚ್ಚದ ಅತಿ ದೊಡ್ಡ ಬಾಬ್ತು ಆಗಿದೆ. ನಮಗೆ ಸಾಲ ನೀಡಿರುವ ವಿಶ್ವಬ್ಯಾಂಕು ಹಾಗೂ ಮುಂದುವರೆದ ದೇಶಗಳು ನಮ್ಮ ಆರ್ಥಿಕ ನೀತಿಗಳು ಹಾಗೂ ಕಾರ್ಯಕ್ರಮಗಳ ಮೇಲೆ ಒತ್ತಡ ಹೇರುತ್ತವೆ.

ಆಡಳಿತದಲ್ಲಿ ಭ್ರಷ್ಟಾಚಾರ, ವಂಚನೆ, ಪಕ್ಷಪಾತ ಹೆಚ್ಚಾಗಿದೆ. ಆರ್ಥಿಕ ಮತ್ತು ಸಾಮಾಜಿಕ ಪ್ರಗತಿ ಯೋಜನೆಗಳನ್ನು ಮತಗಳಿಕೆ, ಪಕ್ಷ ಪ್ರಾಬಲ್ಯ, ವೈಯಕ್ತಿಕ ಸಂಪತ್ತಿನ ಗಳಿಕೆಯ ಸಾಧನೆಗಳಾಗಿ ಮಾಡಿಕೊಂಡಿರುವುದರಿಂದ ಅವುಗಳ ಉದ್ದೇಶಿತ ಫಲ ದೊರಕುತ್ತಿಲ್ಲ. ಆದರೂ ಕಳೆದ ೫೦ ವರ್ಷಗಳಲ್ಲಿ ರಾಷ್ಟ್ರೀಯ ಉತ್ಪನ್ನ ಮತ್ತು ಜೀವನ ಮಟ್ಟ ಹೆಚ್ಚಿದೆ. ಕೃಷಿ, ಕೈಗಾರಿಕೆ ಮತ್ತು ಸೇವಾ ವಲಯಗಳಲ್ಲಿ ಅಭಿವೃದ್ಧಿ ಉಂಟಾಗಿದೆ.

ಮಾಹಿತಿ ತಂತ್ರಜ್ಞಾನ ಮತ್ತಿತರೆ ಆರ್ಥಿಕ ಉದಾರೀಕರಣ ನೀತಿಯಲ್ಲಿ ಜಾಗತೀಕ ಪೈಪೋಟಿಯನ್ನು ಯಶಸ್ವಿಯಾಗಿ ಎದುರಿಸಲು ಸಿದ್ಧವಾಗುತ್ತಿರುವ ಭಾರತ ಒಂದು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರವಾಗಿದೆ.

**೩೦. ಜೀವನದ ಭೌತಿಕ ಗುಣಮಟ್ಟ ಸೂಚ್ಯಂಕ ಮಾನವ ಅಭಿವೃದ್ಧಿ ಸೂಚ್ಯಂಕ ಮತ್ತು ಜೀವನಮಟ್ಟ ಸೂಚ್ಯಂಕ**

ಅಭಿವೃದ್ಧಿ ಎಂಬುದು ಕೇವಲ ಉತ್ಪನ್ನ ಮತ್ತು ಆದಾಯಗಳ ಹೆಚ್ಚಳದಿಂದ ಸಾಧ್ಯವಾಗುವುದಿಲ್ಲ. ಮೂಲಭೂತ ಜೀವನ ಸೌಲಭ್ಯಗಳನ್ನು, ಸಾಮಾಜಿಕ ಅಗತ್ಯಗಳನ್ನು, ಒದಗಿಸುವುದು, ಹೆಚ್ಚಿಸುವುದರ ಮೂಲಕ ಹೆಚ್ಚಿನ ಕ್ಷೇಮ ಮತ್ತು ಮಾನವ ಅಭಿವೃದ್ಧಿ ಸಾಧಿಸಬಹುದು. ಮಾನವ ಜೀವನದ ಗುಣಮಟ್ಟ, ಅಭಿವೃದ್ಧಿ ಸಾಧಿಸುವ ಮತ್ತು ಅಳೆಯುವ ಬಗ್ಗೆ ಅರ್ಥಶಾಸ್ತ್ರಜ್ಞರು ಕೆಲವು ತಂತ್ರಗಳನ್ನು ರೂಪಿಸಿದ್ದಾರೆ. ಅವುಗಳಲ್ಲಿ ಪ್ರಮುಖವಾದವು.

ಜೀವನದ ಭೌತಿಕ ಗುಣಮಟ್ಟ ಸೂಚ್ಯಂಕ (PQLI), ಮಾನವ ಅಭಿವೃದ್ಧಿ ಸೂಚ್ಯಂಕ (HDI), ಜೀವನ ಮಟ್ಟದ ಸೂಚ್ಯಂಕ (SOLI)

**ಜೀವನದ ಭೌತಿಕ ಗುಣಮಟ್ಟ ಸೂಚಿ (PQLI)**

ಡೇವಿಡ್ ಮೋರಿಸ್ ಎಂಬ ಅರ್ಥಶಾಸ್ತ್ರಜ್ಞ ೧೯೭೯ರಲ್ಲಿ ೨೩ ಅಭಿವೃದ್ಧಿಶೀಲ ರಾಷ್ಟ್ರಗಳ ತುಲನಾತ್ಮಕ ಅಧ್ಯಯನಕ್ಕೆ ಸಂಬಂಧಿಸಿದಂತೆ ಈ ಸೂಚ್ಯಂಕ ರೂಪಿಸಿದರು. ಇದು ಒಂದು ದೇಶದ ಜನರ ಜೀವನದ ಭೌತಿಕ ಮಟ್ಟವನ್ನೂ ಮಾನವ ಕ್ಷೇಮ ಸಾಧನೆಯನ್ನೂ ಸೂಚಿಸುತ್ತದೆ.

ಜೀವನದ ಭೌತಿಕ ಗುಣಮಟ್ಟ ಸೂಚ್ಯಂಕವು ೩ ಪ್ರಮುಖ ಸೂಚಿಗಳಿಂದ ರಚಿತವಾಗಿದೆ.

೧. ಶಿಶುಮರಣ ದರ (೧ನೇ ವರ್ಷದ ವಯಸ್ಸಿನಲ್ಲಿ)

೨. ನಿರೀಕ್ಷಿತ ಜೀವಿತಾವಧಿ ಮಟ್ಟ

೩. ಸಾಕ್ಷರತೆ ದರ

ವಿವಿಧ ದೇಶಗಳ ಶಿಶುಮರಣ ಮತ್ತು ನಿರೀಕ್ಷಿತ ಜೀವಿತಾವಧಿಯ ಗರಿಷ್ಠ ಮತ್ತು ಕನಿಷ್ಠ ಮಟ್ಟಗಳನ್ನು ಪಟ್ಟಿಮಾಡಿ, ಕೆಳಕಂಡ ಸೂತ್ರಗಳ ಮೂಲಕ ಜೀವನದ ಭೌತಿಕ ಗುಣಮಟ್ಟ ಸೂಚಿ ತಯಾರಿಸಬಹುದು.

$$\text{ಶಿಶುಮರಣ ಸೂಚಿ} = \frac{\text{ಶಿಶುಮರಣದ ಗರಿಷ್ಠ ಮೌಲ್ಯ - ವಾಸ್ತವ ಮೌಲ್ಯ}}{\text{ಗರಿಷ್ಠ ಮೌಲ್ಯ - ಕನಿಷ್ಠ ಮೌಲ್ಯ}}$$

$$\text{ನಿರೀಕ್ಷಿತ ಜೀವಿತಾವಧಿ ಸೂಚಿ} = \frac{\text{ನಿರೀಕ್ಷಿತ ಜೀವಿತಾವಧಿಯ ವಾಸ್ತವ ಮೌಲ್ಯ - ಕನಿಷ್ಠ ಮೌಲ್ಯ}}{\text{ಗರಿಷ್ಠ ಮೌಲ್ಯ - ಕನಿಷ್ಠ ಮೌಲ್ಯ}}$$

ಈ ಮೂರು ಸೂಚಿಗಳನ್ನು ಕೂಡಿ ೩ರಿಂದ ಭಾಗಿಸಿದರೆ ಜೀವನದ ಭೌತಿಕ ಗುಣಮಟ್ಟ ಸೂಚಿ ದೊರಕುತ್ತದೆ.

ಶಿಶುಮರಣ ಸೂಚಿ + ನಿರೀಕ್ಷಿತ ಜೀವಿತಾವಧಿ ಸೂಚಿ

ಜೀವನದ ಭೌತಿಕ ಗುಣಮಟ್ಟ ಸೂಚ್ಯಂಕ  + ಮೂಲ ಸಾಕ್ಷರತಾ ಸೂಚಿ

೩

## ಮಾನವ ಅಭಿವೃದ್ಧಿ ಸೂಚ್ಯಂಕ

ವಿಶ್ವಸಂಸ್ಥೆ ಅಭಿವೃದ್ಧಿ ಕಾರ್ಯಕ್ರಮದ (UNDP) ಅಡಿಯಲ್ಲಿ ಬೇರೆ ಬೇರೆ ದೇಶಗಳ ಜೀವನ ಗುಣಮಟ್ಟ ಅಳೆಯಲು ಮಾನವ ಅಭಿವೃದ್ಧಿ ಸೂಚ್ಯಂಕವನ್ನು ರಚಿಸಿ ಬಳಸಲಾಗಿದೆ. ಇದರಲ್ಲಿ ಪರಿಗಣಿಸಲಾಗುವ ನಿರೀಕ್ಷಿತ ಜೀವಿತಾವಧಿ, ಶಿಶುಮರಣ, ವಯಸ್ಕ ಅಕ್ಷರಸ್ಥ ಪ್ರಮಾಣಗಳ ಅಂಕಿಅಂಶಗಳನ್ನು ೧೯೯೦ ರಿಂದ ಪ್ರತಿ ವರ್ಷ ಮಾನವ ಅಭಿವೃದ್ಧಿ ವರದಿಯಲ್ಲಿ ಪ್ರಕಟಿಸಲಾಗುತ್ತಿದೆ. ಡಾ. ಅಮರ್ತ್ಯಸೇನ್, ಡಾ. ಮೆಹಬೂಬ್ ಉಲ್ ಹಕ್ ಮುಂತಾದ ಅರ್ಥಶಾಸ್ತ್ರಜ್ಞರು ತಮ್ಮ ಅಧ್ಯಯನಗಳಲ್ಲಿ ಈ ಸಾಧನವನ್ನು ಹೆಚ್ಚಾಗಿ ಬಳಸಿದ್ದಾರೆ.

ಜನರಿಗೆ ದೊರಕಬಹುದಾದ ಉತ್ತಮ ಜೀವನದ ಆಯ್ಕೆ ಅವಕಾಶಗಳನ್ನು ಹೆಚ್ಚಿಸುವುದು ಮಾನವ ಅಭಿವೃದ್ಧಿ. ಬಹಳ ಮುಖ್ಯವಾದ ಮೂಲಭೂತವಾದ ಆಯ್ಕೆಯು, ಆರೋಗ್ಯಕರ ಜೀವನ, ವಿದ್ಯೆ ಹಾಗೂ ಆದಾಯ ಮತ್ತು ಜೀವನ ಮಟ್ಟಕ್ಕೆ ಸಂಬಂಧಿಸಿದೆ. ಆದ್ದರಿಂದ ಮಾನವ ಅಭಿವೃದ್ಧಿ ಸೂಚ್ಯಂಕವು ಕೆಳಕಂಡ ೩ ಸೂಚಿಗಳನ್ನು ಪರಿಗಣಿಸಿದೆ.

೧. ನಿರೀಕ್ಷಿತ ಜೀವಿತಾವಧಿ

೨. ಶೈಕ್ಷಣಿಕ ಸಾಧನೆಯ ಮಟ್ಟ

೩. ನೈಜ ತಲಾ ಉತ್ಪನ್ನ ಜೀವನ ಮಟ್ಟ

ನಿರೀಕ್ಷಿತ ಜೀವಿತಾವಧಿ ಸೂಚಿ +

ಮಾನವ ಅಭಿವೃದ್ಧಿ ಸೂಚ್ಯಂಕ = ಶಿಕ್ಷಣ ಮಟ್ಟ ಸಾಧನೆಯ ಸೂಚಿ+ಜೀವನಮಟ್ಟ ಸೂಚಿ

೩

ನಿರೀಕ್ಷಿತ ಜೀವಿತಾವಧಿ ಸೂಚಿ ಪಡೆಯಲು ಈ ಸೂತ್ರವನ್ನು ಬಳಸಬಹುದು.

ನಿರೀಕ್ಷಿತ ಜೀವಿತಾವಧಿ ಸೂಚಿ = ವಾಸ್ತವ ನಿರೀಕ್ಷಿತ ಜೀವಿತಾವಧಿ-ಕನಿಷ್ಠ ನಿರೀಕ್ಷಿತ ಜೀವಿತಾವಧಿ / ಗರಿಷ್ಠ ನಿರೀಕ್ಷಿತ ಜೀವಿತಾವಧಿ-ಕನಿಷ್ಠ ನಿರೀಕ್ಷಿತ ಜೀವಿತಾವಧಿ

ಶೈಕ್ಷಣಿಕ ಸಾಧನೆ ಮೌಲ್ಯ ಲೆಕ್ಕ ಹಾಕಲು ವಯಸ್ಕರ ಸಾಕ್ಷರತೆ ದರ ಮತ್ತು ಪ್ರಾಥಮಿಕ ಪ್ರೌಢ ಹಾಗೂ ಉನ್ನತ ಶಿಕ್ಷಣಗಳಲ್ಲಿನ ಒಟ್ಟು ದಾಖಲಾತಿಗಳನ್ನು ನಿರ್ದಿಷ್ಟ ಅನುಪಾತದಲ್ಲಿ ಒಟ್ಟು ಗೂಡಿಸಲಾಗುವುದು.

ಶೈಕ್ಷಣಿಕ ಸಾಧನೆಯ ಸೂಚಿ = ೨/೩ (ವಯಸ್ಕ ಸಾಕ್ಷರತೆ ದರ) + ೧/೩ (ಒಟ್ಟು ದಾಖಲಾತಿ ದರ)

ಜೀವನ ಮಟ್ಟ ಎಂಬುದು ಒಂದು ದೇಶದ ಜನರು ಕೊಂಡು ಬಳಸುವ ಸರಕು ಸೇವೆಗಳ ಪ್ರಮಾಣ ಮತ್ತು ಗುಣ ಮಟ್ಟ. ಇದು ನೈಜ ತಲಾ ಆದಾಯವನ್ನು ಅವಲಂಬಿಸಿದೆ.

ಆದ್ದರಿಂದ ನೈಜ ತಲಾ ದೇಶಿಯ ಉತ್ಪನ್ನ ಪಿ.ಪಿ.ಸಿ.ಗಳಲ್ಲಿ (ಕೊಳ್ಳುವ ಶಕ್ತಿ ಸಾಮರ್ಥ್ಯ ಡಾಲರ್‌ಗಳಲ್ಲಿ) ಇದರ ಲಘು ಗಣನಾತ್ಮಕ ರೂಪ (ಲಾಗ್) ಜೀವನಮಟ್ಟ ಸೂಚಿ.

ಜೀವನಮಟ್ಟ ಸೂಚಿ = ಲಾಗ್ ನೈಜ ತಲಾ ದೇಶೀಯ ಉತ್ಪನ್ನ (ಪಿ.ಪಿ.ಪಿ. ಡಾಲರ್‌ಗಳಲ್ಲಿ)

ಮಾನವ ಅಭಿವೃದ್ಧಿ ಸೂಚ್ಯಂಕದ ಕನಿಷ್ಠಮೌಲ್ಯ ೦, ಗರಿಷ್ಠ ೧. ರಾಷ್ಟ್ರಗಳ ಮಾನವ ಅಭಿವೃದ್ಧಿ ಸೂಚ್ಯಂಕ ಮೌಲ್ಯದ ಆದಾರದ ಮೇಲೆ ಪಟ್ಟಿ ಮಾಡಲಾಗಿದೆ. ಇದರಲ್ಲಿ ೦.೫ಕ್ಕಿಂತ ಕಡಿಮೆ ಹೆಚ್.ಡಿ.ಐ. ಮೌಲ್ಯ ಹೊಂದಿರುವ ದೇಶಗಳು, ಕನಿಷ್ಠ ಮಾನವಾಭಿವೃದ್ಧಿಯ ದೇಶಗಳು, ಇವು ಬಡ ಹಾಗೂ ತೀರಾ ಹಿಂದುಳಿದ ದೇಶಗಳು, ೦.೫ ರಿಂದ ೦.೭೯ರವರೆಗೆ ಹೆಚ್.ಡಿ.ಐ. ಮೌಲ್ಯ ಹೊಂದಿರುವ ದೇಶಗಳು ಮಧ್ಯಮ ಮಾನವಾಭಿವೃದ್ಧಿ ಹೊಂದಿದ ದೇಶಗಳು, ೦.೮ಕ್ಕಿಂತ ಹೆಚ್ಚಿನ ಹೆಚ್.ಡಿ.ಐ. ಮೌಲ್ಯ ಹೊಂದಿರುವ ದೇಶಗಳು ಹೆಚ್ಚು ಮಾನವಾಭಿವೃದ್ಧಿ ಸಾಧಿಸಿರುವ ದೇಶಗಳು, ಸಾಮಾನ್ಯವಾಗಿ ಶ್ರೀಮಂತ ಹಾಗೂ ಮುಂದುವರೆದ ದೇಶಗಳು.

೨೦೦೨ರ ಮಾನವ ಅಭಿವೃದ್ಧಿ ಸೂಚಿಪಟ್ಟಿಯಲ್ಲಿ ೫೫ ದೇಶಗಳು ೦.೮ಕ್ಕಿಂತ ಹೆಚ್ಚಿನ ಹೆಚ್.ಡಿ.ಐ. ಮೌಲ್ಯ ಹೊಂದಿದೆ. ನಾರ್ವೇ ೦.೯೫೬ ಮೌಲ್ಯದೊಡನೆ ೧ನೇ ಸ್ಥಾನ, ಅಮೇರಿಕಾ ಸಂಯುಕ್ತ ಸಂಸ್ಥಾನ ೦.೯೩೯ ಮೌಲ್ಯದೊಡನೆ ೮ನೇ ಸ್ಥಾನ ಪಡೆದಿದೆ. ೦.೫ ರಿಂದ ೦.೭೯ರವರೆಗೆ ಹೆಚ್.ಡಿ.ಐ. ಮೌಲ್ಯ ಹೊಂದಿರುವ ೮೬ ದೇಶಗಳಿವೆ. ಬಲ್ಗೇರಿಯಾ ೦.೭೯೬ ಮೌಲ್ಯದೊಂದಿಗೆ ೫ನೇ ಸ್ಥಾನದಲ್ಲಿದ್ದರೆ, ಚೀನಾ ೦.೭೪೫ ಮೌಲ್ಯದೊಂದಿಗೆ ೯೪ನೇ ಸ್ಥಾನ, ಭಾರತ ೦.೫೯೫ ಮೌಲ್ಯದೊಂದಿಗೆ ೧೨೭ನೇ ಸ್ಥಾನದಲ್ಲಿದೆ.

೦.೫ಕ್ಕಿಂತ ಕಡಿಮೆ ಹೆಚ್.ಡಿ.ಐ. ಮೌಲ್ಯ ಹೊಂದಿರುವ ದೇಶಗಳಲ್ಲಿ ೦.೪೯೭ ಮೌಲ್ಯದೊಂದಿಗೆ ಪಾಕಿಸ್ಥಾನ ೧೪೨ನೇ ಸ್ಥಾನದಲ್ಲೂ, ಸಿರಯೆರ‍್ರಾಲಿಯೋನ್ ೦.೨೭೩ ಮೌಲ್ಯದೊಂದಿಗೆ ೧೭೭ನೇ ಕೊನೆಯ ಸ್ಥಾನದಲ್ಲಿಯೂ ಇವೆ.

ಮಾನವ ಅಭಿವೃದ್ಧಿ ಸಾಧನೆಯಲ್ಲಿ ನೈಜ ರಾಷ್ಟ್ರೀಯ ಹಾಗೂ ತಲಾ ಉತ್ಪನ್ನ ಪ್ರಮುಖ ಅಂಶ. ಆದರೆ ಕಡಿಮೆ ನೈಜ ತಲಾ ಉತ್ಪನ್ನ ಹೊಂದಿರುವ ಕೆಲವು ರಾಷ್ಟ್ರಗಳು ಹೆಚ್ಚಿನ ಹೆಚ್.ಡಿ.ಐ. ಮೌಲ್ಯ ಹೊಂದಿವೆ. ಆರೋಗ್ಯ, ಪೌಷ್ಟಿಕಾಂಶ, ಶಿಕ್ಷಣ ಹಾಗೂ ಇತರೆ ಮೂಲಭೂತ ಸೌಲಭ್ಯಗಳನ್ನು ಉತ್ತಮವಾಗಿ ಒದಗಿಸುವುದರಿಂದ ಅದು ಸಾಧ್ಯವಾಗಿದೆ.

**ಜೀವನಮಟ್ಟ ಸೂಚ್ಯಂಕ**

ಜನರು ನಿತ್ಯ ಜೀವನದಲ್ಲಿ ಉಪಭೋಗಿಸುವ, ಬಳಸುವ ವಸ್ತುಗಳ ಪ್ರಮಾಣ ಮತ್ತು ಅವುಗಳ ಗುಣಮಟ್ಟ, ಅವರ ಜೀವನಮಟ್ಟ ಸೂಚಿಸುತ್ತದೆ. ಆದ್ದರಿಂದ ಉಪಭೋಗದ ಪ್ರಮಾಣ, ಗುಣಮಟ್ಟ ಹೆಚ್ಚಿದಂತೆ ಜೀವನಮಟ್ಟ ಹೆಚ್ಚುತ್ತದೆ. ಇದು ಆದಾಯದ ಹೆಚ್ಚಳವನ್ನು ಅವಲಂಬಿಸಿದೆ. ಅಲ್ಲದೆ ಇದು ಉತ್ತಮ ಸುಖದಾಯಕ ಜೀವನ ಉಂಟು ಮಾಡುತ್ತದೆ.

ಆದ್ದರಿಂದ ಕೆಲವು ಅರ್ಥಶಾಸ್ತ್ರಜ್ಞರ ಅಭಿಮತದಂತೆ, ಮಾನವ ಅಭಿವೃದ್ಧಿ ಅಳೆಯಲು ಈ ಜೀವನ ಮಟ್ಟವೇ ಅತ್ಯುತ್ತಮ ಸಾಧನ. ಆದರೆ ವಾಸ್ತವಿಕವಲ್ಲದ ಉಪಭೋಗವನ್ನು ಕರಾರುವಕ್ಕಾಗಿ ಲೆಕ್ಕ ಹಾಕುವುದು ಕಷ್ಟ. ಅದಕ್ಕಾಗಿ ತಲಾ ನೈಜ ದೇಶೀಯ ಉತ್ಪನ್ನವನ್ನು ಪರಿಗಣಿಸಬಹುದು.

ಲಾಗ್ ತಲಾ ದೇಶೀಯ ನೈಜ ಉತ್ಪನ್ನ (ಪಿ.ಪಿ.ಪಿ. ಡಾಲರ್‌ಗಳಲ್ಲಿ) = ಜೀವನ ಮಟ್ಟ ಸೂಚಿ ಎಂಬುದು ಒಂದು ಲೆಕ್ಕಾಚಾರ.

ಮೇಲ್ಕಂಡ ಸೂಚಿಗಳು ಜೀವನಮಟ್ಟದ ಹೆಚ್ಚಳ ಮತ್ತ ಕ್ಷೇಮ ಸಾಧನೆಯ ಎಲ್ಲಾ ಅಂಶಗಳನ್ನು ಪರಿಗಣಿಸಿಲ್ಲ ಹಾಗೂ ಹಲವು ಮಿತಿಗಳನ್ನು ಹೊಂದಿವೆ. ಇವುಗಳಲ್ಲಿ ಮಾನವ ಅಭಿವೃದ್ಧಿ ಸೂಚ್ಯಂಕ (ಹೆಚ್.ಡಿ.ಐ.) ಹೆಚ್ಚಾಗಿ ಬಳಕೆಯಾಗುತ್ತಿರುವ ಸೂಚ್ಯಂಕವಾಗಿದೆ.

## ಪ್ರಶ್ನೆಗಳು

**೧. ಕೆಳಗಿನ ಪ್ರಶ್ನೆಗಳನ್ನು ತಲಾ ಒಂದು ವಾಕ್ಯದಲ್ಲಿ ಉತ್ತರಿಸಿ. ೧ ಅಂಕ**

೧. ಆರ್ಥಿಕ ಬೆಳವಣಿಗೆ ಎಂದರೇನು?

೨. ಬ್ರಂಟ್ ಲ್ಯಾಂಡ್ ಸಮಿತಿ ವರದಿ ಯಾವ ವಿಷಯಕ್ಕೆ ಪ್ರಾಮುಖ್ಯತೆ ನೀಡಿದೆ?

೩. ಮಾನವ ಅಭಿವೃದ್ಧಿಸೂಚ್ಯಂಕ ಯಾವ ವರದಿಗಳಲ್ಲಿ ಪ್ರಕಟವಾಗುತ್ತದೆ?

೪. ವಿಶ್ವಸಂಸ್ಥೆಯ ರಾಷ್ಟ್ರಗಳನ್ನು ಹೇಗೆ ವರ್ಗೀಕರಿಸುತ್ತದೆ?

೫. ೨೦೦೩ರ ಮಾನವ ಅಭಿವೃದ್ಧಿಸೂಚಿ ಪಟ್ಟಿಯಲ್ಲಿ ಭಾರತ ಎಷ್ಟನೇ ಸ್ಥಾನ ಪಡೆದಿದೆ?

೬. ಭೌತಿಕ ಗುಣಮಟ್ಟಸೂಚಿ ಪರಿಕಲ್ಪನೆಯನ್ನು ಪ್ರತಿಪಾದಿಸಿದವರು ಯಾರು?

೭. ನಿರೀಕ್ಷಿತ ಜೀವಿತಾವಧಿ ಎಂದರೇನು?

**೨. ಕೆಳಗಿನ ಪ್ರಶ್ನೆಗಳಿಗೆ ತಲಾ ೩ ಅಥವಾ ೪ ವಾಕ್ಯಗಳಲ್ಲಿ ಉತ್ತರಿಸಿ. ೨ ಅಂಕಗಳು**

೧. ಆರ್ಥಿಕ ಅಭಿವೃದ್ಧಿಯ ಅರ್ಥ ನೀಡಿ.

೨. ಸುಸ್ಥಿರಗತಿ ಆರ್ಥಿಕ ಅಭಿವೃದ್ಧಿ ಎಂದರೇನು?

೩. ಮುಂದುವರೆದ ರಾಷ್ಟ್ರಗಳ ಅರ್ಥ ತಿಳಿಸಿ.

೪. ಭಾರತದಲ್ಲಿನ ದ್ವಂದ್ವ ಆರ್ಥಿಕ ವ್ಯವಸ್ಥೆಯ ಪ್ರಮುಖ ಲಕ್ಷಣ ತಿಳಿಸಿ.

೫. ಕಡಿಮೆ ತಲಾ ಉತ್ಪನ್ನವಿರುವ ದೇಶಗಳೂ ಕೂಡ ಹೆಚ್ಚು ಮಾನವ ಅಭಿವೃದ್ಧಿ ಹೇಗೆ ಸಾಧಿಸಬಹುದು?

೬. ಸಾಕ್ಷರತೆ ಸೂಚಿಯನ್ನು ಹೇಗೆ ಪಡೆಯಬಹುದು?

**೩. ಕೆಳಗಿನ ಪ್ರಶ್ನೆಗಳಿಗೆ ತಲಾ ಸುಮಾರು ೧೫ ವಾಕ್ಯಗಳಲ್ಲಿ ಉತ್ತರಿಸಿ. ೫ ಅಂಕಗಳು**

೧. ಆರ್ಥಿಕ ಅಭಿವೃದ್ಧಿಯಲ್ಲಿ ಕಂಡುಬರುವ ಪ್ರಮುಖ ಅಂಶಗಳನ್ನು ಪಟ್ಟಿಮಾಡಿ.

೨. ಆರ್ಥಿಕ ಬೆಳವಣಿಗೆ ಮತ್ತು ಅಭಿವೃದ್ಧಿ ನಡುವೆ ವ್ಯತ್ಯಾಸಗಳನ್ನು ತಿಳಿಸಿ.

೩. ಸುಸ್ಥಿರಗತಿಯ ಆರ್ಥಿಕ ಅಭಿವೃದ್ಧಿಯನ್ನು ವಿವರಿಸಿ.

೪. ಪರಿಸರ ಸಂರಕ್ಷಣೆಯ ಅಗತ್ಯವನ್ನು ವಿವರಿಸಿ.

೫. ಅಭಿವೃದ್ಧಿ ಹೊಂದಿದ ರಾಷ್ಟ್ರಗಳ ಪ್ರಮುಖ ಲಕ್ಷಣಗಳನ್ನು ತಿಳಿಸಿ.

೬. ಮುಂದುವರೆಯುತ್ತಿರುವ ರಾಷ್ಟ್ರಗಳ ಲಕ್ಷಣ ತಿಳಿಸಿ.

೭. ಜೀವನದ ಭೌತಿಕ ಗುಣಮಟ್ಟ ಸೂಚಿಯ ಪ್ರಮುಖ ಅಂಶಗಳನ್ನು ವಿವರಿಸಿ.

**೪. ಕೆಳಗಿನ ಪ್ರಶ್ನೆಗಳಿಗೆ ತಲಾ ಸುಮಾರು ೪೦ ವಾಕ್ಯಗಳಲ್ಲಿ ಉತ್ತರಿಸಿ. ೧೦ ಅಂಕಗಳು**

೧. ಅಭಿವೃದ್ಧಿ ಹೊಂದಿದ ಮತ್ತು ಅಭಿವೃದ್ಧಿ ಹೊಂದುತ್ತಿರುವ ಆರ್ಥಿಕತೆಗಳ ನಡುವೆ ಇರುವ ಪ್ರಮುಖ ವ್ಯತ್ಯಾಸಗಳನ್ನು ತಿಳಿಸಿ.

೨. ಮುಂದುವರೆಯುತ್ತಿರುವ ಆರ್ಥಿಕತೆಯಾಗಿ ಭಾರತದ ಆರ್ಥಿಕತೆಯ ಲಕ್ಷಣಗಳನ್ನು ವಿವರಿಸಿ.

## ಪಾರಿಭಾಷಿಕ ಪದಗಳು

| | | |
|---|---|---|
| ಅಭಿವೃದ್ಧಿ ಹೊಂದಿದ ರಾಷ್ಟ್ರಗಳು | : | Developed Countries |
| ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳು | : | Developing Countries |
| ಆರ್ಥಿಕ ಅಭಿವೃದ್ಧಿ | : | Economic Development |
| ಆರ್ಥಿಕ ಬೆಳವಣಿಗೆ | : | Economic Growth |
| ಒಟ್ಟು ರಾಷ್ಟ್ರೀಯ ಉತ್ಪನ್ನ | : | Gross National Income |
| ಕೊಳ್ಳುವ ಶಕ್ತಿಯಲ್ಲಿ ಬೆಲೆಗಳ ಸಮತೆ | : | Purchasing Power Parity |
| ಗುಣಾತ್ಮಕ | : | Qualitative |
| ಪರಿಮಾಣಾತ್ಮಕ | : | Quantitative |
| ಜೀವನದ ಭೌತಿಕ ಗುಣಮಟ್ಟ ಸೂಚ್ಯಂಕ | : | Phisical Quality of Life Index |
| ಮಾನವ ಅಭಿವೃದ್ಧಿಸೂಚ್ಯಂಕ | : | Human Development Index |
| ಮೂಲ ಸಂರಚನೆ | : | Infrastructure |
| ಸುಸ್ಥಿರಗತಿ ಅಭಿವೃದ್ಧಿ | : | Sustainable Development |
| ನೈಜ ತಲಾ ರಾಷ್ಟ್ರೀಯ ಆದಾಯ | : | Real Percapita National Income |

### ಸಾರಾಂಶ

**ಆರ್ಥಿಕ ಬೆಳವಣಿಗೆ :** ಒಂದು ಆರ್ಥಿಕತೆಯ ಒಟ್ಟು ರಾಷ್ಟ್ರೀಯ ಉತ್ಪನ್ನವನ್ನು ದೀರ್ಘಾವಧಿಯಲ್ಲಿ ಸತತವಾಗಿ ಹೆಚ್ಚಿಸುವ ಕ್ರಿಯೆ. ಮುಂದುವರೆದ ದೇಶಗಳಲ್ಲಿರುವಂತೆ

ಆರ್ಥಿಕತೆಯ ಮೂಲರಚನೆ ಹಾಗೂ ವ್ಯವಸ್ಥೆಯಲ್ಲಿ ಬದಲಾವಣೆ ಇಲ್ಲದೆಯೂ ಒಟ್ಟು ಉತ್ಪನ್ನದ ಹೆಚ್ಚಳ ಮತ್ತು ಬೆಳವಣಿಗೆ ಸಾಧ್ಯ.

$$G = G_t - g_{t-1}$$

$$Gr = \frac{G_t - t_{t-1}}{g_{t-1}}$$

**ಆರ್ಥಿಕ ಅಭಿವೃದ್ಧಿ :** ರಾಷ್ಟ್ರೀಯ ಉತ್ಪನ್ನದಲ್ಲಿ ಹೆಚ್ಚಳದೊಡನೆ ಆದಾಯದ ಸಮಾನ ವಿತರಣೆ, ತಂತ್ರಜ್ಞಾನದ ಪ್ರಗತಿ, ಸಾಮಾಜಿಕ ಹಾಗೂ ಸಾಂಸ್ಥಿಕ ವ್ಯವಸ್ಥೆಯಲ್ಲಿ ಬದಲಾವಣೆ ಮುಂತಾದ ಬಹು ಆಯಾಮದ ಪ್ರಗತಿ.

ಆರ್ಥಿಕ ಅಭಿವೃದ್ಧಿ ಆದಾಯದ ಹೆಚ್ಚಳದೊಂದಿಗೆ, ಬಡತನ, ಅನಕ್ಷರತೆ ನಿರುದ್ಯೋಗ, ಅಲ್ಪಾಯು ಮರಣ ಮುಂತಾದ ಸಮಸ್ಯೆಗಳನ್ನು ನಿವಾರಿಸುತ್ತದೆ.

## ಬೆಳವಣಿಗೆ ಮತ್ತು ಅಭಿವೃದ್ಧಿಯ ಪ್ರಮುಖ ವ್ಯತ್ಯಾಸಗಳು

ಬೆಳವಣಿಗೆಯ ವ್ಯಾಪ್ತಿ ಕಡಿಮೆ. ಅದು ಆದಾಯದ ಹೆಚ್ಚಳದ ಒಂದು ಆಯಾಮಕ್ಕೆ ಒತ್ತು ನೀಡುತ್ತದೆ. ಅದು ಪರಿಮಾಣಾತ್ಮಕ ಬದಲಾವಣೆ ಸೂಚಿಸುತ್ತದೆ. ಅದು ನಿರಂತರ ಹಾಗೂ ಸ್ವಯಂ ಪ್ರೇರಿತವಾಗಿರುತ್ತದೆ.

ಅಭಿವೃದ್ಧಿಯ ವ್ಯಾಪ್ತಿ ವಿಸ್ತಾರವಾಗಿದ್ದು. ಅದು ಹಲವಾರು ಆಯಾಮಗಳನ್ನು ಪರಿಗಣಿಸುತ್ತದೆ. ಅದು ಗುಣಾತ್ಮಕ ಬದಲಾವಣೆಯನ್ನು ಸೂಚಿಸುತ್ತದೆ. ಅದು ಸರ್ಕಾರದ ಹಸ್ತಕ್ಷೇಪ ಮತ್ತು ನೀತಿಗಳನ್ನು ಅವಲಂಬಿಸಿದೆ.

೧೯೮೭ರ ಬ್ರುಂಡ್ಸ್ಲ್ಯಾಂಡ್ ಸಮಿತಿ ವರದಿಯಲ್ಲಿ ಸುಸ್ಥಿರಗತಿ ಅಭಿವೃದ್ಧಿಯನ್ನು ವಿವರಿಸಲಾಯಿತು.

**ಸುಸ್ಥಿರಗತಿ ಅಭಿವೃದ್ಧಿ :** ಕಾಲಾಂತರದಲ್ಲಿ ಅಭಿವೃದ್ಧಿಯ ಪ್ರಮಾಣ ಸ್ಥಿರವಾಗಿ ಮುಂದುವರೆಯುವಂತೆ ಮಾಡುವ ಅಭಿವೃದ್ಧಿ.

ಈಗಿನ ಪೀಳಿಗೆಯ ಅಗತ್ಯ ಮಹಾದಾಸೆಗಳನ್ನು ಪೂರೈಸುವುದಲ್ಲದೆ ಮುಂದಿನ ಪೀಳಿಗೆಯ ಅಭಿವೃದ್ಧಿಗೂ ಅವಕಾಶ ಉಂಟಾಗುವಂತೆ ಸಂಪನ್ಮೂಲಗಳನ್ನು ಸಂರಕ್ಷಿಸಿಡುವ ಅಭಿವೃದ್ಧಿ ಕ್ರಿಯೆ.

ನೈಸರ್ಗಿಕ ಸಂಪನ್ಮೂಲಗಳು ವ್ಯರ್ಥವಾಗದಂತೆ ಉಳಿಸುವ ಮತ್ತು ಅವುಗಳ ಉತ್ಪಾದಕತೆ ಹೆಚ್ಚುವಂತೆ ಅವುಗಳನ್ನು ಅಭಿವೃದ್ಧಿ ಪಡಿಸುವ ಕ್ರಿಯೆ.

## ಪರಿಸರ ಲೆಕ್ಕಾಚಾರ

ಅಭಿವೃದ್ಧಿಯ ಸಾಧನೆಯಲ್ಲಿ ನೈಸರ್ಗಿಕ ಸಂಪನ್ಮೂಲಗಳ ಪ್ರಮುಖ ಬಳಕೆ ಇದ್ದು ಒಟ್ಟು ರಾಷ್ಟ್ರೀಯ ಉತ್ಪನ್ನಕ್ಕೆ ತಗುಲಿದ ವೆಚ್ಚದಲ್ಲಿ ಪರಿಸರದ ವೆಚ್ಚವನ್ನು ಪರಿಗಣಿಸಬೇಕು.

ನಿರ್ದಿಷ್ಟ ಪ್ರಮಾಣದ ಆದಾಯದ ಹೆಚ್ಚಳಕ್ಕಾಗಿ ಅದಕ್ಕಿಂತ ಅಧಿಕ ಪ್ರಮಾಣದ ಪರಿಸರದ ಸಂಪನ್ಮೂಲದ ಬಳಕೆ ಉಂಟಾದರೆ ಅದು ಋಣಾತ್ಮಕ ಲೆಕ್ಕದ ಬಾಬ್ತು ಆಗಿರುತ್ತದೆ.

ರಾಷ್ಟ್ರಗಳ ವರ್ಗೀಕರಣ ಅಭಿವೃದ್ಧಿ ಆಧಾರದ ಮೇಲೆ : ಅಭಿವೃದ್ಧಿ ಹೊಂದಿದ ಮತ್ತು ಅಭಿವೃದ್ಧಿ ಹೊಂದದೆ ಇರುವ ರಾಷ್ಟ್ರಗಳು (ಅಮೆರಿಕ ಸಂಯುಕ್ತ ಸಂಸ್ಥಾನದ ಮತ್ತು ಪಶ್ಚಿಮ ಯುರೋಪಿನ ಕೆಲವು ದೇಶಗಳೊಡನೆ ಹೋಲಿಸಿದ ವರ್ಗೀಕರಣ)

ಆದಾಯದ ಆಧಾರದ ಮೇಲೆ :

ಕಡಿಮೆ ಆದಾಯದ ದೇಶಗಳು : ಡಾಲರ್ ೭೬೫ ಕ್ಕಿಂತ ಕಡಿಮೆ ತಲಾ ಆದಾಯ ಹೊಂದಿರುವ ರಾಷ್ಟ್ರಗಳು.

ಮಧ್ಯಮ ಆದಾಯದ ದೇಶಗಳು : ಡಾಲರ್ ೭೬೬ ರಿಂದ ಡಾಲರ್ ೭೩೮೫ರವರೆಗೆ ತಲಾ ರಾಷ್ಟ್ರೀಯ ಉತ್ಪನ್ನ ತಲಾ ಆದಾಯ ಹೊಂದಿರುವ ದೇಶಗಳು.

ಮಧ್ಯಮ ಆದಾಯದ ದೇಶಗಳಲ್ಲಿ ಮೇಲ್ಮಟ್ಟದ ಮಧ್ಯಮ ಆದಾಯದ ದೇಶಗಳು ೩೦೩೫ ರಿಂದ ೯೩೮೫ರವರೆಗೆ ತಲಾ ರಾಷ್ಟ್ರೀಯ ಉತ್ಪನ್ನ ಆದಾಯ ಹೊಂದಿರುವ ದೇಶಗಳು ಕೆಳಮಟ್ಟದ ಮಧ್ಯಮ ಆದಾಯದ ದೇಶಗಳು ಡಾಲರ್ ೭೬೫ ರಿಂದ ಡಾಲರ್ ೩೦೩೪ ರವರೆಗೆ ತಲಾ ಆದಾಯ ಹೊಂದಿರುವ ದೇಶಗಳು.

ಹೆಚ್ಚಿನ ಆದಾಯದ ದೇಶಗಳು : ಡಾಲರ್ ೯೩೮೫ಕ್ಕಿಂತ ಹೆಚ್ಚು ತಲಾ ಆದಾಯ ಹೊಂದಿರುವ ದೇಶಗಳು.

## ಅಭಿವೃದ್ಧಿ ಹೊಂದಿದ ಆರ್ಥಿಕತೆಗಳ ಪ್ರಮುಖ ಲಕ್ಷಣಗಳು

ರಾಷ್ಟ್ರೀಯ ಮತ್ತು ತಲಾ ರಾಷ್ಟ್ರೀಯ ಉತ್ಪನ್ನ, ಜೀವನ ಮಟ್ಟ ಹೆಚ್ಚು, ಉಳಿತಾಯ ಮತ್ತು ಬಂಡವಾಳ ಸಂಚಯನ ಹೆಚ್ಚು, ಆಧುನಿಕ ತಂತ್ರಜ್ಞಾನ ಬಳಸಲಾಗುತ್ತದೆ.

ಕೃಷಿಯ ಮೇಲಿನ ಅವಲಂಬನೆ ಕಡಿಮೆ

ಜನಸಂಖ್ಯೆಯ ಬೆಳವಣಿಗೆ ಕಡಿಮೆ

ದೊಡ್ಡ ಗಾತ್ರದ ಲಾಭದಾಯಕ ವಿದೇಶಿವ್ಯಾಪಾರ ಇರುತ್ತದೆ.

## ಅಭಿವೃದ್ಧಿ ಹೊಂದುತ್ತಿರುವ ಆರ್ಥಿಕತೆಗಳು

ಅ.ಸಂ.ಸಂ., ಜಪಾನ್, ಜರ್ಮನಿಯಂತಹ ದೇಶಗಳಿಗೆ ಹೋಲಿಸಿದರೆ ಕಡಿವೆ ರಾಷ್ಟ್ರೀಯ ಹಾಗೂ ತಲಾ ಉತ್ಪನ್ನ, ಜೀವನ ಮಟ್ಟ, ಕೈಗಾರಿಕಾ ಪ್ರಗತಿ ಸಾಧಿಸಿರುವ ದೇಶಗಳು. ಇವು ಹಲವು ಮೂಲಭೂತ ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆಗಳನ್ನು ಎದುರಿಸುತ್ತಿವೆ.

ವಿಶ್ವ ಸಂಸ್ಥೆಯ ಇತ್ತೀಚಿನ ಅಧ್ಯಯನಗಳಲ್ಲಿ ಅಭಿವೃದ್ಧಿ ಸಾಧನೆಯ ಪ್ರಯತ್ನ ಮೂಡುತ್ತಿರುವ ಎಲ್ಲಾ ದೇಶಗಳೂ ಅಭಿವೃದ್ಧಿ ಹೊಂದುತ್ತಿರುವ ದೇಶಗಳು.

**ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರವಾಗಿ ಭಾರತದ ಆರ್ಥಿಕತೆಯ ಲಕ್ಷಣಗಳು**

ರಾಷ್ಟ್ರೀಯ ಮತ್ತು ತಲಾ ಜೀವನ ಮಟ್ಟ, ಮುಂದುವರೆದ ದೇಶಗಳಿಗಿಂತ ಕಡಿಮೆ ಇದ್ದು ನಿಧನವಾಗಿ ಹೆಚ್ಚುತ್ತಿದೆ. ಜನಸಂಖ್ಯೆಯ ತೀವ್ರ ಹೆಚ್ಚಳ, ನಿರುದ್ಯೋಗ ಮತ್ತು ಬಡತನದ ಹೆಚ್ಚಳ ಉಂಟಾಗುತ್ತಿದೆ. ಕೃಷಿಯ ಮೇಲಿನ ಅವಲಂಬನೆ ಹೆಚ್ಚು. ಕೈಗಾರಿಕೆ ಮತ್ತು ಸೇವಾರಂಗ ಸಾಕಷ್ಟು ಅಭಿವೃದ್ಧಿ ಹೊಂದಿಲ್ಲ.

ಉಳಿತಾಯ ಮತ್ತು ಹೂಡುವಿಕೆ, ಶ್ರಮದ ದಕ್ಷತೆ, ಆಧುನಿಕ ತಂತ್ರಜ್ಞಾನದ ಬಳಕೆ ಉದ್ಯಮ ಶೀಲತೆ ಕಡಿಮೆ. ವಿದೇಶಿವ್ಯಾಪಾರದ ಗಾತ್ರ ಕಡಿಮೆ, ಶಿಲ್ಕಿನ ಕೊರತೆ ಹೆಚ್ಚು, ವಿದೇಶಿ ಸಾಲ ಹೆಚ್ಚು, ಆರ್ಥಿಕ ಅಸಮಾನತೆ ಮತ್ತು ದ್ವಂದ್ವ ಆರ್ಥಿಕತೆಯ ಲಕ್ಷಣಗಳಿವೆ. ದಕ್ಷ ಆಡಳಿತದ ಉತ್ತಮ ನೀತಿಗಳ ಹಾಗೂ ಅವುಗಳ ಅನುಷ್ಠಾನದ ಕೊರತೆ, ಸಾಮಾಜಿಕ ಹಿಂದುಳಿದಿರುವಿಕೆ ಕಂಡುಬರುತ್ತದೆ.

**ಭೌತಿಕ ಗುಣಮಟ್ಟದ ಸೂಚಿ :** ಡೇವಿಡ್ ಮೋರಿಸ್ ಅವರು ಅಭಿವೃದ್ಧಿ ಹೊಂದುತ್ತಿರುವ ಕೆಲವು ದೇಶಗಳ ಅಧ್ಯನಕ್ಕೆ ಸಂಬಂಧಿಸಿದಂತೆ ಈ ಮಾದರಿ ತಯಾರಿಸಿದರು.

ಇದು ಒಂದು ದೇಶದಲ್ಲಿ ಸಾಧಿಸಲಾಗಿರುವ ಮಾನವ ಜೀವನ ಮಟ್ಟ, ಕ್ಷೇಮದ ಮಟ್ಟ ಅಳೆಯುತ್ತದೆ. ಶಿಶು ಮರಣ ದರ, ನಿರೀಕ್ಷಿತ ಜೀವಿತಾವಧಿ, ಸಾಕ್ಷರತೆಯ ದರಗಳನ್ನು ಇದು ಪರಿಗಣಿಸಿದೆ.

PQLI = 1/3 LEI + IMI + BLI

ಜೀವನ ಭೌ.ಗು.ಸೂ = ೧/೩ (ನಿರೀಕ್ಷಿತ ಜೀವಿತಾವಧಿ ಸೂಚಿ) + (ಶಿಶುಮರಣ ಸೂಚಿ) + (ಮೂಲ ಸಾಕ್ಷರತಾ ಸೂಚಿ)

**ಮಾನವ ಅಭಿವೃದ್ಧಿ ಸೂಚಿ :** ವಿಶ್ವಸಂಸ್ಥೆ ಅಭಿವೃದ್ಧಿ ಕಾರ್ಯಕ್ರಮದಡಿಯಲ್ಲಿ ಇದನ್ನು ಬಳಸಲಾಗುತ್ತಿದೆ.

ನಿರೀಕ್ಷಿತ ಜೀವಿತಾವಧಿ ಮತ್ತು ಶಿಶುಮರಣ, ಶೈಕ್ಷಣಿಕ ಸಾಧನೆಯ ಮಟ್ಟ, ಜೀವನ ಮಟ್ಟವನ್ನು ನಿರ್ಧರಿಸುವ ನೈಜ ತಲಾ ಉತ್ಪನ್ನಗಳನ್ನು ಪರಿಗಣಿಸಿ ಮಾನವಾಭಿವೃದ್ಧಿ ಸೂಚ್ಯಂಕ ರಚಿಸಲಾಗಿದೆ.

HDI = 1/3 (LEI + EAI + SLI)

ಮಾನವ ಅಭಿವೃದ್ಧಿ ಸೂಚಿ = ೧/೩ (ನಿರೀಕ್ಷಿತ ಜೀವಿತಾವಧಿ ಸೂಚಿ) + (ಸಾಕ್ಷರತೆ ಸಾಧನೆ ಸೂಚಿ) + (ಜೀವನ ಮಟ್ಟ ಸೂಚಿ) ಹೆಚ್.ಡಿ.ಐ.ಮೌಲ್ಯ ೦ ಇಂದ ೧ ರವರೆಗೆ ಇರುತ್ತದೆ.

ಮಾನವ ಅಭಿವೃದ್ಧಿ ವರದಿಯಲ್ಲಿ ಬೇರೆ ಬೇರೆ ದೇಶಗಳ ನಿರೀಕ್ಷಿತ ಜೀವಿತಾವಧಿ ಶಿಶುಮರಣ ಪ್ರಮಾಣ, ಸಾಕ್ಷರತೆ ಮೌಲ್ಯಗಳನ್ನು ಮಾನವಾಭಿವೃದ್ಧಿ ಸೂಚಿ ಮೌಲ್ಯ ಹಾಗೂ ಸ್ಥಾನವನ್ನು ಪ್ರಕಟಿಸಲಾಗುತ್ತದೆ.

೦.೫ರವರೆಗೆ ಮಾನವ ಅಭಿವೃದ್ಧಿಸೂಚಿ ಮೌಲ್ಯ ಹೊಂದಿರುವ ದೇಶಗಳು ಸೂಚ್ಯಂಕ, ಕಡಿಮೆ ಮಾನವಾಭಿವೃದ್ಧಿ ಹೊಂದಿದ ದೇಶಗಳು.

೦.೫ ರಿಂದ ೦.೭೯ ರವರೆಗೆ ಹೆಚ್.ಡಿ.ಐ. ಮೌಲ್ಯ ಹೊಂದಿರುವ ದೇಶಗಳು ಮಧ್ಯಮ ಮಾನವಾಭಿವೃದ್ಧಿ ಹೊಂದಿದ ದೇಶಗಳು.

೦.೮ಕ್ಕಿಂತ ಹೆಚ್ಚು ಹೆಚ್.ಡಿ.ಐ. ಮೌಲ್ಯ ಇರುವ ದೇಶಗಳು ಹೆಚ್ಚು ಮಾನವಾಭಿವೃದ್ಧಿ ಹೊಂದಿದ ದೇಶಗಳು. ೨೦೦೨ರ ಮಾನವಾಭಿವೃದ್ಧಿ ಸೂಚಿಪಟ್ಟಿಯಲ್ಲಿ ಹೆಚ್ಚಿನ ಮಾನವಾಭಿವೃದ್ಧಿ ಹೊಂದಿದ ೫೫ ದೇಶಗಳು, ಮಧ್ಯಮ ಮಾನವಾಭಿವೃದ್ಧಿ ಹೊಂದಿದ ೮೬ ದೇಶಗಳು, ಕಡಿಮೆ ಮಾನವಾಭಿವೃದ್ಧಿ ಹೊಂದಿದ ೩೬ ದೇಶಗಳು, ಒಟ್ಟು ೧೭೭ ದೇಶಗಳಿದ್ದು ಅದರಲ್ಲಿ ಭಾರತ ೦.೫೯೫ ಮೌಲ್ಯದೊಂದಿಗೆ ೧೨೭ನೇ ಸ್ಥಾನದಲ್ಲಿತ್ತು.

## ೧.೨. ಅಂಕಿ ಅಂಶ-ಮಾಹಿತಿಯ ಬಗೆಗಳು ಮತ್ತು ಸಂಖ್ಯಾ ಮಾಹಿತಿಯ ವಿವರಣೆ

ಆರ್ಥಿಕ ವಿಶ್ಲೇಷಣೆಗೆ ಗಣಿತೀಯ ವಿಧಾನ ಮತ್ತು ಸಂಖ್ಯಾಶಾಸ್ತ್ರ ವಿಧಾನಗಳು ಬಹಳ ಮುಖ್ಯವಾದುದೆಂಬುದನ್ನು ನೀವು ಅರಿತಿದ್ದೀರಿ. ಅಂಕಿ ಸಂಖ್ಯೆಗಳ ವಿವರಣೆ ಇಲ್ಲದೆ ಆರ್ಥಿಕ ತತ್ವಗಳಿಗೆ ಸಾಧನೆಯನ್ನು ವಿವರಿಸುವುದು ಬಹಳ ಕಷ್ಟ. ಒಂದು ಉದಾಹರಣೆಯನ್ನು ಗಮನಿಸಿ. ನೀವು ಬೇಡಿಕೆ ಸಿದ್ಧಾಂತವನ್ನು ಓದಿದ್ದೀರಿ. ಇದರ ಪ್ರಕಾರ "ಉಳಿದ ವಿಷಯಗಳು ಹಾಗೇ ಇದ್ದರೆ. ಒಂದು ಸರಕಿನ ಬೇಡಿಕೆಯು ಪ್ರಮಾಣ, ಆ ಸರಕಿನ ಬೆಲೆಯೊಡನೆ ವಿಷಯ ಸಂಬಂಧವನ್ನು ಹೊಂದಿರುತ್ತದೆ."

ಇಲ್ಲಿ ಒಂದು ಪ್ರಶ್ನೆ ಏಳುತ್ತದೆ. ಅದೇಂದರೆ, ಈ ಸಿದ್ಧಾಂತವನ್ನು ನಂಬುವುದು ಹೇಗೆ? ಇದಕ್ಕೆ ನಾವು ಯಾವುದೇ ಸರಕಿಗೆ ಸಂಬಂಧಿಸಿದ ಬೇಡಿಕೆಯ ಮತ್ತು ಬೆಲೆಯ ಅಂಕಿ ಅಂಶಗಳನ್ನು ಸಂಗ್ರಹಿಸಿ ಇವೆರಡರ ನಡುವಣ ಸಂಬಂಧವನ್ನು ಪರೀಕ್ಷಿಸಬೇಕಾಗುತ್ತದೆ. ಈ ಕೆಲಸವನ್ನು ಸಂಖ್ಯಾಶಾಸ್ತ್ರದಲ್ಲಿ ಮಾಡಲಾಗುತ್ತದೆ.

ಸಂಖ್ಯಾಶ್ರೇಣಿಗಳು ಮುಖ್ಯವಾಗಿ ಮೂರು ವಿಧವಾಗಿರುತ್ತದೆ. ಅವುಗಳೆಂದರೆ ಸಮಯ ಸಂಖ್ಯಾಶ್ರೇಣಿ, ನಿಶ್ಚಿತ ಅವಧಿಯ ಸಂಖ್ಯಾಶ್ರೇಣಿ ಮತ್ತು ಪುನರ್ ಪರಿಶೀಲನಾ ಸಂಖ್ಯಾಶ್ರೇಣಿ, ಒಂದು ಉದಾಹರಣೆಯನ್ನು ಗಮನಿಸೋಣ.

ನಾವು ಒಂದು ಕೊಳಗೇರಿರಯಲ್ಲಿರುವವರಲ್ಲಿ ಬಡತನ ಹೇಗಿದೆ ಎಂಬುದರ ಬಗ್ಗೆ ಅಂಕಿ ಅಂಶಗಳು ಅದಕ್ಕೆ ದಿಸೆ ಎಂದು ಭಾವಿಸೋಣ.

ಬಡತನದ ಬಗ್ಗೆ ಕಳೆದ ಹತ್ತು ವರ್ಷಗಳ ಬಡತನದ ಬಗ್ಗೆ ಸರ್ಕಾರ ಮಾಹಿತಿಯನ್ನು ಈಗಾಗಲೇ ಸಂಗ್ರಹಿಸಿ ಪ್ರಕಟಿಸಿದೆ ಎಂದು ಭಾವಿಸೋಣ. ಈ ರೀತಿಯ ಅಂಕಿ ಸಂಖ್ಯೆಯನ್ನು ಸಮಯಶ್ರೇಣಿ ಅಂಕಿಸಂಖ್ಯೆ ಎಂದು ಕರೆಯಲಾಗುತ್ತದೆ. ಸಮಯ ಶ್ರೇಣಿ ಅಂಕಿ ಸಂಖ್ಯೆ

ಒಂದು ದೀರ್ಘಾವಧಿಗೆ ಸಂಬಂಧಿಸಿದಂತೆ ಒಂದು ಕ್ರಿಯೆಯ ಸಂಖ್ಯಾ ಮಾಹಿತಿಯನ್ನು ತಿಳಿಸುತ್ತದೆ.

ಇದೆ ಕೊಳೆಗೇರಿಯಲ್ಲಿನ ಜನರ ಬಡತನದ ಬಗ್ಗೆ ಈ ವರ್ಷ ನಾವು ಮಾಹಿತಿಯನ್ನು ಸಂಗ್ರಹಿಸುತ್ತೇವೆ ಎಂದು ಭಾವಿಸೋಣ. ಇದು 'ನಿಶ್ಚಿತ ಅವಧಿ'ಯ ಸಂಖ್ಯಾಶ್ರೇಣಿ ಎನಿಸಿಕೊಳ್ಳುತ್ತದೆ. ಯಾವುದೇ ನಿರ್ದಿಷ್ಟ ಅವಧಿಗೆ ಸಂಬಂಧಿಸಿದ ಸಂಖ್ಯಾಶ್ರೇಣಿ ಈ ಗುಂಪಿಗೆ ಬರುತ್ತದೆ.

ಇದೇ ಕೊಳಗೇರಿಯಲ್ಲಿ ನಾವು ಸಮೀಕ್ಷೆ ೨೦೦೫ರಲ್ಲಿ ನಡೆದು ಅಂಕಿ ಅಂಶ ಸಂಗ್ರಹಿಸಲಾಗಿದೆ ಎಂದು ಭಾವಿಸೋಣ. ಮತ್ತೊಮ್ಮೆ ಬಡತನದಲ್ಲಿ ಯಾವ ಬದಲಾವಣೆ ಗಳಾಗಿವೆ ಎನ್ನುವುದನ್ನು ನೋಡಲು ಇದೇ ಕೊಳಗೇರಿಯಲ್ಲಿ ೨೦೧೦ಕ್ಕೆ ಬಡತನದ ಸಮೀಕ್ಷೆಯನ್ನು ಕೈಗೊಳ್ಳಲಾಗುತ್ತಿದೆ ಎಂದು ಭಾವಿಸೋಣ. ಹೀಗೆ ಸಂಗ್ರಹಿಸಲಾದ ಸಂಖ್ಯಾಮಾಹಿತಿಯನ್ನು "ಪುನರ್ ಪರಿಶೀಲನಾ ಸಂಖ್ಯಾಶ್ರೇಣಿ" ಎಂದು ಕರೆಯಲಾಗುತ್ತದೆ. ಅಂದರೆ ಬದಲಾವಣೆಗಳನ್ನು ಗಮನಿಸಲು ನಡೆಸಲಾಗುವ ನಿರ್ದಿಷ್ಟ ಪ್ರದೇಶಕ್ಕೆ ಸಂಬಂಧಿಸಿದ ಸಂಖ್ಯಾಶ್ರೇಣಿ ಅರ್ಥಶಾಸ್ತ್ರದಲ್ಲಿ ಮಹತ್ವವಾದುದಾಗಿದೆ.

ಆರ್ಥಿಕ ವಿಶ್ಲೇಷಣೆಯಲ್ಲಿ ಮೇಲಿನ ಮೂರು ರೀತಿಯ ಸಂಖ್ಯಾ ಶ್ರೇಣಿಗಳೂ ಮುಖ್ಯವಾಗಿವೆ.

**ಅಂಕಿ ಅಂಶಗಳ ಸಂಗ್ರಹಣಾ ಕ್ರಮ**

ಯಾವುದೇ ಕ್ರಿಯೆಯ ಅಧ್ಯಯನಕ್ಕೆ ಬೇಕಾದ ಅಂಕಿ ಅಂಶಗಳನ್ನು ವ್ಯವಸ್ಥಿತವಾಗಿ ಸಂಗ್ರಹಿಸಬೇಕಾದುದು ಅಗತ್ಯ.

ಯಾವುದೇ ಮಾಹಿತಿಯನ್ನು ಸಂಗ್ರಹಿಸುವುದಕ್ಕಿಂತ ಮುಂಚೆ ಅದರ ಉದ್ದೇಶವನ್ನು ಸ್ಪಷ್ಟ ಪಡಿಸಬೇಕು. ಸಾಮಾನ್ಯವಾಗಿ ನಾಲ್ಕು ಉದ್ದೇಶಗಳಿಗಾಗಿ ಅಂಕಿ ಅಂಶಗಳನ್ನು ಸಂಗ್ರಹಿಸಲಾಗುತ್ತದೆ. ಅವುಗಳೆಂದರೆ

೧. ಈಗಾಗಲೇ ಇರುವ ಯಾವುದಾದರೂ ಒಂದು ಸಿದ್ಧಾಂತ ಸರಿಯಲ್ಲ ಎಂಬುದನ್ನು ಸಾಬೀತು ಮಾಡುವುದು.
೨. ಒಂದು ಹೊಸ ಸಿದ್ಧಾಂತವನ್ನು ರೂಪಿಸುವುದು.
೩. ಯಾವುದೇ ಒಂದು ಕ್ರಿಯೆಯನ್ನು ಅಭ್ಯಾಸಮಾಡಲು ಮತ್ತು
೪. ಒಂದು ಕ್ರಿಯೆ ಮುಂದೆ ಹೇಗೆ ವರ್ತಿಸುತ್ತದೆ ಎಂಬುದನ್ನು ತಿಳಿದುಕೊಳ್ಳಲು.

ಈ ಯಾವುದೇ ಉದ್ದೇಶಕ್ಕಾಗಿ ಅಂಕಿ ಅಂಶಗಳನ್ನು ಸಂಗ್ರಹಿಸುವಾಗ ಅನೇಕ ಮುನ್ನೆಚ್ಚರಿಕೆಗಳನ್ನು ಕೈಗೊಳ್ಳಬೇಕಾಗುತ್ತದೆ. ಇವುಗಳನ್ನು ಸಂಕ್ಷಿಪ್ತವಾಗಿ ನೋಡೋಣ.

**ಸಮೀಕ್ಷೆಯ ವ್ಯಾಪ್ತಿ**

ಸಮೀಕ್ಷೆಯನ್ನು ಕೈಗೊಳ್ಳುವ ಅನೇಕ ವಿಷಯಗಳನ್ನು ಪೂರ್ವದಲ್ಲಿಯೇ

ನಿರ್ಧರಿಸಬೇಕಾಗುತ್ತದೆ. ಸಮೀಕ್ಷೆಯನ್ನು ಎಲ್ಲಿ ಮಾಡಬೇಕು? ಎಷ್ಟು ಕಾಲದಲ್ಲಿ ಸಮೀಕ್ಷೆಯನ್ನು ಮುಗಿಸಬೇಕು? ಯಾವ ಯಾವ ವಿಷಯಕ್ಕೆ ಸಂಬಂಧಿಸಿದಂತೆ ವಿಷಯವನ್ನು ಸಂಗ್ರಹಿಸಬೇಕು? ಅಂಕಿ-ಅಂಶಗಳ ಸಂಗ್ರಹಣೆಗೆ ಯಾವ ವಿಧಾನವನ್ನು ಅನುಸರಿಸಬೇಕು? ಇವೆಲ್ಲವನ್ನೂ ಸ್ಪಷ್ಟವಾಗಿ ನಿರ್ಧರಿಸಿಕೊಳ್ಳಬೇಕು. ಇಲ್ಲವಾದರೆ ಸಮೀಕ್ಷೆ ಅಷ್ಟು ಉಪಯುಕ್ತವಾಗುವುದಿಲ್ಲ.

**ಮಾಹಿತಿ ಸಂಗ್ರಹಣೆಯ ವಿಧಾನಗಳು**

ಯಾವ ವಿಧಾನವನ್ನನುಸರಿಸಿ ಅಂಕಿ ಅಂಶಗಳನ್ನು ಸಂಗ್ರಹಿಸಬೇಕು ಎನ್ನುವುದು ಅತಿ ಮುಖ್ಯಾವಾದ ವಿಷಯ.

ಮಾಹಿತಿ ಸಂಗ್ರಹಣೆಗೆ ಸಾಮಾನ್ಯವಾಗಿ ಎರಡು ವಿಧಾನಗಳನ್ನು ಅನುಸರಿಸಲಾಗುಗತ್ತದೆ. ಅವುಗಳೆಂದರೆ

೧. ಪ್ರಾಥಮಿಕ ಮೂಲ(Primary Source)ಗಳಿಂದ ಮಾಹಿತಿ ಸಂಗ್ರಹಣೆ ಮತ್ತು

೨. ದ್ವಿತೀಯ ಮೂಲ(Secondary Source)ಗಳಿಂದ ಮಾಹಿತಿ ಸಂಗ್ರಹಣೆ.

ಪ್ರಪ್ರಥಮ ಬಾರಿಗೆ, ನೇರವಾಗಿ ಒಂದು ಕ್ರಿಯೆಗೆ ಸಂಬಂಧಿಸಿದವರನ್ನೆ ಭೇಟಿ ಮಾಡಿ ಮಾಹಿತಿ ಸಂಗ್ರಹಿಸುವ ವಿಧಾನಕ್ಕೆ ಪ್ರಾಥಮಿಕ ಮೂಲದಿಂದ ಮಾಹಿತಿ ಸಂಗ್ರಹಣೆ ಎಂದು ಹೇಳಲಾಗುತ್ತದೆ. ಉದಾಹರಣೆಗೆ ೧೦ ವರ್ಷಕ್ಕೊಮ್ಮೆ ನಮ್ಮಲ್ಲಿ ನಡೆಯುವ ಜನಗಣತಿ ಯಲ್ಲಿ ಸಂಗ್ರಹಿಸುವ ಅಂಕಿ ಅಂಶ ಪ್ರಾಥಮಿಕ ಮೂಲದ ಅಂಕಿ ಅಂಶ. ಇದರಲ್ಲಿ ಕುಟುಂಬದ ಜನರನ್ನೇ ಭೇಟಿಮಾಡಿ ಅಂಕಿ ಅಂಶಗಳನ್ನು ಸಂಗ್ರಹಿಸಲಾಗುತ್ತದೆ. ಆದರೆ, ಪ್ರಾಥಮಿಕ ಮೂಲದಿಂದ ಮಾಹಿತಿ ಸಂಗ್ರಹಣೆಗೆ, ತುಂಬಾ ಸಮಯ, ಹಣ ಮತ್ತು ಸಿಬ್ಬಂದಿ ಅಗತ್ಯ ವೆನ್ನುವುದು ಸ್ಪಷ್ಟ. ಆದುದರಿಂದ ನಾವು ಅಧ್ಯಯನ ಮಾಡುತ್ತಿರುವ ವಿಷಯಕ್ಕೆ ಸಂಬಂಧಿಸಿದ ಮಾಹಿತಿಯನ್ನು ಸಂಗ್ರಹಿಸಲು ಹಣ, ಸಮಯ, ಮತ್ತು ಸಿಬ್ಬಂದಿ ಸಾಕಾಗುವಂತಿದ್ದರೆ ಪ್ರಾಥಮಿಕ ಮೂಲದಿಂದ ವಿಷಯ ಸಂಗ್ರಹಿಸಬಹುದು. ಹಾಗೆಯೇ ಯಾವುದೇ ದ್ವಿತೀಯ ಮೂಲದಿಂದ ಮಾಹಿತಿ ಸಿಕ್ಕುತ್ತಿಲ್ಲವೆಂದಾಗಲೂ ಪ್ರಾಥಮಿಕ ಮೂಲದಿಂದಲೇ ಮಾಹಿತಿ ಯನ್ನು ಸಂಗ್ರಹಿಸಬೇಕಾಗುತ್ತದೆ.

ಈಗಾಗಲೇ ಮಾಹಿತಿಯನ್ನು ಸಂಗ್ರಹಿಸಿ ಪ್ರಕಟಿಸಲಾಗಿರುವ ಮೂಲದಿಂದ ಅಂಕಿ ಅಂಶಗಳನ್ನು ಸಂಗ್ರಹಿಸುವುದನ್ನು ದ್ವಿತೀಯ ಮೂಲದ ಅಂಕಿ ಅಂಶ ಸಂಗ್ರಹಣೆ ಎಂದು ಹೇಳಲಾಗುತ್ತದೆ. ಈ ರೀತಿಯ ಅಂಕಿ ಅಂಶ ಸಂಗ್ರಹಣೆಗೆ ಪ್ರತ್ಯೇಕವಾದ ಸಂಸ್ಥೆಗಳಿರುತ್ತವೆ. ಕೇಂದ್ರ ಸರ್ಕಾರ, ರಾಜ್ಯ ಸರ್ಕಾರ, ವಿವಿಧ ಸರ್ಕಾರೀ ಇಲಾಖೆಗಳು ಅನೇಕ ವಿಷಯಗಳಿಗೆ ಸಂಬಂಧಿಸಿದಂತೆ ಮಾಹಿತಿಯನ್ನು ಪ್ರಕಟಿಸುತ್ತವೆ. ಖಾಸಗೀ ಸಂಸ್ಥೆಗಳೂ ಅಂಕಿ ಅಂಶಗಳನ್ನು ಸಂಗ್ರಹಿಸಿ, ಅದನ್ನು ಅಗತ್ಯವಿರುವವರಿಗೆ, ಶುಲ್ಕಕ್ಕೆ ಪ್ರತಿಯಾಗಿ ಒದಗಿಸುತ್ತವೆ. ಉದಾಹರಣೆಗೆ ಬೊಂಬಾಯಿಯಲ್ಲಿರುವ Centre for Monitoring Indian Economy

(C.M.I.E) ಭಾರತದ ಆರ್ಥಿಕ ಚಟುವಟಿಕೆಗೆ ಸಂಬಂದಿಸಿದ ಎಲ್ಲ ಮಾಹಿತಿಯನ್ನೂ ಮಾರಾಟ ಮಾಡುತ್ತದೆ.

**ಪ್ರಾಥಮಿಕ ಮೂಲದಿಂದ ಅಂಕಿ-ಅಂಶ ಸಂಗ್ರಹಣಾ ವಿಧಾನ**

ಪ್ರಾಥಮಿಕ ಮೂಲದಿಂದ ಮಾಹಿತಿ ಸಂಗ್ರಹಣೆಗೆ ಸಾಮಾನ್ಯವಾಗಿ ಕೆಳಗಿನ ವಿಧಾನಗಳನ್ನು ಅನುಸರಿಸಲಾಗುತ್ತದೆ.

೧. ನೇರವಾಗಿ ವಿಷಯಗಳನ್ನು ಗಮನಿಸುವುದರ ಮೂಲಕ ಅಂಕಿ ಅಂಶ ಸಂಗ್ರಹಣೆ.
೨. ಸಂದರ್ಶನಗಳ ಮೂಲಕ ಮಾಹಿತಿ ಸಂಗ್ರಹಣೆ.
೩. ಪತ್ರ ವ್ಯವಹಾರದ ಮೂಲಕ ಅಂಕಿ ಅಂಶ ಸಂಗ್ರಹಣೆ.
೪. ಪ್ರಶ್ನಾವಳಿಯ ಮೂಲಕ ಮಾಹಿತಿ ಸಂಗ್ರಹಣೆ ಮತ್ತು
೫. ರೇಡಿಯೋ, ಟೆಲಿವಿಷನ್, ವೃತ್ತ ಪತ್ರಿಕೆ ಮತ್ತು ಟೆಲಿಫೋನ್‌ಗಳ ಮೂಲಕ ಮಾಹಿತಿ ಸಂಗ್ರಹಣೆ.

ಸಣ್ಣ ಸಣ್ಣ ವಿಷಯಗಳ ಮಾಹಿತಿ ಸಂಗ್ರಹಣೆ ಮಾಡುವುದಾದರೆ, ಮೊದಲಿನ ಮೂರು ಕ್ರಮಗಳು ಉಪಯುಕ್ತ. ಮಾಹಿತಿ ಸಂಗ್ರಹಿಸುತ್ತಿರುವವನು ನೇರವಾಗಿ ಕ್ರಿಯೆಯನ್ನು ಅವಲೋಕಿಸಬಹುದು. ಉದಾಹರಣೆಗೆ ಹತ್ತು ವಿದ್ಯಾರ್ಥಿಗಳ ಒಂದು ತರಗತಿಯಲ್ಲಿ ವಿದ್ಯಾರ್ಥಿಗಳು ಪಡೆದಿರುವ ಅಂಕಗಳ ಸರಾಸರಿ ಇತ್ಯಾದಿಯನ್ನು ನೇರವಾಗಿ ಸಂಗ್ರಹಿಸ ಬಹುದು.

ಹಾಗೆಯೇ ಕೆಲವು ವಿಷಯಗಳಿಗೆ ಸಂಬಂಧಿಸಿದಂತೆ ಸಂಬಂಧಪಟ್ಟವರನ್ನು ನೇರವಾಗಿ ಸಂದರ್ಶಿಸಬಹುದು. ಉದಾಹರಣೆಗೆ ಒಂದು ಸಣ್ಣ ಫ್ಯಾಕ್ಟರಿಯಲ್ಲಿ ಮಹಿಳಾ ಕಾರ್ಮಿಕರ ಸ್ಥಿತಿಗತಿಗಳನ್ನು ಅರಿಯಬೇಕಾದರೆ ಅವರನ್ನು ನೇರವಾಗಿ ಸಂದರ್ಶಿಸಬಹುದು. ಇದರಂತೆಯೇ ಕೆಲವು ಮಾಹಿತಿಗಳನ್ನು ಪತ್ರ ವ್ಯವಹಾರದ ಮೂಲಕ ಸಂಗ್ರಹಿಸಬಹುದು. ಬೆಲೆ ಮಾಹಿತಿ, ಚುನಾವಣಾ ಫಲಿತಾಂಶ ಮಾಹಿತಿ ಮಂತಾದವನ್ನು ರೇಡಿಯೋ, ಟೆಲಿವಿಷನ್, ವೃತ್ತ ಪತ್ರಿಕೆಗಳ ಮೂಲಕ ಸಂಗ್ರಹಿಬಹುದು.

ಮಾಹಿತಿ ಸಂಗ್ರಹಣೆ ವಿಶಾಲ ವ್ಯಾಪ್ತಿಯುಳ್ಳದ್ದಾಗಿದ್ದು, ಅನೇಕರನ್ನು ಸಂಪರ್ಕಿಸಬೇಕಾದ ಅವಶ್ಯಕತೆಗಳಿರುವ ಕಡೆ ಪ್ರಶ್ನಾವಳಿಗಳನ್ನು ತಯಾರಿಸಿ, ಅವುಗಳ ಮೂಲಕ ಮಾಹಿತಿಯನ್ನು ಸಂಗ್ರಹಿಸಬಹುದು. ಪ್ರಶ್ನಾವಳಿಯ ಮೂಲಕ ಮಾಹಿತಿ ಸಂಗ್ರಹಣೆ ಬಳಕೆಯಲ್ಲಿದೆ. ಇದನ್ನು ಸ್ವಲ್ಪ ವಿವರವಾಗಿ ನೋಡೋಣ.

**ಪ್ರಶ್ನಾವಳಿಯ ತಯಾರಿಕೆಯಲ್ಲಿ ವಹಿಸಬೇಕಾದ ಎಚ್ಚರಿಕೆಗಳು**

೧. ಕೇಳಬೇಕಾಗಿರುವ ಪ್ರಶ್ನೆಗಳು ತುಂಬಾ ಚುರುಕಾಗಿರಬೇಕು ಮತ್ತು ಸರಳ ವಾಗಿರಬೇಕು.
೨. ಸಾಧ್ಯವಾದಷ್ಟು ಮಟ್ಟಿಗೂ "ಹೌದು" ಅಥವಾ "ಇಲ್ಲ" ಎನ್ನುವ ಮಾದರಿಯಲ್ಲಿ ಉತ್ತರ ಪಡೆಯುವಂತಹ ಪ್ರಶ್ನೆಗಳಿದ್ದರೆ ಒಳ್ಳೆಯದು.

೩. ಹಳ್ಳಿಯವರಿಗೆ, ಅವಿದ್ಯಾವಂತರಿಗೆ ಸಂಬಂಧಿಸಿದ ಮಾಹಿತಿ ಸಂಗ್ರಹಣೆಯಾದರೆ, ಪ್ರಶ್ನಾವಳಿ ಪ್ರಾದೇಶಿಕ ಭಾಷೆಯಲ್ಲಿರಬೇಕು.

೪. ಸಾಧ್ಯವಾದಷ್ಟು ಕಡಿಮೆ ಪ್ರಶ್ನೆಗಳನ್ನು ಪ್ರಶ್ನಾವಳಿ ಹೊಂದಿರಬೇಕು.

೫. ಪ್ರಶ್ನೆಗಳನ್ನು ಕ್ರಮಬದ್ಧವಾಗಿ ಒಂದಕ್ಕೊಂದಕ್ಕೆ ಸಂಬಂಧಿಸಿರುವಂತೆ ಜೋಡಿಸಿರ ಬೇಕು.

೬. ಯಾರು ಉತ್ತರ ಹೇಳುತ್ತಾರೋ ಅಥವಾ ಬರೆಯುತ್ತಾರೋ ಅವರ ಮಾನಸಿಕ ಭಾವನೆಗಳನ್ನು ಕೆರಳಿಸುವಂತಹ ಪ್ರಶ್ನೆಗಳು, ಪ್ರಶ್ನಾವಳಿಯಲ್ಲಿ ಇರಬಾರದು.

೭. ಪ್ರಶ್ನಾವಳಿಯನ್ನು ಮಾಹತಿ ಸಂಗ್ರಹಣೆಗೆ ಉಪಯೋಗಿಸುವುದಕ್ಕಿಂತ ಮುಂಚೆಯೇ, ಅದನ್ನು ಪೂರ್ವ ಪರೀಕ್ಷೆಗೆ ಒಳಪಡಿಸಿರಬೇಕು. ಅಂದರೆ ಒಂದಿಬ್ಬರಿಗೆ ಪ್ರಾಯೋಗಿಕ ವಾಗಿ ಅದನ್ನು ಬಳಕೆ ಮಾಡಿ ನಂತರ ಪ್ರಶ್ನೆಗಳು ಸರಿಯಾಗಿವೆ, ಉತ್ತರ ಕೊಡುವುದಕ್ಕೆ ಕಷ್ಟವಿಲ್ಲವೆಂದು ಖಾತ್ರಿಯಾದ ಮೇಲೆ ಅದನ್ನು ಬಳಸಬೇಕು.

ಪ್ರಶ್ನಾವಳಿಯನ್ನು ನೇರವಾಗಿ, ವಿಷಯ ಸಂಗ್ರಹಿಸುತ್ತಿರುವವನೇ, ಜನರ ಬಳಿ ಕಳುಹಿಸಿ ವಿಷಯ ಸಂಗ್ರಹಿಸಬಹುದು. ಪ್ರಶ್ನಾವಳಿಯನ್ನು ಉಪಯೋಗಿಸುವ ಮೊದಲೇ ಇವೆಲ್ಲಾ ವಿಷಯಗಳ ಬಗ್ಗೆ ಪೂರ್ವ ಸಿದ್ಧತೆ ಅತ್ಯಗತ್ಯ.

ಉತ್ತಮ ಪ್ರಶ್ನಾವಳಿ ಉತ್ತಮವಾದ ಸಮೀಕ್ಷಾ ಫಲಿತಾಂಶಕ್ಕೆ ಆಧಾರ ಎನ್ನುವುದು ಗಮನಾರ್ಹ. ಆದ್ದರಿಂದ ಪ್ರಶ್ನಾವಳಿ ತಯಾರಿಕೆಯಲ್ಲಿ ಸಾಧ್ಯವಾದಷ್ಟು ಎಚ್ಚರಿಕೆಯನ್ನು ವಹಿಸಬೇಕಾದುದು ಅಗತ್ಯ.

### ೨. ಅಂಕಿ ಸಂಖ್ಯೆಯ ಘಟಕದ ನಿರ್ಧಾರ

ಯಾವ ಘಟಕದಲ್ಲಿ ಅಂಕಿ ಅಂಶಗಳನ್ನು ಸಂಗ್ರಹಿಸಬೇಕು? ಎಷ್ಟು ಸಂಗ್ರಹಿಸಬೇಕು? ಎನ್ನುವುದನ್ನು ಸಹ ಯಾವುದೇ ಸಮೀಕ್ಷೆಗೆ ಮುಂಚೆ ನಿರ್ಧರಿಸಬೇಕಾದುದು ಅಗತ್ಯ. ಉದಾಹರಣೆಗೆ ಭಾರತದ ರಫ್ತಿನ ಪ್ರಮಾಣ ಇವುಗಳಲ್ಲಿ ಯಾವ ಘಟಕದಲ್ಲಿ ಅಂಕಿ ಅಂಶವನ್ನು ಸಂಗ್ರಹಿಸಬೇಕು ಎನ್ನುವುದನ್ನು ನಿರ್ಧರಿಸಬೇಕು. ಎರಡೂ ಘಟಕಗಳು ಅಗತ್ಯವಾದರೆ ಇವೆರಡೂ ಘಟಕಗಳಲ್ಲೂ ಮಾಹಿತಿಯನ್ನು ಸಂಗ್ರಹಿಸಬೇಕು? "ಘಟಕ" (Statistical Unit) ಬಗ್ಗೆ ನಿರ್ಧರಿಸುವಾಗ ಅದು ಏಕರೂಪತೆ ಹೊಂದಿರುವ ಹಾಗೆ, ಸ್ಪಷ್ಟವಾಗಿ ವ್ಯಾಖ್ಯಾನಿಸಲಾಗುವಂತೆ ಇರಬೇಕಾದುದು ಅಗತ್ಯ. ಬೇರೆ ಬೇರೆ ಘಟಕಗಳಲ್ಲಿ ಮಾಹತಿ ಸಂಗ್ರಹಿಸಿದಾಗ ಸಮೀಕ್ಷೆಯ ಫಲಿತಾಂಶ ಏರುಪೇರಾಗುವ ಸಾಧ್ಯತೆ ಇರುತ್ತದೆ.

### ೩. ಅಂಕಿ-ಅಂಶಗಳ ನಿಖರತೆ

ಅಂಕಿ-ಅಂಶಗಳಿಗೆ ಸಂಬಂಧಿಸಿದಂತೆ ಬಹಳ ಮುಖ್ಯವಾಗಿ ಗಮನಿಸಬೇಕಾದ ಒಂದು ಅಂಶವೆಂದರೆ ಶೇ.೧೦೦ರಷ್ಟು ಖಚಿತವಾದ ಅಂಕಿ ಅಂಶವನ್ನು ಸಂಗ್ರಹಿಸುವುದು ಸಾಧ್ಯವೇ ಇಲ್ಲ. ಇದಕ್ಕೆ ಅನೇಕ ಕಾರಣಗಳಿರುತ್ತವೆ. ಮಾಹಿತಿಯನ್ನು ಕೊಡುತ್ತಿರುವವರೇ ತಪ್ಪು

ಅಂಕಿ ಅಂಶ ಕೊಡಬಹುದು ಅಥವಾ ಮಾಹಿತಿ ಸಂಗ್ರಹಿಸುತ್ತಿರುವವರು ತಪ್ಪಾಗಿ ನಮೂದಿಸಿಕೊಳ್ಳಬಹುದು, ಇವೆಲ್ಲಾ ಕಾರಣಗಳಿಂದ ಯಾವುದೇ ಸಮೀಕ್ಷೆಯಲ್ಲಿ ಕರಾರುವಾಕ್ಕಾದ ಅಂಕಿ ಅಂಶ ಸಂಗ್ರಹಣೆ ಕಷ್ಟ ಸಾಧ್ಯ. ಆದ್ದರಿಂದ ಸಾಧ್ಯವಾದಷ್ಟೂ ಮಟ್ಟಿಗೂ ನೈಜತೆಗೆ ಹತ್ತಿರವಾದ ಅಂಕಿಅಂಶಗಳನ್ನು ಮಾತ್ರ ಸಂಗ್ರಹಿಸುವುದು ಸಾಧ್ಯ. ಆದರೆ ಇಂತಹ ತಪ್ಪುಗಳು ಸಾಧ್ಯವಾದಷ್ಟೂ ಕಡಿಮೆಯಿರುವಂತೆ ಎಚ್ಚರಿಕೆ ವಹಿಸಬೇಕಾದುದು ಅಗತ್ಯ. ಹೀಗೆ ಮಾಡಲಾಗುವ ತಪ್ಪುಗಳು ಎಷ್ಟರಮಟ್ಟಿಗೆ ಸಮೀಕ್ಷೆಯ ಫಲಿತಾಂಶಗಳ ಮೇಲೆ ಪ್ರಭಾವ ಬೀರುತ್ತದೆ ಎನ್ನುವುದು, ಯಾವ ಸಮಸ್ಯೆಯ ಬಗ್ಗೆ ಸಮೀಕ್ಷೆ ನಡೆಸಲಾಗುತ್ತಿದೆ ಎನ್ನುವುದನ್ನು ಅವಲಂಬಿಸುತ್ತದೆ. ಉದಾಹರಣೆಗೆ ನಾವು ಒಂದು ಶಾಲೆಯ ಮಕ್ಕಳ ಎತ್ತರವನ್ನು ಅಧ್ಯಯನ ಮಾಡುತ್ತಿದ್ದರೆ, ಒಂದು ಸಣ್ಣ ತಪ್ಪು ಸಮೀಕ್ಷೆಯ ಫಲಿತಾಂಶವನ್ನು ಬಹುಮಟ್ಟಿಗೆ ಪ್ರಭಾವಿಸುತ್ತದೆ. ಆದರೆ ದೂರ ದೂರ ಇರುವ ಊರುಗಳ ದೂರವನ್ನು ಮೀಟರ್‌ನಲ್ಲಿ ಅಳತೆ ಮಾಡುತ್ತಿರುವಾಗ ೧ ಮೀಟರ್ ಅಥವಾ ೨ ಮೀಟರ್ ದೂರ ವ್ಯತ್ಯಾಸವಾಗಿ ನಮೂದಿತವಾದರೆ ಅಂತಹ ಭಾದಕವಾಗುವುದಿಲ್ಲ. ಆದರೆ ಸಮೀಕ್ಷೆಯ ಅಂಕಿಅಂಶಗಳು ಸಾಧ್ಯವಾದಷ್ಟೂ ಕರಾರುವಕ್ಕಾಗಿರುವಂತೆ ನೋಡಿಕೊಳ್ಳಬೇಕಾದುದು ಅಗತ್ಯ.

### ಲೆಕ್ಕಾಚಾರದಲ್ಲಿ ನಿಖರತೆ

ಸಂಖ್ಯಾಶಾಸ್ತ್ರದ ಅನೇಕ ಲೆಕ್ಕಾಚಾರಗಳಲ್ಲಿ ದಶಮಾಂಶಗಳು ಪದೇ ಪದೇ ವ್ಯಕ್ತವಾಗುತ್ತಿರುತ್ತವೆ. ಅನುಕೂಲದ ದೃಷ್ಟಿಯಿಂದ ಇವುಗಳನ್ನು ಸರಿಪಡಿಸಿಕೊಳ್ಳಬೇಕಾಗುತ್ತದೆ. ಇದಕ್ಕಾಗಿ ಒಂದು ನಿಯಮವನ್ನು ಅನುಸರಿಸಬೇಕಾಗುತ್ತದೆ. ಸಾಮಾನ್ಯವಾಗಿ ೦.೫ಕ್ಕಿಂತ ಹೆಚ್ಚಾಗಿರುವ ದಶಮಾಂಶವನ್ನು ೧ಕ್ಕೆ ಏರಿಸಲಾಗುತ್ತದೆ ಉದಾಹರಣೆಗೆ ೫.೩೨೩ನ್ನು ೫ ಎಂದು ಲೆಕ್ಕ ಹಾಕಲಾಗುತ್ತದೆ. ಇದನ್ನು ಗಮನದಲ್ಲಿಟ್ಟುಕೊಳ್ಳಬೇಕಾಗುದುದು ಅಗತ್ಯ.

ಅಂಕಿ ಅಂಶಗಳ ಸಂಗ್ರಹಣೆ ಸಮೀಕ್ಷೆಯ ಮೊದಲನೆಯ ಹಂತ ಅಂಕಿ ಅಂಶ ಸಂಗ್ರಹಣೆಯಾದ ಮೇಲೆ ಅದನ್ನು ವ್ಯವಸ್ಥಿತವಾಗಿ, ಮುಂದಿನ ಅಂಕಿ ಅಂಶ ತತ್ವಗಳ ಅನ್ವಯಕ್ಕೆ ಯೋಗ್ಯವಾಗುವಂತೆ ಪರಿಷ್ಕರಿಸಲಾಗುತ್ತದೆ (Tabulation). ಇದಕ್ಕಾಗಿ ಅಂಕಿ ಅಂಶ ಅನೇಕ ಪಟ್ಟಿಗಳಾಗಿ (Tables) ಜೋಡಿಸಿಕೊಳ್ಳಲಾಗುತ್ತದೆ. ಆದ್ದರಿಂದ ಅಂಕಿ ಅಂಶ ಸಂಗ್ರಹಣೆಯ ಎರಡನೆಯ ಹಂತ ವಿಷಯ ವರ್ಗೀಕರಣ, ಮೂರನೆಯ ಹಂತ ಪರಿಷ್ಕರಣ. ಇವುಗಳನ್ನು ಸ್ವಲ್ಪ ನೋಡೋಣ.

### ಪರಿಷ್ಕರಣ

ಯಾವುದೇ ಕ್ರಿಯೆಗೆ ಸಂಬಂಧಿಸಿದಂತೆ ಸಂಗ್ರಹಿಸಲಾಗಿರುವ ಮಾಹಿತಿ ಕೇವಲ ಅಂಕಿ ಅಂಶಗಳ ಮುದ್ದೆಯಾಗಿರುತ್ತದೆ. ಆದ್ದರಿಂದ ಏನನ್ನೂ ತಿಳಿಯುವದೂ ಕಷ್ಟ. ಅಂಕಿ ಅಂಶಗಳನ್ನು ಸಾಕಷ್ಟು ಪರಿಷ್ಕರಿಸಬೇಕಾಗುತ್ತದೆ. ಅವುಗಳನ್ನು ವರ್ಗೀಕರಿಸಿ ಕೋಷ್ಟಕಗಳ ರೂಪದಲ್ಲಿ ಪ್ರಕಟಿಸಬೇಕಾಗುತ್ತದೆ. ಪರಿಷ್ಕರಣ ವೈಜ್ಞಾನಿಕ ರೀತಿಯಲ್ಲಿ ನಡೆಯಬೇಕಾದ್ದು

ಅಗತ್ಯ. ಅದಕ್ಕೆ ತರಬೇತಿಯೂ ಬೇಕಾಗುತ್ತದೆ. ವರ್ಗೀಕರಣ, ಕೋಷ್ಟಕಗಳ ಮೂಲಕ ವ್ಯಕ್ತಪಡಿಸುವುದು ಇವೆಲ್ಲವನ್ನು ಒಟ್ಟಾಗಿ ಪರಿಷ್ಕರಣ ಎಂದು ಕರೆಯಲಾಗುತ್ತದೆ. ಮೊದಲ ವರ್ಗೀಕರಿಣವನ್ನು ನೋಡೋಣ.

ವರ್ಗೀಕರಣ

ಸಂಗ್ರಹಿಸಲಾಗಿರುವ ಅಂಕಿ ಅಂಶಗಳನ್ನು ಕೆಲವು ನಿರ್ದಿಷ್ಟ ಲಕ್ಷಣದ ಮೇಲೆ ಅಗತ್ಯಕ್ಕೆ ತಕ್ಕಂತೆ ವರ್ಗೀರಿಸಲಾಗುತ್ತದೆ. ಉದಾಹರಣೆಗೆ ಜನಸಂಖ್ಯೆಯನ್ನು, ಅದಾಯ, ಲಿಂಗ, ವಿದ್ಯಾಭ್ಯಾಸ, ಕಸುಬು, ಮತ, ಮುಂತಾದವುಗಳ ಆಧಾರದ ಮೇಲೆ ವರ್ಗೀಕರಿಸಬಹುದು. ಹಾಗೆಯೇ ಒಂದು ಗುಂಪಿನ ವಿವರವನ್ನು ಕಾಫಿ ಕುಡಿವವರು, ಕಾಫಿ ಕುಡಿಯದವರು, ಧೂಮಪಾನ ಮಾಡುವವರು, ಧೂಮಪಾನ ಮಾಡದವರು ಇತ್ಯಾದಿಗಳ ಆಧಾರದ ಮೇಲೆ ವರ್ಗೀಕರಿಸಬಹುದು. ಒಂದೇ ಲಕ್ಷಣವನ್ನು ಆಧಾರಿಸಿ, ವರ್ಗೀಕರಣ ಮಾಡುವುದನ್ನು ಏಕ ವಿಧ ವರ್ಗೀಕರಣ, ಎರಡು ಲಕ್ಷಣಗಳನ್ನು ಆಧರಿಸಿ ಮಾಡುವ ವರ್ಗೀಕರಣವನ್ನು ದ್ವಿವಿಧ ವರ್ಗೀಕರಣ ಎಂದು ಕರೆಯಲಾಗುತ್ತದೆ.

ವರ್ಗೀಕರಣವನ್ನು ಸಾಮಾನ್ಯವಾಗಿ ೪ ಲಕ್ಷಣಗಳನ್ನು ಆಧರಿಸಿ ನಡೆಸಲಾಗುತ್ತದೆ. ಅವುಗಳೆಂದರೆ

೧. ಭೌಗೋಳಿಕ ಆಧಾರಿತ ವರ್ಗೀಕರಣ.

೨. ಸಮಯ ಆಧಾರಿತ ವರ್ಗೀಕರಣ.

೩. ಗುಣ ಆಧಾರಿತ ವರ್ಗೀಕರಣ ಮತ್ತು

೪. ಪರಿಣಾಮ ಆಧಾರಿತ ವರ್ಗೀಕರಣ.

೧. ಇದರಲ್ಲಿ ಭೌಗೋಳಿಕ ಪ್ರದೇಶವನ್ನು ಆಧರಿಸಿ ಅಂಕಿ ಅಂಶಗಳನ್ನು ವರ್ಗೀಕರಿಸಲಾಗುತ್ತದೆ. ಉದಾಹರಣೆಗೆ ಕೃಷಿ ಉತ್ಪನ್ನವನ್ನು ಗ್ರಾಮ, ತಾಲ್ಲೂಕು, ಪಟ್ಟಣ ಮತ್ತು ರಾಜ್ಯಮಟ್ಟಕ್ಕೆ ಸಂಬಂಧಿಸಿದಂತೆ ವರ್ಗೀಕರಿಸಬಹುದು. ಹಾಗೆಯೇ ಲಾಭವನ್ನು ರಾಜ್ಯ ರಾಜ್ಯಗಳ ಕೈಗಾರಿಕೆಗಳಿಗೆ ಸಂಬಂಧಿಸಿದಂತೆ ವರ್ಗೀಕರಿಸಬಹುದು.

೨. ಸಮಯವನ್ನು ಆಧಾರಿಸಿ ಸಹ ಅಂಕಿ ಅಂಶಗಳನ್ನು ವರ್ಗೀಕರಿಸಬಹುದು. ಉದಾಹರಣೆಗೆ ಐಸ್ ಕ್ರೀಂ ಮಾರಾಟವನ್ನು ವಾರಕ್ಕೆ, ತಿಂಗಳಿಗೆ, ೬ ತಿಂಗಳಿಗೆ ಮತ್ತು ಒಂದು ವರ್ಷಕ್ಕೆ ಸಂಬಂಧಿಸಿದಂತೆ ವರ್ಗೀಕರಿಸಬಹುದು.

೩. ಅಂಕಿ ಅಂಶಗಳನ್ನು ಕೆಲವು ಗುಣಲಕ್ಷಗಳ ಆದಾರದ ಮೇಲೆ ವರ್ಗೀಕರಿಸಬಹುದು, ಉದಾಹರಣೆಗೆ ಜನಸಂಖ್ಯೆಯನ್ನು ಲಿಂಗದ ಆಧಾರದ ಮೇಲೆ, ವಿವಾಹಿತರೇ, ಅವಿವಾಹಿತರೇ ಎನ್ನುವುದರ ಮೇಲೆ ವರ್ಗೀಕರಿಸಬಹುದು. ಹಿಂದೆಯೇ ವಿವರಿಸಿದಂತೆ, ಏಕ ವಿಧ, ದ್ವಿ ವಿಧ ಮತ್ತು ಬಹು ವಿಧ ವರ್ಗೀಕರಣವನ್ನು ನಡೆಸಬಹುದು.

### ೪. ಪರಿಣಾಮ ಆಧಾರಿತ ವರ್ಗೀಕರಣ

ಬಹಳ ಮುಖ್ಯವಾದ ರೀತಿಯ ವರ್ಗೀಕರಣವೆಂದರೆ, ಅಂಕಿ ಅಂಶಗಳನ್ನು ವರ್ಗಾಂತರಗಳಾಗಿ ಜೋಡಿಸಿ, ಪ್ರತಿ ವರ್ಗಾಂತರಕ್ಕೆ ಎಷ್ಟು ಸಂಖ್ಯೆ ಸೇರುತ್ತದೆ ಎನ್ನುವಂತೆ ಪ್ರಕಟಿಸುವುದು, ಪ್ರತಿ ವರ್ಗಕ್ಕೆ ಸೇರುವ ಸಂಖ್ಯೆಯನ್ನು ಆವೃತ್ತಿ ಎಂದು ಕರೆಯಲಾಗುತ್ತದೆ. ಹೀಗೆ ವರ್ಗೀಕರಣ ಮಾಡುವುದು, ಸಂಖ್ಯಾ ಶಾಸ್ತ್ರದ ಸಾಧನೆಗಳನ್ನು ಅಂಕಿ ಅಂಶಗಳಿಗೆ ಅನ್ವಯಿಸುವುದಕ್ಕೆ ಬಹಳ ಸಹಾಯಕವಾಗುತ್ತದೆ. ಒಂದು ಉದಾಹರಣೆಯ ಮೂಲಕ ಇದನ್ನು ಗ್ರಹಿಸೋಣ.

**ಉದಾಹರಣೆ ೧**

ಕೆಳಗೆ ಒಂದು ಕೈಗಾರಿಕೆಯ ೧೦೦ ಉದ್ಯೋಗಿಗಳ ವಯಸ್ಸಿಗೆ ಸಂಬಂಧಿಸಿದ ಮಾಹಿತಿ ಕೊಡಲಾಗಿದೆ. ೫ ವರ್ಷಗಳ ವರ್ಗಾಂತರದಲ್ಲಿ ಆವೃತ್ತಿ ಪಟ್ಟಿಯನ್ನು ರಚಿಸಲಾಗಿದೆ.

ಉದ್ಯೋಗಿಗಳ ಅತ್ಯಂತ ಕಡಿಮೆ ವಯಸ್ಸು ೧೬ ವರ್ಷ ಅತ್ಯಂತ ಹೆಚ್ಚು ವಯಸ್ಸು ೪೩ ವರ್ಷ. ಆದ್ದರಿಂದ ೧೬-೧೯ ಮತ್ತು ೪೦-೪೪ರವರೆಗೆ ವರ್ಗಾಂತರಗಳನ್ನು ರಚಿಸಬಹುದು. ಸಾಮಾನ್ಯವಾಗಿ ೫, ೧೦, ೧೫, ೨೦ರ ವರ್ಗಾಂತರಗಳನ್ನು ತೆಗೆದು ಕೊಳ್ಳಲಾಗುತ್ತದೆ.

**೧೦೦ ಉದ್ಯೋಗಿಗಳ ವಯಸ್ಸಿನ ಮಾಹಿತಿ**

| | | | | | | | | | | |
|---|---|---|---|---|---|---|---|---|---|---|
| ೧೮ | ೨೦ | ೩೩ | ೧೭ | ೨೩ | ೩೪ | ೧೬ | ೧೬ | ೨೨ | ೧೯ | ೩೪ |
| ೩೪ | ೩೬ | ೪೩ | ೧೭ | ೧೯ | ೧೬ | ೨೮ | ೧೬ | ೨೭ | ೨೪ | ೩೧ |
| ೩೭ | ೪೨ | ೧೬ | ೧೮ | ೩೯ | ೧೯ | ೨೧ | ೨೧ | ೧೯ | ೨೨ | ೨೫ |
| ೨೭ | ೪೩ | ೨೫ | ೩೮ | ೧೭ | ೨೯ | ೧೮ | ೨೩ | ೧೬ | ೩೦ | ೧೭ |
| ೨೭ | ೧೯ | ೩೫ | ೪೦ | ೨೦ | ೧೮ | ೨೩ | ೨೨ | ೧೮ | ೨೯ | ೩೨ |
| ೩೬ | ೧೭ | ೨೧ | ೨೮ | ೧೬ | ೩೬ | ೪೦ | ೨೨ | ೨೦ | ೨೪ | ೧೮ |
| ೩೨ | ೨೩ | ೩೫ | ೧೭ | ೨೩ | ೧೬ | ೨೭ | ೧೮ | ೩೦ | ೧೭ | ೨೨ |
| ೨೦ | ೨೫ | ೩೨ | ೧೯ | ೨೪ | ೨೪ | ೧೯ | ೧೮ | ೩೩ | ೨೦ | ೨೧ |
| ೨೧ | ೨೫ | ೩೩ | ೨೯ | ೨೧ | ೨೩ | ೨೮ | ೨೦ | ೩೮ | ೨೪ | ೨೩ |
| ೨೨ | | | | | | | | | | |

| ವಯಸ್ಸು ವರ್ಷಗಳಲ್ಲಿ | ಗುರುತುಗಳು | ಆವೃತ್ತಿ | ಸಂಚಿತ ಆವೃತ್ತಿ |
|---|---|---|---|
| ೧೬-೧೯ | ## #### ## ## ## | ೨೯ | ... |
| ೨೦-೨೪ | ## ## ## ## ## ## ## | ೩೧ | ೬೦ |
| ೨೫-೨೯ | ## ## ## ## | ೧೪ | ೭೪ |
| ೩೦-೩೪ | ## ## ## | ೧೨ | ೮೬ |
| ೩೫-೩೯ | ## ## | ೯ | ೯೫ |
| ೪೦-೪೪ | ## | ೫ | ೧೦೦ |
| | | f= ೧೦೦ | |

ಮೇಲಿನ ಉದಾಹರಣೆಯಲ್ಲಿ ಅಂಕಿ ಅಂಶಗಳನ್ನು ೬ ವರ್ಗಾಂತರಗಳಾಗಿ ವಿಂಗಡಿಸಿ ಕೊಳ್ಳಲಾಗಿದೆ. ಪ್ರತಿ ವರ್ಗ ೫ ವರ್ಷವನ್ನು ಒಳಗೊಂಡಿದೆ. ಪ್ರತಿಯೊಂದು ವರ್ಗಾಂತರಕ್ಕೆ ಬರುವ ಸಂಖ್ಯೆಗಳನ್ನು ಮೊದಲು ಗುರುತಿಸಿ, ನಂತರ ಅವುಗಳ ಮೊತ್ತವನ್ನು ಆವೃತ್ತಿಯಾಗಿ ಗುರುತಿಸಲಾಗಿದೆ. ಕೊನೆಯ ಕಾಲಂನಲ್ಲಿ ಸಂಚಿತ ಆವೃತ್ತಿಯನ್ನು ಕೊಡಲಾಗಿದೆ. ಒಂದು ವರ್ಗದ ಮೇಲ್ತುದಿ ಸಂಖ್ಯೆಯಿಂದ ಕೆಳಗೆ ಎಷ್ಟು ಸಂಖ್ಯೆಗಳಿವೆ ಎನ್ನುವುದನ್ನು ಅದು ಸೂಚಿಸುತ್ತದೆ. ಉದಾಹರಣೆಗೆ ೨೪ ವರ್ಷಕ್ಕಿಂತ ಕೆಳಗಿನವರು ಆರು ಜನರಿದ್ದಾರೆ, ೨೯ ವರ್ಷಕ್ಕಿಂತ ಕೆಳಗೆ ೭೪ ಜನರಿದ್ದಾರೆ ಇತ್ಯಾದಿ. ಸಂಚಿತ ಆವೃತ್ತಿ ಸಂಖ್ಯಾ ಶಾಸ್ತ್ರದ ಲೆಕ್ಕಾಚಾರದಲ್ಲಿ ಬಹಳ ಉಪಯಕ್ತವಾಗುತ್ತದೆ.

**ಉದಾಹರಣೆ ೨**

ಈ ಕೆಳಗೆ ಒಂದು ಪರೀಕ್ಷೆಯಲ್ಲಿ ಹಲವು ವಿದ್ಯಾರ್ಥಿಗಳು ಗಳಿಸಿದ ಅಂಕಗಳನ್ನು ಕೊಟ್ಟಿದೆ ೫ ಅಂಕಗಳ ವರ್ಗಾಂತರವನ್ನಿಟ್ಟುಕೊಂಡು ಅದಕ್ಕೆ ಒಂದು ಆವೃತ್ತಿ ವಿತರಣೆಯನ್ನು ರಚಿಸಿ.

| | | | | | | | | | | | |
|---|---|---|---|---|---|---|---|---|---|---|---|
| ೩೯ | ೪೩ | ೬೨ | ೩೦ | ೪೭ | ೩೩ | ೩೧ | ೧೭ | ೩೮ | ೧೦ | ೬೫ | ೮೬ |
| ೩೨ | ೩೯ | ೨೪ | ೫೭ | ೪೨ | ೧೫ | ೩೦ | ೪೯ | ೫೩ | ೪೭ | ೫೦ | ೪೦ |
| ೭೩ | ೪೭ | ೨೭ | ೪೩ | ೩೬ | ೩೯ | ೩೬ | ೨೫ | ೩೪ | ೩೦ | ೨೯ | ೭೦ |
| ೪೩ | ೫೪ | ೪೦ | ೩೯ | ೨೨ | ೪೦ | ೬೫ | ೩೯ | ೩೬ | ೩೫ | ೩೧ | ೪೨ |

ಅತ್ಯಂತ ಕಡಿಮೆ ಅಂಕ ೧೦

ಅತ್ಯಂತ ಹೆಚ್ಚಿನ ಅಂಕ ೮೬. ಆದ್ದರಿಂದ ಕೆಳಗಿನ ವರ್ಗಾಂತರವನ್ನು ರಚಿಸಬಹುದು.

| Class Intervals | Tallies | Frequency |
|---|---|---|
| ೧೦ - ೧೫ | ‖ | ೨ |
| ೧೫ - ೨೦ | \| | ೧ |

| | | |
|---|---|---|
| ೨೦ - ೨೫ | \|\|\| | ೩ |
| ೨೫ - ೩೦ | ## | ೫ |
| ೩೦ - ೩೫ | ## | ೫ |
| ೩೫ - ೪೦ | ## ## \|\|\|\| | ೧೪ |
| ೪೦ - ೪೫ | ## | ೫ |
| ೪೫ - ೫೦ | ## | ೫ |
| ೫೦ - ೫೫ | \|\| | ೨ |
| ೫೫ - ೬೦ | \| | ೧ |
| ೬೦ - ೬೫ | \|\| | ೨ |
| ೬೫ - ೭೦ | \| | ೧ |
| ೭೦ - ೭೫ | \| | ೧ |
| ೭೫ - ೮೦ | \| | ೧ |
| | | f = ೪೮ |

## ಅಂಕಿ ಸಂಖ್ಯಾ ಶ್ರೇಣಿಗಳು

ಸಂಖ್ಯಾಶಾಸ್ತ್ರದಲ್ಲಿ ಲೆಕ್ಕಾಚಾರದ ಉದ್ದೇಶಕ್ಕಾಗಿ ಅಂಕಿ ಸಂಖ್ಯೆಗಳನ್ನು ೩ ಶ್ರೇಣಿಗಳಾಗಿ ವಿಂಗಡಿಸಿಕೊಳ್ಳಲಾಗುತ್ತದೆ. ಅವುಗಳೆಂದರೆ

೧. ವ್ಯಕ್ತಿಗತವಾಗಿ ವೀಕ್ಷಿಸಿರುವ ಸಂಖ್ಯೆಗಳು

೨. ಪೂರ್ಣಾಂಕ ಶ್ರೇಣಿಗಳು ಮತ್ತು

೩. ಸತತ ಸಂಖ್ಯಾ ಶ್ರೇಣಿಗಳು

ಇವುಗಳನ್ನು ಸ್ವಲ್ಪ ವಿವರವಾಗಿ ನೋಡೋಣ.

## ವ್ಯಕ್ತಿಗತವಾಗಿ ವೀಕ್ಷಿಸಿರುವ ಸಂಖ್ಯೆಗಳು

ಕೆಲವು ಸಣ್ಣ ಪುಟ್ಟ ಕ್ರಿಯೆಗಳ ಮಾಹಿತಿಯನ್ನು ನೇರವಾಗಿ ವೀಕ್ಷಿಸಿ ಅದಕ್ಕೆ ಸಂಧಿಸಿದಂತೆ ಅಂಕಿಅಂಶಗಳನ್ನು ಗುರುತು ಮಾಡಿಕೊಳ್ಳಬಹುದು. ಇವುಗಳನ್ನು ವ್ಯಕ್ತಿಗತವಾಗಿ ವೀಕ್ಷಿಸಿರುವ ಸಂಖ್ಯೆಗಳು ಎಂದು ಕರೆಯಲಾಗುತ್ತದೆ. ಒಂದು ತರಗತಿಯ ವಿದ್ಯಾರ್ಥಿಗಳ ಅಂಕಗಳು, ಒಂದು ಸಣ್ಣ ಆಸ್ಪತ್ರೆಯಲ್ಲಿರುವ ರೋಗಿಗಳ ಸಂಖ್ಯೆ ಇತ್ಯಾದಿ ಇವುಗಳಿಗೆ ಉದಾಹರಣೆಗಳು, ಒಂದು ಉದಾಹರಣೆಯಾಗಿ, ೧೦ ವಿದ್ಯಾರ್ಥಿಗಳಿರುವ ಒಂದು ತರಗತಿಯಲ್ಲಿ ಅವರ ಅಂಕಗಳನ್ನು ಗಮನಿಸಿ.

| | | | | | | | | | | | |
|---|---|---|---|---|---|---|---|---|---|---|---|
| ವಿದ್ಯಾರ್ಥಿಗಳು | : | ೧ | ೨ | ೩ | ೪ | ೫ | ೬ | ೭ | ೮ | ೯ | ೧೦ |
| ಅಂಕಗಳು | : | ೫೦ | ೫೫ | ೬೦ | ೬೫ | ೭೦ | ೭೫ | ೮೦ | ೮೫ | ೯೦ | ೯೫ |

### ಪೂರ್ಣಾಂಕ ಶ್ರೇಣಿಗಳು

ಕೆಲವು ಕ್ರಿಯೆಗಳನ್ನು ಭಿನ್ನರಾಶಿಗಳಲ್ಲಿ ವ್ಯಕ್ತಪಡಿಸುವುದಕ್ಕಾಗುವುದಿಲ್ಲ. ಈ ಕ್ರಿಯೆಗಳಿಗೆ ಸಂಬಂಧಿಸಿದ ಅಂಕಿ ಅಂಶಗಳನ್ನು ಪೂರ್ಣಾಂಕ ಶ್ರೇಣಿಗಳು ಎಂದು ಕರೆಯಲಾಗುತ್ತದೆ. ಉದಾಹರಣೆಗೆ ಒಂದು ಪಟ್ಟಣದಲ್ಲಿರುವ ಜನಸಂಖ್ಯೆ, ಮನೆಗಳು, ಆಸ್ಪತ್ರೆಗಳು, ಇತ್ಯಾದಿ. ಕೆಳಗಿನ ಉದಾಹರಣೆಯನ್ನು ಗಮನಿಸಿ.

| ಕುಟುಂಬದಲ್ಲಿ ಮಕ್ಕಳ ಸಂಖ್ಯೆ | ಒಟ್ಟು ಕುಟುಂಬಗಳು |
|---|---|
| ೨ | ೧೦ |
| ೩ | ೨೫ |
| ೪ | ೩೦ |
| ೫ | ೩೫ |
| | ಒಟ್ಟು ೧೦೦ |

**ಸತತ ಸಂಖ್ಯಾ ಶ್ರೇಣಿಗಳು :** ಕೆಲವು ಕ್ರಿಯೆಗಳು ಪೂರ್ಣಾಂಕದ ಜೊತೆಗೆ, ದಶಮಾಂಶಗಳಲ್ಲಿ ಸಹ ವ್ಯಕ್ತವಾಗುತ್ತದೆ. ಇಂತಹ ಅಂಕಿ ಸಂಖ್ಯೆಗಳನ್ನು ಸತತ ಸಂಖ್ಯಾ ಶ್ರೇಣಿಗಳು ಎಂದು ಕರೆಯಲಾಗುತ್ತದೆ. ವ್ಯಕ್ತಿಗಳ ಸರಾಸರಿ ಆದಾಯ, ಖರ್ಚು, ಫ್ಯಾಕ್ಟರಿಗಳ ಲಾಭ ಇತ್ಯಾದಿ ಇಂತಹ ಶ್ರೇಣಿಗಳಿಗೆ ಉದಾಹರಣೆ ಕೆಳಗಿನ ಪಟ್ಟಿಯನ್ನು ಗಮನಿಸಿ.

| ಜನರ ವಯಸ್ಸು (ವರ್ಷಗಳಲ್ಲಿ) ವರ್ಗಾಂತರ | ಜನರ ಸಂಖ್ಯೆ ಆವೃತ್ತಿ |
|---|---|
| ೦ - ೧೦ | ೨೫ |
| ೧೦ - ೨೦ | ೩೦ |
| ೨೦ - ೩೦ | ೭೫ |
| ೩೦ - ೪೦ | ೩೦ |
| ೪೦ - ೫೦ | ೪೦ |
| | ಒಟ್ಟು ೨೦೦ |

ಮೇಲಿನ ಪಟ್ಟಿಯಲ್ಲಿ ಜನರನ್ನು ವಯಸ್ಸಿನ ಆಧಾರದ ಮೇಲೆ ವರ್ಗಾಂತರಿಸಲಾಗಿದೆ. ೦-೧೦ ವರ್ಷದವರು ೨೫ ಜನರಿದ್ದಾರೆ. ಇದರಲ್ಲಿ ಒಬ್ಬನಿಗೆ ೫ ವರ್ಷ ೯ ತಿಂಗಳು ೧೦ ದಿನ ವಯಸ್ಸಿರಬಹುದು. ಇನ್ನೊಬ್ಬನಿಗೆ ೪-೫ ವರ್ಷವಿರಬಹುದು. ಹೀಗೆ ಸತತ ಶ್ರೇಣಿಯಲ್ಲಿ ದಶಮಾಂಶ ಸಂಖ್ಯೆಗಳು ಇರಬಹುದು. ಸಾಮಾನ್ಯವಾಗಿ ಸತತ ಶ್ರೇಣಿಯನ್ನು ವರ್ಗಾಂತರ ಮತ್ತು ಆವೃತ್ತಿ ಪಟ್ಟಿಯಲ್ಲಿ ನಮೂದಿಸಲಾಗುತ್ತದೆ.

## ಸಂಖ್ಯಾ ಮಾಹಿತಿಯ ನಕ್ಷಾ ನಿರೂಪಣೆ

ಅಂಕಿ ಸಂಖ್ಯೆಗಳನ್ನು ವ್ಯವಸ್ಥಿತವಾಗಿ ವ್ಯಕ್ತಪಡಿಸಲು ಚಿತ್ರಗಳು ಮತ್ತು ನಕ್ಷೆಗಳನ್ನು ಸಂಖ್ಯಾಶಾಸ್ತ್ರದಲ್ಲಿ ಬಳಸಲಾಗುತ್ತದೆ. ಇಂತಹ ಚಿತ್ರ ನಿರೂಪಣೆಗೆ ಕೆಲವು ಅನುಕೂಲಗಳಿವೆ. ಇವುಗಳಲ್ಲಿ ಮುಖ್ಯವಾದುವೆಂದರೆ:

೧. ನಕ್ಷಾ ನಿರೂಪಣೆಯನ್ನು ತುಂಬಾ ಸುಲಭವಾಗಿ ಅರ್ಥಮಾಡಿಕೊಳ್ಳಬಹುದು. ಅಂಕಿ ಅಂಶಗಳನ್ನು ಗ್ರಹಿಸುವುದು ಸುಲಭ.

೨. ನಕ್ಷೆಯ ಮೇಲೆ ಸೂಕ್ತ ಘಟಕಗಳನ್ನು ಆಯ್ದುಕೊಳ್ಳುವುದರ ಮೂಲಕ ದೊಡ್ಡ ದೊಡ್ಡ ಸಂಖ್ಯೆಗಳನ್ನು ಸಹ ಸರಳಗೊಳಿಸಿ ವ್ಯಕ್ತಪಡಿಸಬಹುದು. ಕೋಷ್ಟಕ ರಚನೆಯ ಕಷ್ಟವನ್ನು ತಪ್ಪಿಸಬಹುದು.

೩. ಒಂದೇ ಗುಂಪಿಗೆ ಸೇರಿದ ಅಂಕಿ ಸಂಖ್ಯೆಗಳ ನಡುವ ಹೋಲಿಕೆ ನಕ್ಷೆಯ ಮೂಲಕ ಬಹಳ ಸುಲಭವಾಗುತ್ತದೆ. ಉದಾಹರಣೆಗೆ ಒಂದೇ ನಕ್ಷೆಯ ಮೇಲೆ ಭಾರತದ ರಾಜ್ಯಗಳ ಕೃಷಿ ಉತ್ಪನ್ನವನ್ನು ವ್ಯಕ್ತಪಡಿಸಿದಾಗ ಯಾವ ರಾಜ್ಯದಲ್ಲಿ ಅದು ಹೆಚ್ಚಾಗಿದೆ, ಎಲ್ಲಿ ಅದು ಕಡಿಮೆಯಿದೆ ಎನ್ನುವುದು ಸ್ಪಷ್ಟವಾಗಿ ವ್ಯಕ್ತವಾಗುತ್ತದೆ.

೪. ಸಂಖ್ಯಾಶಾಸ್ತ್ರದಲ್ಲಿ ಅಷ್ಟು ತರಬೇತಿ ಇಲ್ಲವಾದರೂ ಸಹ ನಕ್ಷೆಗಳ ಮೂಲಕ ಅಂಕಿ ಸಂಖ್ಯೆಗಳನ್ನು ಸುಲಭವಾಗಿ ಗ್ರಹಿಸಬಹುದು.

೫. ಕೆಲವು ಸಂದರ್ಭಗಳಲ್ಲಿ ನಕ್ಷೆಯ ಮೇಲಿನ ರೇಖೆಗಳು, ಒಂದು ಕ್ರಿಯೆಯ ಮುಂದಿನ ವರ್ಷಗಳಲ್ಲಿ ಚಲನೆಯನ್ನು ಮುಂಗಾಣುವುದಕ್ಕೆ ನೆರವಾಗುತ್ತವೆ. ಉದಾಹರಣೆಗೆ ಕಳೆದ ಹತ್ತು ವರ್ಷಗಳ ಕೃಷಿ ಉತ್ಪನ್ನವನ್ನು ನಕ್ಷೆಯ ಮೇಲೆ ನಮೂದಿಸಿದರೆ, ಆ ರೇಖೆಯನ್ನು ಮುಂದಕ್ಕೆ ಎಳೆದರೆ, ಮುಂದಿನ ವರ್ಷಗಳ ಸರಾಸರಿ ಉತ್ಪನ್ನವನ್ನು ಉದಾಹರಿಸಬಹುದು.

ನಕ್ಷಾ ನಿರೂಪಣೆಗೆ ಮೇಲಿನ ಅನುಕೂಲಗಳಿದ್ದರೂ ಕೆಲವು ಅನನುಕೂಲತೆಗಳೂ ಸಹ ಇವೆ. ಅವುಗಳೆಂದರೆ

೧. ಅಂಕಿ ಸಂಖ್ಯೆಗಳ ಸರಳವಾದ ನಿರೂಪಣೆ ಮಾತ್ರ ನಕ್ಷಾ ನಿರೂಪಣೆಯನ್ನು ಬಳಸಬಹುದು ಅಷ್ಟೆ. ಆದ್ದರಿಂದ ಸರಾಸರಿ, ಮಧ್ಯಮ ಪ್ರವೃತ್ತಿಯ ಮಾನಗಳು, ಸಹ ಸಂಬಂಧ ಮುಂತಾದುವನ್ನು ಲೆಕ್ಕಾ ಹಾಕುವುದು ಸಾಧ್ಯವಿಲ್ಲ.

೨. ನಕ್ಷೆಯ ಮೇಲೆ ೨ ಅಥವಾ ೩ ಚಲಗಳನ್ನು ಮಾತ್ರ ನಿರೂಪಿಸಬಹುದು. ಉದಾಹರಣೆಗೆ x - ಅಕ್ಷರದ ಮೇಲೆ ಬೆಲೆ, y - ಅಕ್ಷದ ಮೇಲೆ ಬೇಡಿಕೆ ಮತ್ತು z - ಅಕ್ಷದ ಮೇಲೆ ಆದಾಯವನ್ನು ನಿರೂಪಿಸಬಹುದು. ಚಲಗಳು ೩ಕ್ಕಿಂತ ಹೆಚ್ಚಾದಾಗ ನಕ್ಷಾ ನಿರೂಪಣೆ ಸಂಪೂರ್ಣವಾಗಿ ವಿಫಲವಾಗುತ್ತದೆ.

೩. ಅಂಕಿ ಸಂಖ್ಯೆಗಳ ವಿತರಣೆಯ ನಡುವೆ ತುಂಬಾ ಅಂತರವಿದ್ದರೆ, ನಕ್ಷಾ ನಿರೂಪಣೆ ಸಾಧ್ಯವೇ ಇಲ್ಲ.

ಮೇಲಿನ ಮಿತಿಗಳಿದ್ದರೂ, ಕೆಲವೊಂದು ಸರಳ ನಿರೂಪಣೆಗಳಿಗೆ ನಕ್ಷೆಗಳನ್ನು ಸಂಖ್ಯಾಶಾಸ್ತ್ರದಲ್ಲಿ ವ್ಯಾಪಕವಾಗಿ ಬಳಸಲಾಗುತ್ತದೆ. ಇವುಗಳನ್ನು ನೋಡೋಣ

**ನಕ್ಷೆಗಳ ಸ್ವರೂಪ**

ಮುಖ್ಯವಾಗಿ ಬಳಸಲಾಗುವ ನಕ್ಷಾ ನಿರೂಪಣೆಗಳೆಂದರೆ

೧. ದಂಡ ಚಿತ್ರಗಳು

೨. ಆವೃತಿ ಅಥವಾ ಕೋನ ಚಿತ್ರಗಳು

೩. ಆವೃತ್ತಿ ಸಂಖ್ಯಾ ಚಿತ್ರ

೪. ಆವೃತ್ತಿ ವಿತರಣಾ ಬಹುಭುಜ ಚಿತ್ರ

೫. ಸಂಚಿತ ಆವೃತ್ತಿ ರೇಖೆ

ಇವುಗಳನ್ನು ಸ್ವಲ್ಪ ವಿವರವಾಗಿ ನೋಡೋಣ

**೧. ದಂಡ ಚಿತ್ರಗಳು :** ಇಲ್ಲಿ OX - ಅಕ್ಷದ ಮೇಲೆ ವರ್ಷಗಳನ್ನು (ಅಥವಾ ಇನ್ನಾವುದೇ ಚಲವನ್ನು) ಮತ್ತು Y-ಅಕ್ಷದ ಮೇಲೆ ಕ್ರಿಯೆಗೆ ಸಂಬಂಧಿಸಿದ ರೇಖೆಯನ್ನು ಎಳೆಯಲಾಗುತ್ತದೆ. OX-ಅಕ್ಷದ ಮೇಲೆ ಸಮಾನಾಂತರ ಘಟಕದಲ್ಲಿ ಚಲ ವ್ಯಕ್ತವಾಗುತ್ತದೆ.

ಅಕ್ಷದ ಮೇಲಿನ ದಂಡಗಳಲ್ಲಿ ವ್ಯತ್ಯಾಸ ಕ್ರಿಯೆಗೆ ಸಂಬಂಧಿಸಿದ ಅಂಕಿ ಅಂಶಗಳಲ್ಲಿ ವ್ಯತ್ಯಾಸವನ್ನು ವ್ಯಕ್ತಪಡಿಸುತ್ತದೆ. ಕೆಳಗಿನ ಉದಾಹರಣೆಯನ್ನು ಗಮನಿಸಿ. ಇಲ್ಲಿ ೧೯೮೧-೮೨ ರಿಂದ ೧೯೮೬-೮೭ರವರೆಗಿನ ಭಾರತದ ಸಕ್ಕರೆ ಉತ್ಪಾದನೆಯನ್ನು ದಂಡ ಚಿತ್ರದ ಮೂಲಕ ತೋರಿಸಲಾಗಿದೆ.

**ಸಕ್ಕರೆ ಉತ್ಪಾದನೆ**

| ವರ್ಷ | ಉತ್ಪಾದನೆ (ದಶಲಕ್ಷಟನ್ನುಗಳಲ್ಲಿ) |
|---|---|
| ೧೯೮೧-೮೨ | ೮.೪ |
| ೧೯೮೨-೮೩ | ೮.೨ |
| ೧೯೮೩-೮೪ | ೫.೯ |
| ೧೯೮೪-೮೫ | ೬.೧ |
| ೧೯೮೫-೮೬ | ೭.೦ |
| ೧೯೮೬-೮೭ | ೮.೫ |




ದಂಡಚಿತ್ರ

ದಂಡ ಚಿತ್ರದ ಮೂಲಕ ವರ್ಷದಿಂದ, ವರ್ಷಕ್ಕೆ ಸಕ್ಕರೆ ಉತ್ಪಾದನೆ ಹೇಗೆ ವ್ಯತ್ಯಾಸ ಹೊಂದಿದೆ ಎನ್ನವುದನ್ನು ಸುಲಭವಾಗಿ ಗ್ರಹಿಸಬಹುದು.

**೨. ಆವೃತ್ತಿ ಅಥವಾ ಕೋನ ಚಿತ್ರಗಳು :** ಒಂದು ವೃತ್ತವನ್ನು ವಿವಿಧ ಭಾಗಗಳಾಗಿ ವಿಂಗಡಿಸಿ ಪ್ರತಿಯೊಂದು ಭಾಗವೂ ಒಂದು ಕ್ರಿಯೆಯ ಅಂಕಿ ಅಂಶಕ್ಕೆ ಸಂಬಂಧಿಸಿದಂತೆ ವ್ಯಕ್ತಪಡಿಸಲಾಗುವ ಚಿತ್ರವನ್ನು ಆವೃತ್ತಿ ಚಿತ್ರ ಎಂದು ಕರೆಯಲಾಗುತ್ತದೆ. ವೃತ್ತವನ್ನು ಕೋನಗಳ ಆಧಾರದ ಮೇಲೆ ಸಹ ವಿಭಜಿಸಬಹುದು. ವೃತ್ತ ೩೬೦ ಇರುವುದರಿಂದ ಅದನ್ನು ಅಂಕಿ ಸಂಖ್ಯೆಗೆ ಸಂಬಂಧಿಸಿದಂತೆ ವಿಭಜಿಸಿ ಚಿತ್ರವನ್ನು ರಚಿಸಬಹುದು. ಕೆಳಗಿನ ಚಿತ್ರದಲ್ಲಿ ೧೯೮೬-೮೭ಕ್ಕೆ ಸಂಬಂಧಿಸಿದ ಭಾರತದ ರಫ್ತನ್ನ ವ್ಯಕ್ತಪಡಿಸಲಾಗಿದೆ. ಒಟ್ಟು ರಫ್ತಿನಲ್ಲಿ ಶೇ.೬.೭ರಷ್ಟು ಸಿದ್ಧವಸ್ತುಗಳು, ಶೇಕಡಾ ೭ರಷ್ಟು ಇಂಜಿನಿಯರಿಂಗ್ ವಸ್ತುಗಳು ಶೇಕಡಾ ೪.೩ರಷ್ಟು ಕಬ್ಬಿಣದ ಅದಿರು ಭಾರತದಿಂದ ರಫ್ತಾಗುತ್ತಿದೆ ಎಂಬುದನ್ನು ಸುಲಭವಾಗಿ ಗ್ರಹಿಸಬಹುದು.




### ೩. ಆವೃತ್ತಿ ಸಂಖ್ಯಾ ಚಿತ್ರ

ವರ್ಗಾಂತರ ಮತ್ತು ಆವೃತ್ತಿ ಪಟ್ಟಿಯನ್ನು ನಕ್ಷೆಯ ಮೇಲೆ ಮೂಡಿಸಬಹುದು. ಅಕ್ಷದ ಮೇಲೆ ವರ್ಗಾಂತರವನ್ನು ಮತ್ತು ಅಕ್ಷದ ಮೇಲೆ ಆವೃತ್ತಿಯನ್ನು ಅಳತೆ ಮಾಡಲಾಗುತ್ತದೆ.

ಕೆಳಗಿನ ಉದಾಹರಣೆಯನ್ನು ಗಮನಿಸಿ

| ಅಂಕಗಳು | ವಿದ್ಯಾರ್ಥಿಗಳ ಸಂಖ್ಯೆ (ಆವೃತ್ತಿ) |
|---|---|
| ೦ - ೧೦ | ೫ |
| ೧೦ - ೨೦ | ೧೦ |
| ೨೦ - ೩೦ | ೨೫ |
| ೩೦ - ೪೦ | ೨೫ |
| ೪೦ - ೫೦ | ೫ |




ಆವೃತ್ತಿ ಸಂಖ್ಯಾ ಚಿತ್ರ

### ೪. ಆವೃತ್ತಿ ವಿತರಣ ಬಹುಭುಜ

ಆವೃತ್ತಿ ಸಂಖ್ಯಾ ಚಿತ್ರದ ಚತುರ್ಭುಜಗಳಲ್ಲಿನ ಮಧ್ಯದ ಅಂಶಗಳನ್ನು ಒಂದು ರೇಖಾಚಿತ್ರದ ಮೂಲಕ ಸೇರಿಸಿದಾಗ ದೊರಯುವ ಚಿತ್ರವನ್ನು ಆವೃತ್ತಿ ವಿತರಣ ಬಹುಭುಜವೆಂದು ಕರೆಯಲಾಗುತ್ತದೆ. ಕೆಳಗಿನ ಚಿತ್ರದಲ್ಲಿ ವಿದ್ಯಾರ್ಥಿಗಳ ಅಂಶಕ್ಕೆ ಸಂಬಂಧಿಸಿದ ಮೇಲಿನ ಅಂಕಿ ಅಂಶದ ಆವೃತ್ತಿ ವಿತರಣ ಬಹುಭುಜವನ್ನು ರಚಿಸಲಾಗಿದೆ.




ಆವೃತ್ತಿ ಸಂಖ್ಯಾ ಚಿತ್ರ

೫. ಸಂಚಿತ ಆವೃತ್ತಿ ರೇಖೆ

ಅಕ್ಷದ ಮೇಲೆ ವರ್ಗಾಂತರಗಳನ್ನು ಮತ್ತು ಅಕ್ಷದ ಮೇಲೆ ಸಂಚಯ ಆವೃತ್ತಿಗಳನ್ನು ಮೂಡಿಸಿ ಆ ಅಂಶಗಳನ್ನು ಸೇರಿಸುವುದರಿಂದ ಬರುವ ಗೇಖೆಯನ್ನು ಸಂಚಯ ಆವೃತ್ತಿ ರೇಖೆ ಅಥವಾ ಅಗೈವ್ ರೇಖೆ ಎಂದು ಕರೆಯಲಾಗುತ್ತದೆ. ಕೆಳಗಿನ ಉದಾಹಣೆಯನ್ನು ಗಮನಿಸಿ.

| ಅಂಕಗಳು | ವಿದ್ಯಾರ್ಥಿಗಳ ಸಂಖ್ಯೆ | ಸಂಚಿತ ಆವೃತ್ತಿ |
|---|---|---|
| ೦ - ೧೦ | ೫ | ೫ |
| ೧೦ - ೨೦ | ೫ | ೧೦ |
| ೨೦ - ೩೦ | ೧೦ | ೨೦ |
| ೩೦ - ೪೦ | ೧೫ | ೩೫ |
| ೪೦ - ೫೦ | ೫ | ೪೦ |
| | ಒಟ್ಟು ೪೦ | |




ಮೇಲೆ ವಿವರಿಸುವ ನಕ್ಷೆಗಳನ್ನು ಸಂಖ್ಯಾಶಾಸ್ತ್ರದಲ್ಲಿ ಎರಡು ಚಲನೆಗಳಿಗೆ ಸಂಬಂಧಿಸಿದಂತೆ ವ್ಯಾಪಕವಾಗಿ ಬಳಸಲಾಗುತ್ತದೆ. ನಕ್ಷೆಗಳು ಎಲ್ಲರಿಗೂ ಸುಲಭವಾಗಿ ಅರ್ಥವಾಗುತ್ತದೆ. ಆದರೆ ಗಣಿತ ಶಾಸ್ತ್ರೀಯ ವಿಧಾನಗಳನ್ನು ಬಳಸಬೇಕಾದಾಗ ನಕ್ಷಾ ನಿರೂಪಣೆ ಸಾಧ್ಯವಾಗುವುದಿಲ್ಲ. ಇದು ಅದರ ಮುಖ್ಯ ಮಿತಿ.

**ಆರ್ಥಿಕ ಬೆಳವಣಿಗೆಯ ಲೆಕ್ಕಾಚಾರ**

ಭಾರತ ವರ್ಷವೊಂದಕ್ಕೆ ಶೇ.೫ರಂತೆ ಬೆಳೆಯುತ್ತಿದೆ. ಅಥವಾ ೬ ರಂತೆ ಬೆಲೆಯುತ್ತಿದೆ ಎನ್ನುವುದನ್ನು ನೀವು ಕೇಳಿದ್ದೀರಿ ಮತ್ತು ಓದಿದ್ದೀರಿ. ಆರ್ಥಿಕ ಬೆಳವಣಿಗೆಯನ್ನು ಲೆಕ್ಕ ಹಾಕುವುದು ಹೇಗೆ ಕೆಳಗಿನ ವಿವರಣೆಯನ್ನು ಗಮನಿಸಿ.

ಸಾಮಾನ್ಯವಾಗಿ, ಆರ್ಥಿಕ ಬೆಳವಣಿಗೆಯನ್ನು ವರ್ಷಂಪ್ರತಿಯಾಗಿ, ಚಕ್ರನಂಬಿತ ರೂಪದಲ್ಲಿ ಮತ್ತು ಸತತ ಲೆಕ್ಕಾಚಾರ ರೂಪದಲ್ಲಿ ಮಾಡಬಹುದು. ಕೆಳಗಿನ ಉದಾಹರಣೆಗಳನ್ನು ಗಮನಿಸಿ. ಇಲ್ಲಿ ನಾವು ವರ್ಷಂಪ್ರತಿದರದ ಲೆಕ್ಕಾಚಾರವನ್ನು ಮಾತ್ರ ನೋಡುತ್ತೇವೆ.

**ಆರ್ಥಿಕ ಬೆಳವಣಿಯ ವರ್ಷಂಪ್ರತಿ ದರ**

$$g = \left(\frac{yt}{Yo}\right)^{1/6} - 1$$

ಒಂದು ಆರ್ಥಿಕತೆಯ ಪ್ರಸ್ತುತ ರಾಷ್ಟ್ರೀಯ ವರಮಾನ ರೂ.೧೦,೦೦೦,೦೦೦ ಕೋಟಿ ಇದೆ ಎಂದು ಭಾವಿಸೋಣ. ಇದು ೧೦ ವರ್ಷದ ನಂತರ ೨೦,೦೦,೦೦೦ ಕೋಟಿ ಆಗಿದೆ ಎಂದು ಭಾವಿಸೋಣ. ಈಗ ಬೆಳವಣಿಗೆಯ ದರವನ್ನು ಕೆಳಗಿನಂತೆ ಲೆಕ್ಕ ಹಾಕಬಹುದು.

$$g = \left(\frac{yt}{Yo}\right)^{1/6} - 1$$

$$g = 0.07177$$

ಸಾಮಾನ್ಯವಾಗಿ ಬೆಳವಣಿಗೆಯನ್ನು ಶೇಕಡವಾರು ಹೇಳಿರುವುದರಿಂದ

ವರ್ಷಂಪ್ರತಿ ದರ = ೦.೦೧೭೧೭೭ x ೧೦೦

= ೭.೧೮

## ೧.೩. ರಾಷ್ಟ್ರೀಯ ವರಮಾನದ ಬೆಳವಣಿಗೆ

ರಾಷ್ಟ್ರೀಯ ವರಮಾನ ಎಂಬ ಪರಿಕಲ್ಪನೆಯು ಇಂದಿನ ಆರ್ಥಿಕ ಚಿಂತನೆಯಲ್ಲಿ ಮಹತ್ವದ ಸ್ಥಾನವನ್ನು ಪಡೆದುಕೊಂಡಿದೆ. ಒಂದು ವರ್ಷದ ಅವಧಿಯಲ್ಲಿ ಒಂದು ದೇಶದಲ್ಲಿ ಉತ್ಪಾದಿಸಿದ ಎಲ್ಲಾ ಸರಕು ಸೇವೆಗಳ ಮೌಲ್ಯವು ಆ ದೇಶದ ರಾಷ್ಟ್ರೀಯ ವರಮಾನವಾಗಿದೆ. ಸಾಮಾನ್ಯ ಅರ್ಥದಲ್ಲಿ ರಾಷ್ಟ್ರೀಯ ಆದಾಯ ಎಂದರೆ ದೇಶವೊಂದರಲ್ಲಿ ವಾರ್ಷಿಕವಾಗಿ ಉತ್ಪಾದಿಸಲಾಗುವ ಸರಕು ಮತ್ತು ಸೇವೆಗಳ ಮೌಲ್ಯವಾಗಿವೆ. ಇದನ್ನು ಇಂದು ಆರ್ಥಿಕ ಬೆಳವಣಿಗೆಯ ಮಾನದಂಡ ಎಂದು ಪರಿಗಣಿಸಲಾಗಿದೆ. ಈ ಪರಿಕಲ್ಪನೆಯು ದೇಶವೊಂದರ ಅಭಿವೃದ್ಧಿಯ ಗತಿ, ಜನರ ಜೀವನ ಮಟ್ಟ, ಆದಾಯದ ಹಂಚಿಕೆ, ವಿವಿಧ ವಲಯಗಳ ಬೆಳವಣಿಗೆ ಮತ್ತು ಅಭಿವೃದ್ಧಿಯ ದ್ಯೋತಕವಾಗಿದೆ. ಆದ್ದರಿಂದ ರಾಷ್ಟ್ರೀಯ ಆದಾಯ

ಎಂದರೆ ಒಂದು ರಾಷ್ಟ್ರ ಒಂದು ವರ್ಷದಲ್ಲಿ ಉತ್ಪಾದನೆ ಮಾಡಿದ ಎಲ್ಲಾ ಅಂತಿಮ ಸರಕು ಮತ್ತು ಸೇವೆಗಳ ಸಮಗ್ರ ಹಣ ಮೌಲ್ಯವಾಗಿದೆ ಅಂದರೆ ಒಂದು ವರ್ಷದ ಅವಧಿಯಲ್ಲಿ ರಾಷ್ಟ್ರವೊಂದು ಗಳಿಸುವ ಸಮಗ್ರ ಆದಾಯವಾಗಿರುತ್ತದೆ. ನಮ್ಮ ದೇಶದಲ್ಲಿ ರಾಷ್ಟ್ರೀಯ ಆದಾಯ ಸಮಿತಿಯು ರಾಷ್ಟ್ರೀಯ ಆದಾಯವನ್ನು ಈ ರೀತಿಯಾಗಿ ವರ್ಣಿಸಿದೆ. ಒಂದು ನಿರ್ದಿಷ್ಟ ಕಾಲಾವಧಿಯಲ್ಲಿ ದೇಶದಲ್ಲಿ ಉತ್ಪಾದಿಸಲ್ಪಡುವ ಎಲ್ಲಾ ಸರಕು ಸೇವೆಗಳ ಮೌಲ್ಯವೇ ರಾಷ್ಟ್ರೀಯ ಆದಾಯ. ರಾಷ್ಟ್ರೀಯ ಆದಾಯವನ್ನು ರಾಷ್ಟ್ರದ ಜನಸಂಖ್ಯೆಯಿಂದ ಭಾಗಿಸಿದರೆ ವ್ಯಕ್ತಿಗತ ತಲಾ ಆದಾಯ ತಿಳಿಯುತ್ತದೆ.

ಸ್ವಾತಂತ್ರ್ಯ ಪೂರ್ವದಲ್ಲಿ ದೇಶದ ರಾಷ್ಟ್ರೀಯ ಆದಾಯ ಅಂದಾಜು ಮಾಡಿದವರಲ್ಲಿ ದಾದಾಬಾಯಿ ನವರೋಜಿ, ರ್‍ರೋಮರ್ ಮತ್ತು ಬಾರ್ಬರ್, ಡಿಗ್ಬಿ, ಲಾರ್ಡ್ ಕರ್ಜನ್, ವಾಡಿಯಾ ಮತ್ತು ಜೋಶಿ, ಶಹಾ ಮತ್ತು ಖಂಬಾಟಾ, ಫಿಂಡ್ಲೇ ಶಿರಾಸ್ ಮೊದಲಾದವರು ಪ್ರಮುಖರು. ಇವರೆಲ್ಲರೂ ಕೃಷಿ ವಲಯದ ಆದಾಯವನ್ನು ಸೇರಿಸಿ ರಾಷ್ಟ್ರೀಯ ಆದಾಯ ವನ್ನು ನಂಬಲರ್ಹವಾದ ಅಂಕಿ-ಅಂಶಗಳು ಪೂರಕವಾಗಿ ದೊರೆಯದ ಕಾರಣ ಇವರ ಅಧ್ಯಯನಗಳು ಸಮರ್ಪಕವಾಗಿರಲಿಲ್ಲ. ಆದರೆ ವೈಜ್ಞಾನಿಕವಾಗಿ ರಾಷ್ಟ್ರೀಯ ಆದಾಯವನ್ನು ನಂಬಲರ್ಹವಾದ ಅಂಕಿ-ಅಂಶಗಳ ಆದಾರದ ಮೇಲೆ ಎರಡೂ ವಿಧಾನಗಳ್ನು ಬಳಸಿ ರಾಷ್ಟ್ರೀಯ ಆದಾಯವನ್ನು ಅಂದಾಜು ಮಾಡಿದರು. ಸ್ವಾತಂತ್ರ್ಯದ ನಂತರ ಭಾರತ ಸರ್ಕಾರವು ಕೇಂದ್ರ ಅಂಕಿ ಸಂಖ್ಯಾ ಸಂಸ್ಥೆಯು ೧೯೪೮-೪೯ರಿಂದ ಭಾರತದಲ್ಲಿ ರಾಷ್ಟ್ರೀಯ ಆದಾಯವನ್ನು ಅಂದಾಜು ಮಾಡುತ್ತಿದೆ. ಈವರೆಗೆ ಅದು ರಾಷ್ಟ್ರೀಯ ಆದಾಯದ ಅಂದಾಜುಗಳನ್ನು ನಾಲ್ಕು ಸರಣಿಗಳಲ್ಲಿ ಪ್ರಕಟಿಸಿದೆ. ಮೊದಲನೆಯದಾಗಿ ಸಾಂಪ್ರದಾಯಿಕ ಸರಣಿ, ಎರಡನೆಯದಾಗಿ ಪರಿಷ್ಕೃತ ಸರಣಿ ಮೂರನೆಯದಾಗಿ ಹೊಸ ಪರಿಷ್ಕೃತ ಸರಣಿ ಹಾಗೂ ನಾಲ್ಕುನೆಯದಾಗಿ ದ್ವಿತೀಯ ಪರಿಷ್ಕೃತ ಸರಣಿ. ಆದಾಯ ಮಾಪನವು ಒಂದು ನಿರ್ದಿಷ್ಟ ಅವಧಿಯಲ್ಲಿ ಉತ್ಪಾದನೆಯಾಗಿದ್ದು ದ್ವಿಗಣನೆ ಇಲ್ಲದೆ ಎಣಿಕೆ ಮಾಡಿದ ಸರಕು ಮತ್ತು ಸೇವೆಗಳ ಗಾತ್ರವನ್ನು ಸೂಚಿಸುತ್ತದೆ.

### ಅ. ಒಟ್ಟು ದೇಶೀಯ ಉತ್ಪನ್ನದ ಬೆಳವಣಿಗೆ

ಒಟ್ಟು ದೇಶೀಯ ಉತ್ಪನ್ನವು ಆರ್ಥಿಕತೆಯೊಂದು ಒಂದು ವರ್ಷದಲ್ಲಿ ರಾಷ್ಟ್ರವು ಉತ್ಪಾದಿಸಿದ ಸರಕು ಮತ್ತು ಸೇವೆಗಳ ಪರಿಚಲನೆಯ ಮಾಪನವಾಗಿದೆ. ಇದನ್ನು ಸರಕು ಮತ್ತು ಸೇವೆಗಳ ಉತ್ಪಾದನೆಯನ್ನು ಮಾರುಕಟ್ಟೆ ಬೆಲೆಗಳಲ್ಲಿ ಮೌಲ್ಯದ ಅಂದಾಜು ಮಾಡಿ ಒಟ್ಟುಗೂಡಿಸುವ ಮೂಲಕ ಪಡೆಯಬಹುದು. ಕೇಂದ್ರ ಅಂಕಿಸಂಖ್ಯಾ ಸಂಸ್ಥೆಯು ಮೂಲ ವರ್ಷವನ್ನು ೧೯೮೦-೮೧ ರಿಂದ ೧೯೯೩-೯೪ಕ್ಕೆ ಬದಲಾಯಿಸಿ ೧೯೯೩-೯೪ರ ಸ್ಥಿರ ಬೆಲೆಗಳ ಪ್ರಕಾರ ರಾಷ್ಟ್ರೀಯ ಆದಾಯದ ಹೊಸ ಶ್ರೇಣಿಯನ್ನು ಪ್ರಕಟಿಸಿದೆ. ೧೯೯೩-೯೪ನೇ ವರ್ಷವು

ಒಂದು ಉತ್ತಮ ವರ್ಷವಾಗಿದ್ದು CSO ಅದನ್ನು ಆಯ್ಕೆ ಮಾಡಿತು. ಒಟ್ಟು ದೇಶೀಯ ಉತ್ಪನ್ನವನ್ನು ಅಳತೆ ಮಾಡುವಾಗ ಅಪ್ರತ್ಯಕ್ಷ ತೆರಿಗೆಗಳು ತಮ್ಮ ಸಹಾಯಕ ಧನವನ್ನು ಹೊಂದಾಣಿಕೆ ಮಾಡಿರುವುದಿಲ್ಲ. ಆದ್ದರಿಂದ ಒಟ್ಟು ದೇಶೀಯ ಉತ್ಪನ್ನವು ಮಾರುಕಟ್ಟೆ ಬೆಲೆಗಳಲ್ಲಿನ ಒಟ್ಟು ದೇಶೀಯ ಉತ್ಪನ್ನವಾಗಿರುತ್ತದೆ. ಮಾರುಕಟ್ಟೆ ಬೆಲೆಗಳಲ್ಲಿ ಒಟ್ಟು ದೇಶೀಯ ಉತ್ಪನ್ನ ಎಂದರೆ ದೇಶದೊಳಗಡೆ ಉತ್ಪಾದಿಸಿದ ಸರಕು ಮತ್ತು ಸೇವೆಗಳ ಮಾರುಕಟ್ಟೆ ಮೌಲ್ಯವಾಗಿರುತ್ತದೆ.

ಮಾರುಕಟ್ಟೆ ಬೆಲೆಯಲ್ಲಿ ಒಟ್ಟು ದೇಶೀಯ ಉತ್ಪನ್ನವನ್ನು ಅಳತೆ ಮಾಡುವಾಗ ಎಲ್ಲಾ ಮಧ್ಯವರ್ತಿ ಸರಕುಗಳನ್ನು ಹೊರಗಿಡಲಾಗುತ್ತದೆ ಅಥವಾ ಪರಿಗಣಿಸಲಾಗುವುದಿಲ್ಲ. ರಾಷ್ಟ್ರೀಯ ಆದಾಯದ ದ್ವಿಗಣನೆಯನ್ನು ಇಲ್ಲವಾಗಿಸಿ ಕೇವಲ ಅಂತಿಮ ಸರಕು ಮತ್ತು ಸೇವೆಗಳ ಮೌಲ್ಯವನ್ನು ಪರಿಗಣಿಸಲಾಗುತ್ತದೆ. ಮಧ್ಯವರ್ತಿ ಸರಕುಗಳ ಮೌಲ್ಯವು ಅಂತಿಮ ಸರಕುಗಳ ಬೆಲೆಗಳಲ್ಲಿ ನಿರ್ದಿಷ್ಟವಾಗಿ ಒಳಗೊಂಡಿರುತ್ತದೆ. ಒಟ್ಟು ದೇಶೀಯ ಉತ್ಪನ್ನದಲ್ಲಿ ಒಟ್ಟು ಎಂಬ ಪದವು ಬಂಡವಾಳ ಸರಕುಗಳ ಸವಕಳಿ ಮತ್ತು ದುರಸ್ತಿ ವೆಚ್ಚವನ್ನು ಸೇರಿಸಲಾಗುವುದಿಲ್ಲ. ಒಟ್ಟು ದೇಶೀಯ ಉತ್ಪನ್ನವನ್ನು ಉತ್ಪಾದನೆಯ ಬೆಲೆಯಲ್ಲಿ ಅಳತೆ ಮಾಡಬಹುದು. ಉತ್ಪಾದನಾಂಗ ಬೆಲೆಯಲ್ಲಿ ಒಟ್ಟು ದೇಶಿಯ ಉತ್ಪನ್ನ ಎಂದರೆ ಉತ್ಪಾದನಾಂಗಗಳ ಆದಾಯದ ಮೊತ್ತವನ್ನು ಪ್ರತಿನಿಧಿಸುವ ದೇಶದೊಳಗಡೆ ಉತ್ಪಾದಿಸಲಾದ ಸರಕು ಮತ್ತು ಸೇವೆಗಳ ಮೌಲ್ಯವಾಗಿದೆ. ರಾಷ್ಟ್ರೀಯ ಆದಾಯದ ಮಾಪನವು ಒಂದು ನಿರ್ದಿಷ್ಟ ಅವಧಿಗೆ ಅಥವಾ ವರ್ಷಕ್ಕೆ ಸಂಬಂಧಿಸಿರುತ್ತದೆ. ಅದು ಮಾರುಕಟ್ಟೆಯ ಬೆಲೆಗಳಲ್ಲಿನ ಒಟ್ಟು ದೇಶೀಯ ಉತ್ಪನ್ನದಿಂದ ಪರೋಕ್ಷ ತೆರಿಗೆಗಳನ್ನು ಕಳೆದು ಮತ್ತು ಸಹಾಯಧನವನ್ನು ಕೊಡಿಸಿದರೆ ಅದು ರಾಷ್ಟ್ರೀಯ ಆದಾಯಕ್ಕೆ ಸಮನಾಗುತ್ತದೆ. ರಾಷ್ಟ್ರೀಯ ಆದಾಯವು ದೇಶವೊಂದರ ಹಣರೂಪಿ ಆದಾಯವಾಗಿರುತ್ತದೆ ಮತ್ತು ಅದು ಉತ್ಪಾದಿಸಿದ ಸರಕು ಮತ್ತು ಸೇವೆಗಳ ಪರಿಚಲನೆಯನ್ನು ಪ್ರತಿನಿಧಿಸುತ್ತದೆ. ಉತ್ಪಾದನಾ ಬೆಲೆಗಳಲ್ಲಿ ಒಟ್ಟು ದೇಶೀಯ ಉತ್ಪನ್ನದ ಅಂದಾಜು ಉದ್ಯೋಗದಲ್ಲಿ ನೇಮಿಸಿಕೊಳ್ಳಲಾದ ಉತ್ಪಾದನಾಂಗಗಳ ಪ್ರತಿಫಲ ರೂಪದಲ್ಲಿ ಪಡೆಯುವ ಆದಾಯವನ್ನು ಒಳಗೊಂಡಿರುತ್ತದೆ. ಆದರೆ ಒಟ್ಟು ದೇಶೀಯ ಉತ್ಪನ್ನವು ವಿದೇಶದಿಂದ ಗಳಿಸುವ ಆದಾಯವನ್ನು ಒಳಗೊಂಡಿರುವುದಿಲ್ಲ.

ಸ್ವಾತಂತ್ರ್ಯದ ನಂತರದ ಅವಧಿಯ ದಶಕಗಳಲ್ಲಿ ಒಟ್ಟು ದೇಶೀಯ ಉತ್ಪನ್ನದ ಬೆಳವಣಿಗೆಯಲ್ಲಿ ಕಂಡುಬರುವ ಅಧ್ಯಯನವು ಭಾರತದ ಆರ್ಥಿಕತೆಯ ಮೂಲಕ ಮೇಲೆ ವಿವಿಧ ಆರ್ಥಿಕ ಯೋಜನೆಗಳು ಬೀರಿರುವ ಪರಿಣಾಮಗಳ್ನು ನಾವು ಅರ್ಥ ಮಾಡಿಕೊಳ್ಳಬಹುದು. ನೈಜ ಒಟ್ಟು ದೇಶೀಯ ಉತ್ಪನ್ನವು ೧೯೫೧-೫೨ರಲ್ಲಿ ವಾರ್ಷಿಕ ಶೇಕಡ ೨.೩ರಷ್ಟು ಆಗಿತ್ತು. ಇದು ೨೦೦೩-೦೪ರ ವೇಳೆಗೆ ಶೇಕಡ ೮.೫ರಷ್ಟಾಯಿತು. ಇದಕ್ಕಿಂತ ಹೆಚ್ಚಿನ ಬೆಳವಣಿಗೆ ದರವನ್ನು ಈ ಹಿಂದಿನ ಕೆಲವು ವರ್ಷಗಳಲ್ಲಿ ನಾವು ಸಾಧಿಸಿದ್ದೆವು. ಅವುಗಳೆಂದರೆ

೧೯೬೭-೬೮ರಲ್ಲಿ ಶೇಕಡ ೮.೧, ೧೯೭೫-೭೬ರಲ್ಲಿ ಶೇಕಡ ೯.೦ ಮತ್ತು ೧೯೮೮-೮೯ರಲ್ಲಿ ಶೇಕಡ ೧೦.೫.

ಕಳೆದ ಸುಮಾರು ಐದು ದಶಕಗಳಲ್ಲಿ ಒಟ್ಟು ದೇಶಿಯ ಉತ್ಪನ್ನದ ವಾರ್ಷಿಕ ಸರಾಸರಿ ಬೆಳವಣಿಗೆ ದರವು ಒಂದೇ ರೂಪದಲ್ಲಿರಲಿಲ್ಲ. ಇದು ಬೇರೆ ಬೇರೆ ವರ್ಷಗಳಲ್ಲಿ ಹಲವು ಏರಿಳಿತಗಳನ್ನು ಕಂಡಿದೆ. ಒಟ್ಟು ರಾಷ್ಟ್ರೀಯ ಉತ್ಪನ್ನದ ದಶವಾರ್ಷಿಕ ಬೆಳವಣಿಗೆ ದರವು ೧೯೮೦-೮೧ರ ಹಿಂದೆ ಶೇಕಡ ೪ಕ್ಕಿಂತಲೂ ಕಡಿಮೆಯಿತ್ತು. ಇದು ೮೦ರ ದಶಕದಲ್ಲಿ ಮತ್ತು ೯೦ರ ದಶಕದಲ್ಲಿ ಒಂದೇ ಸಮನಾಗಿ ಶೇ. ೫.೬ರಷ್ಟಿತ್ತು. ಆದರೆ ಇತ್ತೀಚಿನ ವರ್ಷಗಳಲ್ಲಿ ಕೈಗಾರಿಕಾ ಮತ್ತು ಸೇವಾ ವಲಯಗಳ ಬೆಳವಣಿಗೆ ದರವು ಕೃಷಿ ಮತ್ತು ಸಂಬಂಧಿ ವಲಯಗಳ ಬೆಳವಣಿಗೆ ದರಕ್ಕಿಂತಲೂ ಸ್ಪಷ್ಟವಾಗಿದೆ.

ಕೋಷ್ಟಕ ೧.೧. ಭಾರತದಲ್ಲಿ ವಿವಿಧ ಆರ್ಥಿಕ ಯೋಜನೆಗಳಲ್ಲಿ ಉತ್ಪಾದನಾಂಗ ವೆಚ್ಚದಲ್ಲಿ ನಿವ್ವಳ ರಾಷ್ಟ್ರೀಯ ಉತ್ಪನ್ನದ ವಾರ್ಷಿಕ ಬೆಳವಣಿಗೆ (ಪ್ರತಿಶತ ಪ್ರಮಾಣ)

| ಆರ್ಥಿಕ ಯೋಜನೆಗಳು | ವರ್ಷ | ಬೆಳವಣಿಗೆ ದರ ಚಾಲ್ತಿ ಬೆಲೆಗಳಲ್ಲಿ | ೧೯೯೩-೯೪ರ ಬೆಲೆಗಳಲ್ಲಿ |
|---|---|---|---|
| ಪ್ರಥಮ ಯೋಜನೆ | ೧೯೫೧-೫೬ | ೧.೫ | ೩.೬ |
| ಎರಡನೇ ಯೋಜನೆ | ೧೯೫೬-೬೧ | ೯.೪ | ೪.೧ |
| ಮೂರನೇ ಯೋಜನೆ | ೧೯೬೧-೬೬ | ೯.೫ | ೨.೫ |
| ವಾರ್ಷಿಕ ಯೋಜನೆ | ೧೯೬೬-೬೯ | ೧೨.೨ | ೩.೮ |
| ನಾಲ್ಕನೇ ಯೋಜನೆ | ೧೯೬೯-೭೪ | ೧೧.೦ | ೩.೩ |
| ಐದನೇ ಯೋಜನೆ | ೧೯೭೪-೭೮ | ೧೦.೪ | ೫.೦ |
| ವಾರ್ಷಿಕ ಯೋಜನೆ | ೧೯೭೪-೭೮ | ೮.೩ | ೬.೦ |
| ಆರನೇ ಯೋಜನೆ | ೧೯೮೦-೮೫ | ೧೫.೧ | ೫.೪ |
| ಏಳನೇ ಯೋಜನೆ | ೧೯೮೫-೯೦ | ೧೪.೨ | ೫.೮ |
| ವಾರ್ಷಿಕ ಯೋಜನೆ | ೧೯೯೦-೯೨ | ೧೫.೫ | ೩.೦ |
| ಎಂಟನೇ ಯೋಜನೆ | ೧೯೯೨-೯೭ | ೧೬.೩ | ೬.೭ |
| ಒಂಬತ್ತನೇ ಯೋಜನೆ | ೧೯೯೭-೦೨ | ೧೧.೧ | ೫.೫ |

ಆಧಾರ : ಆರ್ಥಿಕ ಸಮೀಕ್ಷೆ, ೨೦೦೪-೦೫

ಕೋಷ್ಟಕ ೧.೧.ರಲ್ಲಿ ವ್ಯಕ್ತವಾಗುವಂತೆ, ಭಾರತದ ವಿವಿಧ ಆರ್ಥಿಕ ಯೋಜನೆಗಳಲ್ಲಿ ನಿವ್ವಳ ರಾಷ್ಟ್ರೀಯ ಉತ್ಪನ್ನದ ಬೆಳವಣಿಗೆ ಏರಿಳಿತಗಳನ್ನು ತೋರಿಸುತ್ತದೆ. ಮೊದಲನೇ

ಆರ್ಥಿಕ ಯೋಜನೆಯಲ್ಲಿ ಶೇಕಡ ೩.೬ ಮತ್ತು ಎರಡನೇ ಯೋಜನೆಯಲ್ಲಿ ಶೇಕಡ ೪.೧ ಇದ್ದು ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ ಶೇಕಡ ೩ಕ್ಕಿಂತ ಕೆಳಗಿಳಿಯಿತು. ನಾಲ್ಕನೇ ಯೋಜನೆಯಲ್ಲಿ ಶೇಕಡ ೩ಕ್ಕಿಂತ ಕೆಳಗಿಳಿಯಿತು. ನಾಲ್ಕನೇ ಯೋಜನೆಯಲ್ಲಿ ಶೇಕಡ ೫ಕ್ಕಿಂತಲೂ ಹೆಚ್ಚಾಯಿತು. ೧೯೭೯-೮೦ ರಲ್ಲಿ ರಾಷ್ಟ್ರೀಯ ವರಮಾನವು ಹೆಚ್ಚಾಗುವುದರ ಬದಲು ಇಳಿಯಿತು. ಭಾರತದ ಸ್ವಾತಂತ್ರ್ಯಕ್ಕಿಂತ ಮೊದಲು, ಭಾರತದ ರಾಷ್ಟ್ರೀಯ ವರಮಾನದ ಬೆಳವಣಿಗೆಯ ದರವು ಬಹಳ ಕಡಿಮೆ ಅಂದರೆ ವರ್ಷಕ್ಕೆ ಪ್ರತಿಶತ ಕೇವಲ ೦.೫ರಷ್ಟಿತ್ತು. ಆದರೆ ಭಾರತದ ಆರ್ದಿಕ ಯೊಜನೆಗಳ ಅವದಿಯಲ್ಲಿ ಅಂದರೆ ೧೯೫೦-೫೧ರ ನಂತರ ಅದು ಏರುಮುಖಿಯಿದ್ದರೂ, ಯೋಜಿತ ಗುರಿಗಿಂತಲೂ ಕಡಿಮೆ ಇರುತ್ತದೆ.

ಭಾರತದ ಆರ್ಥಿಕ ಸುಧಾರಣೆಗಳ ಕಾಲದಲ್ಲಿ ಚೇತರಿಕೆ ಕಾಣಿಸಿಕೊಂಡಿತು. (೧೯೯೨-೯೩, ೧೯೯೬-೯೭). ಈ ಅವಧಿಯಲ್ಲಿ ಒಟ್ಟು ದೇಶೀಯ ಉತ್ಪನ್ನದ ಬೆಳವಣಿಗೆ ಶೇಕಡ ೫.೫ರಷ್ಟಾಯಿತು. ಅತ್ಯಂತ ಬಿಕ್ಕಟ್ಟಿನ ವರ್ಷವೇ ಎಂದು ಪರಿಗಣಿಸಲಾಗಿರುವ ೧೯೯೧-೯೨ರಲ್ಲಿ ಇದು ಶೇಕಡ ೧.೩ಕ್ಕೆ ಇಳಿಯಿತು. ಆರ್ಥಿಕ ಸುಧಾರಣೆಗಳ ಮೊದಲ ಹಂತದ ಎರಡನೇ ಬೆಳವಣಿಗೆ ದರವು ಶೇಕಡ ೭.೫ಕ್ಕೆ ಏರಿಕೆಯಾಯಿತು. ಆರ್ಥಿಕ ಸುಧಾರಣೆಗಳ ಮೊದಲನೆಯ ಹಂತದ ಎರಡನೇ ಉಪಕಾಲ ಅಂದರೆ ೧೯೯೪ ರಿಂದ ೧೯೯೬-೯೭ ರವರೆಗೆ ಒಟ್ಟು ದೇಶೀಯ ಉತ್ಪನ್ನದ ಬೆಳವಣಿಗೆ ದರವು ಶೇಕಡ ೭.೫ಕ್ಕೆ ಏರಿಕೆಯಾಯಿತು. ಆರ್ಥಿಕ ಸುಧಾರಣೆಗಳ ಪರಿಣಾಮವಾಗಿ ಭಾರತದ ಆರ್ಥಿಕ ಇತಿಹಾಸದಲ್ಲಿ ಒಟ್ಟು ದೇಶೀಯ ಉತ್ಪನ್ನದ ವಾರ್ಷಿಕ ಬೆಳವಣಗೆ ದರವು ಏಕಪ್ರಕಾರವಾಗಿ ಶೇಕಡ ೭ಕ್ಕಿಂತಲೂ ಅಧಿಕ ವಾಗಿದ್ದಿತು. ಆದರೆ ಆರ್ಥಿಕ ಸುಧಾರಣೆಗಳ ಎರಡನೇ ಹಂತ ೧೯೯೭-೯೮ರಿಂದ ೨೦೦೨-೦೩ರವರೆಗೆ ಒಟ್ಟು ದೇಶೀಯ ಉತ್ಪನ್ನ ಬೆಳವಣಿಗೆಯ ದರವು ವಾರ್ಷಿಕ ಶೇಕಡ ೫ರಷ್ಟು ಮಾತ್ರ ಇತ್ತು.

ಭಾರತದ ರಾಷ್ಟ್ರೀಯ ಆದಾಯವು ೧೯೫೦ ರಿಂದ ಏರುಮುಖವನ್ನು ತೋರಿಸಿದೆ. ಆದರೆ ಈ ಏರಿಕೆ ಒಂದೇ ಸಮನಾಗಿರುವುದಿಲ್ಲ. ಅದರ ಬೆಳವಣಿಗೆಯ ದರಗಳಲ್ಲಿ ಬಹಳಷ್ಟು ಏರಿಕೆ ಮತ್ತು ಇಳಿಕೆಯನ್ನು ಕಾಣಬಹುದು. ನಮ್ಮ ದೇಶದ ಆರ್ಥಿಕ ಪರಿಸ್ಥಿತಿಯನ್ನು ಗಮನಿಸಿದರೆ, ರಾಷ್ಟ್ರೀಯ ವರಮಾನದ ಬೆಳವಣಿಗೆ ಬಹಳವೇ ಕಡಿಮೆ ಎನಿಸಿದೆ. ನಮ್ಮ ಅವಶ್ಯಕತೆಗಳಿಗೆ ಅದರ ಬೆಳವಣಿಗೆಯ ದರ ತುಂಬಾ ಕಡಿಮೆಯೇ ಆಗಿದೆ ಎನ್ನಬಹುದು. ನಮ್ಮ ರಾಷ್ಟ್ರೀಯ ವರಮಾನದ ಬೆಳವಣಿಗೆಯ ಜೊತೆಗೆ ಬೇರೆ ರಾಷ್ಟ್ರಗಳ ರಾಷ್ಟ್ರೀಯ ವರಮಾನದ ಬೆಳವಣಿಗೆಯನ್ನು ಹೋಲಿಸಿದರೆ ನಮ್ಮದು ಬಹಳವೇ ಕಡಿಮೆ ಇದೆ. ಕಳೆದ ೫ ದಶಕಗಳಲ್ಲಿ ರಾಷ್ಟ್ರೀಯ ವರಮಾನದ ವಾರ್ಷಿಕ ಏರಿಕೆಯ ದರವು ಕೇವಲ ಪ್ರತಿಶತ ೪ರಷ್ಟಿದೆ. ಆದರೆ ಯೋಜನೆಗಳ ಗುರಿ ಪ್ರತಿಶತ ೫ರಷ್ಟಿದೆ.

ಕೋಷ್ಟಕ ೧.೨

ಉತ್ಪಾದನಾಂಗ ಬೆಲೆಯಲ್ಲಿ ಒಟ್ಟು ದೇಶೀಯ ಉತ್ಪನ್ನದ ಪ್ರವೃತ್ತಿ

| ಅವಧಿ ವರ್ಷಗಳು | ಚಾಲ್ತಿ ಬೆಲೆಗಳಲ್ಲಿ | ಸ್ಥಿರ ಬೆಲೆಗಳಲ್ಲಿ ೧೯೯೩-೯೪ರ ಬೆಲೆಗಳು |
|---|---|---|
| ೧೯೫೦-೫೧ | ೯,೫೪೭ | ೧,೪೦,೪೫೬೬ |
| ೧೯೬೦-೬೧ | ೧೬,೨೨೦ | ೨,೦೬,೧೦೩ |
| ೧೯೭೦-೭೧ | ೪೨,೨೨೨ | ೨,೯೬,೨೭೮ |
| ೧೯೮೦-೮೧ | ೧,೩೦,೧೭೬ | ೪,೦೧,೧೨೮ |
| ೧೯೯೦-೯೧ | ೫,೧೦,೯೫೪ | ೬,೯೨,೮೭೧ |
| ೨೦೦೦-೦೧ | ೧೯,೦೨,೯೯೯ | ೧೧,೯೮,೫೯೨ |
| ೨೦೦೧-೦೨ | ೨೦,೮೧,೪೭೪ | ೧೨,೬೭,೯೪೫ |
| ೨೦೦೨-೦೩ | ೨೨,೫೪,೮೮೮ | ೧೩,೧೮,೩೬೨ |
| ೨೦೦೩-೦೪ | ೨೫,೧೯,೭೮೫ | ೧೪,೩೦,೫೪೮ |

ಆಧಾರ : ಆರ್ಥಿಕ ಸಮೀಕ್ಷೆ ೨೦೦೪-೦೫

ಒಟ್ಟು ದೇಶೀಯ ಉತ್ಪನ್ನದಲ್ಲಿನ ಪ್ರವೃತ್ತಿಯನ್ನು ಉತ್ಪಾದನಾಂಗ ಬೆಲೆಯಲ್ಲಿ ೧೯೫೦-೫೧ ಅಂಚಿನ ಪ್ರಮುಖ ಬೆಳವಣಿಗೆಗಳನ್ನು ಚಾಲ್ತಿ ಬೆಲೆಗಳಲ್ಲಿ ಮತ್ತು ೧೯೯೩-೯೪ರ ಸ್ಥಿರ ಬೆಲೆಗಳಲ್ಲಿ ಅವ್ಯಕ್ತಗೊಳಿಸಲಾಗಿದೆ.

**ಆ. ಒಟ್ಟು ದೇಶೀಯ ಉತ್ಪನ್ನದಲ್ಲಿ ವಿವಿಧ ವಲಯಗಳ ಪಾಲು ಮತ್ತು ಸಂಯೋಜನೆ**

ರಾಷ್ಟ್ರೀಯ ಆದಾಯದಲ್ಲಿ ವಿವಿಧ ವಲಯಗಳು ತಮ್ಮದೇ ಆದ ಕೊಡುಗೆಗಳು ಮಹತ್ತರ ಬೆಳವಣಿಗೆಗೆ ಕಾರಣಗಳಾಗಿವೆ. ಒಟ್ಟು ದೇಶೀಯ ಉತ್ಪನ್ನದ ವಲಯವಾರು ಬೆಳವಣಿಗೆ ಮತ್ತು ಸಂಯೋಜನೆಯು ರಾಷ್ಟ್ರೀಯ ಆದಾಯವು ವಿವಿಧ ವಲಯಗಳ ನಡುವೆ ಹಂಚಿಕೆಯಾದ ವಿವರಗಳನ್ನು ನೀಡುತ್ತದೆ. ನಮ್ಮ ದೇಶದ ವಿವಿಧ ವಲಯಗಳಲ್ಲಿ ಕೃಷಿ ವಲಯವು ಪ್ರಧಾನವಾಗಿದ್ದು ಅದು ನಿವ್ವಳ ದೇಶೀಯ ಉತ್ಪನ್ನದ ಒಂದು ಪ್ರಧಾನ ಮೂಲವಾಗಿದೆ. ಸ್ವಾತಂತ್ರ್ಯದ ಪೂರ್ವದಲ್ಲಿ ಅದರ ಕೊಡುಗೆ ಶೇಕಡ ೭೫ ಆಗಿದ್ದಿತು. ಇದು ಸ್ವಾತಂತ್ರ್ಯದ ವೇಳೆಯಲ್ಲಿ ಶೇಕಡ ೫೫ಕ್ಕೆ ಇಳಿಯಿತು. ವಿವಿಧ ವಲಯಗಳ ಕೊಡುಗೆಗಳ ಪ್ರಮಾಣಗಳ ಬದಲಾವಣೆ ಆರ್ಥಿಕ ಅಭಿವೃದ್ಧಿಯ ಸಂಕೇತವಾಗಿ ಪರಿಣಮಿಸಿದೆ.

## ಪಟ್ಟಿ ೧.೩ ವಿವಿಧ ವಲಯಗಳ ಸರಾಸರಿ ಪಾಲು ಮತ್ತು ಬೆಳವಣಿಗೆ ದರ

| ವಿವಿಧ ಅವಧಿ | ಪ್ರಾಥಮಿಕ ವಲಯ ಒಟ್ಟು ದೇಶೀಯ ಉತ್ಪನ್ನದಲ್ಲಿ ಪಾಲು | ಬೆಳವಣಿಗೆ ದರ | ಮಾಧ್ಯಮಿಕ ವಲಯ ಒಟ್ಟು ದೇಶೀಯ ಉತ್ಪನ್ನದಲ್ಲಿ ಪಾಲು | ಬೆಳವಣಿಗೆ ದರ | ತೃತೀಯ ವಲಯ ಒಟ್ಟು ದೇಶೀಯ ಉತ್ಪನ್ನದಲ್ಲಿ ಪಾಲು | ಬೆಳವಣಿಗೆ ದರ |
|---|---|---|---|---|---|---|
| ೧೯೫೦-೬೦ | ೫೬.೦ | ೨.೩ | ೧೬.೦ | ೫.೭ | ೨೮.೨ | ೪.೧ |
| ೧೯೬೦-೭೦ | ೪೭.೮ | ೨.೫ | ೨೧.೧ | ೬.೫ | ೩೧.೪ | ೪.೯ |
| ೧೯೭೦-೮೦ | ೪೨.೮ | ೧.೩ | ೨೨.೮ | ೩.೭ | ೩೪.೪ | ೪.೫ |
| ೧೯೮೦-೯೦ | ೩೬.೪ | ೪.೪ | ೨೫.೦ | ೬.೮ | ೩೮.೬ | ೬.೬ |
| ೧೯೯೦-೨೦೦೦ | ೨೮.೬ | ೨.೯ | ೨೭.೧ | ೫.೯ | ೪೪.೩ | ೪.೬ |
| ೧೯೯೯-೨೦೦೦ | ೨೫.೨ | ೦.೨ | ೨೨.೧ | ೬.೨ | ೫೩.೭ | ೫.೦ |
| ೨೦೦೧-೨೦೦೨ | ೨೪.೩ | ೫.೭ | ೨೧.೬ | ೩.೩ | ೫೪.೧ | ೬.೨ |

ಆಧಾರ : ನ್ಯಾಷನಲ್ ಅಕೌಂಟ್ಸ್ ಸ್ಟಾಟಿಸ್ಟಿಕ್ಸ್ ಆಫ್ ಇಂಡಿಯಾ.

ಪ್ರಾಥಮಿಕ ವಲಯದಲ್ಲಿ ಕೃಷಿ, ಮೀನುಗಾರಿಕೆ ಮತ್ತು ಅರಣ್ಯಗಳು ಇದ್ದು ಅದರ ಪಾಲು ಒಟ್ಟು ದೇಶೀಯ ಉತ್ಪನ್ನದಲ್ಲಿ ೧೯೫೦ರ ದಶಕದಲ್ಲಿ ಶೇಕಡ ೫೬ ರಿಂದ ೧೯೯೦ರ ದಶಕದ ವೇಳೆಗೆ ಶೇಕಡ ೨೮.೬ಕ್ಕೆ ಇಳಿಯಿತು. ಪ್ರಾಥಮಿಕ ರಂಗದಲ್ಲಿ ಕೃಷಿ ವಲಯದ ಪ್ರತಿತಶ ಪ್ರಮಾಣವೇ ಅತ್ಯಧಿಕವಾಗಿದೆ. ಕೃಷಿ ವಲಯದ ಕೊಡುಗೆಯು ೧೯೫೦-೫೧ರಲ್ಲಿ ಶೇಕಡ ೫೦.೨ ಇತ್ತು. ಇದು ೧೯೯೯-೨೦೦೦ದ ಅವಧಿಯಲ್ಲಿ ಶೇಕಡ ೨೩.೨ ಮತ್ತು ೨೦೦೧-೦೨ರ ಸಮಯದಲ್ಲಿ ಶೇ.೨೩.೪ರಷ್ಟಾಯಿತು. ೨೦೦೩-೦೪ರಲ್ಲಿ ಕೃಷಿಯ ಕೊಡುಗೆ ಶೇಕಡ ೩.೦ ಇದ್ದು ಇತರ ವಲಯಗಳಾದ ಮೀನುಗಾರಿಕೆ ಮತ್ತು ಅರಣ್ಯಗಳ ಒಟ್ಟು ಕೊಡುಗೆಯ ಪ್ರಮಾಣದಲ್ಲಿ ವಿಶೇಷ ಬದಲಾವಣೆಯಾಗಿದೆ. ಅರಣ್ಯದ ಒಟ್ಟು ಕೊಡುಗೆಯು ಶೇಕಡ ೫ ರಿಂದ ಶೇಕಡ ೧.೧ಕ್ಕೆ ಇಳಿದಿದೆ. ಆದರೆ ಮೀನುಗಾರಿಕೆಯ ಕೊಡುಗೆಯು ಈ ಅವಧಿಯಲ್ಲಿ ತುಸು ಹೆಚ್ಚಾಗಿದೆ.

ಮಾಧ್ಯಮಿಕ ವಲಯ ಅಥವಾ ದ್ವಿತೀಯ ವಲಯದಲ್ಲಿ ಗಣಿ ಮತ್ತು ಎಲ್ಲಾ ಕೈಗಾರಿಕೆಗಳು, ನಿರ್ಮಾಣ, ವಿದ್ಯುತ್, ಅನಿಲ ಮತ್ತು ನೀರು ಪೂರೈಕೆ ಸೇರಿರುತ್ತದೆ. ರಾಷ್ಟ್ರೀಯ ವರಮಾನಕ್ಕೆ ಈ ವಲಯದ ಕೊಡುಗೆಯು ಕ್ರಮೇಣ ಅಧಿಕವಾಗುತ್ತಿರುವುದು ಮೇಲಿನ ಕೋಷ್ಟಕದಿಂದ ತಿಳಿಯುತ್ತದೆ. ದ್ವಿತೀಯ ವಲಯದ ೧೯೫೦ರ ದಶಕದ ಶೇಕಡ ೧೬.೦ ರಿಂದ ೧೯೯೦ರ ದಶಕದಲ್ಲಿ ಶೇಕಡ ೨೭.೧ಕ್ಕೆ ಹೆಚ್ಚಿತು. ಇದರಿಂದ ಭಾರತದಲ್ಲಿ ಕೈಗಾರಿಕೆಗಳು ಹೆಚ್ಚು ಅಭಿವೃದ್ಧಿಯಾಗುತ್ತಾ ಇವೆಯೆಂಬುದು ತಿಳಿಯುತ್ತದೆ. ವಸ್ತುಗಳನ್ನು ತಯಾರಿಸುವ ಕೈಗಾರಿಕೆಗಳ ಕೊಡುಗೆಯ ಪ್ರಮಾಣವು, ಅಭಿವೃದ್ಧಿ ಕಾರ್ಯ, ನಿರ್ಮಾಣ ಕಾರ್ಯ, ಮತ್ತು ವಿದ್ಯುಚ್ಛಕ್ತಿ, ಅನಿಲ ಮತ್ತು ನೀರಿನ ಪೂರೈಕೆಯ ಪ್ರಮಾಣವು ಹೆಚ್ಚಾಗಿದೆ. ಆದರೆ ೨೦೦೧-೦೨ರಲ್ಲಿ ಶೇಕಡ ೧೧.೦೪ರಷ್ಟು ಮತ್ತು ೧೯೯೯-೨೦೦೦ರಲ್ಲಿ ಶೇಕಡ ೧೭.೧ರಷ್ಟು ಕೊಡುಗೆ ಸಲ್ಲಿಸಿದ್ದು ೨೦೦೧-೦೨ರಲ್ಲಿ ಕೈಗಾರಿಕೆಗಳ ಕೊಡುಗೆ ಶೇಕಡ ೧೪.೬ಕ್ಕೆ ಕುಸಿಯಿತು. ಇನ್ನೊಂದು ಪ್ರಮುಖ ಎನಿಸಿದ ಕಟ್ಟಡ ನಿರ್ಮಾಣ ವಲಯದ ಪಾಲು ೧೯೫೦-೫೧ರಲ್ಲಿ ೩.೩ ಇದ್ದದ್ದು ೧೯೯೯-೨೦೦೦ದಲ್ಲಿ ಶೇಕಡ ೫.೧ಕ್ಕೆ ಏರಿತು. ಆದರೆ ವಿದ್ಯುಚ್ಛಕ್ತಿ, ಅನಿಲ ಮತ್ತು ನೀರಿನ ಪೂರೈಕೆಗಳ ಕೊಡುಗೆಯ ಪ್ರಮಾಣವು ಇದೇ ಅವಧಿಯಲ್ಲಿ ಶೇಕಡ ೦.೩ ರಿಂದ ಶೇಕಡ ೨.೫ಕ್ಕೆ ಹೆಚ್ಚಳವಾಯಿತು.

ತೃತೀಯ ವಲಯದಲ್ಲಿ ವ್ಯಾಪಾರ, ಸಾರಿಗೆ, ಸಂಪರ್ಕ, ಬ್ಯಾಂಕಿಂಗ್, ವಿಮೆ, ರಿಯಲ್ ಎಸ್ಟೇಟ್, ದಾಸ್ತಾನುಗಾರಿಕೆ, ಸಾಮುದಾಯಿಕ ಮತ್ತು ವೈಯಕ್ತಿಕ ಸೇವೆಗಳು, ಆಸ್ತಿ ಪಾಸ್ತಿಗಳು ಸೇರಿರುತ್ತವೆ. ಈ ವಲಯದ ಕೊಡುಗೆಯು ಸಾಕಷ್ಟು ಪ್ರಮಾಣದಲ್ಲಿ ಅಧಿಕದಾಗಿದೆ. ೧೯೫೦ರ ದಶಕದಲ್ಲಿ ಶೇಕಡ ೨೮.೨ ಇದ್ದದ್ದು ೧೯೯೦ರ ದಶಕದಲ್ಲಿ ಶೇಕಡ ೪೪.೩ಕ್ಕೆ ಹಾಗೂ ೨೦೦೧-೦೨ರ ದಶಕದಲ್ಲಿ ಶೇಕಡ ೫೪.೩ಕ್ಕೆ ಏರಿತು. ತೃತೀಯ ರಂಗದ ಹಲಾವರು ವಲಯಗಳಲ್ಲಿ ವ್ಯಾಪಾರ, ಸಾರಿಗೆ ಮೊದಲಾದವುಗಳ ಕೊಡುಗೆಯ ಪ್ರಮಾಣದಲ್ಲಿ ಬಹಳಷ್ಟು ಅಧಿಕವಾಗಿದೆ. ಅದರಂತೆ ಹಣಕಾಸು ಮತ್ತು ಆಸ್ತಿಗಳ ಕೊಡುಗೆಯ

ಪ್ರಮಾಣದಲ್ಲಿಯೂ ಹೆಚ್ಚಳವಾಗಿದೆ. ಆದರೆ ಸಾಮಾಜಿಕ ಮತ್ತು ವೈಯಕ್ತಿಕ ಸೇವೆಗಳ ಕೊಡುಗೆಯ ಪ್ರಮಾಣದಲ್ಲಿ ಸಾಕಷ್ಟು ಹೆಚ್ಚಳವಾಗಿರುವುದಿಲ್ಲ. ತೃತೀಯ ವಲಯದ ಸಾರಿಗೆ, ವ್ಯಾಪಾರ ಮತ್ತು ಸಂಪರ್ಕ ವ್ಯವಸ್ಥೆಯ ಕೊಡುಗೆಯು ೧೯೫೦ರ ದಶಕದಲ್ಲಿ ಶೇಕಡ ೨೪.೨ಕ್ಕೆ ಹೆಚ್ಚಾಯಿತು. ಅದೇ ತರಹ ಸಾಮೂದಾಯಿಕ ಮತ್ತು ವೈಯಕ್ತಿಕ ಸೇವೆಗಳ ಕೊಡುಗೆಯು ೧೯೫೦ರ ದಶಕದಲ್ಲಿ ಶೇಕಡ ೯.೪ ರಿಂದ ೧೯೯೦-೨೦೦೦ ದಲ್ಲಿ ಶೇಕಡ ೧೩.೨ಕ್ಕೆ ಏರಿತು. ಇತ್ತೀಚಿನ ದಿನಗಳಲ್ಲಿ ಒಟ್ಟು ದೇಶೀಯ ಉತ್ಪನ್ನದಲ್ಲಿ ಸೇವಾ ವಲಯದ ಪ್ರಾಮುಖ್ಯತೆ ಹೆಚ್ಚಾಗುತ್ತಿದೆ. ೧೯೯೧ರಲ್ಲಿ ಪ್ರಾರಂಭವಾದ ಆರ್ಥಿಕ ಸುಧಾರಣಾ ಯೋಜನೆಗಳು ಸೇವೆಗಳ ಅಭಿವೃದ್ಧಿಗೆ ಸಾಕಷ್ಟು ಕೊಡುಗೆಗಳನ್ನು ಸಲ್ಲಿಸಿವೆ.

### ೨. ತಲಾದಾಯದ ಬೆಳವಣಿಗೆ

ಭಾರತದಲ್ಲಿ ರಾಷ್ಟ್ರೀಯ ಆದಾಯ ಮತ್ತು ತಲಾ ಆದಾಯಗಳು ಬಹಳ ನಿಧಾನಗತಿಯಲ್ಲಿ ಏರುತ್ತಿರುವುದರಿಂದ ಭಾರತದ ಅರ್ಥವ್ಯವಸ್ಥೆಯ ಮೇಲೆ ಪ್ರತಿಕೂಲ ವಾತಾವರಣವನ್ನು ಉಂಟು ಮಾಡಿದೆ. ಜನಸಂಖ್ಯಾ ಸ್ಫೋಟ, ಕೃಷಿ ಮೇಲೆ ಅತಿಯಾದ ಅವಲಂಬನೆ, ತಂತ್ರಜ್ಞಾನದ ಕೊರತೆ, ಉಳಿತಾಯ ಮತ್ತು ಹೂಡಿಕೆಯಲ್ಲಿ ಹಿನ್ನೆಡೆ, ಕೈಗಾರಿಕಾ ಅಭಿವೃದ್ಧಿಯಲ್ಲಿ ಹಿಂದುಳಿದಿರುವಿಕೆ, ಮೂಲ ಸೌಕರ್ಯಗಳ ಕೊರತೆ ಇವುಗಳು ಭಾರತದಲ್ಲಿ ತಲಾ ಆದಾಯದ ನಿಧಾನಗತಿಯ ಬೆಳವಣಿಗೆಗೆ ಕಾರಣಗಳಾಗಿವೆ. ಈ ಕೆಳಗೆ ನೀಡಿರುವ ಪಟ್ಟಿಯಲ್ಲಿ ಭಾರತದಲ್ಲಿ ವಿವಿಧ ಪಂಚವಾರ್ಷಿಕ ಯೋಜನೆಗಳಲ್ಲಿ ತಲಾ ಆದಾಯದ ಪ್ರಮುಖ ಬೆಳವಣಿಗೆಗಳನ್ನು ನೀಡಲಾಗಿದೆ.

**ಕೋಷ್ಟಕ ೧.೪**

**ಭಾರತದಲ್ಲಿ ವಿವಿಧ ಆರ್ಥಿಕ ಯೋಜನೆಗಳಲ್ಲಿ ತಲಾದಾಯದ ಬೆಳವಣಿಗೆಯ ಒಂದು ಪ್ರವೃತ್ತಿ**

| ಆರ್ಥಿಕ ಯೋಜನೆಗಳು | ತಲಾ ಆದಾಯ ರೂ.ಗಳಲ್ಲಿ | | ವಾರ್ಷಿಕ ಸರಾಸರಿ ಬೆಳವಣಿಗೆ | |
|---|---|---|---|---|
| | ಚಾಲ್ತಿ ಬೆಲೆ | ೧೯೯೩-೯೪ರ ಬೆಲೆ | ಚಾಲ್ತಿ ಬೆಲೆ | ೧೯೯೩೯೪ರ ಬೆಲೆ |
| ಪ್ರಥಮ ಯೋಜನೆ | | | | |
| ೧೯೫೧-೫೨ | ೨೬೩.೯ | ೩,೭೧೩.೭ | ೦.೩ | ೧.೮ |
| ೧೯೫೫-೫೬ | ೨೪೮.೮ | ೪,೦೨೦.೪ | | |
| ಎರಡನೇ ಯೋಜನೆ | | | | |
| ೧೯೫೬-೫೭ | ೨೯೧.೯ | ೪,೧೫೯.೪ | ೭.೩ | ೨.೦ |
| ೧೯೬೦-೬೧ | ೩೫೦.೩ | ೪,೪೨೯.೪ | | |

| | | | | |
|---|---|---|---|---|
| **ಮೂರನೇ ಯೋಜನೆ** | | | | |
| ೧೯೬೧-೬೨ | ೩೫೯.೫ | ೪,೪೪೮.೫ | ೭.೧ | ೦.೨ |
| ೧೯೬೫-೬೬ | ೪೮೯.೭ | ೪,೪೫೮.೬ | | |
| **ನಾಲ್ಕನೇ ಯೋಜನೆ** | | | | |
| ೧೯೬೯-೭೦ | ೬೯೪.೬ | ೪,೮೬೫.೦ | ೮.೫ | ೧.೦ |
| ೧೯೭೩-೭೪ | ೯೬೩.೭ | ೪,೮೮೦.೪ | | |
| **ಐದನೇ ಯೋಜನೆ** | | | | |
| ೧೯೭೪-೭೫ | ೧,೧೦೩.೪ | ೪,೮೩೦.೦ | ೭.೯ | ೨.೭ |
| ೧೯೭೭-೭೮ | ೧,೩೪೩.೧ | ೫,೩೭೪.೬ | | |
| **ಆರನೇ ಯೋಜನೆ** | | | | |
| ೧೯೮೦-೮೧ | ೧,೭೪೧.೩ | ೫,೩೫೨.೨ | ೧೨.೭ | ೩.೨ |
| ೧೯೮೪-೮೫ | ೨,೬೯೦.೦ | ೫,೯೫೫.೬ | | |
| **ಏಳನೇ ಯೋಜನೆ** | | | | |
| ೧೯೮೫-೮೬ | ೨,೯೩೨.೫ | ೬,೦೮೧.೯ | ೧೧.೮ | ೩.೬ |
| ೧೯೮೯-೯೦ | ೪,೬೯೨.೬ | ೭,೦೮೬.೬ | | |
| **ಎಂಟನೇ ಯೋಜನೆ** | | | | |
| ೧೯೯೨-೯೩ | ೬,೭೩೨.೪ | ೭,೪೩೩.೩ | ೧೪.೦ | ೪.೬ |
| ೧೯೯೬-೯೭ | ೧೧,೫೬೪.೧ | ೯,೦೦೭.೨ | | |
| **ಒಂಬತ್ತನೆ ಯೋಜನೆ** | | | | |
| ೧೯೯೭-೯೮ | ೧೨,೭೦೬.೯ | ೯,೨೪೩.೬ | ೯.೧ | ೩.೬ |
| ೨೦೦೧-೦೨ | ೧೭,೮೨೨.೮ | ೧೦,೭೫೩.೮ | | |
| ೨೦೦೨-೦೩ | ೧೯,೦೪೦.೫ | ೧೧,೦೧೩.೩ | ... | ... |
| ೨೦೦೪-೦೫ | ೨೦,೯೬೮.೫ | ೧೧,೭೯೮.೭ | ... | ... |

ಆಧಾರ : ಆರ್ಥಿಕ ಸಮೀಕ್ಷೆ ೨೦೦೪-೦೫

ಭಾರತದಲ್ಲಿ ತಲಾ ಆದಾಯದ ಬೆಳವಣಿಗೆಯು ತೀರಾ ನಿಧಾನಗತಿಯಲ್ಲಿ ಸಾಗಿ ಬಂದಿರುವುದನ್ನು ನಾವು ಕಾಣುತ್ತೇವೆ. ಪ್ರಥಮ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ೧೯೯೩-೯೪ರ ಬೆಲೆಗಳಲ್ಲಿನ ತಲಾ ಆದಾಯವು ೧೯೫೧-೫೨ರ ರೂ.೩೭೧೩.೭ ರಿಂದ ೧೯೫೫-೫೬ರ ಸಮಯದಲ್ಲಿ ರೂ.೪೦೨೦.೪ಕ್ಕೆ ಏರಿತು. ಈ ಅವಧಿಯಲ್ಲಿ ತಲಾ ಆದಾಯದ ಬೆಳವಣಿಗೆ ದರವು ಕೇವಲ ಶೇಕಡ ೧.೮ ರಷ್ಟಿತ್ತು. ಎರಡನೆಯ ಯೋಜನೆಯಲ್ಲಿ ತಲಾ ಆದಾಯವು ೧೯೫೬-೫೭ರ ರೂ.೪೧೫೯.೪ ರಿಂದ ೧೯೬೦-೬೧ರ ರೂ.೪೪೨೯.೪ಕ್ಕೆ ಹೆಚ್ಚಿತು. ಈ ಸಮಯದಲ್ಲಿ ಸರಾಸರಿ ವಾರ್ಷಿಕ ಬೆಳವಣಿಗೆ ದರವು ಶೇಕಡ ೨.೦ ಆಯಿತು. ಮೂರನೇ ಆರ್ಥಿಕ ಯೋಜನೆಯಲ್ಲಿ ತಲಾ ಆದಾಯವು ೧೯೬೧-೬೨ರ ರೂ.೪೪೪೮.೫

ರಿಂದ ೧೯೬೫-೬೬ರ ವೇಳೆಗೆ ರೂ.೪೪೫೮.೬ಕ್ಕೆ ಹೆಚ್ಚಾಯಿತು. ಈ ಅವಧಿಯಲ್ಲಿ ಸರಾಸರಿ ವಾರ್ಷಿಕ ಬೆಳವಣಿಗೆ ದರವು ಕೇವಲ ಶೇಕಡ ೦.೨ ಆಗಿದ್ದಿತು. ನಾಲ್ಕನೇ ಪಂಚ ವಾರ್ಷಿಕ ಯೋಜನೆಯಲ್ಲಿ ತಲಾ ಆದಾಯವು ೧೯೬೯-೭೦ರ ರೂ.೪೮೬೫.೦ ರಿಂದ ೧೯೭೩-೭೪ರ ೪೮೮೦.೪ಕ್ಕೆ ಹೆಚ್ಚಿತು ಮತ್ತು ಈ ಸಮಯದಲ್ಲಿ ಸರಾಸರಿ ವಾರ್ಷಿಕ ಬೆಳವಣಿಗೆ ದರವು ಕೇವಲ ಶೇಕಡ ೧.೦ ಆಗಿದ್ದಿತು. ಐದನೇ ಯೋಜನೆಯಲ್ಲಿ ತಲಾ ಆದಾಯವು ೧೯೭೪-೭೫ರ ರೂ. ೪೮೩೦.೦೦ ರಿಂದ ೧೯೭೭-೭೮ರ ವೇಳೆಗೆ ರೂ. ೫೩೭ ೪.೬ಕ್ಕೆ ಹೆಚ್ಚಿತು ಮತ್ತು ಸರಾಸರಿ ವಾರ್ಷಿಕ ಬೆಳವಣಿಗೆ ದರ ಶೇಕಡ ೨.೭ ಆಗಿತ್ತು. ಆರನೇ ಯೋಜನೆಯಲ್ಲಿ ತಲಾ ಆದಾಯವು ೧೯೮೦-೮೧ರ ರೂ. ೫೩೫೨.೨ ರಿಂದ ೧೯೮೪-೮೫ರ ಸಮಯದಲ್ಲಿ ರೂ. ೫೯೫೫.೬ಕ್ಕೆ ಏರಿತು ಮತ್ತು ಸರಾಸರಿ ವಾರ್ಷಿಕ ಶೇಕಡ ೩.೨ರ ಬೆಳವಣಿಗೆ ದರವನ್ನು ಕಾಣಲಾಯಿತು. ಏಳನೇ ಯೋಜನೆಯಲ್ಲಿ ೧೯೮೫-೮೬ರ ರೂ. ೬೦೮೧.೯ ರಿಂದ ೧೯೮೯-೯೦ರ ರೂ. ೭೦೮೬.೬ ಗಳಿಗೆ ಏರಿ ವಾರ್ಷಿಕ ಸರಾಸರಿ ಶೇಕಡ ೩.೬ರ ಬೆಳವಣಿಗೆ ದರ ಸಾಧ್ಯವಾಯಿತು ಎಂಟನೇ ಯೋಜನೆಯಲ್ಲಿ ೧೯೯೨-೯೩ರ ರೂ. ೭೪೩೩.೩ ರಿಂದ ೧೯೯೬-೯೭ರ ಸಮಯದಲ್ಲಿ ರೂ. ೯೦೦೭.೨ಕ್ಕೆ ಹೆಚ್ಚಿ ಶೇ. ೪.೬ರ ಬೆಳವಣಿಗೆ ದರ ಸಾಧಿಸಲಾಯಿತು. ಒಂಬತ್ತನೇ ಯೋಜನೆಯಲ್ಲಿ ೧೯೯೭-೯೮ರ ರೂ. ೯೨೪೩.೬ ರಿಂದ ೨೦೦೧-೦೨ರ ವೇಳೆಗೆ ರೂ. ೧೦,೭೫೩.೮ ಗಳಿಗೆ ಏರುವ ಮೂಲಕ ವಾರ್ಷಿಕ ಸರಾಸರಿ ಶೇಕಡ ೩.೬ರ ಬೆಳವಣಿಗೆ ಸಾಧ್ಯವಾಯಿತು. ಇದು ೨೦೦೨-೦೩ರಲ್ಲಿ ರೂ. ೧೧,೦೧೩.೩ಕ್ಕೆ ಏರಿತು ಮತ್ತು ೨೦೦೪-೦೫ರ ಕ್ಷಿಪ್ರ ಎಣಿಕೆ ಪ್ರಕಾರ ರೂ. ೧೧,೭೯೮.೭ ಎಂದಾಯಿತು.

ಭಾರತದ ರಾಷ್ಟ್ರೀಯ ಆದಾಯ ಮತ್ತು ತಲಾ ಆದಾಯಗಳು ಬಹಳ ಮಂದಗತಿಯಿಂದ ಏರುತ್ತಿರುವುದರಿಂದ ಭಾರತದ ಅರ್ಥವ್ಯವಸ್ಥೆಯು ಬಹಳ ನಿಧಾನವಾಗಿ ಪ್ರಗತಿ ಹೊಂದುತ್ತಿದೆಯೆಂದು ಹೇಳಬಹುದು. ಯೋಜನೆಯ ೫೫ ವರ್ಷಗಳಲ್ಲಿ ತಲಾ ಆದಾಯವು ಏರಿಕೆಯನ್ನು ಸಾಬೀತುಪಡಿಸಿದೆ. ತಲಾ ಆದಾಯದ ಸಂಯುಕ್ತ ವಾರ್ಷಿಕ ಬೆಳವಣಿಗೆಯು ಕ್ರಮೇಣ ಏರುತ್ತಾ ಹೋಗಿದೆ. ತಲಾ ವರಮಾನದ ಏರಿಕೆಯು ೧೯೯೦-೯೧ರಿಂದ ೨೦೦೦-೦೧ರ ಅವಧಿಯಲ್ಲಿ ೩.೪ ರಷ್ಟಾಗಿದೆ. ಭಾರತದ ತಲಾ ಆದಾಯವು ಬಹಳ ಮಂದಗತಿಯಿಂದ ಸಾಗುತ್ತಿದೆ. ಯೋಜನೆಯ ಅವಧಿಯಲ್ಲಿ ಅದರ ಸಂಯುಕ್ತ ವಾರ್ಷಿಕ ಬೆಳವಣಿಗೆಯು ಯೋಜಿತ ಗುರಿಗಿಂತ ಯಾವಾಗಲೂ ಕಡಿಮೆ ಇರುವುದು. ೧೯೭೯-೮೦ರಲ್ಲಿ ಅದು ಋಣಾತ್ಮಕವೂ ಆಗಿತ್ತು. ಯೋಜನೆಯ ಮೊದಲಿನ ೪೦ ವರ್ಷಗಳ ಸಮಯದಲ್ಲಿ ತಲಾ ಆದಾಯದ ವಾರ್ಷಿಕ ಬೆಳವಣಿಗೆಯು ಯೋಜಿತ ಗುರಿ ಶೇಕಡ ೩.೩ ಇದ್ದರೆ ಸಾಧನೆಯು ಮಾತ್ರ ಕೇವಲ ಶೇಕಡ ೧.೨ ಆಗಿತ್ತು. ಭಾರತದಲ್ಲಿ ರಾಷ್ಟ್ರೀಯ ಮತ್ತು ತಲಾ ಆದಾಯದ ಅಲ್ಪ ಬೆಳವಣಿಗೆ ದರ ಅದರ ಆರ್ಥಿಕ ಹಿನ್ನಡೆತೆಗೆ ಕಾರಣವಾಗಿದೆ. ಅಲ್ಪ ರಾಷ್ಟ್ರೀಯ ಆದಾಯ ಮತ್ತು ತಲಾ ಆದಾಯ ಇವುಗಳ ಭಾರತದ ರಾಷ್ಟ್ರೀಯ ಆದಾಯದ ಒಂದು ಪ್ರಮುಖ ಲಕ್ಷಣವಾಗಿದೆ. ಒಂದು ವಿಪರ್ಯಾಸವೆಂದರೆ ನಮ್ಮ ದೇಶದ ಇವೆರಡರ

ಬೆಳವಣಿಗೆ ದರವು ಮುಂದುವರಿದ ದೇಶಗಳ ಬೆಳವಣಿಗೆ ದರಗಳೊಂದಿಗೆ ಯಾವುದೇ ರೀತಿಯಲ್ಲಿ ಹೋಲಿಕೆ ಮಾಡಲು ಅರ್ಹವಿಲ್ಲ.

## ೧.೪. ಆರ್ಥಿಕ ಸುಧಾರಣೆಗಳು - ಒಂದು ಪ್ರವೇಶ

ಅ. ಜುಲೈ ೧೯೯೧ರ ನಂತರ ರಾಷ್ಟ್ರೀಯ ಆರ್ಥಿಕ ಸುಧಾರಣೆಗಳು

ಭಾರತ ದೇಶವು ತೊಂಬತ್ತರ ದಶಕದ ಮೊದಲ ಭಾಗದಲ್ಲಿ ಪಾವತಿ ಶಿಲ್ಕಿನ ಗಂಭೀರ ಸ್ಥಿತಿಯ ಕಾರಣದಿಂದಾಗಿ ತೀವ್ರ ರೀತಿಯ ಆರ್ಥಿಕ ಬಿಕ್ಕಟ್ಟಿನಲ್ಲಿ ಸಿಲುಕಿಕೊಂಡಿತು. ೧೯೯೧ನೇ ಇಸ್ವಿಯ ಪ್ರಾರಂಭದಲ್ಲಿ ರಾಷ್ಟ್ರವು ಹಿಂದೆಂದೂ ಅನುಭವಿಸದ ಭಾರೀ ಆರ್ಥಿಕ ಮುಗ್ಗಟ್ಟನ್ನು ಎದುರಿಸಿತು. ಸ್ವಾತಂತ್ರ್ಯದ ನಂತರ ಭಾರತವು ಎಂದೂ ಈ ನೂತನ ಆರ್ಥಿಕ ನೀತಿಯ ವಿವಿಧ ಉದ್ದೇಶಗಳನ್ನು ಭಯಾನಕ ಹಣದುಬ್ಬರ ದರ, ತೈಲದ ಬೆಲೆ ಏರಿಕೆ, ಗಲ್ಫ್ ಯುದ್ಧ, ಆಂತರಿಕ ರಾಜಕೀಯ ಅನಿರ್ದಿಷ್ಟತೆ, ಅಂತರರಾಷ್ಟ್ರೀಯ ವಿಶ್ವಾಸಾರ್ಹತೆಯ ನಷ್ಟ, ಸೋವಿಯತ್ ರಷ್ಯಾದ ಪತನ ಮುಂತಾದ ಹಲವಾರು ಅಂಶಗಳು ಅಂತಹ ಗಂಭೀರ ಸ್ಥಿತಿಯ ನಿರ್ಮಾಣಕ್ಕೆ ಕಾರಣವಾದವು. ಆದರೆ ೧೯೯೧ರಲ್ಲಿ ಮೊಟ್ಟಮೊದಲ ಬಾರಿಗೆ ಭಾರತವು ತನ್ನ ಆರ್ಥಿಕ ನೀತಿಯಲ್ಲಿ ಮಾರ್ಪಾಟು ತರುವ ಐತಿಹಾಸಿಕ ನಿರ್ಣಯ ಕೈಗೊಂಡಿತು. ಈ ತರಹದ ಗಂಭೀರ ಸ್ವರೂಪದ ಬಿಕ್ಕಟ್ಟು ಭಾರತದ ಆರ್ಥಿಕ ಧೋರಣೆಯ ಪುನರ್‌ಪರಿಶೀಲನೆಗೆ ಒಂದು ಅವಕಾಶ ದೊರಕಿದಂತಾಯಿತು. ಈ ಒಂದು ಸಂದರ್ಭದಲ್ಲಿ ಅಂದಿನ ಪ್ರಧಾನಮಂತ್ರಿ ಶ್ರೀ.ಪಿ.ವಿ.ನರಸಿಂಹರಾವ್ ಮತ್ತು ಅವರ ಹಣಕಾಸು ಮಂತ್ರಿ ಡಾ.ಮನಮೋಹನ್ ಸಿಂಗ್ ಅವರು ವಿವಿಧ ಆರ್ಥಿಕ ಸುಧಾರಣೆಗಳನ್ನು ಪರಿಚಯಿಸಿದರು.

ಈ ಹೊಸ ಆರ್ಥಿಕ ನೀತಿಯು ಹಳೆಯ ಧೋರಣೆಗಳಿಂದ ಸ್ಪಷ್ಟವಾಗಿ ದೂರಸರಿದ ಕ್ರಮವಾಗಿದೆ. ಹೊಸ ಆರ್ಥಿಕ ನೀತಿಯು ನಿಯಂತ್ರಿತ ಮತ್ತು ಯೋಜಿತ ಆರ್ಥಿಕತೆಗೆ ಬದಲಾಗಿ ಮಾರುಕಟ್ಟೆ ಆಧಾರಿತ ಆರ್ಥಿಕತೆಗೆ ವಿಶೇಷ ಪ್ರಾಶಸ್ತ್ಯ ನೀಡಿದೆ. ನೂತನ ಆರ್ಥಿಕ ನೀತಿ ಅಥವಾ ಆರ್ಥಿಕ ಸುಧಾರಣೆಗಳು ದೇಶದ ಅರ್ಥವ್ಯವಸ್ಥೆಯನ್ನು ಉತ್ತಮ ಪಡಿಸುವ ಅಥವಾ ಸುಧಾರಿಸುವ ದೃಷ್ಟಿಯಿಂದ ಜಾರಿಗೊಳಿಸಲಾದ ಆರ್ಥಿಕ ಸುಧಾರಣಾಕ್ರಮಗಳಾಗಿವೆ. ಈ ನೂತನ ಆರ್ಥಿಕ ನೀತಿಯ ವಿವಿಧ ಉದ್ದೇಶಗಳನ್ನು ಈಡೇರಿಸುವ ದೃಷ್ಟಿಯಿಂದ ಕೈಗಾರಿಕಾ ನೀತಿ, ಹಣಕಾಸು ನೀತಿ, ಕೃಷಿ ನೀತಿ, ವ್ಯಾಪಾರ ನೀತಿ, ರಾಜ್ಯ ಕೋಶ ನೀತಿ, ತೆರಿಗೆ ನೀತಿ ಹೀಗೆ ಹಲವಾರು ಸುಧಾರಣೆಗಳನ್ನು ಅನುಷ್ಠಾನಕ್ಕೆ ತರಲಾಯಿತು. ಆರ್ಥಿಕ ಸುಧಾರಣೆಗಳ ಮೂಲಭೂತ ಮಂತ್ರವೆಂದರೆ ಭಾರತೀಯರ ಜೀವನದ ಗುಣಮಟ್ಟದಲ್ಲಿ ತ್ವರಿತ ಮತ್ತು ಅವಿರತ ಸುಧಾರಣೆಗಳ ಮೂಲಭೂತ ಉದ್ದೇಶವಾಗಿದೆ. ಸರಕಾರದ ಕಂದಾಯ ಕೊರತೆಯು ಒಂದೇ ಸಮನೇ ಹೆಚ್ಚುತ್ತಲಿತ್ತು ಮತ್ತು ಅದರಿಂದಾಗಿ ರಾಜ್ಯದಾಯ ಕೊರತೆಯು ಸಹ ಸತತವಾಗಿ ಏರುತ್ತಿತ್ತು.

ಭಾರತದ ಆರ್ಥಿಕ ಸುಧಾರಣೆಗಳ ಎರಡನೇ ಹಂತವು ಪ್ರಮುಖವಾಗಿ ಕೆಲವು ಸದುದ್ದೇಶಗಳನ್ನು ಹೊಂದಿತ್ತು. ಆರ್ಥಿಕ ಪ್ರಗತಿ ದರವನ್ನು ಹೆಚ್ಚಿಸುವುದು, ವಾರ್ಷಿಕ ಹಣದುಬ್ಬರ ದರವನ್ನು ಇಳಿಸುವುದು, ಪಾವತಿ ಶಿಲ್ಕಿನಲ್ಲಿನ ಗಂಭೀರ ಸ್ಥಿತಿಯಿಂದ ಪಾರಾಗುವುದು, ಮುಂಗಡ ಪತ್ರದಲ್ಲಿ ಚಾಲ್ತಿ ಖಾತೆಯಲ್ಲಿನ ಕೊರತೆಯನ್ನು ಕಡಿಮೆಗೊಳಿಸುವುದು. ಒಟ್ಟಾರೆಯಾಗಿ ಹೇಳುವುದಾದರೆ ಭಾರತದ ಆರ್ಥಿಕ ಸುಧಾರಣೆಗಳು ಈ ಕೆಳಕಂಡ ಅಂಶಗಳನ್ನು ಪ್ರತಿಪಾದಿಸುವಂತಿದ್ದವು. ಉದಾರೀಕೃತ ವಿದೇಶಿ ವ್ಯಾಪಾರ, ಕೃಷಿ, ಕೈಗಾರಿಕೆ, ಮುಕ್ತ ವಿನಿಮಯ ದರ, ಮುಕ್ತಮಾರುಕಟ್ಟೆ ಆಧಾರಿತ ಹಣಕಾಸು ವ್ಯವಸ್ಥೆ, ದಕ್ಷ ಮತ್ತು ಕ್ರಿಯಾತ್ಮಕ ಕೈಗಾರಿಕಾ ವ್ಯವಸ್ಥೆ, ಒಂದು ಸ್ವಾಯತ್ತ, ಸ್ಪರ್ಧಾತ್ಮಕ ಸಾರ್ವಜನಿಕ ರಂಗದ ಸೃಷ್ಟಿ ಮುಂತಾದವುಗಳನ್ನು ಒಳಗೊಂಡಿದೆ.

ಅಭಿವೃದ್ಧಿಯತ್ತ ಭರದಿಂದ ಮುನ್ನಡೆಯಲು, ಕೈಗಾರಿಕಾ ಕ್ಷೇತ್ರದಲ್ಲಿ ಮತ್ತು ಆರ್ಥಿಕ ಪರಿಸರದಲ್ಲಿ ಭಾರೀ ಬದಲಾವಣೆಯನ್ನು ತರಲು ಪ್ರಬಲವಾದ ಧುರೀಣತ್ವ ಮತ್ತು ಆಶ್ರಯ ಇದ್ದರೂ ಇವು ವಿದೇಶಿ ಪೈಪೋಟಿಯನ್ನು ಎದುರಿಸಲು ಅಸಮರ್ಥವಾದವು. ಹೀಗೆ ೧೯೯೦ -೯೧ರಲ್ಲಿ ಬಿಕ್ಕಟ್ಟಿನ ಸ್ಥಿತಿಯು ಉಲ್ಬಣಗೊಂಡು ಸರಕಾರವು ಈ ಬಿಕ್ಕಟ್ಟಿನಿಂದ ಪಾರಾಗಲು ಎರಡು ಪ್ರಕಾರದ ಆರ್ಥಿಕ ಸುಧಾರಣೆಯ ಕ್ರಮಗಳನ್ನು ಅನುಸರಿಸಲು ನಿರ್ಧರಿಸಿತು.

ಅ. ಬೃಹತ್ ಪ್ರಮಾಣದ ಆರ್ಥಿಕ ಸ್ಥಿರೀಕರಣದ ಸುಧಾರಣೆಗಳು ಮತ್ತು

ಆ. ರಚನಾತ್ಮಕ ಹೊಂದಾಣಿಕೆಗಳ ಸುಧಾರಣೆಗಳು

ಸ್ಥಿರೀಕರಣದ ಸುಧಾರಣೆಗಳು ಬೇಡಿಕೆಯ ನಿರ್ವಹಣೆಗಾಗಿ ಪ್ರಯತ್ನಿಸಿದರೆ, ರಚನಾತ್ಮಕ ಸುಧಾರಣೆಗಳು ವಲಯಗಳ ಹೊಂದಾಣಿಕೆಯ ಮೂಲಕ ಪೂರೈಕೆಗೆ ಸಂಬಂಧಿಸಿದ ಸಮಸ್ಯೆಗಳೊಂದಿಗೆ ವ್ಯವಹರಿಸುತ್ತವೆ. ಕೈಗಾರಿಕಾ ಉತ್ಪಾದನೆಯ ದಕ್ಷತೆ ಮತ್ತು ಅಂತರಾಷ್ಟ್ರೀಯ ಪೈಪೋಟಿ ಸಾಮರ್ಥ್ಯವನ್ನು ಹೆಚ್ಚಿಸುವುದು, ವಿದೇಶಿ ಹೂಡಿಕೆ ಮತ್ತು ತಂತ್ರಜ್ಞಾನವನ್ನು ಮೊದಲಿಗಿಂತಲೂ ಹೆಚ್ಚಿನ ದರ್ಜೆಯಲ್ಲಿ ಬಳಸಿಕೊಳ್ಳುವುದು. ಸಾರ್ವಜನಿಕ ವ್ಯಾಪ್ತಿಯನ್ನು ಪುನರ್ ವ್ಯವಸ್ಥೆಗೊಳಿಸುವುದು ಮತ್ತು ಅವುಗಳ ವ್ಯಾಪ್ತಿಯನ್ನು ಹೆಚ್ಚು ದಕ್ಷವಾಗಿ ಪೂರೈಸುವಂತೆ ಮಾಡಲು ಹಣಕಾಸಿನ ವಲಯವನ್ನು ಸುಧಾರಿಸಿ ಆಧುನೀಕರಣ ಗೊಳಿಸುವುದು.

ಆರ್ಥಿಕ ಸುಧಾರಣೆಗಳ ಪ್ರಮುಖ ಆಯಾಮಗಳಲ್ಲಿ ಉದಾರೀಕರಣ ಅತ್ಯಂತ ಪ್ರಮುಖವಾಗಿದೆ. ಉದಾರೀಕರಣ ಎಂದರೆ ಅರ್ಥ ವ್ಯವಸ್ಥೆಯನ್ನು ಎಲ್ಲಾ ನಿರ್ಬಂಧಗಳಿಂದ ಮತ್ತು ಹತೋಟಿಗಳಿಂದ ಮುಕ್ತಗೊಳಿಸುವುದಾಗಿದೆ. ಅಂದರೆ ನಿಯಂತ್ರಣಗಳು, ನಿಯಮಗಳು, ಕಾರ್ಯವಿಧಾನ ಮತ್ತು ಹತೋಟಿಗಳನ್ನು ಸರಳಗೊಳಿಸುವುದು ಉದಾರೀಕರಣವಾಗುತ್ತದೆ. ಇಲ್ಲಿ ಸರ್ಕಾರದ ಹಸ್ತಕ್ಷೇಪ ಕಡಿಮೆಯಿರುತ್ತದೆ. ಖಾಸಗಿ ಉದ್ಯಮಗಳಿಗೆ ಸ್ವಾತಂತ್ರ್ಯ, ಸರ್ಕಾರಿ ನಿಯಂತ್ರಣ ಸಡಿಲ, ಸಾಗಾಟದ ಮೇಲೆ ಸಡಿಲತೆ, ಮಾರುಕಟ್ಟೆ ಬೆಲೆಗಳನ್ನು ನಿರ್ಧರಿಸುವುದು, ಆಮದು ಮತ್ತು ರಫ್ತುಗಳನ್ನು ಸರಳಗೊಳಿಸು

ವುದು ಇವು ಉದಾರೀಕರಣದ ಕೆಲವು ಪ್ರಮುಖ ಅಂಶಗಳು. ಇವುಗಳನ್ನು ಭಾರತದಲ್ಲಿ ಹೊಸ ಆರ್ಥಿಕ ನೀತಿಯಡಿ ಅನುಸರಿಸಲಾಗುತ್ತಿದೆ. ಆರ್ಥಿಕ ಸುಧಾರಣೆಗಳ ಇನ್ನೊಂದು ಪ್ರಮುಖ ಲಕ್ಷಣ ಎಂದರೆ ಖಾಸಗೀಕರಣ ಧೋರಣೆಯನ್ನು ಅನುಸರಿಸುವುದಾಗಿದೆ. ಖಾಸಗೀಕರಣದ ಹಿನ್ನೆಲೆಯಲ್ಲಿ ಖಾಸಗಿ ಮತ್ತು ಖಾಸಗಿ ಬಂಡವಾಳಕ್ಕೆ ಹೆಚ್ಚಿನ ಆದ್ಯತೆಯನ್ನು ನೀಡುವುದಾಗಿದೆ. ಖಾಸಗಿ ಉದ್ಯಮಕ್ಕೆ, ಖಾಸಗಿ ಹೂಡಿಕೆದಾರರಿಗೆ ಹೆಚ್ಚಿನ ಸ್ವಾತಂತ್ರ್ಯವನ್ನು ನೀಡಿ ಉದ್ಯಮಗಳಲ್ಲಿ ಒಡೆತನವನ್ನು ನಡೆಸಲು ಅನುವು ಮಾಡಿಕೊಡುವುದು. ಭಾರತದಲ್ಲಿ ಖಾಸಗೀಕರಣವನ್ನು ಹೂಡಿಕೆ ಹಿಂತೆಗೆತ, ಅಂತಾರಾಷ್ಟ್ರೀಕರಣ ಮತ್ತು ಸಾರ್ವಜನಿಕ ವಲಯದ ಮೇಲೆ ಕಡಿವಾಣವನ್ನು ಹಾಕಿ ಅನುಷ್ಠಾನಗೊಳಿಸಲಾಗಿದೆ. ಜಾಗತೀಕರಣವು ಆರ್ಥಿಕ ಸುಧಾರಣೆಗಳ ಇನೊಂದು ಅತ್ಯಂತ ಪ್ರಮುಖ ಮುಖವಾಗಿದೆ. ದೇಶೀಯ ಆರ್ಥಿಕತೆಯನ್ನು ಜಾಗತಿಕ ಆರ್ಥಿಕತೆಯೊಂದಿಗೆ ಸಂಘಟಿಸುವುದು ಮತ್ತು ಭಾರತದ ಆರ್ಥಿಕ ವ್ಯವಸ್ಥೆಯನ್ನು ಹೊರ ಜಗತ್ತಿಗೆ ಒಡ್ಡುವುದನ್ನು ಈ ಹಿನ್ನೆಲೆಯಲ್ಲಿ ಮಾಡಲಾಗಿದೆ. ಭಾರತದ ನೂತನ ಆರ್ಥಿಕ ನೀತಿಯ ಜಾಗತೀಕರಣದ ಅಡಿ ಭಾರತದ ಆರ್ಥಿಕತೆಯನ್ನು ಜಾಗತಿಕ ಆರ್ಥಿಕತೆಯೊಂದಿಗೆ ಗುರುತಿಸುವುದು, ದೇಶದಲ್ಲಿರುವ ನಿಯಂತ್ರಣಗಳನ್ನು ತೆಗೆದು ಹಾಕುವುದು, ವಿದೇಶಿ ನೇರ ಹೂಡಿಕೆಯ ಸ್ವಯಂ ಚಾಲಿತ ಮಂಜೂರಾತಿ ಮತ್ತು ಚಾಲ್ತಿ ಖಾತೆಯಲ್ಲಿ ರೂಪಾಯಿಯ ಸಂಪೂರ್ಣ ಪರಿವರ್ತನೆ ಮಾಡಲಾಗಿದೆ.

ಹೊಸ ಆರ್ಥಿಕ ಸುಧಾರಣೆಗಳು ಮಾರುಕಟ್ಟೆ ಸ್ನೇಹಿ ಸರ್ಕಾರವನ್ನು ಸ್ಥಾಪಿಸುವ ಉದ್ದೇಶವನ್ನು ಹೊಂದಿದೆ. ಆದ್ದರಿಂದ ಮಾರುಕಟ್ಟೆ ಮತ್ತು ಮಾರುಕಟ್ಟೇತರ ಕ್ಷೇತ್ರಗಳ ಕಾರ್ಯಾಚರಣೆಗೆ ಅನುವು ಮಾಡಿಕೊಡುವ ಧ್ಯೇಯದ ಧೋರಣೆಯಾಗುತ್ತದೆ. ಹೊಸ ಆರ್ಥಿಕ ಸುಧಾರಣೆಗಳು ಆಧುನೀಕರಣ ಮತ್ತು ಉತ್ಪಾದನೆಯಲ್ಲಿ ಆಧುನಿಕ ತಂತ್ರಜ್ಞಾನವನ್ನು ಅಳವಡಿಸುವುದು ಮತ್ತು ಅದಕ್ಕೆ ಅತ್ಯಧಿಕ ಪ್ರಾಶಸ್ತ್ಯ ನೀಡುವುದಾಗಿದೆ. ಈ ನೀತಿಯಿಂದ ಹೊಸ ತಂತ್ರಜ್ಞಾನ, ಎಲೆಕ್ಟ್ರಾನಿಕ್ಸ್, ಗಣಕಯಂತ್ರ, ಹೊಸ ಹೊಸ ಆವಿಷ್ಕಾರಗಳನ್ನು ಮಾಡಲಾಗುತ್ತಿದೆ. ಸರ್ಕಾರವು ಈ ಹಿನ್ನೆಲೆಯಲ್ಲಿ ವಿವಿಧ ವಿದೇಶಿ ಸಹಭಾಗಿತ್ವ ಪ್ರಸ್ತಾವಗಳಿಗೆ ಅನುಮತಿ ನೀಡುವುದರ ಮೂಲಕ ಅತ್ಯಾಧುನಿಕ ತಂತ್ರಜ್ಞಾನದ ಆಮದಿಗೆ ಅವಕಾಶಗಳನ್ನು ಸೃಷ್ಟಿ ಮಾಡಿದೆ. ಭಾರತದಲ್ಲಿ ಈ ಹೊಸ ವಿನಾಯಿತಿಗಳ ಮೂಲಕ ಪ್ರೋತ್ಸಾಹವನ್ನು ನೀಡಲಾಗುತ್ತಿದೆ. ಭಾರತದಲ್ಲಿ ಇರುವ ರೋಗಗ್ರಸ್ಥ ಕೈಗಾರಿಕೆಗಳನ್ನು ಸುಧಾರಿಸಲು ಮತ್ತು ಆಧುನೀಕರಣಗೊಳ್ಳಿಸಲು ಈ ನಿಟ್ಟಿನಲ್ಲಿ ಕ್ರಮ ಕೈಗೊಳ್ಳಲಾಗಿದೆ.

### ಆ. ಸ್ಥಿರೀಕರಣ ಮತ್ತು ರಚನಾತ್ಮಕ ಹೊಂದಾಣಿಕೆಗಳ ಕಾರ್ಯಕ್ರಮಗಳು

ಸಮಗ್ರ ಆರ್ಥಿಕ ಸ್ಥಿರೀಕರಣ ಮತ್ತು ರಚನಾತ್ಮಕ ಹೊಂದಾಣಿಕೆಯ ಕಾರ್ಯಕ್ರಮಗಳು ೧೯೯೧ರ ಹೊಸ ಆರ್ಥಿಕ ನೀತಿಯ ಎರಡು ಮುಖ್ಯ ಭಾಗಗಳು. ಈ ಸುಧಾರಣೆಯ ಕ್ರಮಗಳ ಮೂಲಕ ಅರ್ಥವ್ಯವಸ್ಥೆಯು ಎದುರಿಸುತ್ತಿರುವ ಗಂಭೀರವಾದ ಬಿಕ್ಕಟ್ಟನ್ನು ಎದುರಿಸಿ

ಅವುಗಳನ್ನು ನಿವಾರಿಸಲು, ದೇಶದ ಅರ್ಥ ವ್ಯವಸ್ಥೆಯನ್ನು ರಕ್ಷಿಸಲು ಮತ್ತು ಅದನ್ನು ಪ್ರಗತಿಪಥದಲ್ಲಿ ಮುನ್ನಡೆಸಲು ಸರ್ಕಾರವು ನಿರ್ಧರಿಸಿತು. ಸರಕಾರವು ಕೈಗೊಂಡ ಆರ್ಥಿಕ ನೀತಿಯ ಸುಧಾರಣೆಗಳು ಮುಖ್ಯವಾಗಿ ಎರಡು ಪ್ರಕಾರದ ಸುಧಾರಣೆಗಳನ್ನು ಒಳಗೊಂಡಿದ್ದವು. ಅವು ಯಾವುವೆಂದರೆ ಬೃಹತ್ ಆರ್ಥಿಕ ಸ್ಥಿರೀಕರಣ ಮತ್ತು ರಚನಾತ್ಮಕ ಸುಧಾರಣೆ ಕ್ರಮಗಳು ಮತ್ತು ಹೊಂದಾಣಿಕೆಗಳು. ಸ್ಥಿರೀಕರಣದ ಸುಧಾರಣೆಗಳು ಬೇಡಿಕೆಯ ನಿರ್ವಹಣೆಯನ್ನು ನೋಡಿಕೊಳ್ಳಲು ಪ್ರಯತ್ನಿಸಿದರೆ, ರಚನಾತ್ಮಕ ಸುಧಾರಣೆಗಳು ಅರ್ಥವ್ಯವಸ್ಥೆಯ ಪೂರೈಕೆಯ ಸಮಸ್ಯೆಯನ್ನು ಪರಿಹರಿಸಲು ವಲಯಗಳ ಹೊಂದಾಣಿಕೆಗಳನ್ನು ನೋಡಿಕೊಳ್ಳುತ್ತೇವೆ.

ಸಮಗ್ರ ಆರ್ಥಿಕ ಸ್ಥಿರೀಕರಣ ಕಾರ್ಯಕ್ರಮವು ಕಡಿಮೆ ಮತ್ತು ಸ್ಥಿರ ಹಣ ದುಬ್ಬರ ಮಟ್ಟಕ್ಕೆ ಮರಳುವ ಮತ್ತು ಸಮರ್ಥನೀಯ ಕೋಶಿಯ ಮತ್ತು ಪಾವತಿ ಶಿಲ್ಕಿನ ಪರಿಸ್ಥಿತಿಯನ್ನು ಸಂಸ್ಥಾಪಿಸುವ ಗುರಿ ಹೊಂದಿದೆ. ರಚನಾತ್ಮಕ ಹೊಂದಾಣಿಕೆ ಸುಧಾರಣೆಗಳು ಕೈಗಾರಿಕಾ ಪರವಾನಗಿ ಮತ್ತು ನಿಯಂತ್ರಣ, ವಿದೇಶಿ ವ್ಯಾಪಾರ ಮತ್ತು ಹೂಡಿಕೆ ಮತ್ತು ಹಣಕಾಸಿನ ವಲಯ ಮುಂತಾದ ವಿಶಾಲ ಕ್ಷೇತ್ರವನ್ನು ಒಳಗೊಂಡಿದೆ. ಹಣದುಬ್ಬರವನ್ನು ನಿಯಂತ್ರಿಸಿ ಅದು ಕೆಳಮಟ್ಟದಲ್ಲಿರುವಂತೆ ಮತ್ತು ಅದೇ ಮಟ್ಟದಲ್ಲಿ ಮುಂದುವರಿಯುವಂತೆ ನೋಡಿಕೊಳ್ಳುವುದು ಮತ್ತು ರಾಜ್ಯಾದಾಯದ ಕೊರತೆಯನ್ನು ಕಡಿಮೆ ಮಾಡಲು ಹಾಗೂ ಕಂದಾಯ ಕೊರತೆಯನ್ನು ಕಡಿಮೆ ಮಾಡಲು ಬಾರಿ ಕಟ್ಟುನಿಟ್ಟಿನ ಕ್ರಮಗಳನ್ನು ಅನುಸರಿಸ ಬೇಕಾಗುವುದು ಅನಿವಾರ್ಯವಾಗುತ್ತದೆ. ಸರಕಾರದ ವೆಚ್ಚಗಳನ್ನು ಕಟೋರ ಕ್ರಮಗಳಿಂದ ಕಡಿಮೆ ಮಾಡಲು ಮತ್ತು ಅದೇ ವೇಳೆಗೆ ಸರಕಾರದ ಆದಾಯವನ್ನು ಹೆಚ್ಚಿಸಲು ಕಠಿಣವಾದ ಕ್ರಮಗಳನ್ನು ತೆಗೆದುಕೊಳ್ಳಲು ದೊಡ್ಡ ಪ್ರಮಾಣದಲ್ಲಿ ರಫ್ತುಗಳನ್ನು ಹೆಚ್ಚು ಮಾಡುವುದು ಮತ್ತು ಆಮದುಗಳನ್ನು ಕಡಿಮೆ ಮಾಡಿಕೊಳ್ಳುವುದು ಅನಿವಾರ್ಯ. ರಚನಾತ್ಮಕ ಹೊಂದಾಣಿಕೆ ಕಾರ್ಯಕ್ರಮವು ಕೈಗಾರಿಕಾ ನಿಯಂತ್ರಣ ತೊಡೆದು ಹಾಕುವಿಕೆ, ಹೂಡಿಕೆಯನ್ನು ಹಿಂತೆಗೆದುಕೊಳ್ಳುವುದು, ಸಾರ್ವಜನಿಕ ಉದ್ಯಮಗಳನ್ನು ಉತ್ತಮ ಪಡಿಸುವುದು, ವ್ಯಾಪಾರಿ ಕ್ಷೇತ್ರದಲ್ಲಿ ಸುಧಾರಣೆಗಳನ್ನು ತರುವುದು, ಬಂಡವಾಳ ಹರಿವು ಸುಧಾರಣೆ ಮತ್ತು ಹಣಕಾಸಿನ ವಲಯಗಳಲ್ಲಿ ಬೃಹತ್ ಸುಧಾರಣೆಗಳನ್ನು ತರುವುದು ಮುಂತಾದವುಗಳು ಈ ತರಹದ ಸುಧಾರಣೆಗಳಲ್ಲಿ ಒಳಗೊಂಡಿವೆ.

ಸ್ಥಿರೀಕರಣ ಮತ್ತು ರಚನಾತ್ಮಕ ಹೊಂದಾಣಿಕೆಯ ಕಾರ್ಯಕ್ರಮಗಳು ಜೊತೆ ಜೊತೆಯಲ್ಲೇ ಸಾಗಬೇಕು. ಆರ್ಥಿಕ ಸ್ಥಿರತೆಯನ್ನು ಕಾಪಾಡಿಕೊಳ್ಳಲು ಮತ್ತು ಆರ್ಥಿಕ ಬಿಕ್ಕಟ್ಟನ್ನು ಪರಿಹರಿಸಲು ದೊಡ್ಡ ಪ್ರಮಾಣದಲ್ಲಿ ವಿದೇಶಗಳಿಂದ ಸಾಲ ತರುವುದು ಅವಶ್ಯಕವಾಯಿತು. ಈ ಎಲ್ಲ ಕ್ರಮಗಳ ಮೂಲಕ ಅರ್ಥವ್ಯವಸ್ಥೆಯಲ್ಲಿ ಸ್ಥಿರತೆಯನ್ನು ಸಾಧಿಸಲು ಪ್ರಯತ್ನಿಸಲಾಗುತ್ತದೆ. ಒಂದು ಅರ್ಥವ್ಯವಸ್ಥೆಯಲ್ಲಿ ಹಣದುಬ್ಬರದ ನಿಯಂತ್ರಣವನ್ನು ಮಾಡುವುದು ತುಂಬಾ ಕಠಿಣವಾದ ಕೆಲಸವಾಗಿದೆ. ೧೯೯೧-೯೨ರ

ಅವಧಿಯಲ್ಲಿ ಹಣದುಬ್ಬರವು ಬಹಳಷ್ಟು ಏರಿದ್ದು, ರಾಜ್ಯಾದಾಯದ ಮತ್ತು ಹಣಕಾಸಿನ ವ್ಯವಹಾರಗಳಲ್ಲಿ ಕಠಿಣವಾದ ಕ್ರಮಗಳನ್ನು ಮತ್ತು ಉತ್ಪಾದನೆಯನ್ನು ಮತ್ತು ತನ್ಮೂಲಕ ಪೂರೈಕೆಯ ಪರಿಸ್ಥಿತಿಯನ್ನು ಹೆಚ್ಚಿಸುವ ಕ್ರಮಗಳನ್ನು ಅನುಸರಿಸಲಾಯಿತು. ಹಣದುಬ್ಬರದ ದರವು ಭಾರೀ ಏರಿಳಿತಗೊಳಗಾಗಿದ್ದರೂ ಕೊನೆಗೆ ಅದು ೨೦೦೦-೦೧ರ ಸುಮಾರಿಗೆ ಶೇಕಡ ೫.೫ಕ್ಕೆ ಸ್ಥಿಮಿತಕ್ಕೆ ಬಂದಿತು.

ಆಂತರಿಕ ಹಣದುಬ್ಬರದ ದರವು ಬಹಳಷ್ಟು ಏರಿದಾಗ ಮತ್ತು ಸಂದಾಯ ಬಾಕಿಯು ಬಹಳಷ್ಟು ಕೊರತೆಯನ್ನು ವ್ಯಕ್ತಪಡಿಸುತ್ತಿದ್ದಾಗ ರಾಜ್ಯಾದಾಯದಲ್ಲಿ ಹೊಂದಾಣಿಕೆ ಮಾಡಿದರೆ ಮಾತ್ರ ಅವರೆಡನ್ನು ನಿಯಂತ್ರಣದಲ್ಲಿ ಇಡಬಹುದು. ರಾಜ್ಯಾದಾಯದ ಕೊರತೆಯು ೧೯೭೦ರಲ್ಲಿ ಒಟು ರಾಷ್ಟ್ರೀಯ ಉತ್ಪನ್ನದ ಶೇಕಡ ೭ಕ್ಕಿಂತಲೂ ಕಡಿಮೆ ಇತ್ತು ಆದರೆ ೧೯೯೦-೯೧ರಲ್ಲಿ ಅದು ಶೇಕಡ ೧೧.೨ಕ್ಕೆ ಏರಿತು. ಆದ್ದರಿಂದ ಸರ್ಕಾರವು ಈ ನಿಟ್ಟಿನಲ್ಲಿ ಕಠಿಣವಾದ ಕ್ರಮಗಳನ್ನು ಕೈಗೊಂಡರೆ ತನ್ನ ಆದಾಯವನ್ನು ಮತ್ತು ಆಯವನ್ನು ಹೆಚ್ಚಿಸಿಕೊಳ್ಳಬಹುದು ಮತ್ತು ಅದೇ ರೀತಿಯಾಗಿ ಕಂದಾಯ ವೆಚ್ಚ ಮತ್ತು ಬಂಡವಾಳ ವೆಚ್ಚಗಳೆರಡನ್ನು ಕಡಿಮೆ ಮಾಡಿತು.

ಸಂದಾಯ ಬಾಕಿಯ ಹೊಂದಾಣಿಕೆ - ಇದು ಇನ್ನೊಂದು ರಚನಾತ್ಮಕ ಹೊಂದಾಣಿಕೆಯ ಕಾರ್ಯಕ್ರಮಗಳಲ್ಲೊಂದು. ಸರಕರಾರವು ಸಂದಾಯ ಬಾಕಿಯಲ್ಲಿನ ಕೊರತೆಯನ್ನು ನೀಗಿಸಲು ಮತ್ತು ಅಂತಿಮವಾಗಿ ಉಳಿತಾಯವನ್ನು ಸಾಧಿಸಲು ಅನೇಕ ಕ್ರಮಗಳನ್ನು ಹಾಕಿಕೊಂಡಿತು. ಸರಕಾರದ ಕಠಿಣ ಕ್ರಮಗಳ ಮೂಲಕ ೧೯೯೧ರ ಮಾರ್ಚಿಯಲ್ಲಿ ವಿದೇಶಿ ವಿನಿಮಯ ಸಂಗ್ರಹವು ಕೇವಲ ೨.೨ ಶತಕೋಟಿ ಡಾಲರ್ ಇದ್ದುದು ೨೦೦೩ ಮೇ ೧೬ ರಂದು ಅದು ೭೯.೨ ಶತಕೋಟಿ ಡಾಲರ್‌ಗಳಿಗೇರಿತು ಹಾಗೂ ೨೦೦೪-೨೦೦೫ರ ವೇಳೆಗೆ ಇದು ೧೨೯ ಶತಕೋಟಿ ಡಾಲರ್‌ಗಳಷ್ಟಾಯಿತು. ಈ ಸಾಧನೆಯನ್ನು ಭಾರತ ಸರ್ಕಾರಕ್ಕೆ ಮಾಡಲು ಸಾಧ್ಯವಾಗಿದ್ದು ತನ್ನ ಕಠಿಣ ಕಾರ್ಯಕ್ರಮಗಳಿಂದ ಮಾತ್ರ. ಇದರಿಂದ ಭಾರತದ ಅರ್ಥವ್ಯವಸ್ಥೆಯ ಕಳೆದ ಒಂದೂವರೆ ದಶಕಗಳಲ್ಲಿ ಮತ್ತು ಆ ಅವಧಿಯಲ್ಲಿ ಸ್ಥಿರವಾದ ಮತ್ತು ಸಮರ್ಥನೀಯವಾದ ತಾಳಿಕೆಯ ಸಂದಾಯ ಬಾಕಿ ಸ್ಥಿತಿಯನ್ನು ಹೊಂದಿದೆಯೆಂಬುದು ಸ್ಪಷ್ಟವಾಗುತ್ತದೆ. ಈ ಎಲ್ಲಾ ಕ್ರಮಗಳ ಮೂಲಕ ಅರ್ಥವ್ಯವಸ್ಥೆಯಲ್ಲಿ ಸ್ಥಿರತೆಯನ್ನು ಸಾಧಿಸಲು ಹಾಗೂ ಸ್ಥಿರೀಕರಣ ಮತ್ತು ರಚನಾತ್ಮಕ ಹೊಂದಾಣಿಕೆಗಳು ತುಂಬಾ ಉಪಯುಕ್ತವಾಗಿವೆ.

**೩. ಆರ್ಥಿಕ ಸುಧಾರಣೆಯ ಪ್ರಮುಖ ವಲಯಗಳು :ಕೋಶಿಯ, ಕೈಗಾರಿಕಾ, ಹಣಕಾಸು, ಸಾರ್ವಜನಿಕ ಮತ್ತು ಬಾಹ್ಯವಲಯಗಳು**

ರಚನಾತ್ಮಕ ಸುಧಾರಣೆಗಳು ಅಥವಾ ವಲಯ ಮಟ್ಟದ ಸುಧಾರಣೆಗಳು ಅರ್ಥವ್ಯವಸ್ಥೆಯ ಪೂರೈಕೆಯ ಪರಿಸ್ಥಿತಿಯನ್ನು ಸುಧಾರಿಸಲು ಮುತ್ತು ಅದರ ಮೂಲಕ

ಬೆಲೆಯೇರಿಕೆಯನ್ನು ತಡೆಗಟ್ಟಲು ಮತ್ತು ಬೆಲೆಗಳಲ್ಲಿ ಸ್ಥಿರತೆಯನ್ನು ಸಾಧಿಸಲು ಕೆಲವು ಕ್ರಮಗಳನ್ನು ಕೈಗೊಂಡಿತು. ೧೯೯೧ರ ಜುಲೈ ತಿಂಗಳಿನಿಂದ ಅರ್ಥವ್ಯವಸ್ಥೆಯಲ್ಲಿ ಪೂರೈಕೆಯ ಹೆಚ್ಚಿಸಲು, ಸರಕಾರವು ವ್ಯಾಪಕವಾದ ಉದಾರೀಕರಣ ಮತ್ತು ಖಾಸಗೀಕರಣದ ನೀತಿಯನ್ನು ಅನುಸರಿಸಿತು. ಇದಕ್ಕಾಗಿ ಸರಕಾರವು ಪ್ರಮುಖ ವಲಯಗಳಲ್ಲಿ ಕೈಗೊಂಡ ಸುಧಾರಣಾ ಕ್ರಮಗಳು ಈ ರೀತಿಯಾಗಿವೆ.

**ಕೋಶೀಯ ಸುಧಾರಣೆಗಳು**

ಪ್ರಸ್ತುತ ತೆರಿಗೆ ವ್ಯವಸ್ಥೆಯ ವಿರೂಪಗಳನ್ನು ತಿದ್ದುವುದು, ಸಂಪನ್ಮೂಲ ಸಂಗ್ರಹಣೆ, ದಕ್ಷ ಸಾರ್ವಜನಿಕ ವೆಚ್ಚ ನೀತಿ, ತೆರಿಗೆ ತಳಪಾಯವನ್ನು ವಿಸ್ತರಿಸುವುದು, ಸಾರ್ವಜನಿಕ ವೆಚ್ಚದ ಹತೋಟಿ, ಕೋಶೀಯ ಶಿಸ್ತಿನ ಅನುಸರಣೆ, ಸಹಾಯ ಧನಗಳ ಕಡತ, ದಕ್ಷ ವೆಚ್ಚ ವ್ಯವಸ್ಥೆಯ ಅಭಿವೃದ್ಧಿ, ಸಾರ್ವಜನಿಕ ಉದ್ಯಮಗಳ ಕಾರ್ಯದಕ್ಷತೆಯ ಸುಧಾರಣೆ ಮುಂತಾದವುಗಳು ಕೋಶೀಯ ಸುಧಾರಣೆಗಳ ಗುರಿಗಳು. ಕೋಶೀಯ ಸುಧಾರಣೆಯ ಕ್ರಮಗಳೆಂದರೆ ಸರಕಾರದ ತೆರಿಗೆ ಆದಾಯ ಮತ್ತು ತೆರಿಗೆಯೇತರ ಆದಾಯವನ್ನು ಹೆಚ್ಚಿಸಲು ಮತ್ತು ಸರಕಾರದ ತೆರಿಗೆ ಆದಾಯ ಮತ್ತು ತೆರಿಗೆಯೇತರ ಕ್ರಮಗಳು ಹಾಗೂ ಇದರ ಮೂಲಕ ಕೋಶೀಯ ಕೊರತೆಯನ್ನು ಕಡಿಮೆ ಮಾಡುವುದು. ಭಾರತ ಸರ್ಕಾರವು ಕೈಗೊಂಡ ಕ್ರಮಗಳ ಮೂಲಕ ಈ ಕೊರತೆಯು ೧೯೯೦-೯೧ರಲ್ಲಿ ಒಟ್ಟು ದೇಶೀಯ ಉತ್ಪನ್ನದ ಶೇಕಡ ೮.೪ ಇದ್ದುದು, ೧೯೯೬-೯೭ರಲ್ಲಿ ಶೇಕಡ ೫.೦ಕ್ಕೆ ಇಳಿದು ನಂತರ ೨೦೦೩-೦೪ರಲ್ಲಿ ಇದು ಸ್ವಲ್ಪ ಏರಿ ಶೇಕಡ ೫.೬ರಷ್ಟಾಯಿತು. ಭಾರತ ಸರ್ಕಾರವು ಕೋಶೀಯ ಸುಧಾರಣ ಕಾರ್ಯಕ್ರಮಗಳಲ್ಲಿ ಆದಾಯ ತೆರಿಗೆ ವಿನಾಯಿತಿ ಮಿತಿ, ಗರಿಷ್ಟ, ಆದಾಯ ತೆರಿಗೆ ಕಡಿತ, ಕಾರ್ಪೋರೇಟ್ ತೆರಿಗೆ ದೇಶೀಯ ಕಂಪೆನಿಗಳ ಮೇಲೆ ಇಳಿತ, ಸಂಭಾವ್ಯ ತೆರಿಗೆಯ ಪರಿಚಯ, ಮೂಲ ವಿನಾಯಿತಿ, ತೆರಿಗೆ ದರಗಳ ಸಂಖ್ಯೆಯನ್ನು ಕಡಿಮೆಗೊಳಿಸುವುದು, ಮೌಲ್ಯಾಧಾರಿತ ತೆರಿಗೆ, ಕಸ್ಟಂಮ್ ಸುಂಕಗಳ ಕಡಿತ, ಸೇವಾ ತೆರಿಗೆಯ ವ್ಯಾಪ್ತಿಯ ವಿಸ್ತಾರ, ಅನೇಕ ಮಿತ ವ್ಯಯ ಕಾರ್ಯಕ್ರಮಗಳು ಇವೆಲ್ಲವೂ ಕೋಶೀಯ ಸುಧಾರಣೆಯ ಹಲವು ಮುಖಗಳು. ನೂತನ ಆರ್ಥಿಕ ನೀತಿಯ ತೆರಿಗೆ ಸುಧಾರಣೆಗಳು, ಕೋಶೀಯ ಶಿಸ್ತು, ಕೋಶೀಯ ಕ್ರಮ ಬದ್ಧತೆ, ಸಾರ್ವಜನಿಕ ವೆಚ್ಚ, ಸಾರ್ವಜನಿಕ ಸಾಲಗಳು ಇವೆಲ್ಲವುಗಳನ್ನು ಒಂದುಗೂಡಿಸಿ ಕಾರ್ಯದಕ್ಷತೆಯನ್ನು ಸಾಧಿಸುವುದು.

**ಕೈಗಾರಿಕಾ ವಲಯದ ಸುಧಾರಣೆಗಳು**

ಭಾರತದ ಕೈಗಾರಿಕಾ ವಲಯವು ಬಹಳ ದಿವಸಗಳಿಂದ ಅದಕ್ಷತೆ, ಅಧಿಕ ಉತ್ಪಾದನಾ ವೆಚ್ಚ ಮತ್ತು ಆರ್ಥಿಕವಲ್ಲದ ಉತ್ಪಾದನಾ ಸಾಧನದಂತಹ ಗುಣಲಕ್ಷಣಗಳಿಂದ ಕೂಡಿದೆ. ಕೈಗಾರಿಕಾ ಸುಧಾರಣೆಗಳನ್ನು ಜಾರಿಗೊಳಿಸುವ ಸಲುವಾಗಿ ಭಾರತ ಸರ್ಕಾರವು ಜುಲೈ ೨೪, ೧೯೯೧ರಲ್ಲಿ ತನ್ನ ನೂತನ ಕೈಗಾರಿಕಾ ನೀತಿಯನ್ನು ಪ್ರಕಟಪಡಿಸಿತು. ಈ ಹೊಸ ಕೈಗಾರಿಕಾ

ನೀತಿಯು ಈವರೆಗೆ ಖಾಸಗಿ ವಲಯದ ಮೇಲೆ ಹೇರಿದ ಅನೇಕ ಸಂಕೋಲೆಗಳನ್ನು ಮತ್ತು ನಿರ್ಬಂಧಗಳನ್ನು ತೆಗೆದುಹಾಕಿತು ಮತ್ತು ಅದು ಮುಕ್ತವಾಗಿ ಹೊಸ ಹೊಸ ಕೈಗಾರಿಕೆಗಳಲ್ಲಿ ಪ್ರವೇಶಿಸಲು ಅವಕಾಶ ಮಾಡಿಕೊಟ್ಟಿತು. ಕೈಗಾರಿಕಾ ಕ್ಷೇತ್ರದಲ್ಲಿ ಸರಕಾರವು ಈ ಕೈಗಾರಿಕಾ ನೀತಿಯ ಮೂಲಕ ಕೆಲವು ಕ್ರಮಗಳನ್ನು ಕೈಗೊಂಡಿತು. ಅವುಗಳೆಂದರೆ ಎಲ್ಲಾ ಕೈಗಾರಿಕೆಗಳಿಗೆ ಲೈಸೆನ್ಸ್ ನೀಡುವ ಪದ್ಧತಿಯನ್ನು ರದ್ದು ಮಾಡಿತು, ವಿದೇಶಿ ಬಂಡವಾಳದ ಸರಕುಗಳಿಗೆ ಅನುಮತಿ, ವಿದೇಶಿ ಬಂಡವಾಳದ ನೇರ ಹೂಡಿಕೆಗೆ ವಿಚಾರಾಪೇಕ್ಷೆಯಿಲ್ಲದೆ ಅನುಮತಿ, ಅನಿವಾಸಿ ಭಾರತೀಯರಿಗೆ ಮತ್ತು ಕಾರ್ಪೋರೇಟ್ ಸಂಸ್ಥೆಗಳಿಗೆ ಅನುಮತಿ, ಖಾಸಗಿ ವಲಯಗಳಿಗೆ ಹೂಡಿಕೆ ಕ್ಷೇತ್ರ ಮುಕ್ತ, ಸ್ಥಾನೀಕರಣ ಧೋರಣೆಯ ಉದಾರೀಕರಣ, ಮೂಲಭೂತ ಸೌಕರ್ಯ ನಿರ್ಮಾಣದಲ್ಲಿ ಖಾಸಗಿಯವರಿಗೆ ಅನುಮತಿ, ಸಾರ್ವಜನಿಕ ಉದ್ಯಮಗಳಿಗೆ ಸ್ವಾಯತ್ತತೆ, ಹಿಂದುಳಿದ ಕ್ಷೇತ್ರಗಳಲ್ಲಿನ ಕೈಗಾರೀಕರಣಕ್ಕೆ ಪ್ರೋತ್ಸಾಹ, ಸಣ್ಣ ಕೈಗಾರಿಕಾ ಕ್ಷೇತ್ರ ಮುಕ್ತ ಹೀಗೆ ಹಲವಾರು ಸುಧಾರಣೆಗಳನ್ನು ಮಾಡಲಾಯಿತು.

### ಹಣಕಾಸಿನ ವಲಯದ ಸುಧಾರಣೆಗಳು

ಹಣಕಾಸಿನ ವಲಯದ ಸುಧಾರಣೆಗಳು - ಹಣದುಬ್ಬರದ ನಿಯಂತ್ರಣ, ಮಾರುಕಟ್ಟೆ ವ್ಯವಸ್ಥೆಯಲ್ಲಿ ಹಣದ ಮೌಲ್ಯ ಸ್ಥಿರಗೊಳಿಸುವುದು, ಹಣಕಾಸಿನ ಯಂತ್ರದ ಸುಧಾರಣೆ ಇವೇ ಮೊದಲಾದವುಗಳು ಪ್ರಮುಖ ಅಂಶಗಳಾಗಿವೆ. ಹಣಕಾಸಿನ ವಲಯವನ್ನು ಸುಧಾರಿಸಲು ಸರಕಾರವು ೧೯೯೧ರಲ್ಲಿ ಎಂ.ನರಸಿಂಹನ್ ಎಂಬುವರ ನೇತೃತ್ವದಲ್ಲಿ ಒಂದು ಸಮಿತಿಯನ್ನು ರಚಿಸಿತು. ನೂತನ ಆರ್ಥಿಕ ನೀತಿಯಡಿ ಜಾರಿಗೊಳಿಸಲಾದ ಪ್ರಮುಖ ಹಣಕಾಸು ವಲಯದ ಸುಧಾರಣೆಗಳು ಈ ಕೆಳಗಿನಂತಿವೆ. ಹಣಕಾಸು ಸಂಸ್ಥೆಗಳ ಕಾರ್ಯನಿರ್ವಹಣೆಯಲ್ಲಿ ಮಿತಿವ್ಯಯ ಮತ್ತು ದಕ್ಷತೆ, ಹಣಕಾಸು ಸಂಸ್ಥೆಗಳ ಮೇಲೆ ಸಮರ್ಪಕವಾದ ಮತ್ತು ಪರಿಣಾಮಕಾರಿ ಮೇಲ್ವಿಚಾರಣೆ, ಹಣಕಾಸು ಕಾನೂನುಗಳಿಗೆ ತಿದ್ದುಪಡಿ, ಬ್ಯಾಂಕುಗಳಿಗೆ ಸ್ವಾತಂತ್ರ್ಯ, ಬಂಡವಾಳ ಮಾರುಕಟ್ಟೆಯಲ್ಲಿ ಬ್ಯಾಂಕುಗಳಿಗೆ ಬಂಡವಾಳ ಎತ್ತಲು ಅನುಮತಿ, ಸಾರ್ವಜನಿಕ ಬ್ಯಾಂಕುಗಳಿಗೆ ಸ್ವಾಯತ್ತತೆ, ಬ್ಯಾಂಕೇತರ ಹಣಕಾಸಿನ ಕಂಪೆನಿ ನಿಯಂತ್ರಣ, ವಿಮೆ ಮತ್ತು ನಿವೃತ್ತವೇತನ ನಿಧಿಗಳ ವಲಯವನ್ನು ಮುಕ್ತಗೊಳಿಸುವುದು, ಸೆಬಿಯ ಸ್ಥಾಪನೆ, ಬಂಡವಾಳ ಮಾರುಕಟ್ಟೆಯ ಪುನರುಜ್ಜೀವನ, ಯುರೋ ಈಕ್ವಿಟಿ ಷೇರುಗಳ ಮೂಲಕ ಭಾರತೀಯ ಕಂಪೆನಿಗಳು ಅಂತಾರಾಷ್ಟ್ರೀಯ ಮಾರುಕಟ್ಟೆ ಪ್ರವೇಶ, ತಾತ್ಕಾಲಿಕ ಖಜಾನೆ ಹುಂಡಿ ನಿಲ್ಲಿಸುವುದು, ಪ್ರಧಾನ ಸಾಲ ನೀಡಿಕೆ ದರ ನಿಗದಿಗೊಳಿಸುವುದು ಇವು ಹಣಕಾಸಿನ ವಲಯದ ಸುಧಾರಣೆಯ ಮುಖ್ಯಾಂಶಗಳು.

### ಸಾರ್ವಜನಿಕ ವಲಯದ ಸುಧಾರಣೆಗಳು

ಅನೇಕ ಸಾರ್ವಜನಿಕ ವಲಯದ ಕೈಗಾರಿಕೆಗಳು ಅಧ್ಯಕ್ಷತೆ ಮತ್ತು ಪೈಪೋಟಿ ಎದುರಿಸಲಾಗದ ಸ್ಥಿತಿಯಲ್ಲಿ ನಷ್ಟ ಅನುಭವಿಸುತ್ತಿದ್ದವು. ಸಾರ್ವಜನಿಕ ವಲಯದ ಉದ್ದಿಮೆ

ಸಂಸ್ಥೆಗಳು ಭಾರೀ ನಷ್ಟ ಅನುಭವಿಸುತ್ತಿದ್ದವು. ಸಾರ್ವಜನಿಕ ವಲಯವು ನಿರೀಕ್ಷಿತ ಮಟ್ಟದಲ್ಲಿ ತನ್ನ ಕೊಡುಗೆಯನ್ನು ನೀಡುತ್ತಿಲ್ಲ ಎಂಬ ಟೀಕೆಯಿಂದ ಸರ್ಕಾರವು ತನ್ನ ಹೊಸ ಆರ್ಥಿಕ ನೀತಿಯಡಿ ಕೆಲವು ಸುಧಾರಣಾ ಕ್ರಮಗಳನ್ನು ಅಳವಡಿಸಿತು. ಅವುಗಳೆಂದರೆ ಸಾರ್ವಜನಿಕ ವಲಯಕ್ಕೆ ಮೀಸಲಾಗಿದ್ದ ಕೈಗಾರಿಕಾ ಸಂಖ್ಯೆಯನ್ನು ಕಡಿಮೆಗೊಳಿಸಲಾಯಿತು, ಸಾರ್ವಜನಿಕ ಉದ್ದಿಮೆ ಸಂಸ್ಥೆಗಳು ನಷ್ಟ ಹೊಂದಿದ್ದರೆ ಖಾಸಗೀ ವಲಯಕ್ಕೆ ವರ್ಗಾಯಿಸುವುದು, ರೋಗಗ್ರಸ್ತ ಸಾರ್ವಜನಿಕ ಉದ್ದಿಮೆಗಳನ್ನು ಕೈಗಾರಿಕಾ ಮತ್ತು ಹಣಕಾಸು ಪುನರ್ ನಿರ್ಮಾಣ ಮಂಡಳಿಗೆ ಒಪ್ಪಿಸುವುದು, ಸಾರ್ವಜನಿಕ ಉದ್ದಿಮೆಗಳನ್ನು ಲಾಭದಾಯಕ ಮತ್ತು ದಕ್ಷತೆಗೆ ಸ್ವಾಯತ್ತತೆ ನೀಡುವುದು, ಮುಂಗಡ ಪತ್ರ ಬೆಂಬಲವನ್ನು ಕ್ರಮೇಣ ಕಡಿಮೆ ಮಾಡುವುದು, ಸಾರ್ವಜನಿಕ ವಲಯದ ಉದ್ದಿಮೆಗಳಲ್ಲಿ, ಖಾಸಗಿ ವಲಯವು ಭಾಗವಹಿಸಲು ಅವಕಾಶ ನೀಡುವುದು, ರಾಷ್ಟ್ರೀಯ ಜೀರ್ಣೋದ್ಧಾರ ನಿಧಿಯಿಂದ ಕಾರ್ಮಿಕರಿಗೆ ತರಬೇತಿ, ಪುನರ್‌ನಿಯೋಜನೆ, ಹಾಗೂ ಸ್ವಯಂ ನಿವೃತ್ತಿ ಪರಿಹಾರ ನೀಡಿಕೆ, ಸಾರ್ವಜನಿಕ ಉದ್ದಿಮೆಗಳ ದಕ್ಷತೆಯನ್ನು ಸುಧಾರಿಸುವ ಗುರಿ ಇವುಗಳು ಸಾರ್ವಜನಿಕ ವಲಯದ ಸುಧಾರಣೆಗಳ ಮುಖ್ಯಾಂಶಗಳು.

### ಬಾಹ್ಯ ವಲಯದ ಸುಧಾರಣೆಗಳು

ಬಾಹ್ಯವಲಯದ ಸುಧಾರಣೆಗಳು - ವ್ಯಾಪಾರ, ವಿನಿಮಯ ದರ, ವಿದೇಶಿ ಹೂಡಿಕೆ ಮುಂತಾದ ಕ್ಷೇತ್ರಗಳನ್ನು ಒಳಗೊಂಡಿದೆ. ನಮ್ಮ ಆರ್ಥಿಕತೆಯ ದೀರ್ಘಾವಧಿ ಜಾಗತೀಕರಣದ ಒಂದು ಅಂಗವಾಗಿ ಈ ಸಮಸ್ತ ಬಾಹ್ಯ ವಲಯದ ಸುಧಾರಣೆಗೆ ಸರ್ಕಾರ ಕ್ರಮಗಳನ್ನು ತೆಗೆದುಕೊಂಡಿದೆ. ಅವುಗಳೆಂದರೆ ಮುಕ್ತ ವ್ಯಾಪಾರಕ್ಕೆ ಅವಕಾಶ, ಆಮದು ರಫ್ತುಗಳಿಗೆ ಸಂಬಂಧಿಸಿದ ಲೈಸೆನ್ಸ್ ಪದ್ಧತಿ, ನಿಯಂತ್ರಣ, ಪೂರ್ವಾನುಮತಿ ಇವುಗಳ ರದ್ಧತಿ, ಪ್ರಗತಿಪರ ಸುಂಕಗಳು, ವಿದೇಶಿ ವ್ಯಾಪಾರದ ಉದಾರೀಕರಣ, ಆಮದು ಮೇಲಿನ ನಿರ್ಬಂಧಗಳನ್ನು ಕಡಿಮೆಗೊಳಿಸಲಾಯಿತು, ಉದಾರೀಕೃತ ವಿದೇಶಿ ವಿನಿಮಯ ದರದ ತಂತ್ರದ ವ್ಯವಸ್ಥೆ, ಬಂಡವಾಳ ಸರಕುಗಳು, ಮಧ್ಯವರ್ತಿ ಸರಕುಗಳು ಮತ್ತು ಬಿಡಿಭಾಗಗಳ ಆಮದಿನ ಪರವಾನಗಿ ರದ್ದು, ವಿದೇಶಿ ಬಂಡವಾಳ ಹೂಡಿಕೆ ನೀತಿ ಉದಾರೀಕರಿಸಲಾಯಿತು. ವಿಶೇಷ ಆಮದಿನ ಪರವಾನಿಗಿ ರದ್ದು, ವಿದೇಶಿ ಬಂಡವಾಳ ಹೂಡಿಕೆ ನೀತಿ ಉದಾರಗೊಳಿಸಲಾಯಿತು, ವಿಶೇಷ ಆಮದು ಪರವಾನಿಗಿ, ವಿದೇಶಿ ಕಂಪನಿಗಳು ತಮ್ಮ ವ್ಯಾಪಾರಿ ಹೆಸರನ್ನಾಗಲಿ ಅಥವಾ ಚಿಹ್ನೆಯನ್ನಾಗಲಿ ಉಪಯೋಗಿಸಲು ಅನುಮತಿ, ವಿದೇಶಿ ಹೂಡಿಕೆದಾರರು ತಮ್ಮ ಹೂಡಿಕೆಯನ್ನು ತಮ್ಮ ದೇಶಕ್ಕೆ ಒಯ್ಯಲು ಅನುಮತಿ, ರಫ್ತು ನಿಯಂತ್ರಣಗಳ ಉದಾರೀಕರಣ, ಚಾಲ್ತಿ ಖಾತೆಯಲ್ಲಿ ರೂಪಾಯಿ ಪರಿವರ್ತನೆ, ವಿದೇಶಿ ಸಾಂಸ್ಥಿಕ ಹೂಡಿಕೆದಾರರಿಗೆ ಭಾರತದ ಬಂಡವಾಳ ಪೇಟೆ ಪ್ರವೇಶಿಸಲು ಅನುಮತಿ, ವಿದೇಶಿ ಹಣಕಾಸಿನ ಹೂಡಿಕೆ ಸಂಸ್ಥೆಗಳಿಗೆ ಭಾರತೀಯ ಕಂಪನಿಗಳಲ್ಲಿ ಬಂಡವಾಳ ತೊಡುಗಿಸಲು

ಅನುಮತಿ, ರಫ್ತು ಉತ್ಪಾದನೆಯನ್ನು ಪ್ರೋತ್ಸಾಹಿಸಲು ವಿಶೇಷ ಆರ್ಥಿಕ ವಲಯಗಳ ರಚನೆ - ಇವುಗಳು ಬಾಹ್ಯ ವಲಯದಲ್ಲಿನ ಸುಧಾರಣೆಗಳ ಪ್ರಮುಖ ಅಂಶಗಳು.

**ಸಾರಾಂಶ**

ರಾಷ್ಟ್ರೀಯ ಮತ್ತು ತಲಾದಾಯದ ಬೆಳವಣಿಗೆ ದರ ನಿರೀಕ್ಷಿತ ಮಟ್ಟಕ್ಕಿಂತ ಕಡಿಮೆ ಇದ್ದು ಆರ್ಥಿಕ ಬೆಳವಣಿಗೆ ಕುಂಠಿತವಾಗಿದೆ. ಕೃಷಿ ವಲಯದ ಪಾಲು ಬಹಳವೇ ಕಡಿಮೆಯಾಗುತ್ತಿದೆ. ದ್ವಿತೀಯ ಮತ್ತು ತೃತೀಯ ವಲಯಗಳ ಪಾಲು ಹೆಚ್ಚಾಗುತ್ತಿದೆ. ಆರ್ಥಿಕ ಅಸಮಾನತೆ ಹೆಚ್ಚಾಗಿ, ಹಂಚಿಕೆಯಲ್ಲಿ ಮತ್ತು ವಿತರಣೆಯಲ್ಲಿ ಅಸಮಾನತೆ ಎದ್ದು ಕಾಣುತ್ತಿದೆ. ಪ್ರಾದೇಶಿಕ ಅಸಮತೋಲನ ಹೆಚ್ಚಾಗುತ್ತಿದೆ. ವಿವಿಧ ವಲಯಗಳು ರಾಷ್ಟ್ರೀಯ ಮತ್ತು ತಲಾ ಆದಾಯದ ಬೆಳವಣಿಗೆಗೆ ಕೊಡುಗೆಯನ್ನು ಸಮರ್ಪಕವಾಗಿ ನೀಡುತ್ತಿಲ್ಲ. ಅವುಗಳಿಂದ ಬೆಳವಣಿಗೆ ದರ ಅಸಮಾನತೆಯನ್ನು ಕಾಣುತ್ತಿದೆ. ಪ್ರಾದೇಶಿಕ ಅಸಮಾನತೆಯೊಂದಿಗೆ ಗ್ರಾಮೀಣ ಮತ್ತು ನಗರ ಭಾಗದ ನಡುವಿನ ಅಂತರವು ಹೆಚ್ಚುತ್ತಿದ್ದು ಆರ್ಥಿಕ ಬೆಳವಣಿಗೆ ಮಟ್ಟ ಇದರಿಂದ ಕುಸಿಯುತ್ತಿದೆ. ಖಾಸಗೀಕರಣ ಮತ್ತು ಜಾಗತೀಕರಣದ ಹಿನ್ನೆಲೆಯಲ್ಲಿ ಖಾಸಗಿ ವಲಯ ಬೃಹತ್ ಪ್ರಮಾಣದಲ್ಲಿ ಬೆಳೆಯುತ್ತಿದೆ ಮತ್ತು ಆರ್ಥಿಕ ಬೆಳವಣಿಗೆಗೆ ತನ್ನದೇ ಕೊಡುಗೆಯನ್ನು ನೀಡುತ್ತಿದೆ.

ಭಾರತದಲ್ಲಿ ಆರ್ಥಿಕ ಸುಧಾರಣೆಗಳು ನೂತನ ಆರ್ಥಿಕ ನೀತಿ ೧೯೯೧ ಜುಲೈನಿಂದ ಜಾರಿಗೊಳಿಸಲಾಯಿತು. ಹಲವಾರು ಹೊಸ ಆರ್ಥಿಕ ಯೋಜನೆಗಳು ಪ್ರಾರಂಭಗೊಂಡು ಆರ್ಥಿಕ ಬೆಳವಣಿಗೆ ತ್ವರಿತಗತಿಯಲ್ಲಿ ಸಾಧ್ಯವಾಯಿತು. ಸ್ಥಿರೀಕರಣ ಮತ್ತು ರಚನಾತ್ಮಕ ಹೊಂದಾಣಿಕೆ ಕಾರ್ಯತಂತ್ರಗಳು ಇದರ ಎರಡು ಪ್ರಮುಖ ಅಂಶಗಳು. ಹೊಸ ಆರ್ಥಿಕ ನೀತಿಯ ಮತ್ತು ಆರ್ಥಿಕ ಸುಧಾರಣೆಗಳ ಪ್ರಮುಖ ಲಕ್ಷಣಗಳು ಯಾವುವೆಂದರೆ ಉದಾರೀಕರಣ, ಖಾಸಗೀಕರಣ, ಜಾಗತೀಕರಣ, ಮಾರುಕಟ್ಟೆ ಸ್ನೇಹಿ ಸರ್ಕಾರ, ಮತ್ತು ಆಧುನೀಕರಣ. ಆರ್ಥಿಕ ಸುಧಾರಣೆಯ ಪ್ರಮುಖ ವಲಯಗಳು ಯಾವುದೆಂದರೆ ಕೋಶಿಯ ವಲಯ, ಕೈಗಾರಿಕಾ ವಲಯ, ಹಣಕಾಸು ವಲಯ, ಸಾರ್ವಜನಿಕ ವಲಯ ಮತ್ತು ಬಾಹ್ಯ ವಲಯ. ಈ ಪ್ರಕಾರ ಜುಲೈ ೧೯೯೧ರಿಂದ ಸರಕಾರವು ಕೈಗೊಂಡ ಅನೇಕ ಪ್ರಕಾರದ ಸುಧಾರಣೆಗಳ ಮೂಲಕ ಅರ್ಥವ್ಯವಸ್ಥೆಯ ಮೇಲೆ ಅನುಕೂಲವಾದ ಪರಿಣಾಮವಾಯಿತು ಮತ್ತು ಅರ್ಥವ್ಯವಸ್ಥೆಗೆ ಚೇತರಿಕೊಳ್ಳಲು ಸಾಧ್ಯವಾಯಿತು. ಆದರೂ ಬೆಲೆಯೇರಿಕೆ, ಹಣದುಬ್ಬರ, ನಿರುದ್ಯೋಗ ನಿವಾರಣೆ, ಬಡತನ ಮೊದಲಾದವುಗಳನ್ನು ನಿವಾರಿಸಲು ಸಾಧ್ಯವಾಗಿಲ್ಲ.

### ಪಾರಿಭಾಷಿಕ ಪದಗಳು

| | |
|---|---|
| 1. Primary Source | ಪ್ರಾಥಮಿಕ ಮೂಲ |
| 2. Secondary Source | ಅನುಷಂಗಿಕ ಘಟಕ |
| 3. Statistical Unit | ಅಂಕಿಸಂಖ್ಯೆಯ ಘಟಕ |
| 4. Tabulation | ಪರಿಷ್ಕಾರ |
| 5. Classification | ವರ್ಗೀಕರಣ |
| 6. Monifold classification | ಬಹು ವಿಧ ವರ್ಗೀಕರಣ |
| 7. Frequency | ಆವೃತ್ತಿ |
| 8. Upper limit | ಮೇಲ್ತುದಿ ಸಂಖ್ಯೆ |
| 9. Statistical Series | ಅಂಕಿ ಸಂಖ್ಯೆ ಶ್ರೇಣಿಗಳು |
| 10. Individual Observation | ವ್ಯಕ್ತಿಗತ ವೀಕ್ಷಿಸುವ ಸಂಖ್ಯೆಗಳು |
| 11. Discreate Series | ಪೂರ್ಣಾಂಕ ಶ್ರೇಣಿಗಳು |
| 12. Continuous Series | ಸತತ ಸಂಖ್ಯಾ ಶ್ರೇಣಿಗಳು |
| 13. Iariables | ಚಲಗಳು |
| 14. Bar Diagram | ದಂಡಚಿತ್ರಗಳು |
| 15. Pie or augular diagram | ಆವೃತ್ತಿ / ಕೋನಚಿತ್ರಗಳು |
| 16. Histogram | ಆವೃತ್ತಿ ಸಂಖ್ಯಾಚಿತ್ರ |
| 17. Frequency Polygon | ಆವೃತ್ತಿ ವಿವರಣ ಬಹುಬುಜ ಚಿತ್ರ |
| 18. Ogive | ಸಂಚಿತ ಆವೃತ್ತಿ ಚಿತ್ರ |

## ಪ್ರಶ್ನೆಗಳು

ಕೆಳಗಿನ ಪ್ರಶ್ನೆಗಳನ್ನು ಒಂದೊಂದೇ ವಾಕ್ಯದಲ್ಲಿ ಉತ್ತರಿಸಿ

೧. ಅಂಕಿ ಅಂಶಗಳ ಮಾಹಿತಿ ಏಕೆ ಅಗತ್ಯ?

೨. ಆರ್ಥಿಕ ಸಮೀಕ್ಷೆ ಎಂದರೇನು?

೩. ಪ್ರಶ್ನಾವಳಿ ಎಂದರೇನು?

೪. ಪ್ರಾಥಮಿಕ ಮೂಲದ ಅಂಕಿ ಅಂಶ ಸಂಗ್ರಹಣೆ ಎಂದರೇನು?

೫. ದ್ವಿತೀಯ ಮೂಲದ ಅಂಕಿಅಂಶ ಸಂಗ್ರಹಣೆ ಎಂದರೇನು?

೬. ಅಂಕಿ ಅಂಶಗಳ ಪರಿಷ್ಕರಣ ಎಂದರೇನು?

೭. ಅಂಕಿ ಅಂಶಗಳ ವರ್ಗೀಕರಣ ಎಂದರೇನು?

೮. ವ್ಯಕ್ತಿಗತವಾಗಿ ನಿರೀಕ್ಷಿಸಿರುವ ಅಂಕಿ ಅಂಶಗಳು ಎಂದರೇನು?

ಕೆಳಗಿನ ಪ್ರಶ್ನೆಗಳಲ್ಲಿ ಪ್ರತಿಯೊಂದನ್ನು ೩ ಅಥವಾ ೪ ವಾಕ್ಯಗಳಲ್ಲಿ ಉತ್ತರಿಸಿ.

೧. ಸಂಖ್ಯಾ ಮಾಹಿತಿಯ ಉಪಯೋಗಗಳೇನು?

೨. ಸಂಖ್ಯಾ ಮಾಹಿತಿಯ ಮೂಲಗಳು ಯಾವುವು?

೩. ಸಂಖ್ಯಾ ಮಾಹಿತಿಯ ನಕ್ಷೆ ನಿರೂಪಣೆಯು ಉಪಯೋಗಗಳೇನು?

೪. ದಂಡ ಚಿತ್ರಗಳು ಎಂದರೇನು?

೫. ನಂಚಿತ ಆವೃತ್ತಿ ರೇಖೆ ಎಂದರೇನು?

ಕೆಳಗಿನ ಪ್ರಶ್ನೆಗಳಲ್ಲಿ ಪ್ರತಿಯೊಂದನ್ನು ಸುಮಾರು ೧೫ ವಾಕ್ಯಗಳಲ್ಲಿ ಉತ್ತರಿಸಿ.

೧. ಪ್ರಾಥಮಿಕ ಮತ್ತು ದ್ವಿತೀಯ ಮೂಲಗಳ ಮೂಲಕ ಅಂಕಿ ಅಂಶಗಳನ್ನು ಸಂಗ್ರಹಿಸುವ ಬಗೆಗಳನ್ನು ವಿವರಿಸಿ.

೨. ಸಮಯ ಶ್ರೇಣಿ ಮತ್ತು ನಿಶ್ಚಿತ ಅವಧಿಯ ಸಂಖ್ಯಾ ಮಾಹಿತಿಗಳ ನಡುವೆ ಇರುವ ವ್ಯತ್ಯಾಸವನ್ನು ಉದಾಹರಣೆಗಳ ಮೂಲಕ ವಿವರಿಸಿ.

೩. ಅರ್ಥಶಾಸ್ತ್ರದಲ್ಲಿ ಅಂಕಿ-ಅಂಶಗಳ ನಕ್ಷಾ ನಿರೂಪಣೆಯ ಉಪಯೋಗವನ್ನು ಸಂಕ್ಷಿಪ್ತವಾಗಿ ವಿವರಿಸಿ.

೪. ಆರ್ಥಿಕ ಬೆಳವಣಿಗೆಯನ್ನು ಲೆಕ್ಕ ಹಾಕುವ ವಿಧಾನವನ್ನು ಒಂದು ಉದಾಹರಣೆಯ ಮೂಲಕ ವಿವರಿಸಿ.

೫. ಒಂದು ವೈಯಕ್ತಿಕ ಸಂಖ್ಯಾ ಶ್ರೇಣಿಯನ್ನು ರಚಿಸಿ, ಅದರ ಮೂಲಕ, ಆವರ್ತ, ಸಂಚಿತ ಆವರ್ತದ ಪಟ್ಟಿಯನ್ನು ರಚಿಸಿ.

ಪ್ರಶ್ನೆಗಳು

೧. ರಾಷ್ಟ್ರೀಯ ವರಮಾನವೆಂದರೇನು?

೨. ತಲಾ ವರಮಾನ ಎಂದರೇನು?

೩. ಉದಾರೀಕರಣ ಎಂದರೇನು?

೪. ಭಾರತದ ಅರ್ಥವ್ಯವಸ್ಥೆಯ ಮೂರು ಪ್ರಮುಖ ವಲಯಗಳು ಯಾವುವು?

೫. ನೂತನ ಆರ್ಥಿಕ ನೀತಿಯ ಅರ್ಥವನ್ನು ತಿಳಿಸಿ.

೬. ಆರ್ಥಿಕ ಸುಧಾರಣೆಯ ಎರಡು ಅನುಕೂಲಗಳನ್ನು ತಿಳಿಸಿ.

II

೧. ರಾಷ್ಟ್ರೀಯ ಆದಾಯಕ್ಕೆ ಪ್ರಾಥಮಿಕ, ಮಾಧ್ಯಮಿಕ ಹಾಗೂ ತೃತೀಯ ರಂಗಗಳ ಕೊಡುಗೆ ಏನು?

೨. ಭಾರತದಲ್ಲಿ ತಲಾ ಆದಾಯದ ಬೆಳವಣಿಗೆಯ ನಾಲ್ಕು ಪ್ರವೃತ್ತಿಗಳನ್ನು ಹೇಳಿರಿ.

೩. ಭಾರತದ ರಾಷ್ಟ್ರೀಯ ಆದಾಯದ ೪ ಲಕ್ಷಣಗಳನ್ನು ಹೆಸರಿಸಿ.

೪. ೧೯೯೧ರ ಸುಧಾರಣಾ ನೀತಿಯ ಪ್ರಕಾರ, ಕೋಶೀಯ ವಲಯದ ಸುಧಾರಣೆಗಳನ್ನು ಹೇಳಿರಿ.
೫. ಬಾಹ್ಯವಲಯದ ನಾಲ್ಕು ಸುಧಾರಣಾ ಕ್ರಮಗಳನ್ನು ತಿಳಿಸಿರಿ.
೬. ಆರ್ಥಿಕ ಸುಧಾರಣೆಯ ಯಾವುದಾದರೂ ೪ ದೋಷಗಳನ್ನು ಹೆಸರಿಸಿ.

**III.**

೧. ರಾಷ್ಟ್ರೀಯ ವರಮಾನದ ರಅರ್ಥ ಮತ್ತು ಮಹತ್ವವನ್ನು ವಿವರಿಸಿ.
೨. ತಲಾ ಆದಾಯದ ಪ್ರವೃತ್ತಿಯ ಬಗ್ಗೆ ಒಂದು ಟಿಪ್ಪಣಿ ಬರೆಯಿರಿ.
೩. ಭಾರತದ ರಾಷ್ಟ್ರೀಯ ಆದಾಯ ಮತ್ತು ತಲಾ ಆದಾಯಗಳ ಪ್ರಮುಖ ಲಕ್ಷಣಗಳನ್ನು ಹೇಳಿರಿ.
೪. ಆರ್ಥಿಕ ಸುಧಾರಣೆಯ ಸಮಗ್ರ ಆರ್ಥಿಕ ಧ್ಯೇಯೋದ್ಧೇಶಗಳನ್ನು ತಿಳಿಸಿರಿ.
೫. ರಚನಾತ್ಮಕ ವಲಯಗಳ ಸುಧಾರಣೆಯ ಕ್ರಮಗಳನ್ನು ವಿವರಿಸಿ.
೬. ೧೯೯೧ರ ಆರ್ಥಿಕ ಸುಧಾರಣೆಗಳ ಬಗ್ಗೆ ವಿವರ ನೀಡಿರಿ.

**IV.**

೧. ಭಾರತದಲ್ಲಿ ರಾಷ್ಟ್ರೀಯ ಆದಾಯ ಮತ್ತು ತಲಾ ಆದಾಯದ ಪ್ರವೃತ್ತಿಗಳನ್ನು ನೀಡಿರಿ.
೨. ರಾಷ್ಟ್ರೀಯ ವರಮಾನದಲ್ಲಿ ವಿವಿಧ ವಲಯಗಳ ಪಾಲುಗಳ ಬಗೆಗೆ ವಿವರಿಸಿ.
೩. ಭಾರತದ ನಿವ್ವಳ ರಾಷ್ಟ್ರೀಯ ಉತ್ಪನ್ನದ ಚಿತ್ರಣವನ್ನು ವಿಶ್ಲೇಷಿಸಿ.
೪. ಆರ್ಥಿಕ ಸುಧಾರಣೆಯ ವಿವಿಧ ವಲಯಗಳನ್ನು ವಿವರಿಸಿ.
೫. ರಚನಾತ್ಮಕ ಸುಧಾರಣೆಗಳೆಂದರೇನು? ಇದಕ್ಕಾಗಿ ಸರ್ಕಾರ ಕೈಗೊಂಡ ಕ್ರಮಗಳನ್ನು ವಿವರಿಸಿ.
೬. ಭಾರತ ಸರ್ಕಾರದ ನೂತನ ಆರ್ಥಿಕ ನೀತಿಯನ್ನು ವಿಮರ್ಶಾತ್ಮಕವಾಗಿ ಪರೀಕ್ಷಿಸಿ.

# ಅಧ್ಯಾಯ ೨

# ಮಾನವ ಸಂಪನ್ಮೂಲ ಅಭಿವೃದ್ಧಿ

## ೨.೧. ಜನಸಂಖ್ಯೆಯ ಗಾತ್ರ

ನೈಸರ್ಗಿಕ ಸಂಪತ್ತಿನ ಬಳಕೆಗೆ ಶ್ರಮ ಅತ್ಯಗತ್ಯ. ಶ್ರಮವು ದೈಹಿಕ ಅಥವಾ ಮಾನಸಿಕ ಶ್ರಮ ಆಗಿರಬಹುದು. ಒಂದು ಉತ್ಪಾದನಾಂಗವಾಗಿ ಶ್ರಮವು ಆರ್ಥಿಕ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರ ವಹಿಸುವುದರಿಂದ ಒಂದು ರಾಷ್ಟ್ರದ ಜನಸಂಖ್ಯೆಯು ಮಾನವ ಸಂಪನ್ಮೂಲ ಎನಿಸಿಕೊಂಡಿದೆ. ಆಡಂಸ್ಮಿತ್ ತನ್ನ ರಾಷ್ಟ್ರಗಳ ಸಂಪತ್ತು ಪುಸ್ತಕದಲ್ಲಿ ಶ್ರಮವು ರಾಷ್ಟ್ರದ ಸಂಪತ್ತಿನ ನಿರ್ಧಾರಕ ಅಂಶ ಎಂದಿದ್ದಾನೆ. ಜನಸಂಖ್ಯೆಯ ಗಾತ್ರವು ಪ್ರಗತಿಪರ ಯೋಜನೆಗಳನ್ನು ಮಾಡಲು, ಬೇಡಿಕೆ ಪೂರೈಸಲು ಸಹಾಯಕವಾಗುತ್ತದೆ. ಒಂದು ಅವಧಿಯಲ್ಲಿ ಒಂದು ನಿರ್ದಿಷ್ಟ ದೇಶದಲ್ಲಿ ಇರುವ ಜನಸಂಖ್ಯೆ ಮತ್ತು ಅದರಲ್ಲಿ ಉಂಟಾಗುವ ಬದಲಾವಣೆ ಅಧ್ಯಯನ ಮೂಲಕ ಕೆಲವು ನೀತಿ ನಿರ್ಣಯಗಳನ್ನು ಕೈಗೊಳ್ಳಬಹುದು. ಜನನ, ಮರಣ ಮತ್ತು ವಲಸೆ ಇವುಗಳು ಜನಸಂಖ್ಯಾ ಗಾತ್ರದಲ್ಲಿ ಬದಲಾವಣೆ ಉಂಟು ಮಾಡುತ್ತವೆ. ಪ್ರಪಂಚದಲ್ಲಿ ಚೀನಾದ ನಂತರ ಭಾರತ ಅತಿ ಹೆಚ್ಚು ಜನಸಂಖ್ಯೆ ಹೊಂದಿದೆ. ಅಮೆರಿಕಾ ಮತ್ತು ರಷ್ಯಾ ದೇಶಗಳ ಜನಸಂಖ್ಯೆಗಿಂತ ಭಾರತದ ಜನಸಂಖ್ಯೆ ದೊಡ್ಡದು. ಆಫ್ರಿಕಾ ಮತ್ತು ಲ್ಯಾಟಿನ್ ಅಮೆರಿಕಾದ ೫೫ ದೇಶಗಳ ಒಟ್ಟು ಜನಸಂಖ್ಯೆಗೆ ಭಾರತದ ಜನಸಂಖ್ಯೆ ಸಮನಾಗಿದೆ. ಭಾರತದ ಜನಸಂಖ್ಯಾ ಬೆಳವಣಿಗೆ ದರ ವಾರ್ಷಿಕ ಶೇ. ೧.೯ ರಷ್ಟಿದೆ. ರಾಷ್ಟ್ರ ರಕ್ಷಣೆ, ಸಂಶೋಧನೆ, ಬಂಡವಾಳ ಸಂಚಯನ, ಉತ್ಪಾದನೆ, ಅನುಭೋಗ, ಸಾರಿಗೆ ಸಂಪರ್ಕ ಅಭಿವೃದ್ಧಿ, ಬುದ್ಧಿ ಕೌಶಲ ಪೂರೈಕೆ, ದಕ್ಷ ಆಡಳಿತ ಎಲ್ಲವೂ ಜನಸಂಖ್ಯೆಯ ಗಾತ್ರ ಮತ್ತು ಗುಣಮಟ್ಟವನ್ನು ಅವಲಂಬಿಸಿದೆ.

### ಭಾರತದಲ್ಲಿ ಜನಸಂಖ್ಯಾ ಬೆಳವಣಿಗೆ

ಭಾರತದಲ್ಲಿ ಜನಸಂಖ್ಯೆ ವೇಗವಾಗಿ ಏರುತ್ತಿದೆ. ಜನಸಂಖ್ಯಾ ಸಮಸ್ಯೆಯು ಆಹಾರ, ವಸತಿ, ಆರೋಗ್ಯ ಮುಂತಾದ ಅನೇಕ ಸಮಸ್ಯೆಗಳನ್ನು ತಂದಿದೆ. ಪ್ರಪಂಚದ ಭೌಗೋಳಿಕ ವಿಸ್ತೀರ್ಣದಲ್ಲಿ ಭಾರತದಲ್ಲಿ ಶೇ. ೨.೪ ರಷ್ಟು ಭೂಮಿ ಇದೆ. ಆದರೆ ಪ್ರಪಂಚದ ಜನಸಂಖ್ಯೆಯಲ್ಲಿ ಶೇ. ೧೬.೭. ರಷ್ಟು ಭಾರತದಲ್ಲಿದೆ. ಜಗತ್ತಿನ ಏಳು ಜನರಲ್ಲಿ ಒಬ್ಬ

ಭಾರತೀಯ, ಭಾರತದಲ್ಲಿ ಪ್ರತಿ ೧೧/೨ ಸೆಕೆಂಡಿಗೆ ಒಂದು ಮಗುವಿನಂತೆ ವರ್ಷಕ್ಕೆ ೨,೧೦,೨೪೦೦೦ ಮಕ್ಕಳು ಹುಟ್ಟುತ್ತಿವೆ. ೧೦ ವರ್ಷಕ್ಕೆ ಒಂದು ಬ್ರಿಟನ್‌ನಷ್ಟು ಜನಸಂಖ್ಯೆ ಭಾರತದಲ್ಲಿ ಸೃಷ್ಟಿಯಾಗುತ್ತಿದೆ.ಭಾರತದಲ್ಲಿ ದಶಮಾನದ ಜನಸಂಖ್ಯಾ ಬೆಳವಣಿಗೆ ಕೆಳಕಂಡಂತಿದೆ.

| ಜನಗಣತಿ ವರ್ಷ | ಜನಸಂಖ್ಯೆ (ಕೋಟಿಗಳಲ್ಲಿ) | ವಾರ್ಷಿಕ ಸರಾಸರಿ ಬೆಳವಣಿಗೆ ದರ (%) |
|---|---|---|
| ೧೯೦೧ | ೨೩.೮೩ | ೦.೫೦ |
| ೧೯೧೧ | ೨೫.೨೦ | ೦.೦೩ |
| ೧೯೨೧ | ೨೫.೧೨ | ೧.೦೬ |
| ೧೯೩೧ | ೨೭.೮೯ | ೧.೩೪ |
| ೧೯೪೧ | ೩೧.೮೫ | ೧.೨೬ |
| ೧೯೫೧ | ೩೬.೧೦ | ೧.೯೮ |
| ೧೯೬೧ | ೪೩.೯೧ | ೨.೨೦ |
| ೧೯೭೧ | ೫೪.೮೨ | ೨.೨೫ |
| ೧೯೮೧ | ೬೮.೫೨ | ೨.೧೪ |
| ೧೯೯೧ | ೮೪.೬೩ | ೧.೯೩ |
| ೨೦೦೧ | ೧೦೨.೭೦ | |
| ಅಂದಾಜು ಬೆಳವಣಿಗೆ | | |
| ೨೦೦೫ | ೧೦೭ ಕೋಟಿ | |
| ೨೦೧೦ | ೧೧೬.೨ ಕೋಟಿ | |
| ೨೦೧೫ | ೧೨೪.೫ ಕೋಟಿ | |

ಭಾರತದ ಜನಸಂಖ್ಯೆ ೨೧೦೧ ರಲ್ಲಿ ಅಂದಾಜು ೧೮೧ ಕೋಟಿ ಆಗಲಿದೆ. ಕೇರಳ ಮತ್ತು ತಮಿಳುನಾಡು ಹೊರತು ಪಡಿಸಿ ಎಲ್ಲಾ ರಾಜ್ಯಗಳಲ್ಲಿ ಜನಸಂಖ್ಯೆ ಏರಲಿದೆ. ಕೆಲವು ಮುಖ್ಯ ರಾಜ್ಯಗಳ ಜನಸಂಖ್ಯೆಯ ಬೆಳವಣಿಗೆ ಹಾಗೂ ಅಂದಾಜು ಕೆಳಕಂಡಂತಿದೆ (ಕೋಟಿಗಳಲ್ಲಿ)

| ರಾಜ್ಯಗಳು | ೧೯೯೧ | ೨೦೦೧ | ೨೦೫೧ (ಅಂದಾಜು) | ೨೧೦೧ (ಅಂದಾಜು) |
|---|---|---|---|---|
| ಕೇರಳ | ೨.೯೧ | ೩.೧೮ | ೩.೬೦ | ೫.೭೦ |
| ತಮಿಳನಾಡು | ೫.೫೯ | ೬.೨೧ | ೭.೨೦ | ೫.೭೦ |
| ಆಂಧ್ರಪ್ರದೇಶ | ೬.೬೮ | ೭.೫೭ | ೧೧.೯೯ | ೧೩.೦೫ |
| ಹಿಮಾಚಲ ಪ್ರದೇಶ | ೦.೫೨ | ೦.೬೧ | ೦.೯೫ | ೧.೦೩ |

| | | | | |
|---|---|---|---|---|
| ಕರ್ನಾಟಕ | ೪.೫೦ | ೫.೨೭ | ೭.೮೦ | ೮.೫೦ |
| ಮಹಾರಾಷ್ಟ್ರ | ೭.೮೯ | ೯.೬೮ | ೧೪.೭೪ | ೧೫.೯೬ |
| ಪಂಜಾಬ್ | ೨.೦೩ | ೨.೪೩ | ೩.೫೭ | ೩.೭೯ |
| ಪಶ್ಚಿಮ ಬಂಗಾಳ | ೬.೮೧ | ೮.೦೨ | ೧೨.೯ | ೧೩.೨೦ |
| ಗುಜರಾತ್ | ೪.೧೩ | ೫.೬೦ | ೭.೩೦ | ೮.೦೨ |
| ಓರಿಸ್ಸಾ | ೩.೧೭ | ೩.೬೭ | ೫.೩೯ | ೫.೯೫ |
| ಅಸ್ಸಾಂ | ೨.೨೪ | ೨.೬೬ | ೪.೨೦ | ೪.೭೦ |
| ಹರಿಯಾಣ | ೧.೬೫ | ೨.೧೧ | ೪.೧೧ | ೪.೮೮ |
| ಮಧ್ಯ ಪ್ರದೇಶ | ೬.೬೨ | ೮.೧೨ | ೧೪.೮೦ | ೧೭.೫೩ |
| ಬಿಹಾರ | ೮.೬೪ | ೧೦.೯೮ | ೧೮.೮೦ | ೨೧.೬೭ |
| ರಾಜಸ್ಥಾನ | ೪.೪೦ | ೫.೬೫ | ೧೦.೬೧ | ೧೨.೫೯ |
| ಉತ್ತರ ಪ್ರದೇಶ | ೧೩.೯೧ | ೧೭.೪೫ | ೩೩.೭೦ | ೪೦.೫೦ |

(ನವ್ಹೆಂಬರ್ ೯, ೨೦೦೪ ರಲ್ಲಿ ಪ್ರಕಟಿತ)

ಹಿಂದು ಮತ್ತು ಮುಸ್ಲಿಂ ಜನಸಂಖ್ಯೆ ಬೆಳವಣಿಗೆ ೧೯೯೧-೨೦೦೧ ದಶಮಾನದ ಅವಧಿಯಲ್ಲಿ ಕೆಳಕಂಡಂತೆ (ಶೇಕಡಾವಾರು)

| | | **ಹೊಂದಾಣಿಕೆ ಮಾಡದಿದ್ದಾಗ** | **ಹೊಂದಾಣಿಕೆ ಮಾಡಿದ ನಂತರ** |
|---|---|---|---|
| ಹಿಂದು | ೧೯೯೧ | ೮೨.೦ | ೮೨.೪ |
| | ೨೦೦೧ | ೮೦.೫ | ೮೧.೪ |
| ಮುಸ್ಲಿಂ | ೧೯೯೧ | ೧೨.೧ | ೧೧.೭ |
| | ೨೦೦೧ | ೧೩.೪ | ೧೨.೪ |

(ರಿಜಿಸ್ಟ್ರಾರ್ ಜನರಲ್, ಭಾರತದ ಜನಗಣತಿ ೨೦೦೧)

ಭಾರತದ ಜನಸಂಖ್ಯೆ ೧೯೦೧ರಲ್ಲಿ ೨೩.೮ ಕೋಟಿಯಿಂದ ಈಗ ೧೦೭ ಕೋಟಿಗೆ ಏರಿದೆ. ೧೯೨೧ ನೇ ವರ್ಷವನ್ನು "ಮಹಾ ಇಬ್ಭಾಗದ ವರ್ಷ" ಎಂದು ಕರೆಯಲಾಗಿದೆ. ಜನಸಂಖ್ಯಾ ಸ್ಫೋಟದ ಭಯ ಆವರಿಸಿದೆ. ಜನಸಂಖ್ಯೆ ಏರಿಕೆಗೆ ಮುಖ್ಯವಾದ ೨ ಅಂಶಗಳು ಹೀಗಿವೆ.

೧. **ಜನನ ಪ್ರಮಾಣದ ಏರಿಕೆ :** ಜನನ ಪ್ರಮಾದ ಏರಿಕೆಗೆ ಕಾರಣಗಳು ಹಲವಾರು. ಬಡತನ, ನಿಧಾನಗತಿಯ ನಗರೀಕರಣ, ಹಳ್ಳಿಯ ಜೀವನ, ಜನಸಂಖ್ಯಾ ನಿಯಂತ್ರಣ ಕ್ರಮಗಳ ಬಗ್ಗೆ ಅರಿವು ಇಲ್ಲದಿರುವುದು, ಬಾಲ್ಯ ವಿವಾಹ, ಮೌಢ್ಯತೆ, ಭೌಗೋಳಿಕ ಅಂಶಗಳು, ಶಿಕ್ಷಣದ ಕೊರತೆ, ರಾಜಕೀಯ ಇಚ್ಛಾಶಕ್ತಿಯ ಕೊರತೆ ಇತ್ಯಾದಿ.

೨. ಮರಣ ಪ್ರಮಾಣದ ಇಳಿಕೆ : ಮರಣ ಪ್ರಮಾಣದ ಇಳಿಕೆಗೆ ಕಾರಣಗಳು ಉತ್ತಮ ಆರೋಗ್ಯ ಸೌಲಭ್ಯಗಳು, ಬರಗಾಲ ನಿಯಂತ್ರಣ, ಶಿಶು ಮರಣ ದರ ತಗ್ಗುವುದು, ಶಿಕ್ಷಣ ಹೆಚ್ಚುತ್ತಿರುವುದು ಇತ್ಯಾದಿ. ಜನನ ಪ್ರಮಾಣ ಮತ್ತು ಮರಣ ಪ್ರಮಾಣದ ನಡುವಿನ ಅಂತರ ಹೆಚ್ಚಳದಿಂದ ಜನಸಂಖ್ಯೆ ಹೆಚ್ಚಾಗಿದೆ. ವಲಸೆಯಿಂದ, ನಿರಾಶ್ರಿತರಿಂದಲೂ ಜನಸಂಖ್ಯೆ ಏರಿರುವುದನ್ನು ಕಾಣಬಹುದು. ಇತ್ತೀಚಿಗೆ ಭಾರತದ ೨೦೦೧ರ ಜನಗಣತಿಯಲ್ಲಿ ಮುಸ್ಲಿಂ ಜನಸಂಖ್ಯೆ ಬಗ್ಗೆ ಸಾಕಷ್ಟು ವಿವಾದಗಳಾಗಿತ್ತು. ಲೆಕ್ಕಾಚಾರವನ್ನು ಹೊಂದಾಣಿಕೆ ಮಾಡಿದ ನಂತರ ವಿವಾದ ತಣ್ಣಗಾಗಿದೆ. ೧೯೯೨-೯೩ ಮತ್ತು ೧೯೯೮-೯೯ರ ನಡುವೆ ಹಿಂದು-ಮುಸ್ಲಿಂ ಜನಸಂಖ್ಯೆಯ ಫಲವತ್ತತೆ ಅಂತರ ಕಡಿಮೆಯಾಗಿದ್ದು, ಮುಂದೆ ಇವೆರಡೂ ಸಮಾನವಾಗುವ ಸಾಧ್ಯತೆಗಳಿವೆ ಎಂದು ಅಧ್ಯಯನಗಳು ತಿಳಿಸುತ್ತವೆ.

**ಜನಸಂಖ್ಯೆಯ ಸಂಯೋಜನೆ**

ಜನಸಂಖ್ಯೆಯ ಸಂಯೋಜನೆ ಅಥವಾ ಜನಸಂಖ್ಯೆಯ ರಚನೆಯು ಜನಸಂಖ್ಯೆಯ ಲಕ್ಷಣ, ಲಿಂಗ, ರಾಷ್ಟ್ರೀಯತೆ, ಭಾಷೆ, ಅಂತಸ್ತು, ಉದ್ಯೋಗ, ಆದಾಯ ಮುಂತಾದವುಗಳನ್ನು ಒಳಗೊಂಡಿದೆ. ಒಂದು ರಾಷ್ಟ್ರದ ಜನಸಂಖ್ಯೆಯ ಲಿಂಗ ಮತ್ತು ವಯಸ್ಸು, ಅಲ್ಲಿಯ ಜೈವಿಕ ಲಕ್ಷಣಗಳಾಗಿದ್ದು, ಇದರ ಮೂಲಕ ಒಂದು ಸಮಾಜದ ಅಧ್ಯಯನ ಮಾಡಬಹುದು. ಲಿಂಗ ಮತ್ತು ವಯಸ್ಸಿನ ಅಂಕಿಸಂಖ್ಯೆಗಳು ಶಿಕ್ಷಣ, ಆರೋಗ್ಯ ಮತ್ತು ಮೂಲಭೂತ ಸೌಕರ್ಯಗಳ ಬಗ್ಗೆ ವಿಶಾಲಾತ್ಮಕ ತೀರ್ಮಾನ ತೆಗೆದುಕೊಳ್ಳಲು ಸಹಾಯಕವಾಗುತ್ತವೆ. ಒಂದು ದೇಶದ ಒಟ್ಟು ಜನಸಂಖ್ಯೆಯಲ್ಲಿ ಸ್ತ್ರೀಯರ ಮತ್ತು ಪುರುಷರ ನಡುವಿನ ಅನುಪಾತವನ್ನು ಲೈಂಗಿಕ ಅನುಪಾತ ಎನ್ನಲಾಗಿದೆ. ಭಾರತದಲ್ಲಿ ಲಿಂಗ ಅನುಪಾತ ಹೀಗಿದೆ.

| ವರ್ಷ | ಪ್ರತಿ ಸಾವಿರ ಪುರುಷರಿಗೆ ಸ್ತ್ರೀಯರ ಸಂಖ್ಯೆ |
|---|---|
| ೧೯೦೧ | ೯೭೨ |
| ೧೯೧೧ | ೯೬೪ |
| ೧೯೨೧ | ೯೫೫ |
| ೧೯೫೧ | ೯೪೬ |
| ೧೯೬೧ | ೯೪೧ |
| ೧೯೭೧ | ೯೩೦ |
| ೧೯೮೧ | ೯೩೪ |
| ೧೯೯೧ | ೯೨೭ |
| ೨೦೦೧ | ೯೩೩ |

ಪ್ರತಿ ಸಾವಿರ ಪುರುಷರಿಗೆ ಸ್ತ್ರೀಯರ ಸಂಖ್ಯೆ ಇಳಿಮುಖವಾಗುತ್ತಿರುವ ಬಗ್ಗೆ ಹೆಣ್ಣು ಭ್ರೂಣ ಹತ್ಯೆಯ ಬಗ್ಗೆ, ಮಗು ಹುಟ್ಟುವ ಮೊದಲೇ ಸ್ಕ್ಯಾನಿಂಗ್ ಮಾಡಿಸುವ ಬಗ್ಗೆ ಸಾಕಷ್ಟುವಾದ ವಿವಾದಗಳಿವೆ. ಕೇರಳ ರಾಜ್ಯದಲ್ಲಿ ಮಾತ್ರ ಪ್ರತಿ ಸಾವಿರ ಪುರುಷರಿಗೆ ಸ್ತ್ರೀಯರ ಸಂಖ್ಯೆ ೧೦೫೮ ಇದ್ದು, ಕಾಲಾನಂತರ ಇದು ಕೂಡ ಕಡಿಮೆಯಾಗಿದೆ. ಭಾರತದ ರಾಜ್ಯಗಳಲ್ಲಿ ಲಿಂಗ ಅನುಪಾತ ಒಂದೇ ರೀತಿ ಇಲ್ಲ. ಉದಾ. ಕೆಲವು ರಾಜ್ಯಗಳಲ್ಲಿ ಲಿಂಗ ಅನುಪಾತ ಕೆಳಕಂಡಂತಿದೆ. ಪ್ರತಿ ೧೦೦೦ ಪುರುಷರಿಗೆ ಸ್ತ್ರೀಯರ ಸಂಖ್ಯೆ

| ರಾಜ್ಯ | ಪುರುಷರು | ಸ್ತ್ರೀಯರು |
|---|---|---|
| ಕೇರಳ | ೧೦೦೦ | ೧೦೫೮ |
| ಆಂಧ್ರಪ್ರದೇಶ | ೧೦೦೦ | ೯೭೮ |
| ಕರ್ನಾಟಕ | ೧೦೦೦ | ೯೬೪ |
| ಪಂಜಾಬ್ | ೧೦೦೦ | ೮೭೪ |
| ಉತ್ತರ ಪ್ರದೇಶ | ೧೦೦೦ | ೮೭೬ |

ಹೀಗೆ ಸ್ತ್ರೀಯರ ಮತ್ತು ಪುರುಷರ ಲೈಂಗಿಕ ಅನುಪಾತ ಅಸಮತೋಲನ ಹೊಂದಿದೆ. ಭಾರತದಲ್ಲಿ ಸ್ತ್ರೀಯರ ಪ್ರಮಾಣ ಕಡಿಮೆ ಇರುವುದಕ್ಕೆ ಹಲವಾರು ಕಾರಣಗಳಿವೆ. ಅನಕ್ಷರತೆ, ಹೆಣ್ಣು ಮಕ್ಕಳು ಎದುರಿಸಬೇಕಾದ ಸಾಮಾಜಿಕ ಸಮಸ್ಯೆಗಳು, ಹಳ್ಳಿಗಳಲ್ಲಿ ಸಾಕಷ್ಟು ಶಿಕ್ಷಣ ಇಲ್ಲದಿರುವುದು, ಜನಗಣನೆ ಸಮಯದಲ್ಲಿ ಮಹಿಳೆಯರ ಬಗ್ಗೆ ಸರಿಯಾದ ಮಾಹಿತಿ ನೀಡದಿರುವುದು ಇತ್ಯಾದಿ. ಇತ್ತೀಚಿಗೆ ರಾಜಕೀಯದಲ್ಲಿ, ಉದ್ಯೋಗದಲ್ಲಿ ಮಹಿಳಾ ಮೀಸಲಾತಿ ಮೂಲಕ ಅವರ ಸ್ಥಾನಮಾನಗಳನ್ನು ಹೆಚ್ಚಿಸಲು ಸಾಧ್ಯವಾಗಿದೆ. ಗಾಂಧೀಜಿಯವರು ಹೇಳಿದಂತೆ ಒಬ್ಬ ಮಹಿಳೆ ಮಧ್ಯರಾತ್ರಿಯಲ್ಲಿ ಕೂಡ ನಿರ್ಭಯವಾಗಿ ಮನೆಯ ಹೊರಗೆ ಓಡಾಡಿಕೊಂಡಿರುವುದು ನಿಜವಾದ ಸ್ವಾತಂತ್ರ್ಯವಾಗಿದೆ.

ಲಿಂಗ ಅನುಪಾತವನ್ನು ಕಂಡುಹಿಡಿಯಲು ಈ ಕೆಳಗಿನ ಸೂತ್ರವನ್ನು ಬಳಸಲಾಗಿದೆ.

$$\text{ಲಿಂಗ ಅನುಪಾತ} = \frac{\text{ಮಹಿಳೆಯರ ಸಂಖ್ಯೆ}}{\text{ಪುರುಷರ ಸಂಖ್ಯೆ}} \times ೧೦೦$$

ಉದಾಹರಣೆಗೆ ಪುರುಷರ ಸಂಖ್ಯೆ ೮೦೦೦, ಸ್ತ್ರೀಯರ ಸಂಖ್ಯೆ ೧೦೦೦೦ ಇದ್ದರೆ

$$\text{ಲಿಂಗ ಅನುಪಾತ} = \frac{೮೦೦೦}{೧೦೦೦೦} \times ೧೦೦೦ = ೮೦೦$$

ಪ್ರತಿ ಸಾವಿರ ಪುರುಷರಿಗೆ ೮೦೦ ಜನ ಪುರುಷರು ಎಂದು ಲೆಕ್ಕಹಾಕಲಾಗುತ್ತದೆ. ನಗರಗಳಲ್ಲಿನ ಸ್ತ್ರೀ ಮತ್ತು ಪುರುಷರ ಅನುಪಾತ ಮತ್ತು ಗ್ರಾಮೀಣ ಪ್ರದೇಶಗಳಲ್ಲಿನ ಅನುಪಾತದಲ್ಲಿ ಸಾಕಷ್ಟು ಅಂತರವಿದೆ. ಬಡತನವು ಲಿಂಗ ನಿರ್ಧಾರದಲ್ಲಿ ಪ್ರಮುಖ ಪಾತ್ರವಹಿಸುತ್ತದೆ. ಜನಸಂಖ್ಯೆ ಲಿಂಗ ಮತ್ತು ವಯಸ್ಸು ಆರ್ಥಿಕ ಚಟುವಟಿಕೆಯನ್ನು

ಕೂಡ ಪ್ರಭಾವಗೊಳಿಸುವುದರ ಜೊತೆಗೆ ಜನಸಂಖ್ಯಾ ಬೆಳವಣಿಗೆಯನ್ನು ಕೂಡ ಪ್ರಭಾವಗೊಳಿಸುತ್ತದೆ.

ಜನಸಂಖ್ಯೆಯಲ್ಲಿ ವಯಸ್ಸಿನ ವಿಶ್ಲೇಷಣೆ ತುಂಬಾ ಅಗತ್ಯ. ಒಂದು ರಾಷ್ಟ್ರದ ಶ್ರಮದ ಪ್ರಮಾಣ ನಿರ್ಧಾರವಾಗುವುದು ದುಡಿಯುವ ವಯಸ್ಸಿನ (೧೫ ರಿಂದ ೫೯ ವರ್ಷ) ಜನಗಳ ಸಂಖ್ಯೆಯ ಆಧಾರದಿಂದ. ೧೯೯೧ ರಲ್ಲಿ ದುಡಿಯುವ ವಯಸ್ಸಿನ ಜನಸಂಖ್ಯೆ ಶೇ ೫೭.೭ ರಷ್ಟಿದ್ದು ೦-೧೪ರ ವಯಸ್ಸಿನ ಮಕ್ಕಳ ಸಂಖ್ಯೆ ಶೇ.೩೬.೩ ರಷ್ಟಿತ್ತು. ಇತರೇ ಅಭಿವೃದ್ಧಿಶೀಲ ದೇಶಗಳಿಗೆ ಹೋಲಿಸಿದರೆ ಭಾರತದಲ್ಲಿ ಮಕ್ಕಳ ಸಂಖ್ಯೆ ಹೆಚ್ಚು. ಇದಕ್ಕೆ ಕಾರಣ ನಮ್ಮ ದೇಶದಲ್ಲಿ ಜನನ ದರ ಹೆಚ್ಚಿರುವುದು, ಶಿಶು ಮರಣ ಸಂಖ್ಯೆ ತಗ್ಗಿರುವುದು, ಹೆಚ್ಚಿನ ಸಂಖ್ಯೆಯ ಮಕ್ಕಳು ಎಂದರೆ ಹೆಚ್ಚಿನ ಸಂಖ್ಯೆಯ ಅನುತ್ಪಾದಕ ಅನುಭೋಗಿಗಳು ಎಂದರ್ಥ. ಇದರ ಜೊತೆಗೆ ೬೦ ವರ್ಷಕ್ಕಿಂತ ಹೆಚ್ಚಿರುವವರ ಸಂಖ್ಯೆ ಶೇ. ೬ ರಷ್ಟಿದೆ. ಈ ವಯಸ್ಸಿನವರ ಸಂಖ್ಯೆ ಕಡಿಮೆ ಇರಲು ಕಾರಣ ನಮ್ಮ ಜೀವಿತಾವಧಿ ಕಡಿಮೆ ಇರುವುದು. ನಮ್ಮ ಈಗಿನ ಸರಾಸರಿ ಜೀವಿತಾವಧಿ ೬೩ ವರ್ಷಗಳು.

ವಯಸ್ಸಿನ ಆಧಾರದ ಮೇಲೆ ಭಾರತದ ಜನಸಂಖ್ಯೆ ರಚನೆಯಲ್ಲಿ ೧೯೧೧ ರಿಂದ ೧೯೯೧ ರವರೆಗೆ ಹೆಚ್ಚಿನ ಬದಲಾವಣೆ ಆಗಿಲ್ಲದಿರುವುದನ್ನು ಕೆಳಗಿನ ಪಟ್ಟಿಯಿಂದ ತಿಳಿಯಬಹುದು. (ಶೇಕಡಾವಾರು ಅನುಪಾತದಲ್ಲಿ)

**ವಯೋಮಾನ**

| ವರ್ಷ | ೦-೧೪ | ೧೫-೬೦ | ೬೦ ಕ್ಕೆ ಮೇಲ್ಪಟ್ಟು |
|---|---|---|---|
| ೧೯೧೧ | ೩೮.೮ | ೬೦.೨ | ೧.೦ |
| ೧೯೨೧ | ೩೯.೨ | ೫೯.೬ | ೧.೨ |
| ೧೯೩೧ | ೩೮.೩ | ೬೦.೨ | ೧.೫ |
| ೧೯೬೧ | ೪೧.೦ | ೫೩.೩ | ೫.೭ |
| ೧೯೭೧ | ೪೧.೪ | ೫೩.೪ | ೫.೨ |
| ೧೯೮೧ | ೩೯.೭ | ೫೪.೧ | ೬.೨ |
| ೧೯೯೧ | ೩೬.೫ | ೫೭.೧ | ೬.೪ |

ಕಾರ್ಯ ಪ್ರವೃತ್ತ ಅಥವಾ ಉತ್ಪಾದಕ ಜನಸಂಖ್ಯೆ ಪ್ರಮಾಣವನ್ನು ಹೆಚ್ಚಿಸಲು ಜನನದರವನ್ನು ಕಡಿಮೆ ಮಾಡಬೇಕು. ಭಾರತದಲ್ಲಿ ಜಾತಿ-ಮತ ಆಧಾರಿತ ಜನಸಂಖ್ಯೆ ೧೯೯೧ ರಲ್ಲಿ ಹಿಂದುಗಳು ಶೇ. ೮೨, ಬೌದ್ಧರು ಶೆ. ೦.೮, ಕ್ರಿಶ್ಚಿಯನ್ನರು ಶೇ. ೨.೩, ಜೈನರು ಶೆ. ೦.೪, ಮುಸ್ಲಿಂ ಶೇ.೧೨.೧, ಸಿಖ್ ಶೇ ೧.೯, ಇತರೇ ೦.೪.

**ಗ್ರಾಮ ಮತ್ತು ನಗರಗಳ ಜನಸಂಖ್ಯಾ ರಚನೆ**

ಭಾರತ ಹಳ್ಳಿಗಳ ದೇಶ ಗ್ರಾಮೀಣ ಮತ್ತು ಪಟ್ಟಣ ಪ್ರದೇಶಗಳಲ್ಲಿ ವಾಸಿಸುತ್ತಿರುವ

ಜನರಲ್ಲಿ ಈ ಶತಮಾನದ ಆರಂಭದಿಂದಲೂ ಬದಲಾವಣೆಯಾಗುತ್ತಾ ಬಂದಿದೆ. ಭಾರತದಲ್ಲಿ ನಗರೀಕರಣ ತುಂಬಾ ನಿಧಾನ. ೧೯೯೧ ರಲ್ಲಿ ರಷ್ಯಾದಲ್ಲಿ ಶೆ. ೭೪ ರಷ್ಟು, ಅಮೆರಿಕಾದಲ್ಲಿ ಶೇ. ೭೬ ರಷ್ಟು, ಜಪಾನಿನಲ್ಲಿ ಶೆ. ೭೭ ರಷ್ಟು, ಆಸ್ಟ್ರೇಲಿಯಾದಲ್ಲಿ ಶೇ.೮೫ ರಷ್ಟು, ಇಂಗ್ಲೆಂಡ್‌ನಲ್ಲಿ ಶೇ. ೮೯ ರಷ್ಟು ಜನಸಂಖ್ಯೆ ನಗರ ಮತ್ತು ಪಟ್ಟಣಗಳಲ್ಲಿ ವಾಸಿಸುತ್ತಿದ್ದರೆ, ಭಾರತದಲ್ಲಿ ಈ ಪ್ರಮಾಣ ತುಂಬಾ ಕಡಿಮೆ ಶೇ. ೨೭.೮ರಷ್ಟು. ಇತ್ತೀಚೆಗೆ ಗ್ರಾಮಗಳಿಂದ ನಗರಗಳಿಗೆ ವಲಸೆ ಹೆಚ್ಚಿದೆ. ಗ್ರಾಮ ಮತ್ತು ನಗರಗಳ ನಡುವೆ ಪರಸ್ಪರ ಆರ್ಥಿಕ, ಸಾಮಾಜಿಕ, ರಾಜಕೀಯ ಸಂಬಂಧಗಳಿದ್ದರೂ, ಇವೆರಡರ ನಡುವೆ ಬಡತನ ರೇಖೆ, ಜೀವನ ಮಟ್ಟ, ಸೌಲಭ್ಯಗಳು, ಆದಾಯ, ಅನುಭೋಗ ಇತ್ಯಾದಿಗಳಲ್ಲಿ ಅಗಾಧ ಅಂತರವಿದೆ. ಜನರ ಮನೋಭಾವದಲ್ಲಿಯೂ ಸಾಕಷ್ಟು ವ್ಯತ್ಯಾಸಗಳಿವೆ. ಗ್ರಾಮೀಣ ಮತ್ತು ಪಟ್ಟಣ ಜನಸಂಖ್ಯೆ ಶೇಕಡಾವಾರು ಕೆಳಕಂಡಂತಿದೆ.

| ವರ್ಷ | ಗ್ರಾಮೀಣ ಜನಸಂಖ್ಯೆ | ಪಟ್ಟಣ ಜನಸಂಖ್ಯೆ |
|---|---|---|
| ೧೯೦೧ | ೯೮.೦ | ೧೧.೦ |
| ೧೯೧೧ | ೮೯.೬ | ೧೦.೪ |
| ೧೯೨೧ | ೮೮.೭ | ೧೧.೩ |
| ೧೯೩೧ | ೮೭.೮ | ೧೨.೨ |
| ೧೯೪೧ | ೮೫.೯ | ೧೪.೧ |
| ೧೯೫೧ | ೮೨.೭ | ೧೭.೩ |
| ೧೯೬೧ | ೮೨.೦ | .೧೮.೦ |
| ೧೯೭೧ | ೮೦.೧ | ೧೯.೯ |
| ೧೯೮೧ | ೭೬.೭ | ೨೩.೩ |
| ೧೯೯೧ | ೭೪.೩ | ೨೫.೭ |
| ೨೦೦೧ | ೭೨.೨ | ೨೭.೮ |

ಭಾರತದಲ್ಲಿ ಕೃಷಿ ಮುಖ್ಯ ಉದ್ಯೋಗವಾಗಿರುವುದರಿಂದ ಗ್ರಾಮಗಳಲ್ಲಿ ಜನಸಂಖ್ಯೆ ಹೆಚ್ಚು. ಕೈಗಾರೀಕರಣದ ಪ್ರಗತಿ ನಿರೀಕ್ಷಿತ ಮಟ್ಟದಲ್ಲಿ ಇಲ್ಲದಿರುವುದರಿಂದ ನಗರ ಜನಸಂಖ್ಯೆ ಕಡಿಮೆ. ನಗರಗಳಿಗೆ ವಲಸೆ ಬರುವವರು ಹೆಚ್ಚಾಗಿ ಉದ್ಯೋಗ ನಿರೀಕ್ಷೆಯಿಂದ ಬರುತ್ತಾರೆ. ಗ್ರಾಮಗಳಲ್ಲಿ ಬಡತನ, ಸೌಲಭ್ಯಗಳ ಕೊರತೆ, ಬರಗಾಲ ಇವುಗಳಿಂದಾಗಿ ನಗರಗಳಿಗೆ ವಲಸೆ ಹೆಚ್ಚು. ನಿರಾಶ್ರಿತರ ಸಂಖ್ಯೆಯು ಹೆಚ್ಚಾಗುತ್ತಿದ್ದು, ಇವರು ಪಟ್ಟಣಗಳಲ್ಲಿ ವಾಸ ಮಾಡುತ್ತಿದ್ದು, ಇತ್ತೀಚಿಗೆ ಟಿಬೆಟ್ ನಿರಾಶ್ರಿತರೇ ಭಾರತ ಬಿಟ್ಟು ಹೋಗಿ ಎಂಬ ಹೋರಾಟ ಆರಂಭವಾಗಿದೆ. ಭಾರತದಂತಹ ರಾಜಕೀಯ ವ್ಯವಸ್ಥೆಯಲ್ಲಿ

ರಾಜಕೀಯವಾಗಿ ಓಟುಗಳು ಶೇಕಡಾವಾರು ಹೆಚ್ಚು ಮತದಾನವಾಗುವುದು ಗ್ರಾಮಗಳಲ್ಲಿ.

ನಗರೀಕರಣದಿಂದ ಹಲವಾರು ಅನುಕೂಲಗಳಿವೆ. ಗ್ರಾಮಗಳಲ್ಲಿ ಕೃಷಿಯ ಮೇಲಿನ ಒತ್ತಡ ಕಡಿಮೆಯಾಗುತ್ತದೆ, ನಗರದಲ್ಲಿ ಉದ್ಯೋಗ ಅವಕಾಶಗಳು ಸೃಷ್ಟಿಯಾಗುತ್ತವೆ. ಆದಾಯ ಹೆಚ್ಚುತ್ತದೆ ಎಂಬ ವಾದವಿದೆ. ನಗರೀಕರಣ ಮತ್ತು ತಲಾ ಆದಾಯಗಳು ಧನಾತ್ಮಕ ಸಹಸಂಬಂಧ ಹೊಂದಿವೆ. ಆದರೆ ನಗರೀಕರಣ ಮತ್ತು ಉದ್ಯೋಗ ಸೃಷ್ಟಿ, ನಗರೀಕರಣ ಮತ್ತು ಬಡತನ ಕಡಿಮೆ ಮಾಡುವುದರಲ್ಲಿ ಋಣಾತ್ಮಕ ಸಹಸಂಬಂಧವಿದೆ. ಇದಕ್ಕೆ ಕಾರಣ ನಗರಗಳಲ್ಲಿ ಉತ್ಪಾದನೆಗೆ ಹೆಚ್ಚಾಗಿ ಬಂಡವಾಳ ಆಧಾರಿತ ಹೂಡಿಕೆ ಹೆಚ್ಚುತ್ತಿರುವುದು. ನಗರ ಜನಸಂಖ್ಯೆ ಹೆಚ್ಚಿದಂತೆ ಸಂಚಾರ ಸಮಸ್ಯೆ, ಸೌಲಭ್ಯಗಳ ಸಮಸ್ಯೆ, ಕೊಳಚೆ ಪ್ರದೇಶಗಳ ಸಮಸ್ಯೆ, ಅಪರಾಧಗಳು ಮತ್ತು ಪರಿಸರ ಮಾಲಿನ್ಯ ಹೆಚ್ಚುತ್ತದೆ. ಭಾರತದಲ್ಲಿ ಗ್ರಾಮೀಣ ಪಟ್ಟಣ ಸಂಬಂಧಗಳು ಉತ್ತಮಗೊಂಡರೆ ವಿದೇಶಿ ಕಾರ್ಪೊರೇಟ್ ವಲಯದ ಜೊತೆಗೆ, ಸಣ್ಣ ಕೈಗಾರಿಕೆಗಳು ಹೆಚ್ಚಾದರೆ ಗ್ರಾಮ ನಗರ ವ್ಯತ್ಯಾಸಗಳನ್ನು ಕಡಿಮೆ ಮಾಡಬಹುದು. ಉಪನಗರಗಳ ಸೃಷ್ಟಿ ಗ್ರಾಮ ನಗರ ಸಂಬಂಧಗಳನ್ನು ಉತ್ತಮ ಪಡಿಸುತ್ತದೆ.

**ಜನಸಾಂದ್ರತೆ**

ಪ್ರತಿ ಒಂದು ಚದುರ ಕಿ.ಮೀ. ಪ್ರದೇಶದಲ್ಲಿ ವಾಸಿಸುವ ಜನಸಂಖ್ಯೆಯ ಪ್ರಮಾಣವೇ ಜನಸಾಂದ್ರತೆ. ಭೌಗೋಳಿಕ ಪ್ರದೇಶ ಸ್ಥಿರವಾಗಿದ್ದು, ಜನಸಂಖ್ಯೆಯ ಪ್ರಮಾಣ ಹೆಚ್ಚಿದಂತೆ ಜನಸಾಂದ್ರತೆಯೂ ಹೆಚ್ಚುತ್ತದೆ. ಜನ ನಿಬಿಡ ಪ್ರದೇಶವನ್ನು ಹೆಚ್ಚು ಜನಸಾಂದ್ರತೆ ಪ್ರದೇಶವೆಂದೂ ಜನಸಂಖ್ಯೆ ವಿರಳವಾಗಿ ಹಂಚಿ ಹೋಗಿರುವ ಪ್ರದೇಶವನ್ನು ಕಡಿಮೆ ಜನಸಾಂದ್ರತೆ ಪ್ರದೇಶ ಎಂದು ಹೇಳಲಾಗುತ್ತದೆ. ಸೌಕರ್ಯ-ಸೌಲಭ್ಯ ಹೆಚ್ಚಿರುವ ಪ್ರದೇಶದಲ್ಲಿ ಜನಸಾಂದ್ರತೆ ಹೆಚ್ಚು. ಗ್ರಾಮೀಣ ಪರದೇಶಗಳಲ್ಲಿ, ಗುಡ್ಡಗಾಡು ಪ್ರದೇಶಗಳಲ್ಲಿ ಜನಸಾಂದ್ರತೆ ಕಡಿಮೆ. ಭಾರತದಲ್ಲಿ ಜನಸಾಂದ್ರತೆಯನ್ನು ಕೆಳಗಿನ ಪಟ್ಟಿಯಲ್ಲಿ ತೋರಿಸಲಾಗಿದೆ.

**ಭಾರತದಲ್ಲಿ ಜನಸಾಂದ್ರತೆ**

| ವರ್ಷ | ಜನಸಾಂದ್ರತೆ ಪ್ರತಿ ಚದುರ ಕೀ.ಮೀ.ಗೆ |
|---|---|
| ೧೯೦೧ | ೭೭ |
| ೧೯೧೧ | ೮೨ |
| ೧೯೨೧ | ೮೧ |
| ೧೯೩೧ | ೯೦ |
| ೧೯೪೧ | ೧೦೩ |
| ೧೯೫೧ | ೧೧೭ |

| | |
|---|---|
| ೧೯೬೧ | ೧೪೨ |
| ೧೯೭೧ | ೧೭೮ |
| ೧೯೮೧ | ೨೧೬ |
| ೧೯೯೧ | ೨೬೭ |
| ೨೦೦೧ | ೩೨೪ |

ಹೀಗೆ ಜನಸಾಂದ್ರತೆ ಹೆಚ್ಚುತ್ತಾ ಹೋಗಿದೆ. ರಾಜ್ಯಗಳ ನಡುವೆ ಜನಸಾಂದ್ರತೆಯಲ್ಲಿ ವ್ಯತ್ಯಾಸಗಳಿವೆ. ಉದಾ. ಹಿಮಾಚಲ ಪ್ರದೇಶ ೧೩, ಪಶ್ಚಿಮ ಬಂಗಾಳ ೯೦೪, ಬಿಹಾರ ೮೮೦, ದೆಹಲಿ ರಾಜ್ಯ ೯೨೯೪, ನಗರಗಳಲ್ಲಿ ಚಂಡೀಗಢದಲ್ಲಿ ಪ್ರತಿ ಚ.ಕೀ.ಮೀ.ಗೆ ೭೯೦೩ ಜನರಿದ್ದರೆ, ಇಡೀ ಭಾರತದಲ್ಲಿ ಸರಾಸರಿ ಜನಸಾಂದ್ರತೆ ಕಳೆದ ಶತಮಾನದಲ್ಲಿ ೭೭ ರಿಂದ ೩೪೨ ಕ್ಕೆ ಏರಿದೆ. ಇದು ತುಂಬಾ ಹೆಚ್ಚು. ಚೀನಾದ ಜನಸಾಂದ್ರತೆ ೧೦೪, ಆಸ್ಟ್ರೇಲಿಯಾ ೨, ಕೆನಡಾ ೨. ಪ್ರದೇಶವಾರು ಜನಸಂಖ್ಯೆಯಲ್ಲಿ ೨೦೦೧ ರಲ್ಲಿ ಉತ್ತರ ಪ್ರದೇಶದ ಜನಸಂಖ್ಯೆ ೧೬,೬೦,೫೨,೮೫೯, ಸಿಕ್ಕಿಂ ರಾಜ್ಯದಲ್ಲಿ ೫೪೦೫೯೩, ನಗರಗಳ ಜನಸಂಖ್ಯೆ ೨೦೦೧ ರಲ್ಲಿ ಬೆಂಗಳೂರು ೫೬.೮೭ ಲಕ್ಷ. ಮೈಸೂರು ೭.೮ ಲಕ್ಷ, ಬೆಳಗಾಂ ೫.೦೬ ಲಕ್ಷ, ದೆಹಲಿ ೧೨೭.೯೧ ಲಕ್ಷ, ಮುಂಬೈ ಮಹಾನಗರ ೧೬೩.೬೮ ಲಕ್ಷ. ಚೆನ್ನೈ ೬೪.೨೫ ಲಕ್ಷ, ಹೈದ್ರಾಬಾದ್ ೫೫.೩೪ ಲಕ್ಷ, ಕಲ್ಕತ್ತಾ ೧೩೨.೧೭ ಲಕ್ಷ ಇತ್ಯಾದಿ. ಹೀಗೆ ಕೆಲವು ರಾಜ್ಯಗಳಲ್ಲಿ ಜನಸಂಖ್ಯೆಯೂ ಹೆಚ್ಚು ಮತ್ತು ಜನಸಾಂದ್ರತೆಯೂ ಹೆಚ್ಚು.

ಒಂದು ರಾಷ್ಟ್ರದ ಜನಸಾಂದ್ರತೆಯು ಅಲ್ಲಿನ ನೈಸರ್ಗಿಕ ಸಂಪನ್ಮೂಲ ಹಾಗೂ ಅವುಗಳನ್ನು ಬಳಸಲು ಉಪಯೋಗಿಸುವ ತಂತ್ರಜ್ಞಾನವನ್ನು ಅವಲಂಬಿಸಿದೆ. ಜನಸಾಂದ್ರತೆಯು ಭೂಮಿಯ ಫಲವತ್ತತೆ, ಕೈಗಾರೀಕರಣ, ಶಿಕ್ಷಣ ಇವುಗಳನ್ನು ಅವಲಂಬಿಸಿದ್ದು ಜನಸಾಂದ್ರತೆಯ ವ್ಯತ್ಯಾಸಗಳು ಪ್ರಾದೇಶಿಕ ಅಸಮಾನತೆಯನ್ನು ಉಂಟು ಮಾಡುತ್ತವೆ. ಇದನ್ನು ಡಿ.ಎಂ. ನಂಜುಂಡಪ್ಪನವರು ಕರ್ನಾಟಕದ ಪ್ರಾದೇಶಿಕ ಅಸಮಾನತೆ ವರದಿಯಲ್ಲಿ ತೋರಿಸಿದ್ದಾರೆ. ಹವಾಗುಣ, ಮಳೆ ಪ್ರಮಾಣ, ನೀರಾವರಿ ಸೌಲಭ್ಯಗಳು ಜನಸಾಂದ್ರತೆಯಲ್ಲಿ ವ್ಯತ್ಯಾವನ್ನು ಉಂಟು ಮಾಡುತ್ತವೆ. ರಾಜಾಸ್ಥಾನದಲ್ಲಿ ಹೆಚ್ಚಿನ ಮರುಭೂಮಿ ಮತ್ತು ನೀರಿನ ಕೊರತೆ ಇರುವುದರಿಂದ ಅಲ್ಲಿ ಜನಸಾಂದ್ರತೆ ಕಡಿಮೆ. ಜಮ್ಮು ಮತ್ತು ಕಾಶ್ಮೀರದ ಜನಸಾಂದ್ರತೆ ಕಡಿಮೆಯಾಗಲು ಇನ್ನೊಂದು ಕಾರಣ ಭಯೋತ್ಪಾದಕತೆ.

ಕೈಗಾರೀಕರಣಗೊಂಡಿರುವ ರಾಜ್ಯ ಮತ್ತು ನಗರಗಳಲ್ಲಿ ಜನಸಾಂದ್ರತೆ ಹೆಚ್ಚು. ಕೆಲವು ಪ್ರದೇಶಗಳಲ್ಲಿ ಧಾರ್ಮಿಕ ಕಾರಣಗಳಿಂದ (ಧಾರ್ಮಿಕ ಸ್ಥಳಗಳಲ್ಲಿ) ಜನಸಾಂದ್ರತೆ ಹೆಚ್ಚಾಗಿದ್ದರೆ, ಇನ್ನು ಕೆಲವು ಕಡೆಗಳಲ್ಲಿ ಚಾರಿತ್ರಿಕ ಅಂಶಗಳು, ಇತಿಹಾಸ ಪ್ರಸಿದ್ಧ ಸ್ಥಳಗಳು ಇನ್ನು ಕೆಲವು ಕಡೆ ಶೈಕ್ಷಣಿಕ ಅಂಶಗಳಿಂದಾಗಿ, ಆಡಳಿತಾತ್ಮಕ ಕಾರಣಗಳಿಗಾಗಿ, ನಿರಾಶ್ರಿತರಿಂದಾಗಿ, ಪುನರ್ವಸತಿ ಕೇಂದ್ರಗಳಿಂದಾಗಿ ಜನಸಾಂದ್ರತೆ ಹೆಚ್ಚಾಗಿರುತ್ತದೆ.

ಬಾರತದಲ್ಲಿ ಜನಸಂಖ್ಯೆಯನ್ನು ನಿಯಂತ್ರಣಗೊಳಿಸದೆ ಜನಸಾಂದ್ರತೆ ಕಡಿಮೆ ಮಾಡಲು ಸಾಧ್ಯವಿಲ್ಲ. ಭಾರತದಲ್ಲಿ ರಾಜ್ಯಗಳ ಪುನರ್‌ವಿಂಗಡಣೆ ಜನಸಂಖ್ಯೆ ಆಧಾರದ ಮೇಲೆ ನಡೆಯದೆ ರಾಜಕೀಯ, ಭಾಷೆ, ಸಂಸ್ಕೃತಿ ಇವುಗಳ ಆಧಾರದ ಮೇಲೆ ನಡೆದಿರುವುದು. ಜನಸಾಂದ್ರತೆಯ ವ್ಯತ್ಯಾಸಗಳಿಗೆ ಕಾರಣವಾಗಿದೆ. ಕೆಲವು ರಾಜ್ಯಗಳಲ್ಲಿ ಜನಸಂಖ್ಯಾ ಬೆಳವಣಿಗೆ ದರ ಹೆಚ್ಚಿರುವುದು (ಬಿಹಾರ ಶೇ ೨.೮೪) ಕೆಲವು ರಾಜ್ಯಗಳಲ್ಲಿ ಜನಸಂಖ್ಯಾ ಬೆಳವಣಿಗೆ ದರ ಕಡಿಮೆ ಇರುವುದು (ತಮಿಳುನಾಡು ಶೇ ೧.೧೯, ಕೇರಳ ಶೇ ೦.೯೪) ಜನಸಾಂದ್ರತೆಯ ವ್ಯತ್ಯಾಸಕ್ಕೆ ಕಾರಣವಾಗಿದೆ.

**ಉದ್ಯೋಗ ಆಧಾರಿತ ಜನಸಂಖ್ಯಾ ವಿಶ್ಲೇಷಣೆ**

ಒಂದು ರಾಷ್ಟ್ರದ ಜನಸಂಖ್ಯೆಯ ವಿಶ್ಲೇಷಣೆಯಯಲ್ಲಿ ವೃತ್ತಿ ನಿರತ ಜನಸಂಖ್ಯೆ ಅಥವಾ ಶ್ರಮಬಲ ಮುಖ್ಯ ಪಾತ್ರ ವಹಿಸುತ್ತದೆ. ಉದ್ಯೋಗದಲ್ಲಿ ತೊಡಗಿಸಿಕೊಂಡಿರುವ ಜನಸಂಖ್ಯೆಯ ಪ್ರಮಾಣವನ್ನು ವೃತ್ತಿ ನಿರತರು ಎನ್ನಲಾಗಿದೆ. ಈ ಪ್ರಮಾಣವು ವಯೋರಚನೆ, ಲಿಂಗ ರಚನೆ, ಜೀವಿತಾವಧಿ, ಉದ್ಯೋಗ ಲಭ್ಯತೆ ಪ್ರಮಾಣ ಮುಂತಾಗವನ್ನು ಅವಲಂಬಿಸಿದೆ.

ಭಾರತದ ವೃತ್ತಿ ರಚನೆಯಲ್ಲಿ ಬಹಳ ಕಡಿಮೆ ಪ್ರಮಾಣದಲ್ಲಿ ಶ್ರಮ ಬಲವು ಉದ್ಯೋಗದಲ್ಲಿ ತೊಡಗಿರುವುದನ್ನು ಕಾಣಬಹುದು. ಇದಕ್ಕೆ ಕಾರಣ ವೃತ್ತಿ ನೈಪುಣ್ಯತೆ ಇಲ್ಲದಿರುವುದು ಹಾಗೂ ಉದ್ಯೋಗ ಅವಕಾಶಗಳು ಕಡಿಮೆ ಇರುವುದು. ಗಮನಾರ್ಹವಾದ ಮತ್ತೊಂದು ಅಂಶವೆಂದರೆ ಸ್ತ್ರೀಯರು ಅತಿ ಕಡಿಮೆ ಪ್ರಮಾಣದಲ್ಲಿ ವೃತ್ತಿ ನಿರತರಾಗಿರುವುದು. ಬಹಳಷ್ಟು ಸ್ತ್ರೀಯರು ಗೃಹಿಣಿಯರಾಗಿರುತ್ತಾರೆ, ಉದ್ಯೋಗಿಗಳಾಗಿರುವುದಿಲ್ಲ. ಸಾಂಪ್ರದಾಯಿಕ ಲೆಕ್ಕಾಚಾರದಲ್ಲಿ ಗೃಹಿಣಿಯರ ಮನೆ ಕೆಲಸ ಉದ್ಯೋಗದ ವ್ಯಾಪ್ತಿಯಲ್ಲಿ ಬರುವುದಿಲ್ಲ. ಗ್ರಾಮೀಣ ಪ್ರದೇಶಗಳಲ್ಲಿ ಉದ್ಯೋಗನಿರತರು ಕೃಷಿ ಉದ್ಯೋಗ. ಪುರುಷರು ಮತ್ತು ಸ್ತ್ರೀಯರು ನಗರ ಪ್ರದೇಶಗಳಿಗಿಂತ ಹೆಚ್ಚಾಗಿದ್ದಾರೆ. ಬಾರತದಲ್ಲಿ ಉದ್ಯೋಗ ನಿರತರ ಶೇಕಡಾವಾರು ಪ್ರಮಾಣ ಕೆಳಕಂಡಂತಿದೆ.

**ವೃತ್ತಿ ನಿರತರ ಅನುಪಾತ**

| ವರ್ಷ | ಒಟ್ಟು ಜನಸಂಖ್ಯೆ (ವೃತ್ತಿ ನಿರತರು) | ಪುರುಷರು | ಸ್ತ್ರೀಯರು |
|---|---|---|---|
| ೧೯೦೧ | ೪೬.೧ | ೬೦.೮ | ೩೧.೭ |
| ೧೯೧೧ | ೪೮.೧ | ೬೨.೦ | ೩೩.೭ |
| ೧೯೫೧ | ೩೯.೧ | ೫೩.೯ | ೨೩.೪ |
| ೧೯೬೧ | ೪೩.೧ | ೫೭.೩ | ೨೮.೦ |

| | | | |
|---|---|---|---|
| ೧೯೭೧ | ೩೪.೨ | ೫೨.೭ | ೧೪.೨ |
| ೧೯೮೧ | ೩೬.೭ | ೫೨.೬ | ೧೯.೭ |
| ೧೯೯೧ | ೩೭.೫ | ೫೧.೬ | ೨೨.೩ |
| ೨೦೦೧ | ೩೯.೩ | ೫೧.೯ | ೨೫.೭ |

ಉದ್ಯೋಗ ಅವಲಂಬಿತರನ್ನು ಅಥವಾ ವೃತ್ತಿಯಲ್ಲಿ ತೊಡಗಿಸಿಕೊಂಡಿರುವ ಜನಸಂಖ್ಯೆಯನ್ನು ಮುಖ್ಯವಾಗಿ ಮೂರು ಭಾಗಗಳಾಗಿ ವಿಂಗಡಿಸಲಾಗಿದೆ.

೧. ಪ್ರಾಥಮಿಕ ಉದ್ಯೋಗ - ಕೃಷಿ, ಪಶು ಸಂಗೋಪನೆ, ಅರಣ್ಯ, ಗಣಿಗಾರಿಕೆ, ಮೀನುಗಾರಿಕೆ ಇತ್ಯಾದಿಗಳಲ್ಲಿ ತೊಡಗಿರುವ ಜನಸಂಖ್ಯೆ.

೨. ದ್ವಿತೀಯ ವಲಯದ ಉದ್ಯೋಗ -ಸಣ್ಣ ಮತ್ತು ದೊಡ್ಡ ಪ್ರಮಾಣದ ಕೈಗಾರಿಕೆಗಳಲ್ಲಿ ಉದ್ಯೋಗದಲ್ಲಿ ತೊಡಗಿರುವವರು.

೩. ತೃತೀಯ ವಲಯದ ಉದ್ಯೋಗ - ಪ್ರಾಥಮಿಕ ಮತ್ತು ದ್ವಿತೀಯ ವಲಯದ ಚಟುವಟಿಕೆಗಳಿಗೆ ಪೂರಕವಾಗಿರುವುದು. ಸಾಗಾಣಿಕೆ, ಸಂಪರ್ಕ, ಬ್ಯಾಂಕಿಂಗ್, ವಿಮ, ಹಣಕಾಸು ಉದ್ಯಮದಲ್ಲಿ ತೊಡಗಿರುವವರು.

ಪಾಶ್ಚಾತ್ಯ ರಾಷ್ಟ್ರಗಳಲ್ಲಿ ವೃತ್ತಿ ಸಂರಚನೆಯಲ್ಲಿ ಬದಲಾವಣೆ ಕಂಡುಬರುತ್ತದೆ. ಆದರೆ ಭಾರತದಲ್ಲಿ ವೃತ್ತಿ ಬದಲಾವಣೆ ತುಂಬಾ ಕಡಿಮೆ. ಆರ್ಥಿಕ ಬೆಳವಣಿಗೆಯಾದಂತೆ ಸೇವೆಗಳಿಗೆ ಬೇಡಿಕೆ ಹೆಚ್ಚುವುದರಿಂದ ಭಾರತ ಮತ್ತು ಚೀನಾ ರಾಷ್ಟ್ರಗಳಲ್ಲಿ ಶ್ರಮ ಶಕ್ತಿಯು ತೃತೀಯ ವಲಯದ ಕಡೆಗೆ ಬದಲಾವಣೆಯಾಗುವುದು ಸಹಜ. ಇಲ್ಲಿ ಮೂರು ಮುಖ್ಯ ಅಂಶಗಳನ್ನು ಗಮನಿಸಬೇಕು. ೧. ಆರ್ಥಿಕ ಬೆಳವಣಿಗೆಯ ಮೊದಲ ಹಂತದಲ್ಲಿ ಈ ಮೂರು ವಲಯಗಳಲ್ಲಿ ತೊಡಗಿರುವವರ ಶೇಕಡಾವಾರು ಪ್ರಮಾಣ ಸಾಕಷ್ಟು ಕಡಿಮೆಯಾಗುತ್ತದೆ. ಆದರೆ ಪ್ರತಿ ವಲಯದಲ್ಲಿ ವೃತ್ತಿಯಲ್ಲಿ ತೊಡಗಿರುವವರ ಒಟ್ಟು ಸಂಖ್ಯೆ ಹೆಚ್ಚುತ್ತದೆ. ೨. ಆರ್ಥಿಕ ಬೆಳವಣಿಗೆಯ ಎರಡನೇ ಹಂತದಲ್ಲಿ ಆರ್ಥಿಕ ವ್ಯವಸ್ಥೆ ಚೆನ್ನಾಗಿ ಅಭಿವೃದ್ಧಿ ಹೊಂದಿದಾಗ ಕೃಷಿಯಲ್ಲಿ ತೊಡಗಿರುವವರ ಒಟ್ಟು ಸಂಖ್ಯೆ ಕಡಿಮೆಯಾಗುತ್ತದೆ. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಅಂಕಿ ಅಂಶಗಳ ಅಧ್ಯಯನ ಈ ಅಂಶವನ್ನು ತೋರಿಸಿಕೊಟ್ಟಿದೆ. ೩. ಆರ್ಥಿಕ ಅಭಿವೃದ್ಧಿಯ ಪ್ರಕ್ರಿಯೆ ಹಂತದಲ್ಲಿ ತೃತೀಯ ವಲಯದಲ್ಲಿ, ದ್ವಿತೀಯ ವಲಯಕ್ಕಿಂತ ಉದ್ಯೋಗ ಅವಕಾಶಗಳು ಹೆಚ್ಚುತ್ತವೆ, ಆದರೆ ಈ ಎರಡು ವಲಯಗಳ ನಡುವೆ ಏರಿಕೆ ವ್ಯತ್ಯಾಸ ತುಂಬಾ ಹೆಚ್ಚೇನೂ ಇರುವುದಿಲ್ಲ.

ಉದ್ಯೋಗದಲ್ಲಿ ತೊಡಗಿರುವವರು ಎಂದರೆ ಶ್ರಮ ಶಕ್ತಿ ಬಳಸುವವರು, ದೈಹಿಕವಾಗಿ ಅಥವಾ ಮಾನಸಿಕವಾಗಿ ಆರ್ಥಿಕ ಉತ್ಪಾದಕ ಚಟುವಟಿಕೆಯಲ್ಲಿ ತೊಡಗಿರುವವರು. ಭಾರತದಲ್ಲಿ ಔದ್ಯೋಗಿಕ ರಚನೆ ಕೆಳಕಂಡಂತಿದೆ.

ಉದ್ಯೋಗ ಹಂಚಿಕೆ ಶೇಕಡಾವಾರು

| ವರ್ಷಗಳು | ಕೃಷಿ ಪ್ರಾಥಮಿಕ ವಲಯ | ಕೈಗಾರಿಕೆ ದ್ವಿತೀಯ ವಲಯ | ಸೇವೆಗಳು ತೃತೀಯ ವಲಯ |
|---|---|---|---|
| ೧೯೦೧ | ೭೧.೭ | ೧೨.೬ | ೧೫.೭ |
| ೧೯೫೧ | ೭೩.೧ | ೧೦.೭ | ೧೭.೨ |
| ೧೯೭೧ | ೭೨.೧ | ೧೧.೨ | ೧೬.೭ |
| ೧೯೮೧ | ೬೮.೮ | ೧೩.೫ | ೧೭.೭ |
| ೧೯೯೧ | ೬೬.೮ | ೧೨.೭ | ೨೦.೫ |

೧೯೦೧ ರಿಂದಲೂ ೯೦ ವರ್ಷಗಳವರೆಗೆ ಭಾರತದ ಔದ್ಯೋಗಿಕ ರಚನೆ ಹೆಚ್ಚು ಕಡಿಮೆ ಸ್ಥಗಿತವಾಗಿದೆ. ಸ್ವಲ್ಪ ಮಟ್ಟಿಗೆ ಕೃಷಿಯಲ್ಲಿ ತೊಡಗಿರುವವರ ಅನುಪಾತ ಕಡಿಮೆಯಾಗಿದ್ದು, ಕೈಗಾರಿಕೆ ಮತ್ತು ಸೇವಾವಲಯಗಳಲ್ಲಿ ತೊಡಿಗಿಸಿಕೊಂಡಿರುವವರ ಅನುಪಾತ ಸ್ವಲ್ಪ ಹೆಚ್ಚಾಗಿದೆ. ಆಧುನಿಕತೆಯೊಂದಿಗೆ, ಉದಾರೀಕರಣದೊಂದಿಗೆ ಸಾಂಪ್ರದಾಯಿಕ ಉದ್ಯೋಗಗಳು ಕಡಿಮೆಯಾಗಿವೆ. ಆಧುನಿಕ ಉದ್ಯೋಗಗಳು ಹೆಚ್ಚಾಗಿವೆ. ೧೯೯೧ ರಲ್ಲಿ ಉದ್ಯೋಗದಲ್ಲಿ ತೊಡಗಿರುವವರ ಸಂಖ್ಯೆ ಪ್ರಾಥಮಿಕ ವಲಯದಲ್ಲಿ ಒಟ್ಟು ಶೇ.೬೬.೮ ರಷ್ಟು, ಕೃಷಿಕರು ಶೇ. ೩೮.೪, ಕೃಷಿ ಕಾರ್ಮಿಕರು ಶೇ. ೨೬.೪, ಹಾಗೂ ಪಶು ಸಂಗೋಪನೆ, ಅರಣ್ಯ, ಮೀನುಗಾರಿಕೆ ಇತ್ಯಾದಿಗಳಲ್ಲಿ ಶೇ. ೧.೯. ದ್ವಿತೀಯ ವಲಯದಲ್ಲಿ ಉದ್ಯೋಗದಲ್ಲಿ ತೊಡಗಿರುವವರು ಒಟ್ಟು ಶೇ.೧೨.೭ ಗಣಿಗಾರಿಕೆ, ಕಲ್ಲುಗಣಿಯಲ್ಲಿ ಶೇ. ೦.೬, ಸಣ್ಣ ಮತ್ತು ದೊಡ್ಡ ಕೈಗಾರಿಕೆಗಳಲ್ಲಿ ಶೇ. ೧೦.೨, ತೃತೀಯ ವಲಯದಲ್ಲಿ ಒಟ್ಟು ಶೇ.೨೦.೫ ವ್ಯಾಪಾರ ಮತ್ತು ವಾಣಿಜ್ಯದಲ್ಲಿ ಶೇ. ೭.೫, ಸಾಗಾಣಿಕೆ ಉಗ್ರಾಣ, ಸಂಪರ್ಕಗಳಲ್ಲಿ ಶೇ. ೨.೮, ಇತರೇ ಸೇವೆಗಳಲ್ಲಿ ಶೇ. ೧೦.೨.

ರಾಷ್ಟ್ರೀಯ ಮಟ್ಟದಲ್ಲಿ ಉದ್ಯೋಗ ಬದಲಾವಣೆಯಲ್ಲಿ ಅಂತಹ ವ್ಯತ್ಯಾಸಗಳು ಇಲ್ಲದಿದ್ದರೂ, ರಾಜ್ಯಮಟ್ಟದಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ, ಕೇರಳ, ತಮಿಳುನಾಡು, ಪಂಜಾಬ್, ಮಧ್ಯಪ್ರದೇಶ, ಮಹಾರಾಷ್ಟ್ರ ಮತ್ತು ಪಶ್ಚಿಮ ಬಂಗಾಳದಲ್ಲಿ ಕೃಷಿಯಲ್ಲಿ ತೊಡಗಿರುವವರ ಶ್ರಮ ಶಕ್ತಿ ಅನುಪಾತ ಕುಗ್ಗಿದೆ. ಸೇವೆ ಮತ್ತು ಕೈಗಾರಿಕಾ ವಲಯದಲ್ಲಿ ತೊಡಗಿರುವವರ ಅನುಪಾತ ಹೆಚ್ಚಾಗಿದೆ. ರಾಜಾಸ್ತಾನ, ಅಸ್ಸಾಂ, ಉತ್ತರ ಪ್ರದೇಶ, ಒರಿಸ್ಸಾ ರಾಜ್ಯಗಳಲ್ಲಿ ಕೃಷಿಯಲ್ಲಿ ತೊಡಗಿರುವವರ ಅನುಪಾತ ಹೆಚ್ಚಿದೆ. ಕೈಗಾರಿಕೆ ಮತ್ತು ಸೇವಾ ವಲಯದಲ್ಲಿ ತೊಡಗಿರುವವರ ಅನುಪಾತ ತಗ್ಗಿದೆ.

ಎಲ್ಲಾ ಅಭಿವೃದ್ಧಿಶೀಲ ದೇಶಗಳಲ್ಲಿರುವಂತೆ ಭಾರತದಲ್ಲಿಯೂ ಕೂಡ ಕೃಷಿಯಲ್ಲಿ ತೊಡಗಿರುವವರ ಅನುಪಾತ ಹೆಚ್ಚಾಗಿದೆ. ಇದಕ್ಕೆ ಕಾರಣ ಈ ದೇಶಗಳಲ್ಲಿ ಬಹಳಷ್ಟು ಆದಾಯವನ್ನು ಆಹಾರ ವಸ್ತುಗಳನ್ನು ಕೊಳ್ಳಲು ವ್ಯಯಿಸಲಾಗುವುದರಿಂದ ಕೃಷಿಯೇತರ

ವಸ್ತುಗಳನ್ನು ಮತ್ತು ಸೇವೆಗಳನ್ನು ಕೊಳ್ಳಲು ಉಳಿಯುವ ಆದಾಯ ತುಂಬಾ ಕಡಿಮೆ. ಹೀಗಾಗಿ ಕೃಷಿ ವಲಯದಲ್ಲಿ ತೊಡಗಿರುವವರ ಸಂಖ್ಯೆ ಹೆಚ್ಚಾಗಿದೆ. ಕೈಗಾರಿಕೆ ಮತ್ತು ಸೇವಾ ವಲಯದಲ್ಲಿ ಬೇಕಾಗುವ ಬಂಡವಾಳ ವಸ್ತುಗಳು ಮತ್ತು ತಂತ್ರಜ್ಞಾನ ತುಂಬಾ ಕಡಿಮೆ ಇರುವುದರಿಂದ ಈ ವಲಯಗಳಲ್ಲಿ ತೊಡಗಿರುವವರ ಸಂಖ್ಯೆ ಕಡಿಮೆ ಇದೆ. ಆದರೆ ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ಶೇ ೬೫-೭೦ ಶ್ರಮಶಕ್ತಿ ಸೇವಾ ವಲಯದಲ್ಲಿ ಕಂಡು ಬರುತ್ತದೆ. ಕೈಗಾರಿಕೆಯಲ್ಲಿ ಶೇ ೨೦-೩೦, ಕೃಷಿಯಲ್ಲಿ ಶೇ ೩ ರಿಂದ ಶೇ ೭ ರಷ್ಟು ಜನಸಂಖ್ಯೆ ಮಾತ್ರ ಉದ್ಯೋಗದಲ್ಲಿ ತೊಡಗಿರುವುದನ್ನು ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಕಾಣಬಹುದು.

ಭಾರತದಲ್ಲಿ ಕೃಷಿಯಿಂದ ಇತರೇ ಕಡೆಗೆ ಶ್ರಮ ಶಕ್ತಿಯನ್ನು ವರ್ಗಾಯಿಸುವುದು ಅತ್ಯಗತ್ಯವಾಗಿದೆ. ಇದರಿಂದ ಪ್ರತಿ ಶ್ರಮದ ಉತ್ಪಾದಕ ಶಕ್ತಿ ಹೆಚ್ಚಿಸಬಹುದು. ಭಾರತದ ಔದ್ಯೋಗಿಕ ರಚನೆಯಲ್ಲಿ ಗಮನಾರ್ಹ ಬದಲಾವಣೆ ಬೇಕಾಗಿದೆ. ಈ ಬದಲಾವಣೆ ಆರ್ಥಿಕ ಬೆಳವಣಿಗೆಯೊಂದಿಗೆ ನಡೆಯಬೇಕಾಗಿದೆ. ಜೊತೆಗೆ ಪ್ರತಿವರ್ಷ ಶ್ರಮಶಕ್ತಿ ಸೇರ್ಪಡೆ ಆಗುತ್ತಿರುವುದನ್ನು ಗಮನದಲ್ಲಿಟ್ಟುಕೊಂಡರೆ ಎಲ್ಲವನ್ನು ಸೃಷ್ಟಿಸುವ ಅಗತ್ಯ ಕಂಡು ಬರುತ್ತದೆ. ಕೃಷಿಯಲ್ಲಿ ಶ್ರಮಶಕ್ತಿ ಕಡಿಮೆ ಮಾಡುವ ಇತರೇ ವಲಯಗಳಲ್ಲಿ ಹೆಚ್ಚಿಸುವ ಮತ್ತು ನಿರುದ್ಯೋಗಿಗಳನ್ನು ತೊಡಗಿಸಿಕೊಳ್ಳುವ ಪ್ರಯತ್ನ ಆರ್ಥಿಕ ಅಭಿವೃದ್ಧಿಯೊಂದಿಗೆ ನಡೆಯಬೇಕಾಗಿದೆ.

**ಜನಸಂಖ್ಯೆ ಬೆಳವಣಿಗೆ ನಿಯಂತ್ರಣ ಕ್ರಮಗಳು**

ಜನಸಂಖ್ಯೆ ಬೆಳವಣಿಗೆಯನ್ನು ನಿಯಂತ್ರಿಸಲು ಹಲವಾರು ಕ್ರಮಗಳಿವೆ. ಮುಖ್ಯವಾಗಿ ಮೂರು ಕ್ರಮಗಳಿವೆ.

೧. ಆರ್ಥಿಕ ಕ್ರಮಗಳು - ಆರ್ಥಿಕ ಕ್ರಮಗಳಲ್ಲಿ ತೀವ್ರ ಕೈಗಾರಿಕಾಭಿವೃದ್ಧಿ ಸಾಧನೆ, ಸಾರಿಗೆ, ಸಂಪರ್ಕ ಅಭಿವೃದ್ಧಿ, ಕೃಷಿ ಅಭಿವೃದ್ಧಿ, ವ್ಯಾಪಾರಾಭಿವೃದ್ಧಿ, ಉದ್ಯೋಗ ಸೃಷ್ಟಿ, ಬಡತನ ನಿವಾರಣೆ, ಆದಾಯದ ಸಮಾನ ಹಂಚಿಕೆ, ಶಿಕ್ಷಣ ನೀಡಿಕೆ ಮುಂತಾದವು.

೨. ಸಾಮಾಜಿಕ ಕ್ರಮಗಳು - ಮಹಿಳೆಯರ ಸ್ಥಿತಿಗತಿಗಳನ್ನು ಸುದಾರಿಸುವುದು, ಸಾಮಾಜಿಕ ಮೌಢ್ಯ ನಿವಾರಣೆ, ವಲಸೆಗೆ ಉತ್ತೇಜನ, ಪ್ರದೇಶಗಳ ನಡುವೆ ಜನಸಂಖ್ಯೆಯ ಮರು ಹಂಚಿಕೆ, ವಿವಾಹ ವಯಸ್ಸು ಹೆಚ್ಚಿಸುವುದು ಇತ್ಯಾದಿ.

೩. ಕುಟುಂಬ ಕಲ್ಯಾಣ ಯೋಜನೆ - ಜನಸಂಖ್ಯೆ ಬೆಳವಣಿಗೆ ನಿಯಂತ್ರಿಸಲು ಕುಟಂಬ ಯೋಜನಾ ಕಾರ್ಯಕ್ರಮ ಬಂದಿತು. ನಂತರ ಇದನ್ನು ಭಾರತ ಸರ್ಕಾರ ಕುಟುಂಬ ಕಲ್ಯಾಣ ಯೋಜನೆ ಎಂದು ಮರುನಾಮಕರಣ ಮಾಡಿತು.

**ಕುಟುಂಬ ಕಲ್ಯಾಣ ಯೋಜನೆ**

"ಆಕಸ್ಮಿಕವಾಗಿ ಮಗುವನ್ನು ಪಡೆಯುವುದರ ಬದಲಾಗಿ ಆಯ್ಕೆಯಿಂದ ಮಗುವನ್ನು

ಪಡೆಯುವುದು" ಕುಟುಂಬ ಯೋಜನೆ. ತಾಯಿ ಮತ್ತು ಮಗುವಿನ ಆರೋಗ್ಯ, ಪೌಷ್ಟಿಕತೆ ಇವುಗಳನ್ನು ಒಳಗೊಂಡಿರುವುದೇ ಕುಟುಂಬ ಕಲ್ಯಾಣ ಕಾರ್ಯಕ್ರಮ.

ಜನಸಂಖ್ಯೆ ಹೆಚ್ಚಿದಂತೆ ರಾಷ್ಟ್ರೀಯ ಆದಾಯವು ಹೆಚ್ಚಾಗದಿದ್ದರೆ ತಲಾ ಆದಾಯವು ಇಳಿಮುಖವಾಗುತ್ತದೆ. ಏರುತ್ತಿರುವ ಜನಸಂಖ್ಯೆಯು ಆರ್ಥಿಕ ಅಭಿವೃದ್ಧಿಗೆ ಮಾರಕವಾಗುತ್ತದೆ. ಯಾವುದೇ ಜನಸಂಖ್ಯಾ ನಿಯಂತ್ರಣ ಕ್ರಮದ ಉದ್ದೇಶವು ಜನಸಂಖ್ಯೆ ಬೆಳವಣಿಗೆ ದರವನ್ನು ಕಡಿಮೆ ಮಾಡುವುದೇ ಆಗಿರುತ್ತದೆ. ಯಾವ ದರದಲ್ಲಿ ಜನಸಂಖ್ಯೆ ಬೆಳವಣಿಗೆ ದರ ಇರಬೇಕು ಎನ್ನುವುದು, ಎಷ್ಟು ಪ್ರಮಾಣದಲ್ಲಿ ತಲಾ ಆದಾಯ ಏರಬೇಕು ಎನ್ನುವುದನ್ನು ಅವಲಂಬಿಸಿದೆ. ಭಾರತದಲ್ಲಿ ಶೇ.೧.೨ ರ ಜನಸಂಖ್ಯೆ ಬೆಳವಣಿಗೆ ದರ ಅಪೇಕ್ಷಣೀಯವಾಗಿದೆ.

ಕುಟುಂಬ ಕಲ್ಯಾಣ ಕಾರ್ಯಕ್ರಮದ ಉದ್ದೇಶ ಮುಖ್ಯವಾಗಿ ಎರಡು ಅಂಶಗಳನ್ನು ಒಳಗೊಂಡಿದೆ.

೧. ಜನಸಂಖ್ಯೆ ಬೆಳವಣಗೆಯಿಂದ ಉಂಟಾಗುವ ಕೆಟ್ಟ ಪರಿಣಾಮಗಳನ್ನು ತಡೆಗಟ್ಟುವುದು.

ಅ. ಇದುವರೆಗೆ ರಾಷ್ಟ್ರೀಯ ಆದಾಯ ಹೆಚ್ಚಾಗುತ್ತಿದ್ದರೂ ಜನಸಂಖ್ಯೆ ಹೆಚ್ಚಳದಿಂದಾಗಿ ತಲಾ ಆದಾಯ ಇಳಿಮುಖವಾಗಿರುತ್ತಿತ್ತು. ಜನಸಂಖ್ಯೆ ಬೆಳವಣಿಗೆ ನಿಯಂತ್ರಣದಿಂದ ತಲಾ ಆದಾಯ ಹೆಚ್ಚಾಗಿ, ಕುಟುಂಬ ಯೋಗಕ್ಷೇಮ ಅಥವಾ ಕುಟಂಬ ಕಲ್ಯಾಣ ಹೆಚ್ಚುತ್ತದೆ. ಹೀಗಾಗಿ ಈ ಕಾರ್ಯಕ್ರಮವನ್ನು ಕುಟಂಬ ಕಲ್ಯಾಣ ಕಾರ್ಯಕ್ರಮ ಎಂದು ಕರೆದಿರುವುದು ಹೆಚ್ಚು ಸಮಂಜಸವಾಗಿದೆ.

ಆ. ಜನಸಂಖ್ಯೆ ಹೆಚ್ಚಿದಂತೆ ಆಹಾರ, ಬಟ್ಟೆ, ವಸತಿ, ಶಿಕ್ಷಣ ಇವುಗಳಿಗೆ ವೆಚ್ಚ ಹೆಚ್ಚಾಗಿ ಉಳಿತಾಯ ಕಡಿಮೆಯಾಗಿ ಬಂಡವಾಳ ಹೂಡಿಕೆ ಕಡಿಮೆಯಾಗಿದ್ದು, ಜನಸಂಖ್ಯೆ ಏರುವಿಕೆಯನ್ನು ತಡೆಗಟ್ಟುವುದರಿಂದ ಉಳಿತಾಯ ಹೆಚ್ಚಿಸಿ, ಹೂಡಿಕೆ ಹೆಚ್ಚು ಮಾಡಿ, ಹೆಚ್ಚು ಯೋಗಕ್ಷೇಮ ಸಾಧಿಸಬಹುದು.

ಇ. ಜನಸಂಖ್ಯೆ ಹೆಚ್ಚಳದಿಂದ ನಿರುದ್ಯೋಗ ಹೆಚ್ಚಿದೆ. ಜನಸಂಖ್ಯೆ ನಿಯಂತ್ರಣದಿಂದ ಉದ್ಯೋಗ ಅವಕಾಶಗಳನ್ನು ಹೆಚ್ಚಿಸಬಹುದು.

ಈ. ಏರುತ್ತಿರುವ ಜನಸಂಖ್ಯೆಯು ಸಾಮಾಜಿಕ, ರಾಜಕೀಯ ಸಮಸ್ಯೆಗಳನ್ನು ಸೃಷ್ಟಿಸಿದೆ. ಹಿಂಸೆ, ಕ್ರೌರ್ಯ, ಅಪರಾಧಗಳು, ಕೊಳಚೆ ಪ್ರದೇಶಗಳು ಹೆಚ್ಚಿವೆ. ಶಿಕ್ಷಣ ಮತ್ತು ಆರೋಗ್ಯ ಸಮಸ್ಯೆ ಇದೆ. ಈ ಸಮಸ್ಯೆಗಳನ್ನು ಹೋಗಲಾಡಿಸಬಹುದು.

೨. ಜನಸಂಖ್ಯೆ ಬೆಳವಣಿಯನ್ನು ತಡೆಯುವುದರಿಂದ ಅನುಕೂಲಗಳನ್ನು ಪಡೆಯುವುದು. ಕಡಿಮೆ ಪ್ರಮಾಣದ ಜನಸಂಖ್ಯೆ ಹಲವಾರು ಅನುಕೂಲಗಳನ್ನು ತರುತ್ತದೆ.

ಅ. ತಲಾ ಆದಾಯ ಹೆಚ್ಚುತ್ತದೆ. ಆ. ತಲಾ ಆದಾಯ ಹೆಚ್ಚಿದಂತೆ ಉಳಿತಾಯ ಹೆಚ್ಚುತ್ತದೆ. ಆ ಮೂಲಕ ಬಂಡವಾಳ ಸಂಚಯನ ಹೆಚ್ಚುತ್ತದೆ. ಇ. ಜನನ ದರ

ಕಡಿಮೆಯಾದಂತೆ ಕುಟುಂಬದಲ್ಲಿ ದುಡಿಯುವವರ ಮೇಲಿನ ಅವಲಂಬಿತ ಜನರ ಪ್ರಮಾಣ ಕಡಿಮೆಯಾಗುತ್ತದೆ. ಉಳಿದವರಿಗೆ ಹೆಚ್ಚು ಸೌಲಭ್ಯಗಳು ದೊರೆಯುತ್ತವೆ. ಈ. ದೀರ್ಘಾವಧಿಯಲ್ಲಿ ಶ್ರಮದ ಪೂರೈಕೆ ಕಡಿಮೆಯಾಗುತ್ತದೆ. ಅಧಿಕ ಶ್ರಮದ ಪೂರೈಕೆ ಎಂಬ ಪರಿಭಾವನೆ ಇರುವುದಿಲ್ಲ. ಉ. ಮಾನವ ಬಂಡವಾಳದ ಅರ್ಥ ನಿಜವಾದ ಅರ್ಥದಲ್ಲಿ ಹೆಚ್ಚುತ್ತದೆ. ಉತ್ತಮ ಆರೋಗ್ಯ, ಉತ್ತಮ ಶಿಕ್ಷಣ, ಪರಿಣಿತಿ ಹೆಚ್ಚುತ್ತದೆ. ಜನರ ಜೀವನಮಟ್ಟ ಉತ್ತಮಗೊಳ್ಳುತ್ತದೆ.

**ಕುಟುಂಬ ಕಲ್ಯಾಣ ಯೋಜನೆ ಹಾಗೂ ತಾಯಿ ಮತ್ತು ಮಗುವಿನ ಆರೋಗ್ಯ**

ಕುಟುಂಬ ಕಲ್ಯಾಣ ಯೋಜನೆ ಕಾರ್ಯಕ್ರಮವನ್ನು ಜನಪ್ರಿಯಗೊಳಿಸಿದ ಸರ್ಕಾರವು ಹಲವಾರು ಕಾರ್ಯಕ್ರಮಗಳನ್ನು ಹಾಕಿಕೊಂಡಿದೆ.

೧. ಕುಟುಂಬ ಯೋಜನೆ ಜನಪ್ರಿಯಗೊಳಿಸಲು ಉತ್ತೇಜಕ ಕಾರ್ಯಕ್ರಮ ಎಲ್ಲಾ ರೀತಿಯ ಮಾಧ್ಯಮಗಳನ್ನು ಬಳಸಿಕೊಳ್ಳಲಾಗಿದೆ.

೨. ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ನಿರೋಧ್ ಮುಂತಾದ ಸರಳ ವಿಧಾನಗಳನ್ನು ಅಳವಡಿಸಿಕೊಳ್ಳಲು ಪ್ರೋತ್ಸಾಹ, ಖಾಸಗಿ ಉತ್ಪಾದಕರಿಗೆ ಉತ್ತಮ ಕಾಂಡೋಮ್ ಪೂರೈಕೆ ಮಾಡಲು ಅವಕಾಶ.

೩. ಕುಟುಂಬ ಯೋಜನೆಗೆ ಒಳಪಟ್ಟವರಿಗೆ ಹಣಕಾಸಿನ ಪ್ರೋತ್ಸಾಹ.

೪. ಪುರುಷರಿಗೆ ಮತ್ತು ಮಹಿಳೆಯರಿಗೆ ಹಲವಾರು ನಿಯಂತ್ರಣ ವಿಧಾನಗಳನ್ನು ಪರಿಚಯಿಸುವುದು.

ಏಳನೇ ಪಂಚವಾರ್ಷಿಕ ಯೋಜನೆಯಲ್ಲಿ ಕುಟುಂಬ ಯೋಜನೆ ಬಗ್ಗೆ ಸರ್ಕಾರವು ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತು.

ಭಾರತದಲ್ಲಿ ಕುಟುಂಬ ಕಲ್ಯಾಣ ಯೋಜನೆ ಯಶಸ್ವಿಯಾಗಬೇಕಾದರೆ ಶಿಶು ಬದುಕುಳಿಯುವ ಪ್ರಮಾಣ ಹೆಚ್ಚಾಗಬೇಕು. ಇದಕ್ಕಾಗಿ ತಾಯ್ತನ ಮತ್ತು ಶಿಶು ಆರೋಗ್ಯ ಕಾರ್ಯಕ್ರಮ ಜಾರಿಗೆ ತರಲಾಯಿತು. ಭಾರತದಲ್ಲಿ ಪ್ರತಿ ೧೦೦೦ ಕ್ಕೆ ೧೧೪ ರಷ್ಟಿರುವ ಶಿಶು ಮರಣ ಸಂಖ್ಯೆಯನ್ನು ಸಾಕಷ್ಟು ಇಳಿಸುವ ಕಾರ್ಯಕ್ರಮ ಹಾಕಿಕೊಳ್ಳಲಾಯಿತು. ಚೀನಾದಲ್ಲಿ ೧೯೬೫-೮೩ ರಲ್ಲಿ ಶಿಶು ಮರಣ ಸಂಖ್ಯೆಯನ್ನು ೧೦೦೦ ಕ್ಕೆ ೯೦ ರಿಂದ ೩೮ ಕ್ಕೆ ಇಳಿಸಲಾಯಿತು. ಹೀಗಾಗಿ ಭಾರತದಲ್ಲಿ ಏಳನೇ ಯೋಜನೆಯಲ್ಲಿ ಶಿಶು ಮರಣ ಸಂಖ್ಯೆ ತಗ್ಗಿಸಲು ಪ್ರಾಮುಖ್ಯತೆ ನೀಡಲಾಯಿತು. ಇದರ ಜೊತೆ ತಾಯಿ ಮರಣ ಸಂಖ್ಯೆಯನ್ನು ತಗ್ಗಿಸುವುದು. ಗ್ರಾಮೀಣ ಪ್ರದೇಶಗಳಲ್ಲಿ ಬಹಳಷ್ಟು ಬಾಣಂತಿಯರ ಸಾವುಗಳು ಹೆರಿಗೆ ಸಮಯದಲ್ಲಿ ಸಂಭವಿಸುತ್ತವೆ. ಇದನ್ನು ತಡೆಗಟ್ಟುವ ಕಾರ್ಯಕ್ರಮ. ಶಿಶು ಮರಣ ಸಂಖ್ಯೆ ಕಡಿಮೆಯಾಗಿ ಹೆರಿಗೆ ನಂತರ ತಾಯಿಯ ಉಳುವಿನ ಪ್ರಮಾಣ ಹೆಚ್ಚಾದರೆ ಸಹಜವಾಗಿ ಕುಟುಂಬ ಕಲ್ಯಾಣ ಯೋಜನೆ ಸರ್ವರಿಗೂ ಒಪ್ಪಿಗೆಯಾಗುತ್ತದೆ. ಸರ್ಕಾರದ ಜೊತೆಗೆ ಭಾರತೀಯ ವೈದ್ಯ ಪದ್ಧತಿಗಳಾದ ಆಯುರ್ವೇದ, ಯುನಾನಿ, ಸಿದ್ಧಯೋಗ,

ಹೋಮಿಯೋಪತಿಗಳನ್ನು ಕೂಡ ನಮ್ಮಲ್ಲಿ ಬಳಸಿಕೊಳ್ಳಲಾಯಿತು.

ಜನನ ನಿಯಂತ್ರಣ ವಿಧಾನಗಳಾಗಿ ಕೆಳಗಿನ ಕಾರ್ಯಕ್ರಮಗಳನ್ನು ಜನಪ್ರಿಯಗೊಳಿಸಲಾಯಿತು.

೧. ಸ್ವಯಂ ನಿಂಯತ್ರಣ ವಿಧಾನ : ದಂಪತಿಗಳು - ಸ್ವಯಂ ಇಚ್ಛೆಯಿಂದ ಲೈಂಗಿಕ ಸಂಪರ್ಕದಿಂದ ದೂರ ಇರುವುದು.

೨. ಹಿಂತೆಗೆದುಕೊಳ್ಳುವ ಕ್ರಮ : ಪುರುಷನು ಸಂಭೋಗದಲ್ಲಿ ವೀರ್ಯವನ್ನು ಒಳಬಿಡದೆ ಹೊರ ತೆಗೆಯುವುದು.

೩. ಗರ್ಭ ನಿರೋಧ ಬಳಕೆ : ಗಂಡಸರಿಗೆ ನಿರೋಧ್ ಬಳಕೆ, ಮಹಿಳೆಯರಿಗೆ ವಂಕಿ ತೊಡಿಸುವುದು, ನೊರೆ ಮಾತ್ರೆಗಳ ಬಳಕೆ ಇತ್ಯಾದಿ.

೪. ಲೈಂಗಿಕ ಸುರಕ್ಷತೆಯ ಕಾಲ : ಇದರಲ್ಲಿ ಸ್ತ್ರೀ ರಜಸ್ವಲೆಯಾದ ಹಿಂದಿನ ಕೆಲವು ದಿನಗಳಲ್ಲಿ, ಮುಂದಿನ ಕೆಲವು ದಿನಗಳಲ್ಲಿ ಲೈಂಗಿಕ ಸಂಪರ್ಕ ಹೊಂದುವುದು.

೫. ಉದರ ದರ್ಶಕ ಸಂತಾನ ಹರಣ ಚಿಕಿತ್ಸೆ : ಮಹಿಳೆಯರಿಗೆ ಆಧುನಿಕ ವಿಧಾನದಿಂದ ಕೊಳವೆ ತೂರಿಸಿ ನೋವಿಲ್ಲದೆ ಶಸ್ತ್ರ ಚಿಕಿತ್ಸೆ ಮಾಡುವುದು.

೬. ಸಂತಾನ ಹರಣ ಚಿಕಿತ್ಸೆ : ಇದು ಶಾಶ್ವತ ವಿಧಾನ. ಪುರುಷರಿಗೆ ವ್ಯಾಸ್‌ಕ್ಟಮಿ, ಸ್ತ್ರೀಯರಿಗೆ ಟ್ಯೂಬೆಕ್ಟಮಿ ವಿಧಾನಗಳಿಂದ ಜನನ ನಿಯಂತ್ರಣ ಸಾಧನೆ.

ಇವುಗಳ ಜೊತೆಗೆ ಜನಸಂಖ್ಯೆ ಬೆಳವಣಿಗೆಯನ್ನು ತಡೆಗಟ್ಟಲು ನಗರೀಕರಣಗೊಳಿಸುವುದು, ತಡವಾಗಿ ಮದುವೆಯಾಗುವುದು, ಮಹಿಳಾ ಸಬಲೀಕರಣ, ಅರಿವು ಮೂಡಿಸುವುದು, ಸಂಶೋಧನೆ ಮುಂತಾದವುಗಳಿಂದಲೂ ಜನಸಂಖ್ಯೆ ಬೆಳವಣಿಗೆಯನ್ನು ತಡೆಗಟ್ಟಬಹಗುದು.

೧೯೬೧ ರಿಂದಲೂ ಕುಟುಂಬ ಯೋಜನೆ ಜನಸಂಖ್ಯಾ ನೀತಿಯ ಒಂದು ಭಾಗವಾಗಿದೆ. ಮೂರನೇ ಪಂಚವಾರ್ಷಿಕ ಯೋಜನೆಯಲ್ಲಿ ಆದ್ಯತೆ ಆರಂಭವಾಯಿತು. ೧೯೬೬ ರಲ್ಲಿ ಆರೋಗ್ಯ ಸಚಿವಾಲಯದಲ್ಲಿ ಕುಟುಂಬ ಯೋಜವಾ ವಿಭಾಗ ತೆರೆಯಲಾಯಿತು. ಐದನೇ ಯೋಜನೆಯಲ್ಲಿ ಕುಟುಂಬ ಯೋಜನೆಯನ್ನು ಅರ್ಥಪೂರ್ಣವಾಗಿ ಆಚರಿಸಲು ನಿರ್ಣಯಿಸಲಾಯಿತು. ೧೯೭೬ ರಲ್ಲಿ ಜನಸಂಖ್ಯಾ ನೀತಿ ರೂಪಿಸಲಾಯಿತು. ಪುರುಷರ ವಿವಾಹ ವಯಸ್ಸು ೨೧, ಸ್ತ್ರೀಯರ ವಿವಾಹ ವಯಸ್ಸು ಕನಿಷ್ಠ ೧೮ ಎಂಬ ನಿರ್ಣಯ. ಆರನೇ ಯೋಜನೆಯಲ್ಲಿ ಜನಸಂಖ್ಯೆ ಬೆಳವಣಿಗೆ ದರ ಶೇ ೧ ಕ್ಕೆ ಇಳಿಸಲು ನಿರ್ಧಾರ. ಏಳನೇ ಯೋಜನೆಯಲ್ಲಿ ತಾಯಿಯ ಆರೋಗ್ಯಕ್ಕೆ ಪ್ರಾಮುಖ್ಯತೆ, ಎಂಟನೇ ಯೋಜನೆಯಲ್ಲಿ ಉತ್ತೇಕ ಮತ್ತು ನಿರುತ್ತೇಜಕಗಳನ್ನು ಪರಿಚಯಿಸಲಾಯಿತು. ೯ನೇ ಯೋಜನೆಯಲ್ಲಿ ಈ ಕಾರ್ಯಕ್ರಮ ಸರ್ಕಾರದ ಸಹಕಾರದೊಂದಿಗೆ ಜನರಿಂದ ಕಾರ್ಯ ರೂಪಗೊಳ್ಳುವ ಯೋಜನೆ ಆಯಿತು. ೧೦ ನೇ ಪಂಚ ವಾರ್ಷಿಕ ಯೋಜನೆಯಲ್ಲಿ ಕುಟುಂಬ ಕಲ್ಯಾಣ ಯೋಜನೆಯನ್ನು ಹೆಚ್ಚು ಪರಿಣಾಮಕಾರಿಯಾಗಿ ಜಾರಿಗೆ ತರಲು ನಿರ್ಧರಿಸಲಾಗಿದೆ.

**ರಾಷ್ಟ್ರೀಯ ಜನಸಾಂಖ್ಯಾ ನೀತಿ ೨೦೦೦**

ಈ ನೀತಿಯ ಉದ್ದೇಶ ವೇಗವಾಗಿ ಏರುತ್ತಿರುವ ಜನಸಂಖ್ಯೆಯ ಪ್ರಮಾಣವನ್ನು ತಡೆಗಟ್ಟುವುದು ಹಾಗೂ ಜನಸಂಖ್ಯೆಯನ್ನು ಒಂದು ಮಟ್ಟಕ್ಕೆ ಸ್ಥಿರಗೊಳಿಸುವುದು. ೨೦೦೦ ಇಸವಿಯ ಫೆಬ್ರವರಿ ೧೫ ರಲ್ಲಿ ಈ ನೀತಿ ರೂಪಿಸಲಾಯಿತು.

**ಉದ್ದೇಶಗಳು :** ೧. ಜನನ ನಿಯಂತ್ರಣ ಉದ್ದೇಶಗಳನ್ನು ಸಫಲಗೊಳಿಸುವುದು, ಆರೋಗ್ಯ ರಕ್ಷಣೆ, ಮೂಲಭೂತ ಸೌಕರ್ಯಗಳ ಸೃಷ್ಟಿ ಹಾಗೂ ಶಿಶು ಆರೋಗ್ಯ ರಕ್ಷಣೆಗೆ ಒಂದು ಸಮಗ್ರ ನೀತಿ ರೂಪಿಸುವುದು.

೨. ಒಟ್ಟು ಸಂತಾನೋತ್ಪತ್ತಿ ದರವನ್ನು ಇಳಿಸುವುದು.

೩. ೨೦೪೫ ಇಸವಿಯ ಹೊತ್ತಿಗೆ ಸ್ಥಿರ ಜನಸಂಖ್ಯೆ ಹೊಂದುವುದು. ಆ ಮೂಲಕ ಆರ್ಥಿಕ ಅಭಿವೃದ್ಧಿ ಸಾಧನೆ ಮತ್ತು ಪರಿಸರ ಸಂರಕ್ಷಣೆ ಹೊಂದುವುದು.

೪. ೧೪ನೇ ವಯಸ್ಸಿನವರೆಗೆ ಶಾಲಾ ಶಿಕ್ಷಣ ಕಡ್ಡಾಯಗೊಳಿಸುವುದು.

೫. ಬಾಲ್ಯ ವಿವಾಹ ತಡೆಗಟ್ಟುವುದು.

೬. ಸಾರ್ವತ್ರಿಕ ಚುಚ್ಚುಮದ್ದು ಕಾರ್ಯಕ್ರಮ. ಮಕ್ಕಳಿಗೆ ಸಾರ್ವತ್ರಿಕವಾಗಿ ಟ್ರಿಪಲ್ ಆಂಟಿಜನ್ ಚುಚ್ಚುಮದ್ದು ನೀಡುವುದು.

೭. ಶಿಶು ಮರಣ ಸಂಖ್ಯೆ ಪ್ರತಿ ಸಾವಿರಕ್ಕೆ ೨೦ ಕ್ಕೆ ಇಳಿಸುವುದು.

೮. ಏಡ್ಸ್ ತಡೆಗಟ್ಟುವುದು.

೯. ಬಡತನದ ರೇಖೆಯ ಕೆಳಗೆ ಜೀವಿಸುವವರಿಗೆ ಆರೋಗ್ಯ ವಿಮೆ.

**ರಾಷ್ಟ್ರೀಯ ಜನಸಂಖ್ಯಾ ನೀತಿ ೨೦೦೨ :** ಹಿಂದಿನ ನೀತಿಯ ಉದ್ದೇಶಗಳೊಂದಿಗೆ ರಾಷ್ಟ್ರೀಯ ಜನಸಂಖ್ಯಾ ನೀತಿ ೨೦೦೨ ಕೆಲಕಂಡ ಗುರಿಗಳನ್ನು ಹೊಂದಿದೆ.

೧. ಜನಸಂಖ್ಯೆ ಬೆಳವಣಿಗೆಯನ್ನು ತಗ್ಗಿಸುವುದು ಹಾಗೂ ೨೦೧೦ ನೇ ಇಸವಿಗೆ ಜನಸಂಖ್ಯೆಯನ್ನು ೧೧೦.೭ ಕೋಟಿಗೆ ಸ್ಥಿರೀಕರಿಸುವುದು.

೨. ಜನನ ದರವನ್ನು ೨೦೧೦ ರ ಹೊತ್ತಿಗೆ ಶೇ. ೨.೧ ಕ್ಕೆ ಇಳಿಸುವುದು.

೩. ಶಿಶು ಮರಣ ಸಂಖ್ಯೆಯನ್ನು ೭೧ ರಿಂದ ೪೨ ಕ್ಕೆ ಇಳಿಸುವುದು.

೪. ನಗರ ಪಾಲಿಕೆ ಮತ್ತು ಪಂಚಾಯ್ತಿ ಸಂಸ್ಥೆಗಳ ಮೂಲಕ ಉದ್ದೇಶಗಳನ್ನು ವಿಕೇಂದ್ರೀಕರಣಗೊಳಿಸುವುದು.

೫. ಸರ್ಕಾರೇತರ ಸಂಸ್ಥೆಗಳ ನೆರವು ಪಡೆದು ಉದ್ದೇಶ ಈಡೇರಿಸುವುದು.

ಮೇಲ್ಕಂಡ ಉದ್ದೇಶ ಮತ್ತು ಗುರಿಗಳ ಸಾಧನೆಗೆ ರಾಷ್ಟ್ರೀಯ ಜನಸಂಖ್ಯಾ ಆಯೋಗ ಸ್ಥಾಪಿಸುವುದು ಹಾಗೂ ರಾಜ್ಯ ಮತ್ತು ಕೇಂದ್ರ ಆಡಳಿತ ಪ್ರದೇಶದಲ್ಲಿ ಆಯೋಗ ಸ್ಥಾಪಿಸುವುದು. ಉದ್ದೇಶ ಈಡೇರಿಕೆಗೆ ಮಾದರಿಯಾಗಿ ರಾಜಕಾರಣಿಗಳನ್ನು, ಸಿನಿಮಾ ನಟರನ್ನು, ವೃತ್ತಿ ನಿರತರನ್ನು, ಧಾರ್ಮಿಕ ಮುಖಂಡರನ್ನು, ಮಾಧ್ಯಮವನ್ನು ಬಳಸಿ ಕೊಳ್ಳುವುದು, ನಗದು ಪ್ರೋತ್ಸಾಹ. ಒಂದು ಮುಖ್ಯವಾದ ಅಂಶವೆಂದರೆ ಇವೆಲ್ಲವೂ ಸರ್ಕಾರಿ ಕಾರ್ಯಕ್ರಮಗಳಾಗದೇ ಜನರ ಕಾರ್ಯಕ್ರಮಗಳಾಗಬೇಕು.

## ೨.೨. ಬಡತನ ಮತ್ತು ನಿರುದ್ಯೋಗ

ಭಾರತದಲ್ಲಿ ಬಡತನವು ತಲೆಗಳನ್ನು ಏಣಿಸುವ ವಿಧಾನದಲ್ಲಿ ಮಾನ ಮಾಡಲಾಗುತ್ತದೆ. ಬಡತನ ರೇಖೆ ಕೆಳಗೆ ವಾಸಿಸುವ ಸಂಖ್ಯೆಯನ್ನು ಶೇಕಡಾವಾರು ಲೆಕ್ಕಾಚಾರದಲ್ಲಿ ವ್ಯಕ್ತಪಡಿಸಲಾಗುತ್ತದೆ.

ಸಮಾಜದಲ್ಲಿ ಕನಿಷ್ಟ ಅಗತ್ಯಗಳನ್ನು ಪೂರೈಸಿಕೊಳ್ಳಲಾಗದ ಪರಿಸ್ಥಿತಿ ಬಡತನ. ಇದೊಂದು ಸಾಮಾಜಿಕ ವಿಘಟನೆ. ತೃತೀಯ ಪ್ರಪಂಚದ ರಾಷ್ಟ್ರಗಳು ಅಗಾಧ ಪ್ರಮಾಣದ ಬಡತನ ಹೊಂದಿವೆ. ಮುಂದುವರೆದ ರಾಷ್ಟ್ರಗಳ ಕೆಲವು ಭಾಗಗಳಲ್ಲಿಯೂ ಬಡತಮ ಕಂಡುಬರುತ್ತದೆ. ಬಡತನದ ವ್ಯಾಖ್ಯೆ ಹಲವಾರು ಅಂಶಗಳನ್ನು ಒಳಗೊಂಡಿದ್ದು, ಸಾಮಾನ್ಯವಾಗಿ ಎಲ್ಲಾ ವ್ಯಾಖ್ಯೆಗಳಲ್ಲಿ ಸಮಾಜದಲ್ಲಿ ಅಸಮಾನತೆ ಇರುವುದನ್ನು ವ್ಯಕ್ತ ಪಡಿಸಲಾಗಿದೆ. ಭಾರತದಲ್ಲಿ ಬಡತನದ ವ್ಯಾಖ್ಯೆಯು ಒಂದು ಸಮಂಜಸ ಮಟ್ಟದ ಜೀವನದ ಬದಲಾಗಿ ಕನಿಷ್ಟ ಮಟ್ಟದ ಜೀವನದ ಬಗ್ಗೆ ಒತ್ತು ನೀಡುತ್ತದೆ.

ಭಾರತದಲ್ಲಿ ಬಡತನದ ಬಗ್ಗೆ ಬಹಳಷ್ಟು ಅಧ್ಯಯನಗಳು ನಡೆದಿವೆ. ಪಿ.ಡಿ. ಓಜಾರವರು ಜನರು ಸೇವಿಸುವ ಆಹಾರದ ಕ್ಯಾಲೋರಿ ಪ್ರಮಾಣದ ಮೇಲೆ ಬಡತನ ವಿಶ್ಲೇಷಿಸಿದರೆ, ವಿ.ಎಂ. ದಂಡೇಕರ್ ಮತ್ತು ನೀಲಕಾಂತ್ ರಥ್‌ರವರು ಕೂಡ ಜನರು ಸೇವಿಸುವ ಕನಿಷ್ಟ ಪೌಷ್ಠಿಕ ಆಹಾರ ಆಧರಿಸಿ ವಿಶ್ಲೇಷಿಸಿದ್ದಾರೆ. ಡಾ. ಮಿನ್ಹಾಸ್‌ರವರು ರಾಷ್ಟ್ರೀಯ ಮಾದರಿ ಸಮೀಕ್ಷೆ ಸಂಘಟನೆ ಅಂಕಿ ಸಂಖ್ಯೆ ಆಧಾರದ ಮೇಲೆ ಅನುಭೋಗಕ್ಕಾಗಿ ವೆಚ್ಚ ಮಾಡುವ ಆದಾಯ ಆಧರಿಸಿ ವಿಶ್ಲೇಷಿಸಿದ್ದಾರೆ. ಪಿ.ಕೆ. ಬರ್ಧಾನ್‌ರವರು ಮಿನ್ಹಾಸ್‌ರವರ ವಿಶ್ಲೇಷಣೆ ಟೀಕಿಸಿ, ಕೃಷಿ ಶ್ರಮ ಆಧರಿತ ಬೆಲೆ ಸೂಚ್ಯಂಕ ಬಳಸಲು ಒತ್ತು ನೀಡಿದ್ದಾರೆ. ಮಾಂಟೆಕ್ ಅಹ್ಲುವಾಲಿಯಾ ಜನಗಳು ವೆಚ್ಚ ಮಾಡುವ ಆದಾಯ ಆಧರಿಸಿ ಬಡತನ ವಿಶ್ಲೇಷಿಸಿದ್ದಾರೆ. ವಿಶ್ವಬ್ಯಾಂಕ್ 'ಭಾರತ, ಬಡತನ, ಉದ್ಯೋಗ ಮತ್ತು ಸಾಮಾಜಿಕ ಸೇವೆಗಳು' (೧೯೮೯) ಎಂಬ ಅಧ್ಯಯನದಲ್ಲಿ ಭಾರತದ ಯೋಜನಾ ಆಯೋಗದ ವಿಶ್ಲೇಷಣೆ ಆಧಾರದ ಮೇಲೆ ಬಡತನ ವಿವರಿಸಿದೆ.

ಒಂದು ಕನಿಷ್ಟ ಮಾನದಂಡದ ಆಧಾರದ ಮೇಲೆ ಆ ಮಾನದಂಡಕ್ಕಿಂತ ಕೆಳಮಟ್ಟದಲ್ಲಿ ಇರುವವರನ್ನು ಬಡತನದ ರೇಖೆ ಕೆಳಗೆ ಇರುವವರು ಎಂದು ಲೆಕ್ಕ ಹಾಕಲಾಗುತ್ತದೆ. ಏಳನೇ ಹಣಕಾಸಿನ ಆಯೋಗವು ೧೯೭೮ ಖಾಸಗಿ ಅನುಭೋಗ ವೆಚ್ಚದ ಜೊತೆಗೆ ಸಾರ್ವಜನಿಕ ವೆಚ್ಚವನ್ನು ಸೇರಿಸಿ ಬಡತನ ಅಂದಾಜು ಮಾಡಿದೆ. ಆ ಪ್ರಕಾರ ೧೯೭೦-೭೧ ರಲ್ಲಿ ಶೇ. ೫೨ ರಷ್ಟು ಜನರು ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಬಡತನದ ರೇಖೆ ಕೆಳಗೆ ಇದ್ದರು.

ಡಿ.ಟಿ. ಲಕ್ಡವಾಲಾ ಅಧ್ಯಕ್ಷತೆಯ ಯೋಜನಾ ಆಯೋಗದ ಪರಿಣಿತ ಗುಂಪಿನ (೧೯೯೩) ವರದಿ ಪ್ರಕಾರ ಬಡತನದ ರೇಖೆಯನ್ನು ನಿರ್ಣಯಿಸಲು ಈ ಅಂಶಗಳನ್ನು ಪರಿಗಣಿಸಬೇಕು. ೧೯೭೩-೭೪ ರ ಬೆಲೆ ಆಧಾರದಲ್ಲಿ ತಿಂಗಳಿಗೆ ಗ್ರಾಮಗಳಲ್ಲಿ ೪೯ ರೂ

ಹಾಗೂ ತಿಂಗಳಿಗೆ ನಗರಗಳಲ್ಲಿ ರೂ. ೫೭ ಕ್ಕೂ ಕಡಿಮೆ ಆದಾಯ ಪಡೆಯುವವರು ಬಡತನದ ರೇಖೆ ಕೆಳಗೆ ಬರುತ್ತಾರೆ. ಇದೇ ಯೋಜನಾ ಆಯೋಗ ೧೯೮೦-೮೫ ರಲ್ಲಿ ವಿಶ್ಲೇಷಿಸಿದಂತೆ ಸೇವಿಸುವ ಆಹಾರದ ಕ್ಯಾಲೋರಿಗಳ ಲೆಕ್ಕದಲ್ಲಿ ಗ್ರಾಮಗಳಲ್ಲಿ ದಿನಕ್ಕೆ ೨೪೦೦ ಕ್ಯಾಲೋರಿಗಳಿಗಿಂತ ಕಡಿಮೆ ಸೇವಿಸುವವರು, ನಗರಗಳಲ್ಲಿ ೨೧೦೦ ಕ್ಯಾಲೋರಿಗಳಿಗಿಂತ ಕಡಿಮೆ ಸೇವಿಸುವವರು ಬಡವರು ಅಥವಾ ಬಡತನದ ರೇಖೇ ಕೆಳಗೆ ಬರುತ್ತಾರೆ. ಆಯೋಗದ ಪರಿಣಿತರ ಗುಂಪು ೧೯೭೩-೭೪ ರಿಂದ ೧೯೮೭-೮೮ ರವರೆಗೆ ತನ್ನ ಅಧ್ಯಯನದ ವಿಶ್ಲೇಷಣೆ ನೀಡಿದೆ. ಅದನ್ನು ಕೆಳಗಿನ ಪಟ್ಟಿಯಲ್ಲಿ ತೋರಿಸಲಾಗಿದೆ.

೧೯೭೩-೭೪ ರ ಮೂಲ ಆಧಾರದಲ್ಲಿ ಬಡತನದ ರೇಖೆ

(ತಿಂಗಳಿಗೆ ತಲಾ ರೂಗಳು)

| ವರ್ಷ | ಗ್ರಾಮೀಣ | ನಗರ |
|---|---|---|
| ೧೯೭೩-೭೪ | ೪೯.೦೯ | ೫೬.೯೬ |
| ೧೯೭೭-೭೮ | ೫೬.೮೪ | ೭೨.೫೦ |
| ೧೯೮೩ | ೮೯.೪೫ | ೧೧೭.೬೪ |
| ೧೯೮೭-೮೮ | ೧೧೫.೪೩ | ೧೬೫.೫೮ |

ಹೀಗೆ ೧೯೮೭-೮೮ ರಲ್ಲಿ ಗ್ರಾಮೀಣ ಪ್ರದೇಶದಲ್ಲಿ ತಿಂಗಳಿಗೆ ರೂ ೧೧೫.೪೩ ನಗರಗಳಲ್ಲಿ ತಿಂಗಳಿಗೆ ರೂ ೧೬೫.೫೮ ಲೆಕ್ಕದಲ್ಲಿ ಇದಕ್ಕಿಂತ ಕಡಿಮೆ ಆದಾಯ ಹೊಂದಿರುವವರು ಬಡತನದ ರೇಖೆ ಕೆಳಗೆ ಬರುತ್ತಾರೆ. ಈ ಆಧಾರದಲ್ಲಿ ಭಾರತದಲ್ಲಿ ಬಡತನದ ಪ್ರಮಾಣ ಕೆಳಕಂಡಂತಿದೆ.

| ವರ್ಷ | ಗ್ರಾಮಗಳಲ್ಲಿ ಶೇ. | ನಗರಗಳಲ್ಲಿ ಶೇ. | ಭಾರತದಲ್ಲಿ ಒಟ್ಟು ಶೇ. |
|---|---|---|---|
| ೧೯೭೩-೭೪ ರಲ್ಲಿ | ೫೬.೪ | ೪೯.೨ | ೫೪.೯ |
| ೧೯೭೭-೭೮ ರಲ್ಲಿ | ೫೩.೧ | ೪೭.೪ | ೫೧.೮ |
| ೧೯೮೩ ರಲ್ಲಿ | ೪೫.೬ | ೪೨.೨ | ೪೪.೮ |
| ೧೯೮೭-೮೮ ರಲ್ಲಿ | ೩೯.೧ | ೪೦.೧ | ೩೯.೩ |
| ೧೯೯೩-೯೪ ರಲ್ಲಿ | ೩೭.೩ | ೩೨.೪ | ೩೬.೦ |
| ೧೯೯೯-೨೦೦೦ರಲ್ಲಿ | ೨೭.೧ | ೨೩.೬ | ೨೬.೧ |

ಅಂದಾಜು ೨೦೦೬-೦೭ ರಲ್ಲಿ ಬಡತನದ ಶೇಕಡಾವಾರು ಪ್ರಮಾಣ ೯.೫೩, ೨೦೧೧-೧೨ ರಲ್ಲಿ ಅಂದಾಜು ಶೇ ೪.೩೭ ಕ್ಕೆ ಇಳಿಯಲಿದೆ. ಶೇಕಡಾವಾರು ಲೆಕ್ಕದಲ್ಲಿ ಬಡತನದ ರೇಖೆ ಕೆಳಗೆ ಬರುವವರ ಅನುಪಾತ ಕಡಿಮೆಯಿದ್ದರೂ, ವಾಸ್ತವವಾಗಿ ಸಂಖ್ಯೆ ಪ್ರಮಾಣದಲ್ಲಿ ಬಡತನ ಹೆಚ್ಚಿದೆ. ಇದರಲ್ಲಿ ನಗರ ಬಡತನ ಪ್ರಮಾಣವು ಗ್ರಾಮೀಣ

ಬಡತನ ಪ್ರಮಾಣಕ್ಕಿಂತ ಹೆಚ್ಚಾಗಿರುವುದನ್ನು ಕಾಣಬಹುದು. ಭಾರತದ ಬಡವರಲ್ಲಿ ಶೇ ೫೮ ರಷ್ಟು ಉತ್ತರ ಪ್ರದೇಶ, ಬಿಹಾರ, ಮಹಾರಾಷ್ಟ್ರ, ಪಶ್ಚಿಮ ಬಂಗಾಳ ಮತ್ತು ಮಧ್ಯ ಪ್ರದೇಶ ರಾಜ್ಯಗಳಲ್ಲಿದ್ದಾರೆ. ಭಾರತದ ಸರಾಸರಿ ಬಡತನದ ಪ್ರಮಾಣ ಶೇ ೨೬.೧ ಇದ್ದರೆ, ಈ ಸರಾಸರಿ ದರಕ್ಕಿಂತ ಹೆಚ್ಚಿನ ಪ್ರಮಾಣದ ಬಡವರು ಕೆಲವು ರಾಜ್ಯಗಳಲ್ಲಿದ್ದಾರೆ. ಉದಾ. ಮಹಾರಾಷ್ಟ್ರದಲ್ಲಿ ಶೇ ೨೩.೯, ಬಿಹಾರದಲ್ಲಿ ಶೇ ೪೨.೬, ಒರಿಸ್ಸಾದಲ್ಲಿ ಶೇ ೩೨, ಬಡತನದ ರೇಖೆ ಕೆಳಗೆ ಇದ್ದಾರೆ. ೧೯೯೯ ೨೦೦೦ ದಲ್ಲಿ ೧೯.೩೨ ಕೋಟಿ ಜನಸಂಖ್ಯೆ ಗ್ರಾಮಗಳಲ್ಲಿ, ೬.೭೧ ಕೋಟಿ ಜನಸಂಖ್ಯೆ ನಗರಗಳಲ್ಲಿ, ಒಟ್ಟು ೨೬.೩ ಕೋಟಿ ಜನಸಂಖ್ಯೆ ಬಡತನದ ರೇಖೆ ಕೆಳಗೆ ಇದ್ದರು. ಬಡತನಕ್ಕೆ ಕಾರಣ ಹೆಚ್ಚಿನ ಜನಸಂಖ್ಯೆ, ಅಸಮಾನತೆ, ಭಾರತ ಆರ್ಥಿಕವಾಗಿ ಹಿಂದುಳಿದಿರುವುದು, ಕಡಿಮೆ ತಲಾ ಆದಾಯ, ಕಡಿಮೆ ಪ್ರಗತಿದರ, ಪ್ರಾದೇಶಿಕ ಅಸಮತೋಲನ, ಹಣದುಬ್ಬರ, ಹಿಂದುಳಿದ ತಂತ್ರಜ್ಞಾನ ಕನಿಷ್ಟ ಅನುಭೋಗ ವೆಚ್ಚ ಹಾಗೂ ಸಾಮಾಜಿಕ ಮತ್ತು ರಾಜಕೀಯ ಕಾರಣಗಳು.

ಯೋಜನಾ ಆಯೋಗ ಹೊರ ತಂದಿರುವ (೨೦೦೨) ಮಾನವ ಅಭಿವೃದ್ಧಿ ಸೂಚ್ಯಂಕ ವರದಿ ೨೦೦೧ ರಲ್ಲಿ ಕೇರಳದದ ಮಾನವ ಅಭಿವೃದ್ಧಿ ಸೂಚ್ಯಂಕ ಸ್ಥಾನ ೧, ಬಿಹಾರದ ಸ್ಥಾನ ೧೫, ಮಧ್ಯ ಪ್ರದೇಶದ ಸ್ಥಾನ ೧೨, ಉತ್ತರ ಪ್ರದೇಶಕ್ಕೆ ೧೩ ನೇ ಸ್ಥಾನ, ಅಸ್ಸಾಂ ೧೪, ಕರ್ನಾಟಕದ ಸ್ಥಾನ ೭, ಪಂಜಾಬ್ ೨ ನೇ ಸ್ಥಾನ ಹೊಂದಿದೆ. ಬಡತನ ಮತ್ತು ಅಸಮಾನತೆಗಳು ನಿಕಟ ಸಂಬಂಧ ಹೊಂದಿವೆ. ಸಾಪೇಕ್ಷ ಬಡತನ (ಹೋಲಿಕೆಯ ಬಡತನ) ಅಪಾಯಕಾರಿಯಲ್ಲದಿದ್ದರೂ, ನಿರಪೇಕ್ಷ ಬಡತನ ಕನಿಷ್ಟ ಸೌಲಭ್ಯಗಳೂ ಇಲ್ಲದಿರುವುದು ಅಪಾಯಕಾರಿ ಹಾಗೂ ಆಧುನಿಕ ಸಮಾಜದ ಕಪ್ಪುಚುಕ್ಕೆ. ರಾಷ್ಟ್ರೀಯ ಮಾದರಿ ಸಮೀಕ್ಷೆ ಸಂಘಟನೆ ಪ್ರಕಾರ ಭಾರತದಲ್ಲಿ ವಿವಿಧ ಜಾತಿ ಜನಾಂಗಗಳ ನಡುವೆ, ರಾಜ್ಯ ಮತ್ತು ರಾಜ್ಯಗಳ ನಡುವೆ ಬಡತನದಲ್ಲಿ ಅಗಾಧವಾದ ವ್ಯತ್ಯಾಸಗಳು ಕಂಡು ಬರುತ್ತವೆ. ಮುಸ್ಲಿಂ ಜನಾಂಗದಲ್ಲಿ ಸರಾಸರಿ ಮಾಸಿಕ ಬಂಡವಾಳದ ವೆಚ್ಚದ ಪ್ರಮಾಣವು ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಅತಿ ಕಡಿಮೆ ಇದ್ದು, ಸಿಖ್ ಜನಾಂಗದ ಮತ್ತು ಕ್ರಿಶ್ಚಿಯನ್ ಜನಾಂಗದ ವೆಚ್ಚ ಪ್ರಮಾಣವು ನಗರ ಮತ್ತು ಗ್ರಾಮೀಣ ಪ್ರದೇಶಗಳೆರಡರಲ್ಲಿ ಹೆಚ್ಚಾಗಿರವುದು ಕಂಡು ಬರುತ್ತದೆ. ಬಡತನದ ವಿಸ್ತಾರ, ಆಳ ಮತ್ತು ತೀವ್ರತೆ ಗ್ರಾಮೀಣ ಪ್ರದೇಶಗಳಲ್ಲಿ ಇತರೇ ಜನಾಂಗಗಳಲ್ಲಿ (ಹಿಂದೂಗಳಲ್ಲಿ ಹೆಚ್ಚು) ಹೆಚ್ಚಾಗಿದ್ದು ನಗರ ಪ್ರದೇಶಗಳಲ್ಲಿ ಮುಸ್ಲಿಂರಲ್ಲಿ ತುಂಬಾ ಹೆಚ್ಚಿದೆ. ಸಾಮಾಜಿಕ ಗುಂಪುಗಳಲ್ಲಿ ಬಡತನವು ಪರಿಶಿಷ್ಟ ಜಾತಿ/ಪರಿಶಿಷ್ಟ ಜನಾಂಗಗಳಲ್ಲಿ ಹೆಚ್ಚಾಗಿದೆ. (ಸುಂದರನ್ ಮತ್ತು ತೆಂಡೂಲ್ಕರ್ ಅಧ್ಯಯನ ೨೦೦೩). ಭಾರತದಲ್ಲಿ ಹಿಂದೂಗಳಲ್ಲಿ ಗ್ರಾಮಗಳಲ್ಲಿ ಮೂರನೇ ಒಂದು ಭಾಗ, ನಗರಗಳಲ್ಲಿ ಐದನೇ ಒಂದು ಭಾಗದಷ್ಟು ಜನರು ಪರಿಶಿಷ್ಟ ಜಾತಿ ಅಥವಾ ಪರಿಶಿಷ್ಟ ಜನಾಂಗಕ್ಕೆ ಸೇರಿದವರಾಗಿದ್ದಾರೆ. ಬಡತನ ಹೋಗಲಾಡಿಸಲು ಸರ್ಕಾರ ಮಾಡುವ ಬಡತನ ವಿರುದ್ಧದ ಕಾರ್ಯಕ್ರಮಗಳು ಗ್ರಾಮೀಣ ಬಡತನವನ್ನು ಕಡಿಮೆ

ಮಾಡಿವೆ. ಅಲ್ಲದೆ ಆರ್ಥಿಕ ಅಭಿವೃದ್ಧಿಯು ಬಡತನ ಕಡಿಮೆಯಾಗಿರುವುದರ ದ್ಯೋತಕವಾಗಿದೆ. ೨೦೦೫-೦೬ ಹಣಕಾಸು ವರ್ಷದಲ್ಲಿ ಆರ್ಥಿಕ ವೃದ್ಧಿ ದರವು ಶೇ ೭.೨ ರಷ್ಟು ಆಗಲಿದೆ ಎಂದು ರಾಷ್ಟ್ರೀಯ ಅನ್ವಯಿಕ ಆರ್ಥಿಕ ಸಂಶೋಧನಾ ಕೇಂದ್ರ (NCAER) ಅಂದಾಜು ಮಾಡಿದೆ. ಬಡತನ ನಿರ್ಮೂಲನೆ ಕಾರ್ಯಕ್ರಮದಲ್ಲಿ ಬಡವರ ಪರಿಣಾಮಕಾರಿ ಭಾಗವಹಿಸುವಿಕೆ ಇಲ್ಲದಿರುವುದರಿಂದ ಬಡತನ ನಿರ್ಮೂಲನೆ ಸಾಧ್ಯವಾಗಿಲ್ಲ. (UNDP ಅಧ್ಯಯನ ೨೦೦೧). ಮೇಲ್ಪದರಿಂದ ಕೆಳಪದರಕ್ಕೆ ಆದಾಯ ಹಂಚಿಕೆ ಯಾಗುವುದರಿಂದ ಎಂದರೆ ಆರ್ಥಿಕ ಬೆಳವಣಿಗೆಯ ಫಲವನ್ನು ಮೊದಲು ಶ್ರೀಮಂತರು ಅನಂತರ ಅವರ ವೆಚ್ಚದ ಮೂಲಕ ಬಡವರು ಪಡೆಯುವುದರಿಂದ (ಕಕ್ವಾನಿ ಮತ್ತು ಪರ್ನಿಯ ಅಧ್ಯಯನ ೧೯೯೯) ಬಡತನ ಕಡಿಮೆಯಾಗುತ್ತದೆ. ಸರ್ಕಾರದ ಅಭಿವೃದ್ಧಿ ವೆಚ್ಚಗಳು ಬಡತನವನ್ನು ಕಡಿಮೆ ಮಾಡುತ್ತವೆ. (ಫ್ಯಾನ್ ಅಧ್ಯಯನ ಹಾಗೂ ಹ್ಯಾಸೆಲ್ ಮತ್ತು ಥೋರಾಟ್ ಅಧ್ಯಯನ ೧೯೯೯) ಮುಖ್ಯವಾಗಿ ಭೌತಿಕ ಅಧೋರಚನೆ ಹೂಡಿಕೆಯು ಬಡತನ ತೀವ್ರತೆಯನ್ನು ಕಡಿಮೆ ಮಾಡುತ್ತದೆ. ಗ್ರಾಮೀಣ ಪ್ರದೇಶಗಳಲ್ಲಿ ಭೂ ಹಂಚಿಕೆ ಕೂಡ ಸಹಾಯಕವಾಗಬಲ್ಲದು. ಲಿಂಗ ತಾರತಮ್ಯ ಹೋಗಲಾಡಿಸುವುದು ಕೂಡ ಈ ದಿಶೆಯಲ್ಲಿ ಸ್ತುತ್ಯಾರ್ಹ ಕಾರ್ಯವಾಗಿದೆ. (ಕ್ಲಾಸೆವ್ ಅಧ್ಯಯನ ೧೯೯೯). ೧೯೯೦ ರ ದಶಕದಲ್ಲಿ ಒಟ್ಟು ದೇಶೀಯ ಉತ್ಪನ್ನ ಪ್ರಮಾಣ ಸರಾಸರಿ ಶೇ.೬ ರಷ್ಟಿತ್ತು. ಉದಾರೀಕರಣದಿಂದಾಗಿ ಮತ್ತು ಜಾಗತೀಕರಣದಿಂದಾಗಿ ಬಡವರ ಪ್ರಮಾಣ ಭಾರತದಲ್ಲಿ ಕಡಿಮೆಯಾಗಿದೆ ಎಂದು ಅಧ್ಯಯನಗಳು ತಿಳಿಸುತ್ತವೆ. ಜೊತೆಗೆ ಈಗಿನ ಬದಲಾವಣೆಗಳು ಬಡವರ ಪರವಾಗಿಲ್ಲ ಎನ್ನುವುದನ್ನು ಈ ಅಧ್ಯಯನಗಳು ತಿಳಿಸುತ್ತವೆ.

### ನಿರುದ್ಯೋಗದ ಅರ್ಥ

ಕೆಲಸ ಸಾಕಷ್ಟು ಇಲ್ಲದಿರುವುದು ಅಥವಾ ಕೆಲಸದ ಕೊರತೆಯೇ ನಿರುದ್ಯೋಗ. ಭಾರತದಲ್ಲಿ ನಿರುದ್ಯೋಗ ತುಂಬಾ ಗಂಭೀರ ಸ್ವರೂಪ ಹೊಂದಿದೆ. ಜೆ.ಎಂ. ಕೇನ್ಸ್ 'ಪರಿಣಾಮಕಾರಿ ಬೇಡಿಕೆ ಕೊರತೆಯಿಂದ ನಿರುದ್ಯೋಗ ಉಂಟಾಗುತ್ತದೆ' ಎಂದು ಹೇಳಿದ್ದರೂ, ಭಾರತದಲ್ಲಿ ನಿರುದ್ಯೋಗದ ಸ್ವರೂಪ ಭಿನ್ನವಾಗಿದೆ. ಭಾರತದಲ್ಲಿ ಬಂಡವಾಳ ಸಾಧನಗಳ ಕೊರತೆ ಮತ್ತು ಇತರೇ ಪೂರಕ ಸಂಪನ್ಮೂಲಗಳ ಕೊರತೆಯಿಂದ ನಿರುದ್ಯೋಗ ಉಂಟಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿ ಋತುಮಾನದ ನಿರುದ್ಯೋಗ, ಮರೆ ಮಾಚಿದ ನಿರುದ್ಯೋಗ, ತೀಕ್ಷ್ಣ ನಿರುದ್ಯೋಗವಿದ್ದರೆ ನಗರ ಪ್ರದೇಶಗಳಲ್ಲಿ ಅದು ತೆರೆದ ನಿರುದ್ಯೋಗವಾಗಿದ್ದು ಶಿಕ್ಷಿತ ನಿರುದ್ಯೋಗ ಮತ್ತು ಘರ್ಷಣಾತ್ಮಕ ನಿರುದ್ಯೋಗ ಹಾಗೂ ಅರೆ ಉದ್ಯೋಗ ಸ್ವರೂಪದಲ್ಲಿದೆ. ಆವರ್ತ ಸ್ವರೂಪದ ನಿರುದ್ಯೋಗವೂ ಇದೆ. ಪ್ರಸ್ತುತ ಇರುವ ಕೂಲಿ ದರಗಳಲ್ಲಿ ದುಡಿಯುವ ಇಚ್ಛೆ ಇದ್ದು, ದುಡಿಯುವ ಶಕ್ತಿ ಇದ್ದು ಉದ್ಯೋಗ ದೊರಕದಿದ್ದರೆ ಅದನ್ನು ನಿರುದ್ಯೋಗ ಎನ್ನಲಾಗುತ್ತದೆ. ನಿರುದ್ಯೋಗ ಜನರ ಜೀವನ ಮಟ್ಟವನ್ನು ಕಡಿಮೆ ಮಾಡುವುದರ ಜೊತೆಗೆ ಕೆಲಸಗಾರರ ಆತ್ಮ ಶಕ್ತಿಯನ್ನು

ಕಡಿಮೆ ಮಾಡುತ್ತದೆ. ನಿರುದ್ಯೋಗಕ್ಕೆ ಹಲವಾರು ಕಾರಣಗಳಿವೆ. ಜನಸಂಖ್ಯೆ ಹೆಚ್ಚಳ, ಕೃಷಿ ಹಿಂದುಳಿದಿರುವುದು, ನಿಧಾನ ಆರ್ಥಿಕ ಬೆಳವಣಿಗೆ, ಶ್ರಮ ಬದಲಿಸದಿರುವುದು, ದೋಷ ಪೂರ್ಣ ಯೋಜನೆಗಳು, ಗೃಹ ಮತ್ತು ಸಣ್ಣ ಕೈಗಾರಿಕೆಗಳನ್ನು ನಿರ್ಲಕ್ಷಿಸಿರುವುದು, ಅಸಮರ್ಪಕ ತಂತ್ರಜ್ಞಾನ, ಮಾನವ ಶಕ್ತಿಯನ್ನು ಸರಿಯಾಗಿ ಬಳಸದಿರುವುದು, ಶ್ರಮದ ಪ್ರಮಾಣದ ಏರಿಕೆ ಹಾಗೂ ದೋಷಪೂರಿತ ಶಿಕ್ಷಣ ಪದ್ಧತಿ.

## ನಿರುದ್ಯೋಗ ವಿಧಗಳು

### ೧. ತೆರೆದ ನಿರುದ್ಯೋಗ

ಕೆಲಸ ಮಾಡಲು ಇಷ್ಟ ಇದ್ದು, ಶಕ್ತಿ ಇದ್ದು, ಕೆಲಸ ದೊರಕದ ಸ್ಥಿತಿಯೇ ತೆರೆದ ನಿರುದ್ಯೋಗ. ಇಂತಹ ನಿರುದ್ಯೋಗವನ್ನು ಭಾಗಶಃ ಗ್ರಾಮೀಣ ಪ್ರದೇಶದಲ್ಲಿ ಮತ್ತು ಹೆಚ್ಚು ಪ್ರಮಾಣದಲ್ಲಿ ನಗರ ಪ್ರದೇಶಗಳಲ್ಲಿ ಕಾಣಬಹುದು. ಕೆಲವರು ಹಳ್ಳಿಗಳಿಂದ ನಗರಕ್ಕೆ ಬಂದಿರಬಹುದು ಅಥವಾ ನಗರದಲ್ಲಿಯೇ ಇರುವವರಾಗಿರಬಹುದು. ಇಂತಹ ನಿರುದ್ಯೋಗವನ್ನು ತಲೆಗಳನ್ನು ಎಣಿಸುವ ಮೂಲಕ ಲೆಕ್ಕಾಚಾರ ಹಾಕಬಹುದಾದ್ದರಿಂದ ಇದನ್ನು ತೆರೆದ ಅಥವಾ ಮುಕ್ತ ನಿರುದ್ಯೋಗ ಎನ್ನಲಾಗಿದೆ.

### ೨. ಮರೆ ಮಾಚಿದ ನಿರುದ್ಯೋಗ

ಇದನ್ನು ಮುಚ್ಚಿದ ನಿರುದ್ಯೋಗ ಎಂದೂ ಹೇಳಲಾಗಿದೆ. ನಿರುದ್ಯೋಗ ಇದ್ದರೂ, ಮೇಲ್ನೋಟಕ್ಕೆ ಕಾಣುವುದಿಲ್ಲ. ಆದ್ದರಿಂದ ಇದನ್ನು ಮುಚ್ಚಿದ ನಿರುದ್ಯೋಗ ಎಂದು ಕರೆಯಲಾಗಿದೆ. ಹಳ್ಳಿಗಳಲ್ಲಿ ಕೃಷಿಯಲ್ಲಿ ಎಲ್ಲರೂ ಉದ್ಯೋಗದಲ್ಲಿ ತೊಡಗಿದಂತೆ ಕಂಡರೂ, ವಾಸ್ತವವಾಗಿ ಅಷ್ಟು ಪ್ರಮಾಣದ ಜನರ ಅಗತ್ಯ ಇರುವುದಿಲ್ಲ. ಕೃಷಿಯಲ್ಲಿ ಒಂದು ಕಡೆ ಕೆಲಸ ಮಾಡುವ ವ್ಯಕ್ತಿಗಳಲ್ಲಿ ಕೆಲವರನ್ನು ತೆಗೆದು ಹಾಕಿದರೂ, ಉತ್ಪಾದನೆಯ ಪ್ರಮಾಣ ಕಡಿಮೆಯಾಗುವುದಿಲ್ಲ. ಕೃಷಿಯಲ್ಲಿ ಎಲ್ಲರೂ ತಮ್ಮ ಸಾಮರ್ಥ್ಯಕ್ಕೆ ತಕ್ಕಂತೆ ಕೆಲಸ ಮಾಡುತ್ತಿರುವುದಿಲ್ಲ. ಹೀಗಾಗಿ ಇದನ್ನು ಮರೆಮಾಚಿದ ನಿರುದ್ಯೋಗ ಎನ್ನಲಾಗಿದೆ.

### ೩. ರಚನಾತ್ಮಕ ನಿರುದ್ಯೋಗ

ಭಾರತದಲ್ಲಿ ಉತ್ಪಾದಕ ಶಕ್ತಿ ಕಡಿಮೆ ಇದೆ. ಮತ್ತೊಂದು ಕಡೆ ಹೆಚ್ಚಿನ ಜನಸಂಖ್ಯೆ ಯಿಂದಾಗಿ ಶ್ರಮಿಕರ ಪ್ರಮಾಣ ಹೆಚ್ಚುತ್ತಿದೆ. ಹಿಂದಿನಿಂದಲೂ ಅರ್ಥ ವ್ಯವಸ್ಥೆಯಲ್ಲಿ ಈ ವಿಧಾನ ಮುಂದುವರೆದು ತೀಕ್ಷ್ಣ ನಿರುದ್ಯೋಗ ಉಂಟಾಗಿದೆ. ಅರ್ಥ ವ್ಯವಸ್ಥೆಯ ಸ್ವರೂಪ ಅಥವಾ ರಚನೆಯಿಂದಾಗಿ ಉಂಟಾಗುವ ನಿರುದ್ಯೋಗ ರಚನಾತ್ಮಕ ನಿರುದ್ಯೋಗ.

### ೪. ಋತುಮಾನದ ನಿರುದ್ಯೋಗ

ಕೃಷಿಯಲ್ಲಿ ಕೆಲವು ಋತುಗಳಲ್ಲಿ ಉದ್ಯೋಗವಿದ್ದು ಉಳಿದ ಸಮಯದಲ್ಲಿ ಕೆಲಸ ವಿರುವುದಿಲ್ಲ. ಉದಾ. ಮಳೆ ಬಂದಾಗ ಬಿತ್ತನೆ. ನಂತರ ಉಳುಮೆ, ಕೊಯಿಲು ಕೆಲಸಗಳಿರುತ್ತವೆ. ಮಳೆ ಇಲ್ಲದಿದ್ದಾಗ ಇತರೆ ಋತುಗಳಲ್ಲಿ ನಿರುದ್ಯೋಗವಿರುತ್ತದೆ.

೫. ಅರೆ ಉದ್ಯೋಗ

ಉದ್ಯೋಗದಲ್ಲಿರುವವರು ತಮ್ಮ ಸಾಮರ್ಥ್ಯಕ್ಕಿಂತ ಕಡಿಮೆ ಪ್ರಮಾಣದಲ್ಲಿ ಕೆಲಸ ಮಾಡುತ್ತಿರುವುದು ಅಥವಾ ಸಾಮರ್ಥ್ಯಕ್ಕೆ ತಕ್ಕಂತೆ ಕೆಲಸ ಇಲ್ಲದಿರುವುದು. ಒಬ್ಬ ವಿಜ್ಞಾನ ಪದವೀಧರ ಕಾರಕೂನನಾಗಿ ಕೆಲಸ ಮಾಡುತ್ತಿರುವುದು ಅಥವಾ ತನ್ನ ಸಾಮರ್ಥ್ಯಕ್ಕೂ ಉದ್ಯೋಗಕ್ಕೂ ಸಂಬಂಧ ಇಲ್ಲದಿರುವುದು ಅರೆ ಉದ್ಯೋಗ.

೬. ವಿದ್ಯಾವಂತ ನಿರುದ್ಯೋಗ

ಪಿಯುಸಿ ಅಥವಾ ಅದಕ್ಕೂ ಹೆಚ್ಚಿನ ವಿದ್ಯಾಭ್ಯಾಸ ಹೊಂದಿರುವವರು ಉದ್ಯೋಗ ದೊರಕದೆ ನಿರುದ್ಯೋಗಿಗಳಾಗಿರುವದು. ವಿದ್ಯೆಗೆ ತಕ್ಕಂತೆ ಉದ್ಯೋಗ ದೊರಕದಿದ್ದಾಗ ಅದು ವಿದ್ಯಾವಂತ ನಿರುದ್ಯೋಗ. ಈ ಮೇಲಿನವು ಭಾರತ ಮತ್ತು ಭಾರತದಂತಹ ರಾಷ್ಟ್ರಗಳಲ್ಲಿ ಕಾಣುವ ನಿರುದ್ಯೋಗ. ಮುಂದುವರೆದ ರಾಷ್ಟ್ರಗಳಲ್ಲಿಯೂ ನಿರುದ್ಯೋಗ ವಿರುತ್ತದೆ. ಅವುಗಳು

೧. ಆವರ್ತ ನಿರುದ್ಯೋಗ

ಬಂಡವಾಳಶಾಹಿ ಅರ್ಥ ವ್ಯವಸ್ಥೆಯಲ್ಲಿ ಉಂಟಾಗುವ ಆರ್ಥಿಕ ಸ್ಥಿತ್ಯಂತರಗಳಿಂದಾಗಿ ಉಂಟಾಗುವ ನಿರುದ್ಯೋಗ. ಆರ್ಥಿಕ ಆವರ್ತದಲ್ಲಿ ಹಿನ್ನಡೆ ಉಂಟಾಗಿ ಮುಗ್ಗಟ್ಟಿದ್ದಾಗ ಉಳಿತಾಯ ಹೂಡಿಕೆ ಕಡಿಮೆಯಾಗಿ ನಿರುದ್ಯೋಗ ತೀವ್ರವಾಗುತ್ತದೆ.

೨. ಘರ್ಷಣಾತ್ಮಕ ನಿರುದ್ಯೋಗ

ಕೈಗಾರಿಕೆಗಳು ಅಬಿವೃದ್ಧಿ ಹೊಂದಿದಾಗ, ಆಧುನಿಕ ತಂತ್ರಜ್ಞಾನದಿಂದಾಗಿ ಯಂತ್ರಗಳು ಹೆಚ್ಚಾಗಿ ಕಾರ್ಮಿಕರು ಕೆಲಸ ಕಳೆದುಕೊಳ್ಳುತ್ತಾರೆ. ಮತ್ತೊಂದು ಕಾರ್ಖಾನೆಯಲ್ಲಿ ಕೆಲಸ ಸಿಗುವವರೆಗೆ ಅವರು ನಿರುದ್ಯೋಗಿಗಳಾಗಿರುತ್ತಾರೆ. ಇದು ಯಂತ್ರಗಳ ಅಳವಡಿಕೆ ಮತ್ತು ಕಾರ್ಮಿಕರ ನಡುವೆ ಉಂಟಾಗುವ ಘರ್ಷಣೆ. ಇದನ್ನು ತಿಕ್ಕಾಟದ ನಿರುದ್ಯೋಗವೆಂದೂ ಹೇಳಲಾಗಿದೆ.

NSSO (ರಾಷ್ಟ್ರೀಯ ಮಾದರಿ ಸಮೀಕೆ ಸಂಘಟನೆ) ಪ್ರಕಾರ ಒಬ್ಬ ವ್ಯಕ್ತಿ ದಿನಕ್ಕೆ ೮ ಗಂಟೆಗಳಂತೆ ಒಂದು ವರ್ಷದಲ್ಲಿ ೨೭೩ ದಿನ ಉದ್ಯೋಗ ಮಾಡಿದರೆ ಅದನ್ನು ಪೂರ್ಣ ಕಾಲಿಕ ಉದ್ಯೋಗ ಎಂದು ಭಾವಿಸಲಾಗಿದೆ. ಯೋಜನಾ ಆಯೋಗದಿಂದ ರಚಿತವಾದ ನಿರುದ್ಯೋಗವನ್ನು ಅಂದಾಜಿಸುವ ಪರಿಣಿತರ ಗುಂಪು NSSನ ೨೭ ನೇ ಸುತ್ತಿನಲ್ಲಿ ಮೂರು ರೀತಿಯ ನಿರುದ್ಯೋಗವನ್ನು ಅಂದಾಜಿಸಿದೆ.

೧. ರೂಢಿಗತ ನಿರುದ್ಯೋಗ

ಒಂ೧ಏ ನಿರ್ದಿಷ್ಟ ದೀರ್ಘ ಕಾಲಾವಧಿಯಲ್ಲಿ ಒಬ್ಬ ವ್ಯಕ್ತಿ ಉದ್ಯೋಗ ನಿರೀಕ್ಷಿಸುತ್ತಿದ್ದು ಅಥಬಾ ಕೆಲಸಕ್ಕೆ ತಯಾರಿದ್ದು ಯಾವುದೇ ಕೆಲಸ ದೊರಕದೇ ಹೋದರೆ ಅದನ್ನು ೧ೂಢಿಗತ ನಿರುದ್ಯೋಗ ಅಥವಾ ಬಹುಕಾಲದ ನಿರುದ್ಯೋಗ ಎನ್ನಲಾಗಿದೆ. ನಿರುದ್ಯೋಗದ

ಲೆಕ್ಕಾಚಾರವನ್ನು ನಿರುದ್ಯೋಗಿಗಳ ಸಂಖ್ಯೆಯ ಆಧಾರದ ಮೇಲೆ ಹೇಳಲಾಗಿದೆ. ವಿದ್ಯಾವಂತ ಮತ್ತು ಕೌಶಲ ಹೊಂದಿದ ನಿರುದ್ಯೋಗಿಗಳು ಉದ್ಯೋಗ ಅರಸುತ್ತಿದ್ದು ಇಂಥವರು ಸಾಮಾನ್ಯ ಅಥವಾ ಅನಿಶ್ಚಿತ ಉದ್ಯೋಗವನ್ನು ಒಪ್ಪಿಕೊಳ್ಳುವುದಿಲ್ಲ. ಇದನ್ನು ರೂಢಿಗತ ನಿರುದ್ಯೋಗ ಎನ್ನಲಾಗಿದೆ. ಇದು ತೆರೆದ ನಿರುದ್ಯೋಗದ ಪ್ರಮಾಣವನ್ನು ತಿಳಿಸುತ್ತದೆ.

**೨. ಪ್ರಸ್ತುತ ವಾರದ ಸ್ಥಿತಿಯ ನಿರುದ್ಯೋಗ**

ಇಲ್ಲಿ ನಿರುದ್ಯೋಗದ ಪ್ರಮಾಣವನ್ನು ಒಂದು ವಾರಕ್ಕೆ ಲೆಕ್ಕಾಚಾರ ಹಾಕಲಾಗುವುದು. ಒಬ್ಬ ವ್ಯಕ್ತಿ ಉದ್ಯೋಗ ಅರಸುತ್ತಿದ್ದು ಉದ್ಯೋಗ ಮಾಡಲು ತಯಾರಾಗಿದ್ದು ಒಂದು ವಾರದಲ್ಲಿ ಕೇವಲ ಒಂದು ಗಂಟೆ ಉದ್ಯೋಗವನ್ನು ದೊರಕಿಸಿಕೊಳ್ಳಲು ಸಾಧ್ಯವಾಗದಿದ್ದರೆ ಅದನ್ನು ಪ್ರಸ್ತುತ ವಾರದ ಸ್ಥಿತಿಯ ನಿರುದ್ಯೋಗ ಎನ್ನಲಾಗಿದೆ. ಈ ವಿಧಾನದಲಿ ಒಂದು ವಾರದಲ್ಲಿ ನಿರುದ್ಯೋಗಿಗಳಾಗಿರುವವರ ಸಂಖ್ಯೆಯನ್ನು ಆಧರಿಸಿ ನಿರುದ್ಯೋಗದ ಅಂದಾಜನ್ನು ಮಾಡಲಾಗುತ್ತದೆ. ಇದು ಕೂಡ ತೀವ್ರ ನಿರುದ್ಯೋಗ ಪ್ರಮಾಣವನ್ನು ತಿಳಿಸಿದರೂ ಒಂದು ವಾರಕ್ಕೆ ಮಾತ್ರ ಲೆಕ್ಕಾಚಾರ ಮಾಡಲಾಗುತ್ತದೆ.

**೩. ಪ್ರಸ್ತುತ ದೈನಂದಿನ ಸ್ಥಿತಿಯ ನಿರುದ್ಯೋಗ**

ಈ ವಿಧಾನದಲ್ಲಿ ಒಬ್ಬ ವ್ಯಕ್ತಿಯ ಒಂದು ವಾರದ ಪ್ರತಿಯೊಂದು ದಿನದ ಉದ್ಯೋಗ ಚಟುವಟಿಕೆಯನ್ನು ಲೆಕ್ಕ ಹಾಕಲಾಗುತ್ತದೆ. ಒಬ್ಬ ವ್ಯಕ್ತಿ ಒಂದು ದಿನದಲ್ಲಿ ಒಂದು ಗಂಟೆ ಅಥವಾ ಅದಕ್ಕೂ ಹೆಚ್ಚು ೪ ಗಂಟೆ ಕೆಲಸ ಮಾಡಿದ್ದರೆ ಆ ವ್ಯಕ್ತಿಯು ಅರ್ಧ ದಿನ ಕೆಲಸ ಮಾಡಿದ್ದಾನೆ ಎಂದರ್ಥ. ದಿನದಲ್ಲಿ ನಾಲ್ಕು ಗಂಟೆ ಅಥವಾ ಅದಕ್ಕೂ ಹೆಚ್ಚು ಕೆಲಸ ಮಾಡಿದ್ದರೆ ಇಡೀದಿನ ಕೆಲಸ ಮಾಡಿದ್ದಾನೆ ಎಂದರ್ಥ. ಹೀಗೆ ಒಟ್ಟು ನಿರುದ್ಯೋಗದ ದಿನಗಳನ್ನು ಲೆಕ್ಕ ಹಾಕಲಾಗುತ್ತದೆ.

ಭಾರತದಲ್ಲಿ ಈ ಮೂರು ದರ್ಜೆ ನಿರುದ್ಯೋಗದ ಪ್ರಮಾಣವನ್ನು ಕೆಳಕಂಡ ಪಟ್ಟಿಯಲ್ಲಿ ತೋರಿಸಲಾಗಿದೆ.

ಭಾರತದಲ್ಲಿ ನಿರುದ್ಯೋಗದ ಪ್ರಮಾಣ ೧೯೮೦ ರಲ್ಲಿ

| ನಿರುದ್ಯೋಗ | ದಶಲಕ್ಷಗಳಲ್ಲಿ | ಶೇಕಡ ಪ್ರಮಾಣ |
|---|---|---|
| ರೂಢಿಗತ | ೧೨.೦೨ | ೪.೪೮ |
| ವಾರದ ಸ್ಥಿತಿ | ೧೨.೧೮ | ೪.೫೪ |
| ದೈನಂದಿನ ಸ್ಥಿತಿ | ೨೦.೭೪ | ೭.೮೪ |
| ಒಟ್ಟು ಶ್ರಮ ಶಕ್ತಿ | ೨೬೮.೦೫ | |

ಇಲ್ಲಿ ನಿರುದ್ಯೋಗದ ಶೇಕಡವಾರು ಪ್ರಮಾಣವನ್ನು ಒಟ್ಟು ಶ್ರಮಶಕ್ತಿಯ ಅನುಪಾತ ಆಧರಿಸಿ ಲೆಕ್ಕಚಾರ ಮಾಡಲಾಗಿದೆ. ೧೯೭೭-೭೮ ರಲ್ಲಿ ರೂಢಿ ದರ್ಜೆ ನಿರುದ್ಯೋಗ ಶೇ ೪.೨೩ ಇದ್ದು, ೧೯೮೦ ರಲ್ಲಿ ಶೇ ೪.೪೮ ಕ್ಕೆ ಏರಿದೆ.

೧೯೯೯-೨೦೦೦ ರಲ್ಲಿ (ದೈನಂದಿನ ದರ್ಜೆ) ನಿರುದ್ಯೋಗ ರಾಜ್ಯಗಳಲ್ಲಿ ಕೇರಳ ಶೇ ೨೦.೯೭, ಪಶ್ಚಿಮ ಬಂಗಾಳ ಶೇ ೧೪.೯೯, ತಮಿಳುನಾಡು ಶೇ ೧೧.೭೮, ಮಹಾರಾಷ್ಟ್ರ ಶೇ ೭.೧೬, ಕರ್ನಾಟಕ ಶೇ ೪.೫೭, ಹಿಮಾಚಲ ಪ್ರದೇಶ ಶೇ ೨.೯೬. ಭಾರತದ ಸರಾಸರಿ ಶೇ ೭.೩೨.

ಭಾರತದಲ್ಲಿ ಅಂದಾಜು ಜನಸಂಖ್ಯೆ, ಶ್ರಮಶಕ್ತಿ ಮತ್ತು ಉದ್ಯೋಗವನ್ನು ಕೆಳಗಿನ ಪಟ್ಟಿಯಲ್ಲಿ ತೋರಿಸಲಾಗಿದೆ.

| (ದಶಲಕ್ಷಗಳಲ್ಲಿ) | ೯ ನೇ ಯೋಜನೆ<br>೧೯೯೭-೦೨ | ೧೦ ನೇ ಯೋಜನೆ<br>೧೯೯೨-೦೭ |
|---|---|---|
| ಜನಸಂಖ್ಯೆ | ೧೦೨೭.೦ | ೧೧೧೨.೯ |
| ಶ್ರಮಶಕ್ತಿ | ೪೨೩.೪ | ೪೮೭.೮ |
| ಉದ್ಯೋಗಾವಕಾಶ | ೪೧೬.೪ | ೪೭೪.೭ |
| ನಿರುದ್ಯೋಗ | ೭.೦ | ೪.೧ |

ಈ ಅಂದಾಜು ರೂಢಿದರ್ಜೆಯ ೨೦೦೧ ರ ಜನಗಣತಿ ಆಧರಿಸಿದೆ.

ಭಾರತದ ತಯಾರಿಕಾ ವಲಯದಲ್ಲಿ ಉದ್ಯೋಗ ಸ್ಥಿತಿಸ್ಥಾಪಕತ್ವದಲ್ಲಿ ೩ ಅವಧಿಗಳನ್ನು ಗುರುತಿಸಲಾಗಿದೆ. ಮೊದಲ ಅವಧಿಯಲ್ಲಿ (೧೯೭೪-೮೦) ಸ್ಥಿತಿಸ್ಥಾಪಕತ್ವ ಏಕಕ್ಕೆ (೧) ಸಮನಾಗಿದ್ದರೆ, ಎರಡನೇ ಅವಧಿಯಲ್ಲಿ (೧೯೮೦-೮೬) ಋಣಾತ್ಮಕ ಸ್ಥಿತಿಸ್ಥಾಪಕತ್ವವಿದ್ದು (ಉದ್ಯೋಗ ರಹಿತ ಅಭಿವೃದ್ಧಿ) ಮೂರನೇ ಅವಧಿಯು (೧೯೮೬- ೯೬) ಸುಧಾರಣೆಯ ಸಮಯವಾಗಿದ್ದು, ಉದ್ಯೋಗ ಸ್ಥಿತಿಸ್ಥಾಪಕತ್ವವು ಮೊದಲನೇ ಅವಧಿ ಮಟ್ಟಕ್ಕೆ ತಲುಪದಿದ್ದರೂ ಉದ್ಯೋಗಾವಕಾಶಗಳು ಉತ್ಪಾದನೆ ಮತ್ತು ಅಭಿವೃದ್ಧಿಯೊಂದಿಗೆ ಹೆಚ್ಚಾಗಿರುವುದು ಕಂಡು ಬರುತ್ತದೆ. (ದೀಪಕ್ ಮಜುಂದಾರ್ ಮತ್ತು ಸಂದೀಪ್ ಸರ್ಕಾರ್ ಅಧ್ಯಯನ ೨೦೦೪). ೧೦ ನೇ ಪಂಚವಾರ್ಷಿಕ ಯೋನೆಯಲ್ಲಿ ವಾರ್ಷಿಕ ಶೇ. ೮ ರಷ್ಟು ಅಭಿವೃದ್ಧಿ ದರದ ನಿರೀಕ್ಷೆಯಲ್ಲಿ ೧೦ ಲಕ್ಷ ಉದ್ಯೋಗಗಳನ್ನು ಸೃಷ್ಟಿಸುವ ಗುರಿ ಹೊಂದಲಾಗಿದೆ.

## ಬಡತನ ನಿರ್ಮೂಲನೆ ಮತ್ತು ಉದ್ಯೋಗ ಸೃಷ್ಟಿ ಕಾರ್ಯಕ್ರಮಗಳು

೧೯೭೩-೭೪ ರಲ್ಲಿ ಮತ್ತು ೨೦೦೧-೦೨ ರಲ್ಲಿ ಬಡತನದ ರೇಖೆ ಕೆಳಗಿರುವವರ ಸಂಖ್ಯೆ ದಶಲಕ್ಷಗಳಲ್ಲಿ ಕೆಳಕಂಡಂತಿದೆ.

| ಬಡವರ ಸಂಖ್ಯೆ | ೧೯೭೩-೭೪ | ೨೦೦೧-೦೨ |
|---|---|---|
| ಗ್ರಾಮೀಣ | ೨೬೧.೩ | ೧೩೭.೫ |
| ನಗರ | ೬೦.೦ | ೪೪.೫ |
| ಒಟ್ಟು | ೩೨೧.೦ | ೧೮೨.೦ |

ಬಡತನದ ಪ್ರಮಾಣ (ಶೇಕಡ)

| | | |
|---|---|---|
| ಗ್ರಾಮೀಣ | ೫೬.೪ | ೧೮.೬ |
| ನಗರ | ೪೯.೦ | ೧೬.೬ |
| ಒಟ್ಟು | ೫೪.೯ | ೧೮.೦ |

ಗ್ರಾಮೀಣ ಬಡತನದ ರಚನೆ ಬದಲಾಗಿದೆ. ೧೯೭೩-೭೪ ರಲ್ಲಿ ಶೇ ೫೫ ರಷ್ಟಿದ್ದ ಗ್ರಾಮೀಣ ಬಡತನ ೧೯೯೦-೨೦೦೦ ಇಳಿದಿದೆ. ಒಟ್ಟು ಬಡವರಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಇತರೇ ಹಿಂದುಳಿದ ಜನಾಂಗಗಳಲ್ಲಿ ಒಟ್ಟು ಶೇ ಲ೧ ರಷ್ಟು ಬಡವರು ಇದ್ದಾರೆ. ಈ ಬಡತನ ನಿವಾರಣೆ ಮಾಡಲು ಎರಡು ರೀತಿಯ ಸಾಂಸ್ಥಿಕ ಸುಧಾರಣೆಗಳು ಬೇಕಾಗಿವೆ. ೧. ಕೃಷಿ ಸುಧಾರಣೆ ೨. ಬಡವರಿಗೆ ಆಹಾರ, ಉದ್ಯೋಗ ಮತ್ತು ಸೌಲಭ್ಯಗಳನ್ನು ತಲುಪಿಸುವ ವ್ಯವಸ್ಥೆ. ಹೀಗೆ ಮೊದಲ ಹಂತದ ಕಾರ್ಯಕ್ರಮಗಳಿದ್ದರೆ, ಎರಡನೇ ಹಂತದಲ್ಲಿ ಮಾನವ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಬೇಕು. ಜೊತೆಗೆ ಬಡವರಿಗೆ ಸಬಲೀಕರಣಗೊಳ್ಳುವ ಶಕ್ತಿ ನೀಡಬೇಕು. ಪಂಚಾಯತ್‌ರಾಜ್ ವ್ಯವಸ್ಥೆಯ ಮೂಲಕ ಗ್ರಾಮಗಳಿಗೆ ಸಾಕಷ್ಟು ಬಲವನ್ನು ನೀಡಲಾಗಿದೆ. ಸರ್ಕಾರೇತರ ಸಂಸ್ಥೆಗಳಾದ ಮೈರಾಡ, ರೆಡ್ಸ್ ಮುಂತಾದವು ಗ್ರಾಮೀಣ ಅಭಿವೃದ್ಧಿ ಕಾರ್ಯ ಕೈಗೊಂಡಿವೆ. ಸ್ತ್ರೀಶಕ್ತಿ ಕಾರ್ಯಕ್ರಮ ಯಶಸ್ವಿಯಾಗಿದೆ. ಸಮಾಜದ ಅಸಂಘಟಿತ ವಲಯದ ಬಡವರಿಗೆ, ದುರ್ಬಲ ವರ್ಗದವರಿಗೆ ವಿಶೇಷ ಕಾರ್ಯಕ್ರಮಗಳು ಬೇಕಾಗಿವೆ. ಸಾಮೂಹಿಕ ಚಟುವಟಿಕೆಗಾಗಿ ಬಡವರನ್ನು ಒಂದುಗೂಡಿಸಬೇಕಾಗಿದೆ. ಬಡವರು ಅಭಿವೃದ್ಧಿ ಕಾರ್ಯದಲ್ಲಿ ಒಳಗೊಳ್ಳುವಂತೆ ಪರಿಸರ ಸೃಷ್ಟಿಸಬೇಕಾಗಿದೆ. ಅಭಿವೃದ್ಧಿ ಯೋಜನೆಗಳು ಬಡತನ ನಿರ್ಮೂಲನೆ ಯೋಜನೆಗೆ ಪೂರಕವಾಗಿರಬೇಕು. ಹಾಗೂ ಬೆಂಬಲಿತವಾಗಿರಬೇಕು. ಭೂ ಸುಧಾರಣೆ, ನೀರಾವರಿ ಅಭಿವೃದ್ಧಿ, ಮೂಲ ಸೌಕರ್ಯ ವಿಸ್ತರಣೆ, ಕೃಷಿ ಅಭಿವೃದ್ಧಿ, ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ಹಾಗೂ ಗ್ರಾಮೀಣ ಅಭಿವೃದ್ಧಿ ಕಾರ್ಯಕ್ರಮಗಳೊಂದಿಗೆ ಜನಸಂಖ್ಯಾ ಹತೋಟಿ ಮೂಲಕ ಬಡತನವನ್ನು ಕಡಿಮೆ ಮಾಡಬೇಕಾಗಿದೆ.

ಭಾರತದಲ್ಲಿ ದುಡಿಮೆಗೆ ಅರ್ಹ ಜನಸಂಖ್ಯೆ ೨೦೦೨ ರಲ್ಲಿ ೩೭.೫ ಕೋಟಿ ಇದ್ದು ಬರುವ ಎರಡು ದಶಕಗಳಲ್ಲಿ ಇನ್ನೂ ಹೆಚ್ಚಾಗುತ್ತದೆ. ೨೦೨೦ ನೇ ಇಸವಿಯಲ್ಲಿ ೧೬ ರಿಂದ ೧೭ ಕೋಟಿಯಷ್ಟು ಹೆಚ್ಚಾಗುವ ನಿರೀಕ್ಷೆಯಿದೆ, ಎಂದು ಅಂದಾಜು ಮಾಡಲಾಗಿದೆ.

೧೯೭೩ ರ ನಂತರ ಭಾರತದಲ್ಲಿ ಜಗದೀಶ್ ಭಗವತಿ ಸಮಿತಿ ವರದಿ ಆಧಾರದ ಮೇಲೆ ಹಲವಾರು ನಿರುದ್ಯೋಗ ನಿರ್ಮೂಲನೆ ಕಾರ್ಯಕ್ರಮಗಳನ್ನು ಕೈಗೊಂಡರೂ ನಿರುದ್ಯೋಗವನ್ನು ಹೋಗಲಾಡಿಸಲು ಸಾಧ್ಯವಾಗಿಲ್ಲ. (ಭೋಲೆ ಅಧ್ಯಯನ ೧೯೯೪). ಉದ್ಯೋಗ ಸೃಷ್ಟಿ ಮತ್ತು ನಿರುದ್ಯೋಗ ನಿರ್ಮೂಲನೆಗೆ ಬೇಕಾಗಿರುವ ಅಧಿಕೃತ ಅಂಕಿ ಅಂಶಗಳನ್ನು ಕೇಂದ್ರೀಯ ಸಂಖ್ಯಾಶಾಸ್ತ್ರ ಸಂಘಟನೆ ಮತ್ತು ಆರ್‌ಬಿಐ ಪ್ರಕಟಿಸುವ

ಕೈಪಿಡಿ ಮಾಹಿತಿ ಮಿತಿಯಾಗಿದ್ದು ಪ್ರಕಟಣೆ ವಿಳಂಬವಾಗುವುದರಿಂದ ಇತ್ತೀಚಿನ ಮಾಹಿತಿ ಸಿಗುವುದಿಲ್ಲ. ಉದ್ಯೋಗ ಸೃಷ್ಟಿ ಮತ್ತು ನಿರುದ್ಯೋಗ ನಿರ್ಮೂಲನೆಗೆ ಬೇಕಾಗಿರುವ ಅಂಕಿಅಂಶಗಳು ಪರಿಪೂರ್ಣವಾಗಿ ಅಲಭ್ಯ. ಜನಗಣತಿ ವರದಿಯು ನಿರುದ್ಯೋಗದ ಬಗ್ಗೆ ಹೆಚ್ಚಿನ ಮಾಹಿತಿ ನೀಡುವುದಿಲ್ಲ. ಕೇಂದ್ರ ಹಣಕಾಸಿನ ಇಲಾಖೆಯ ಆರ್ಥಿಕ ಸಮೀಕ್ಷೆ ಅಂದಾಜು ಮಾತ್ರ ನೀಡುತ್ತದೆ. ಪಂಚವಾರ್ಷಿಕ ಯೋಜನೆಯ ದಾಖಲೆಗಳು ಭಾಗಶಃ ಚಿತ್ರಣ ನೀಡುತ್ತವೆ. ILO ಮಾಹಿತಿ ಅಷ್ಟೇನೂ ಪ್ರಯೋಜನಕಾರಿಯಾಗಿಲ್ಲ. ಆದರೆ NSSO ಮಾಹಿತಿ ಸ್ವಲ್ಪ ಮಟ್ಟಿಗೆ ಸಹಕಾರಿಯಾಗಿದೆ. ಆದರೆ ಈ ಸಂಸ್ಥೆ ನೀಡುವ ನಿರುದ್ಯೋಗ ಮತ್ತು ಬಡತನದ ಅಂದಾಜು, ಕೆಳ ಅಂದಾಜನ್ನು ಹೊಂದಿದೆ.

RBI ಮಾಹಿತಿ ಪ್ರಕಾರ ಸಂಘಟಿತ ವಲಯದಲ್ಲಿ ೧೯೯೧ ರವರೆಗೆ ಶೇ ೯೦-೯೩ ರಷ್ಟು ಉದ್ಯೋಗಗಳು ಸಾರ್ವಜನಿಕ ರಂಗದಲ್ಲಿ ಸೃಷ್ಟಿಯಾಗಿವೆ. ೧೯೯೦ ರ ದಶಕದಲ್ಲಿ ಖಾಸಗಿ ವಲಯದಲ್ಲಿ ಶೇ ೬೨ ರಷ್ಟು ಉದ್ಯೋಗಗಳು ಸೃಷ್ಟಿಯಾಗಿವೆ.

೧೯೯೦ ರ ದಶಕದಲ್ಲಿ ಸಾರ್ವಜನಿಕ ಮತ್ತು ಖಾಸಗಿ ವಲಯಗಳಲ್ಲಿ ತಯಾರಿಕಾ ವಲಯ, ಸಮೂಹ ಸೇವೆಗಳು, ಸಾಮಾಜಿಕ, ವೈಯುಕ್ತಿಕ ಸೇವೆಗಳು ಸಾಗಾಣಿಕೆ ಮತ್ತು ಸಂಪರ್ಕ, ಪ್ಲಾಂಟೇಷನ್ ಮತ್ತು ಅರಣ್ಯ ಕ್ಷೇತ್ರಗಳಲ್ಲಿ ಸಾಕಷ್ಟು ಸೃಷ್ಟಿಯಾಯಿತು.

NSSO ಪ್ರಕಾರ ಪ್ರತಿ ಸಾವಿರ ಜನರಿಗೆ ೧೯೭೨-೭೩ ಮತ್ತು ೧೯೯೯-೨೦೦೦ ರವರೆಗೆ ದೊರೆತ ಉದ್ಯೋಗ ಅವಕಾಶಗಳನ್ನು ಕೆಳಕಂಡ ಪಟ್ಟಿಯಲ್ಲಿ ತೋರಿಸಲಾಗಿದೆ.

| ದರ್ಜೆ | ೧೯೭೨-೭೩ | ೧೯೯೯-೨೦೦೦ |
|---|---|---|
| ೧. ರೂಢಿಗತ | | |
| (ಸಾರ್ವಜನಿಕ ಹಾಗೂ ಖಾಸಗಿ ವಲಯ) | | |
| ಗ್ರಾಮೀಣ ಪ್ರದೇಶ | ಲಭ್ಯವಿಲ್ಲ | ೪೧೭ |
| ನಗರ ಪ್ರದೇಶ | ಲಭ್ಯವಿಲ್ಲ | ೩೩೭ |
| ಭಾರತದಲ್ಲಿ ಒಟ್ಟು | ಲಭ್ಯವಿಲ್ಲ | ೩೭೭ |
| ೨. ವಾರದ ಸ್ಥಿತಿ | | |
| ಗ್ರಾಮೀಣ ಪ್ರದೇಶ | ೩೭೮ | ೩೮೧ |
| ನಗರ ಪ್ರದೇಶ | ೩೬೭ | ೩೪೧ |
| ಭಾರತದಲ್ಲಿ ಒಟ್ಟು | ೩೦೭ | ೩೮೧ |
| ೩, ದೈನಂದಿನ ಸ್ಥಿತಿ | | |
| ಗ್ರಾಮೀಣ ಪ್ರದೇಶ | ೩೪೨ | ೩೪೯ |
| ನಗರ ಪ್ರದೇಶ | ೨೯೨ | ೩೦೦ |
| ಭಾರತದಲ್ಲಿ ಒಟ್ಟು | ೩೨೯ | ೩೦೦ |

NSSO: ಪುಟ ೧೩-೧೫, ಅಂಕಗಣಿತದ ಸರಾಸರಿ

ಹೀಗೆ ಉದ್ಯೋಗವಕಾಶಗಳ ಮಾಹಿತಿ NSSO ನೀಡಿದೆ. ಅದೇ ರೀತಿ ಪ್ರತಿ ಸಾವಿರ ಜನರಿಗೆ ರೂಢಿಗತ ಪ್ರಕಾರ ಉದ್ಯೋಗ ಹೊಂದಿದ ಜನರ ಸಂಖ್ಯೆ ೧೯೮೩ ಮತ್ತು ೧೯೯೯-೨೦೦೦ರಲ್ಲಿ ಕೆಳಕಂಡಂತಿದೆ.

| ವಿಧಗಳು | ೧೯೮೩ | ೧೯೯೯-೨೦೦೦ |
|---|---|---|
| ೧. ಸ್ವಯಂ ಉದ್ಯೋಗ | | |
| ಗ್ರಾಮೀಣ ಪ್ರದೇಶ | ೬೧೨ | ೫೬೧ |
| ನಗರ ಪ್ರದೇಶ | ೪೩೩ | ೪೩೪ |
| ಭಾರತದಲ್ಲಿ ಒಟ್ಟು | ೫೨೨ | ೪೯೭ |
| ೨. ವ್ಯವಸ್ಥಿತ ಉದ್ಯೋಗ | | |
| ಗ್ರಾಮೀಣ ಪ್ರದೇಶ | ೬೫ | ೫೯ |
| ನಗರ ಪ್ರದೇಶ | ೩೪೭ | ೩೭೫ |
| ಭಾರತದಲ್ಲಿ ಒಟ್ಟು | ೨೦೬ | ೨೧೭ |
| ೩. ಅನಿಶ್ಚಿತ ಶ್ರಮಿಕರು | | |
| ಗ್ರಾಮೀಣ ಪ್ರದೇಶ | ೩೨೨ | ೩೭೯ |
| ನಗರ ಪ್ರದೇಶ | ೨೧೯ | ೧೯೧ |
| ಭಾರತದಲ್ಲಿ ಒಟ್ಟು | ೨೭೦ | ೨೮೫ |

## ಬಡತನ ಮತ್ತು ನಿರುದ್ಯೋಗಗಳ ಸಂಬಂಧ

ನಿರಂತರ ಉದ್ಯೋಗ ನೀಡದೆ ಬಡತನವನ್ನು ನಿರ್ಮೂಲನೆ ಮಾಡಲು ಸಾಧ್ಯವಿಲ್ಲ. ಆದರೆ ಉದ್ಯೋಗ ಬೆಳವಣಿಗೆ ತುಂಬಾ ಕಡಿಮೆ ಇದ್ದು, ಜನಸಂಖ್ಯೆ ಏರಿಕೆ ದರ ತುಂಬಾ ಹೆಚ್ಚಿದೆ. ಬಡತನ ನಿರ್ಮೂಲನೆ ಮತ್ತು ಉದ್ಯೋಗ ಸೃಷ್ಟಿಯನ್ನು ಉದ್ಯೋಗ ಸೃಷ್ಟಿ ಮತ್ತು ಬಡತನ ನಿರ್ಮೂಲನೆ ಎಂದು ಹೇಳುವುದು ಸಮಂಜಸ. ಅಭಿವೃದ್ಧಿಯದರವನ್ನು ಹೆಚ್ಚಿಸಿದಾಗ ಉದ್ಯೋಗ ಆಧಾರಿತ ಕಾರ್ಯಕ್ರಮ ರೂಪುಗೊಂಡು ದೀರ್ಘಾವಧಿಯಲ್ಲಿ ಬಡತನ ಕಡಿಮೆಯಾಗುತ್ತದೆ. ಬಡತನ ಹೋಗಲಾಡಿಸುವ ಸರ್ಕಾರದ ಕಾರ್ಯಕ್ರಮಗಳು ಉದ್ಯೋಗ ಸೃಷ್ಟಿಯನ್ನು ಮಾಡುತ್ತವೆ. ೨೦೦೦-೦೧ ರಲ್ಲಿ ಈ ಕಾರ್ಯಕ್ರಮಗಳಿಗಾಗಿ ರೂ ೯೭೬೦ ಕೋಟಿಗಳನ್ನು ವೆಚ್ಚ ಮಾಡಲಾಯಿತು.

ಸರ್ಕಾರದ ಬಡತನ ನಿರ್ಮೂಲನೆ ಮತ್ತು ಉದ್ಯೋಗ ಸೃಷ್ಟಿ ಕಾರ್ಯಕ್ರಮಗಳು ಹೀಗಿವೆ.

೧. ಗರೀಬಿ ಹಟಾವೋ ಕಾರ್ಯಕ್ರಮ

೨. ಸಣ್ಣ ರೈತರ ಅಭಿವೃದ್ಧಿ ಸಂಸ್ಥೆ (SFDA) - ಸಣ್ಣ ರೈತರಿಗೆ ಸಾಲ ನೀಡಲು ಉತ್ಪಾದಕತೆ ಹೆಚ್ಚಿಸಲು ಈ ಕಾರ್ಯಕ್ರಮ ಆರಂಭಿಸಲಾಯಿತು.

೩. ಅತಿ ಸಣ್ಣ ರೈತರ ಮತ್ತು ಕೃಷಿ ಕಾರ್ಮಿಕರ ಅಭಿವೃದ್ಧಿ ಸಂಸ್ಥೆ (MFAL) ಅತಿ ಸಣ್ಣ ರೈತರಿಗೆ ಹಾಗೂ ಕೃಷಿ ಕಾರ್ಮಿಕರಿಗೆ ಉತ್ಪಾದಕತೆ ಹೆಚ್ಚಿಸಲು ಸಹಾಯ ಮಾಡಲು ೧೯೭೧ ರಲ್ಲಿ ಆರಂಭಿಸಲಾಯಿತು.

೪. ಸಮಗ್ರ ಗ್ರಾಮೀಣ ಅಬಿವೃದ್ಧಿ ಕಾರ್ಯಕ್ರಮ (IRDP) - ೧೯೭೬-೭೭ ರಲ್ಲಿ ಆಯ್ದ ೨೦ ಜಿಲ್ಲೆಗಳಲ್ಲಿ ಆರಂಭ, ಇದರ ಉದ್ದೇಶ ಕೃಷಿಯಲ್ಲಿ ಉತ್ಪಾದನೆ ಮತ್ತು ಉತ್ಪಾದಕತೆ ಹೆಚ್ಚಿಸುವುದು ಹಾಗೂ ಕೃಷಿ ಆಧಾರಿತ ಕೈಗಾರಿಕಾ ಕಾಂಪ್ಲೆಕ್ಸ್‌ಗಳಲ್ಲಿ ಉದ್ಯೋಗ ಹೆಚ್ಚಿಸುವುದು.

೫. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಕಾರ್ಯಕ್ರಮ (NREP) - ೧೯೮೧ ರಲ್ಲಿ ಆರಂಭವಾಯಿತು. ನಂತರ ಇತರೇ ಉದ್ಯೋಗ ಕಾರ್ಯಕ್ರಮಗಳಲ್ಲಿ ವಿಲೀನ ಗೊಳಿಸಲಾಯಿತು.

೬. ಕನಿಷ್ಟ ಅವಶ್ಯಕತೆ ಕಾರ್ಯಕ್ರಮ (MNP) - ಗರೀಬಿ ಹಟಾವೋ ಕಾರ್ಯಕ್ರಮ ಆಧರಿಸಿ ಸಾಮಾಜಿಕ ನ್ಯಾಯದೊಂದಿಗೆ ಅಭಿವೃದ್ಧಿ ಉದ್ದೇಶದಿಂದ ಬಡತನದ ರೇಖೆ ಕೆಳಗೆ ವಾಸಿಸುವವರಿಗಾಗಿ ಆರೋಗ್ಯ, ನೀರು ಪೂರೈಕೆ, ರಸ್ತೆ, ವಿದ್ಯುತ್, ಪೌಷ್ಟಿಕತೆ ಹೆಚ್ಚಿಸಲು ಆರಂಭಿಸಿದ ಕಾರ್ಯಕ್ರಮ.

೭. ಗ್ರಾಮೀಣ ಯುವಕರಿಗೆ ಸ್ವ ಉದ್ಯೋಗ ತರಭೇತಿ ಯೋಜನೆ (TRYSEM) - ೧೯೭೯ ಆಗಸ್ಟ್ ೧೫ ರಂದು ಕೇಂದ್ರ ಆಧಾರಿತ ಕಾರ್ಯಕ್ರಮವಾಗಿ ಸ್ಥಾಪನೆ. ಗ್ರಾಮೀಣ ಪ್ರದೇಶದ ನಿರುದ್ಯೋಗಿ ಯುವಕರಿಗೆ ಅಗತ್ಯವಾದ ತಂತ್ರಜ್ಞಾನ ಕೌಶಲ್ಯ ಒದಗಿಸಿ ಸ್ವಯಂ ಉದ್ಯೋಗಕ್ಕೆ ತರಭೇತಿಗೊಳಿಸುವುದು.

೮. ಗ್ರಾಮೀಣ ಭೂ ರಹಿತಿರ ಉದ್ಯೋಗ ಭರವಸೆ ಯೋಜನೆ (RLEGO) - ೧೯೮೩ ಆಗಸ್ಟ್ ೧೫ ರಂದು ಗ್ರಾಮೀಣ ಪ್ರದೇಶಗಳಲ್ಲಿ ಭೂ ರಹಿತರಿಗೆ ಹೆಚ್ಚುವರಿ ಉದ್ಯೋಗ ದೊರಕಿಸಲು ಆರಂಭಿಸಿದ ಕಾರ್ಯಕ್ರಮ.

೯. ಗ್ರಾಮೀಣ ಅಭಿವೃದ್ದಿಗೆ ಚುರುಕು ಕಾರ್ಯಕ್ರಮ - ೧೯೭೧ ರಲ್ಲಿ ಆರಂಭವಾಯಿತು. ಗ್ರಾಮೀಣ ಪ್ರದೇಶದಲ್ಲಿ ನೇರ ಉದ್ಯೋಗ ಸೃಷ್ಟಿಗೆ ಇದನ್ನು ಸ್ಥಾಪಿಸಲಾಯಿತು.

೧೦. ಗುಡ್ಡಗಾಡು ಪ್ರದೇಶ ಅಭಿವೃದ್ಧಿ ಯೋಜನೆ (HADP) - ಗುಡ್ಡಗಾಡಿನಲ್ಲಿ ಉದ್ಯೋಗ ಹೆಚ್ಚಿಸಲು ೧೯೭೨ ರಲ್ಲಿ ಆರಂಭಿಸಲಾಯಿತು.

೧೧. ಜವಾಹರ್ ರೋಜ್‌ಗಾರ್ ಯೋಜನೆ (JRY) - NREP ಮತ್ತು RLEGP ಸೇರಿಸಿ ೧೯೮೯ ರಲ್ಲಿ JRY ಜಾರಿಗೆ ಬಂದಿತು. ಗ್ರಾಮೀಣ ಪ್ರದೇಶಗಳಲ್ಲಿ ಉದ್ಯೋಗ ಹೆಚ್ಚಿಸಲು ಇದನ್ನು ಆರಂಭಿಸಲಾಯಿತು.

೧೨. ನೆಹರು ರೋಜಗಾರ್ ಯೋಜನೆ (NRY) - ೧೯೮೯ ರಲ್ಲಿ ಆರಂಭಿಸಲಾಯಿತು. ನಗರ ಪ್ರದೇಶಗಳಲ್ಲಿ ಉದ್ಯೋಗ ಒದಗಿಸಲು ಇದನ್ನು ಆರಂಬಿಸಲಾಯಿತು.

೧೩. ಪ್ರಧಾನ ಮಂತ್ರಿಗಳ ರೋಜಗಾರ್ ಯೋಜನೆ (PMRY) - ಹಿಂದಿನ ಉದ್ಯೋಗ ಯೋಜನೆಗಳನ್ನು ಸೇರಿಸಿ ಆರಂಭಿಸಿದ ಯೋಜನೆ.

೧೪. ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (SGSY) - ೧೯೯೯ ರ ಏಪ್ರಿಲ್‌ನಲ್ಲಿ IRDP ಜೊತೆಗೆ ದಶಲಕ್ಷ ಬಾವಿ ಯೋಜನೆ (MES) ಸೇರಿಸಿ ಸ್ವಯಂ ಉದ್ಯೋಗಕ್ಕಾಗಿ ಆರಂಭಿಸಲಾಯಿತು.

೧೫. ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ (SGRY) - ೨೦೦೨ ರಲ್ಲಿ ಸ್ಥಾಪನೆ. ಸೆಪ್ಟೆಂಬರ್ ೨೦೦೧ ರಲ್ಲಿ ಆರಂಭವಾಯಿತು. ಹೆಚ್ಚುವರಿ ಕೂಲಿ ಉದ್ಯೋಗ ಹೆಚ್ಚಿಸಲು, ಆಹಾರ ಸುರಕ್ಷತೆಗೆ ಆರಂಭಿಸಲಾಯಿತು.

೧೬. ಅಂತ್ಯೋದಯ ಅನ್ನ ಯೋಜನೆ (AAY) - ಬಡವರಲ್ಲಿ ಬಡವರನ್ನು ಮೇಲೆತ್ತುವುದಕ್ಕಾಗಿ ಡಿಸೆಂಬರ್ ೨೦೦೧ ರಲ್ಲಿ ಆರಂಭಿಸಲಾಯಿತು. ಸಮಾಜದ ಕಟ್ಟಕಡೆಯ ವ್ಯಕ್ತಿಯ ಉದಯಕ್ಕಾಗಿ ಈ ಕಾರ್ಯಕ್ರಮ. ಸಾರ್ವಜನಿಕ ವಿತರಣೆ ವ್ಯವಸ್ಥೆ ಮೂಲಕ ಬಡವರಿಗೆ ಸಹಾಯಧನ ಮೂಲಕ ಅಕ್ಕಿ ಒದಗಿಸುವುದು ಈ ಕಾರ್ಯಕ್ರಮದ ಉದ್ದೇಶ.

೧೭. ಸ್ವರ್ಣ ಜಯಂತಿ ಷಹರಿ ರೋಜ್‌ಗಾರ್ ಯೋಜನೆ (SJSRY) - ನಗರ ಪ್ರದೇಶದಲ್ಲಿ ಉದ್ಯೋಗ ಒದಗಿಸಲು ಹಿಂದಿನ ಹಲವಾರು ಯೋಜನೆಗಳನ್ನು ಸೇರಿಸಿ ೧೯೯೯ ಏಪ್ರಿಲ್‌ನಲ್ಲಿ ಆರಂಭಿಸಿದ ಕಾರ್ಯಕ್ರಮ.

೧೮. ಜಯಪ್ರಕಾಶ್ ರೋಜ್‌ಗಾರ್ ಖಾತ್ರಿ ಯೋಜನೆ (JPRJY) - ತುಂಬಾ ಹಿಂದುಳಿದ ಜಿಲ್ಲೆಗಳಲ್ಲಿ ಉದ್ಯೋಗ ಒದಗಿಸಲು ಆರಂಭಿಸಿದ ಯೋಜನೆ.

೧೯. ರಾಷ್ಟ್ರೀಯ ಸಾಮಾಜಿಕ ಸಹಾಯ ಕಾರ್ಯಕ್ರಮ (NSAP) - ೧೯೯೫ ಆಗಸ್ಟ್ ೧೫ ರಿಂದ ಶೇ ೧೦೦ ರಷ್ಟು ಕೇಂದ್ರ ಸಹಾಯದಿಂದ ಬಡವರಿಗೆ ಸಾಮಾಜಿಕ ಸಹಾಯದ ಅನುಕೂಲ ನೀಡಲು, ಕುಟುಂಬದ ಯಜಮಾನ ತೀರಿಕೊಂಡಾಗ ಸಹಾಯ ಮಾಡಲು ಆರಂಭಿಸಲಾಯಿತು.

೨೦. ಉದ್ಯೋಗ ಖಾತ್ರಿ ಯೋಜನೆ (EAS) - ೧೯೯೩ ಅಕ್ಟೋಬರ್ ೨ ರಂದು ೧೭೭೨ ಬ್ಲಾಕ್‌ಗಳಲ್ಲಿ ಬರಗಾಲ ಪೀಡಿತ ಪ್ರದೇಶಗಳಲ್ಲಿ ಹೆಚ್ಚುವರಿ ಕೂಲಿ ಉದ್ಯೋಗ ಸೃಷ್ಟಿಸಲು ಸ್ಥಾಪಿಸಲಾಯಿತು.

೨೧. ಜವಹರ್ ಗ್ರಾಮ ಸಮೃದ್ಧಿ ಯೋಜನೆ (JGSY) - ೧೯೯೧ ಏಪ್ರಿಲ್‌ನಲ್ಲಿ JRYಗೆ ಬದಲಾಗಿ ಕೇಂದ್ರ ಸರಕಾರವು ೭೫:೨೫ ಕೇಂದ್ರ ರಾಜ್ಯವೆಚ್ಚ ಹಂಚಿಕೆ ಆಧಾರದಲ್ಲಿ ಆರಂಭಿಸಿತು. ಇದರ ಉದ್ದೇಶ ಬಡವರಲ್ಲಿ ಶಾಶ್ವತ ಆಸ್ತಿ ನಿರ್ಮಾಣಕ್ಕೆ ಸಹಾಯಕವಾಗುವ ಕಾರ್ಯಕ್ರಮಗಳನ್ನು ರೂಪಿಸುವುದು.

೨೨. ಪ್ರಧಾನ ಮಂತ್ರಿ ಗ್ರಾಮೋದಯ ಯೋಜನೆ (PMGY) - ಗ್ರಾಮಗಳಲ್ಲಿ ಜೀವನಮಟ್ಟ ಉತ್ತಮ ಪಡಿಸಲು ೨೦೦೧ ರಲ್ಲಿ ಆರಂಭಿಸಿದ ಯೋಜನೆ.

೨೩. ಪ್ರಧಾನ ಮಂತ್ರಿ ಗ್ರಾಮ ಸಡಕ್ ಯೋಜನೆ (PMGSY) - ಡಿಸೆಂಬರ್ ೨೦೦೦ ರಲ್ಲಿ ಸರ್ವರುತು ರಸ್ತೆ ನಿರ್ಮಾಣಕ್ಕೆ ಇದನ್ನು ಆರಂಭಿಸಲಾಯಿತು.

೨೪. ಇಂದಿರಾ ಆವಾಸ್ ಯೋಜನೆ (IAY) - ಬಡವರಿಗೆ ಪರಿಶಿಷ್ಟ ಜಾತಿ ಪರಿಸಿಷ್ಟ ಪಂಗಡ ವರ್ಗದವರಿಗೆ ಮನೆಗಳನ್ನು ನೀಡಲು ಆರಂಭಿಸಲಾಯಿತು.

೨೫. ವಾಲ್ಮೀಕಿ ಅಂಬೇಡ್ಕರ್ ಆವಾಸ್ ಯೋಜನೆ (VAMBAY) - ಡಿಸೆಂಬರ್ ೨೦೦೧ರಲ್ಲಿ ಆರಂಭಿಸಲಾಯಿತು. ನಗರ ಕೊಳಚೆ ಪ್ರದೇಶದ ಜನರಿಗೆ ಮನೆಗಳನ್ನು ಒದಗಿಸಲು ಈ ಕಾರ್ಯಕ್ರಮ ಆರಂಭಿಸಲಾಯಿತು.

ಈ ಕಾರ್ಯಕ್ರಮಗಳು ಬಡತನ ನಿರ್ಮೂಲನೆ ಮತ್ತು ಉದ್ಯೋಗ ಸೃಷ್ಟಿಗಾಗಿ ರೂಪಿಸಲ್ಪಟ್ಟಿವೆ. ಕೃಷಿಯಲ್ಲಿ ಹೆಚ್ಚಿನ ಹೀರಿಕೆ ಸಾಧ್ಯವಿಲ್ಲ. ಹೆಚ್ಚುವರಿ ಉದ್ಯೋಗ ಸೃಷ್ಟಿ ಅಸಂಘಟಿತ ವಲಯಗಳಲ್ಲಿ ನಡೆಯಬೇಕಿದೆ. ಭಾರತದಲ್ಲಿ ILO ತಿಳಿಸಿದಂತೆ ಸಭ್ಯ ಉದ್ಯೋಗ ಬೇಕಾಗಿದೆ. ಒಳ್ಳೆಯ ಉದ್ಯೋಗದಲ್ಲಿ ಸಾಮಾಜಿಕ ರಕ್ಷಣೆ ಕೂಡ ಇರಬೇಕು. (ಪಪೋಲ ಅಧ್ಯಯನ ೨೦೦೪) ಇತ್ತೀಚೆಗೆ ಸಂಘಟಿತ ವಲಯಗಳಲ್ಲಿ ಅನಿಶ್ಚಿತ ಮತ್ತು ಗುತ್ತಿಗೆ ಉದ್ಯೋಗಗಳು ಹೆಚ್ಚಾಗುತ್ತಿವೆ. ಶ್ರಮದ ಮಾರುಕಟ್ಟೆಯನ್ನು ಬಿಗಿಗೊಳಿಸುವುದರ ಜೊತೆಗೆ ೧೦ ನೇ ಯೋಜನೆಯಲ್ಲಿ ಶೇ ೮ ಪ್ರಗತಿ ದರವನ್ನು ಸಾಧಿಸುವುದಾದರೆ ಉದ್ಯೋಗ ವಾರ್ಷಿಕ ಶೇ.೨ ದರದಲ್ಲಿ ಹೆಚ್ಚುವುದನ್ನು ಆಶಿಸಬಹುದು. ಜಾಗತೀಕರಣ ದೊಂದಿಗೆ ಭಾರತವು ವೇಗದ ಉದ್ಯೋಗ ಸೃಷ್ಠಿಯನ್ನು ಮಾಡಿ ಹೆಚ್ಚಿನ ಮಟ್ಟದ ಅಭಿವೃದ್ಧಿ ದರವನ್ನು ಸಾಧಿಸಿದರೆ ಬಡತನ ನಿರ್ಮೂಲನೆ ಸಾಧ್ಯವಾಗುತ್ತದೆ. ಭಾರತದಲ್ಲಿ ಉದ್ಯೋಗ ಭರವಸೆ ಯೋಜನೆ ಬಗ್ಗೆ ಇತ್ತೀಚೆಗೆ ಒಂದು ಮಸೂದೆಯನ್ನು ಮಾಡಲಾಯಿತು. ಮಹಾರಾಷ್ಟ್ರ ರಾಜ್ಯವು ೩೦ ವರ್ಷಗಳಿಂದಲೂ ಈ ಉದ್ಯೋಗ ಭರವಸೆ ಯೋಜನೆ ಜಾರಿಗೆ ತಂದಿದೆ. ಹೊಸ ಉದ್ಯೋಗ ಭರವಸೆ ಮಸೂದೆಯೊಂದಿಗೆ ಕುಟುಂಬದ ಕನಿಷ್ಠ ಒಬ್ಬರಿಗೆ ವರ್ಷದಲ್ಲಿ ೧೦೦ ದಿನಗಳ ಕೆಲಸದ ಭರವಸೆ ಸಿಕ್ಕುತ್ತದೆ. ಉದ್ಯೋಗಕ್ಕೆ ಬೇಡಿಕೆ ಸಲ್ಲಿಸಿದ ೧೫ ದಿನಗೊಳೊಳಗೆ ಉದ್ಯೋಗ ಒದಗಿಸಲಾಗುವುದು. ಕೆಲಸದ ಸ್ಥಳ ವೃತ್ತಿಯು ವಾಸವಾಗಿರುವ ಸ್ಥಳದಿಂದ ೫ ಕಿ.ಮೀ. ಒಳಗಿರಬೇಕು ಮುಂತಾದ ಭರವಸೆ ಗಳನ್ನೊಳಗೊಂಡ ಉದ್ಯೋಗ ಕಾರ್ಯಕ್ರಮವು ಕಾನೂನಿನ ಭರವಸೆ ಹೊಂದಿದ್ದರೆ ಬಹಳಷ್ಟು ಸಮಸ್ಯೆಗಳು ದೂರವಾಗಿ ಕೆಲಸಗಾರರಿಗೆ ಸಾಮಾಜಿಕ ರಕ್ಷಣೆ ಸಿಗುತ್ತದೆ. ಇತ್ತೀಚೆಗೆ ಖಾಸಗಿ ಉದ್ಯಮಗಳಲ್ಲಿ ಉದ್ಯೋಗ ಮೀಸಲಾತಿಗಾಗಿ ಹೋರಾಟ ನಡೆಯುತ್ತಿವೆ. ಕೆಲವು ರಾಜ್ಯಗಳು ಖಾಸಗಿಯಲ್ಲಿ ಕೂಡ ಮೀಸಲಾತಿ ನೀಡಿವೆ. ರಾಷ್ಟ್ರೀಯ ಉದ್ಯೋಗ ಭರವಸೆ ಕಾರ್ಯಕ್ರಮವು ಕೇಂದ್ರದಿಂದ ಸಾಕಷ್ಟು ಹಣಕಾಸಿನ ಬೆಂಬಲ ಪಡೆದು ಪಂಚಾಯಿತಿರಾಜ್ ವಿಧಾನದ ಮೂಲಕ ಜಾರಿಗೆ ಬಂದರೆ ಉಳಿದ ಎಲ್ಲಾ ಕಾರ್ಯಕ್ರಮಗಳು ಬಡತನ ನಿರ್ಮೂಲನೆ ಮತ್ತು ಉದ್ಯೋಗ ಸೃಷ್ಟಿಗೆ ನೆರವಾಗುತ್ತವೆ.

## ೨.೩. ಆರೋಗ್ಯ ಮತ್ತು ಶಿಕ್ಷಣ

**ಸಾಮಾಜಿಕ ಮೂಲಭೂತ ಸೌಕರ್ಯವಾಗಿ ಆರೋಗ್ಯ ಮತ್ತು ಶಿಕ್ಷಣದ ಪ್ರಾಮುಖ್ಯತೆ:**

ನೋಬೆಲ್ ಪ್ರಶಸ್ತಿ ವಿಜೇತ ಅಮರ್ತ್ಯಸೇನ್ ಪ್ರಕಾರ ಭಾರತದಲ್ಲಿ ಅತಿದೊಡ್ಡ ಸಮಸ್ಯೆಗಳೆಂದರೆ ಜಗತ್ತಿನಲ್ಲಿ ಭಾರತದಲ್ಲಿ ಅತಿ ಹೆಚ್ಚಿನ ಮಕ್ಕಳ ಪೌಷ್ಟಿಕ ಆಹಾರದ ಕೊರತೆ, ರೋಗಗ್ರಸ್ಥ ಸಾರ್ವಜನಿಕ ಆರೋಗ್ಯ ಸೌಲಭ್ಯ ಪದ್ಧತಿ ಇದರ ಜೊತೆಗೆ ಶೋಷಣೆ ಮಾಡುತ್ತಿರುವ ಖಾಸಗಿ ಆರೋಗ್ಯ ವ್ಯವಸ್ಥೆ ಮತ್ತು ನಿರಂತರವಾಗಿ ಕೆಳಸ್ತರದಲ್ಲಿ ಉಳಿದಿರುವ ಶಾಲಾ ಪದ್ದತಿ, ಸಾರ್ವಜನಿಕ ಆರೋಗ್ಯ ಸೌಲಭ್ಯದ ಕೆಳದರ್ಜೆಯ ಮೇಲ್ವಿಚಾರಣೆ, ನಕಲಿ ವೈದ್ಯರು ಮತ್ತು ಸುಶಿಕ್ಷಿತ ವೈದ್ಯರುಗಳನ್ನು ಸರಿಯಾಗಿ ಪತ್ತೆ ಹಚ್ಚುವ ಪದ್ಧತಿ ಇಲ್ಲದಿರುವ ಪರಿಸ್ಥಿತಿಯನ್ನು ನಾವು ಗುರುತಿಸಬೇಕು. ಈ ಎಲ್ಲಾ ವಿಷಯಗಳನ್ನು ಒಟ್ಟಾಗಿ ಚಿಂತಿಸಬೇಕು ಹಾಗೂ ಇಡಿಯಾಗಿ ಅನುಷ್ಠಾನಗೊಳಿಸಬೇಕು. ಈ ಹಿನ್ನಲೆಯಲ್ಲಿ ಸಾರ್ವಜನಿಕ ರಂಗ ಮೂಲಭೂತ ಆರೋಗ್ಯ ಸವಲತ್ತನ್ನು ನೀಡಬೇಕು. ಮೂಲ ಔಷಧಗಳು, ಮೂಲ ತಪಾಸಣೆ, ರಕ್ತ ಮತ್ತು ಮೂತ್ರ ಪರೀಕ್ಷೆ, ಕ್ಷ-ಕಿರಣ ಮುಂತಾದ ಸಾಮಾನ್ಯ ಔಷಧೋಪಚಾರಗಳನ್ನು ದುಬಾರಿಯಾಗದ ರೀತಿಯಲ್ಲಿ ಒದಗಿಸಬೇಕು. ಖಾಯಿಲೆಗಳಿಗೆ ಉತ್ತಮವಾದ ಔಷಧೋಪಚಾರದ ಜೊತೆಗೆ ವೈದ್ಯರು ಕೂಡ ಉತ್ತಮ ಸೇವೆ ನೀಡಬೇಕು. (ಯೋಜನಾ ಏಪ್ರಿಲ್ ೨೦೦೫).

ಅಮರ್ತ್ಯಸೇನ್ ಪ್ರಕಟಸಿರುವ 'ಅರ್ಗುಮೆಂಟೆಟಿವ್ ಇಂಡಿಯನ್' ಪುಸ್ತಕದಲ್ಲಿ 'ಹಸಿದಿರುವಾಗ ಬುದ್ದಿವಂತಿಕೆ ಬೆಳೆಯಲು ಸಾಧ್ಯವಿಲ್ಲ' ಎಂದು ವಿವರಿಸಿದ್ದಾರೆ. ನಮ್ಮ ರಾಷ್ಟ್ರದಲ್ಲಿ ರಕ್ತಹೀನತೆ ಹೆಚ್ಚಾಗಿದೆ. ದೀರ್ಘಕಾಲದ ಪೌಷ್ಟೀಕ ಆಹಾರ ಕೊರತೆ ನಿವಾರಿಸುವ ಒಂದು ಮಾರ್ಗವೆಂದರೆ ಶಾಲೆಗಳಲ್ಲಿ ಬಿಸಿ ಊಟವನ್ನು ನೀಡುವುದು. ಇದರಿಂದ ಮಕ್ಕಳ ಹಾಜರಾತಿ ಹೆಚ್ಚುತ್ತದೆ. (ಪಶ್ಚಿಮ ಬಂಗಾಳದ ಅಧ್ಯಯನ) ಮತ್ತು ಉಪಾಧ್ಯಾಯರ ಮೇಲೆ ಜವಾಬ್ದಾರಿ ಹೆಚ್ಚುತ್ತದೆ. ಶಿಕ್ಷಣ ಆರೋಗ್ಯ ಮತ್ತು ಖಾಸಗಿಯಾಗಿ ಬಡಜನರ ವರಮಾನ ಹೆಚ್ಚಿಸುವ ವ್ಯವಸ್ಥಿತವಾಗಿ ಉದ್ಯೋಗ ನೀಡುವ ರೀತಿ ಇವೆಲ್ಲವೂ ಪರಸ್ಪರ ಸಂಬಂಧ ಹೊಂದಿವೆ ಎಂದು ಅಮರ್ತ್ಯಸೇನ್ ತಿಳಿಸುತ್ತಾರೆ. ಈ ಹಿನ್ನಲೆಯಲ್ಲಿ ಸಾಮಾಜಿಕ ಮೂಲಭೂತ ಸೌಕರ್ಯವಾಗಿ ಆರೋಗ್ಯ ಮತ್ತು ಶಿಕ್ಷಣದ ಪ್ರಾಮುಖ್ಯತೆಯನ್ನು ನಾವು ಗಮನಿಸಬೇಕಾಗಿದೆ.

ಕರ್ನಾಟಕದ ೨೦೦೫-೦೬ ಮುಂಗಡ ಪತ್ರದಲ್ಲಿ ಆರೋಗ್ಯ ಕ್ಷೇತ್ರದಲ್ಲಿ ವ್ಯಾಪಕವಾದ ಯೋಜನೆ ರೂಪಿಸಲಾಗಿದೆ. ಪ್ರತಿ ಜಿಲ್ಲೆಗೂ ಟೆಲಿಮೆಡಿಸಿನ್ ಮತ್ತು ಸಿಟಿ ಸ್ಕ್ಯಾನ್ ಉಪಕರಣಗಳನ್ನು ಒದಗಿಸುತ್ತಿರುವುದು ಶ್ಲಾಘನೀಯ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಸೇರಿದ ೨.೫ ಲಕ್ಷ ಕುಟುಂಬಗಳಿಗೆ ಕೇಂದ್ರ ಸರಕಾರದ ಸಾರ್ವತ್ರಿಕ ವಿಮಾ ಯೋಜನೆಯ ನೆರವನ್ನು ಕಲ್ಪಿಸುವ ಉದ್ದೇಶವನ್ನು ಹೊಂದಲಾಗಿದೆ. (ಡಾ. ಸಿ.ಕೆ. ರೇಣುಕಾರ್ಯ, ಯೋಜನಾ ಏಪ್ರಿಲ್ ೨೦೦೫)

### ಶಿಕ್ಷಣ ಮತ್ತು ಆರೋಗ್ಯ ಸ್ಥಿತಿಯ ಸೂಚಿಗಳು

ಶಿಕ್ಷಣ ಮತ್ತು ಬಡತನಕ್ಕೆ ನಿಕಟವಾದ ಸಂಬಂಧವಿದೆ. ೧೯೮೧-೨೦೦೨ ಅವಧಿಯಲ್ಲಿ ರಾಜ್ಯಗಳ ತಲಾ ವೆಚ್ಚ ಸೂಚಿ ಪ್ರಕಾರ ಉತ್ತರ ಪ್ರದೇಶದಲ್ಲಿ ೧೯೮೧-೮೬ ರಲ್ಲಿ ಸೂಚಿಯು ಒಂದಕ್ಕೆ ಸಮನಾಗಿದ್ದರೆ, ೨೦೦೨ ರಲ್ಲಿ ಸೂಚಿಯು ಕಡಿಮೆಯಾಗಿ ೦.೮೯೯ ರಷ್ಟಿತ್ತು. ನಾಗಾಲ್ಯಾಂಡ್ ಶಿಕ್ಷಣ ವೆಚ್ಚ ಸೂಚಿ ೧೯೮೧-೮೮ ರಲ್ಲಿ ಶೂನ್ಯವಾಗಿದ್ದು, ೨೦೦೨ ರಲ್ಲಿ ೦.೧೪೨೪ ನಷ್ಟಿತ್ತು. ಭಾರತದಲ್ಲಿ ಸರಾಸರಿ ಶಾಲಾ ಶಿಕ್ಷಣ ವೆಚ್ಚ ಸೂಚಿ ೧೯೮೧ ರಲ್ಲಿ ೦.೭೩೬೧ ನಿಂದ ೨೦೦೨ ರಲ್ಲಿ ೦.೫೩೬೩ ಗೆ ಇಳಿಯಿತು. ಹೀಗೆ ೧೯೯೧ ಉದಾರೀಕರಣದಿಂದ ಶಿಕ್ಷಣದಲ್ಲಿ ರಚನಾತ್ಮಕ ಬದಲಾವಣೆಗಳಾಗಿವೆ. ಶಿಕ್ಷಣದ ವೆಚ್ಚ ಹೆಚ್ಚಿಸಿದರೆ ಬಡತನ ಕಡಿಮೆ ಮಾಡಬಹುದು. ಬಡತನ ಕಡಿಮೆಯಾದರೆ ಆರೋಗ್ಯ, ಪೌಷ್ಟಿಕತೆ ಹೆಚ್ಚುತ್ತದೆ.

ಶಿಕ್ಷಣ ಮತ್ತು ಬಡತನಕ್ಕೆ ನಿಕಟ ಸಂಬಂಧವಿರುವಂತೆ, ಆರೋಗ್ಯಕ್ಕೂ ಮತ್ತು ಬಡತನಕ್ಕೂ ಸಹ ನಿಕಟ ಸಂಬಂಧವಿದೆ. ರಾಜ್ಯಗಳು ಆರೋಗ್ಯ ಮತ್ತು ಸಾರ್ವಜನಿಕ ಆರೋಗ್ಯಕ್ಕಾಗಿ ಮಾಡಿದ ವೆಚ್ಚವನ್ನು ಆರೋಗ್ಯ ಹೂಡಿಕೆ ಸೂಚಿ ಆಧಾರದಲ್ಲಿ ಬಡತನ ಲೆಕ್ಕಾಚಾರ ಮಾಡಲಾಗುತ್ತದೆ. ಈ ಆಧಾರದಲ್ಲಿ ಬಿಹಾರದ ಆರೋಗ್ಯ ಸೂಚಿ ಒಂದು. ನಾಗಾಲ್ಯಾಂಡ್‌ಗೆ ೧೯೮೧-೨೦೦೨ ರಲ್ಲಿ ಶೂನ್ಯ ಸೂಚಿ ಎಂದರೆ ಆರೋಗ್ಯ ಹೂಡಿಕೆಯಲ್ಲಿ ಹೆಚ್ಚುವಂಚಿತ ರಾಜ್ಯ ಬಿಹಾರ. ಅತಿ ಹೆಚ್ಚು ವಂಚಿತ ರಾಜ್ಯ ನಾಗಾಲ್ಯಾಂಡ್. ಹೀಗಾಗಿ ಅಲ್ಲಿ ಬಡತನ ಹೆಚ್ಚು. ಭಾರತದಲ್ಲಿ ಸರಾಸರಿ ಆರೋಗ್ಯ ವೆಚ್ಚ ಸೂಚಿ ೧೯೮೧ ರಲ್ಲಿ ೦.೮೯೪ ನಿಂದ ೨೦೦೨ ರಲ್ಲಿ ೦.೮೭೫೬ ಗೆ ಹೆಚ್ಚಿದೆ. ಆದರೆ ೧೯೯೧ ರ ಉದಾರೀಕರಣದಿಂದಾಗಿ ೨೦೦೧ ರಲ್ಲಿ ೧೯ ರಾಜ್ಯಗಳ ಸೂಚಿ ಅಷ್ಟೇನೂ ಬದಲಾಗಿಲ್ಲ. ಆದರೆ ಮಧ್ಯ ಪ್ರದೇಶದ ಆರೋಗ್ಯ ಸೂಚಿ ಮಾತ್ರ ಸ್ಥಿತ್ಯಂತರಗಳನ್ನು ಹೊಂದಿದೆ. (ಡಾ. ಅಚಲ್ ಕುಮಾರ್ ಗೌರ್ ಅಧ್ಯಯನ ೨೦೦೩).

೨೦೦೨ ರಲ್ಲಿ ರಾಜ್ಯಗಳ ನಡುವೆ ತಲಾ ಶಿಕ್ಷಣ ವೆಚ್ಚ ಮತ್ತು ತಲಾ ಆರೋಗ್ಯ ವೆಚ್ಚ ಕ್ರಮವಾಗಿ ಹೀಗಿದೆ. ಆಂಧ್ರ ಪ್ರದೇಶ ರೂ ೫೩೨ ಮತ್ತು ೧೭೩, ಅಸ್ಸಾಂ ರೂ ೯೭೬ ಮತ್ತು ೧೫೧ ರೂ. ಬಿಹಾರ ರೂ ೨೯೭ ಮತ್ತು ರೂ ೭೦, ಗುಜರಾತ್ ರೂ ೭೮೫ ಮತ್ತು ರೂ ೧೮೫, ಹರಿಯಾಣ ರೂ ೭೨೪ ಮತ್ತು ರೂ ೧೭೬ ಹಿಮಾಚಲ ಪ್ರದೇಶ ರೂ ೧೩೭೮ ಮತ್ತು ರೂ ೪೩೦. ಜಮ್ಮು ಮತ್ತು ಕಾಶ್ಮೀರ್ ರೂ ೮೭೦ ಮತ್ತು ರೂ ೪೧೩. ಕರ್ನಾಟಕದ ತಲಾ ಶಿಕ್ಷಣ ವೆಚ್ಚ ರೂ ೬೭೩ ಮತ್ತು ಆರೋಗ್ಯ ವೆಚ್ಚ ರೂ ೨೧೬ ಇತ್ಯಾದಿ. ಹೀಗೆ ಶಿಕ್ಷಣ ಮತ್ತು ಆರೋಗ್ಯ ವೆಚ್ಚ ಮತ್ತು ಸೌಲಭ್ಯಗಳು ರಾಜ್ಯಗಳ ಮೂಲಭೂತ ಸೌಕರ್ಯಗಳನ್ನು ಅವುಗಳ ಪ್ರಗತಿ ದರವನ್ನು ಪ್ರತಿಬಿಂಬಿಸುತ್ತವೆ. ಮಹಿಳಾ ಸಾಕ್ಷರತೆಯು ಪ್ರಮುಖ ಸಾಮಾಜಿಕ ಆರ್ಥಿಕ ಸೂಚಿಯಾಗಿದೆ. ಪೌಷ್ಟಿಕಾಂಶದ ಸ್ಥಿತಿಗತಿಗಳು ಆರೋಗ್ಯ ಮತ್ತು ಯೋಗಕ್ಷೇಮವನ್ನು ಪ್ರಭಾವಿಸುತ್ತವೆ. ಆದರೆ ಭಾರತದಲ್ಲಿ ಒಬ್ಬ ಹುಡುಗನ

ಆಹಾರದ ಪ್ರಮಾಣ ಮತ್ತು ಗುಣಮಟ್ಟ ಒಬ್ಬ ಹುಡುಗಿಯ ಆಹಾರ ಪ್ರಮಾಣ ಮತ್ತು ಗುಣಮಟ್ಟಕ್ಕಿಂತ ತುಂಬಾ ಹೆಚ್ಚಾಗಿದೆ.

### ಸ್ತ್ರೀ ಮತ್ತು ಪುರುಷರ ಸಾಕ್ಷರತೆ ಪ್ರಮಾಣ

ಭಾರತದಲ್ಲಿ ಸ್ತ್ರೀ ಮತ್ತು ಪುರುಷರ ಸಾಕ್ಷರತೆ ಪ್ರಮಾಣ ಕೆಳಕಂಡಂತಿದೆ.

| ವರ್ಷ | ಪ್ರತಿಶತ ಸಾಕ್ಷರತೆ | ಪ್ರತಿಶತ ಪುರುಷರ ಸಾಕ್ಷರತೆ | ಪ್ರತಿಶತ ಸ್ತ್ರೀಯರ ಸಾಕ್ಷರತೆ |
|---|---|---|---|
| ೧೯೦೧ | ೫.೪ | ೯.೮ | ೦.೭ |
| ೧೯೫೧ | ೧೬.೭ | ೨೫.೦ | ೭.೯ |
| ೧೯೬೧ | ೨೪.೦ | ೩೪.೪ | ೧೩.೦ |
| ೧೯೮೧ | ೩೬.೨ | ೪೬.೯ | ೨೮.೮ |
| ೨೦೦೧ | ೬೫.೩೮ | ೭೫.೮೫ | ೫೪.೧೬ |

ಸ್ತ್ರೀಯರ ಸಾಕ್ಷರತೆ ಪ್ರಮಾಣ ಪುರುಷರಿಗಿಂತ ಕಡಿಮೆ. ಇದಕ್ಕೆ ಲಿಂಗ ತಾರತಮ್ಯ ಕಾರಣವಾಗಿದೆ.

### ಗ್ರಾಮೀಣ ಮತ್ತು ನಗರ ವಿಧಗಳು : ಸಾಕ್ಷರತೆ

ಜನಗಣತಿ ಪ್ರಕಾರ ಶೇ ೫೯.೪೦ ಜನರು ಗ್ರಾಮೀಣ ಪ್ರದೇಶಗಳಲ್ಲಿ ಸಾಕ್ಷರರು ಹಾಗೂ ಶೇ ೮೦.೩೦ ರಷ್ಟು ಜನರು ನಗರ ಪ್ರದೇಶದಲ್ಲಿ ಸಾಕ್ಷರರು.

NSSO ನ ೫೫ ನೇ ಸುತ್ತಿನ ಸಮೀಕ್ಷೆ ಪ್ರಕಾರ ವರದಿ ಸಂಖ್ಯೆ ೪೭೩ ರಲ್ಲಿ ಹೇಳಿರುವಂತೆ ಸಾಕ್ಷರತೆ ಎಂದರೆ ಒಬ್ಬ ವ್ಯಕ್ತಿ ಮಹಿಳೆ ಇನ್ನೊಬ್ಬರ ಸಹಾಯವಿಲ್ಲದೆ ಕನಿಷ್ಠ ಒಂದು ಭಾಷೆಯ ಮೂಲಕ ಸರಳ ಮಾಹಿತಿಯನ್ನು ಓದಲು ಮತ್ತು ಬರೆಯುವವನಾಗಿರಬೇಕು. (ವಯಸ್ಕ ಶಿಕ್ಷಣ ರಾಜ್ಯದಲ್ಲಿ ಹೇಳಿರುವಂತೆ ಕೇವಲ ಸಹಿ ಮಾಡಲು ಬಂದರೆ ಸಾಕ್ಷರರು ಈ ಅಭಿಪ್ರಾಯ ಸರಿಯಲ್ಲ. ಕೇರಳದ ಒಂದು ಜಿಲ್ಲೆಯಲ್ಲಿ ಶೇಖಡಾ ನೂರರಷ್ಟು ಸಾಕ್ಷರ ಜಿಲ್ಲೆ ಎಂದು ಘೋಷಿಸಿದ್ದ ಸಮಯದಲ್ಲಿ ೬ ತಿಂಗಳ ನಂತರ ನಡೆದ ಸಂಶೋಧನಾ ಸಮೀಕ್ಷೆಯಲ್ಲಿ ಬಹಳಷ್ಟು ಜನ ಕಲಿತಿದ್ದ ಸಹಿ ಮಾಡುವುದನ್ನು ಮರೆತು ಹೋಗಿದ್ದರು). ಪರಿಶಿಷ್ಟ ಜಾತಿಯಲ್ಲಿ ಸಾಕ್ಷರತೆ ಶೇ ೪೬.೬, ಪರಿಶಿಷ್ಟ ಪಂಗಡದಲ್ಲಿ ಶೇ ೪೨.೨. ಇತರೇ ಜಾತಿಗಳಲ್ಲಿ ಶೇ ೬೭.೭. ಹೀಗಾಗಿ ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡಗಳಲ್ಲಿ ಬಡತನ ಹೆಚ್ಚು. ಪರಿಶಿಷ್ಟ ಜಾತಿಯಲ್ಲಿ ಮಹಿಳೆಯರಲ್ಲಿ ಅಶಿಕ್ಷಿತರು ಶೇ ೬೬.೪ ಪರಿಶಿಷ್ಟ ಪಂಗಡದ ಮಹಿಳೆಯರಲ್ಲಿ ಅಶಿಕ್ಷಿತರು ಶೇ ೬೯.೯. ಕೆಲವು ರಾಜ್ಯಗಳಲ್ಲಿ ಮಹಿಳಾ ಅಶಿಕ್ಷಿತರು ತುಂಬಾ ಹೆಚ್ಚು. ಉದಾ: ಆಂಧ್ರ ಪ್ರದೇಶ (ಪ. ಜಾತಿ ೭೦.೨ ಶೇ, ಪ.ಪಂ ೮೪.೭ ಶೇ.) ರಾಜಾಸ್ಥಾನ (ಪ.ಜಾತಿ ೮೧.೩), ಬಿಹಾರ (ಪ.ಜಾತಿ ೮೬.೭, ಪ.ಪಂ. ೭೮%). ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಕಡಿಮೆ ಮಟ್ಟದ ಶಿಕ್ಷಣವು ಶಕ್ತಿ ಹೀನತೆಯನ್ನು ತೋರಿಸುತ್ತದೆ. ಆರ್ಥಿಕ ಪ್ರಗತಿಯಲ್ಲಿ ಈ

ವರ್ಗದ ಋಣಾತ್ಮಕ ಪಾತ್ರವನ್ನು ಇದು ತೋರಿಸುತ್ತದೆ. ಆರೋಗ್ಯದಲ್ಲಿಯೂ ಕೂಡ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಮಕ್ಕಳು ಹೆಚ್ಚಾಗಿ ಪ್ರಾರಂಭಿಕ ಚುಚ್ಚು ಮದ್ದುಗಳಿಂದ ವಂಚಿತರಾಗುವುದು ಕಂಡು ಬರುತ್ತದೆ. ಹೀಗಾಗಿ ಇವರಲ್ಲಿ ಶಿಶು ಮರಣ ಸಂಖ್ಯೆ ಹೆಚ್ಚು.

**ಜೀವಿತಾವಧಿ**

ಜೀವಿತಾವಧಿಯನ್ನು ಜೀವನ ನಿರೀಕ್ಷೆ ಎಂದು ಹೇಳಲಾಗಿದೆ. ಜನರು ಜನನ ಸಮಯದಲ್ಲಿ ಅವರು ಎಷ್ಟು ಕಾಲ ಬದುಕಬಹುದು ಎಂಬ ಲೆಕ್ಕಾಚಾರ. ಭಾರತದಲ್ಲಿ ಜೀವಿತಾವಧಿ ೬೨ ವರ್ಷಗಳು. ಬಾಂಗ್ಲಾದೇಶದಲ್ಲಿ ೫೮ ವರ್ಷಗಳು, ಪಾಕಿಸ್ತಾನದಲ್ಲಿ ೬೦ ವರ್ಷಗಳು, ಶ್ರೀಲಂಕಾದಲ್ಲಿ ೭೩ ವರ್ಷಗಳು. ಜೀವಿತಾವಧಿಯು ಆರೋಗ್ಯವನ್ನು ಹಾಗೂ ಜೈವಿಕ ಅಂಶಗಳನ್ನು, ಆದಾಯವನ್ನು, ವೃದ್ಧಾಪ್ಯದ ಸೇವೆಗಳ ಮಟ್ಟವನ್ನು ಅವಲಂಬಿಸಿದೆ.

**ಶಿಶು ಮರಣ ದರ**

ಶಿಶು ಮರಣ ಎಂದರೆ ಮಗು ಹುಟ್ಟಿದ ಒಂದು ವರ್ಷದೊಳಗೆ ಸತ್ತರೆ ಅದನ್ನು ಶಿಶು ಮರಣ ಎನ್ನಲಾಗಿದೆ. ಪ್ರತಿ ಸಾವಿರ ಶಿಶುಗಳಿಗೆ ಎಷ್ಟು ಶಿಶುಗಳು ಸಾಯುತ್ತವೆ ಎನ್ನುವುದು ಶಿಶು ಮರಣದರ. ಮಗುವಿನ ಮರಣ ದರ ಎಂದರೆ ಮಗು ಹುಟ್ಟಿದ ನಂತರ ೧ ವರ್ಷದಿಂದ ೫ ವರ್ಷದೊಳಗೆ ಸತ್ತರೆ ಅದು ಮಗುವಿನ ಮರಣದರ.

ವಾಣಿ ಕೆ. ಬರೂಹ ಮತ್ತು ಶ್ರೀಯು ಅಯ್ಯರ್ ರವರ ಅಧ್ಯಯನ ೨೦೦೫ ಮದುವೆಯಾದ ಮಹಿಳೆಯರ ಶಿಶು ಮರಣದರ ಕೆಳಕಂಡಂತಿದೆ. ೨೦೦೪ ರಲ್ಲಿ.

**ಪ್ರಸ್ತುತ ಮದುವೆಯಾದ ಮಹಿಳೆಯರ ಶಿಶು ಮರಣದರ ವಿವಿಧ ಮತ ಧರ್ಮಗಳಲ್ಲಿ (ಶೇ.)**

| | ಹಿಂದು | ಮುಸ್ಲಿಂ | ದಲಿತರು |
|---|---|---|---|
| ಶಿಶು ಮರಣದರ | ೫.೧ | ४.೫ | ೬.೧ |
| ಗಂಡು ಶಿಶು ಮರಣದರ | ४.೫ | ४.೬ | ೫.४ |
| ಹೆಣ್ಣು ಶಿಶು ಮರಣದರ | ೬.೨ | ४.೫ | ೭.೬ |

೧೦.೦೦೦ ಮಹಿಳೆಯರ ಸಮೀಕ್ಷೆ ಆಧರಿಸಿದ ವರದಿ ಪ್ರಕಾರ ಒಂದಲ್ಲ ಒಂದು ಸಾರಿ ಗರ್ಭಪಾತ ಮಾಡಿಸಿಕೊಂಡವರಲ್ಲಿ ಈ ಮಹಿಳೆಯರ ಗಂಡಂದಿರಲ್ಲಿ ಅಶಿಕ್ಷಿತರು ಗಂಡು ಮಗುವಿಗೆ ಒಲವು ತೋರಿಸಿದ್ದಾರೆ. ಮುಸ್ಲಿಂ ಮತ್ತು ದಲಿತ ಕುಟುಂಬಗಳಿಗಿಂತ ಹಿಂದೂ ಕುಟುಂಬಗಳಲ್ಲಿ ಗಂಡು ಮಗುವಿಗೆ ಒಲವು ಜಾಸ್ತಿ ಇರುವುದು ಕಂಡು ಬರುತ್ತದೆ. ಈ ಅಧ್ಯಯನವು ಇಡೀ ಭಾರತಕ್ಕೆ ಅನ್ವಯವಾಗುತ್ತದೆ.

ಮಾನವ ಅಭಿವೃದ್ಧಿ ವರದಿ (೧೯೯೯)ರ ಪ್ರಕಾರ ವಿವಿಧ ರಾಷ್ಟ್ರಗಳಲ್ಲಿ ಭಾರತವೂ ಸೇರಿದಂತೆ ಜೀವಿತಾವಧಿ, ಶಿಶು ಮರಣದರ, ಬಾಣಂತಿಯರ ಮರಣದರ, ಮಗುವಿನ ಮರಣದರ ಕೆಳಕಂಡಂತಿದೆ.

| ರಾಷ್ಟ್ರಗಳು | ಜೀವಿತಾವಧಿ ವರ್ಷಗಳು | ಶಿಶುಮರಣದರ ೧೦೦೦ ಶಿಶುಗಳಿಗೆ | ಬಾಣಂತಿಯರ ಮರಣದರ ಪ್ರತಿ ೧೦೦೦೦೦ ಬಾಣಂತಿಯರಿಗೆ | ಮಗುವಿನ ಮರಣದರ |
|---|---|---|---|---|
| ಬಾಂಗ್ಲಾದೇಶ | ೫೮ | ೮೧ | ೮೫೦ | ೧೧೨ |
| ಪಾಕಿಸ್ತಾನ | ೬೦ | ೩೮ | ೩೪೦ | ೧೩೬ |
| ಶ್ರೀಲಂಕಾ | ೭೩ | ೧೬ | ೧೪೦ | ೧೯ |
| ಭಾರತ | ೬೨ | ೭೦ | ೫೭೦ | ೭೩ |

ಈ ಅಂಶಗಳ ಮೇಲೆ ಸಾಮಾಜಿಕ ಮೂಲಭೂತ ಸೌಕರ್ಯವಾಗಿ ಸರ್ಕಾರವು ಹೆಚ್ಚು ಹಣವನ್ನು ವೆಚ್ಚಮಾಡುವುದರಿಂದ ಆರೋಗ್ಯ ಮತ್ತು ಶಿಕ್ಷಣ ಹೆಚ್ಚಿಸಬಹುದು. ಶಿಶು ಮರಣ ದರವನ್ನು ತಗ್ಗಿಸಬಹುದು. ಸಾಮಾಜಿಕ ಸೇವೆಗಳ ಮೇಲೆ ೨೦೦೨-೦೩ರಲ್ಲಿ ಕೇಂದ್ರ ಸರ್ಕಾರದ ವೆಚ್ಚವನ್ನು ಕೆಳಗಿನ ಪಟ್ಟಿಯಲ್ಲಿ ತೋರಿಸಲಾಗಿದೆ.

| | |
|---|---|
| ಒಟ್ಟು ಸಾಮಾಜಿಕ ಸೇವೆಗಳ ಮೇಲಿನ ವೆಚ್ಚ | ಕೋಟಿ ರೂಗಳಲ್ಲಿ ೧೫೩೧೧೦ |
| ಇದರಲ್ಲಿ ಶಿಕ್ಷಣಕ್ಕೆ ವೆಚ್ಚ | ೭೫೩೮೯ |
| ಆರೋಗ್ಯ ಸಾರ್ವಜನಿಕ ಆರೋಗ್ಯ ಕುಟುಂಬ ಕಲ್ಯಾಣ ಇತ್ಯಾದಿ ವೆಚ್ಚಕ್ಕಾಗಿ | ೩೩೯೧೫ |

**ಆರೋಗ್ಯ - ಒಂದು ವಿಶ್ಲೇಷಣೆ**

ಭಾರತವನ್ನು ಆರೋಗ್ಯದಲ್ಲಿ 'ವಿಶ್ವದರ್ಜೆ' ದೇಶವನ್ನಾಗಿ ಮಾಡುವ ಉದ್ದೇಶವಿದೆ. ಎಂದರೆ ಜೀವಿತಾವಧಿ ಜಪಾನ್‌ನಲ್ಲಿರುವಂತೆ ನಮ್ಮಲ್ಲಿ ಕೂಡ ೮೦ ವರ್ಷಗಳಾಗುವಂತೆ ಮಾಡುವುದು. ಸ್ವೀಡನ್‌ನಲ್ಲಿರುವಂತೆ ಶಿಶು ಮರಣ ಸಂಖ್ಯೆಯನ್ನು ನಮ್ಮಲ್ಲಿ ಕೂಡ ಪ್ರತಿ ಸಾವಿರಕ್ಕೆ ೩ಕ್ಕೆ ಇಳಿಸುವುದು ಎಂಬ ಆಶೋತ್ತರಗಳಿವೆ. ಈ ಹಿನ್ನಲೆಯಲ್ಲಿ ಆರೋಗ್ಯ ಪ್ರವಾಸ ಕಾರ್ಯಕ್ರಮವೂ ಇದೆ. ಆದರೆ ಭಾರತದಲ್ಲಿ ಆರೋಗ್ಯದ ಮೇಲಿನ ವೆಚ್ಚ ಒಟ್ಟು ದೇಶಿಯ ಉತ್ಪನ್ನದ ಶೇ ೫.೧ ರಷ್ಟು ಮಾತ್ರವಿದೆ. ಅಲ್ಲದೆ ಬಡತನದ ಪ್ರಮಾಣವೂ ಹೆಚ್ಚು. ವಿಶ್ವದರ್ಜೆ ಆರೋಗ್ಯ ಹಲವಾರು ಪ್ರಶ್ನೆಗಳನ್ನು ಮುಂದಿಡುತ್ತದೆ.

ಭಾರತದಲ್ಲಿ ಈಗ ದೊಡ್ಡ ಪ್ರಮಾಣದ ಸಾರ್ವಜನಿಕ ಮೂಲ ಸೌಕರ್ಯವಿದ್ದು, ಶೇ ೨೦ ರಷ್ಟು ಹೊರಗಿನ ಸೇವೆ, ಶೇ ೪೫ ರಷ್ಟು ಒಳಗಿನ ಸೇವೆ ನೀಡಲಾಗುತ್ತಿದೆ. ಖಾಸಗಿ ರಂಗದಲ್ಲಿ ಅಗಾಧ ಅವಕಾಶಗಳಿದ್ದು ಶೇ ೮೦ ರಷ್ಟು ಹೊಸ ಸೇವೆಯನ್ನು ಶೇ ೫೫ರಷ್ಟು ಒಳ ಸೇವೆಯನ್ನು ನೀಡುತ್ತಿದೆ. ಇದರಲ್ಲಿ ಹೈಟೆಕ್ ಆಸ್ಪತ್ರೆಗಳಿಂದ ತರಭೇತಿ ವೈದ್ಯರು, ಸಾಮಾನ್ಯ ವೈದ್ಯರು. ನರ್ಸಿಂಗ್ ಹೋಂಗಳು, ಪಾಲಿಕ್ಲಿನಿಕ್‌ಗಳು ಇವೆ. ಇವು ಸಣ್ಣ ಪ್ರಮಾಣದ ಮತ್ತು ದೊಡ್ಡ ಪ್ರಮಾಣದ ಕಾರ್ಪೋರೇಟ ಲಕ್ಷಣ ಹೊಂದಿವೆ. (ಅಶ್ರಫ್ ಮತ್ತು ರೋಟ್ರಿಗ್ಸ್ ಅಧ್ಯಯನ ೨೦೦೨). ಭಾರತದಲ್ಲಿ ಆರೋಗ್ಯದ ಬಗ್ಗೆ ೨೪೯೯೦

ಸ್ವತಂತ್ರ ಸಂಸ್ಥೆಗಳ ವಿಧಾನವಿದ್ದು ಹೋಮಿಯೋಪತಿ ಶೇ ೧೩ ರಷ್ಟು ಸೇವೆ ಸಲ್ಲಿಸುತ್ತಿದೆ. ಆದರೆ ಇದು ಕೇವಲ ೦.೭೫ ರಷ್ಟು ಮಾತ್ರ. ಸರ್ಕಾರದಿಂದ ಆರೋಗ್ಯ ನೆರವು ಪಡೆಯುತ್ತಿದೆ. ರಾಷ್ಟ್ರೀಯ ಕುಟುಂಬ ಆರೋಗ್ಯ ಸಮೀಕ್ಷೆ (NFHS) ಪ್ರಕಾರ ನಮ್ಮಲ್ಲಿ ಬಾಣಂತಿ ಮರಣ ಪ್ರಮಾಣ ಪ್ರತಿ ೧೦೦೦೦೦ ಕ್ಕೆ ೪೨೪ ರಿಂದ ೫೪೦ ಕ್ಕೆ ಹೆಚ್ಚಿಸಿರುವುದು ಆತಂಕಕಾರಿ ವಿಷಯ ಹಾಗೂ ಸಂತಾನಶಕ್ತಿ ಮತ್ತು ಮಗುವಿನ ಆರೋಗ್ಯ ಕಾರ್ಯಕ್ರಮದ ಬಗ್ಗೆ ಆತಂಕ ಉಂಟು ಮಾಡುತ್ತದೆ.

ಒಂದು ಮುಖ್ಯ ವೈರುಧ್ಯವೆಂದರೆ ಬಹುರಾಷ್ಟ್ರೀಯ ಕಂಪನಿಗಳು ಫೈಸರ್ ರೋಶ್, ಮೇರ್ಕ್ ಮುಂತಾದವು ತಮ್ಮ ಪೇಟೆಂಟ್ ರಕ್ಷಿಸಿಕೊಂಡು ಉತ್ತಮ ಔಷಧ ತಯಾರಿಸುತ್ತಿದ್ದರೂ ಕೂಡ, ಟಿ.ಬಿ., ಹೆಚ್‌ಐವಿ/ಏಡ್ಸ್, ಮಲೇರಿಯಾ ಮುಂತಾದ ಕಾಯಿಲೆಗಳನ್ನು ಪರಿಹರಿಸುವುದು ಸರ್ಕಾರಗಳ ಕೆಲಸ ಎಂದು ಭಾವಿಸಿರುವುದು. ಹೆಪಾಟಿಟಿಸ್ ಬಿ ಮುಂತಾದ ಚುಚ್ಚುಮದ್ದುಗಳು ಪೂರೈಕೆ ತಳ್ಳುವ ಮಾರುಕಟ್ಟೆ ತಂತ್ರದ ಬಗ್ಗೆಯೂ ನಾವು ಯೋಚಿಸಬೇಕಿದೆ.

**ಶಿಕ್ಷಣ - ಒಂದು ವಿಶ್ಲೇಷಣೆ**

೨೦೦೦-೨೦೦೧ ರಲ್ಲಿ ಭಾರತದಲ್ಲಿ ಒಟ್ಟು ಶಾಲಾ ಕಾಲೇಜುಗಳ ಪ್ರಮಾಣ ಹೀಗಿದೆ.

| | **ಒಟ್ಟು ಸಂಸ್ಥೆಗಳು** |
|---|---|
| ಪ್ರಾಥಮಿಕ ಶಾಲೆಗಳು | ೫೧೪೮೦೦ |
| ಮಾಧ್ಯಮಿಕ ಶಾಲೆಗಳು | ೧೯೮೦೦೦ |
| ಪ್ರೌಢ ಶಾಲೆಗಳು | ೧೦೬೨೦೦ |
| ಸಾಮಾನ್ಯ ಶಿಕ್ಷಣ ಕಾಲೇಜುಗಳು | ೪೯೬೬ |
| ವೃತ್ತಿಪರ ಕಾಲೇಜುಗಳು | ೧೭೦೨ |
| ವಿಶ್ವವಿದ್ಯಾನಿಲಯಗಳು | ೨೪೫ |

ಸಾಮಾನ್ಯ ಕನಿಷ್ಟ ಕಾರ್ಯಕ್ರಮ (CMP) ಘೋಷಿಸಿರುವ ಸಂಯುಕ್ತ ಪ್ರಗತಿಪರ ಒಕ್ಕೂಟ (VPA). ಕೇಂದ್ರ ಸರ್ಕಾರ ಶಿಕ್ಷಣ ಮತ್ತು ಆರೋಗ್ಯಕ್ಕೆ ಸಂಬಂಧಿಸಿದಂತೆ ಕಾರ್ಯಕ್ರಮ ರೂಪಿಸಿದೆ. ದೇಶಿಯ ಒಟ್ಟು ಉತ್ಪನ್ನದ ಶೇ ೬ ರಷ್ಟು ಶಿಕ್ಷಣಕ್ಕೆ ವೆಚ್ಚ ಮಾಡಲು ಉದ್ದೇಶಿಸಿದೆ. ೧೯೯೯-೨೦೦೦ ರಲ್ಲಿ ಒಟ್ಟು ದೇಶೀಯ ಉತ್ಪನ್ನದಲ್ಲಿ ಶೇ ೪.೧ ರಷ್ಟು ವೆಚ್ಚ ಮಾಡಲಾಗಿತ್ತು. ಎಲ್ಲಾ ಕೇಂದ್ರ ತೆರಿಗೆಗಳ ಮೇಲೆ ಶೇ.೨ ರಷ್ಟು ಶಿಕ್ಷಣ ಸೆಸ್ ವಿಧಿಸಿ ವಾರ್ಷಿಕ ರೂ ೫೦೦೦ ಕೋಟಿ ಕ್ರೋಢೀಕರಿಸುವ ಉದ್ದೇಶವಿದೆ. ಬಡವರು ಯಾರೂ ಕೂಡ ಉನ್ನತ ಶಿಕ್ಷಣದಿಂದ ವಂಚಿತರಾಗಬಾರದು ಎನ್ನುವುದರ ಜೊತೆಗೆ ಶಿಕ್ಷಣಕ್ಕೆ ವಿದೇಶಿ ನೆರವು ಪಡೆಯುವ ಯೋಜನೆಯೂ ಇದೆ. ಸರ್ವಶಿಕ್ಷಣ ಅಭಿಯಾನ ಒಂದು ಯಶಸ್ವೀ ಕಾರ್ಯಕ್ರಮವಾಗಿದೆ. ಶಿಕ್ಷಣದಲ್ಲಿ ಖಾಸಗೀಕರಣ ನಡೆಯುತ್ತಿದ್ದು

ಸರ್ಕಾರವು ಇದರ ಬಗ್ಗೆ ಮೌನವಾಗಿದೆ. ಶಿಕ್ಷಣದ ಮತ್ತೊಂದು ಯಶಸ್ವಿ ಕಾರ್ಯ ೧೮ ವರ್ಷ ವಯಸ್ಸಿನ ವರೆಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ ಮಾಡಿರುವುದು. ಉಚಿತ ಪದ ಸರಿ ಆದರೆ ಕಡ್ಡಾಯ! ಎಷ್ಟರ ಮಟ್ಟಿಗೆ ಕಡ್ಡಾಯಗೊಳಿಸಬಹುದು. ಮಕ್ಕಳನ್ನು ಶಾಲೆಗೆ ಕಳುಹಿಸದ ತಂದೆ ತಾಯಿಗಳ ಮೇಲೆ ಕ್ರಿಮಿನಲ್ ಮೊಕದ್ದಮೆ ಹೂಡಲು ಸಾಧ್ಯವೇ ಎಂಬ ಜಿಜ್ಞಾಸೆ ಇದೆ. ಈಗಾಗಲೇ ಇರುವ ಹಲವಾರು ಆಯೋಗಗಳ ಜೊತೆಗೆ ರಾಷ್ಟ್ರೀಯ ಶಿಕ್ಷಣ ಕಮಿಷನ್ ಕೂಡ ಸ್ಥಾಪಿಸಲಾಗಿದೆ. ಉನ್ನತ ಶಿಕ್ಷಣ ಸಂಸ್ಥೆಗಳಿಗೆ ಸ್ವಾಯುತ್ತತೆ ಉಳಿಸಿಕೊಳ್ಳುವುದು. ಶಿಕ್ಷಣದ ಮೂಲಕ ಮಹಿಳಾ ಸಬಲೀಕರಣ. ಎಲ್ಲಾಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದಳಿಗೆ ಸಮಾನ ಅವಕಾಶ, NSS ಮತ್ತು NCC ಜೊತೆಗೆ ಶಿಕ್ಷಣದಲ್ಲಿ ಕ್ರೀಡಾ ಮತ್ತು ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಹೆಚ್ಚು ಉತ್ತೇಜನ ಮುಂತಾದವು ಯೋಜನೆಗಳಲ್ಲಿ ಸೇರಿಕೊಂಡಿವೆ.

### ಕಚ್ಚಾ ಜನನ ಮತ್ತು ಮರಣ ದರಗಳು

ಜನನ ದರ ಮತ್ತು ಮರಣ ದರದ ಸಡುವಿನ ಅನುಪಾತವೇ ಸ್ವಾಭಾವಿಕ ಜನಸಂಖ್ಯೆ ಬೆಳವಣಿಗೆ ದರ. ಕಚ್ಚಾ ಅಥವಾ ಅಪಕ್ವ ಜನನದರ ಎಂದರೆ ಒಂದು ನಿರ್ದಿಷ್ಟ ಅವಧಿಯಲ್ಲಿ ನೊಂದಣಿಯಾದ ಒಟ್ಟು ಜೀವಂತ ಜನನಗಳ ಪ್ರಮಾಣವನ್ನು ಆ ವರ್ಷದ ಮಧ್ಯಬಾಗದ ಜನಸಂಖ್ಯೆಯಿಂದ ಭಾಗಿಸಿ ಇದನ್ನು ೧೦೦೦ ರಿಂದ ಗುಣಿಸಿದಾಗ ದೊರೆಯುವ ಜನನ ಪ್ರಮಾಣ. ಇದರ ಸೂತ್ರ ಹೀಗಿದೆ.

$$\text{ಕಚ್ಚಾ ಜನನ ಪ್ರಮಾಣ} = \frac{\text{ಒಂದು ನಿರ್ದಿಷ್ಟ ಅವಧಿಯಲ್ಲಿ ನೊಂದಣಿ ಆದ ಒಟ್ಟು ಜನನ}}{\text{ಆ ವರ್ಷದ ಮಧ್ಯ ಭಾಗದ ಒಟ್ಟು ಜನಸಂಖ್ಯೆ}} \times ೧೦೦೦$$

ಎಂದರೆ ಪ್ರತಿ ಸಾವಿರ ಸಂಖ್ಯೆಗೆ ಎಷ್ಟು ಜನನವಾಗಿದೆ ಎಂದು ತಿಳಿಯಬಹುದು.

ಕಚ್ಚಾ ಮರಣ ದರ ಎಂದರೆ ಒಂದು ನಿರ್ದಿಷ್ಟ ವರ್ಷದಲ್ಲಿ ನೊಂದಣಿಯಾಗಿರುವ ಮರಣಗಳನ್ನು ಅದೇ ವರ್ಷದ ಮಧ್ಯ ಭಾಗದ ಒಟ್ಟು ಜನಸಂಖ್ಯೆಯಿಂದ ಭಾಗಿಸಿ ಅದನ್ನು ೧೦೦೦ ದಿಂದ ಗುಣಿಸುವುದು. ಸೂತ್ರ ಹೀಗಿದೆ.

$$\text{ಕಚ್ಚಾ ಮರಣ ದರ} = \frac{\text{ಒಂದು ನಿರ್ದಿಷ್ಟ ವರ್ಷದಲ್ಲಿ ನೊಂದಣಿಯಾದ ಮರಣಗಳು}}{\text{ಅದೇ ವರ್ಷದ ಮಧ್ಯ ಭಾಗದ ಜನಸಂಖ್ಯೆ}} \times ೧೦೦೦$$

ಹೀಗೆ ಕಚ್ಚಾ ಜನನದರ ಮತ್ತು ಕಚ್ಚಾ ಮರಣದರದ ಅನುಪಾತ ಸ್ವಾಭಾವಿಕ ಬೆಳವಣಿಗೆ ದರವನ್ನು ತಿಳಿಸುತ್ತದೆ. ಉದಾಹರಣೆಗೆ ೧೯೯೯-೨೦೦೦ ರಲ್ಲಿ ಭಾರತದಲ್ಲಿ ಜನನ ಪ್ರಮಾಣ ಪ್ರತಿ ಸಾವಿರ ಜನಸಂಖ್ಯೆಗೆ ೨೬.೪ ಆಗಿದ್ದರೆ, ಮರಣ ಪ್ರಮಾಣ ೯ ಆಗಿದ್ದು ಇವೆರಡರ ವ್ಯತ್ಯಾಸ ೧೭.೪ ಜನಸಂಖ್ಯೆಯ ಸ್ವಾಬಾವಿಕ ಬೆಳವಣಿಗೆ ದರವಾಗಿರುತ್ತದೆ

ಎಂದರೆ ಜನಸಂಖ್ಯೆಯ ಬೆಳವಣಿಗೆ ದರ ೧೦೦೦ ಕ್ಕೆ ೧೭.೪ ಅಥವಾ ಶೇ ೧.೭೪ ಎಂದು ಪರಿಗಣಿಸಲಾಗುತ್ತದೆ. ಕೆಲವು ಆಯ್ದ ರಾಷ್ಟ್ರಗಳ ಕಚ್ಚಾ ಜನನ ದರ ಮತ್ತು ಮರಣ ದರವನ್ನು ಕೆಳಗಿನ ಪಟ್ಟಿಯಲ್ಲಿ ತೋರಿಸಲಾಗಿದೆ. (೧೯೯೪ ರಲ್ಲಿ ಪ್ರತಿ ಸಾವಿರ ಜನನಗಳಿಗೆ)

| ರಾಷ್ಟ್ರಗಳು | ಜನನ ದರ | ಮರಣ ದರ | ಶಿಶುಮರಣದರ ೧೯೯೫ ರಲ್ಲಿ |
|---|---|---|---|
| ಜರ್ಮನಿ | ೧೦ | ೧೧ | ೦೬ |
| ಯುನೈಟೆಡ್‌ಕಿಂಗ್‌ಡಮ್ | ೧೪ | ೧೧ | ೦೬ |
| ಯು.ಎಸ್.ಎ | ೧೬ | ೦೯ | ೦೮ |
| ಕೆನಡ | ೧೫ | ೦೭ | ೦೬ |
| ಫ್ರಾನ್ಸ್ | ೧೩ | ೦೯ | ೦೬ |
| ಆಸ್ಟ್ರೇಲಿಯಾ | ೧೫ | ೦೮ | ೦೭ |
| ಜಪಾನ್ | ೧೧ | ೦೭ | ೦೪ |
| ಚೀನಾ | ೧೯ | ೦೮ | ೩೪ |
| ಭಾರತ | ೨೬ | ೦೯ | ೬೮ |

## ೨.೪. ಪಾರಿಭಾಷಿಕ ಶಬ್ದಕೋಶ

ದೈಹಿಕ ಶ್ರಮ -Physical Labour
ಮಾನಸಿಕ ಶ್ರಮ - Mental Labour
ಮಾನವ ಸಂಪನ್ಮೂಲ - Human Resource
ದಶಮಾನ - Decinial
ಮಹಾ ಇಬ್ಭಾಗದ ವರ್ಷ - Year of Great divide
ಜನನ ಪ್ರಮಾಣ ದರ -Birth rate
ಮರಣ ಪ್ರಮಾಣ ದರ - Death Rate
ಶಿಶು ಮರಣ ದರ - Infant martality rate
ವಲಸೆ - Migration
ನಿರಾಶ್ರಿತರು - Refugess
ಸಂತಾನೋತ್ಪತ್ತಿ ಅಂತರ - fertility gap
ಜನಸಂಖ್ಯೆಯ ಗಾತ್ರ - Size of population
ಜನಸಂಖ್ಯೆಯ ಸಂಯೋಜನೆ - compasition of population
ಜೈವಿಕ ಲಕ್ಷಣ - Biological character

ಮೂಲಭೂತ ಸೌಕರ್ಯಗಳು - Infrastructure
ವಿಶಾಲಾತ್ಮಕ ತೀರ್ಮಾನ - macro decision
ಲಿಂಗ ಅನುಪಾತ - sex ratio
ಮೀಸಲಾತಿ - reservation
ದುಡಿಯುವ ವಯಸ್ಸು - working age
ಅನುತ್ಪಾದಕ ಅನುಭೋಗಿಗಳು - unproductive consumers
ಜೀವಿತಾವಧಿ ಜೀವನ ನಿರೀಕ್ಷೆ - Life expectancy
ಕಾರ್ಯ ಪ್ರವೃತ್ತ ಜನಸಂಖ್ಯೆ - working population
ಗ್ರಾಮ ನಗರ ಜನಸಂಖ್ಯಾ ರಚನೆ - rural-urban composition of populations
ನಗರೀಕರಣ - urbanisation
ಬಡತನ ರೇಖೆ - poverty line
ಬಡತನ ರೇಖೆ ಕೆಳಗೆ - Below poverty line (BPL)
ಧನಾತ್ಮಕ ಸಹ ಸಂಬಂಧ - Positively correclated
ಋಣಾತ್ಮಕ ಸಹ ಸಂಬಂಧ - negatively correlated
ಕಾರ್ಪೋರೇಟ್ ವಲಯ - Cororate sector
ಉಪ ನಗರ - sub urban
ಜನಸಾಂದ್ರತೆ - Density of population
ಪ್ರಾದೇಶಿಕ ಅಸಮಾನತೆ - Regional imbalance
ಭಯೋತ್ಪಾದಕತೆ -Terrorims
ಪುನರ್ವಸತಿ ಕೇಂದ್ರಗಳು - Rehabilitation Centres
ಉದ್ಯೋಗ ಆಧಾರಿತ ಜನಸಂಖ್ಯೆ -Occupational distribution of population
ಶ್ರಮ ಬಲ -work Force
ಪ್ರಾಥಮಿಕ ಉದ್ಯೋಗ - primary occuation
ದ್ವಿತೀಯ ವಲಯ - Secondary sector
ತೃತೀಯ ವಲಯ -Tertiary sector / Third sector
ಉದಾರೀಕರಣ - liberalisation
ಸೇವಾ ವಲಯ - Service sector
ಹೀರಿಕೊಳ್ಳುವ ಶಕ್ತಿ - Absorption capacity
ಬೆಳವಣಿಗೆ ದರ - Growth rate
ಕೊಳಚೆ ಪ್ರದೇಶಗಳು - slum areas
ಅವಲಂಬಿ ಜನಸಂಖ್ಯೆ - dependent population

ನಿರೋಧ್ / ಕಾಂಡೋಮ್ - Nirodh / condome
ತಾಯ್ತನ ಮತ್ತು ಶಿಶು ಆರೋಗ್ಯ - maternity and child health
ಸುರಕ್ಷತೆಯ ಕಾಲ - Safety period
ಉದರ ದರ್ಶಕ ಸಂತಾನಹರಣ ಚಿಕಿತ್ಸೆ - laproscopy
ಮಹಿಳಾ ಸಬಲೀಕರಣ -women empowerment
ಉತ್ತೇಜಕ ಮತ್ತು ನಿರುತ್ತೇಜಕಗಳು imcentives and disivicentives
ರಾಷ್ಟ್ರೀಯ ಜನಸಂಖ್ಯಾ ನೀತಿ - national population policy
ಏಡ್ಸ್ -Acquired Immaune deficiency syndrome
ಹೆಚ್‌ಐವಿ - Highly infected virues
ಸರ್ಕಾರೇತರ ಸಂಸ್ಥೆಗಳು - N.G.O., Non Governmental Organisation
ಜನಸಂಖ್ಯಾ ಆಯೋಗ - population commission
ತಲೆಗಳನ್ನು ಎಣಿಸುವ ವಿಧಾನ - head count method
ಮಾನವ ಅಭಿವೃದ್ಧಿ ಸೂಚ್ಯಂಕ - HDI/Human Development Index
ಸಾಪೇಕ್ಷ ಬಡತನ - Relative poverty
ನಿರಪೇಕ್ಷ ಬಡತನ - Absolute poverty
ರಾಷ್ಟ್ರೀಯ ಮಾದರಿ ಸಮೀಕ್ಷಾ ಸಂಘಟನೆ - NSSO / National Sample survey organisation
ಕೇಂದ್ರೀಯ ಅಂಕಿ ಸಂಖ್ಯೆ ಸಂಘಟನೆ - CSO / Central statistical organisation
ಬಡತನದ ವಿಸ್ತಾರ, ಆಳ ಮತ್ತು ತೀವ್ರತೆ - Extent, depth, and intensity of poverty
ರಾಷ್ಟ್ರೀಯ ಅನ್ವಯಿಕ ಆರ್ಥಿಕ ಸಂಶೋಧನಾ ಕೇಂದ್ರ - NCAER/ National council of applical economic research
ಮೇಲ್ಪದರಿಂದ ಕೆಳ ಪದರಕ್ಕೆ ಆದಾಯ ಹಂಚಿಕೆ - Trickle down effect of income
ಪರಿಣಾಮ ಬೇಡಿಕೆಯ ಕೊರತೆ - Deficiency in effective demand
ಋತುಮಾನದ ನಿರುದ್ಯೋಗ - Seasonal un-employment
ಮರೆ ಮಾಚಿದ ನಿರುದ್ಯೋಗ - Disguised un-employment
ತೀಕ್ಷ್ಣ ನಿರುದ್ಯೋಗ - chronic un-employment
ತೆರೆದ ನಿರುದ್ಯೋಗ - open un-employment
ಶಿಕ್ಷಿತ ನಿರುದ್ಯೋಗ - Educated un-employment
ಘರ್ಷಣಾತ್ಮಕ ನಿರುದ್ಯೋಗ - Frictional un-employment
ಅರೆ ಉದ್ಯೋಗ - Undes employment

ಆವರ್ತ ನಿರುದ್ಯೋಗ - cyclical un-employment
ರೂಢಿಗತ ನಿರುದ್ಯೋಗ - usual status un-employment
ಪ್ರಸ್ತುತ ವಾರದ ಸ್ಥಿತಿಯ ನಿರುದ್ಯೋಗ - current weekly status un-employment
ಪ್ರಸ್ತುತ ದೈನಂದಿನ ಸ್ಥಿತಿಯ ನಿರುದ್ಯೋಗ - current daily status un-employment
ಉದ್ಯೋಗ ರಹಿತ ಅಬಿವೃದ್ಧಿ - Jobless growth
ಆರ್.ಬಿ.ಐ - Reserve Bank of India
ಕೆಳ ಅಂದಾಜು - Under estimate
ಅನಿಶ್ಚಿತ ಶ್ರಮಿಕರು -Casual Laboureus
ಸಭ್ಯ ಉದ್ಯೋಗ - Decent work
ಸಾಮಾಜಿಕ ರಕ್ಷಣೆ - Social protection
ಉದ್ಯೋಗ ಭರವಸೆ ಯೋಜನೆ - employment gurantee scheme
ಕೂಲಿ ಉದ್ಯೋಗ ಕಾರ್ಯಕ್ರಮ - Wage employment programme
ಕ್ಷ ಕಿರಣ - X-ray
ಟೆಲಿ ಮೆಡಿಸಿನ್ - Telemedicine
ಸಿಟಿಸ್ಕ್ಯಾನ್ -C.T. Scan
ಆರೋಗ್ಯ ಹೂಡಿಕೆ ವಂಚಿತ ಸೂಚಿ - Health investment diprivation index
ತಲಾ ವೆಚ್ಚ ವಂಚನೆ ಸೂಚಿ - per caita deprivation indices
೫೫ ನೇ ಸುತ್ತಿನ ಸಮೀಕ್ಷೆ - 55th round survey
ಹೊರಗಿನ ಸೇವೆ ಮತ್ತು ಒಳಗಿನ ಸೇವೆ - External services and Internal services
ರಾಷ್ಟ್ರೀಯ ಕುಟುಂಬ ಆರೋಗ್ಯ ಸಮೀಕ್ಷೆ - National family health survey
ಸಾಮಾನ್ಯ ಕನಿಷ್ಠ ಕಾರ್ಯಕ್ರಮ - Common Minimum programme
ರಾಷ್ಟ್ರೀಯ ಶಿಕ್ಷಣ ಕಮಿಷನ್ - National Education Commission
ಕಚ್ಚಾ ಜನನ ದರ ಮತ್ತು ಮರಣ ದರ - Crude Birth rate and Death rate

## ೨.೫. ಪ್ರಶ್ನೆಗಳು

**I. ಈ ಕೆಳಗಿನ ಪ್ರಶ್ನೆಗಳಿಗೆ ತಲಾ ಒಂದು ವಾಕ್ಯದಲ್ಲಿ ಉತ್ತರಿಸಿ (೧ ಅಂಕ)**

೧. ಮಾನವ ಸಂಪನ್ಮೂಲ ಎಂದರೇನು?

೨. ೨೦೦೧ ಜನಗಣತಿ ಪ್ರಕಾರ ಭಾರತದ ಜನಸಂಖ್ಯೆ ಎಷ್ಟಿದೆ?

೩. ಮಹಾ ಇಬ್ಭಾಗದ ವರ್ಷ ಯಾವುದು?

೪. ಜನನ ದರ ಎಂದರೇನು?

೫. ಲೈಂಗಿಕ ಅನುಪಾತ ಪರಿಭಾವನೆ ವಿವರಿಸಿ.
೬. ಶಿಶು ಮರಣ ದರ ಎಂದರೇನು?
೭. ಜನಸಾಂದ್ರತೆ ಎಂದರೇನು?
೮. ಪ್ರಾಥಮಿಕ ಉದ್ಯೋಗ ಎಂದರೇನು?
೯. ವೃತ್ತಿ ನಿರತರು ಎಂದರೆ ಯಾರು?
೧೦. ಶ್ರಮಶಕ್ತಿಯನ್ನು ಹೇಗೆ ವರ್ಗಾಯಿಸಬಹುದು?
೧೧. ಉದರ ದರ್ಶಕ ಸಂತಾನಹರಣ ಚಿಕಿತ್ಸೆ ಎಂದರೇನು?
೧೨. ಸಾರ್ವತ್ರಿಕ ಚುಚ್ಚುಮದ್ದು ಕಾರ್ಯಕ್ರಮ ಯಾವುದು?
೧೩. ಬಡತನ ರೇಖೆ ಯಾವುದು?
೧೪. ನಿರಪೇಕ್ಷ ಬಡತನ ಎಂದರೇನು?
೧೫. ನಿರುದ್ಯೋಗದ ಅರ್ಥ ವಿವರಿಸಿ.
೧೬. ಮರೆ ಮಾಚಿದ ನಿರುದ್ಯೋಗದ ಅರ್ಥ ನೀಡಿ.
೧೭. ಅರೆ ಉದ್ಯೋಗ ಎಂದರೇನು?
೧೮. ರೂಢಿಗತ ನಿರುದ್ಯೋಗದ ಅರ್ಥವೇನು?
೧೯. ಪ್ರಸ್ತುತ ದೈನಂದಿನ ಸ್ಥಿತಿ ನಿರುದ್ಯೋಗ ಯಾವುದು?
೨೦. NSSO ವಿಸ್ತರಿಸಿ ಬರೆಯಿರಿ.
೨೧. CSO ಎಂದರೇನು?
೨೨. ಕನಿಷ್ಠ ಅವಶ್ಯಕತೆ ಕಾರ್ಯಕ್ರಮ ಯಾವುದು?
೨೩. ಟ್ರೈಸೆಮ್ ಎಂದರೇನು?
೨೪. ಆರೋಗ್ಯ ವೆಚ್ಚ ಸೂಚಿ ಅರ್ಥ ವಿವರಿಸಿ.
೨೫. ಸಾಕ್ಷರತೆ ಅರ್ಥ ವಿವರಿಸಿ.
೨೬. ಭಾರತದಲ್ಲಿ ಪ್ರಸ್ತುತ ಜೀವಿತಾವಧಿ ಎಷ್ಟಿದೆ?
೨೭. ಕಚ್ಚಾ ಜನನ ದರದ ಪರಿಭಾವನೆ ತಿಳಿಸಿ.
೨೮. ಕಚ್ಚಾ ಮರಣ ದರ ಎಂದರೇನು?

**II. ಈ ಕೆಳಗಿನ ಪ್ರಶ್ನೆಗಳಿಗೆ ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ (೨ ಅಂಕಗಳು)**

೨೯. ಇತರೇ ದೇಶಗಳೊಂದಿಗೆ ಹೋಲಿಸಿ ಭಾರತದ ಜನಸಂಖ್ಯೆಯ ಲಕ್ಷಣ ವಿವರಿಸಿ.
೩೦. ಜನನ ಪ್ರಮಾಣ ಮತ್ತು ಮರಣ ಪ್ರಮಾಣದ ಸಂಬಂಧ ವಿವರಿಸಿ.
೩೧. ಭಾರತದ ಜನಸಂಖ್ಯೆ ಸಂಯೋಜನೆಯ ಸಂಕ್ಷಿಪ್ತ ವಿವರಣೆ ನೀಡಿ.
೩೨. ಲೈಂಗಿಕ ಅನುಪಾತ ಕಂಡು ಹಿಡಿಯುವ ಸೂತ್ರ ನೀಡಿ.
೩೩. ಭಾರತದ ಜನಸಾಂದ್ರತೆಯನ್ನು ತಿಳಿಸಿ.

೩೪. ಭಾರತದ ವೃತ್ತಿ ರಚನೆಯ ಲಕ್ಷಣಗಳನ್ನು ವಿವರಿಸಿ.
೩೫. ಕುಟುಂಬ ಕಲ್ಯಾಣ ಯೋಜನೆಯ ಮುಖ್ಯ ಲಕ್ಷಣಗಳಾವುವು?
೩೬. ಕುಟುಂಬ ಯೋಜನೆ ಜನಪ್ರಿಯಗೊಳಿಸುವ ಮಾರ್ಗ ತಿಳಿಸಿ.
೩೭. ಜನನ ನಿಯಂತ್ರಣದ ಯಾವುದಾದರೂ ನಾಲ್ಕು ವಿಧಗಳನ್ನು ತಿಳಿಸಿ.
೩೮. ರಾಷ್ಟ್ರೀಯ ಜನಸಂಖ್ಯಾ ನೀತಿ ೨೦೦೨ ರ ನಾಲ್ಕು ಮುಖ್ಯ ಲಕ್ಷಣಗಳನ್ನು ತಿಳಿಸಿ.
೩೯. ಬಡತನದ ಅಧ್ಯಯನದ ನಾಲ್ಕು ಮುಖ್ಯ ಅರ್ಥಶಾಸ್ತ್ರಜ್ಞನ್ನು ಹೆಸರಿಸಿ.
೪೦. ಮಾನವ ಅಭಿವೃದ್ಧಿ ಸೂಚ್ಯಂಕದ ನಾಲ್ಕು ಮುಖ್ಯಾಂಶಗಳನ್ನು ವಿವರಿಸಿ.
೪೧. ನಿರುದ್ಯೋಗದ ನಾಲ್ಕು ವಿಧಗಳು ಯಾವುವು?
೪೨. ಬಡತನ ನಿರ್ಮೂಲನೆಯ ಯಾವುದಾದರೂ ನಾಲ್ಕು ಕಾರ್ಯಕ್ರಮಗಳನ್ನು ತಿಳಿಸಿ.
೪೩. ಉದ್ಯೋಗ ಭರವಸೆ ಯೋಜನೆಯ ಮುಖ್ಯಾಂಶಗಳು ಯಾವುವು?
೪೪. ಶಿಕ್ಷಣ ಮತ್ತು ಬಡತನದ ಸಂಬಂಧ ತಿಳಿಸಿ.
೪೫. ಸ್ತ್ರೀ ಮತ್ತು ಸಾಕ್ಷರತೆ ಪ್ರಮಾಣ ತಿಳಿಸಿ.
೪೬. ಕಚ್ಚಾ ಮರಣ ದರವನ್ನು ಕಂಡು ಹಿಡಿಯುವ ವಿಧಾನ ತಿಳಿಸಿ.

**೩. ಈ ಕೆಳಗಿನ ಪ್ರಶ್ನೆಗಳಿಗೆ ೨೦ ವಾಕ್ಯಗಳಲ್ಲಿ ಉತ್ತರಿಸಿ (೫ ಅಂಕಗಳು)**

೪೭. ಭಾರತದಲ್ಲಿ ಜನಸಂಖ್ಯಾ ಬೆಳವಣಿಗೆಯ ಲಕ್ಷಣ ವಿವರಿಸಿ.
೪೮. ಲಿಂಗದ ಆಧಾರದ ಮೇಲೆ ಭಾರತದ ಜನಸಂಖ್ಯೆಯ ಸಂಯೋಜನೆ ವಿವರಿಸಿ.
೪೯. ಗ್ರಾಮ ಮತ್ತು ನಗರಗಳ ಜನಸಂಖ್ಯಾ ರಚನೆಯನ್ನು ವಿವರಿಸಿ.
೫೦. ಭಾರತದಲ್ಲಿ ರಾಜ್ಯಗಳ ಜನಸಾಂದ್ರತೆಯನ್ನು ವಿಶ್ಲೇಷಿಸಿ.
೫೧. ಭಾರತದಲ್ಲಿ ಹಲವಾರು ವೃತ್ತಿಗಳಲ್ಲಿ ತೊಡಗಿಸಿಕೊಂಡಿರುವ ಜನಸಂಖ್ಯೆಯನ್ನು ವಿಶ್ಲೇಷಿಸಿ.
೫೨. ಜನಸಂಖ್ಯಾ ಬೆಳವಣಿಗೆಯನ್ನು ನಿಯಂತ್ರಿಸುವ ಆರ್ಥಿಕ ಕ್ರಮಗಳು ಯಾವುವು?
೫೩. ನಿರುದ್ಯೋಗವನ್ನು ವಿಶ್ಲೇಷಿಸಿ.
೫೪. ರೂಢಿದರ್ಜೆ, ವಾರದ ದರ್ಜೆ ಮತ್ತು ದೈನಂದಿನ ದರ್ಜೆ ನಿರುದ್ಯೋಗವನ್ನು ವಿವರಿಸಿ.
೫೫. ಉದ್ಯೋಗ ಸೃಷ್ಟಿಯ ಕಾರ್ಯಕ್ರಮಗಳನ್ನು ವಿವರಿಸಿ.
೫೬. ಆರೋಗ್ಯ ಮತ್ತು ಶಿಕ್ಷಣದ ಬಗ್ಗೆ ಅಮಾರ್ತ್ಯಸೇನ್ ಅಭಿಪ್ರಾಯ ತಿಳಿಸಿ.
೫೭. ಸಾರ್ವಜನಿಕ ಮೂಲಭೂತ ಸೌಕರ್ಯವಾಗಿ ಶಿಕ್ಷಣದ ಪ್ರಾಮುಖ್ಯತೆ ವಿವರಿಸಿ.

**IV. ಈ ಕೆಳಗಿನ ಪ್ರಶ್ನೆಗಳಿಗೆ ೪೦ ವಾಕ್ಯಗಳಲ್ಲಿ ವಿವರಿಸಿ (೧೦ ಅಂಕಗಳು)**

೫೮. ಭಾರತದಲ್ಲಿ ಜನಸಂಖ್ಯಾ ಬೆಳವಣಿಗೆಯನ್ನು ವಿಮರ್ಶಾತ್ಮಕವಾಗಿ ಪರಿಶೀಲಿಸಿ.
೫೯. ಭಾರತದಲ್ಲಿ ವಿವಿಧ ವೃತ್ತಿನಿರತರ ಮಾಹಿತಿಯನ್ನು ಪರಿಶೀಲಿಸಿ.

೬೦. ರಾಷ್ಟ್ರೀಯ ಜನಸಂಖ್ಯಾ ನೀತಿಗಳ ಉದ್ದೇಶ ಮತ್ತು ಸಾಧನೆ ಪರಿಶೀಲಿಸಿ.

೬೧. ಬಡತನ ನಿರ್ಮೂಲನಾ ಕ್ರಮಗಳನ್ನು ವಿವರಿಸಿ.

೬೨. ವಿವಿಧ ರೀತಿಯ ನಿರುದ್ಯೋಗವನ್ನು ವಿವರಿಸಿ.

೬೩. ಸಾಮಾಜಿಕ ಮೂಲಭೂತ ಸೌಕರ್ಯವಾಗಿ ಆರೋಗ್ಯದ ಪ್ರಾಮುಖ್ಯತೆಯನ್ನು ವಿವರಿಸಿ.

೬೪. ಶಿಕ್ಷಣ ಮತ್ತು ಆರೋಗ್ಯ ಸ್ಥಿತಿಯ ಸೂಚಿಗಳು ಯಾವುವು?

೬೫. ಗ್ರಾಮೀಣ ಮತ್ತು ನಗರ ಸಾಕ್ಷರತೆಯನ್ನು ವಿಮರ್ಶಾತ್ಮಕವಾಗಿ ಪರಿಶೀಲಿಸಿ.

೬೬. ಶಿಶು ಮರಣ ದರ ಮತ್ತು ಬಾಣಂತಿಯರ ಮರಣ ದರದ ಸಮಸ್ಯೆಯನ್ನು ಪ್ರಸ್ತುತ ಸರ್ಕಾರದ ಕಾರ್ಯಕ್ರಮಗಳ ಹಿನ್ನಲೆಯಲ್ಲಿ ಪರಿಶೀಲಿಸಿ.

# ಅಧ್ಯಾಯ ೩

# ಭೂ ವ್ಯವಸಾಯ

**ಉದ್ದೇಶ**

೧. ಭೂಮಿಯ ಬಳಕೆಯ ವಿಧಾನ

೨. ನೀರಾವರಿಯ ಮಹತ್ವ ಮತ್ತು ವಿಧಗಳು

೩. ಆಹಾರ ಸಮಸ್ಯೆ ಮತ್ತು ಆಹಾರಭದ್ರತಾ ಕಾರ್ಯವಿಧಾನ

೪. ಕೃಷಿಯಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನದ ಅಳವಡಿಕೆ ಬಗ್ಗೆ ಅರಿವು ಮೂಡಿಸುವುದು.

**೩.೧. ಭೂಮಿಯ ಬಳಕೆ**

ಭೂಮಿಯ ಬಳಕೆಯ ಅರ್ಥ - ಭೂಮಿಯ ಬಳಕೆಯ ಪ್ರಧಾನ ಕ್ರಮಗಳು - ಬೆಳೆಯ ಪ್ರದೇಶ ಮತ್ತು ನಿವ್ವಳ ಬಿತ್ತನೆ ಪ್ರದೇಶಗಳ ನಡುವಣ ವ್ಯತ್ಯಾಸ - ಮಣ್ಣಿನ ಸವಕಳಿಯ ಅರ್ಥ ಸವಕಳಿಯ ಕಾರಣ ಮತ್ತು ಪರಿಣಾಮಗಳು - ಸಾರ ಸಂರಕ್ಷಣೆಯ ಕ್ರಮಗಳು.

**೩.೨. ನೀರಾವರಿ**

ಸಣ್ಣ, ಮಧ್ಯಮ, ದೊಡ್ಡ ಮತ್ತು ವಿವಿಧೋದ್ದೇಶ ನೀರಾವರಿಯ ಅರ್ಥ - ಒಣಭೂಮಿ ಬೇಸಾಯದ ಅರ್ಥ ಮತ್ತು ವ್ಯಾಪ್ತಿ. ನೀರಿನ ಮೂಲಗಳ ಸಂರಕ್ಷಣೆಯ ಅರ್ಥ ಮತ್ತು ಅಗತ್ಯ : ನೀರಿನ ಸಂರಕ್ಷಣಾ ಕ್ರಮಗಳು - ಹನಿ ನೀರಾವರಿ ಮತ್ತು ತುಂತುರು ನೀರಾವರಿ - ಬಾವಿ ಮತ್ತು ನೀರು ನಿರ್ವಹಣೆ ಮಳೆ ನೀರು ಕೊಯ್ಲು.

**೩.೩. ಆಹಾರ ಸಮಸ್ಯೆ**

ಆಹಾರ ಸಮಸ್ಯೆಯ ಸ್ವರೂಪ - ಒಟ್ಟು ಆಹಾರೋತ್ಪಾದನೆ ತಲಾ ಲಭ್ಯತೆ ಮತ್ತು ಅನುಭೋಗ ಆಹಾರ ಭದ್ರತಾ ಕ್ರಮಗಳ ಮೂಲಕ ಆಹಾರ ಲಭ್ಯತೆ - ಆಹಾರ ಧಾನ್ಯಗಳ ಸಾರ್ವಜನಿಕ ವಿತರಣಾ ವ್ಯವಸ್ಥೆ : ಅರ್ಥ ಮತ್ತು ಕಾರ್ಯವಿಧಾನ.

**೩.೪. ವಿಜ್ಞಾನ ಮತ್ತು ತಂತ್ರಜ್ಞಾನದ ಬಳಕೆ**

ಕೊಯ್ಲು ಪೂರ್ವದ ತಂತ್ರಜ್ಞಾನ ಹಸಿರುಕ್ರಾಂತಿ ಕೊಯ್ಲು ನಂತರದ ತಂತ್ರಜ್ಞಾನ ಹಸಿರುಕ್ರಾಂತಿ ಕೊಯ್ಲು ನಂತರದ ತಂತ್ರಜ್ಞಾನ ಉಗ್ರಾಣ, ಮಾರುಕಟ್ಟೆ ಮತ್ತು ಶೀತಲಗೃಹ ಸವಲತ್ತುಗಳು - ಇತರ ಅನ್ವಯಿಕೆಗಳು ಹಸಿರು, ನೀಲ, ಶ್ವೇತ ಮತ್ತು ಹಳದಿ ಕ್ರಾಂತಿ.

೩.೫. ಕಾರ್ಯ ಯೋಜನೆಗಳು ಮತ್ತು ನಿರೂಪಣೆಗಳು

೩.೫.೧. ಭಾರತದ ಭೂಪಟ ಬಿಡಿಸಿ ಅದರಲ್ಲಿ ದೊಡ್ಡ ಮತ್ತು ವಿವಿದೋದ್ದೇಶ ನೀರಾವರಿ ಯೋಜನೆಗಳನ್ನು ಹಾಗೂ ಒಣ ಬೇಸಾಯ ಭೂಪ್ರದೇಶವನ್ನು ಗುರುತಿಸಿ.

೩.೫.೨. ಸಮೀಪದಲ್ಲಿರುವ ನೀರಾವರಿ ಯೋಜನೆಗೆ ಭೇಟಿ ನೀಡಿ.

೩.೫.೩. ಸಾರ್ವಜನಿಕರ ವಿತರಣಾ ವ್ಯವಸ್ಥೆಯ ಕಾರ್ಯನಿರ್ವಹಣೆ ಅರಿತುಕೊಳ್ಳಲು ಸ್ಥಳೀಯ ನ್ಯಾಯ ಬೆಲೆ ಅಂಗಡಿ ಸಂದರ್ಶನ.

೩.೫.೪. ವಿಜ್ಞಾನ ಮತ್ತು ತಂತ್ರಜ್ಞಾನದ ಅನ್ವಯಿಕೆಯಾಗುತ್ತಿರುವ ಕೃಷಿ ಕ್ಷೇತ್ರಕ್ಕೆ ಭೇಟಿ.

## ೩.೧. ಭಾರತದಲ್ಲಿ ಭೂಮಿಯ ಬಳಕೆ

### ೩.೧.೧. ಭೂ ಬಳಕೆಯ ಕ್ರಮ

ಭಾರತವು ಒಂದು ಕೃಷಿ ಪ್ರಧಾನ ರಾಷ್ಟ್ರವಾಗಿದೆ. ಕೃಷಿಯು ಶೇ. ೬೭ ಮಂದಿ ಭಾರತೀಯರಿಗೆ ಬದುಕನ್ನು ನೀಡುತ್ತದೆ. ರಾಷ್ಟ್ರೀಯ ಉತ್ಪನ್ನಕ್ಕೆ ಶೇ. ೨೪ರಷ್ಟು ದೇಣಿಗೆ ಒದಗಿಸುತ್ತದೆ. ಕೈಗಾರಿಕೆ ಮತ್ತು ಸೇವಾ ಕ್ಷೇತ್ರಗಳ ಅಭಿವೃದ್ಧಿಗೆ ಕೃಷಿಯು ಮೂಲ ಸೆಲೆಯಾಗಿದೆ. ಕೃಷಿತೋನಾಸ್ತಿ ದುರ್ಭಿಕ್ಷಂ, ರೈತ ಭಾರತದ ಬೆನ್ನೆಲುಬು, ಬೇಸಾಯದವನು ಬೇಗ ಸಾಯ - ಎಂಬಿತ್ಯಾದಿ ಮಾತುಗಳು ಕೃಷಿಯ ಮಹತ್ವವನ್ನು ಸೂಚಿಸುತ್ತವೆ. ಭಾರತದ ಭದ್ರತೆ ಮತ್ತು ಉತ್ಕರ್ಷ ಕೃಷಿಯನ್ನೇ ಅವಲಂಬಿಸಿದೆ.

ಭೂಮಿಯನ್ನು ಹೇಗೆ ಉಪಯೋಗಿಸಲಾಗುತ್ತದೆ ಎನ್ನುವುದನ್ನು ಭೂಬಳಕೆಯ ಕ್ರಮ ತಿಳಿಸುತ್ತದೆ. ಕೃಷಿ ಭೂಮಿಯ ಬಳಕೆಯೆಂದರೆ ಕೃಷಿಗೆ ಲಭ್ಯವಾಗುವ ಭೂಪ್ರದೇಶದ ಉಪಯೋಗವೆಂದರ್ಥ.

ಭಾರತದ ಆರ್ಥಿಕಾಭಿವೃದ್ಧಿಯು ಕೃಷಿ ಭೂಮಿಯ ಬಳಕೆಯನ್ನು ಅವಲಂಬಿಸಿಕೊಂಡಿದೆ. ಕೃಷಿ ಭೂಮಿಯೆಂದರೆ (Agricultural land) ವ್ಯವಸಾಯವಾಗುತ್ತಿರುವ ಪ್ರದೇಶ ಎಂದು ತಿಳಿದುಕೊಳ್ಳಬೇಕು ವ್ಯವಸಾಯವಾಗುತ್ತಿರುವ ಪ್ರದೇಶವು.

೧. ನಿವ್ವಳ ಬೆಳೆ ಪ್ರದೇಶ (net cropped area) ಮತ್ತು

೨. ಬೀಳು ಬಿಟ್ಟ ಪ್ರದೇಶ (fallow land)

ಇವುಗಳನ್ನು ಒಳಗೊಂಡಿರುತ್ತದೆ.

ನಿವ್ವಳ ಬೆಳೆ ಪ್ರದೇಶ: ನಿವ್ವಳ ಬೆಳೆ ಪ್ರದೇಶವೆಂದರೆ ಭೂವ್ಯವಸಾಯಕ್ಕೆ ವರದಿ ವರ್ಷದಲ್ಲಿ ಲಭ್ಯವಾಗುವ ಭೂಮಿ ಎಂದರ್ಥ. ಅದನ್ನು ನಿವ್ವಳ ಬಿತ್ತನೆ ಪ್ರದೇಶ (net sown area) ಎಂದು ಕರೆಯಲಾಗುತ್ತದೆ. ಚಾಲ್ತಿ ವರ್ಷದಲ್ಲಿ ಬಿತ್ತನೆಯಾಗಿರುವ ಭೂಮಿಗೆ ನಿವ್ವಳ ಬಿತ್ತನೆಯ ಭೂಮಿ ಎಂದು ಹೆಸರು.

ಒಟ್ಟು ಬೆಳೆಯಾಗುವ ಪ್ರದೇಶ = ನಿವ್ವಳ ಬಿತ್ತನೆಯ ಪ್ರದೇಶ
+ ಒಂದಕ್ಕಿಂತ ಹೆಚ್ಚು ಬಾರಿ ನಿವ್ವಳ ಬಿತ್ತನೆಯ ಪ್ರದೇಶ.

ನಿವ್ವಳ ಬಿತ್ತನೆಯ ಪ್ರದೇಶವು ವರದಿ ವರ್ಷದಲ್ಲಿ ಬೇಸಾಯಕ್ಕೆ ಒಂದು ಸಲ ಬಳಕೆಯಾದ ಭೂಮಿಯಾಗಿರುತ್ತದೆ. ಒಂದಕ್ಕಿಂತ ಹೆಚ್ಚು ಸಲ ವರದಿ ವರ್ಷದಲ್ಲಿ ಬಿತ್ತನೆಗೆ ಬಳಕೆಯಾಗುವ ಭೂಮಿಯನ್ನು ಒಂದಕ್ಕಿಂತ ಹೆಚ್ಚು ಬಾರಿ ನಿವ್ವಳ ಬಿತ್ತನೆಯ ಪ್ರದೇಶವೆಂದು ಕರೆಯಲಾಗುತ್ತದೆ.

**ಬೀಳು ಬಿಟ್ಟ ಪ್ರದೇಶ :** ಒಂದರಿಂದ ಐದು ವರ್ಷಗಳವರೆಗೆ ಬೇಸಾಯ ಮಾಡದಿರುವ ಭೂಪ್ರದೇಶಕ್ಕೆ ಹಡಿಲು ಅಥವಾ ಬೀಳು ಬಿಟ್ಟ ಪ್ರದೇಶ (fallow land) ಎಂದು ಹೆಸರು. ಎಡಬಿಡದೆ ವ್ಯವಸಾಯ ಮಾಡುವುದರಿಂದ ಭೂಮಿಯ ಸಾರ ಕಡಿಮೆಯಾಗುತ್ತದೆ. ಕೃಷಿ ಸಂಬಂಧೀ ರೋಗಗಳು ಹೆಚ್ಚಾಗುತ್ತವೆ. ಈ ಸಮಸ್ಯೆಗಳ ನಿವಾರಣೆಗಾಗಿ ಭೂಮಿಯನ್ನು ಬೀಳು ಬಿಡಲಾಗುತ್ತದೆ.

### ಭಾರತದಲ್ಲಿ ಭೂಮಿಯ ಬಳಕೆ

ಭಾರತದಲ್ಲಿ ಭೂಮಿಯ ಬಳಕೆ ಹೇಗಾಗುತ್ತದೆಂಬುದನ್ನು ಕೋಷ್ಟಕ ೩.೧. ತೋರಿಸುತ್ತದೆ.

**ಕೋಷ್ಟಕ ೩.೧ : ಭಾರತದಲ್ಲಿ ಭೂಮಿಯ ಬಳಕೆ ೧೯೯೯-೨೦೦೦**

| ವಿವರಗಳು | ದಶಲಕ್ಷ ಹೆಕ್ಟೇರು | ಶೇಕಡಾ |
|---|---|---|
| ಒಟ್ಟು ಭೂಪ್ರದೇಶ | ೩.೨೯ | |
| ವರದಿಯಾದ ಭೂಪ್ರದೇಶ | ೩೦೬ | ೧೦೦ |
| ಕೃಷಿಗೆ ಲಭ್ಯವಾಗದ ಬರಡು ಭೂಮಿ | ೪೨ | ೧೪ |
| ಅರಣ್ಯ ಪ್ರದೇಶ | ೬೯ | ೨೩ |
| ಶಾಶ್ವತ ಗೋಮಾಳಗಳು ಮತ್ತು ಹುಲ್ಲುಗಾವಲುಗಳು | ೧೧ | ೦೩ |
| ಅಭಿವೃದ್ಧಿಪಡಿಸಬಹುದಾದ ವ್ಯರ್ಥಭೂಮಿ | ೧೮ | ೦೬ |
| ಬೀಳುಬಿಟ್ಟ ಭೂಮಿ | ೨೫ | ೦೮ |
| ನಿವ್ವಳ ಬಿತ್ತನೆ ಭೂಮಿ | ೧೪೧ | ೪೬ |
| ಒಂದಕ್ಕಿಂತ ಹೆಚ್ಚು ಬಾರಿ ಬಿತ್ತನೆಯಾದ ಭೂಮಿ | ೪೯ | ೧೬ |
| ಒಟ್ಟು ಬೆಳೆಯಾಗುವ ಭೂಮಿ | ೧೯೦ | ೬೨ |

ಆಧಾರ: ದತ್ ಮತ್ತು ಸುಂದರಂ ಇಂಡಿಯನ್ ಇಕಾನಮಿ ೨೦೦೫

ಭಾರತದ ಭೂಬಳಕೆಯ ಕ್ರಮವನ್ನು ಹೀಗೆ ವಿವರಿಸಬಹುದು.

೧. ಒಟ್ಟು ಭೂಮಿ ಮತ್ತು ಭೂ ಲಭ್ಯತೆ: ಹಳೆಯ ದಾಖಲೆಗಳ ಪ್ರಕಾರ ಭಾರತದ ಭೂವಿಸ್ತೀರ್ಣ ಒಟ್ಟು ೩೨೯ ದಶಲಕ್ಷ ಹೆಕ್ಟೇರುಗಳು. ಆದರೆ ಲಭ್ಯವಿರುವ ಭೂಮಿ ೩೦೬ ದಶಲಕ್ಷ ಹೆಕ್ಟೇರುಗಳು ಮಾತ್ರ. ಉಳಿದ ಭೂಮಿ ಪಾಕಿಸ್ತಾನ ಮತ್ತು ಚೀನಾದ ವಶದಲ್ಲಿದೆ. ಪಾಕ್ ಆಕ್ರಮಿತ ಕಾಶ್ಮೀರ, ಅಕ್ಸಾಯಿ ಚಿನ್ ಪ್ರದೇಶ ಮತ್ತು ಹಿಮಾಲಯ ಪ್ರದೇಶದಲ್ಲಿ ಚೀನಾ ಆಕ್ರಮಿತ ಭೂಮಿ ಇವಿಷ್ಟು ಭಾರತದ ವಶದಲ್ಲಿಲ್ಲ. ಒಟ್ಟು ೨೩ ದಶಲಕ್ಷ ಹೆಕ್ಟೇರು ಭೂಮಿಯನ್ನು ಭಾರತ ಕಳಕೊಂಡಿದೆ. ಹಾಗಿಗಿ ೩೦೬ ದಶಲಕ್ಷ ಹೆಕ್ಟೇರು ಭೂಮಿಯನ್ನು ವರದಿಯಾದ ಒಟ್ಟು ಭೂಮಿಯೆಂದು ಪರಿಗಣಿಸಲಾಗುತ್ತದೆ.

೨. ವ್ಯವಸಾಯ ಭೂಮಿ: ಲಭ್ಯವಿರುವ ೩೦೬ ದಶಲಕ್ಷ ಹೆಕ್ಟೇರು ಭೂಮಿಯಲ್ಲಿ ೧೪೧ ದಶಲಕ್ಷ ಹೆಕ್ಟೇರು ಅಥವಾ ಶೇ. ೪೬ರಷ್ಟು ಭೂಮಿಯು ನಿವ್ವಳ ಬಿತ್ತನೆಗೆ ಬಳಸಲ್ಪಡುತ್ತಿದೆ. ನಿವ್ವಳ ಬಿತ್ತನೆ ಪ್ರದೇಶವು ಬೆಳೆ ಮತ್ತು ಹಣ್ಣಿನ ತೋಟಗಳಿಗೆ ಒಂದು ಕೃಷಿ ವರ್ಷದಲ್ಲಿ ಬಳಕೆಯಾಗುವ ಭೂಮಿಯನ್ನು ಒಳಗೊಂಡಿರುತ್ತದೆ. ಒಂದಕ್ಕಿಂತ ಹೆಚ್ಚು ಬಾರಿ ಬೆಳೆ ಬರುವ ಪ್ರದೇಶವನ್ನು ಒಂದೇ ಬಾರಿಯೆಂದು ಇಲ್ಲಿ ಲೆಕ್ಕಕ್ಕೆ ತೆಗೆದುಕೊಳ್ಳಲಾಗುತ್ತದೆ.

ವರ್ಷದಲ್ಲಿ ಒಂದಕ್ಕಿಂತ ಹೆಚ್ಚು ಬಾರಿ ಬೆಳೆ ಕೊಡುವ ಪ್ರದೇಶವನ್ನು ಪ್ರತ್ಯೇಕವಾಗಿ ಅವುಗಳ ಬೆಳೆ ಸಂಖ್ಯೆಗನುಗುಣವಾಗಿ ಪರಿಗಣಿಸಲಾಗುತ್ತದೆ. ಒಟ್ಟು ವ್ಯವಸಾಯ ಭೂಮಿಯನ್ನು ನಿವ್ವಳ ಬಿತ್ತನೆ ಭೂಮಿ ಮತ್ತು ಒಂದಕ್ಕಿಂತ ಹೆಚ್ಚು ಬೆಳೆ ಕೊಡುವ ಭೂಮಿ ಇವೆರಡನ್ನು ಸೇರಿಸಲಾಗುತ್ತದೆ. ಭಾರತದಲ್ಲಿ ೧೯೯೦-೨೦೦೦ರಲ್ಲಿ ನಿವ್ವಳ ಬಿತ್ತನೆ ಭೂಮಿಯ ಪ್ರಮಾಣ ೧೪೧ ದಶಲಕ್ಷ ಹೆಕ್ಟೇರು ಅಥವಾ ಒಟ್ಟು ಭೂಮಿಯ ಶೇ. ೪೬ರಷ್ಟು ಮಾತ್ರವಾಗಿತ್ತು. ಒಂದಕ್ಕಿಂತ ಹೆಚ್ಚು ಸಲ ಬೆಳೆಯಾಗುವ ಭೂಪ್ರದೇಶವು ೪೯ ದಶಲಕ್ಷ ಹೆಕ್ಟೇರು ಅಥವಾ ಒಟ್ಟು ಭೂಮಿಯ ಶೇಕಡಾ ೧೬ರಷ್ಟು ಮಾತ್ರ. ಇವೆರಡನ್ನು ಒಟ್ಟು ಸೇರಿಸಿದರೆ ಒಟ್ಟು ಬಿತ್ತನೆ ಭೂಮಿ ದೊರೆಯುತ್ತದೆ. ಭಾರತದಲ್ಲಿ ಒಟ್ಟು ಬಿತ್ತನೆ ಭೂಮಿಯ ವಿಸ್ತೀರ್ಣ ೧೯೦ ದಶಲಕ್ಷ ಹೆಕ್ಟೇರುಗಳು. ಇದು ವರದಿಯಾದ ಒಟ್ಟು ಭೂಮಿಯ ಶೇ. ೬೨ರಷ್ಟು.

ಒಟ್ಟು ಭೂಮಿಯಲ್ಲಿ ನಿವ್ವಳ ಬಿತ್ತನೆ ಪ್ರದೇಶದ ವಿಸ್ತೀರ್ಣವು ರಾಜ್ಯದಿಂದ ರಾಜ್ಯಕ್ಕೆ ಬದಲಾಗುತ್ತಾ ಹೋಗುತ್ತದೆ. ಅರುಣಾಚಲ ಪ್ರದೇಶವು ಗುಡ್ಡನಾಡುಗಳಿಂದ ಆವೃತ್ತ ವಾಗಿದ್ದು, ಒಟ್ಟು ಭೂಮಿಯ ಶೇ. ೩ರಷ್ಟು ಭಾಗ ಮಾತ್ರ ಭೂವ್ಯವಸಾಯಕ್ಕೆ ಬಳಕೆ ಯಾಗುತ್ತಿದೆ. ಪಂಜಾಬ ಮತ್ತು ಹರಿಯಾಣಗಳಲ್ಲಿ ಶೇ. ೮೨ರಷ್ಟು ಭೂಭಾಗ ನಿವ್ವಳ ಬಿತ್ತನೆ ಪ್ರದೇಶವಾಗಿದೆ.

೩. ಬೀಳು ಭೂಮಿ: ಕೃಷಿಗೆ ಬಳಕೆಯಾಗುವ ಆದರೆ ಒಂದರಿಂದ ಐದು ವರ್ಷದವರೆಗಿನ ಅವಧಿಯಲ್ಲಿ ಕೃಷಿ ಮಾಡದ ಭೂಮಿಗೆ ಬೀಳು ಅಥವಾ ಹಡಿಲು ಭೂಮಿ (fallow land) ಎಂದು ಹೆಸರು. ವರದಿ ವರ್ಷ ಮಾತ್ರ ಕೃಷಿಗೆ ಬಳಕೆಯಾಗದ ಕೃಷಿ ಭೂಮಿಯು ಚಾಲ್ತಿ ಬೀಳುಭೂಮಿ (Current fallow land) ಎನಿಸಿಕೊಳ್ಳುತ್ತದೆ. ಭಾರತದಲ್ಲಿ ೨೫ ದಶಲಕ್ಷ ಹೆಕ್ಟೇರು ಪ್ರದೇಶ ಬೀಳು ಭೂಮಿಯಾಗಿದೆ. ಇದು ಒಟ್ಟು ಭೂಮಿಯ ಶೇ. ೮ರಷ್ಟಾಗುತ್ತದೆ.

ಕಡಿಮೆ ಉತ್ಪತ್ತಿ, ಬಡತನ, ನೀರಿನ ಅಲಭ್ಯತೆ, ಹೂಳು ತುಂಬಿರುವುದು ಇತ್ಯಾದಿ ಕಾರಣಗಳಿಂದಾಗಿ ಕೃಷಿ ಭೂಮಿಯು ಬೀಳು ಭೂಮಿಯಾಗುತ್ತದೆ.

**೪. ಅಭಿವೃದ್ಧಿ ಪಡಿಸಬಹುದಾದ ವ್ಯರ್ಥ ಭೂಮಿ** ಕೃಷಿಗೆ ಲಭ್ಯವಾಗುವ ಆದರೆ ಕಳೆದ ಐದಕ್ಕಿಂತಲೂ ಹೆಚ್ಚು ವರ್ಷ ಕೃಷಿಗೆ ಬಳಕೆಯಾಗದ ಭೂಮಿಗೆ ಅಭಿವೃದ್ಧಿಪಡಿಸಬಹುದಾದ ವ್ಯರ್ಥಭೂಮಿ (Cultivable waste lands) ಎಂದು ಹೆಸರು. ಅದರಲ್ಲಿ ಮನೆಗೆ ಹೊದಿಸುವ ಮುಳಿಹುಲ್ಲು ಬೆಳೆಯುವ ಪ್ರದೇಶ, ಬಿದಿರು, ಸೌದೆಗಾಗಿ ಬೆಳೆಯಲಾಗುವ ಗಿಡಮರಗಳ ಪ್ರದೇಶ ಇತ್ಯಾದಿಗಳು ಒಳಗೊಂಡಿವೆ. ಅಭಿವೃದ್ಧಿಪಡಿಸಬಹುದಾದ ವ್ಯರ್ಥ ಭೂಮಿಯ ವಿಸ್ತೀರ್ಣ ೧೮ ದಶಲಕ್ಷ ಹೆಕ್ಟೇರುಗಳು. ಒಟ್ಟು ಭೂಮಿಯಲ್ಲಿ ಅದರ ಪ್ರಮಾಣ ಶೇ. ೬ರಷ್ಟು.

**೫. ಹುಲ್ಲುಗಾವಲುಗಳು ಮತ್ತು ಗೋಮಾಳಗಳು:** ಎಮ್ಮೆ, ಕೋಣ, ಹಸು, ಎತ್ತು, ಆಡು, ಕುರಿ, ಕತ್ತೆ, ಕುದುರೆ ಮುಂತಾದ ಸಾಕುಪ್ರಾಣಿಗಳ ಮೇವು ಬೆಳೆಯಲು ಉಪಯೋಗವಾಗುವ ಭೂಮಿಗೆ ಹುಲ್ಲುಗಾವಲುಗಳು ಮತ್ತು ಗೋಮಾಳಗಳು ಎಂದು ಹೆಸರು. ಭಾರತದಲ್ಲಿ ಹುಲ್ಲುಗಾವಲುಗಳ ಮತ್ತು ಗೋಮಾಳಗಳ ವಿಸ್ತೀರ್ಣ ೧೧ ದಶಲಕ್ಷ ಹೆಕ್ಟೇರುಗಳು. ಇದು ಒಟ್ಟು ಭೂಪ್ರದೇಶದ ಶೇ. ೩ರಷ್ಟಾಗುತ್ತದೆ.

**೬. ಅರಣ್ಯ ಪ್ರದೇಶ:** ಸರಕಾರವು ವರ್ಗೀಕೃತಗೊಳಿಸಿದ ವನಪ್ರದೇಶವನ್ನು ಅರಣ್ಯ ಭೂಮಿಯೆಂದು ಕರೆಯಲಾಗುತ್ತದೆ. ಭಾರತದಲ್ಲಿ ಒಟ್ಟು ೬೯ ದಶಲಕ್ಷ ಹೆಕ್ಟೇರು ವನ ಪ್ರದೇಶವಿದೆ. ಇದು ಒಟ್ಟು ಭೂಮಿಯು ಶೇ. ೨೩ರಷ್ಟಾಗುತ್ತದೆ. ಸಹ್ಯ ಅಭಿವೃದ್ಧಿಗೆ ಒಟ್ಟು ಭೂಪ್ರದೇಶದಲ್ಲಿ ಶೇ. ೩೩ರಷ್ಟು ಮಾತ್ರ ಅರಣ್ಯ ಪ್ರದೇಶದ ಅಗತ್ಯವಿದೆ. ಈಗ ಎಷ್ಟಿದೆಯೋ ಖಚಿತವಾಗಿ ತಿಳಿಯದು. ಭಾರತದ ಅಭಿವೃದ್ಧಿ ಪರಿಸರ ಸಹ್ಯವಾಗಿಲ್ಲವೆಂಬುದು ಬಹುತೇಕ ಅರ್ಥವಿಜ್ಞಾನಿಗಳ ಅಭಿಪ್ರಾಯವಾಗಿದೆ.

**೭. ಬರಡು ಭೂಮಿ:** ಕೃಷಿಗೆ ಬಳಸಲಾಗದ ಭೂಮಿಯನ್ನು ಬರಡು ಭೂಮಿ (barren land) ಎಂದು ಕರೆಯಲಾಗುತ್ತದೆ. ಬರಡು ಭೂಮಿಯನ್ನು ಹೀಗೆ ವರ್ಗೀಕರಿಸಲಾಗುತ್ತದೆ.

**ಅ. ಶುಷ್ಕ ಭೂಮಿ:** ಕೃಷಿ ಮಾಡಲಾಗದ ಭೂಮಿಗೆ ಶುಷ್ಕ ಭೂಮಿಯೆಂದು ಹೆಸರು. ಪರ್ವತಗಳು ಮತ್ತು ಮರುಭೂಮಿ ಶುಷ್ಕ ಭೂಪ್ರದೇಶಗಳೆನಿಸುತ್ತವೆ.

**ಆ. ಕೃಷಿಯೇತರ ಭೂಮಿ :** ಕೃಷಿ ಹೊರತಾದ ಇತರ ಬಳಕೆಯ ಭೂಮಿಯನ್ನು ಕೃಷಿಯೇತರ ಭೂಪ್ರದೇಶವೆಂದು ಕರೆಯಲಾಗುತ್ತದೆ. ಮನೆ, ಕಟ್ಟಡ, ರಸ್ತೆ, ರೈಲು, ನದಿ, ಕಾಲುವೆ ಇತ್ಯಾದಿಗಳು ವ್ಯಾಪಿಸಿಕೊಂಡಿರುವ ಭೂಮಿ ಕೃಷಿಯೇತರ ಬಳಕೆ ಭೂಮಿಯೆನಿಸುತ್ತದೆ.

ಇದು ೧೯೯೯-೨೦೦೦ದಲ್ಲಿದ್ದ ಭೂಬಳಕೆಯ ಚಿತ್ರಣ. ಭಾರತದಲ್ಲಿ ಅರಣ್ಯ ಪ್ರದೇಶ ಮತ್ತು ಗೋಮಾಳಗಳು ಖಚಿತವಾಗಿ ಎಷ್ಟು ಭೂಪ್ರದೇಶವನ್ನು ವ್ಯಾಪಿಸಿಕೊಂಡಿವೆ ಎಂಬ ಬಗ್ಗೆ ಸಂಶೋಧನಾತ್ಮಕ ವರದಿ ಸಿದ್ಧಪಡಿಸಬೇಕಾದ ಅಗತ್ಯವಿದೆಯೆಂದು ಪರಿಸರವಾದಿಗಳು ಹೇಳುತ್ತಿರುತ್ತಾರೆ.

### ೩.೩.೨. ಮಣ್ಣಿನ ಸವಕಳಿ ಮತ್ತು ಸಾರಸಂರಕ್ಷಣೆ

ಮಣ್ಣಿನ ಸವಕಳಿ ಎಂದರೇನು? ಭೂಮಿಯ ಮೇಲ್ಪದರದ ಮಣ್ಣು ಕೊರೆದು ಹೋಗುವುದಕ್ಕೆ ಭೂಸವೆತ ಅಥವಾ ಮಣ್ಣಿನ ಸವಕಳಿ (Soil erosion) ಎಂದು ಹೆಸರು. ಮಣ್ಣಿನ ಸವಕಳಿಯಿಂದಾಗಿ ಮಣ್ಣಿನ ಸಾರ ಅಥವಾ ಫಲವತ್ತತೆ ನಶಿಸಿ ಹೋಗುತ್ತದೆ. ಮಣ್ಣಿನ ಸವಕಳಿಯು ಭಾರತದ ಕೃಷಿಯ ಉತ್ಪಾದಕತೆಯನ್ನು ಕಡಿಮೆ ಮಾಡುತ್ತದೆ. ಭಾರತದ ಭೂಸವಕಳಿಯ ಅಪಾಯಗಳ ಬಗ್ಗೆ ಡಾ. ವೋಲ್ಕರ್, ಸರ್ ಜಾನ್ ರಸ್ಸೆಲ್ ಮೊದಲಾದ ಕೃಷಿ ವಿಜ್ಞಾನಿಗಳು ಸಾಕಷ್ಟು ಅಧ್ಯಯನ ನಡೆಸಿದ್ದಾರೆ ಮತ್ತು ಕ್ರಮಗಳನ್ನು ಸೂಚಿಸಿದ್ದಾರೆ.

**ಮಣ್ಣಿನ ಸವಕಳಿಯ ಕಾರಣಗಳು**

**ನೈಸರ್ಗಿಕ ಕಾರಣಗಳು** : ಭೂಸವಕಳಿಯ ನಾಲ್ಕು ನೈಸರ್ಗಿಕ ಕಾರಣಗಳಿವು:

**೧. ಎಡೆಬಿಡದೆ ಸುರಿಯುವ ಧಾರಾಕಾರ ಮಳೆ :** ಕುಂಭ ದ್ರೋಣವು ಮಣ್ಣಿನ ಮೇಲಿನ ಪದರವನ್ನು ಕೊಚ್ಚಿಕೊಂಡು ಹೋಗುತ್ತದೆ. ಭೂಸವೆತಕ್ಕೆ ಕಾರಣವಾಗುತ್ತದೆ.

**೨. ವಿಪರೀತ ಬೀಸುವ ಗಾಳಿ :** ಬಟಾ ಬಯಲು ಪ್ರದೇಶಗಳಲ್ಲಿ ಬೀಸುವ ವಿಪರೀತ ಗಾಳಿಯಿಂದಾಗಿ ಮಣ್ಣಿನ ಮೇಲ್ಪದರ ನಾಶವಾಗುತ್ತದೆ. ಮಣ್ಣು ನಿಧಾನವಾಗಿ ಮರಳಾಗಿ, ಮರುಭೂಮಿ ಸೃಷ್ಟಿಯಾಗುತ್ತದೆ.

**೩. ಮಹಾಪೂರ :** ಮಹಾಪೂರವು ಮಣ್ಣಿನ ಮೇಲ್ಪದರವನ್ನು ನಾಶ ಮಾಡುತ್ತದೆ. ಹೊಳೆ, ಹಳ್ಳ, ತೋಡು, ನದಿಗಳ ದಂಡೆಗಳನ್ನು ಕುಸಿಯುವಂತೆ ಮಾಡುತ್ತದೆ.

**೪. ಹವಾಮಾನದ ವೈಪರೀತ್ಯ :** ಅತಿವೃಷ್ಟಿ ಮತ್ತು ಅನಾವೃಷ್ಟಿ ಮಣ್ಣಿನ ಮೇಲಿರುವ ಹುಲ್ಲನ್ನು ನಾಶ ಮಾಡಿ ಬಿಡುತ್ತವೆ. ಪರಿಣಾಮವಾಗಿ ಮಣ್ಣಿನ ಸವಕಳಿ ಉಂಟಾಗುತ್ತದೆ.

**ಮಣ್ಣಿನ ಸವಕಳಿಗೆ ಕಾರಣಗಳೇನು?**




**ನಕ್ಷೆ ೩.೧ : ಭೂಸವೆತಕ್ಕೆ ಕಾರಣಗಳು**

**ಮಾನವ ನಿರ್ಮಿತ ಅನಾಹುತಗಳು** ಮಾನವನ ತನ್ನ ಸ್ವಾರ್ಥದಿಂದ ಮಣ್ಣಿನ ಸವಕಳಿಗೆ ಕಾರಣನಾಗಿದ್ದಾನೆ. ಮಣ್ಣಿನ ಸವಕಳಿಗೆ ಕಾರಣವಾಗುವ ಮಾನವಕೃತ ಅಪರಾಧಗಳಿವು.

**೧. ಅರಣ್ಯನಾಶ:** ಗಿಡಮರಗಳು ತಮ್ಮ ಬೇರುಗಳ ಮೂಲಕ ಮಣ್ಣಿನ ಸನಕಳಿ ಯಾಗದಂತೆ ತಡೆಯುತ್ತವೆ. ದುಷ್ಟಮಾನವ ತನ್ನ ಲಾಲಸೆಯಿಂದ ಅರಣ್ಯನಾಶಕ್ಕೆ ಮತ್ತು ತನ್ಮೂಲಕ ಮಣ್ಣಿನ ಸವಕಳಿಗೆ ಕಾರಣನಾಗಿದ್ದಾನೆ.

**೨. ಹುಲ್ಲುಗಾವಲು ನಾಶ:** ಸ್ವಾರ್ಥಿ ಮಾನವ ಹುಲ್ಲುಗಾವಲುಗಳನ್ನು ಅತಿಕ್ರಮಿಸಿ ನುಂಗಿ ನೀರ್ಕುಡಿದಿದ್ದಾನೆ. ಪಶುಮಂದೆಗಳಿಗೆ ಸರಿಯಾಗಿ ಹುಲ್ಲು ಸಿಗುತ್ತಿಲ್ಲ. ಅತಿಯಾದ ಮೇಯಿಸುವಿಕೆಯಿಂದಾಗಿ (over grazing) ಮಣ್ಣಿನ ಸವಕಳಿ ವಿರೀತವಾಗಿದೆ.

**೩. ಅವೈಜ್ಞಾನಿಕ ಕೃಷಿ ವಿಧಾನ:** ಮೂರ್ಖ ಮಾನವ ಸಾವಯವ ಕೃಷಿ ವಿಧಾನವನ್ನು ಮರೆತಿದ್ದಾನೆ. ರಸಗೊಬ್ಬರ ಬಳಕೆ ಹೆಚ್ಚಿಸಿದ್ದಾನೆ. ಇದು ಮಣ್ಣಿನ ಸಾರವನ್ನು ಕಡಿಮೆ ಮಾಡಿದೆ.

**೪. ಅಪಾಯಕಾರಿ ರಾಸಾಯನಿಕಗಳ ಬಳಕೆ :** ಪರಮ ಬೋದಾಳ ಮಾನವರು ಕೀಟ ನಾಶಕಗಳ ಹೆಸರಲ್ಲಿ ಅತ್ಯಂತ ಅಪಾಯಕಾರಿಯಾದ ಎಂಡೋಸಲ್ಫಾನ್‌ನಂತಹ ರಾಸಾಯನಿಕಗಳನ್ನು ಬಳಸುತ್ತಿದ್ದಾರೆ. ಮಾನವರನ್ನೇ ಅಂಗಹೀನರನ್ನಾಗಿ ಮಾಡುವ ಇಂತಹ ರಾಸಾಯನಿಕಗಳು ಮಣ್ಣಿನ ಸಾರ ಕಡಿಮೆಯಾಗಲು ಕಾರಣವಾಗಿದೆ.

**ಭೂಸವಕಳಿಯ ಪರಿಣಾಮಗಳು**

ಭಾರತದಲ್ಲಿ ಸುಮಾರು ೨೫೦ ದಶಲಕ್ಷ ಹೆಕ್ಟೇರು ಭೂಮಿ ಮಣ್ಣಿನ ಸವಕಳಿಗೆ ಒಳಗಾಗಿದೆ. ಭೂಸವಕಳಿಯ ಪರಿಣಾಮಗಳಿವು

**೧. ಅಂತರ್ಜಲ ಮಟ್ಟ ಕುಸಿತ:** ಭೂ ಸವೆತದಿಂದಾಗಿ ಭೂಮಿ ಬಿರುಕು ಬಿಡುತ್ತಾ ಹೋಗುತ್ತದೆ. ಸೂರ್ಯ ಕಿರಣಗಳು ನೇರವಾಗಿ ಭೂಮಿಯೊಳಗೆ ಪ್ರವೇಶಿಸಿ ಅಂತರ್ಜಲ ಮಟ್ಟ ಕುಸಿತಕ್ಕೆ ಕಾರಣವಾಗುತ್ತವೆ.

**೨. ಉತ್ಪಾದನೆ ಕುಂಠಿತ:** ಭೂಸವೆತದಿಂದಾಗಿ ಮಣ್ಣಿನ ಸಾರ ಕಡಿಮೆಯಾಗುತ್ತಾ ಹೋಗುತ್ತದೆ. ಪರಿಣಾಮವಾಗಿ ಕೃಷಿಯ ಉತ್ಪಾದಕತೆ ಕಳವಳಕಾರಿಯಾಗಿ ಕಡಿಮೆಯಾಗಿದೆ.

**೩. ಮರುಭೂಮಿ ನಿರ್ಮಾಣ:** ಭೂ ಸವೆತದಿಂದಾಗಿ ಗಾಳಿ ಮತ್ತು ಸೂರ್ಯರಶ್ಮಿ ಮಣ್ಣನ್ನು ಪ್ರವೇಶಿಸಿ ಮಣ್ಣನ್ನು ಸಡಿಲಗೊಳಿಸುತ್ತವೆ. ಮಣ್ಣು ನಿಧಾನವಾಗಿ ಮರಳಾಗಿ ಪರಿವರ್ತನೆಯಾಗುತ್ತದೆ. ಮರುಭೂಮಿ ಸೃಷ್ಟಿಯಾಗುತ್ತದೆ.

**೪. ಭೂ ಕುಸಿತ:** ಮಣ್ಣಿನ ಸವಕಳಿಯು ಭೂಕುಸಿತಕ್ಕೆ ಕಾರಣವಾಗುತ್ತದೆ. ಹಿಮಾಲಯ ಪರ್ವತ ಶ್ರೇಣಿಯ ತಪ್ಪಲು ಪ್ರದೇಶದಲ್ಲಿ ಭೂಕುಸಿತದಿಂದ ಹಳ್ಳಿಗಳು ಸಂಪೂರ್ಣ ನಿರ್ನಾಮವಾಗುತ್ತಿರುವುದು ಪ್ರತಿ ವರ್ಷದ ದುರಂತವಾಗಿದೆ.

**ಭೂಸಾರ ಸಂರಕ್ಷಣೆಯ ಕ್ರಮಗಳು**

ಮಾನವಕೃತ ಅಪರಾಧಗಳಿಂದ ಮತ್ತು ನೈಸರ್ಗಿಕ ಕಾರಣಗಳಿಂದ ಉಂಟಾಗುವ ಮಣ್ಣಿನ ಸವಕಳಿಯನ್ನು ತಪ್ಪಿಸಿ ಭೂಮಿಯ ಫಲವತ್ತತೆಯನ್ನು ಕಾಪಾಡುವುದಕ್ಕೆ ಮಣ್ಣು ಅಥವಾ ಭೂಸಾರ ಸಂರಕ್ಷಣೆ (Soil conservation) ಎಂದು ಹೆಸರು.

ಭೂಸಾರ ಸಂರಕ್ಷಣೆಯ ಪ್ರಮುಖ ಕ್ರಮಗಳು ಇವು

೧. **ಅರಣ್ಯ ಸಂರಕ್ಷಣೆ** : ಕಾಡು ಕಡಿತವನ್ನು ನಿಲ್ಲಿಸಿ, ಮರಗಿಡಗಳನ್ನು ನೆಡುವುದು ಭೂಸಾರ ಸಂರಕ್ಷಣೆಯ ಅತ್ಯಂತ ಪ್ರಮುಖ ಕ್ರಮವಾಗಿದೆ. ಯುರೋಪಿನಲ್ಲಿ ಒಂದು ಮರ ಕಡಿಯುವಾಗ ಎರಡು ಅದೇ ಜಾತಿಯ ಗಿಡಗಳನ್ನು ಕಡ್ಡಾಯವಾಗಿ ನೆಡಲೇಬೇಕು. ಆ ಕ್ರಮ ಭಾರತದಲ್ಲೂ ಅನುಷ್ಠಾನಕ್ಕೆ ಬರಬೇಕಾಗಿದೆ.

೨. **ದಂಡೆಗಳ ಸಂರಕ್ಷಣೆ** : ಹೊಳೆ, ಹಳ್ಳ, ನದಿ, ದಂಡೆಗಳ ಉದ್ದಕ್ಕೂ ಮರಗಳನ್ನು ನೆಡಬೇಕು. ಮುಖ್ಯವಾಗಿ ಮ್ಯಾಂಗ್ರೋವಾ ಮರಗಳನ್ನು ಸಂರಕ್ಷಿಸಿ ಬೆಳೆಸಲೇಬೇಕು.

೩. **ನೀರಿಂಗಿಸುವ ಯೋಜನೆಗಳು** : ಮಳೆಕೊಯ್ಲು ಮತ್ತು ನೀರಿಂಗಿಸುವ ಯೋಜನೆಗಳ ಮೂಲಕ ಮಳೆಯ ನೀರು ನಿಧಾನವಾಗಿ ಭೂಮಿಯೊಳಗಡೆ ಹೋಗುವಂತೆ ಮಾಡಬೇಕು. ಆಗ ಅಂತರ್ಜಲ ಮಟ್ಟ ಹೆಚ್ಚಿ ಮರಗಿಡ, ಪೊದರು, ಹುಲ್ಲುಗಳಿಗೆ ಸಾಕಷ್ಟು ನೀರು ದೊರಕುತ್ತದೆ.

೪. **ಭತ್ತ ಬೆಳೆಸಲು ಉತ್ತೇಜನ** : ಭತ್ತ ಬೆಳೆಸಲು ಉತ್ತೇಜನ ನೀಡಬೇಕು. ಭತ್ತದ ಸಸಿಗಳ (ನೇಜಿ) ಬೇರುಗಳು ಮಣ್ಣಿನ ಸವಕಳಿಯಾಗದಂತೆ ನೋಡಿಕೊಳ್ಳುತ್ತವೆ.

೫. **ಹುಲ್ಲುಗಾವಲುಗಳ ನಿರ್ಮಾಣ** : ಪ್ರತಿಯೊಂದು ಹಳ್ಳಿಗೆ ಒಂದು ಹುಲ್ಲುಗಾವಲು ಅಥವಾ ಗೋಮಾಳ ಇರುವಂತೆ ನೋಡಿಕೊಳ್ಳಬೇಕು. ಆಗ ಅತಿ ಮೇವಿನ ಸಮಸ್ಯೆ ನಿರ್ನಾಮವಾಗಿ ಮಣ್ಣಿನ ಸಾರ ಸಂರಕ್ಷಣೆಯಾಗುತ್ತದೆ.

೬. **ಕಿಂಡಿ ಅಣೆಕಟ್ಟುಗಳ ನಿರ್ಮಾಣ** : ಕಿಂಡಿ ಅಣೆಕಟ್ಟುಗಳು ಪರಿಸರವನ್ನು ಸಂರಕ್ಷಿಸುತ್ತವೆ. ಅಂತರ್ಜಲ ಮಟ್ಟ ಹೆಚ್ಚಿಸಿ ಮರಗಿಡ, ಪೊದೆ ಹುಲ್ಲುಗಳಿಗೆ ನೀರೊದಗಿಸಿ ಮಣ್ಣಿನ ಸಾರ ಸಂರಕ್ಷಿಸುತ್ತವೆ.

೭. **ಸಹಜ ಕೃಷಿಯ ಅಳವಡಿಕೆ** : ರಾಸಾಯನಿಕ, ರಸಗೊಬ್ಬರ, ಕೀಟನಾಶಗಳನ್ನು ಬಳಸಕೂಡದು. ಸಹಜ ಕೃಷಿಯ ಅಳವಡಿಕೆಯಿಂದ ಮಣ್ಣಿನ ಸಾರ ಸಂರಕ್ಷಣೆಯಾಗುತ್ತದೆ.

೮. ಜನಸಂಖ್ಯಾ ನಿಯಂತ್ರಣ : ಜನಸಂಖ್ಯಾ ಸ್ಫೋಟ ಎಲ್ಲಾ ಅನಾಹುತಗಳಿಗೆ ಮೂಲ ಕಾರಣ. ಮಾನವನಷ್ಟು ಭಯಾನಕ ಜೀವಿ ಮತ್ತೊಂದಿಲ್ಲ. ಜನಸಂಖ್ಯೆಯನ್ನು ತುರ್ತಾಗಿ ನಿಯಂತ್ರಿಸುವುದು ಮಣ್ಣಿನ ಸಂರಕ್ಷಣೆಯ ಒಂದು ಕ್ರಮವಾಗಿದೆ.

ಮಣ್ಣಿನ ಸಾರ ಸಂರಕ್ಷಣೆಯಾಗದಿದ್ದರೆ ಭೂಮಿ ಬರಡಾಗಿ ಮಾನವನು ಆಹಾರವಿಲ್ಲದೆ ಹಸಿವಿನಿಂದ ಸಾಯಬೇಕಾಗುತ್ತದೆ. ಮಣ್ಣಿನ ಸಾರಸಂರಕ್ಷಣೆ ಅತಿ ತುರ್ತಾಗಿ ಆಗಬೇಕಾದ ಕ್ರಮವಾಗಿದೆ.

## ೩.೨. ಭಾರತದ ನೀರಾವರಿ ವ್ಯವಸ್ಥೆ

### ೩.೨.೧. ನೀರಾವರಿ ವಿಧಗಳು

ನೀರಾವರಿ ಎಂದರೇನು? ಮಳೆ ತೀರಾ ಕಡಿಮೆಯಿರುವ ಮತ್ತು ಅನಿಶ್ಚಿತವಾಗಿರುವ ಪ್ರದೇಶಗಳಲ್ಲಿ ಕರೆ, ಬಾವಿ, ಕೊಳವೆಬಾವಿ, ಹೊಳೆ, ನದಿ, ಕಾಲುವೆ ಮುಂತಾದ ಜಲಮೂಲಗಳಿಂದ ಬೇಸಾಯಕ್ಕೆ ನೀರು ಒದಗಿಸುವುದನ್ನು 'ನೀರಾವರಿ' ಎಂದು ಕರೆಯಲಾಗುತ್ತದೆ. ಸಂಕುಚಿತ ಅರ್ಥದಲ್ಲಿ ನೀರಾವರಿಯನ್ನು ಕೃಷಿಗೆ ನೀರು ಪೂರೈಕೆ ಎಂದು ವ್ಯಾಖ್ಯಾನಿಸಲಾಗುತ್ತದೆ. ವಿಶಾಲಾರ್ಥದಲ್ಲಿ ನೀರಾವರಿಯು ನೀರು ಸಂಗ್ರಹ, ನೀರು ಪೂರೈಕೆ, ಪ್ರವಾಹ ನಿಯಂತ್ರಣ, ನೀರು ಇಂಗಿಸುವಿಕೆಯ ತಂತ್ರಗಳ ಅಳವಡಿಕೆ, ಭೂ ಸವಕಳಿ ನಿಯಂತ್ರಣ ಮತ್ತು ಭೂಸಾರ ಸಂರಕ್ಷಣೆ ಇತ್ಯಾದಿಗಳನ್ನು ಒಳಗೊಂಡಿದೆ.

**ಪ್ರಮುಖ ವಿಧಗಳು**

ನೀರಾವರಿಯಲ್ಲಿ ೧. ಸಣ್ಣ ನೀರಾವರಿ ೨. ಮಧ್ಯಮ ನೀರಾವರಿ ಮತ್ತು ೩. ಬೃಹತ್ ನೀರಾವರಿ ಎಂದು ಮೂರು ವಿಧ.

**೧. ಸಣ್ಣ ನೀರಾವರಿ (Minor Irrigation):** ೨೦೦೦ ಹೆಕ್ಟೇರಿಗಿಂತ ಕಡಿಮೆ ಭೂಪ್ರದೇಶಕ್ಕೆ ನೀರುಣಿಸುವ ವ್ಯವಸ್ಥೆಯನ್ನು ಸಣ್ಣ ನೀರಾವರಿ (Small irrigation) ಎಂದು ಕರೆಯಲಾಗುತ್ತದೆ. ಬಾವಿ ಮತ್ತು ಕೊಳವೆ ಬಾವಿ, ಹೊಳೆ, ಹಳ್ಳ, ತೋಡು, ಕೆರೆ ಮತ್ತು ಸರೋವರಗಳು ಸಣ್ಣ ನೀರಾವರಿಯ ಮೂಲಗಳಾಗಿವೆ.

**ಅ. ಬಾವಿ ಮತ್ತು ಕೊಳವೆ ಬಾವಿಗಳು:** ರೈತರಲ್ಲಿ ಬಹುತೇಕರು ಬಡವರಾಗಿರುವುದರಿಂದ ಭಾರತದಲ್ಲಿ ಬಾವಿ ಮತ್ತು ಕೊಳವೆ ಬಾವಿಗಳು ನೀರಾವರಿ ಮೂಲಗಳಾಗಿ ವ್ಯಾಪಕವಾಗಿ ಬಳಕೆಯಾಗುತ್ತವೆ. ಬಾವಿಗಳು ಮತ್ತು ಕೊಳೆವೆ ಬಾವಿಗಳು ರೈತರ ಸ್ವಂತ ಸ್ವತ್ತಾಗಿದ್ದು ಸರಕಾರವು ಬಾವಿ ರಚನೆಗೆ ಸಾಲ ನೀಡುತ್ತದೆ.

ಭೂಮಿಯನ್ನು ಆಳಕ್ಕೆ ತೆಗೆದು ಹೊಂಡ ಮಾಡಿ, ನೀರು ಪಡೆಯುವ ವ್ಯವಸ್ಥೆಗೆ ಬಾವಿ ನೀರಾವರಿ (well irrigation) ಎಂದು ಹೆಸರು. ಭೂಮಿಯ ಒಳಗೆ ಆಳವಾದ ರಂಧ್ರ ಮಾಡಿ ವಿದ್ಯುಚ್ಛಕ್ತಿಯ ಮೂಲಕ ನೀರು ಮೇಲೆ ಬರುವ ವ್ಯವಸ್ಥೆಗೆ ಕೊಳವೆ ನೀರಾವರಿ (tube well irrigation) ಎಂದು ಹೆಸರು. ಬಾವಿಯಿಂದ ಏತದ ಮೂಲಕ ಅಥವಾ ಪಂಪಿನ ಮೂಲಕ ನೀರೆತ್ತಬಹುದು. ಬಾವಿಗಳು ಮತ್ತು ಕೊಳವೆಬಾವಿಗಳು ಕೃಷಿ ಕ್ಷೇತ್ರದ ಹತ್ತಿರದಲ್ಲೇ ಇರುವುದರಿಂದ ಅನುಕೂಲಕರ ನೀರಾವರಿ ವಿಧವೆನಿಸಿದೆ. ಕೊಳವೆ ಬಾವಿ ನಿರ್ಮಾಣಕ್ಕೆ ಬಾವಿ ನಿರ್ಮಾಣಕ್ಕಿಂತ ಹೆಚ್ಚು ವೆಚ್ಚ ತಗಲುತ್ತದೆ. ಅಲ್ಲದೆ ಕೊಳವೆಬಾವಿ ನಿರ್ಮಾಣದಿಂದ ಅಂತರ್ಜಲ ಮಟ್ಟ ಕುಸಿಯುತ್ತದೆ. ೧೯೯೦-೯೧ರಲ್ಲಿ ಬಾವಿ ಮತ್ತು ಕೊಳವೆಬಾವಿಗಳು ಸುಮಾರು ೨೪ ದಶಲಕ್ಷ ಹೆಕ್ಟೇರು ಭೂಮಿಗೆ ನೀರುಣಿಸುತ್ತಿದ್ದವು. ಒಟ್ಟು ನೀರಾವರಿ ಮೂಲಗಳಲ್ಲಿ ಇವುಗಳ ಪಾಲು ಶೇ. ೫೧ರಷ್ಟು. ಈಗ ಬಾವಿ ಮತ್ತು ಕೊಳವೆ ಬಾವಿಗಳು

೩೧ ದಶಲಕ್ಷ ಹೆಕ್ಟೇರು ಭೂಮಿಗೆ ನೀರುಣಿಸುತ್ತಿವೆ. ಒಟ್ಟು ನೀರಾವರಿ ಮೂಲಗಳಲ್ಲಿ ಶೇ. ೫೭ರಷ್ಟು ಪಾಲು ಹೊಂದಿವೆ.

**೨. ಕೆರೆ ಮತ್ತು ಸರೋವರಗಳು:** ಕೆರೆಗಳು ತುಲನಾತ್ಮಕವಾಗಿ ನೀರಿನ ಸಣ್ಣ ಆಶ್ರಯ ಸ್ಥಾನಗಳಾಗಿವೆ. ಬಹುತೇಕ ಕೆರೆಗಳು ಮಾನವನಿಂದ ನಿರ್ಮಿತವಾಗಿರುತ್ತವೆ. ವಿಶಾಲವಾದ ದೊಡ್ಡ ಕೆರೆಗಳು ಸರೋವರಗಳಾಗಿವೆ. ಸರೋವರಗಳು ಪ್ರಕೃತಿಯ ಕೊಡುಗೆ ಗಳಾಗಿವೆ. ಸಾಧಾರಣವಾಗಿ ಸಣ್ಣ ಕೆರೆಗಳು ಖಾಸಗಿಯವರ ಕೈಯಲ್ಲಿರುತ್ತವೆ. ದೊಡ್ಡ ಕೆರೆಗಳು ಸರಕಾರದ ಸೊತ್ತು ಆಗಿರುತ್ತದೆ. ಇವು ಕೃಷಿ ನೀರು ಪೂರೈಕೆಯಲ್ಲಿ ಶೇ. ೭ರಷ್ಟು ಪಾಲು ಹೊಂದಿವೆ.

ಭಾರತದಲ್ಲಿ ಕರ್ನಾಟಕ, ತಮಿಳುನಾಡು, ಆಂಧ್ರ, ಒರಿಸ್ಸಾ, ಉತ್ತರಪ್ರದೇಶ ಮತ್ತು ಮಧ್ಯಪ್ರದೇಶಗಳಲ್ಲಿ ಕೆರೆ ನೀರಾವರಿ ಜನಪ್ರಿಯವಾಗಿದೆ. ಕೆರೆಗಳು ಬೇಸಿಗೆ ಕಾಲದಲ್ಲಿ ಒಣಗಿ ಹೋಗುವುದುಂಟು. ಅಲ್ಲದೆ ಕೆರೆಗಳಲ್ಲಿ ಹೂಳು ತುಂಬಿದರೆ ಅವು ನಿಷ್ಪ್ರಯೋಜಕ ವಾಗುತ್ತವೆ. ಕರ್ನಾಟಕದಲ್ಲಿ ಈ ಸಮಸ್ಯೆ ತುಂಬಾ ತೀವ್ರವಾಗಿದೆ.

**೩. ಕಾಲುವೆ ನೀರಾವರಿ:** ಹೊಳೆ ಅಥವಾ ನದಿಗಳಿಗೆ ಒಡ್ಡು ನಿರ್ಮಿಸಿ ಕಾಲುವೆಗಳ ಮೂಲಕ ವ್ಯವಸಾಯ ಭೂಮಿಗೆ ನೀರು ಹರಿಯಿಸುವುದಕ್ಕೆ ಕಾಲುವೆ ನೀರಾವರಿ(canal irrigation) ಎಂದು ಹೆಸರು. ಅಣೆಕಟ್ಟು ನಿರ್ಮಿಸಿ ಕಾಲುವೆಗಳ ಮೂಲಕ ನೀರೊದಗಿಸುವುದು ಮಧ್ಯಮ ಅಥವಾ ಬೃಹತ್ ನೀರಾವರಿಯ ವ್ಯಾಪ್ತಿಯಲ್ಲಿ ಬರುತ್ತದೆ.

ಎಂಟನೆಯ ಪಂಚವಾರ್ಷಿಕ ಯೋಜನೆಯವರೆಗೆ ಸಣ್ಣ ನೀರಾವರಿ ಯೋಜನೆಯಲ್ಲಿ ಒಟ್ಟು ೫೩ ದಶಲಕ್ಷ ಹೆಕ್ಟೇರು ಭೂಮಿಗೆ ಬೇಕಾಗುವಷ್ಟು ನೀರಾವರಿ ಸಾಮರ್ಥ್ಯ ಸೃಷ್ಟಿಸ ಲಾಗಿತ್ತು. ಆದರೆ ವಾಸ್ತವವಾಗಿ ಒಟ್ಟು ೪೮ ದಶಲಕ್ಷ ಹೆಕ್ಟೇರು ಭೂಮಿಗೆ ನೀರು ಒದಗಿಸ ಲಾಯಿತು. ಒಂಬತ್ತನೇ ಪಂಚವಾರ್ಷಿಕ ಯೋಜನೆಯವರೆಗೆ(೧೯೯೭-೨೦೦೨) ಒಟ್ಟು ೫೭ ದಶಲಕ್ಷ ಹೆಕ್ಟೇರುಗಳಿಗೆ ನೀರಾವರಿ ಸಾಮರ್ಥ್ಯ ಕಲ್ಪಿಸಲಾಗಿದ್ದು ೪೯ ದಶಲಕ್ಷ ಹೆಕ್ಟೇರು ಭೂಮಿಗೆ ನೀರುಪೂರೈಕೆ ವ್ಯವಸ್ಥೆಯಾಗಿದೆ.

**೨. ಮಧ್ಯಮ ಮತ್ತು ಬೃಹತ್ ನೀರಾವರಿ :** ೨೦೦೦ ಹೆಕ್ಟೇರುಗಳಿಂದ ೧೦೦೦೦ ಹೆಕ್ಟೇರುಗಳವರೆಗಿನ ಭೂಪ್ರದೇಶಕ್ಕೆ ನೀರೊದಗಿಸುವ ಯೋಜನೆಗಳಿಗೆ ಮಧ್ಯಮ ನೀರಾವರಿ ಯೋಜನೆ(medium irrigation project) ಎಂದು ಹೆಸರು. ೧೦೦೦೦ ಹೆಕ್ಟೇರುಗಳಿಗಿಂತ ಹೆಚ್ಚಿನ ಭೂಮಿಗೆ ನೀರಾವರಿ ಸೌಲಭ್ಯ ಕಲ್ಪಿಸುವುದನ್ನು ಬೃಹತ್ ನೀರಾವರಿ ಯೋಜನೆ ಎಂದು ಕರೆಯಲಾಗುತ್ತದೆ. ಕೃಷಿಗೆ ನೀರೊದಗಿಸುವುದು ಮಾತ್ರವಲ್ಲದೆ ವಿದ್ಯುತ್ತು ಉತ್ಪಾದನೆ, ಮೀನುಗಾರಿಕೆ ಮುಂತಾದ ಉದ್ದೇಶಗಳನ್ನು ಹೊಂದಿರುವ ನೀರಾವರಿ ಯೋಜನೆಗಳಿಗೆ ವಿವಿಧೋದ್ದೇಶ ನೀರಾವರಿ ಯೋಜನೆಗಳೆಂದು ಹೆಸರು.

ಒಂಬತ್ತನೆಯ ಪಂಚವಾರ್ಷಿಕ ಯೋಜನೆಗಳೆಯವರೆಗೆ ಮಧ್ಯಮ ಮತ್ತು ದೊಡ್ಡ ನೀರಾವರಿ ಯೋಜನೆಗಳು ಒಟ್ಟು ೯೪ ದಶಲಕ್ಷ ಹೆಕ್ಟೇರು ಭೂಮಿಗೆ ನೀರುಣಿಸುವ ಸಾಮರ್ಥ್ಯವನ್ನು ಸೃಷ್ಟಿಸಿವೆ. ವಾಸ್ತವವಾಗಿ ಇವು ೮೪ ದಶಲಕ್ಷ ಹೆಕ್ಟೇರು ಭೂಮಿಗೆ

ನೀರೊದಗಿಸುತ್ತಿವೆ. ವಾಸ್ತವವಾಗಿ ಇರುವ ಸಾಮರ್ಥ್ಯದ ಸಂಪೂರ್ಣ ಬಳಕೆಯಾಗಿಲ್ಲ. ಒಂಬತ್ತನೇ ಯೋಜನಾವಧಿಯಲ್ಲಿ(೧೯೯೭-೨೦೦೦) ಮಧ್ಯಮ ಮತ್ತು ಬೃಹತ್ ನೀರಾವರಿ ಯೋಜನೆಗಳಿಗಾಗಿ ರೂ. ೪೯೯೬೮ ಕೋಟಿ ವ್ಯಯಿಸಲಾಗಿದ್ದು ೪ ದಶಲಕ್ಷ ಹೆಕ್ಟೇರು ಭೂಮಿಗೆ ನೀರಾವರಿ ಸೌಲಭ್ಯ ಸೃಷ್ಟಿಸಲಾಗಿದೆ. ಹತ್ತನೆಯ ಪಂಚವಾರ್ಷಿಕ ಯೋಜನಾವಧಿಯಲ್ಲಿ ಮಧ್ಯಮ ಮತ್ತು ಬೃಹತ್ ನೀರಾವರಿ ಯೋಜನೆಗಳಿಗಾಗಿ ರೂ. ೭೧೨೧೩ ಕೋಟಿ ವ್ಯಯಿಸಲು ನಿರ್ಧರಿಸಲಾಗಿದ್ದು, ೧೦ ದಶಲಕ್ಷ ಹೆಕ್ಟೇರು ಭೂಮಿ ಹೊಸದಾಗಿ ನೀರಾವರಿ ಸೌಲಭ್ಯ ಪಡೆಯಲಿದೆ.

### ೩.೨.೨. ಒಣಭೂಮಿ ಬೇಸಾಯ

**ಅರ್ಥ** : ನೀರಾವರಿಯ ಸೌಲಭ್ಯವಿಲ್ಲದೆ ಮಳೆಯ ನೀರನ್ನು ಅವಲಂಬಿಸಿ ಕೃಷಿ ನಡೆಸುವುದಕ್ಕೆ ಒಣಭೂಮಿ ಬೇಸಾಯ (dry land farming) ಎಂದು ಹೆಸರು. ಭಾರತದಲ್ಲಿ ಸುಮಾರು ೪೦ ದಶಲಕ್ಷ ಹೆಕ್ಟೇರು ಒಣಭೂಮಿಯಾಗಿದ್ದು ಮಳೆಯ ನೀರನ್ನು ಇಂತಹ ಭೂಮಿಯಲ್ಲಿ ಸಂಗ್ರಹಿಸಿ ವ್ಯವಸಾಯ ಮಾಡಬೇಕಾಗುತ್ತದೆ. ಒಣಭೂಮಿ ವ್ಯವಸಾಯದಿಂದಾಗಿ ಜಲಾನಯನ ಪ್ರದೇಶಾಭಿವೃದ್ಧಿ ಯೋಜನೆಗೆ ಮಹತ್ವ ಬಂದಿದೆ.

### ಪ್ರಮುಖ ಸಮಸ್ಯೆಗಳು

ಒಣಭೂಮಿ ವ್ಯವಸಾಯದ ಪ್ರಮುಖ ಸಮಸ್ಯೆಗಳಿವು:

**೧. ಅನಿಶ್ಚಿತತೆ:** ಒಣಭೂಮಿ ವ್ಯವಸಾಯವು ಮಳೆಯ ನೀರನ್ನೇ ಅವಲಂಬಿಸಿಕೊಂಡಿದೆ. ಆದುದರಿಂದ ಅನಿಶ್ಚಿತತೆ ಮತ್ತು ಅಪಾಯಗಳ ಆಗರವಾಗಿದೆ. ಪರಿಣಾಮವಾಗಿ ಒಣಭೂಮಿಯಲ್ಲಿ ಹೆಚ್ಚು ಕೃಷಿ ಕಾರ್ಯಗಳನ್ನು ಕೈಗೊಳ್ಳುವುದು. ಇದು ನೀರಾವರಿ ಭೂಮಿ ಮತ್ತು ಒಣಭೂಮಿಯ ನಡುವಿನ ಪ್ರಾದೇಶಿಕ ಅಸಮತೋಲನವನ್ನು ಉಂಟು ಮಾಡಿದೆ.

**೨. ನಿರುದ್ಯೋಗ:** ಮಳೆಯ ಅನಿಶ್ಚಿತತೆಯಿಂದಾಗಿ ಒಣಭೂಮಿ ಪ್ರದೇಶದಲ್ಲಿ ಕೃಷಿಕೆಲಸ ನಡೆಯುವುದು ಬಹಳ ಕಡಿಮೆ. ಪರಿಣಾಮವಾಗಿ ಈ ಪ್ರದೇಶಗಳಲ್ಲಿ ತೀವ್ರವಾದ ನಿರುದ್ಯೋಗ ಮತ್ತು ಅಪೂರ್ಣೋದ್ಯೋಗ ತಾಂಡವವಾಡುತ್ತವೆ.

**೩. ಬಂಡವಾಳದ ಕೊರತೆ:** ಒಣಭೂಮಿ ಪ್ರದೇಶದ ರೈತರಿಗೆ ಸಾಲ ನೀಡಲು ಸಂಸ್ಥೆಗಳು ಹಿಂದೇಟು ಹಾಕುತ್ತವೆ. ಹಾಗಾಗಿ ರೈತರು ಬಂಡವಾಳದ ಕೊರತೆಯಿಂದಾಗಿ ತೊಂದರೆಗೊಳಗಾಗಿದ್ದಾರೆ.

**೪. ಜಮೀನ್ದಾರೀ ಪಳೆಯುಳಿಕೆ:** ಒಣಭೂಮಿ ಪ್ರದೇಶದಲ್ಲಿ ಜಮೀನ್ದಾರೀ ಅಥವಾ ಊಳಿಗಮಾನ್ಯ ವ್ಯವಸ್ಥೆ ಉಳಿದುಕೊಂಡಿದೆ. ಒಬ್ಬನೇ ಸಾಹುಕಾರ ಸಾವಿರಗಟ್ಟಲೆ ಭೂಮಿಗೆ ಒಡೆಯನಾಗಿರುತ್ತಾನೆ. ಉಳಿದವರು ಅವನ ಜೀತದಾಳುಗಳಾಗಿರುತ್ತಾರೆ. ಸಾಲದ ಬಲೆಯಲ್ಲಿ ಆಳುಗಳನ್ನು ಸಿಲುಕಿಸಿ ಜಮೀನ್ದಾರ ಎಲ್ಲರನ್ನೂ ಶೋಷಿಸುತ್ತಾನೆ. ಸ್ತ್ರೀ ಶೋಷಣೆಯನ್ನು ಮಾಡುತ್ತಿರುತ್ತಾನೆ. ಎಳೆಯ ಮಕ್ಕಳನ್ನು ಜೀತದಾಳುಗಳಾಗಿ ಪರಿವರ್ತಿಸುತ್ತಾನೆ. ಸಾಮಾಜಿಕ

ಮತ್ತು ಧಾರ್ಮಿಕ ಮೂಢನಂಬಿಕೆಗಳನ್ನು ತನ್ನ ಅನುಕೂಲಕ್ಕೆ ತಕ್ಕಂತೆ ದುರುಪಯೋಗ ಮಾಡುತ್ತಿರುತ್ತಾನೆ.

೫. ರೈತರಲ್ಲಿ ಒಗ್ಗಟ್ಟಿಲ್ಲ: ಒಣಭೂಮಿ ರೈತರು ಬಹುತೇಕವಾಗಿ ಆರ್ಥಿಕವಾಗಿ ದುರ್ಬಲರು. ಅವರಲ್ಲಿ ಒಗ್ಗಟ್ಟು ಇಲ್ಲ. ಅಲ್ಲದೆ ಜಾತೀಯತೆ ತಾಂಡವವಾಡುತ್ತಿರುವುದರಿಂದ ಸಂಘಟನೆ ಇಲ್ಲವಾಗಿದೆ. ಸಂಘಟನೆಯ ಕೊರತೆಯಿಂದಾಗಿ ಒಣಭೂಮಿ ನೀರಾವರಿಗೆ ಮಹತ್ವ ದೊರಕಿಸಿಕೊಡಲು ರೈತಾಪಿ ವರ್ಗದಿಂದ ಸಾಧ್ಯವಾಗಿಲ್ಲ.

೬. ಕಡಿಮೆ ಹುಟ್ಟುವಳಿ: ಒಣಭೂಮಿಯಲ್ಲಿ ಹುಟ್ಟುವಳಿ ತೀರಾ ಕಡಿಮೆಯಿರುತ್ತದೆ. ಒಣಭೂಮಿ ಬೇಸಾಯಕ್ಕೆ ವಿನಿಯೋಗಿಸುವ ಬಂಡವಾಳ ಲಾಭದಾಯಕವಲ್ಲವೆನ್ನುವುದು ಬಹುತೇಕ ರೈತರ ಸ್ವಾನುಭವವಾಗಿದೆ. ಆದುದರಿಂದ ರೈತರು ಕೂಡಾ ಒಣಭೂಮಿ ಬೇಸಾಯದ ಬಗ್ಗೆ ಮೋಹ ವ್ಯಕ್ತಪಡಿಸುತ್ತಿಲ್ಲ.

೭. ಆಕರ್ಷಕವಲ್ಲ: ಒಣಭೂಮಿ ಬೇಸಾಯ ಆಕರ್ಷಕವಲ್ಲ. ಬೃಹತ್ ನೀರಾವರಿ ಯೋಜನೆಗಳಲ್ಲಿ ಕೋಟಿಗಟ್ಟಲೆ ಹಣ ಬಳಕೆಯಾಗುತ್ತದೆ. ಅಂತಹ ಆಕರ್ಷಣೆ ಒಣಭೂಮಿ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿಲ್ಲ. ಹಾಗಾಗಿ ನೀತಿ ನಿರೂಪಕರು ಒಣಭೂಮಿ ಬೇಸಾಯದಲ್ಲಿ ಆಸಕ್ತರಾಗಿರುವುದಿಲ್ಲ.

ಭಾರತದ ಕೃಷಿಯು ಈಗಲೂ ಬಹುತೇಕವಾಗಿ ಮಳೆಯ ನೀರನ್ನೇ ಅವಲಂಬಿಸಿಕೊಂಡಿದೆ. ಮಳೆಯ ಅನಿಶ್ಚಿತತೆಯಿಂದಾಗಿ ಭಾರತದ ಕೃಷಿಯನ್ನು ಮಳೆಯೊಡನಾಡುವ ಜೂಜು ಎಂದು ಕರೆಯಲಾಗುತ್ತದೆ. ಮಳೆಯ ನೀರನ್ನು ಸಂರಕ್ಷಿಸಿ ಒಣಭೂಮಿ ಬೇಸಾಯ ನಡೆಸುವ ಅನೇಕ ಪ್ರಯತ್ನಗಳನ್ನು ಇತ್ತೀಚೆಗೆ ಮಾಡಲಾಗುತ್ತಿದೆ.

**ಒಣಭೂಮಿ ಬೇಸಾಯ ಕಾರ್ಯತಂತ್ರ ಮತ್ತು ವ್ಯಾಪ್ತಿ**

ಆರನೆಯ ಪಂಚವಾರ್ಷಿಕ ಯೋಜನೆಯಲ್ಲಿ ಒಣಭೂಮಿ ಬೇಸಾಯಕ್ಕೆ ವಿಶೇಷ ಮಹತ್ವ ನೀಡಲಾಯಿತು. ಒಣಭೂಮಿ ವ್ಯವಸಾಯದ ಉದ್ದೇಶಗಳನ್ನು ಸ್ಪಷ್ಟೀಕರಿಸಲಾಯಿತು. ಸರಕಾರದ ಪ್ರಕಾರ ಒಣಭೂಮಿ ವ್ಯವಸಾಯದ ಉದ್ದೇಶಗಳಿವು

ಅ. ಗ್ರಾಮೀಣ ಪ್ರದೇಶದ ಬಡನತನವನ್ನು ನಿವಾರಿಸುವುದು.

ಆ. ನಿರುದ್ಯೋಗ ಮತ್ತು ಅಪೂರ್ಣೋದ್ಯೋಗ ಪ್ರಮಾಣವನ್ನು ಕಡಿಮೆ ಮಾಡುವುದು.

ಇ. ಪ್ರಾಂತೀಯ ಅಸಮತೋಲನವನ್ನು ಕಡಿಮೆ ಮಾಡುವುದು.

ಈ. ಹೂಡಿಕೆಯನ್ನು ಉತ್ತೇಜಿಸುವುದು.

ಉ. ಭೂಮಿಗೆ ನೀರೊದಗಿಸಿ, ಅನಿಶ್ಚಿತತೆಯನ್ನು ಕಡಿಮೆ ಮಾಡುವುದು.

೧೯೮೨ರ ಜನವರಿಯಲ್ಲಿ ಘೋಷಿಸಲಾದ ನೂತನ ೨೦ ವರ್ಷಗಳ ಕಾರ್ಯಕ್ರಮದನ್ವಯ ಒಣಭೂಮಿ ಬೇಸಾಯ ಸುಧಾರಣೆಗೆ ಸರಕಾರ ಮೂರು ಮುಖ್ಯ ಕಾರ್ಯತಂತ್ರವನ್ನು ರೂಪಿಸಿತು.

೧. ಜಲಾನಯನ ಪ್ರದೇಶಾಭಿವೃದ್ಧಿ: ಆಯ್ದ ಸೂಕ್ಷ್ಮ ಜಲಾನಯನ ಪ್ರದೇಶಗಳ ಸಂಯೋಜಿತ ಅಭಿವೃದ್ಧಿಗೆ ತೀಕ್ಷ್ಣವಾದ ಕಾರ್ಯಕ್ರಮಗಳ (Intensive programs) ಅಳವಡಿಕೆ.

೨. ತಾಂತ್ರಿಕತೆಯ ಬಳಕೆ: ಲಭ್ಯವಿರುವ ತಾಂತ್ರಿಕತೆಯ, ಕ್ಷಾಮ ಪ್ರತಿರೋಧಕ ಬೀಜ ಮತ್ತು ಗೊಬ್ಬರಗಳ ಬಳಕೆ.

೩. ಬೇಸಾಯದ ಅರಣ್ಯ ನಿರ್ಮಾಣ: ವ್ಯವಸಾಯಕ್ಕೆ ಮತ್ತು ರಾಸುಗಳ ಮೇವಿಗೆ ಪೂರಕವಾದ ಅರಣ್ಯ ನಿರ್ಮಾಣ.

ಹೀಗಾಗಿ ಒಣಭೂಮಿ ವ್ಯವಸಾಯದ ವ್ಯಾಪ್ತಿಯಲ್ಲಿ ಅ. ಜಲಾನಯನ ಪ್ರದೇಶಾಭಿವೃದ್ಧಿ ಯೋಜನೆ ಆ. ಆದರ್ಶ ತಾಂತ್ರಿಕತೆಯ ಬಳಕೆ ಮತ್ತು ಇ. ಕೃಷಿ ಪೂರಕ ಅರಣ್ಯ ನಿರ್ಮಾಣ ಯೋಜನೆ ಇವು ಒಳಗೊಂಡಿರುತ್ತವೆ.

### ೩.೨.೩. ನೀರಿನ ಸಂರಕ್ಷಣೆ ಮತ್ತು ನಿರ್ವಹಣೆ

ನೀರಿಲ್ಲದೆ ಜೀವನವಿಲ್ಲ. ಜೀವನವೆಂಬ ಪದಕ್ಕೆ ನೀರು ಎಂಬ ಅರ್ಥವೂ ಇದೆ. ವಿಶ್ವದ ಅಂತರ್ಜಲ ಮಟ್ಟ ಕುಸಿಯುತ್ತದೆ. ಅರಣ್ಯಗಳು ಮಾಯವಾಗುತ್ತಿವೆ. ಭಾರತದಲ್ಲಿ ಶೇ. ೭೦ರಷ್ಟು ಮಂದಿ ನೀರಿನ ಸಮಸ್ಯೆಯಿಂದ ಬಳಲುತ್ತಿದ್ದಾರೆ. ರಾಜ್ಯಗಳ ನಡುವೆ ನದಿ ನೀರಿನ ಹಂಚಿಕೆಯ ಸಮಸ್ಯೆಗಳು ತೀವ್ರವಾಗಿವೆ. ಬಹುತೇಕ ಗ್ರಾಮೀಣ ಪ್ರದೇಶಗಳಲ್ಲಿ ಕುಡಿಯುವ ನೀರು ತರಲು ಹೆಂಗಳೆಯರು ೫-೬ ಕಿ.ಮೀ. ನಡೆಯಬೇಕಾಗುತ್ತದೆ. ಆದುದರಿಂದ ನೀರು ಸಂರಕ್ಷಣೆ ಮತ್ತು ನೀರು ನಿರ್ವಹಣೆ ದೊಡ್ಡ ಸಮಸ್ಯೆಗಳಾಗಿ ಭಾರತೀಯರನ್ನು ಕಾಡುತ್ತಿದೆ. ಆಫ್ರಿಕಾ ಮತ್ತು ಏಶಿಯಾದ ಬಹುತೇಕ ರಾಷ್ಟ್ರಗಳಲ್ಲಿ ಈ ಸಮಸ್ಯೆ ಬೃಹತ್ತಾಗಿ ಬೆಳೆದಿದೆ.

**ಸಂರಕ್ಷಣೆ ಮತ್ತು ನಿರ್ವಹಣೆ ಎಂದರೇನು?** ವಿಶ್ವದ ಸಮಸ್ತ ಜೀವಜಾಲಗಳ ಅಸ್ತಿತ್ವಕ್ಕೆ ಅನಿವಾರ್ಯವಾಗಿರುವ ನೀರಿನ ಮೂಲಗಳನ್ನು ಎಚ್ಚರದಿಂದ ಕಾಪಾಡಿಕೊಳ್ಳುವುದಕ್ಕೆ ನೀರಿನ ಸಂರಕ್ಷಣೆ (water conservation) ಎಂದು ಹೆಸರು. ನೀರನ್ನು ಸಮರ್ಥವಾಗಿ, ದಕ್ಷವಾಗಿ ಮತ್ತು ಆದರ್ಶ ರೀತಿಯಲ್ಲಿ ನಿಭಾಯಿಸುವುದನ್ನು ಅಥವಾ ಬಳಸಿಕೊಳ್ಳುವುದನ್ನು ನೀರಿನ ನಿರ್ವಹಣೆ (water management) ಎಂದು ಕರೆಯಲಾಗುತ್ತದೆ.

ಮಳೆಯ ನೀರನ್ನು ಮತ್ತು ಅಂತರ್ಜಲವನ್ನು ಸಮಯೋಚಿತವಾಗಿ ಮತ್ತು ಸಮರ್ಪಕವಾಗಿ ಬಳಸುವುದು ಹಾಗೂ ಮುಂದಿನ ಪೀಳಿಗೆಗಾಗಿ ಕಾಪಾಡುವುದು ಒಟ್ಟಾಗಿ ನೀರಿನ ನಿರ್ವಹಣೆ ಸಂರಕ್ಷಣೆಯೆನಿಸುತ್ತದೆ.

### ಸಂರಕ್ಷಣೆ ಮತ್ತು ನಿರ್ವಹಣೆಯ ಅಗತ್ಯ

ನೀರಿನ ಮೂಲಗಳ ಸಂರಕ್ಷಣೆಯ ಅಗತ್ಯವನ್ನು ಈ ಕೆಳಗಿನ ಅಂಶಗಳು ತಿಳಿಸುತ್ತವೆ

೧. ನೀರಿನ ಕೊರತೆ: ಸಮಸ್ತ ಜೀವಜಾಲಗಳಿಗೆ, ಕೃಷಿಗೆ, ಕೈಗಾರಿಕೆಗೆ ಮತ್ತು ಸೇವಾಕ್ಷೇತ್ರಕ್ಕೆ ನೀರು ಬೇಕೇ ಬೇಕು. ಮಾನವನ ದೇಹದ ಶೇ. ೭೦ರಷ್ಟು ಭಾಗ ನೀರಿನಿಂದ ನಿರ್ಮಿತವಾಗಿದೆ.

ಭೂಗ್ರಹದ ಶೇ. ೭೦ ಭಾಗ ಜಲಮಯವಾಗಿದೆ. ಆದರೆ ಇದರಲ್ಲಿ ಶೇ. ೯೭.೫ ಸಮುದ್ರ ಸಾಗರದ ಉಪ್ಪು ನೀರು. ಇದನ್ನು ಮಾನವ ಯಾವುದಕ್ಕೂ ಬಳಸುವಂತಿಲ್ಲ. ಉಳಿದ ಶೇ. ೨.೫ರಷ್ಟು ನೀರನ್ನು ಮನುಕುಲ ಬಳಸಿಕೊಳ್ಳಬೇಕಾಗಿದೆ. ಅಮೇರಿಕಾದವರು ಮತ್ತು ಜಪಾನೀಯರು ದಿನಕ್ಕೆ ಸರಾಸರಿ ೨೫೦ ಲೀಟರ್ ಮತ್ತು ಭಾರತೀಯರು ಸರಾಸರಿ ೫೦ ಲೀಟರ್ ನೀರು ಬಳಸುತ್ತಿದ್ದಾರೆ. ಭಾರತದಲ್ಲಿ ನೀರಿನ ತೀವ್ರ ಕೊರತೆಯಿರುವುದನ್ನು ಇದು ತಿಳಿಸುತ್ತದೆ. ಹಾಗಾಗಿ ನೀರಿನ ಸಂರಕ್ಷಣೆ ಮತ್ತು ನಿರ್ವಹಣೆ ಅತ್ಯಗತ್ಯವೆನಿಸಿದೆ.

೨. **ನೀರಿನ ಅನಿಶ್ಚಿತ ಲಭ್ಯತೆ:** ಭಾರತದಲ್ಲಿ ಎಲ್ಲಾ ಕಡೆಗಳಲ್ಲಿ ಎಲ್ಲಾ ಕಾಲಗಳಲ್ಲಿ ನೀರು ಲಭ್ಯವಾಗುವುದಿಲ್ಲ. ಅತಿಯಾಗಿ ಮಳೆ ಬೀಳುವ ಪ್ರದೇಶಗಳಲ್ಲೂ ಬೇಸಿಗೆ ಕಾಲದಲ್ಲಿ ನೀರಿನ ಸಮಸ್ಯೆ ತಲೆದೋರುತ್ತದೆ. ಮರುಭೂಮಿ ಮತ್ತು ಪ್ರಸ್ಥಭೂಮಿ ಪ್ರದೇಶಗಳಲ್ಲಿ ನೀರೇ ದೊರೆಯುವುದಿಲ್ಲ. ಮಳೆರಾಯ ಕರುಣೆ ತೋರಿದರೂ ನೀರೂ ತಕ್ಷಣ ಇಂಗಿ ಹೋಗುತ್ತದೆ. ನೀರಿನ ಅನಿಶ್ಚಿತ ಲಭ್ಯತೆಯ ಸಮಸ್ಯೆ ನಿವಾರಿಸಲು ನೀರನ್ನು ಸಂರಕ್ಷಿಸಿ ಸಮರ್ಥವಾಗಿ ನಿರ್ವಹಿಸಬೇಕಾಗುತ್ತದೆ.

೩. **ಪ್ರಾದೇಶಿಕ ಅಸಮತೋಲನ:** ನೀರಿನ ಕೊರತೆಯಿರುವ ಪ್ರದೇಶಗಳು ಹಿಂದುಳಿದಿರುತ್ತವೆ. ನೀರು ಯಥೇಚ್ಛ ಲಭ್ಯವಾಗುವ ಪ್ರದೇಶಗಳು ಮುಂದುವರಿದ ಪ್ರದೇಶಗಳಾಗಿ ಬಿಡುತ್ತವೆ. ಹಿಂದುಳಿಕೆ ಮತ್ತು ಮುಂದುವರಿಕೆಯನ್ನು ನೀರಿನ ಲಭ್ಯತೆ ನಿರ್ಧರಿಸುತ್ತದೆ. ನೀರು ಪ್ರಾದೇಶಿಕ ಅಸಮತೋಲನಕ್ಕೆ ಕಾರಣವಾಗುತ್ತದೆ. ಪ್ರಾದೇಶಿಕ ಅಸಮತೋಲನ ಕಡಿಮೆ ಮಾಡಲು ನೀರನ್ನು ಸಂರಕ್ಷಿಸಿ ಸಮರ್ಪಕವಾಗಿ ನಿರ್ವಹಿಸಬೇಕಾಗುತ್ತದೆ.

೪. **ಕೃಷಿ ಮತ್ತು ಕೈಗಾರಿಕಾ ಹಿಂದುಳಿಕೆ:** ನೀರಿಲ್ಲದೆ ಕೃಷಿ ಅಭಿವೃದ್ಧಿಯಾಗುವುದಿಲ್ಲ. ಕೈಗಾರಿಕೆಗಳು ಬೆಳೆಯುವುದಿಲ್ಲ. ಕೃಷಿಯು ಎಲ್ಲಾ ಆರ್ಥಿಕತೆಗಳ ಬೆನ್ನೆಲುಬು. ಏಕೆಂದರೆ ಅದು ಆಹಾರ ಉತ್ಪಾದಿಸುತ್ತದೆ. ಕೈಗಾರಿಕೆಗಳು ಆನುಷಂಗಿಕವಾಗಿದ್ದು ಕೃಷಿಯು ಪ್ರಧಾನ ಚಟುವಟಿಕೆಯಾಗಿರುತ್ತದೆ. ನೀರಿಲ್ಲದಿದ್ದರೆ ಕೃಷಿಯಾಗಲೀ ಕೈಗಾರಿಕೆಯಾಗಲೀ ಪ್ರಗತಿ ಹೊಂದಲು ಸಾಧ್ಯವಿಲ್ಲ. ಒಟ್ಟಿನಲ್ಲಿ ನೀರೇ ಆರ್ಥಿಕ ಪ್ರಗತಿಗೆ ಮೂಲವಾಗಿರುತ್ತದೆ. ಅದಕ್ಕಾಗಿ ನೀರಿನ ಸಂರಕ್ಷಣೆ ಮತ್ತು ನಿರ್ವಹಣೆ ಅತ್ಯಗತ್ಯ.

೫. **ಕುಡಿಯುವ ನೀರಿನ ಸಮಸ್ಯೆ:** ಕುಡಿಯುವ ನೀರು ಮತ್ತು ನೈರ್ಮಲ್ಯ - ಇವುಗಳನ್ನು ಜೀವನಾಗತ್ಯಗಳೆಂದು ಕರೆಯಲಾಗುತ್ತದೆ. 'ಎಲ್ಲರಿಗೂ ಆರೋಗ್ಯ' ಎಂಬ ಉದ್ದೇಶ ಸಾಧನೆಯಾಗಬೇಕಾದರೆ ಎಲ್ಲರಿಗೂ ಪರಿಶುದ್ಧ ನೀರು ದೊರೆಯಬೇಕು. ನಗರ ಪ್ರದೇಶಗಳಲ್ಲಿ ಶೇ. ೯೦ರಷ್ಟು ಮಂದಿಗೆ ಕುಡಿಯುವ ನೀರು ಲಭ್ಯವಾಗುತ್ತದೆ. ಆದರೆ ಅದರ ಗುಣಮಟ್ಟ ಪ್ರಶ್ನಾರ್ಥಕವಾಗಿದೆ. ಕೊಳಚೆ ಪ್ರದೇಶಗಳ ಪರಿಸ್ಥಿತಿ ಆ ಭಗವಂತನಿಗೇ ಪ್ರೀತಿ! ಗ್ರಾಮೀಣ ಪ್ರದೇಶಗಳ ಶೇ. ೭೦ ಮಂದಿ ಕುಡಿಯುವ ನೀರಿನ ಸೌಲಭ್ಯದಿಂದ ವಂಚಿತರಾಗಿದ್ದಾರೆ. ಈ ಸಮಸ್ಯೆಗಳನ್ನು ಪರಿಹರಿಸಲು ನೀರಿನ ಸಂರಕ್ಷಣೆ ಮತ್ತು ನಿರ್ವಹಣೆ ಮಾಡಬೇಕಾಗುತ್ತದೆ.

**೬. ನೀರಾವರಿಯ ಸಮಸ್ಯೆ :** ದೇಶದಲ್ಲಿ ಲಭ್ಯವಿರುವ ಕೃಷಿ ಭೂಮಿಯಲ್ಲಿ ಶೇ. ೩೩ರಷ್ಟು ನೀರಾವರಿ ಸೌಲಭ್ಯದಿಂದ ವಂಚಿತವಾಗಿದೆ. ನೀರಾವರಿ ಸವಲತ್ತುಗಳಲ್ಲಿ ಅಸಮಾನ್ಯ ಪ್ರಾದೇಶಿಕ ಅಸಮತೋಲನವಿದೆ. ನದಿಗಳ ಜೋಡಣೆಯಿಂದ ಈ ಸಮಸ್ಯೆ ಪರಿಹಾರ ವಾಗುತ್ತದೆ ಎನ್ನುವಂತಿಲ್ಲ. ನದಿಗಳ ಜೋಡಣೆ ತುಂಬಾ ವೆಚ್ಚದಾಯಕವಾದುದು. ಅಲ್ಲದೆ ಅದು ಪರಿಸರಕ್ಕೆ ಹಾನಿಯುಂಟು ಮಾಡುವ ಅಪಾಯವಿದೆ. ಈ ಸಮಸ್ಯೆಗಳಿಗೆ ನೀರಿನ ಸಂರಕ್ಷಣೆ ಮತ್ತು ನಿರ್ವಹಣೆ ಸರಿಯಾದ ಪರಿಹಾರೋಪಾಯವಾಗಿದೆ.

**೭. ಬಳಕೆಯ ಅದಕ್ಷತೆ :** ಇರುವ ನೀರನ್ನು ದಕ್ಷವಾಗಿ ಬಳಸಲು ಅಸಾಧ್ಯವಾಗಿರುವುದು ಬಹಳ ದೊಡ್ಡ ಸಮಸ್ಯೆಯಾಗಿದೆ. ಕಾಲುವೆ ನೀರಾವರಿ ವ್ಯವಸ್ಥೆಯಲ್ಲಿ ಶೇ. ೬೦ರಷ್ಟು ಮತ್ತು ಅಂತರ್ಜಲ ನೀರಾವರಿ ಯೋಜನೆಗಳಲ್ಲಿ ಶೇ. ೪೦ರಷ್ಟು ನೀರು ಪೋಲಾಗುತ್ತದೆಂದು ಅಂದಾಜಿಸಲಾಗಿದೆ. ಬಳಕೆಯಲ್ಲಿ ಶೇ. ೧೦ರಷ್ಟೆ ದಕ್ಷತೆ ಸಾಧಿಸಿದರೆ ೧೪ ದಶಲಕ್ಷ ಹೆಚ್ಚುವರಿ ಭೂಮಿಗೆ ನೀರಾವರಿ ಸೌಲಭ್ಯ ದೊರಕಿಸಲು ಸಾಧ್ಯವಾಗುತ್ತದೆ. ಈ ಕಾರಣಕ್ಕಾಗಿ ನೀರಿನ ಸಂರಕ್ಷಣೆ ಮತ್ತು ಸಮರ್ಪಕ ನಿರ್ವಹಣೆಯಾಗಬೇಕಿದೆ.

**ನೀರು ಸಂರಕ್ಷಣಾ ಮತ್ತು ನಿರ್ವಹಣಾ ವಿಧಾನಗಳು (ಜಲಾನಯನ ಕಾರ್ಯಕ್ರಮಗಳು)**

ನೀರು ಸಂರಕ್ಷಣಾ ಮತ್ತು ನಿರ್ವಹಣಾ ವಿಧಾನಗಳಲ್ಲಿ ಜಲಾನಯನ ಕಾರ್ಯಕ್ರಮಗಳಲ್ಲಿ ಅತ್ಯಂತ ಪ್ರಮುಖವಾದವುಗಳು ಇವು

**೧. ಒಡ್ಡುಗಳ ನಿರ್ಮಾಣ:** ಹೊಳೆ, ತೋಡು ಇತ್ಯಾದಿಗಳಲ್ಲಿ ಅಲ್ಲಲ್ಲಿ ಸಣ್ಣ ಸಣ್ಣ ಒಡ್ಡುಗಳನ್ನು(bunds) ನಿರ್ಮಿಸಿದರೆ ಪೋಲಾಗುವುದಿಲ್ಲ. ಅಂತರ್ಜಲ ಮಟ್ಟ ಹೆಚ್ಚಾಗುತ್ತದೆ.

**೨. ಕಿಂಡಿ ಅಣೆಕಟ್ಟುಗಳ ನಿರ್ಮಾಣ:** ದಂಡೆಗಿಂತ ಎತ್ತರವಾಗಿಲ್ಲದ ಶಾಶ್ವತ ಒಡ್ಡುಗಳು ಕಿಂಡಿ ಅಣೆಕಟ್ಟುಗಳಾಗಿವೆ (vented dams). ಅವು ಮಳೆಗಾಲದಲ್ಲಿ ಹೆಚ್ಚುವರಿ ನೀರು ಹರಿದು ಹೋಗಲು ಅವಕಾಶ ಮಾಡಿ ಕೊಡುತ್ತವೆ. ಉಳಿದ ನೀರನ್ನು ಶೇಖರಿಸಿಡುತ್ತದೆ. ಕಿಂಡಿ ಅಣೆಕಟ್ಟುಗಳು ಅಂತರ್ಜಲ ಮಟ್ಟ ಕುಸಿತಕ್ಕೆ ರಾಮಬಾಣಗಳಾಗಿವೆ.

**೩. ಜಲಾನಯನ ಪ್ರದೇಶಾಭಿವೃದ್ಧಿ:** ನೀರು ಇಂಗುವ ನಿರ್ದಿಷ್ಟ ಪ್ರದೇಶವನ್ನು ಜಲಾನಯನ ಪ್ರದೇಶ (watershed area) ಎಂದು ಕರೆಯಲಾಗುತ್ತದೆ. ಅಂತಹ ಪ್ರದೇಶದಲ್ಲಿ ಜಲ ಮತ್ತು ಮಣ್ಣು ಸಂರಕ್ಷಣಾ ಕಾರ್ಯಕ್ರಮಗಳನ್ನು ಕೈಗೊಳ್ಳುವುದಕ್ಕೆ ಜಲಾನಯನ ಅಭಿವೃದ್ಧಿ (watershed development) ಎಂದು ಹೆಸರು. ಜಲಾನಯನ ಪ್ರದೇಶವು ಒಂದು ಹಳ್ಳಿಯಾಗಿರಬಹುದು ಅಥವಾ ಅನೇಕ ಹಳ್ಳಿಗಳಾಗಿರಹುದು. ಕೃಷಿಯೋಗ್ಯ ಭೂಮಿ ಯಾಗಿರಬಹುದು ಅಥವಾ ಕೃಷಿಯೇತರ ಭೂಮಿಯಾಗಿರಬಹುದು. ಜಲಾನಯನ ಪ್ರದೇಶಾಭಿವೃದ್ಧಿ ಯೋಜನೆಯ ಮೂಲಕ ನೀರಿನ ಸಂರಕ್ಷಣೆ ಮತ್ತು ನಿರ್ವಹಣೆಯನ್ನು ಸುಲಭವಾಗಿ ಮಾಡಬಹುದು. ನೀರು ಸಂರಕ್ಷಣೆ ಮತ್ತು ನಿರ್ವಹಣೆಯೊಂದಿಗೆ ಅರಣ್ಯ ನಿರ್ಮಾಣ, ತೋಟದ ಬೆಳೆಗಳ ಅಭಿವೃದ್ಧಿ ಮತ್ತು ಕೃಷಿ ಅರಣ್ಯ ನಿರ್ಮಾಣ, ತೋಟದ

ಬೆಳೆಗಳ ಅಭಿವೃದ್ಧಿ ಮತ್ತು ಕೃಷಿ ಅರಣ್ಯ ನಿರ್ಮಾಣ ಸೇರಿದರೆ ಅದು ಜಲಾನಯನ ಪ್ರದೇಶಾಭಿವೃದ್ಧಿ ಎನಿಸುತ್ತದೆ.

೪. ತುಂತುರು ನೀರಾವರಿ : ಸಣ್ಣ ಕೊಳವೆಗಳ ರಂಧ್ರಗಳ ಮೂಲಕ ತುಂತುರು ರೂಪದಲ್ಲಿ ಬೆಳೆಗಳ ಮೇಲೆ ನೀರನ್ನು ಸರಿಯಾಗಿ ಬೀಳುವಂತೆ ಮಾಡುವುದಕ್ಕೆ ತುಂತುರು ನೀರಾವರಿ (Sprinkler irrigation) ಎಂದು ಹೆಸರು. ಬೆಟ್ಟ, ಇಳಿಜಾರು ಮತ್ತು ಪರ್ವತ ಪ್ರದೇಶಗಳಲ್ಲಿ ತುಂತುರು ನೀರಾವರಿ ವಿಶೇಷ ಮಹತ್ವ ಪಡೆದಿದೆ. ತುಂತುರು ನೀರಾವರಿಯನ್ನು ಭಾರತದ ಬಹುತೇಕ ರಾಜ್ಯಗಳು ಅನುಷ್ಠಾನಕ್ಕೆ ತಂದಿವೆ. ತುಂತುರು ನೀರಾವರಿಯು ನೀರು ಪೋಲಾಗದಂತೆ ತಡೆಗಟ್ಟುತ್ತದೆ ಮತ್ತು ನೀರಾವಿಯ ದಕ್ಷತೆಯನ್ನು ಹೆಚ್ಚಿಸುತ್ತದೆ.

೫. ಹನಿ ನೀರಾವರಿ : ಗಿಡದ ಬುಡಕ್ಕೆ ಕೊಳವೆಗಳ ಮೂಲಕ ಹನಿಹನಿಯಾಗಿ ನೀರು ತೊಟ್ಟಿಕ್ಕುವಂತೆ ಮಾಡುವುದಕ್ಕೆ ಹನಿ ನೀರಾವರಿ(drip irrigation) ಎಂದು ಹೆಸರು. ತಳದಲ್ಲಿ ರಂಧ್ರ ಕೊರೆದು ಮಡಿಕೆ ಅಥವಾ ಡಬ್ಬಕ್ಕೆ ನೀರು ತುಂಬಿಸಿ ಗಿಡಗಳ ಬುಡದಲ್ಲಿರಿಸಿ ಹನಿಹನಿಯಾಗಿ ಬೇರಿಗೆ ನೀರುಣಿಸುವ ಯೋಜನೆಯಿದು. ಹನಿ ನೀರಾವರಿ ಬಹಳ ಜನಪ್ರಿಯವಾಗಿದೆ. ಈ ಪದ್ಧತಿಯಿಂದ ಗಿಡಗಳಿಗೆ ಅಗತ್ಯವಿರುವಷ್ಟೇ ನೀರು ಲಭ್ಯವಾಗುವುದರಿಂದ ಇದು ಅತ್ಯುತ್ತಮ ನೀರಾವರಿ ವಿಧಾನವಾಗಿದೆ. ಅಲ್ಲದೆ ಅತ್ಯುತ್ತಮವಾದ ನೀರು ಸಂರಕ್ಷಣಾ ಮತ್ತು ನಿರ್ವಹಣಾ ವಿಧಾನವೂ ಆಗಿದೆ.

೬. ಕೆರೆ ಬಾವಿಗಳ ಹೂಳೆತ್ತುವಿಕೆ : ಕೆರೆ, ಬಾವಿಗಳಲ್ಲಿ ಹೂಳು ತುಂಬಿದರೆ ಅವುಗಳ ಜಲಸಂಗ್ರಹ ಸಾಮರ್ಥ್ಯ ಕುಗ್ಗುತ್ತದೆ, ಕೆರೆ ಬಾವಿಗಳ ಹೂಳೆತ್ತುವಿಕೆಯು ನೀರು ಸಂರಕ್ಷಣೆಯ ಪ್ರಮುಖ ವಿಧಾನಗಳಲ್ಲೊಂದು.

೭. ಮಳೆ ನೀರಿನ ಕೊಯ್ಲು ವಿಧಾನ : ಮಳೆನೀರನ್ನು ಸಂರಕ್ಷಿಸಿ ಅಂತರ್ಜಲ ಮಟ್ಟ ಹೆಚ್ಚಿಸುವುದಕ್ಕೆ ಮಳೆ ನೀರಿನ ಕೊಯ್ಲು (rainwater harvesting) ಎಂದು ಹೆಸರು. ಮಳೆ ನೀರು ಕೊಯ್ಲಿನ ಉಪಯೋಗಗಳಿವು

೧. ನೀರಿನ ಬೇಡಿಕೆಗೆ ತಕ್ಕಂತೆ ಪೂರೈಕೆ ಮಾಡುತ್ತದೆ.

೨. ಬೇಸಿಗೆಯಲ್ಲಿ ಜಲಕ್ಷಾಮವನ್ನು ನೀಗಿಸುತ್ತದೆ.

೩. ನೀರಿನ ಕೊರತೆಗೆ ಪರಿಹಾರ ಒದಗಿಸುತ್ತದೆ.

೪. ಅಂತರ್ಜಲದ ಮಟ್ಟವನ್ನು ಹೆಚ್ಚಿಸುತ್ತದೆ.

೫. ಅಂತರ್ಜಲದ ಗುಣಮಟ್ಟವನ್ನು ವೃದ್ಧಿಸುತ್ತದೆ.

೬. ಅಂತರ್ಜಲ ಮಾಲಿನ್ಯವನ್ನು ತಡೆಗಟ್ಟುತ್ತದೆ.

೭. ಮಣ್ಣಿನ ಸವಕಳಿಯನ್ನು ತಡೆಗಟ್ಟುತ್ತದೆ.

೮. ಗಿಡಮರಗಳಿಗೆ ನೀರೊದಗಿಸಿ ಹಸಿರನ್ನು ಹೆಚ್ಚಿಸುತ್ತದೆ.

೯. ಕೃತಕ ನೆರೆ ನಿರ್ಮಾಣವಾಗದಂತೆ ನೋಡಿಕೊಳ್ಳುತ್ತದೆ.

೧೦. ಮಳೆ ನೀರಿನೊಂದಿಗೆ ಚರಂಡಿ ನೀರು ಸೇರಿ ಜಲಮಾಲಿನ್ಯವಾಗುವುದನ್ನು ತಡೆಗಟ್ಟುತ್ತದೆ.

ಮಳೆ ನೀರು ಕೊಯ್ಲಿನ ಎರಡು ಪ್ರಮುಖ ವಿಧಗಳಿವು

**೧. ಚಾವಣಿ ನೀರಿನ ಕೊಯ್ಲು:** ಮನೆ ಅಥವಾ ಕಟ್ಟಡಗಳ ಚಾವಣಿಗಳಿಗೆ ಬಿದ್ದ ಮಳೆನೀರನ್ನು ಸಂಗ್ರಹಿಸುವುದಕ್ಕೆ ಚಾವಣಿ ನೀರಿನ ಕೊಯ್ಲು ಎಂದು ಹೆಸರು. ಮನೆಯ ಬಳಿ ಟ್ಯಾಂಕು ನಿರ್ಮಿಸಿ ಅಥವಾ ಹಳೆಯ ಬಾವಿಗಳಿಗೆ ಸಂಪರ್ಕ ಕಲ್ಪಿಸಿ, ಛಾವಣಿ ನೀರನ್ನು ಸಂಗ್ರಹಿಸಬಹುದು. ಅಲ್ಲದೆ ಕೊಳವೆ ಬಾವಿಗಳಿಗೆ ಜಲ ಮರುಪೂರಣ ಮಾಡುವ ಮೂಲಕ ನೀರಿನ ಸದ್ಬಳಕೆ ಮಾಡಬಹುದು.

**೨. ಹರಿಯುವ ಮಳೆ ನೀರಿನ ಕೊಯ್ಲು :** ಹರಿದು ಹೋಗುತ್ತಿರುವ ಮಳೆ ನೀರಿಗೆ ಒಡ್ಡು ನಿರ್ಮಿಸಿ ಅಥವಾ ಇಂಗುಗುಂಡಿಗಳನ್ನು ನಿರ್ಮಿಸಿ ನೀರನ್ನು ಸಂಗ್ರಹಿಸುವುದನ್ನು ಹರಿಯುವ ಮಳೆ ನೀರಿನ ಕೊಯ್ಲು ಎಂದು ಹೆಸರು.

ಗುಡ್ಡಪ್ರದೇಶಗಳಲ್ಲಿ ಮತ್ತು ಬಾವಿ ಹಾಗೂ ಕೆರೆಗಳ ಬಳಿಯಲ್ಲಿ ಇಂಗು ಗುಂಡಿಗಳನ್ನು ನಿರ್ಮಿಸಿ ಅಂತರ್ಜಲ ಮಟ್ಟ ಹೆಚ್ಚಿಸಿರುವ ಅನೇಕ ಹಳ್ಳಿಗಳು ಭಾರತದಲ್ಲಿವೆ.

## ೩.೩. ಭಾರತದ ಆಹಾರ ಸಮಸ್ಯೆ

### ೩.೩.೧. ಆಹಾರ ಸಮಸ್ಯೆಯ ಸ್ವರೂಪ

ಧಾನ್ಯಗಳನ್ನು ಮತ್ತು ಬೇಳೆಕಾಳುಗಳನ್ನು ಒಟ್ಟಾಗಿ ಆಹಾರ (food) ಎಂದು ಕರೆಯಲಾಗುತ್ತದೆ. ಎಣ್ಣೆ ಬೀಜಗಳೂ ಕೂಡಾ ಆಹಾರ ಪರಿಕಲ್ಪನೆ ವ್ಯಾಪ್ತಿಯಲ್ಲಿ ಬರುತ್ತವೆ. ಆಹಾರವು ಮಾನವನ ಮೂಲಭೂತ ಅವಶ್ಯಕತೆಗಳಲ್ಲಿ ಒಂದು. ಹೊಟ್ಟೆ ತುಂಬಿಸುವುದು ಹೇಗೆನ್ನುವುದು ಬಹುತೇಕ ಭಾರತೀಯರ ಸಮಸ್ಯೆಯಾಗಿದೆ. ಎಲ್ಲಾರು ಮಾಡುವುದು ಹೊಟ್ಟೆಗಾಗಿ, ಗೇಣುಬಟ್ಟೆಗಾಗಿ, ತುತ್ತು ಹಿಟ್ಟಿಗಾಗಿ ಎಂಬ ದಾಸವಣಿಯು ಆಹಾರ ಸಮಸ್ಯೆ ಆಳವಿಸ್ತಾರಗಳನ್ನು ತಿಳಿಸುತ್ತದೆ.

ಆಹಾರ ಸಮಸ್ಯೆಯ ಸ್ವರೂಪವನ್ನು ಅರಿಯಬೇಕಾದರೆ ಒಟ್ಟು ಆಹಾರೋತ್ಪಾದನೆ ಮತ್ತು ತಲಾ ಲಭ್ಯತೆಯ ಮಾಹಿತಿ ತಿಳಿದಿರಬೇಕು. ಕೋಷ್ಟಕ ೩.೨ ಆಹಾರೋತ್ಪಾದನೆಯ ಪ್ರಮಾಣವನ್ನು ಮತ್ತು ಲಭ್ಯತೆಯನ್ನು ತೋರಿಸುತ್ತದೆ.

**ಕೋಷ್ಟಕ ೩.೨ : ಆಹಾರೋತ್ಪಾದನೆ ಪ್ರಮಾಣ ಮತ್ತು ತಲಾ ಲಭ್ಯತೆ**

| ವರ್ಷ | ನಿವ್ವಳ ಉತ್ಪಾದನೆ | | ನಿವ್ವಳ ತಲಾ ಲಭ್ಯತೆ ಗ್ರಾಮುಗಳಲ್ಲಿ | | |
|---|---|---|---|---|---|
| | ಧಾನ್ಯಗಳು | ಬೇಳೆಗಳು | ಧಾನ್ಯ | ಬೇಳೆಕಾಳು | ಒಟ್ಟು |
| ೧೯೫೧-೫೬ | ೪೬ | ೧೦ | ೩೫೪ | ೬೫ | ೪೧೯ |
| ೧೯೮೬-೯೧ | ೨೫ | ೧೨ | ೪೩೪ | ೪೦ | ೪೭೪ |
| ೧೯೯೧-೯೬ | ೧೪೬ | ೧೨ | ೪೪೭ | ೩೮ | ೪೮೫ |
| ೧೯೯೬-೨೦೦೧ | ೧೬೧ | ೧೨ | ೪೩೪ | ೩೩ | ೪೬೮ |

* ನಿವ್ವಳ ಉತ್ಪಾದನೆಯು ಒಟ್ಟು ಉತ್ಪಾದನೆಯ ಶೇ. ೮೭.೫ರಷ್ಟಿರುತ್ತದೆ. ಉಳಿದ ಶೇ. ೧೨.೫ ಬೀಜಕ್ಕೆ ಮತ್ತು ಅಪವ್ಯಯವಾಗಿ ಬಿಡುತ್ತದೆ.

* ತಲಾ ಲಭ್ಯತೆಯು ತಲಾ ಉತ್ಪಾದನೆ ಮತ್ತು ಆಯಾತಗಳನ್ನು ಒಳಗೊಂಡಿದೆ.

ಆಧಾರ: ದತ್ ಮತ್ತು ಸುಂದರಂ ಇಂಡಿಯನ್ ಇಕಾನಮಿ, ೨೦೦೫, ಪು.೪೯೯

೧೯೫೦-೫೧ರಲ್ಲಿ ಭಾರತದ ಒಟ್ಟು ಆಹಾರೋತ್ಪಾದನೆ ೫೦ ದಶಲಕ್ಷ ಟನ್ನುಗಳಷ್ಟಿತ್ತು. ಆಗ ಆಹಾರದ ತಲಾ ಲಭ್ಯತೆ ೩೯೫ ಗ್ರಾಮುಗಳಷ್ಟಾಗಿತ್ತು. ಈಗ ಭಾರತದ ಒಟ್ಟು ಆಹಾರೋತ್ಪಾದನೆ ೨೧೨ ದಶಲಕ್ಷ ಟನ್ನುಗಳಿದ್ದು ಪ್ರತಿಯೊಬ್ಬ ಭಾರತೀಯನಿಗೆ ೫೦೦ ಗ್ರಾಮುಗಳಿಗಿಂತ ಅಧಿಕ ಆಹಾರ ಲಭ್ಯವಾಗುತ್ತಿದೆ.

ಡಿಸೆಂಬರ್ ೨೦೦೦ದಿಂದ ಭಾರತವು ಅಕ್ಕಿ ಮತ್ತು ಗೋಧಿಯನ್ನು ನಿರ್ಯಾತ ಮಾಡುತ್ತಿದೆ. ಆಹಾರ ಧಾನ್ಯಗಳ ಸಂಗ್ರಹ ೩೧ ದಶಲಕ್ಷ ಟನ್ನುಗಳನ್ನು ದಾಟಿದ್ದು ನಿರ್ಯಾತ ಮಾಡಬೇಕಾದ ಅನಿವಾರ್ಯತೆಯನ್ನು ಉಂಟು ಮಾಡಿತು. ಈಗ ಭಾರತವು ಜಗತ್ತಿನ ದ್ವಿತೀಯ ಅಕ್ಕಿ ನಿರ್ಯಾತಗಾರ ಮತ್ತು ಏಳನೆಯ ಗೋಧಿ ರಫ್ತುದಾರ ರಾಷ್ಟ್ರವಾಗಿದೆ. ದೇಶದೊಳಗಿನ ಬರಗಾಲ ಪರಿಸ್ಥಿತಿ ಮತ್ತು ಬಳಕೆಯ ಹೆಚ್ಚಳದ ಹೊರತಾಗಿಯೂ ಭಾರತ ಅಕ್ಕಿ ಮತ್ತು ಗೋಧಿ ನಿರ್ಯಾತದಾರ ರಾಷ್ಟ್ರವಾಗಿರುವುದು ಹೆಮ್ಮೆಯ ಸಾಧನೆಯಾಗಿದೆ. ಈವರೆಗೆ ಭಾರತವು ೪ ಬಿಲಿಯನ್ ಅಮೆರಿಕನ್ ಡಾಲರುಗಳಿಗಿಂತ ಅಧಿಕ ಮೌಲ್ಯದ ಅಕ್ಕಿ ಮತ್ತು ಗೋಧಿ ರಫ್ತು ಮಾಡಿದೆ.

### ಆಹಾರ ಸಮಸ್ಯೆ

ಆಹಾರೋತ್ಪಾದನೆಯಲ್ಲಿ ಸ್ವಾವಲಂಬನೆ ಸಾಧಿಸಿ ನಿರ್ಯಾತ ಮಾಡುತ್ತಿದ್ದರೂ ಭಾರತ ಆಹಾರ ಸಮಸ್ಯೆಯ ಸುಳಿಯಲ್ಲಿ ಸಿಲುಕಿಕೊಂಡಿದೆ. ಆಹಾರದ ಬೇಡಿಕೆ ಮತ್ತು ಪೂರೈಕೆಗಳ ನಡುವೆ ಸಮತೋಲನವಿಲ್ಲದಿರುವುದು ಆಹಾರದ ಸಮಸ್ಯೆ ಉಂಟಾಗಲು ಕಾರಣವಾಗಿದೆ. ಆಹಾರ ಸಮಸ್ಯೆಯನ್ನು ಹೀಗೆ ವಿಶ್ಲೇಷಿಸಬಹುದು.

**ಆಹಾರ ಸಮಸ್ಯೆ**

| ಬೇಡಿಕೆಯ ಸಮಸ್ಯೆಗಳು | ಪೂರೈಕೆಯ ಸಮಸ್ಯೆಗಳು |
|---|---|
| *ಜನಸಂಖ್ಯೆಯ ಹೆಚ್ಚಳ | *ಉತ್ಪಾದನೆಯ ನಿಧಾನ ಏರಿಕೆ |
| *ಕೊಳ್ಳುವ ಶಕ್ತಿಯ ಕೊರತೆ | *ಆಹಾರಧಾನ್ಯ ಉತ್ಪಾದನಾ ಕ್ಷೇತ್ರದ ಇಳಿಕೆ |
| *ಬದಲಾಗುತ್ತಿರುವ ಅನುಭೋಗ ಕ್ರಮ | *ಸಮರ್ಥ ನೀತಿಯ ಕೊರತೆ |
| *ಕೂಡಿಡುವ ಪ್ರವೃತ್ತಿ | *ವಿತರಣಾ ವ್ಯವಸ್ಥೆಯ ಲೋಪಗಳು |

**ನಕ್ಷೆ ೩.೨. ಭಾರತದ ಆಹಾರ ಸಮಸ್ಯೆ**

**ಬೇಡಿಕೆಯ ಸಮಸ್ಯೆಗಳು:** ಕೊಳ್ಳಬೇಕೆಂಬ ಆಸೆಯು ಕೊಳ್ಳುವ ಸಾಮರ್ಥ್ಯದೊಡನೆ ಸಂಗಮಿಸಿದಾಗ ಬೇಡಿಕೆ ಉದ್ಭವಿಸುತ್ತದೆ. ಆಹಾರ ಧಾನ್ಯಗಳ ಬೇಡಿಕೆಯ ಭಾಗದ ಸಮಸ್ಯೆಗಳಿವು

**೧. ಜನಸಂಖ್ಯೆಯ ಹೆಚ್ಚಳ:** ಭಾರತದಲ್ಲಿ ಜನಸಂಖ್ಯೆ ತೀವ್ರವಾಗಿ ಏರುತ್ತಿದೆ. ಆದರೆ ಆಹಾರೋತ್ಪಾದನೆ ಅದೇ ಪ್ರಮಾಣದಲ್ಲಿ ಏರಿಕೆಯಾಗುತ್ತಿಲ್ಲ. ಆದುದರಿಂದ ಬೇಡಿಕೆ ಮತ್ತು ಪೂರೈಕೆಯ ನಡುವೆ ಅಂತರ ನಿರ್ಮಾಣವಾಗುತ್ತಿದೆ. ೨೦೨೦ರಲ್ಲಿ ಬೇಡಿಕೆಯು ಪೂರೈಕೆಗಿಂತ ಅಧಿಕವಾಗಲಿದ್ದು ಸಮಸ್ಯೆ ತೀವ್ರವಾಗಲಿದೆ.

**೨. ಕೊಳ್ಳುವ ಶಕ್ತಿಯ ಕೊರತೆ:** ಈಗ ಭಾರತ ಆಹಾರೋತ್ಪಾದನೆಯಲ್ಲಿ ಸ್ವಾವಲಂಬಿಯಾಗಿದ್ದರೂ ಶೇ. ೨೭ರಷ್ಟು ಮಂದಿ ತಮ್ಮ ಅಸ್ತಿತ್ವಕ್ಕೆ ಅಗತ್ಯವಿರುವಷ್ಟು ಆಹಾರ ಕೊಳ್ಳಲಾಗದ ದುಸ್ಥಿತಿಯಲ್ಲಿದ್ದಾರೆ. ಭಾರತದಲ್ಲಿ ಹಸಿವಿನಿಂದಾಗಿ ಗಣನೀಯ ಸಂಖ್ಯೆಯಲ್ಲಿ ಸಾವು ಸಂಭವಿಸುತ್ತಿದೆ.

**೩. ಬದಲಾಗುತ್ತಿರುವ ಆಹಾರ ಕ್ರಮ:** ಭಾರತದಲ್ಲಿ ಈಗ ಸಂಸ್ಕರಿತ ಆಹಾರಕ್ಕೆ (processed food) ಹೆಚ್ಚು ಬೇಡಿಕೆಯಿದೆ. ಆಹಾರ ಧಾನ್ಯ ಬೆಳೆಯುವ ರೈತರು ಸಂಸ್ಕರಣೆ ಬಗ್ಗೆ ತೀರಾ ಅಜ್ಞಾನ ಹೊಂದಿದ್ದಾರೆ.

**೪. ಕೂಡಿಡುವ ಪ್ರವೃತ್ತಿ:** ವ್ಯಾಪಾರಿಗಳಲ್ಲಿ ಮತ್ತು ಶ್ರೀಮಂತರಲ್ಲಿ ಆಹಾರ ಧಾನ್ಯ ಕೂಡಿಡುವ ಪ್ರವೃತ್ತಿಯಿದೆ. ಇದು ಕಾಳಸಂತೆಗೆ (black market) ಮತ್ತು ಕಾಳಧನ (black money) ನಿರ್ಮಾಣಕ್ಕೆ ಕಾರಣವಾಗುತ್ತಿದೆ.

**ಪೂರೈಕೆಯ ಸಮಸ್ಯೆಗಳು:** ಆಹಾರ ಧಾನ್ಯಗಳ ಪೂರೈಕೆಯ ಭಾಗದ ಸಮಸ್ಯೆಗಳಿವು

**೧. ಉತ್ಪಾದನೆಯ ನಿಧಾನ ಏರಿಕೆ:** ಭಾರತದಲ್ಲಿ ಆಹಾರೋತ್ಪಾದನೆಯ ಏರಿಕೆಯ ಗತಿ ಆಶಾದಾಯಕವಾಗಿಲ್ಲ. ಕೆಲವೊಮ್ಮೆ ಹವಾಮಾನದ ವೈಪರೀತ್ಯಗಳಿಂದಾಗಿ ಉತ್ಪಾದನೆಯಲ್ಲಿ ಏರಿಳಿತಗಳಾಗುತ್ತವೆ.

**೨. ಉತ್ಪಾದನಾ ಕ್ಷೇತ್ರದ ಇಳಿಕೆ :** ಭಾರತದಲ್ಲಿ ಆಹಾರ ಧಾನ್ಯಗಳ ಉತ್ಪಾದನೆಯ ಕ್ಷೇತ್ರ ಕಳವಳಕಾರಿಯಾಗಿ ಕಡಿಮೆಯಾಗುತ್ತಿದೆ. ಅಡಿಕೆ, ಕೊಕ್ಕೋ, ರಬ್ಬರು, ತಂಬಾಕು, ಗಸಗಸೆ ಮತ್ತಿತರ ವಾಣಿಜ್ಯ ಮತ್ತು ತೋಟದ ಬೆಳೆಗಳು ಆಹಾರ ಬೆಳೆಗಳ ಪ್ರದೇಶಗಳನ್ನು ಆಕ್ರಮಿಸಿಕೊಳ್ಳುತ್ತಿವೆ. ವಾಣಿಜ್ಯ ಬೆಳೆಗಳಿಗೂ ಬೆಂಬಲ ಬೆಲೆ ನೀಡಬೇಕೆಂಬ ಬೇಡಿಕೆಯನ್ನು ಶ್ರೀಮಂತ ರೈತರು ಮಂಡಿಸುತ್ತಿದ್ದಾರೆ.

**೩. ಸಮರ್ಥ ನೀತಿಯ ಕೊರತೆ :** ಉತ್ಪಾದಿತವಾದ ಆಹಾರ ಧಾನ್ಯಗಳನ್ನು ಸಂಸ್ಕರಿಸುವ, ಪ್ರಮಾಣ ನೀಡುವ ಮತ್ತು ಹಾಳಾಗದಂತೆ ಸಂರಕ್ಷಿಸುವ ಸಮಗ್ರ ರಾಷ್ಟ್ರೀಯ ನೀತಿಯ ಸಮರ್ಪಕ ಅನುಷ್ಠಾನದಲ್ಲಿ ಸರಕಾರ ದಯನೀಯವಾಗಿ ಸೋತಿದೆ. ಪರಿಣಾಮವಾಗಿ ಆಹಾರ ಧಾನ್ಯಗಳನ್ನು ಬೆಳೆಸುವ ಸಣ್ಣ ಮತ್ತು ಅಂಚಿನ ರೈತರು ಸಂಕಷ್ಟಕ್ಕೀಡಾಗಿದ್ದಾರೆ.

೪. ವಿತರಣಾ ವ್ಯವಸ್ಥೆಯ ಲೋಪ : ಉತ್ಪಾದನೆಯ ಸ್ಥಳದಿಂದ ಅನುಭೋಗದ ಸ್ಥಳಕ್ಕೆ ಆಹಾರ ಧಾನ್ಯಗಳನ್ನು ಒಯ್ಯುವ ಮತ್ತು ವಿತರಿಸುವ ಸಮರ್ಥ ವ್ಯವಸ್ಥೆ ಇಲ್ಲದಿರುವುದು ಇನ್ನೊಂದು ಸಮಸ್ಯೆಯಾಗಿದೆ. ಸರಕಾರದ ಸಾರ್ವಜನಿಕ ವಿತರಣಾ ನೀತಿ ಭ್ರಷ್ಟವಾಗಿ ಬಿಟ್ಟಿದೆ.

### ೩.೩.೨. ಆಹಾರ ಭದ್ರತೆ

**ಅರ್ಥ ವಿವರಣೆ :** ಆಹಾರದ ಲಭ್ಯತೆಯನ್ನು ಮತ್ತು ಕೊಳ್ಳುವ ಸಾಮರ್ಥ್ಯದ ಅಸ್ತಿತ್ವವನ್ನು ಒಟ್ಟಾಗಿ ಆಹಾರ ಭದ್ರತೆ(food security) ಎಂದು ಕರೆಯಲಾಗುತ್ತದೆ. ಆಹಾರದ ಭದ್ರತೆಯೆಂದರೆ ಜನರಿಗೆ ಬೇಕೆಂದಾಗ ಬೇಕಾದಷ್ಟು ಪ್ರಮಾಣದಲ್ಲಿ ಆಹಾರ ಧಾನ್ಯಗಳನ್ನು ಕೊಳ್ಳಲು ಸಾಧ್ಯವಾಗುವುದು ಎಂದರ್ಥ.

ಆಹಾರದ ಅಭದ್ರತೆ(food insecurity)ಗೆ ಎರಡು ಕಾರಣಗಳು ೧. ಆಹಾರ ಲಭ್ಯವಿದ್ದರೂ ಕೊಂಡುಕೊಳ್ಳಲು ಹಣವಿಲ್ಲದಿರುವುದು ಮತ್ತು ೨. ಹಣವಿದ್ದರೂ ಆಹಾರ ಲಭ್ಯವಾಗದಿರುವುದು. ಮೊದಲನೆಯದು ಬೇಡಿಕೆಗೆ ಸಂಬಂಧಿಸಿದ ಸಮಸ್ಯೆಯಾದ ಎರಡನೆಯದು ಪೂರೈಕೆಗೆ ಸಂಬಂಧಿಸಿದ ಸಮಸ್ಯೆಯಾಗಿದೆ. ಆದುದರಿಂದ ಆಹಾರದ ಬೇಡಿಕೆ ಮತ್ತು ಪೂರೈಕೆ ಸಮತೋಲನದಲ್ಲಿರುವಂತೆ ನೋಡಿಕೊಳ್ಳುವುದನ್ನು ಆಹಾರದ ಭದ್ರತೆ ಎಂದು ವ್ಯಾಖ್ಯಾನಿಸಬಹುದು.

ರೋಮಿನಲ್ಲಿ ೧೯೯೬ರಲ್ಲಿ ನಡೆದ ವಿಶ್ವ ಆಹಾರ ಶೃಂಗಸಭೆಯಲ್ಲಿ(world food summit) ಆಹಾರ ಭದ್ರತೆಗೆ ಹೊಸದೊಂದು ವ್ಯಾಖ್ಯೆ ನೀಡಲಾಯಿತು. ಅದು ಹೀಗಿದೆ

ಎಲ್ಲಾ ಜನರಿಗೆ, ಎಲ್ಲಾ ಕಾಲದಲ್ಲಿ ಸ್ವಸ್ಥ ಮತ್ತು ಕ್ರಿಯಾಶೀಲ ಈವನ ನಡೆಸಲು, ಅವರ ಪಥ್ಯದ ಅವಶ್ಯಕತೆಗಳನ್ನು(dietary needs) ಮತ್ತು ಆಹಾರದ ಅಭಿರುಚಿಗಳನ್ನು ಈಡೇರಿಸಲು, ಸಾಕಷ್ಟು ಸುರಕ್ಷಿತ ಮತ್ತು ಪೌಷ್ಠಿಕಾಂಶ ಭರಿತ ಆಹಾರ ಪಡೆಯುವ ಭೌತಿಕ ಮತ್ತು ಆರ್ಥಿಕ ಸವಲತ್ತುಗಳಿದ್ದರೆ ಆಹಾರ ಭದ್ರತೆ ಅಸ್ತಿತ್ವದಲ್ಲಿರುತ್ತದೆ.

**ಮೂರು ಭಾಗಗಳು :** ಭಾರತದ ಪ್ರಸಿದ್ಧ ಕೃಷಿ ವಿಜ್ಞಾನಿ ಪ್ರೊ. ಸ್ವಾಮಿನಾಥನ್ ಪ್ರಕಾರ ಆಹಾರ ಭದ್ರತೆಯಲ್ಲಿ ಮೂರು ಭಾಗಗಳಿವೆ

೧. ಮೊದಲನೆಯ ಭಾಗ ಆಹಾರದ ಲಭ್ಯತೆ(availability) ಇದು ಆಹಾರಧಾನ್ಯಗಳ ಉತ್ಪಾದನೆ ಮತ್ತು ಆಯಾತವನ್ನು ಅವಲಂಬಿಸಿಕೊಂಡಿದೆ.

೨. ಎರಡನೆಯದು ಆಹಾರಕ್ಕೆ ಪ್ರವೇಶ(acess). ಇದು ಕೊಳ್ಳುವ ಶಕ್ತಿಯನ್ನು ಅವಲಂಬಿಸಿಕೊಂಡಿದೆ.

೩. ಮೂರನೆಯದು ಆಹಾರದ ಹೀರುವಿಕೆ(absorption) ಇದು ಪರಿಶುದ್ಧ ಕುಡಿಯುವ ನೀರಿನ ಲಭ್ಯತೆ, ಸ್ವಸ್ಥ ಪರಿಸರ, ಪ್ರಾಥಮಿಕ ಆರೋಗ್ಯ ಮತ್ತು ಶಿಕ್ಷಣ ಇವನ್ನು ಅವಲಂಬಿಸಿದೆ.

**ಆಹಾರ ಭದ್ರತಾ ಸಮಸ್ಯೆಗಳು**

ಆಹಾರ ಭದ್ರತೆಗೆ ಸಂಬಂಧಿಸಿದ ಪ್ರಮುಖ ಸಮಸ್ಯೆಗಳು ಇವು

**೧. ಆಹಾರದ ಲಭ್ಯತೆಯ ಸಮಸ್ಯೆ:** ಆಹಾರದ ಉತ್ಪಾದನೆಯಲ್ಲಿ ಅಸ್ಥಿರತೆ ಕಾಣಿಸಿಕೊಂಡಾಗ ಮತ್ತು ವಿತರಣೆಯ ಲೋಪದೋಷಗಳಿಂದ ಆಹಾರದ ಲಭ್ಯತೆಯ ಸಮಸ್ಯೆ ಉಂಟಾಗುತ್ತದೆ. ಆಹಾರ ಧಾನ್ಯಗಳ ಉತ್ಪಾದನೆಯ ಹೆಚ್ಚಳ, ಆಯಾತ ಮತ್ತು ಸಮರ್ಪಕ ವಿತರಣಾ ವ್ಯವಸ್ಥೆಯಿಂದ ಈ ಸಮಸ್ಯೆಯನ್ನು ಪರಿಹರಿಸಬಹುದು.

**೨. ಕೊಳ್ಳುವ ಸಾಮರ್ಥ್ಯದ ಕೊರತೆ:** ವಿಶ್ವದ ಒಟ್ಟು ಬಡವರಲ್ಲಿ ಶೇ. ೨೨ರಷ್ಟು ಮಂದಿ ಭಾರತೀಯರು. ಇವರು ಕೊಳ್ಳುವ ಸಾಮರ್ಥ್ಯದಿಂದ ವಂಚಿತರು. ಆಹಾರ ಧಾನ್ಯಗಳಿಗೆ ಸಬ್ಸಿಡಿ ನೀಡಿ ಕಡಿಮೆ ದರದಲ್ಲಿ ಪೂರೈಕೆ ಮಾಡುವುದು, ಬಡತನ ಮತ್ತು ನಿರುದ್ಯೋಗ ನಿವಾರಣಾ ಕಾರ್ಯಕ್ರಮಗಳನ್ನು ಪ್ರಾಮಾಣಿಕವಾಗಿ ಹಮ್ಮಿಕೊಳ್ಳುವುದು ಈ ಸಮಸ್ಯೆಗಳಿಗೆ ಪರಿಹಾರವಾಗಿದೆ.

**೩. ಆರೋಗ್ಯದ ಸಮಸ್ಯೆ:** ಶುದ್ಧ ನೀರಿನ ಮತ್ತು ಪೌಷ್ಟಿಕ ಆಹಾರದ ಅಲಭ್ಯತೆಯಿಂದಾಗಿ ಶೇ. ೫೦ರಷ್ಟು ಭಾರತೀಯು ಎಲುಬು ಗೂಡುಗಳಂತೆ ಕಾಣುತ್ತಾರೆ. ಶುದ್ಧ ಕುಡಿಯುವ ನೀರನ್ನು ಒದಗಿಸಿ, ಪರಿಸರ ಸಂರಕ್ಷಿಸಿ, ಆರೋಗ್ಯ ಸವಲತ್ತುಗಳನ್ನು ನೀಡಿದರೆ ಆರೋಗ್ಯ ಸಮಸ್ಯೆ ಬಗೆಹರಿಯುತ್ತದೆ.

**ಆಹಾರ ಭದ್ರತಾ ಕ್ರಮಗಳ ಮೂಲಕ ಆಹಾರದ ಲಭ್ಯತೆ**

ಸಮರ್ಪಕ ಆಹಾರ ನಿರ್ವಹಣಾ(food management) ಕ್ರಮಗಳಿಂದ ಅಥವಾ ಸಾರ್ವಜನಿಕ ವಿತರಣಾ ವ್ಯವಸ್ಥೆಯಿಂದ ಎಲ್ಲರಿಗೂ ಆಹಾರ ಲಭ್ಯವಾಗುವಂತೆ ಸರಕಾರ ಕೆಲವು ಕ್ರಮಗಳನ್ನು ಕೈಗೊಂಡಿದೆ. ಆಹಾರ ಲಭ್ಯತೆಗೆ ಕೈಗೊಳ್ಳಲಾದ ಆಹಾರ ಭದ್ರತಾ ಕ್ರಮಗಳು ಇವು

**೧. ಆಹಾರ ಧಾನ್ಯಗಳ ಸಂಗ್ರಹಣೆ :** ಆಹಾರ ಧಾನ್ಯಗಳ ಸಂಗ್ರಹಣೆ(procurement) ಮೊದಲನೆಯ ಹೆಜ್ಜೆಯಾಗಿದೆ. ಆಹಾರ ಧಾನ್ಯಗಳಿಗೆ ಮುಖ್ಯವಾಗಿ ಅಕ್ಕಿ ಮತ್ತು ಗೋಧಿಗೆ, ಕನಿಷ್ಠ ಲಾಭದಾಯಕ ಬೆಂಬಲ ಬೆಲೆ(Support Price) ನೀಡಿ ಸಂಗ್ರಹಿಸಲಾಗುತ್ತದೆ. ಸರಕಾರ ನಿಗದಿ ಪಡಿಸುವ ಕನಿಷ್ಠ ಮೌಲ್ಯಕ್ಕೆ ಬೆಂಬಲ ಬೆಲೆಯೆಂದು ಹೆಸರು. ಬೆಂಬಲ ಬೆಲೆಯು ಆಹಾರ ಧಾನ್ಯಗಳ ಉತ್ಪಾದನೆಗೆ ಉತ್ತೇಜನ ನೀಡಿ ಉತ್ಪಾದನೆ ಕುಸಿಯದಂತೆ ನೋಡಿಕೊಳ್ಳುತ್ತದೆ.

**೨. ಆಹಾರ ಧಾನ್ಯಗಳ ಕಾಪು ದಾಸ್ತಾನು:** ಸಂಗ್ರಹಿಸಿದ ಆಹಾರ ಧಾನ್ಯಗಳ ಕಾಪು ದಾಸ್ತಾನು (buffer stock) ನಿರ್ಮಾಣ ಎರಡನೆಯ ಹೆಜ್ಜೆಯಾಗಿದೆ. ಆಹಾರ ಧಾನ್ಯಗಳನ್ನು ಬೆಂಬಲ ಬೆಲೆ ನೀಡಿ ಕೊಂಡುಕೊಂಡು ಸಂಗ್ರಹಿಸಿಡುವುದಕ್ಕೆ ಕಾಪು ದಾಸ್ತಾನು ಎಂದು ಹೆಸರು. ಕಾಪು ದಾಸ್ತಾನು ನಿರ್ಮಾಣವು ಆಹಾರ ಪೂರೈಕೆಯ ಅನಿಶ್ಚಿತತೆಯನ್ನು ಹೋಗಲಾಡಿಸುತ್ತದೆ.

೩. **ಸಾರ್ವಜನಿಕ ವಿತರಣೆ:** ಸಾರ್ವಜನಿಕ ವಿತರಣಾ ವ್ಯವಸ್ಥೆಯ (public distribution) ಮೂಲಕ ಆಹಾರಧಾನ್ಯಗಳನ್ನು ಹಂಚುವುದು ಮೂರನೆಯ ಹೆಜ್ಜೆಯಾಗಿರುತ್ತದೆ. ನ್ಯಾಯಬೆಲೆ ಅಂಗಡಿಗಳ ಮೂಲಕ ಅವಶ್ಯಕ ಸಾಮಗ್ರಿಗಳನ್ನು ವಿತರಿಸುವುದಕ್ಕೆ ಸಾರ್ವಜನಿಕ ವಿತರಣಾ ವ್ಯವಸ್ಥೆಯೆಂದು ಹೆಸರು. ಸಾರ್ವಜನಿಕ ವಿತರಣಾ ವ್ಯವಸ್ಥೆಯನ್ನು ರಾಜ್ಯ ಸರಕಾರವು ನಿರ್ವಹಿಸುತ್ತದೆ. ಕೇಂದ್ರ ಸರಕಾರವು ರಾಜ್ಯಗಳಿಗೆ ಆಹಾರ ಧಾನ್ಯಗಳ ಪೂರೈಕೆ ಮಾಡುತ್ತದೆ.

ಸಂಗ್ರಹವಾದ ಆಹಾರಧಾನ್ಯಗಳನ್ನು ಬಡತನ ನಿವಾರಣೆ ಮತ್ತು ಉದ್ಯೋಗ ನಿರ್ಮಾಣ ಯೋಜನೆಗಳಿಗೂ ಬಳಸಬಹುದಾಗಿದೆ. ಬರಗಾಲ, ಅತಿವೃಷ್ಟಿ ಮತ್ತಿತರ ನೈಸರ್ಗಿಕ ಅನಾಹುತಗಳ ಸಂದರ್ಭದಲ್ಲಿ ಕೂಲಿಗಾಗಿ ಕಾಳು (food for work) ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗುತ್ತದೆ. ಪಡಿತರ ಕಾರ್ಡುದಾರರಿಗೆ ಕಡಿಮೆ ಬೆಲೆಯಲ್ಲಿ ಆಹಾರಧಾನ್ಯಗಳನ್ನು ವಿತರಿಸಲಾಗುತ್ತದೆ. ಶಿಕ್ಷಣ ಸಂಸ್ಥೆಗಳಲ್ಲಿ ಮಧ್ಯಾಹ್ನದ ಬಿಸಿಯೂಟ ಯೋಜನೆಯು ಸಾರ್ವಜನಿಕ ವಿತರಣಾ ವ್ಯವಸ್ಥೆಯ ಒಂದು ಅಂಗವಾಗಿರುತ್ತದೆ.

ಸಾರ್ವಜನಿಕ ವಿತರಣಾ ವ್ಯವಸ್ಥೆಯ ಮೂರು ಕ್ರಮಗಳಿವು

೧. ಪಡಿತರ ಚೀಟಿ ಮೂಲಕ ಆಹಾರ ಧಾನ್ಯ ವಿತರಣೆ.

೨. ಕೂಲಿಗಾಗಿ ಕಾಳು ಯೋಜನೆಯಡಿಯಲ್ಲಿ ಆಹಾರ ಧಾನ್ಯ ವಿತರಣೆ.

೩. ಬಿಸಿಯೂಟ ಯೋಜನೆಗೆ ಆಹಾರ ಧಾನ್ಯ ವಿತರಣೆ

**ಆಹಾರ ಧಾನ್ಯಗಳ ಬ್ಯಾಂಕು :** ಈಗಿನ ಸಾರ್ವಜನಿಕ ವಿತರಣಾ ವ್ಯವಸ್ಥೆಯು ಕೇದ್ರದ ಸಹಾಯದಿಂದ ರಾಜ್ಯಗಳು ನಿಭಾಯಿಸುವ ಆಹಾರ ವಿತರಣಾ ಕಾರ್ಯಕ್ರಮವಾಗಿದ್ದು ಅನೇಕ ಲೋಪದೋಷಗಳಿಂದ ಬಳಲುತ್ತಿದೆ. ಸ್ಥಳೀಯ ಹಂತದಲ್ಲಿ ಆಹಾರಧಾನ್ಯಗಳ ಬ್ಯಾಂಕುಗಳನ್ನು(food grains banks) ಸೃಷ್ಟಿಸುವ ಬಗ್ಗೆ ಅಧ್ಯಯನಗಳು ನಡೆದಿವೆ.

**ವೈಶಿಷ್ಟ್ಯಗಳು :** ಸ್ಥಳೀಯವಾಗಿ ಆಹಾರ ಧಾನ್ಯಗಳನ್ನು ಸಂಗ್ರಹಿಸುವ ಮತ್ತು ವಿತರಿಸುವ ಪರಿಕಲ್ಪನೆಗೆ ಆಹಾರ ಧಾನ್ಯಗಳ ಬ್ಯಾಂಕಿಂಗು ಎಂದು ಹೆಸರು. ಅದರ ವೈಶಿಷ್ಟ್ಯಗಳು ಇವು

೧. ಸ್ವಸಹಾಯ ಗುಂಪುಗಳು ಆಹಾರ ಧಾನ್ಯ ಬ್ಯಾಂಕುಗಳ ನಿರ್ವಹಣೆ ನಡೆಸುತ್ತದೆ.

೨. ಸದಸ್ಯರ ನಿಧಿಯಿಂದ ಮತ್ತು ಸರಕಾರದ ದಾಸ್ತಾನು ವ್ಯವಸ್ಥೆಯಿಂದ ಬ್ಯಾಂಕುಗಳು ಕಾರ್ಯ ನಿರ್ವಹಿಸುತ್ತವೆ.

೩. ಆಹಾರಧಾನ್ಯಗಳ ಬ್ಯಾಂಕುಗಳು ಉತ್ಪಾದನೆಯನ್ನು ಅನುಭೋಗಕ್ಕೆ ನಿಕಟವನ್ನಾಗಿ ಮಾಡುತ್ತದೆ.

೪. ಅವು ಕೇಂದ್ರೀಕೃತ ಆಹಾರ ನಿರ್ವಹಣಾ ವ್ಯವಸ್ಥೆಯ ಲೋಪದೋಷಗಳನ್ನು ನಿವಾರಿಸುತ್ತವೆ.

ಸರಕಾರವು ೨೦೦೪ರಲ್ಲಿ ೧೩ ರಾಜ್ಯಗಳ ಧಾನ್ಯ ಬ್ಯಾಂಕುಗಳಿಗಾಗಿ ರೂ. ೨೩೦ ಕೋಟಿ ನಿಯುಕ್ತಿಗೊಳಿಸಿದೆ. ಈಗ ೨೫೪೦೦ ಗ್ರಾಮಗಳಲ್ಲಿ ಧಾನ್ಯಗಳ ಬ್ಯಾಂಕುಗಳಿವೆ. ಸರಕಾರೇತರ ಸಂಘಸಂಸ್ಥೆಗಳು ಈ ಕ್ಷೇತ್ರದಲ್ಲಿ ಹೆಚ್ಚಿನ ಸೇವೆ ಸಲ್ಲಿಸಲು ಅವಕಾಶಗಳಿವೆ.

ಪ್ರಯೋಜನಗಳು : ಧಾನ್ಯ ಬ್ಯಾಂಕುಗಳ ಪ್ರಯೋಜನಗಳಿವು:

೧. ಅದು ಈಗಾಗಲೇ ಅಸ್ತಿತ್ವದಲ್ಲಿರುವ ರೂಢಿ, ಸಂಸ್ಥೆ ಅಥವಾ ಪರಿಪಾಠಗಳನ್ನು ಅವಲಂಬಿಸಿಕೊಂಡಿರುತ್ತದೆ. ಹಾಗಾಗಿ ಯಾವುದೇ ನಿರ್ಮಾಣ ವೆಚ್ಚದ ಅಗತ್ಯವಿರುವುದಿಲ್ಲ.

೨. ಕೊರತೆಯ ಕಾಲದಲ್ಲಿ ಹಸಿವಿನಿಂದ ಮರಣ ಸಂಭವಿಸದಂತೆ ನೋಡಿಕೊಳ್ಳುತ್ತದೆ.

೩. ಸ್ಥಳೀಯ ಆಹಾರಧಾನ್ಯಗಳ ಉಳಿತಾಯವನ್ನು ಮತ್ತು ವಿನಿಮಯವನ್ನು ಉತ್ತೇಜಿಸುತ್ತದೆ.

೪. ಧಾನ್ಯಗಳು ಹಣಕ್ಕೆ ಪರ್ಯಾಯವಾಗಿ ಬಳಕೆಯಾಗುತ್ತವೆ. ಪರಿಣಾಮವಾಗಿ ಜನರು ಹಣ ಸಾಲ ನೀಡುವ ದಲ್ಲಾಳಿಗಳ ಮತ್ತು ಚಿನ್ನಗಿರವಿ ಇಟ್ಟುಕೊಳ್ಳುವವರ ಬಲೆಗೆ ಬೀಳುವುದಿಲ್ಲ.

೫. ಆಹಾರದ ಅಭದ್ರತೆಯನ್ನು ಹೋಗಲಾಡಿಸುತ್ತದೆ.

೬. ನಿರ್ವಹಣೆಯಲ್ಲಿ ಪಾರದರ್ಶಕತೆಯಿರುವುದರಿಂದ ಯಾರೂ ಮೋಸ ಮಾಡುವಂತಿಲ್ಲ.

೭. ಧಾನ್ಯಗಳನ್ನು ಬಿತ್ತನೆ ಬೀಜಗಳ ಕೊಳ್ಳುವಿಕೆಗೆ ಬಳಸಿಕೊಳ್ಳಬಹುದು.

**ಕಾರ್ಯ ವಿಧಾನ**

೧. ಬಡತನದ ರೇಖೆಯ ಕೆಳಗಿರುವವರು ಈ ಬ್ಯಾಂಕುಗಳಿಂದ ಆಹಾರ ಧಾನ್ಯಗಳನ್ನು ಸಾಲವಾಗಿ ಪಡೆಯಬಹುದು.

೨. ಆಹಾರ ಧಾನ್ಯಗಳ ಸಂಗ್ರಹಣೆಗಾಗಿ ಗ್ರಾಮೀಣಾಭಿವೃದ್ಧಿ ಮಂತ್ರಾಲಯವು ಕೋಣೆಯೊಂದನ್ನು ಕಟ್ಟಿಸಿಕೊಡುತ್ತದೆ.

೩. ಸ್ಥಳೀಯ ಗ್ರಾಮಸ್ಥನು ಜನರಿಗೆ ಅಗತ್ಯವಿರುವ ಸ್ಥಳೀಯ ಧಾನ್ಯಗಳನ್ನು ಒದಗಿಸಿ ಕೊಡುತ್ತಾನೆ.

೪. ಪ್ರತಿಯೊಂದು ಬ್ಯಾಂಕು ರೂ. ೮೦೦೦ ಮೌಲ್ಯದ ೮೦ ಕ್ವಿಂಟಾಲ್ ಆಹಾರಧಾನ್ಯಗಳನ್ನು ಹೊಂದಿರುತ್ತದೆ.

೫. ಪ್ರತಿಯೊಂದು ಬ್ಯಾಂಕಿಗೆ ರೂ. ೫೦೦೦ ಮೌಲ್ಯದ ಅಳತೆ ಮತ್ತು ತೂಕದ ಸಾಧನಗಳನ್ನು ಸಂಗ್ರಹಣಾ ತೊಟ್ಟಿಗಳನ್ನು ಒದಗಿಸಲಾಗುತ್ತದೆ.

೬. ಸಾರಿಗೆ ವೆಚ್ಚದಲ್ಲಿ ಅರ್ಧಾಂಶಗಳನ್ನು ರಾಜ್ಯಗಳು ಭರಿಸಬೇಕಾಗುತ್ತದೆ.

**ಹಸಿವು ಮುಕ್ತ ಭಾರತ ಕಾರ್ಯಕ್ರಮ**

ನವದೆಹಲಿಯಲ್ಲಿ ೨೦೦೧ರ ಏಪ್ರಿಲ್ ೨೪ರಿಂದ ೨೬ರವರೆಗೆ ಹಸಿವು ಮುಕ್ತ ಭಾರತದತ್ತ (Towards Hunger Free India) ಎಂಬ ಸಮಾಲೋಚನೆಯೊಂದನ್ನು ಭಾರತ ಸರ್ಕಾರ ಎಂ.ಎಸ್. ಸ್ವಾಮಿನಾಥನ್ ರಿಸರ್ಚ್ ಫೌಂಡೇಶನ್ ಮತ್ತು ವರ್ಲ್ಡ್‌ಫುಡ್ ಪ್ರೋಗ್ರಾಂ

ಜಂಟಿಯಾಗಿ ಆಯೋಜಿಸಿದವರು. ೨೦೦೭ರ ಆಗಸ್ಟ್ ೧೫ರೊಳಗೆ ಭಾರತವನ್ನು ಹಸಿವಿನಿಂದ ಮುಕ್ತಗೊಳಿಸಲು ಈ ಕೆಳಗಿನ ಹತ್ತಂಶಗಳ ಕಾರ್ಯಕ್ರಮವನ್ನು ಅದು ಸೂಚಿಸಿದೆ.

೧. ನಿಯತವಾದ ಹಸಿವು ಮತ್ತು ಪೌಷ್ಠಿಕಾಂಶರಾಹಿತ್ಯತೆಯಿಂದ ಬಳಲುವ ವ್ಯಕ್ತಿಗಳನ್ನು ಮತ್ತು ಕುಟುಂಬಗಳನ್ನು ಗುರುತಿಸುವುದು.
೨. ಸಬಲೀಕರಣಕ್ಕಾಗಿ ಮಾಹಿತಿ ಪ್ರಸರಣ.
೩. ಪ್ರೋಟೀನು ಕ್ಯಾಲರಿ ಅಪೌಷ್ಟಿಕತೆಯನ್ನು ಹೋಗಲಾಡಿಸುವುದು.
೪. ಸೂಕ್ಷ್ಮ ಪೌಷ್ಠಿಕಾಂಶ ಕೊರತೆಯಿಂದುಂಟಾಗುವ ಸುಪ್ತ ಬಡತನವನ್ನು ಹೋಗಲಾಡಿಸುವುದು.
೫. ಶುದ್ಧ ಕುಡಿಯುವ ನೀರನ್ನು ಒದಗಿಸುವುದು ಮತ್ತು ಪರಿಸರ ಸಂರಕ್ಷಣೆ.
೬. ಜನರ ಕೊಳ್ಳುವ ಸಾಮರ್ಥ್ಯವನ್ನು ವೃದ್ಧಿಸುವುದು.
೭. ಸ್ತ್ರೀಯರಿಗೆ ಮತ್ತು ಮಕ್ಕಳಿಗೆ ವಿಶೇಷ ಗಮನ ನೀಡುವುದು.
೮. ಆಹಾರ ಆಧಾರಿತ ಸುರಕ್ಷತೆಯನ್ನು ಬಲಪಡಿಸುವುದು.
೯. ಅನಾಹುತ ನಿಭಾವಣೆಯನ್ನು ಅಭಿವೃದ್ಧಿಯೊಡನೆ ಜೋಡಿಸುವುದು.
೧೦. ಕೃಷಿ ಉತ್ಪನ್ನಗಳಿಗೆ ಹೆಚ್ಚಿನ ಮಾರಾಟ ಅವಕಾಶಗಳನ್ನು ಒದಗಿಸುವುದು.

೨೦೦೪ರ ಫೆಬ್ರವರಿ ೪ ಮತ್ತು ೫ರಂದು ದೆಹಲಿಯಲ್ಲಿ ನಡೆದ ಸಮಾವೇಶದಲ್ಲಿ ಆಹಾರ ಭದ್ರತೆಗಾಗಿ, ಒಂಬತ್ತು ಅಂಶಗಳ ಕಾರ್ಯಕ್ರಮವೊಂದನ್ನು ರೂಪಿಸಲಾಗಿದೆ.

೧. ಜನಸಂಖ್ಯಾ ಸ್ಥಿರೀಕರಣ
೨. ಭೂಸಂಪನ್ಮೂಲಗಳ ಸಂರಕ್ಷಣೆ ಮತ್ತು ವೃದ್ಧಿ
೩. ನೀರಿನ ಭದ್ರತೆ ಒದಗಣೆ
೪. ಸಮುದಾಯದ ಪಾಲ್ಗೊಳ್ಳುವಿಕೆಯ ಮೂಲಕ ಅರಣ್ಯಗಳ ಸಂರಕ್ಷಣೆ ಮತ್ತು ವೃದ್ಧಿ
೫. ಜೀವ ವೈವಿಧ್ಯವನ್ನು ಸಂರಕ್ಷಿಸಿ ಬಲಪಡಿಸುವುದು.
೬. ವಾತಾವರಣವನ್ನು ಪರಿಶುದ್ಧವಾಗಿಡುವುದು.
೭. ಸಾಮಾನ್ಯ ಆಸ್ತಿ ಸಂಪನ್ಮೂಲಗಳ ನಿರ್ವಹಣೆ
೮. ಬೆಳೆಗಳನ್ನು ಮತ್ತು ಪಶುಗಳನ್ನು ಹೆಚ್ಚಿಸುವುದು
೯. ಪ್ರತಿರಾಜ್ಯದಲ್ಲೂ ಸಹ್ಯ ಆಹಾರ ಭದ್ರತೆಯನ್ನು ರೂಪಿಸುವುದು.

### ಪ್ಯೂರಾ ಕಾರ್ಯಕ್ರಮ

ರಾಷ್ಟ್ರೀಯ ಆಹಾರ ಭದ್ರತಾ ಶೃಂಗಸಭೆಯ ಮುಕ್ತಾಯ ಸಮಾರಂಭದಲ್ಲಿ ೨೦೦೭ರಲ್ಲಿ ಬಡತನ ನಿವಾರಿಸುವ ಪಥದ ನಕ್ಷೆಯೊಂದನ್ನು ರಾಷ್ಟ್ರಪತಿ ಎ.ಪಿ.ಜೆ. ಅಬ್ದುಲ್ ಕಲಾಂ ನೀಡಿದರು. ಬಡತನ, ನಿರುದ್ಯೋಗ ಮತ್ತು ಹಸಿವು ನಿವಾರಣೆಗೆ ರಾಷ್ಟ್ರಪತಿಗಳು ಪ್ಯೂರಾ (Providing Urban Aminities in Rural Areas = PURA) ಕಾರ್ಯಕ್ರಮವನ್ನು ಉದ್ಘೋಷಿಸಿದರು. ಪ್ಯೂರಾ ಕಾರ್ಯಕ್ರಮವು ಗ್ರಾಮೀಣ ಪ್ರದೇಶಗಳಲ್ಲಿ ನಗರಗಳ

ಸವಲತ್ತುಗಳನ್ನು ಒದಗಿಸುವ ಯೋಜನೆಯಾಗಿದೆ. ಪ್ಯೂರಾದ ಉದ್ದೇಶಗಳು ಮೂರು ೧. ಹಸಿವು ನಿವಾರಣೆ, ೨. ಬಡತನ ನಿವಾರಣೆ ಮತ್ತು ೩. ನಿರುದ್ಯೋಗ ನಿವಾರಣೆ.

೨೦೦೪ರ ಮುಂದಿನ ಐದು ವರ್ಷಗಳಲ್ಲಿ ಪ್ಯೂರಾವನ್ನು ೪೧೩೦ ಕ್ಲಸ್ಟರ್‌ಗಳಲ್ಲಿ ಅನುಷ್ಠಾನಗೊಳಿಸಲಾಗುತ್ತದೆ. ಯೋಜನಾ ಆಯೋಗದಿಂದ ಗುರುತಿಸಲ್ಪಡುವ ಹಿಂದುಳಿದ ಪ್ರದೇಶಗಳು, ಈಶಾನ್ಯ ಗುಡ್ಡಗಾಡು ರಾಜ್ಯಗಳು ಮತ್ತು ವಿಶೇಷ ವರ್ಗದ ರಾಜ್ಯಗಳು ಪ್ಯೂರಾ ಅನುಷ್ಠಾನದಲ್ಲಿ ಆದ್ಯತೆ ಪಡೆಯಲಿದೆ.

**೩.೩.೩. ಸಾರ್ವಜನಿಕ ವಿತರಣಾ ವ್ಯವಸ್ಥೆ**

ಆಹಾರ ಧಾನ್ಯಗಳ ಕಾಪು ದಾಸ್ತಾನಿನಿಂದ ಆಹಾರ ಧಾನ್ಯಗಳನ್ನು ನ್ಯಾಯಬೆಲೆ ಅಂಗಡಿಗಳಿಗೆ ಬಿಡುಗಡೆ ಮಾಡಿ ಪಡಿತರ ಕ್ರಮದಲ್ಲಿ ಮತ್ತು ದ್ವಿಬೆಲೆ ನೀತಿಯನುಗುಣವಾಗಿ ಹಂಚುವುದಕ್ಕೆ ಸಾರ್ವಜನಿಕ ವಿತರಣಾ ವ್ಯವಸ್ಥೆ(Public Distribution System) ಎಂದು ಹೆಸರು. ದ್ವಿಬೆಲೆ ನೀತಿಯೆಂದರೆ ಬಡವರಿಗೆ ಕಡಿಮೆ ಮತ್ತು ಇತರರಿಗೆ ಅಧಿಕ ಬೆಲೆಯಲ್ಲಿ ವಿತರಣೆ ಎಂದರ್ಥ.

**ಉದ್ದೇಶಗಳು:** ಸಾರ್ವಜನಿಕ ವಿತರಣಾ ವ್ಯವಸ್ಥೆಯು ಮೂರು ಉದ್ದೇಶಗಳನ್ನು ಹೊಂದಿದೆ

೧. ಕಡಿಮೆ ಬೆಲೆಗಳಲ್ಲಿ ಅವಶ್ಯಕ ಸಾಮಗ್ರಿಗಳ ನ್ಯಾಯಬದ್ಧ ವಿತರಣೆ.

೨. ಗ್ರಾಹಕರು ಮಧ್ಯವರ್ತಿಗಳಿಂದ ಶೋಷಣೆಗೊಳಗಾಗುವುದನ್ನು ತಪ್ಪಿಸುವುದು ಮತ್ತು

೩. ಕಾಳಸಂತೆ, ಲಾಭ ಬಡುಕತನ ಮತ್ತು ಸರಕುಗಳ ಕಾನೂನುಬಾಹಿರ ಬಚ್ಚಿಡುವಿಕೆಯನ್ನು ತಡೆಗಟ್ಟುವುದು.

ಸಾರ್ವಜನಿಕ ವಿತರಣಾ ವ್ಯವಸ್ಥೆಯು ಆಹಾರ ಭದ್ರತಾ ಕಾರ್ಯಕ್ರಮದ ಒಂದು ಅಂಗವಾಗಿದೆ. ಆರಂಭದಲ್ಲಿ ಕೇಂದ್ರ ಸರಕಾರವು ಆಹಾರಧಾನ್ಯಗಳನ್ನು ಬೆಂಬಲ ಬೆಲೆ ನೀಡಿ ಖರೀದಿಸಿ ಕಾಪು ದಾಸ್ತಾನು ನಿರ್ಮಾಣ ಮಾಡುತ್ತದೆ. ಅವಶ್ಯಕತೆಗಳಿಗನುಗುಣವಾಗಿ ಕಡಿಮೆ ದರದಲ್ಲಿ ರಾಜ್ಯಗಳಿಗೆ ಆಹಾರಧಾನ್ಯಗಳನ್ನು ವಿತರಿಸುತ್ತದೆ. ರಾಜ್ಯಗಳು ಸಹಕಾರಿ ಸಂಘಗಳ ಅಥವಾ ನ್ಯಾಯಬೆಲೆ ಅಂಗಡಿಗಳ ಮೂಲಕ ಕಾರ್ಡುದಾರರಿಗೆ ಪಡಿತರ ರೂಪದಲ್ಲಿ ಕಡಿಮೆ ಬೆಲೆಯಲ್ಲಿ ಆಹಾರ ಧಾನ್ಯಗಳನ್ನು ಹಂಚುತ್ತವೆ. ಆಹಾರ ಧಾನ್ಯಗಳು ಮಾತ್ರವಲ್ಲದೆ ಖಾದ್ಯ ತೈಲ, ಸಕ್ಕರೆ ಮತ್ತು ಸೀಮೆಎಣ್ಣೆ ಕೂಡಾ ಸಾರ್ವಜನಿಕ ವಿತರಣಾ ವ್ಯವಸ್ಥೆಯ ವ್ಯಾಪ್ತಿಗೊಳಪಟ್ಟಿದೆ.

**ಲೋಪದೋಷಗಳು:**

ಸಾರ್ವಜನಿಕ ವಿತರಣಾ ವ್ಯವಸ್ಥೆಯ ಪ್ರಮುಖ ಲೋಪದೋಷಗಳಿವು

೧. ಅದು ಬಡತನದ ರೇಖೆಯ ಕೆಳಗಿರುವವರಿಗೆ ಸಮರ್ಥ ಸೇವೆ ಸಲ್ಲಿಸಿಲ್ಲ.

೨. ಅದು ನಗರ ಪ್ರದೇಶಗಳ ಜನರ ಪರವಾಗಿದೆ.

೩. ಗ್ರಾಮೀಣ ಪ್ರದೇಶಗಳ ಬಡವರಿಂದಲೇ ತುಂಬಿರುವ ರಾಜ್ಯಗಳಲ್ಲಿ ಆಹಾರ ಭದ್ರತೆ ಒದಗಿಸಲು ಅಸಮರ್ಥವಾಗಿದೆ.

೪. ಭಾರತದ ಆಹಾರ ನಿಗಮದಿಂದ ಪೂರೈಕೆಯಾಗುವ ಆಹಾರ ಧಾನ್ಯಗಳು ನ್ಯಾಯಬೆಲೆ ಅಂಗಡಿಗಳಿಗೆ ತಲುಪುತ್ತಿಲ್ಲ.

೫. ಪಡಿತರ ಅಂಗಡಿಗಳಲ್ಲಿ ವಿತರಣೆಯಾಗುವ ಅವಶ್ಯಕ ಸಾಮಗ್ರಿಗಳ ಗುಣಮಟ್ಟ ನಿಕೃಷ್ಟವಾಗಿದೆ.

ಈ ಕಾರಣಗಳಿಗಾಗಿ ಸಾರ್ವಜನಿಕ ವಿತರಣಾ ವ್ಯವಸ್ಥೆಯನ್ನು ಪುನಾರಚಿಸಲಾಗಿದೆ. ಗುರಿ ಕೇಂದ್ರಿತ ಸಾರ್ವಜನಿಕ ವಿತರಣಾ ವ್ಯವಸ್ಥೆ ಎಂಬ ಹೊಸ ಹೆಸರನ್ನು ಅದಕ್ಕಿರಿಸಲಾಗಿದೆ.

**ಆಹಾರ ಸಮಸ್ಯೆ ನಿವಾರಿಸುವಲ್ಲಿ ವಿತರಣಾ ವ್ಯವಸ್ಥೆಯ ಪಾತ್ರ**

ಗುರಿಕೇಂದ್ರಿತ ಸಾರ್ವಜನಿಕ ವಿತರಣಾ ವ್ಯವಸ್ಥೆಯು (Targeted PDS) ೧೯೯೭ರ ಜೂನ್ ತಿಂಗಳಲ್ಲಿ ಅಸ್ತಿತ್ವಕ್ಕೆ ಬಂತು. ಬಡವರನ್ನು ಗುರಿಯಾಗಿರಿಸಿಕೊಂಡು ಪರಿಣಾಮಕಾರಿಯಾಗಿ ಪುನಾರಚಿಸಿದ ವಿತರಣಾ ವ್ಯವಸ್ಥೆಯೇ ಗುರಿಕೇಂದ್ರಿತ ವಿತರಣಾ ವ್ಯವಸ್ಥೆ. ಆಹಾರ ಸಮಸ್ಯೆಯನ್ನು ನಿವಾರಿಸುವುದು ಅದರ ಮುಖ್ಯ ಉದ್ದೇಶವಾಗಿದೆ.

ಗುರಿಕೇಂದ್ರಿತ ಸಾರ್ವಜನಿಕ ವಿತರಣಾ ವ್ಯವಸ್ಥೆಯ ಲಕ್ಷಣ (ಮುಖ್ಯಾಂಶಗಳು) ಅಥವಾ ಆಹಾರ ಸಮಸ್ಯೆಯ ನಿವಾರಣೆಯಲ್ಲಿ ಅದರ ಪಾತ್ರವನ್ನು ಹೀಗೆ ವಿವರಿಸಬಹುದು.

೧. **ಎರಡು ರೀತಿಯ ಬೆಲೆಗಳು :** ಗುರಿಕೇಂದ್ರಿತ ಸಾರ್ವಜನಿಕ ವಿತರಣಾ ವ್ಯವಸ್ಥೆಯಲ್ಲಿ ಬಡತನದ ರೇಖೆಯ ಕೆಳಗಿರುವವರಿಗೆ(BPL) ಮಾತ್ರವಲ್ಲದೆ ಬಡತನದ ರೇಖೆಯ ಮೇಲಿರುವವರಿಗೂ(APL) ಆಹಾರ ಧಾನ್ಯಗಳನ್ನು ವಿತರಿಸಲಾಗುತ್ತದೆ. ಬಡತನದ ರೇಖೆಗಿಂತ ಕೆಳಗಿರುವವರಿಗೆ ಕಡಿಮೆ ದರದಲ್ಲಿ ಮತ್ತು ಬಡತನದ ರೇಖೆಗಿಂತ ಮೇಲಿರುವವರಿಗೆ ಹೆಚ್ಚು ದರದಲ್ಲಿ ಆಹಾರ ಧಾನ್ಯ ಪೂರೈಕೆ ಮಾಡಲಾಗುತ್ತದೆ. ಇದರಿಂದಾಗಿ ಬಡವರಿಗೆ ಪ್ರಯೋಜನವಾಗುತ್ತದೆ.

೨. **ರಾಜ್ಯಗಳಿಗೆ ಅಧಿಕಾರ:** ಬಡತನದ ರೇಖೆಗಿಂತ ಕೆಳಗಿರುವವರನ್ನು ಗುರುತಿಸುವ ಜವಾಬ್ದಾರಿ ರಾಜ್ಯ ಸರ್ಕಾರಗಳದ್ದು. ಯೋಜನಾ ಆಯೋಗದ ಶಿಫಾರಸ್ಸಿಗನುಗುಣವಾಗಿ ರಾಜ್ಯಗಳು ಬಡವರನ್ನು ಗುರುತಿಸಬೇಕಾಗುತ್ತದೆ. ಆರಂಭದಲ್ಲಿ ಕಾರ್ಡುದಾರ ಕುಟುಂಬಕ್ಕೆ ೧೦ ಕಿಲೋ ಆಹಾರಧಾನ್ಯ ವಿತರಣೆಯಾಗುತ್ತಿತ್ತು. ೨೦೦೨ರ ಏಪ್ರಿಲ್‌ನಿಂದ ಕಾರ್ಡುದಾರ ಕುಟುಂಬಕ್ಕೆ ೩೫ ಕಿಲೋ ಆಹಾರ ಧಾನ್ಯ ವಿತರಣೆಯಾಗುತ್ತಿದೆ. ಬಡತನದ ರೇಖೆಗಿಂತ ಕೆಳಗಿರುವವರಿಗೆ ಕೇಂದ್ರ ನೀಡಿಕೆ ಬೆಲೆಗಿಂತ (Central Issue Price) ಕಡಿಮೆ ದರದಲ್ಲಿ ಆಹಾರ ಧಾನ್ಯ ಪೂರೈಕೆ ಮಾಡಲಾಗುತ್ತದೆ. ಬಡತನದ ರೇಖೆಗಿಂತ ಮೇಲಿರುವವರು ಕೇಂದ್ರ ನೀಡಿಕೆ ಬೆಲೆಯಷ್ಟೇ ದರದಲ್ಲಿ ಆಹಾರಧಾನ್ಯ ಬದಲಾಗಿಸಲಾಗುತ್ತದೆ.

೩. **ಬಡವರಿಗೆ ಆದ್ಯತೆ:** ವಿವಿಧ ಬಡತನ ಮತ್ತು ಉದ್ಯೋಗ ನಿವಾರಣಾ ಯೋಜನೆಗಳಡಿಯಲ್ಲಿ ನೀಡಲಾಗುವ ಆಹಾರಧಾನ್ಯಗಳ ಪ್ರಯೋಜನ ಬಡವರಿಗೆ ಲಭ್ಯವಾಗುವಂತೆ

ಎಚ್ಚರವಹಿಸಲಾಗಿದೆ. ಇವುಗಳಲ್ಲಿ ಅಂತ್ಯೋದಯ ಅನ್ನ ಯೋಜನೆ, ಸಂಪೂರ್ಣ ಗ್ರಾಮೀಣ ರೋಜಗಾರ್ ಯೋಜನೆ, ಮಧ್ಯಾಹ್ನದ ಊಟದ ಯೋಜನೆ ಒಳಗೊಂಡಿದೆ.

**೪. ಅಂತ್ಯೋದಯ ಯೋಜನೆ:** ಅಂತ್ಯೋದಯ ಅನ್ನ ಯೋಜನೆ ಡಿಸೆಂಬರ್ ೨೦೦೦ದಲ್ಲಿ ಆರಂಭಗೊಂಡಿತು. ಕಡುಬಡವರಿಗೆ ಎರಡು ರೂಪಾಯಿಗಳಿಗೆ ಕಿಲೋ ಗೋಧಿ ಮತ್ತು ಮೂರು ರೂಪಾಯಿಗಳಿಗೆ ಕಿಲೋ ಅಕ್ಕಿ ನೀಡುವ ಕಾರ್ಯಕ್ರಮವಿದು. ಇದು ಬಡತನದ ರೇಖೆಗಿಂತ ಕೆಳಗಿರುವ ಕಡುಬಡವ ಎಂಟು ಕೋಟಿ ಕುಟುಂಬಗಳಿಗೆ ಆಹಾರ ಭದ್ರತೆ ಒದಗಿಸುವ ಈ ಯೋಜನೆ ಸಾರ್ವಜನಿಕ ವಿತರಣಾ ವ್ಯವಸ್ಥೆಗೊಳಪಟ್ಟಿದೆ.

**೫. ಮಧ್ಯಾಹ್ನದೂಟ ಕಾರ್ಯಕ್ರಮ:** ಪ್ರಾಥಮಿಕ ಶಾಲಾ ಮಕ್ಕಳಿಗೆ ಪೌಷ್ಟಿಕ ಆಹಾರ ಒದಗಿಸುವ ಉದ್ದೇಶದಿಂದ ೧೯೯೫ರಲ್ಲಿ ಆರಂಭವಾದ ಈ ಯೋಜನೆಯು ಸಾರ್ವಜನಿಕ ವಿತರಣಾ ವ್ಯವಸ್ಥೆಯ ವ್ಯಾಪ್ತಿಗೊಳಪಟ್ಟಿದೆ. ಈ ಯೋಜನೆಯನ್ವಯ ಪ್ರತಿ ಮಗುವಿಗೆ ದಿನಕ್ಕೆ ನೂರು ಗ್ರಾಮ್ ಅಕ್ಕಿಯಂತೆ ತಿಂಗಳಿಗೆ ಮೂರು ಕಿಲೋ ಅಕ್ಕಿ ನೀಡಲಾಗುತ್ತದೆ. ಭಾರತದ ಆಹಾರ ನಿಗಮವು ಅಕ್ಕಿಯ ಪೂರೈಕೆ ಮಾಡುತ್ತದೆ. ಮಾನವ ಸಂಪನ್ಮೂಲಾಭಿವೃದ್ಧಿ (HRD) ಸಚಿವಾಲಯವು ಇದಕ್ಕಾಗಿ ರೂ. ೩೦೦ ಕೋಟಿಯ ನಿಧಿಯೊಂದನ್ನು ನಿರ್ಮಿಸಿದೆ. ಈಗ ಕೇಂದ್ರ ಸರಕಾರ ಸಾಮಾನ್ಯ ಕನಿಷ್ಠ ಕಾರ್ಯಕ್ರಮದಡಿಯಲ್ಲಿ(Common Minimum Programme) ಮಧ್ಯಾಹ್ನದೂಟ ಯೋಜನೆಯನ್ನು ಇಡೀ ದೇಶಕ್ಕೇ ವಿಸ್ತರಿಸಲಾಗಿದೆ.

**೬. ಕೂಲಿಗಾಗಿ ಕಾಳು:** ನೈಸರ್ಗಿಕ ಅನಾಹುತಗಳ ಸಂದರ್ಭದಲ್ಲಿ ಜನರಿಗೆ ಆಹಾರ ಒದಗಿಸುವ ಉದ್ದೇಶದಿಂದ ಜನವರಿ ೨೦೦೧ರಿಂದ ಕೂಲಿಗಾಗಿ ಕಾಳು ಯೋಜನೆಯನ್ನು ಆರಂಭಿಸಲಾಗಿದೆ. ಈ ಯೋಜನೆಯನ್ವಯ ಕೇಂದ್ರದ ಗ್ರಾಮೀಣಾಭಿವೃದ್ಧಿ ಸಚಿವಾಲಯವು ರಾಜ್ಯಗಳಿಗೆ ಉಚಿತವಾಗಿ ಆಹಾರ ಧಾನ್ಯಗಳನ್ನು ಒದಗಿಸುತ್ತದೆ. ಇದು ಸಂಪೂರ್ಣ ಗ್ರಾಮೀಣ ರೋಜಗಾರ್ ಯೋಜನೆಯ ಒಂದು ಭಾಗವಾಗಿದೆ. ಬಡವರಿಗೆ ದೈಹಿಕ ಪರಿಶ್ರಮಕ್ಕೆ ಕೂಲಿಯ ಬದಲು ಆಹಾರ ಧಾನ್ಯಗಳನ್ನು ಒದಗಿಸುವ ಯೋಜನೆಯಿದು. ಇದು ರಾಜ್ಯ ಸರ್ಕಾರದ ಉಸ್ತುವಾರಿಯಲ್ಲಿ ನಡೆಯುತ್ತದೆ. ಕಾಳು ವಿತರಣೆಯು ಸಾರ್ವಜನಿಕ ವಿತರಣಾ ವ್ಯವಸ್ಥೆಯ ಒಂದು ಅಂಗವಾಗಿರುತ್ತದೆ.

**೭. ಸೋರಿಕೆ ನಿಯಂತ್ರಣ:** ಸಾರ್ವಜನಿಕ ವಿತರಣಾ ವ್ಯವಸ್ಥೆಯಡಿಯಲ್ಲಿ ಬಿಡುಗಡೆಯಾದ ಆಹಾರಧಾನ್ಯಗಳು ಫಲಾನುಭವಿಗಳಿಗೆ ತಲುಪದೆ ಎಲ್ಲೋ ಸೋರಿಹೋಗುವುದು ಬಹುದೊಡ್ಡ ಸಮಸ್ಯೆಯಾಗಿತ್ತು. ನ್ಯಾಯಬೆಲೆ ಅಂಗಡಿಯವರ ಭ್ರಷ್ಟತೆಯನ್ನು ತಡೆಗಟ್ಟಲು ಅವಶ್ಯಕ ಸರಕುಗಳ ಕಾಯಿದೆಯಡಿಯಲ್ಲಿ ೨೦೦೧ರಲ್ಲಿ ನಿಯಂತ್ರಣ ಆದೇಶವನ್ನು(PDS Control Order) ಹೊರಡಿಸಲಾಗಿದೆ. ದೇಶದಲ್ಲಿರುವ ೪.೬೨ ಲಕ್ಷ ನ್ಯಾಯಬೆಲೆ ಅಂಗಡಿಗಳು ಸಮಯಕ್ಕೆ ಸರಿಯಾಗಿ ಪಡಿತರವನ್ನು ಪೂರೈಕೆ ಮಾಡಬೇಕೆಂದು ಅದು ಆದೇಶಿಸುತ್ತದೆ.

ಅದರ ಮುಖ್ಯಾಂಶಗಳಿವು

೧. ಬಡತನದ ರೇಖೆಯ ಕೆಳಗಿರುವ ಕುಟುಂಬಗಳನ್ನು ಗುರುತಿಸುವುದು.

೨. ಪಡಿತರ ಚೀಟಿಗಳನ್ನು ಹಂಚುವುದು

೩. ಪಡಿತರ ಪ್ರಮಾಣ ಮತ್ತು ಬೆಲೆ ನಿರ್ಧಾರ

೪. ನ್ಯಾಯಬೆಲೆ ಅಂಗಡಿಗಳಿಗೆ ಅನುಮತಿ ಪತ್ರ ನೀಡಿಕೆ

೫. ನ್ಯಾಯಬೆಲೆ ಅಂಗಡಿ ವ್ಯವಹಾರಗಳ ಮೇಲುಸ್ತುವಾರಿ

**ವಿತರಣಾ ವ್ಯವಸ್ಥೆಯ ಸಮಸ್ಯೆಗಳು**

ಸಾರ್ವಜನಿಕ ವಿತರಣಾ ವ್ಯವಸ್ಥೆಯು ಮುಂದಿನ ವರ್ಷಗಳಲ್ಲಿ ತೀವ್ರ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ. ಅವುಗಳಲ್ಲಿ ಪ್ರಮುಖವಾದ ಸಮಸ್ಯೆಗಳಿವು

೧. **ಬೇಡಿಕೆ ಪೂರೈಕೆ ಅಸಮತೋಲನ :** ೨೦೦೧ರ ಜನಗಣತಿಯ ಪ್ರಕಾರ ಭಾರತದ ಜನಸಂಖ್ಯೆ೧೦೨ ಕೋಟಿ. ಅದು ೨೦೧೦ರಲ್ಲಿ ೧೧೬ ಕೋಟಿ ಮತ್ತು ೨೦೫೦ರಲ್ಲಿ ೧೬೦ ಕೋಟಿಗೇರಲಿದೆ. ಭಾರತ ಈಗ ಸುಮಾರು ೨೧ ಕೋಟಿ ಟನ್ನು ಆಹಾರ ಧಾನ್ಯ ಬೆಳೆಯುತ್ತಿದೆ. ೨೦೧೦ರಲ್ಲಿ ದೇಶದ ಆಹಾರ ಧಾನ್ಯದ ಬೇಡಿಕೆ ೨೫ ಕೋಟಿ ಟನ್ನುಗಳಿಗೆ ಮತ್ತು ೨೦೫೦ರಲ್ಲಿ ೩೨ ಕೋಟಿ ಟನ್ನುಗಳಿಗೇರಲಿದೆ. ಅಷ್ಟೊಂದು ಪ್ರಮಾಣದಲ್ಲಿ ಆಹಾರ ಧಾನ್ಯ ಉತ್ಪಾದಿಸಲು ಸಾಧ್ಯವಾಗುವುದಿಲ್ಲವೆಂಬ ಭೀತಿಯನ್ನು ಅರ್ಥವಿಜ್ಞಾನಿಗಳು ವ್ಯಕ್ತಪಡಿಸುತ್ತಿದ್ದಾರೆ. ಈಗಾಗಲೇ ಆಹಾರಧಾನ್ಯಗಳ ತಲಾ ಲಭ್ಯತೆಯು ಕುಸಿಯತೊಡಗಿದೆ.

೨. **ಆಹಾರ ಧಾನ್ಯಗಳ ಉತ್ಪಾದನೆಯ ಇಳಿಕೆ:** ೧೯೮೦ರ ದಶಕದಲ್ಲಿ ಆಹಾರ ಧಾನ್ಯಗಳ ಬೆಳವಣಿಗೆ ದರ ಶೇ. ೨.೮೫ ಇತ್ತು. ೧೯೯೦ರ ದಶಕದಲ್ಲಿ ಅದು ಶೇ. ೧.೯೪ಕ್ಕೆ ಕುಸಿಯಿತು. ೨೦೦೦ದಿಂದ ೨೦೦೩ರ ವರೆಗಿನ ಅವಧಿಯಲ್ಲಿ ಅದು ಶೇ. ೦.೬೯ ಆಗಿ ಋಣಾತ್ಮಕ ವಾಯಿತು. ಹಸಿರು ಕ್ರಾಂತಿಯು ಆಹಾರಧಾನ್ಯಗಳ ಉತ್ಪಾದನೆಯನ್ನು ಹೆಚ್ಚಿಸುವಲ್ಲಿ ಮೊದಲ ಬಾರಿಗೆ ವಿಫಲವಾಯಿತು.

೩. **ಆಹಾರ ಧಾನ್ಯಗಳ ಉತ್ಪಾದನಾ ಪ್ರದೇಶದ ಕುಸಿತ:** ಭತ್ತ ಮತ್ತು ಗೋಧಿ ಬೆಳೆಯಬೇಕಾದಲ್ಲಿ ರೈತರು ಲಾಭದಾಶೆಯಿಂದ ಅಡಿಕೆ, ತಂಬಾಕು, ಮತ್ತಿತರ ವಾಣಿಜ್ಯ ಮತ್ತು ತೋಟದ ಬೆಳೆಗಳನ್ನು ಬೆಳೆಯತೊಡಗಿದ್ದಾರೆ. ಆಹಾರ ಧಾನ್ಯಗಳ ಉತ್ಪಾದನಾ ಪ್ರದೇಶ ವರ್ಷದಿಂದ ವರ್ಷಕ್ಕೆ ಕಡಿಮೆಯಾಗುತ್ತಿದೆ. ೨೦೨೦ರಲ್ಲಿ ಭಾರತ ತೀವ್ರ ಆಹಾರದ ಕೊರತೆ ಎದುರಿಸಲಿದೆ.

೪. **ಉದ್ಯೋಗದ ನಿಧಾನ ಏರಿಕೆ:** ಭಾರತದಲ್ಲಿ ಉದ್ಯೋಗ ಹೆಚ್ಚಳದ ದರವು ತೀರಾ ನಿರಾಶಾದಾಯಕವಾಗಿದೆ. ಇದು ಆಹಾರಾನುಭೋಗದ ಮೇಲೆ ಋಣಾತ್ಮಕ ಅಥವಾ ಪ್ರತಿಕೂಲಕರ ಪರಿಣಾಮಗಳನ್ನು ಬೀರುತ್ತಿದೆ. ಆಹಾರ ಧಾನ್ಯ ಲಭ್ಯವಾಗುತ್ತಿದ್ದರೂ ಆದಾಯದ ಕೊರತೆಯಿಂದಾಗಿ ಕೊಳ್ಳಲಾಗುತ್ತಿಲ್ಲ.

೫. **ತೀವ್ರ ಬಡತನ:** ಬಡವರ ಪರಿಸ್ಥಿತಿ ಚಿಂತಾಜನಕವಾಗುತ್ತಿದೆ. ತೀವ್ರ ಬಡತನದಿಂದಾಗಿ ತಮ್ಮ ಪಡಿತರ ಚೀಟಿಗಳನ್ನು ಬಡವರು ಅಡವಿಡುವ ಅನೇಕ ಪ್ರಕರಣಗಳು ವರದಿ

ಯಾಗುತ್ತಿವೆ. ಬಡತನ ಮತ್ತು ನಿರುದ್ಯೋಗ ನಿವಾರಣಾ ಯೋಜನೆಗಳ ಹಣದಲ್ಲಿ ಸಿಂಹಪಾಲು ರಾಜಕಾರಣಿಗಳ ಮತ್ತು ಮಧ್ಯವರ್ತಿಗಳ ಖಾಸಗಿ ಬೊಕ್ಕಸಕ್ಕೆ ಹೋಗುತ್ತಿದೆ. ಆಹಾರಧಾನ್ಯ ಲಭ್ಯವಾದರೂ ಕೊಳ್ಳಲಾಗದೆ ಬಡವರು ಸಾಯುತ್ತಿದ್ದಾರೆ.

**೬. ಮಧ್ಯಾಹ್ನದೂಟದ ವೈಫಲ್ಯ:** ಮಧ್ಯಾಹ್ನದೂಟದ ವ್ಯವಸ್ಥೆಯಲ್ಲಿ ಭ್ರಷ್ಟಾಚಾರ ತಾಂಡವಾಡುವ ವರದಿಗಳು ಬರುತ್ತಿವೆ. ಅಡುಗೆಯವರಿಗೆ ಕೆಲವೆಡೆ ತಿಂಗಳಿಗೆ ಕೇವಲ ರೂ. ೧೦೦ ಸಂಬಳ ನೀಡಲಾಗುತ್ತಿದೆ. ಭಾರತದ ಸಕಲ ಅನಿಷ್ಟಗಳ ಸಂಕೇತದಂತಿರುವ ಜಾತಿ ಪದ್ಧತಿಯಿಂದಾಗಿ ಸಾಮೂಹಿಕ ಊಟಕ್ಕೆ ಮಕ್ಕಳನ್ನು ಕೆಲವು ಮಂದಿ ಹೆತ್ತವರು ಕಳುಹಿಸುತ್ತಿಲ್ಲ. ಸರ್ಕಾರ ಒದಗಿಸುವ ಆಹಾರ ಧಾನ್ಯಗಳ ಗುಣಮಟ್ಟದ ಬಗ್ಗೆಯೂ ಆಕ್ಷೇಪಗಳು ಕೇಳಿ ಬರುತ್ತಿವೆ.

ಜಾಗತೀಕರಣದ ದಾಂಧಲೆಯಿಂದಾಗಿ ಸರ್ಕಾರವು ಸಾರ್ವಜನಿಕ ವಿತರಣಾ ವ್ಯವಸ್ಥೆಯನ್ನು ಮುಂದುವರಿಸಿಕೊಂಡು ಹೋಗಲು ಸಾಧ್ಯವಾಗಲಾರದೇನೋ ಎಂಬ ಆತಂಕವು ಬಡತನ ಮತ್ತು ಹಸಿವು ಮುಕ್ತ ಭಾರತ ನಿರ್ಮಾಣದ ಕನಸು ಕಾಣುವವರನ್ನು ಕಾಡುತ್ತಿದೆ.

## ೩.೪. ವಿಜ್ಞಾನ ಮತ್ತು ತಂತ್ರಜ್ಞಾನದ ಬಳಕೆ

### ೩.೪.೧. ಪ್ರಾಥಮಿಕ ವಲಯದ ಕ್ರಾಂತಿಗಳು

ಬೇಸಾಯ, ಹೈನುಗಾರಿಕೆ, ಪಶುಸಂಗೋಪನೆ, ಪುಷ್ಪಕೃಷಿ, ಮೀನುಗಾರಿಕೆ, ಅರಣ್ಯ, ಗಣಿಗಾರಿಕೆ ಇತ್ಯಾದಿಗಳು ಆರ್ಥಿಕತೆಯ ಪ್ರಾಥಮಿಕ ವಲಯದ ಚಟುವಟಿಕೆಗಳೆಂದು ಕರೆಸಿಕೊಳ್ಳುತ್ತವೆ. ಭಾರತ ಕೃಷಿ ಪ್ರಧಾನ ರಾಷ್ಟ್ರ. ೧೯೬೦ರ ದಶಕದವರೆಗೆ ಭಾರತದ ಕೃಷಿರಂಗ ಬಹಳ ಹಿಂದುಳಿದಿತ್ತು. ಹಸಿರುಕ್ರಾಂತಿಯಿಂದಾಗಿ ಕೃಷಿರಂಗದ ಸ್ವರೂಪವೇ ಬದಲಾಗಿ ಹೋಯಿತು. ಹಸಿರು ಕ್ರಾಂತಿಯ ಬಳಿಕ ನೀಲಕ್ರಾಂತಿ, ಶ್ವೇತಕ್ರಾಂತಿ, ಪೀತಕ್ರಾಂತಿ ಮತ್ತು ಸುವರ್ಣ ಕ್ರಾಂತಿಗಳು ಸಂಭವಿಸಿ ಭಾರತದ ಪ್ರಾಥಮಿಕ ವಲಯದ ಸ್ವರೂಪ ಬದಲಾಗಿ ಹೋಗಿದೆ. ವಿಜ್ಞಾನ ಮತ್ತು ತಂತ್ರಜ್ಞಾನದ ಬಳಕೆಯಿಂದ ಪ್ರಾಥಮಿಕ ವಲಯದಲ್ಲಿ ಸಂಭವಿಸಿದ ಕ್ರಾಂತಿಗಳ ಸಂಕ್ಷಿಪ್ತ ನೋಟ ಇಲ್ಲಿಗೆ.

**೧. ಹಸಿರುಕ್ರಾಂತಿ:** ಭಾರತವು ಸುಧಾರಿತ ತಳಿಯ ಬೀಜ, ರಸಗೊಬ್ಬರ ಮತ್ತು ಸಮರ್ಪಕ ನೀರಿನ ಬಳಕೆಯಿಂದ ಆಹಾರ ಧಾನ್ಯಗಳ ಉತ್ಪಾದನೆಯನ್ನು ಹೆಚ್ಚಿಸಿದುದನ್ನು ಹಸಿರುಕ್ರಾಂತಿ (Green Revolution) ಎಂದು ಕರೆಯಲಾಗುತ್ತದೆ. ಹಸಿರು ಕ್ರಾಂತಿ ೧೯೬೦ರ ದಶಕದಲ್ಲಿ ಭಾರತದಲ್ಲಿ ಆರಂಭವಾಯಿತು. ಆರಂಭದಲ್ಲಿ ಅದು ಗೋಧಿ ಬೆಳೆಗಷ್ಟೇ ಸೀಮಿತವಾಗಿದ್ದರೂ ಆ ಬಳಿಕ ಅದರ ವ್ಯಾಪ್ತಿ ಹೆಚ್ಚಾಯಿತು. ಇಂದು ಭಾರತ ವಿಶ್ವದಲ್ಲಿ ಅತ್ಯಧಿಕ ಅಕ್ಕಿ ನಿರ್ಯಾತ ಮಾಡುವ ದೇಶಗಳ ಪೈಕಿ ಎರಡನೆಯ ಸ್ಥಾನದಲ್ಲಿ ಮತ್ತು ಅತ್ಯಧಿಕ ಗೋಧಿ ನಿರ್ಯಾತ ಮಾಡುವ ದೇಶಗಳ ಪೈಕಿ ಏಳನೆಯ ಸ್ಥಾನದಲ್ಲಿದೆ. ಇದು ಹಸಿರುಕ್ರಾಂತಿಯ ಪರಿಣಾಮವಾಗಿದೆ.

೨. ಶ್ವೇತ ಕ್ರಾಂತಿ: ಭಾರತವು ಹೈನುಗಾರಿಕಾ ಕ್ಷೇತ್ರದಲ್ಲಿ ಮಾಡಿದ ಅಪೂರ್ವ ಸಾಧನೆಯನ್ನು ಕ್ಷೀರ ಅಥವಾ ಶ್ವೇತಕ್ರಾಂತಿ (White Revolution) ಎಂದು ಕರೆಯಲಾಗುತ್ತದೆ.

೧೯೫೦ರಲ್ಲಿ ಭಾರತದಲ್ಲಿ ಪ್ರತಿಯೊಬ್ಬನಿಗೆ ದಿನಕ್ಕೆ ೧೩೨ ಗ್ರಾಂ ಹಾಲು ಲಭ್ಯ ವಾಗುತ್ತಿತ್ತು. ೨೦೦೩ರಲ್ಲಿ ಅದು ೨೧೪ ಗ್ರಾಂಗಳಿಗೇರಿರುವುದು ಬಹುದೊಡ್ಡ ಸಾಧನೆ ಯಾಗಿದೆ. ಆಪರೇಶನ್ ಫ್ಲಡ್ I, II ಮತ್ತು III ಕಾರ್ಯಕ್ರಮಗಳು ಶ್ವೇತಕ್ರಾಂತಿಗೆ ಕಾರಣವಾಗಿದೆ. ೧೯೫೦-೫೧ರಲ್ಲಿ ಭಾರತ ೧೭ ದಶಲಕ್ಷ ಟನ್ನು ಹಾಲು ಉತ್ಪಾದಿಸುತ್ತಿತ್ತು. ೧೯೯೦-೯೧ರಲ್ಲಿ ೫೪ ದಶಲಕ್ಷ ಟನ್ನು, ೧೯೯೬-೯೭ರಲ್ಲಿ ೬೯ ದಶಲಕ್ಷ ಟನ್ನು ಮತ್ತು ೨೦೦೧-೦೨ರಲ್ಲಿ ೮೫ ದಶಲಕ್ಷ ಟನ್ನು ಹೀಗೆ ಭಾರತ ಹಾಲು ಉತ್ಪಾದನೆಯಲ್ಲಿ ದೊಡ್ಡ ಸಾಧನೆ ಮಾಡಿದೆ.

೩. ನೀಲ ಕ್ರಾಂತಿ: ಭಾರತವು ಮೀನುಗಾರಿಕಾ ಕ್ಷೇತ್ರದಲ್ಲಿ ಮಾಡಿರುವ ಅಪೂರ್ವ ಸಾಧನೆಯನ್ನು ನೀಲಕ್ರಾಂತಿ (Blue Revolution) ಎಂದು ಕರೆಯಲಾಗುತ್ತದೆ.

ಭಾರತವು ಸುಮಾರು ೮೦೦೦ ಕಿ.ಮೀ. ಸಮುದ್ರ ತೀರವನ್ನು ಹೊಂದಿದೆ. ದೇಶದಲ್ಲಿ ಸುಮಾರು ೪೫೦೦೦ ಯಾಂತ್ರೀಕೃತ ದೋಣಿಗಳಿದ್ದು ೬೦ ದಶಲಕ್ಷ ಮೀನುಗಾರರಿದ್ದಾರೆ. ಭಾರತ ಪ್ರತಿವರ್ಷ ಸುಮಾರು ರೂ. ೬೪ ಬಿಲಿಯನ್ ಮೌಲ್ಯದ ಸಾಗರೋತ್ಪನ್ನಗಳನ್ನು ನಿರ್ಯಾತ ಮಾಡುತ್ತಿದೆ. ಮೀನುಗಾರಿಕೆಯಲ್ಲಿ ಭಾರತ ವಿಶ್ವದಲ್ಲಿ ಏಳನೆಯ ಸ್ಥಾನದಲ್ಲಿದೆ.

೪. ಪೀತ ಕ್ರಾಂತಿ: ಭಾರತವು ಎಣ್ಣೆಬೀಜ ಕಾಳುಗಳ ಕ್ಷೇತ್ರದಲ್ಲಿ ಮಾಡಿರುವ ಅಪೂರ್ವ ಸಾಧನೆಯನ್ನು ಪೀತ ಕ್ರಾಂತಿ ಅಥವಾ ಹಳದಿ ಕ್ರಾಂತಿ (Yellow Revolution) ಎಂದು ಕರೆಯಲಾಗುತ್ತದೆ. ಭಾರತದಲ್ಲಿ ಸುಮಾರು ೨೩ ದಶಲಕ್ಷ ಹೆಕ್ಟೇರು ಭೂಮಿಯಲ್ಲಿ ಎಣ್ಣೆ ಕಾಳುಗಳನ್ನು ಬೆಳೆಯಲಾಗುತ್ತದೆ. ತೆಂಗಿನಕಾಯಿ, ನೆಲಗಡಲೆ, ಹರಳು, ಸಾಸಿವೆ, ಎಳ್ಳು, ಕಡಲೆ, ಸೋಯಾಬೀನ್, ಸೂರ್ಯಕಾಂತಿ ಬೀಜ ಮುಂತಾದವುಗಳಿಂದ ಎಣ್ಣೆಯನ್ನು ಪಡೆಯಲಾಗುತ್ತದೆ. ಭಾರತದಲ್ಲಿ ಸುಮಾರು ೨೦ ದಶಲಕ್ಷ ಟನ್ನು ಎಣ್ಣೆ ಉತ್ಪಾದನೆ ಯಾಗುತ್ತದೆ.

೫. ಸುವರ್ಣಕ್ರಾಂತಿ: ಭಾರತವು ಹೂವುಗಳ, ಹಣ್ಣುಗಳ ಮತ್ತು ತೋಟಗಾರಿಕಾ ಬೆಳೆಯಲ್ಲಿ ಮಾಡಿರುವ ಅಪೂರ್ವ ಸಾಧನೆಯನ್ನು ಸುವರ್ಣಕ್ರಾಂತಿ (Golden Revolution) ಎಂದು ಕರೆಯಲಾಗುತ್ತದೆ.

ಭಾರತವು ವಿಶ್ವದಲ್ಲಿ ಅತ್ಯಧಿಕ ಹಣ್ಣು ಬೆಳೆಯುವ ದೇಶವಾಗಿದೆ. ೨೦೦೨-೦೩ರಲ್ಲಿ ೪೭.೫ ದಶಕೋಟಿ ಟನ್ನು ಹಣ್ಣು ವಿಶ್ವದಲ್ಲಿ ಉತ್ಪಾದನೆಯಾಗಿದ್ದು ಭಾರತ ಒಂದೇ ೪.೭ ದಶಕೋಟಿ ಟನ್ನು ಹಣ್ಣು ಉತ್ಪಾದಿಸಿತ್ತು. ವಿಶ್ವದ ಒಟ್ಟು ಉತ್ಪಾದನೆಯಲ್ಲಿ ಭಾರತ ಪಾಲು ಶೇ. ೧೦ರಷ್ಟು, ೨೦೦೩-೦೪ರಲ್ಲಿ ಭಾರತ ರೂ. ೩೫೬ ಕೋಟಿ ಮೌಲ್ಯದ ಹಣ್ಣುಗಳನ್ನು ನಿರ್ಯಾತ ಮಾಡಿತ್ತು. ಮಾವಿನ ಹಣ್ಣಿನ ನಿರ್ಯಾತವೊಂದರಿಂದಲೇ ಭಾರತ ರೂ. ೧೧೧ ಕೋಟಿ ಗಳಿಸಿತ್ತು. ಈ ಕಾರಣಕ್ಕಾಗಿಯೇ ಹಣ್ಣುಗಳ ಕ್ಷೇತ್ರದ ಸಾಧನೆಯನ್ನು ಸುವರ್ಣಕ್ರಾಂತಿ ಯೆಂದು ಕರೆಯುವುದು.

ಭಾರತದಲ್ಲಿ ಸುಮಾರು ೬೦೦೦೦ ಹೆಕ್ಟೇರು ಭೂಮಿಯಲ್ಲಿ ಹೂಗಳನ್ನು ಬೆಳೆಸಲಾಗುತ್ತದೆ. ಕರ್ನಾಟಕವು ದೇಶದಲ್ಲಿ ಅತ್ಯಧಿಕ ಹೂಗಳನ್ನು ಬೆಳೆಯುವ ರಾಜ್ಯವಾಗಿದೆ. ಕರ್ನಾಟಕದಲ್ಲಿ ೨೧೦೦೦ ಹೆಕ್ಟೇರು ಭೂಮಿ ಪುಷ್ಪ ಕೃಷಿಗೆ ಬಳಕೆಯಾಗುತ್ತಿದೆ. ಭಾರತವು ವರ್ಷಕ್ಕೆ ಸುಮಾರು ೩೦ ದಶಲಕ್ಷ ಡಾಲರ್ ಮೌಲ್ಯದ ಹೂಗಳನ್ನು ನಿರ್ಯಾತ ಮಾಡುತ್ತದೆ. ಪುಷ್ಪ ಕೃಷಿಯು ೩೦೦೦ ಜನರಿಗೆ ನೇರವಾಗಿ ಮತ್ತು ೧೨೦೦೦ ಜನರಿಗೆ ಪರೋಕ್ಷವಾಗಿ ಉದ್ಯೋಗ ನೀಡುತ್ತದೆ.

**೬. ಕಾಮನಬಿಲ್ಲು ಕ್ರಾಂತಿ:** ರಾಷ್ಟ್ರೀಯ ಕೃಷಿ ನೀತಿ ೨೦೦೦ ಹಸಿರು ಕ್ರಾಂತಿ, ಶ್ವೇತಕ್ರಾಂತಿ ಮತ್ತು ನೀಲಕ್ರಾಂತಿಯನ್ನು ಮುಂದುವರಿಸುವುದಾಗಿ ಹೇಳಿದೆ, ಹಸಿರು, ಶ್ವೇತ ಮತ್ತು ನೀಲ ಕ್ರಾಂತಿಗಳನ್ನು ಒಟ್ಟಾಗಿ ಕಾಮನಬಿಲ್ಲು ಕ್ರಾಂತಿ (Rainbow Revolution) ಎಂದು ಕರೆಯಲಾಗುತ್ತದೆ.

ಕೃಷಿ ರಂಗದಲ್ಲಿ ವಾರ್ಷಿಕ ಶೇ. ೪ಕ್ಕಿಂತ ಹೆಚ್ಚಿನ ಬೆಳವಣಿಗೆ ದರವನ್ನು ಸಾಧಿಸುವುದು, ಗುತ್ತಿಗೆ ಕೃಷಿ ಮೂಲಕ ಖಾಸಗಿ ಕ್ಷೇತ್ರದ ಪಾಲ್ಗೊಳ್ಳುವಿಕೆಯನ್ನು ಪ್ರೋತ್ಸಾಹಿಸುವುದು, ಬೆಂಬಲ ಬೆಲೆ ಮೂಲಕ ರೈತರನ್ನು ಉತ್ತೇಜಿಸುವುದು, ರಾಷ್ಟ್ರೀಯ ಕೃಷಿ ವಿಮಾ ಯೋಜನೆಯ ಅನುಷ್ಠಾನ, ಕೃಷಿ ಸರಕುಗಳ ಸಂಚಾರ ನಿರ್ಬಂಧ ತೊಡೆದು ಹಾಕುವುದು ಇವು ಕಾಮನಬಿಲ್ಲು ಕ್ರಾಂತಿಯ ಮುಖ್ಯಾಂಶಗಳಾಗಿವೆ.

### ೩.೪.೨. ಕೊಯ್ಲು ಪೂರ್ವದ ಮತ್ತು ಕೊಯ್ಲಿನ ಬಳಿಕದ ತಂತ್ರಜ್ಞಾನ

ಕೃಷಿಯಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನವನ್ನು ಬಳಸಿ ಉತ್ಪಾದನೆಯನ್ನು ಹೆಚ್ಚಿಸುವುದಕ್ಕೆ ಕೃಷಿಕ್ರಾಂತಿ (agricultural revolution) ಎಂದು ಹೆಸರು. ಕೃಷಿ ಕ್ರಾಂತಿಯನ್ನು ಹಸಿರುಕ್ರಾಂತಿಯೆಂದು ಕರೆಯಲಾಗುತ್ತದೆ.

ಕೃಷಿಯಲ್ಲಿ ಬಳಸುವ ತಂತ್ರಜ್ಞಾನವನ್ನು ಹೀಗೆ ವಿಂಗಡಿಸಬಹುದು.




ನಕ್ಷೆ ೩.೩. ಕೃಷಿ ತಂತ್ರಜ್ಞಾನ

**ಕೊಯ್ಲು ಪೂರ್ವದ ತಂತ್ರಜ್ಞಾನ (ಹಸಿರುಕ್ರಾಂತಿ)**

ಕೊಯ್ಲು ಪೂರ್ವದ ತಂತ್ರಜ್ಞಾನವೆಂದರೆ ಬಿತ್ತನೆಗೆ ಮತ್ತು ಬೆಳೆಗೆ ಬಳಕೆಯಾಗುವ ಸುಧಾರಿತ ಜ್ಞಾನ. ಇದು ಉತ್ಪಾದನೆಯ ಅಧಿಕ್ಯಕ್ಕೆ ಕಾರಣವಾಗಿರುವುದರಿಂದ ಇದನ್ನು ಹಸಿರು **ಕ್ರಾಂತಿ** (Green Revolution) ಎಂದು ಕರೆಯಲಾಗುತ್ತದೆ. ೧. ಅಧಿಕ ಇಳುವರಿ ಬೀಜ, ೨. ರಸಗೊಬ್ಬರ ಮತ್ತು ೩. ನೀರಾವರಿ ಬಳಕೆಯಿಂದ ಕೃಷಿರಂಗದಲ್ಲಾದ ಅಪೂರ್ವ ಬದಲಾವಣೆಗಳಿಗೆ ಹಸಿರುಕ್ರಾಂತಿ ಎಂದು ಹೆಸರು. ಹಸಿರು ಕ್ರಾಂತಿಗೆ ಕಾರಣವಾಗಿರುವ ತಂತ್ರಜ್ಞಾನವಿದು.

**೧. ಅಧಿಕ ಇಳುವರಿಯ ತಳಿಗಳ ಬಳಕೆ :** ೧೯೬೦ರಲ್ಲಿ ಮೆಕ್ಸಿಕೋದಲ್ಲಿ ಕೃಷಿ ವಿಜ್ಞಾನಿ ಪ್ರೊ. ನಾರ್ಮನ್ ಬೊರ್ಲಾಗರ ನೇತೃತ್ವದಲ್ಲಿ ಕೃಷಿ ವಿಜ್ಞಾನಿಗಳ ತಂಡವು ಅಧಿಕ ಇಳುವರಿಯ ವೈವಿಧ್ಯಮಯವಾದ(High Yielding Varieties - HYV) ಬೀಜಗಳನ್ನು ಮತ್ತು ತಳಿಗಳನ್ನು ಸೃಷ್ಟಿಸಿತು. ಇದರಿಂದ ಸ್ಫೂರ್ತಿಗೊಂಡ ಭಾರತದ ಕೃಷಿ ವಿಜ್ಞಾನಿಗಳು ಅನೇಕ ಸಂಶೋಧನೆಗಳನ್ನು ನಡೆಸಿ ಇಲ್ಲಿಗೆ ಹವಾಮಾನಕ್ಕೆ ತಕ್ಕುದಾದ ಹೈಬ್ರಿಡ್ ತಳಿಗಳನ್ನು ಆವಿಷ್ಕರಿಸಿದರು. ಪರಿಣಾಮವಾಗಿ ಆರಂಭದಲ್ಲಿ ಗೋಧಿಯಲ್ಲಿ ಲೆರ್ಮಾ ೬೪ಎ, ಸೊನಾರಾ ೬೧, ಶರ್ಬತಿ ಸೋನಾರ, ಪೂಸಾಲೆರ್ಮಾ ಮುಂತಾದ ತಳಿಗಳು ಮತ್ತು ಭತ್ತದಲ್ಲಿ ಐ.ಆರ್. ೮, ಜಯಾ, ಪದ್ಮಾ ಮುಂತಾದ ತಳಿಗಳು ಕಾಣಿಸಿಕೊಂಡವು.

೧೯೯೦ರ ದಶಕದಲ್ಲಿ ಸಿ.ಪಿ.ಎ.ಎನ್. ೩೦೦೪, ಯು.ಪಿ. ೨೩೩೮, ಪಿ.ಬಿ.ಡಬ್ಲ್ಯೂ ೩೪೩ ಮುಂತಾದ ಹೈಬ್ರಿಡ್ ಗೋಧಿ ತಳಿಗಳು ಬಳಕೆಗೆ ಬಂದವು. ೧೯೬೫ರಲ್ಲಿ ಆವಿಷ್ಕರಿಸಿದ ಶರ್ಬತಿ ಸೊನಾರ ತಳಿಯ ಇಳುವರಿ ಹೆಕ್ಟೇರಿಗೆ ೩.೪ ಟನ್ನು. ೧೯೯೫ರಲ್ಲಿ ಆವಿಷ್ಕರಿಸಲಾದ ಪಿ.ಬಿ. ಡಬ್ಲ್ಯೂ ೩೪೩ ಗೋಧಿ ತಳಿಯ ಇಳುವರಿ ಹೆಕ್ಟೇರಿಗೆ ೫.೪ ಟನ್ನುಗಳು.

ಭತ್ತದಲ್ಲಿ ಚೈತನ್ಯ, ಐ.ಆರ್. ೫೦, ಜಯಾ, ಟೆಲ್ಲಾ ಹಂಸ ಮುಂತಾದ ಅಧಿಕ ಇಳುವರಿಯ ತಳಿಗಳು ಬಳಕೆಯಾಗುತ್ತಿವೆ. ಆಂಧ್ರಪ್ರದೇಶದಲ್ಲಿ ಜನಪ್ರಿಯವಾಗಿರುವ ಚೈತನ್ಯ ಮತ್ತು ಟೆಲ್ಲಾ ಹಂಸ ಮುಂತಾದ ಅಧಿಕ ಇಳುವರಿಯ ತಳಿಗಳು ಬಳಕೆಯಾಗುತ್ತಿವೆ. ಆಂಧ್ರಪ್ರದೇಶದಲ್ಲಿ ಜನಪ್ರಿಯವಾಗಿರುವ ಚೈತನ್ಯ ಮತ್ತು ಟೆಲ್ಲಾ ಹಂಸ ತಳಿಗಳ ಇಳುವರಿ ಹೆಕ್ಟೇರಿಗೆ ಸುಮಾರು ೫.೩ ಟನ್ನುಗಳು. ತಮಿಳುನಾಡಿನಲ್ಲಿ ಜನಪ್ರಿಯವಾಗಿರುವ ಐ.ಆರ್. ೫೦ರ ಇಳುವರಿ ಹೆಕ್ಟೇರಿಗೆ ೫.೨. ಟನ್ನುಗಳು. ಕರ್ನಾಟಕದಲ್ಲಿ ಜನಪ್ರಿಯವಾಗಿರುವ ಜಯಾ ತಳಿಯ ಇಳುವರಿ ಹೆಕ್ಟೇರಿಗೆ ೬.೧ ಟನ್ನುಗಳು.

ಆಂಧ್ರಪ್ರದೇಶ ಎ.ಪಿ.ಎಚ್.ಆರ್. ೧ ಮತ್ತು ೨, ತಮಿಳುನಾಡು ಎಂ.ಜಿ.ಆರ್. ೧ ಮತ್ತು ಕರ್ನಾಟಕ ಕೆ.ಆರ್.ಎಚ್. ೧ ಎಂಬ ಹೈಬ್ರಿಡ್ ತಳಿಗಳನ್ನು ಆವಿಷ್ಕರಿಸಿದ್ದು ಇವುಗಳ ಸರಾಸರಿ ಇಳುವರಿ ಹೆಕ್ಟೇರಿಗೆ ೭.೨ ಟನ್ನುಗಳಾಗಿವೆ.

**೨. ರಸಗೊಬ್ಬರ ಬಳಕೆ:** ಭೂಮಿಯ ಸಾರವನ್ನು ಹೆಚ್ಚಿಸುವ ಉದ್ದೇಶದಿಂದ ಹಸಿರು ಕ್ರಾಂತಿಯು ರಸಗೊಬ್ಬರದ (Fertiliser) ಬಳಕೆಗೆ ಆದ್ಯತೆ ನೀಡಿದೆ. ಯೂರಿಯಾ, ಸಲ್ಫೇಟ್,

ಸಾರಜನಕ, ಸುಫಲಾ ಇತ್ಯಾದಿಗಳ ಬಳಕೆಯಿಂದ ಕೃಷಿ ಉತ್ಪನ್ನವನ್ನು ಹೆಚ್ಚಿಸಲಾಗುತ್ತಿದೆ. ಭಾರತದಲ್ಲಿ ಉತ್ಪಾದನೆಯಾಗುವ ರಸಗೊಬ್ಬರವು ಬೇಡಿಕೆಗಿಂತ ಎಷ್ಟೋ ಕಡಿಮೆಯಿದೆ. ಹಾಗಾಗಿ ಭಾರತವು ರಸಗೊಬ್ಬರವನ್ನು ಆಯಾತ ಮಾಡಿಕೊಳ್ಳಬೇಕಾಗಿ ಬಂದಿದೆ. ರಸಗೊಬ್ಬರದ ಬೆಲೆ ಬಡ ರೈತರಿಗೆ ಎಟಕುವಂತದ್ದಲ್ಲ. ಶ್ರೀಮಂತ ರೈತರು ರಸಗೊಬ್ಬರ ಕೊಳ್ಳಲು ಸಮರ್ಥರಿರುತ್ತಾರೆ. ಆದರೆ ರಸಗೊಬ್ಬರದ ಬೆಲೆ ಅಧಿಕವಾಗಿರುವುದರಿಂದ ಅಂತಿಮವಾಗಿ ಕೃಷಿ ಉತ್ಪನ್ನಗಳ ಬೆಲೆ ಏರಿ ಬಿಡುತ್ತದೆ. ಇದನ್ನು ತಡೆಗಟ್ಟಲು ಭಾರತ ಸರ್ಕಾರ ರಸಗೊಬ್ಬರ ಸಬ್ಸಿಡಿ ನೀಡುತ್ತಿದೆ.

೧೯೯೦-೯೧ರಲ್ಲಿ ಭಾರತದಲ್ಲಿ ೧೧.೮೬ ಕೋಟಿ ಟನ್ನು ರಸಗೊಬ್ಬರ ಉತ್ಪಾದನೆಯಾಗಿತ್ತು. ೨.೭೬ ಕೋಟಿ ಟನ್ನು ಆಯಾತ ಮಾಡಿಕೊಳ್ಳಲಾಯಿತು. ೨೦೦೩-೦೪ರಲ್ಲಿ ಉತ್ಪಾದನೆ ೧೪.೨ ಕೋಟಿ ಮತ್ತು ಆಮದು ೩.೨ ಕೋಟಿ ಟನ್ನುಗಳು. ಕೃಷಿ ಭೂಮಿಗೆ ಹೆಕ್ಟೇರಿಗೆ ೯೦ ಕಿಲೋ ರಸಗೊಬ್ಬರ ಭಾರತದಲ್ಲಿ ಬಳಕೆಯಾಗುತ್ತಿವೆ.

೩. **ನೀರಾವರಿ ಸೌಲಭ್ಯ:** ಸರ್ಕಾರವು ಅನೇಕ ಮಧ್ಯಮ ಮತ್ತು ಬೃಹತ್ ನೀರಾವರಿ ಯೋಜನೆಗಳ ಮೂಲಕ ಕೃಷಿ ಭೂಮಿಗೆ ನೀರುಣಿಸುತ್ತಿದೆ. ವಿವಿಧೋದ್ದೇಶ ನೀರಾವರಿ ಯೋಜನೆಗಳು ನೀರಾವರಿ ಸೌಲಭ್ಯವನ್ನು ಕಲ್ಪಿಸಿಕೊಡುತ್ತಿವೆ. ಸಣ್ಣ ಪ್ರಮಾಣದ ನೀರಾವರಿ ಯೋಜನೆ, ಕಿಂಡಿ ಅಣೆಕಟ್ಟು ನಿರ್ಮಾಣ, ಏತ ನೀರಾವರಿ, ಹನಿ ಮತ್ತು ತುಂತುರು ನೀರಾವರಿ, ಜಲಾನಯನ ಪ್ರದೇಶ ಯೋಜನೆ ಇತ್ಯಾದಿಗಳು ನೀರಾವರಿ ಸೌಲಭ್ಯ ವಿಸ್ತರಣೆಗಾಗಿ ಸೃಷ್ಟಿಯಾಗಿವೆ. ೨೦೦೫-೦೬ರಿಂದ ಮಳೆನೀರು ಸಂಗ್ರಹ ಯೋಜನೆ ಕಡ್ಡಾಯವಾಗಿ ಜಾರಿಗೊಳ್ಳಲಿದೆ.

ಹಸಿರುಕ್ರಾಂತಿಗೆ ಪೂರಕವಾಗಿ ೧. ಯಂತ್ರಗಳ ಬಳಕೆ ೨. ಮಣ್ಣು ಪರೀಕ್ಷೆ, ೩. ಭೂಸಾರ ಸಂರಕ್ಷಣೆ ೪. ಸಸ್ಯ ಸಂರಕ್ಷಣೆ ೫. ಮಿಶ್ರ ಬೇಸಾಯ ಯೋಜನೆ ಇತ್ಯಾದಿಗಳನ್ನು ಹಮ್ಮಿಕೊಳ್ಳಲಾಗಿದೆ. ಪಂಪುಸೆಟ್ಟು, ಟಿಲ್ಲರ್, ಟ್ರ್ಯಾಕ್ಟರ್, ಬುಲ್‌ಡೋಜರ್, ಹಾರ್ವೆಸ್ಟರ್, ರಕ್ಕಸತೋಳಿನ ಯಂತ್ರ ಜೆ.ಸಿ.ಬಿ., ಕಳನಾಶಕ ಯಂತ್ರ ಇತ್ಯಾದಿಗಳನ್ನು ವ್ಯಾಪಕವಾಗಿ ಬಳಸಲಾಗುತ್ತದೆ.

### ಕೊಯ್ಲಿನ ಬಳಿಕದ ತಂತ್ರಜ್ಞಾನ

ಕೊಯ್ಲಿನ ಬಳಿಕದ ತಂತ್ರಜ್ಞಾನವು ಬೆಳೆಗಳ ಸಂಗ್ರಹ ಮತ್ತು ಮಾರಾಟ ವಿಧಾನಗಳನ್ನು ಸೂಚಿಸುತ್ತದೆ. ಕೊಯ್ಲಿನ ಬಳಿಕದ ತಂತ್ರಜ್ಞಾನದಲ್ಲಿ ೧. ಉಗ್ರಾಣಗಳು ೨. ಶೀತಲಗೃಹಗಳು ೩. ಮಾರುಕಟ್ಟೆ ವ್ಯವಸ್ಥೆ ಒಳಗೊಂಡಿದೆ.

೧. **ಉಗ್ರಾಣಗಳು:** ಉಗ್ರಾಣಗಳು (Warehouses) ಆಹಾರಧಾನ್ಯಗಳನ್ನು ಸಂಗ್ರಹಿಸಿಡುವ ಕಟ್ಟಡಗಳಾಗಿವೆ. ಬೆಳೆಯನ್ನು ಕೊಯ್ಲಿನ ತಕ್ಷಣ ಮಾರಾಟ ಮಾಡಿದರೆ ರೈತರಿಗೆ ಲಾಭದಾಯಕ ಬೆಲೆ ಲಭ್ಯವಾಗುವುದಿಲ್ಲ. ಕೆಲವೊಮ್ಮೆ ಅಸಲು ವೆಚ್ಚವೂ ದೊರೆಯದೆ

ನಷ್ಟ ಸಂಭವಿಸಬಹುದು. ಆದರೆ ಬಹುತೇಕ ಭಾರತೀಯ ರೈತರು ತಮ್ಮ ಕೃಷಿ ಉತ್ಪತ್ತಿಗಳನ್ನು ಸಂಗ್ರಹಿಸಿಡಲು ಕಟ್ಟಡಗಳನ್ನು ಹೊಂದಿರುವುದಿಲ್ಲ.

ಈ ಸಮಸ್ಯೆಯ ಪರಿಹಾರಕ್ಕಾಗಿ ೧೯೫೬ರಲ್ಲಿ ರಾಷ್ಟ್ರೀಯ ಸಹಕಾರಿ ಅಭಿವೃದ್ಧಿ ಮತ್ತು ಉಗ್ರಾಣ ಮಂಡಳಿಯನ್ನು (National Co-operative Development and Warehousing Board) ಮತ್ತು ೧೯೫೭ರಲ್ಲಿ ಕೇಂದ್ರೀಯ ಉಗ್ರಾಣ ನಿಗಮವನ್ನು (Central Ware Housing Corporation) ಸ್ಥಾಪಿಸಲಾಗಿದೆ.

ಭಾರತದಲ್ಲಿ ಸಾರ್ವಜನಿಕ ವಲಯದಲ್ಲಿ ಈ ಮೂರು ಸಂಸ್ಥೆಗಳು ಬೃಹತ್ ಪ್ರಮಾಣದಲ್ಲಿ ಉಗ್ರಾಣ ಸೌಲಭ್ಯವೊದಗಿಸುತ್ತವೆ

೧. ಭಾರತದಲ್ಲಿ ಆಹಾರ ನಿಗಮ (Food Corporation of India)

೨. ಕೇಂದ್ರೀಯ ಉಗ್ರಾಣ ನಿಗಮ (Central Warehousing Corporation)

೩. ಹದಿನಾರು ರಾಜ್ಯ ಉಗ್ರಾಣ ನಿಗಮಗಳು (State Warehousing Corporatoins)

ಭಾರತದ ಆಹಾರ ನಿಗಮವು ಆಹಾರ ಧಾನ್ಯಗಳಿಗೆ ಸಂಗ್ರಹಣಾ ಸಾಮರ್ಥ್ಯವನ್ನು ಒದಗಿಸುತ್ತದೆ. ಅದರದೇ ಆದ ದಾಸ್ತಾನು ಮಳಿಗೆಗಳಲ್ಲಿ, ಕೇಂದ್ರೀಯ ಮತ್ತು ರಾಜ್ಯ ಉಗ್ರಾಣ ನಿಗಮಗಳಿಂದ ಬಾಡಿಗೆಗೆ ಪಡೆದ ಗೋಡೌನ್‌ಗಳಲ್ಲಿ ೧೬ ದಶಲಕ್ಷ ಟನ್ನು ಆಹಾರಧಾನ್ಯ ಸಂಗ್ರಹಿಸಿಡಬಹುದಾಗಿದೆ. ಕೇಂದ್ರೀಯ ಉಗ್ರಾಣ ನಿಗಮವು ಒಟ್ಟು ೭ ದಶಲಕ್ಷ ಟನ್ನು ಸಾಮರ್ಥ್ಯದ ೪೭೦ ಸಂಗ್ರಹಾಲಯಗಳನ್ನು ಮತ್ತು ರಾಜ್ಯ ನಿಗಮಗಳು ೧೦ ದಶಲಕ್ಷ ಟನ್ನು ಸಾಮರ್ಥ್ಯದ ೨೦೦೦ ಸಂಗ್ರಹಾಲಯಗಳನ್ನು ಹೊಂದಿವೆ. ಇಷ್ಟಲ್ಲದೆ ೫೩,೦೦೦ದಷ್ಟಿರುವ ಪ್ರಾಥಮಿಕ ಕೃಷಿ ಸಹಕಾರಿ ಸಂಘಗಳು ಕೂಡಾ ರೈತರ ಆಹಾರ ಧಾನ್ಯಗಳನ್ನು ಸಂಗ್ರಹಿಸಿಡುವ ಸವಲತ್ತುಗಳನ್ನು ಒದಗಿಸುತ್ತವೆ.

**೨. ಶೀತಲ ಸಂಗ್ರಹಾಲಯಗಳು:** ಅಲ್ಪಾಯುಷಿ ಸರಕುಗಳು ಬಹಳ ಬೇಗೆ ಕೆಟ್ಟು ಹೋಗದಂತೆ ನೋಡಿಕೊಳ್ಳುವ ವ್ಯವಸ್ಥೆಗೆ ಶೀತಲ ಸಂಗ್ರಹಾಲಯಗಳು (Cold Storages) ಎಂದು ಹೆಸರು. ಈರುಳ್ಳಿ, ಆಲೂಗಡ್ಡೆ, ಹಣ್ಣುಹಂಪಲು, ತರಕಾರಿಗಳು, ಮೀನು, ಮಾಂಸ, ಕ್ಷೀರ ಉತ್ಪನ್ನಗಳು ಇತ್ಯಾದಿಗಳನ್ನು ಸಂರಕ್ಷಿಸಿಟ್ಟು ಯೋಗ್ಯ ಬೆಲೆ ಲಭ್ಯವಾಗುವಂತೆ ಶೀತಲ ಸಂಗ್ರಹಲಾಯಗಳು ನೋಡಿಕೊಳ್ಳುತ್ತವೆ.

ಭಾರತದಲ್ಲೀಗ ಸುಮಾರು ೪೦೦೦ ಶೀತಲ ಸಂಗ್ರಹಾಲಯಗಳಿವೆ. ಅವುಗಳ ಸಂಗ್ರಹಣಾ ಸಾಮರ್ಥ್ಯ ೧೪ ದಶಲಕ್ಷ ಟನ್ನುಗಳು. ಇವುಗಳ ಪೈಕಿ ೨೫೦ ಸಹಕಾರಿ ರಂಗದಲ್ಲಿದ್ದು ಇವು ಒಂದು ದಶಲಕ್ಷ ಟನ್ನು ಸಂಗ್ರಹಣಾ ಸಾಮರ್ಥ್ಯ ಹೊಂದಿವೆ. ಶೇ. ೮೮ರಷ್ಟು ಶೀತಲ ಸಂಗ್ರಹಾಲಯ ಸಾಮರ್ಥ್ಯವನ್ನು ಆಲೂಗಡ್ಡೆ ಕೆಟ್ಟು ಹೋಗದಂತೆ ಸಂರಕ್ಷಿಸಲು ಬಳಸಲಾಗುತ್ತದೆ. ಶೇ. ೧೦ರಷ್ಟು ಸಾಮರ್ಥ್ಯ ಹಣ್ಣುಹಂಪಲು ಮತ್ತು ತರಕಾರಿಗಳಿಗೆ ಹಾಗೂ ಉಳಿದ ಶೇ. ೨ರಷ್ಟು ಸಾಮರ್ಥ್ಯ ಮೀನು ಮತ್ತು ಸಾಗರೋತ್ಪನ್ನಗಳ ಸಂಗ್ರಹಣೆಗೆ ಬಳಕೆಯಾಗುತ್ತಿದೆ. ಈರುಳ್ಳಿ ಸಂರಕ್ಷಣೆಗಾಗಿ ೪.೫ ದಶಲಕ್ಷ ಟನ್ನು ಸಾಮರ್ಥ್ಯದ ಶೀತಲ

ಸಂಗ್ರಹಾಲಯಗಳ ನಿರ್ಮಾಣಕ್ಕೆ ಪ್ರಯತ್ನಗಳಾಗುತ್ತಿವೆ. ಹತ್ತನೆಯ ಯೋಜನೆಯಲ್ಲಿ ತೋಟದ ಬೆಳೆಗಳಿಗೆ, ಕ್ಷೀರೋತ್ಪನ್ನಗಳಿಗೆ, ಮಾಂಸಕ್ಕೆ ಮತ್ತು ಸಾಗರೋತ್ಪನ್ನಗಳಿಗೆ ಪ್ರತ್ಯ ಪ್ರತ್ಯೇಕ ಶೀತಲ ಸಂಗ್ರಹಾಲಯಗಳನ್ನು ನಿರ್ಮಿಸಲು ಉದ್ದೇಶಿಸಲಾಗಿದೆ.

೩. ಮಾರುಕಟ್ಟೆ ವ್ಯವಸ್ಥೆ: ಕೃಷಿ ಉತ್ಪನ್ನಗಳಿಗೆ ಯೋಗ್ಯಬೆಲೆ ಲಭ್ಯವಾಗುವಂತೆ ಮಾರುಕಟ್ಟೆ ವ್ಯವಸ್ಥೆಯನ್ನು ರೂಪಿಸುವುದು ಬಹುದೊಡ್ಡ ಸವಾಲಾಗಿದೆ. ಮಾರುಕಟ್ಟೆಯಲ್ಲಿ ರೈತರು ಮಧ್ಯವರ್ತಿಗಳ ಜಾಲಕ್ಕೆ ಸಿಕ್ಕಿ ಬೀಳದಂತಿರಲು ಈ ಕೆಳಗಿನ ವ್ಯವಸ್ಥೆ ರೂಪಿಸಲಾಗಿದೆ.

**i. ವರ್ಗೀಕರಣ ಮತ್ತು ಪ್ರಮಾಣ ನಿರ್ಣಯ :** ಕೃಷಿ ಉತ್ಪನ್ನಗಳ ವರ್ಗೀಕರಣ ಮತ್ತು ಪ್ರಮಾಣ ನಿರ್ಣಯಕ್ಕಾಗಿ ೧೯೩೭ರಲ್ಲಿ ಕೃಷಿ ಉತ್ಪನ್ನಗಳ ವರ್ಗೀಕರಣ ಮತ್ತು ಮಾರಾಟ ಕಾಯಿದೆಯನ್ನು ಜಾರಿಗೊಳಿಸಲಾಯಿತು. ಕೃಷಿ ಉತ್ಪನ್ನಗಳ ಗುಣಮಟ್ಟ ಕಾಯ್ದುಕೊಳ್ಳಲು ನಾಗಪುರದಲ್ಲಿ ರಾಷ್ಟ್ರೀಯ ಗುಣಮಟ್ಟ ಸಂಶೋಧನಾಲಯವನ್ನು ಸ್ಥಾಪಿಸಲಾಗಿದೆ. ಅಲ್ಲದೆ ಎಂಟು ಪ್ರಾಂತೀಯ ಗುಣಮಟ್ಟ ನಿಯಂತ್ರಣ ಸಂಶೋಧನಾಲಯಗಳು ಮತ್ತು ಇಪ್ಪತ್ತೊಂದು ರಾಜ್ಯಮಟ್ಟದ ಸಂಶೋಧನಾಲಯಗಳು ವರ್ಗೀಕರಣ ಮತ್ತು ಪ್ರಮಾಣ ನಿರ್ಣಯ ಕಾರ್ಯದಲ್ಲಿ ನಿರತವಾಗಿವೆ. ಅವು ಕೃಷಿ ಉತ್ಪನ್ನಗಳಿಗೆ ಅಗ್‌ಮಾರ್ಕ್ ಚಿಹ್ನೆ ನೀಡುತ್ತವೆ. ರಾಷ್ಟ್ರೀಯ ಗುಣಮಟ್ಟ ಸಂಶೋಧನಾಲಯ ನಿಗದಿಪಡಿಸಿದ ಮಾನದಂಡಗಳ ಆಧಾರದಲ್ಲಿ ಪ್ರಮಾಣ ನಿಷ್ಕರ್ಷೆಯಲ್ಲಿ ಉತ್ತೀರ್ಣಗೊಂಡ ಕೃಷಿ ಉತ್ಪನ್ನಗಳಿಗೆ ಕೃಷಿ ಮಾರಾಟ ವಿಭಾಗ ನೀಡುವ ಚಿಹ್ನೆಗೆ ಅಗ್‌ಮಾರ್ಕ್ (AGMARK) ಚಿಹ್ನೆಯೆಂದು ಹೆಸರು. ಅಗ್ ಮಾರ್ಕ್ ಉನ್ನತ ಗುಣಮಟ್ಟದ ಸಂಕೇತವಾಗಿದೆ. ಸುಮಾರು ೧೬೨ ಕೃಷಿ ಸರಕುಗಳು ಪ್ರಮಾಣ ನಿರ್ಣಯಕ್ಕೆ ಒಳಗಾಗುತ್ತವೆ.

**ii. ನಿಯಂತ್ರಿತ ಮಾರುಕಟ್ಟೆಗಳ ನಿರ್ಮಾಣ:** ರೈತರು ದಲ್ಲಾಳಿಗಳಿಂದ ಶೋಷಣೆಗೊಳಗಾಗುವುದನ್ನು ತಪ್ಪಿಸಲು ರಾಜ್ಯ ಸರಕಾರಗಳು ರೂಪಿಸಿರುವ ಮಾರಾಟ ವ್ಯವಸ್ಥೆಗೆ ನಿಯಂತ್ರಿತ ಮಾರುಕಟ್ಟೆಗಳು(Regulated Markets) ಎಂದು ಹೆಸರು. ಅವುಗಳ ಮುಖ್ಯ ಕಾರ್ಯಗಳು ಈ ಕೆಳಗಿನಂತಿವೆ

* ತೂಕ ಮತ್ತು ಅಳತೆಗಳಲ್ಲಿ ಸಮರ್ಪಕತೆಯನ್ನು ಕಾಯ್ದುಕೊಳ್ಳುವುದು.
* ಮಾರುಕಟ್ಟೆ ಬೆಲೆ ಮತ್ತು ದರಗಳನ್ನು ನಿಗದಿಗೊಳಿಸುವುದು.
* ಕೃಷಿ ಉತ್ಪನ್ನಗಳಿಗೆ ಉಗ್ರಾಣ ಸಂಗ್ರಹ ಸೌಲಭ್ಯ ಕಲ್ಪಿಸಿಕೊಡುವುದು.
* ದಲ್ಲಾಳಿಗಳಿಂದ ರೈತರು ಮೋಸ ಹೋಗದಂತೆ ನೋಡಿಕೊಳ್ಳುವುದು.
* ರೈತರಿಗೆ ಕೃಷಿಯುತ್ಪನ್ನ ಬೆಲೆಗಳ ಬಗ್ಗೆ ಮಾಹಿತಿ ನೀಡುವುದು.
* ಮಾರಾಟ ಸಮಯದಲ್ಲಿ ಉದ್ಭವಿಸುವ ವೈಮನಸ್ಸು ಮತ್ತು ಜಗಳಗಳನ್ನು ಪರಿಹರಿಸುವುದು.

ಭಾರತದಲ್ಲೀಗ ೭೦೬೨ ನಿಯಂತ್ರಿತ ಮಾರುಕಟ್ಟೆಗಳಿವೆ. ಶೇ. ೮೦ರಷ್ಟು ಕೃಷಿಯುತ್ಪನ್ನಗಳು ನಿಯಂತ್ರಿತ ಮಾರುಕಟ್ಟೆಯಲ್ಲಿ ಮಾರಾಟವಾಗುತ್ತವೆ.

ಆದರೂ ಕೃಷಿಯುತ್ಪನ್ನಗಳ ಬೆಲೆಗಳಲ್ಲಿ ಇತ್ತೀಚೆಗೆ ತುಂಬಾ ಏರುಪೇರುಗಳಾಗುತ್ತಿವೆ. ಬೇಡಿಕೆ ಮತ್ತು ಪೂರೈಕೆಗಳ ನಡುವೆ ಸಮಾನತೆ ಸಾಧಿಸಲಾಗದ್ದೇ ಇದಕ್ಕೆ ಕಾರಣ.

## ೩.೪. ಮುಖ್ಯಾಂಶಗಳು, ಪ್ರಶ್ನೆಗಳು ಮತ್ತು ಚಟುವಟಿಕೆಗಳು

### ಮುಖ್ಯಾಂಶಗಳು

೧. ದೇಶವೊಂದರ ಆರ್ಥಿಕ ಭವಿಷ್ಯವು ಭೂ ಬಳಕೆಯ ಕ್ರಮವನ್ನು ಅವಲಂಬಿಸಿ ಕೊಂಡಿರುತ್ತದೆ. ಭಾರತದಲ್ಲಿ ಭೂಬಳಕೆಯ ಕ್ರಮವನ್ನು ಕೆಳಗಿನ ವೃತ್ತ ಚಿತ್ರ (pie) ತೋರಿಸುತ್ತದೆ.

| ಭೂಮಿಯ ಬಳಕೆ | ಪ್ರಮಾಣ |
|---|---|
| ಬೆಳೆಯಾಗುವ ಭೂಮಿ | ೬೨ |
| ಅರಣ್ಯ ಭೂಮಿ | ೨೩ |
| ಬರಡು ಭೂಮಿ | ೧೪ |
| ಇತರ | ೧೭ |
| ಒಟ್ಟು | ೧೦೦ |




೨. ಮಣ್ಣಿನ ಸವಕಳಿಯೆಂದರೆ ಭೂಮಿಯ ಮೇಲ್ಪದರದ ಮಣ್ಣು ಕೊರೆದು ಹೋಗುವುದು. ೧. ಹವಾಮಾನ ವೈಪರೀತ್ಯ ಮತ್ತು ಮಾನವನ ಅಜ್ಞಾನಗಳಿಂದ ಮಣ್ಣಿನ ಸವಕಳಿ ಉಂಟಾಗುತ್ತದೆ.



೬. ಕಿಂಡಿ ಅಣೆಕಟ್ಟುಗಳು

೭. ಸಹಜಕೃಷಿ

೮. ಜನಸಂಖ್ಯಾ ನಿಯಂತ್ರಣ

೩. ವಿವಿಧ ಜಲಮೂಲಗಳಿಂದ ಬೇಸಾಯಕ್ಕೆ ನೀರು ಪೂರೈಕೆ ಮಾಡುವುದನ್ನು ನೀರಾವರಿ ಎಂದು ಕರೆಯಲಾಗುತ್ತದೆ.




೪. ನೀರಾವರಿಯ ಸೌಲಭ್ಯವಿಲ್ಲದ ಕೃಷಿ ಚಟುವಟಿಕೆಗಳನ್ನು ಒಣಭೂಮಿ ಬೇಸಾಯ ಎಂದು ಕರೆಯಲಾಗುತ್ತದೆ.




೫. ಒಣಭೂಮಿ ಬೇಸಾಯ ಮೂರು ಕಾರ್ಯತಂತ್ರಗಳನ್ನು ಹೊಂದಿದೆ.



೬. ನೀರಿನ ಮೂಲಗಳನ್ನು ಎಚ್ಚರದಿಂದ ಕಾಪಾಡಿಕೊಳ್ಳುವುದನ್ನು ನೀರಿನ ಸಂರಕ್ಷಣೆ ಎಂದು ಕರೆಯಲಾಗುತ್ತದೆ. ನೀರನ್ನು ಸಮರ್ಥವಾಗಿ, ದಕ್ಷವಾಗಿ ಮತ್ತು ಆದರ್ಶ ರೀತಿಯಲ್ಲಿ ಬಳಸುವುದು ನೀರಿನ ನಿರ್ವಹಣೆಯೆನಿಸುತ್ತದೆ.

ನೀರು
ಸಂರಕ್ಷಣೆ ಮತ್ತು ನಿರ್ವಹಣೆ

| ಯಾಕಾಗಿ? | ಹೇಗೆ? |
|---|---|
| ೧. ನೀರಿನ ಕೊರತೆ ನೀಗಿಸಲು | ೧. ಒಡ್ಡುಗಳ ನಿರ್ಮಾಣದಿಂದ |
| ೨. ಲಭ್ಯತೆಯ ಅನಿಶ್ಚಿತತೆ ನಿವಾರಿಸಲು | ೨. ಕಿಂಡಿ ಅಣೆಕಟ್ಟುಗಳ ನಿರ್ಮಾಣದಿಂದ |
| ೩. ಪ್ರಾದೇಶಿಕ ಅಸಮತೋಲನ ನೀಗಿಸಲು | ೩. ಜಲಾನಯನ ಪ್ರದೇಶಾಭಿವೃದ್ಧಿ ಯೋಜನೆಯಿಂದ |
| ೪. ಕೃಷಿ ಕೈಗಾರಿಕೆಗಳ ಅಭಿವೃದ್ಧಿಗೆ | ೪. ತುಂತುರು ನೀರಾವರಿ ವ್ಯವಸ್ಥೆಯಿಂದ |
| ೫. ಕುಡಿಯುವ ನೀರಿನ ಸಮಸ್ಯೆ ನಿವಾರಣೆಗೆ | ೫. ಹನಿ ನೀರಾವರಿ ಕ್ರಮದಿಂದ |
| ೬. ನೀರಾವರಿ ಸಮಸ್ಯೆ ಪರಿಹಾರಕ್ಕೆ | ೬. ಮಳೆಕೊಯ್ಲು ವಿಧಾನದಿಂದ |
| ೭. ಬಳಕೆಯ ಅದಕ್ಷತೆ ನೀಗಿಸಲು | |

೭. ಮಳೆ ನೀರನ್ನು ಸಂರಕ್ಷಿಸಿ ಅಂತರ್ಜಲ ಮಟ್ಟವನ್ನು ಹೆಚ್ಚಿಸುವುದನ್ನು ಮಳೆ ನೀರಿನ ಕೊಯ್ಲು ಎಂದು ಕರೆಯಲಾಗುತ್ತದೆ. ಮಳೆ ನೀರಿನ ಕೊಯ್ಲಿನಲ್ಲಿ ಎರಡು ವಿಧಾನಗಳಿವೆ.

ಮಳೆ ನೀರು ಕೊಯ್ಲು

| ಚಾವಣಿ ನೀರಿನ ಕೊಯ್ಲು | | ಹರಿಯುವ ನೀರಿನ ಕೊಯ್ಲು | |
|---|---|---|---|
| ಟ್ಯಾಂಕು ನಿರ್ಮಾಣ | ಹಳೆ ಬಾವಿ ಕೊಳವೆ ಬಾವಿ ಜಲಪೂರಣ | ಇಂಗು ಗುಂಡಿ ನಿರ್ಮಾಣ | ಒಡ್ಡುಗಳ ನಿರ್ಮಾಣ |

೮. ಪೂರೈಕೆ ಮತ್ತು ಬೇಡಿಕೆಗಳ ಅಸಮತೋಲನದಿಂದಾಗಿ ಆಹಾರದ ಸಮಸ್ಯೆ ಹುಟ್ಟಿಕೊಂಡಿದೆ.

ಆಹಾರದ ಸಮಸ್ಯೆ




೯. ಆಹಾರದ ಲಭ್ಯತೆ ಮತ್ತು ಕೊಳ್ಳುವ ಸಾಮರ್ಥ್ಯದ ಅಸ್ತಿತ್ವ ಒಟ್ಟಾದಾಗ ಆಹಾರ ಭದ್ರತೆ ಎನಿಸಿಕೊಳ್ಳುತ್ತದೆ. ಆಹಾರ ಭದ್ರತೆಯು ಮೂರು ಭಾಗಗಳನ್ನು ಒಳಗೊಂಡಿದೆ.

**ಆಹಾರ ಭದ್ರತೆ**




೧೦. ಆಹಾರ ಭದ್ರತಾ ಕ್ರಮಗಳ ಮೂಲಕ ಆಹಾರದ ಲಭ್ಯತೆ ಈ ಕೆಳಗಿನ ನಾಲ್ಕು ರೂಪದಲ್ಲಾಗುತ್ತದೆ.

**ಆಹಾರದ ಲಭ್ಯತೆಗೆ ಕ್ರಮಗಳು**




೧೧. ಅವಶ್ಯಕ ಸರಕುಗಳನ್ನು ಸರಕಾರವು ನ್ಯಾಯಬೆಲೆ ಅಂಗಡಿ ಮೂಲಕ ಜನರಿಗೆ ತಲುಪಿಸುವುದಕ್ಕೆ ಸಾರ್ವಜನಿಕ ವಿತರಣಾ ವ್ಯವಸ್ಥೆಯೆಂದು ಹೆಸರು. ೧೯೭೭ರ ಜೂನಿನಲ್ಲಿ ಗುರಿಕೇಂದ್ರಿತ ಸಾರ್ವಜನಿಕ ವಿತರಣಾ ವ್ಯವಸ್ಥೆ ಅಸ್ತಿತ್ವಕ್ಕೆ ಬಂದಿದೆ.

ಗುರಿಕೇಂದ್ರಿತ ಸಾರ್ವಜನಿಕ ವಿತರಣಾ ವ್ಯವಸ್ಥೆ

| ಲಕ್ಷಣಗಳು | ಸಮಸ್ಯೆಗಳು |
| --- | --- |
| ೧. ಎರಡು ರೀತಿಯ ಬೆಲೆಗಳು | ೧. ಬೇಡಿಕೆ ಮತ್ತು ಪೂರೈಕೆ ಅಸಮತೋಲನ |
| ೨. ರಾಜ್ಯಗಳಿಗೆ ಅಧಿಕಾರ | ೨. ಆಹಾರ ಧಾನ್ಯಗಳ ಉತ್ಪಾದನೆ ಇಳಿಕೆ |
| ೩. ಬಡವರಿಗೆ ಆದ್ಯತೆ | ೩. ಆಹಾರೇತರ ಬೆಳೆಗಳಿಗೆ ಆದ್ಯತೆ |
| ೪. ಅಂತ್ಯೋದಯ | ೪. ನಿರುದ್ಯೋಗದ ಅಧಿಕ್ಯ |
| ೫. ಮಧ್ಯಾಹ್ನದೂಟ | ೫. ಭಯಾನಕ ಬಡತನ |
| ೬. ಕೂಲಿಗಾಗಿ ಕಾಳು | ೬. ಮಧ್ಯಾಹ್ನದೂಟದ ವೈಫಲ್ಯ |
| ೭. ಸೋರಿಕೆ ನಿಯಂತ್ರಣ | |

೧೨. ವಿಜ್ಞಾನ ಮತ್ತು ತಂತ್ರಜ್ಞಾನದ ಬಳಕೆಯಿಂದ ಭಾರತದಲ್ಲಿ ಹಸಿರುಕ್ರಾಂತಿ, ನೀಲಕ್ರಾಂತಿ, ಶ್ವೇತಕ್ರಾಂತಿ, ಪೀತಕ್ರಾಂತಿ ಮತ್ತು ಸುವರ್ಣ ಕ್ರಾಂತಿಗಳು ಸಂಭವಿಸಿವೆ. ಕೃಷಿ ತಂತ್ರಜ್ಞಾನವನ್ನು ೧. ಕೊಯ್ಲು ಪೂರ್ವದ ಮತ್ತು ೨. ಕೊಯ್ಲಿನ ಬಳಿಕದ ತಂತ್ರಜ್ಞಾನವೆಂದು ವಿಂಗಡಿಸಲಾಗುತ್ತದೆ. ಕೊಯ್ಲು ಪೂರ್ವದ ತಂತ್ರಜ್ಞಾನದಲ್ಲಿ ೧. ಅಧಿಕ ಇಳುವರಿ ಬೀಜಗಳ ಬಳಕೆ ೨. ರಸಗೊಬ್ಬರ ಮತ್ತು ಕೀಟನಾಶಕಗಳ ಬಳಕೆ ಮತ್ತು ೩. ನೀರಾವರಿ ವ್ಯವಸ್ಥೆ ಒಳಗೊಂಡಿದೆ. ಕೃಷಿ ಉತ್ಪಾದನೆಯ ಹೆಚ್ಚಳವು ಕೊಯ್ಲು ಪೂರ್ವ ತಂತ್ರಜ್ಞಾನದ ಬಳಕೆಯ ಉದ್ದೇಶವಾಗಿರುತ್ತದೆ. ಕೊಯ್ಲಿನ ಬಳಿಕಿನ ತಂತ್ರಜ್ಞಾನವೆಂದರೆ ೧. ಸಂಗ್ರಹಣಾ ವ್ಯವಸ್ಥೆ ಮತ್ತು ೨. ಮಾರಾಟ. ಇದರಲ್ಲಿ ಉಗ್ರಾಣ ಮತ್ತು ಶೀತಲ ಗೃಹಗಳು ಹಾಗೂ ಮಾರುಕಟ್ಟೆ ವ್ಯವಸ್ಥೆ ಒಳಗೊಂಡಿದೆ. ರೈತರ ಉತ್ಪನ್ನಗಳಿಗೆ ಯೋಗ್ಯ ಬೆಲೆ ಒದಗಿಸುವುದು ಕೊಯ್ಲಿನ ಬಳಿಕದ ತಂತ್ರಜ್ಞಾನದ ಉದ್ದೇಶವಾಗಿರುತ್ತದೆ.

## ಮಾದರಿ ಪ್ರಶ್ನೆಗಳು

**೧. ಈ ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದ ಉತ್ತರ ಬರೆಯಿರಿ. (೧ ಅಂಕ)**

೧. ಭೂ ಬಳಕೆಯ ಕ್ರಮ ಏನನ್ನು ತಿಳಿಸುತ್ತದೆ?
೨. ಕೃಷಿ ಭೂಮಿಯ ಬಳಕೆ ಎಂದರೇನು?
೩. ನಿವ್ವಳ ಬೆಳೆಯಾಗುವ ಪ್ರದೇಶವೆಂದರೇನು?
೪. ಬೀಳು ಬಿಟ್ಟ ಪ್ರದೇಶವೆಂದರೇನು?
೫. ಸಹ್ಯ ಅಭಿವೃದ್ಧಿಗೆ ಇರಲೇಬೇಕಾದ ಅರಣ್ಯ ಪ್ರದೇಶವೆಷ್ಟು?
೬. ಮಣ್ಣಿನ ಸವಕಳಿ ಎಂದರೇನು?

೭. ಭೂಸಾರ ಸಂರಕ್ಷಣೆ ಎಂದರೇನು?
೮. ನೀರಾವರಿ ಎಂದರೇನು?
೯. ಸಣ್ಣ ನೀರಾವರಿ ಎಂದರೇನು?
೧೦. ಮಧ್ಯಮ ನೀರಾವರಿ ಎಂದರೇನು?
೧೧. ಬೃಹತ್ ನೀರಾವರಿ ಎಂದರೇನು?
೧೨. ಒಣಭೂಮಿ ಬೇಸಾಯವೆಂದರೇನು?
೧೩. ನೀರಿನ ಸಂರಕ್ಷಣೆ ಎಂದರೇನು?
೧೪. ನೀರಿನ ನಿರ್ವಹಣೆ ಎಂದರೇನು?
೧೫. ಕಿಂಡಿ ಅಣೆಕಟ್ಟುಗಳೆಂದರೇನು?
೧೬. ಜಲಾನಯನ ಅಭಿವೃದ್ಧಿ ಎಂದರೇನು?
೧೭. ತುಂತುರು ನೀರಾವರಿ ಎಂದರೇನು?
೧೮. ಹನಿ ನೀರಾವರಿ ಎಂದರೇನು?
೧೯. ಮಳೆ ನೀರಿನ ಕೊಯ್ಲು ಎಂದರೇನು?
೨೦. ಚಾವಣಿ ನೀರಿನ ಕೊಯ್ಲು ಎಂದರೇನು?
೨೧. ಹರಿಯುವ ಮಳೆ ನೀರಿನ ಕೊಯ್ಲು ಎಂದರೇನು?
೨೨. ಆಹಾರ ಎಂದರೇನು?
೨೩. ಆಹಾರ ಸಮಸ್ಯೆ ಉಂಟಾಗಲು ಕಾರಣವೇನು?
೨೪. ಆಹಾರ ಭದ್ರತೆ ಎಂದರೇನು?
೨೫. ವಿಶ್ವ ಆಹಾರ ಶೃಂಗಸಭೆ ೧೯೯೬, ಆಹಾರ ಭದ್ರತೆಗೆ ನೀಡಿದ ವ್ಯಾಖ್ಯೆಯನ್ನು ಬರೆಯಿರಿ.
೨೬. ಬೆಂಬಲ ಬೆಲೆ ಎಂದರೇನು?
೨೭. ಕಾಪು ದಾಸ್ತಾನು ಎಂದರೇನು?
೨೮. ಸಾರ್ವಜನಿಕ ವಿತರಣಾ ವ್ಯವಸ್ಥೆ ಎಂದರೇನು?
೨೯. ಪ್ಯೂರಾ ಕಾರ್ಯಕ್ರಮವೆಂದರೇನು?
೩೦. ನೀಲಕ್ರಾಂತಿ ಎಂದರೇನು?
೩೨. ಶ್ವೇತಕ್ರಾಂತಿ ಎಂದರೇನು?
೩೩. ಪೀತಕ್ರಾಂತಿ ಎಂದರೇನು?
೩೪. ಸುವರ್ಣಕ್ರಾಂತಿ ಎಂದರೇನು?
೩೫. ಕಾಮನಬಿಲ್ಲು ಕ್ರಾಂತಿ ಎಂದರೇನು?
೩೬. ಕೃಷಿ ಕ್ರಾಂತಿ ಎಂದರೇನು
೩೭. ವಿಸ್ತರಿಸಿ ಎಚ್.ವೈ.ವಿ.

೩೮. ಕೊಯ್ಲು ಪೂರ್ವದ ತಂತ್ರಜ್ಞಾನ ಯಾವುದು?
೩೯. ಕೊಯ್ಲು ಬಳಿಕಿನ ತಂತ್ರಜ್ಞಾನ ಯಾವುದು?
೪೦. ಉಗ್ರಾಣಗಳು ಎಂದರೇನು?
೪೧. ಶೀತಲ ಸಂಗ್ರಹಾಲಯಗಳು ಎಂದರೇನು?
೪೨. AGMARK ಎಂದರೇನು?
೪೩. ನಿಯಂತ್ರಿತ ಮಾರುಕಟ್ಟೆಗಳೆಂದರೇನು?

**೨. ಈ ಕೆಳಗಿನ ಪ್ರಶ್ನೆಗಳಿಗೆ ನಾಲ್ಕು ವಾಕ್ಯಗಳ ಉತ್ತರ ಬರೆಯಿರಿ. (೨ ಅಂಕಗಳು)**

೪೪. ನಿವ್ವಳ ಬೆಳೆಯಾಗುವ ಭೂಮಿಯ ಅರ್ಥವನ್ನು ತಿಳಿಸಿ.
೪೫. ಬೀಳು ಬಿಟ್ಟ ಭೂಮಿಯ ಅರ್ಥ ಮತ್ತು ಉದ್ದೇಶವೇನು?
೪೬. ಭಾರತದ ಒಟ್ಟು ಭೂಮಿಯ ಮತ್ತು ಲಭ್ಯವಾಗುವ ಭೂಮಿಯ ವಿಸ್ತೀರ್ಣವೆಷ್ಟು?
೪೭. ಭಾರತದಲ್ಲಿ ವ್ಯವಸಾಯ ಭೂಮಿಯ ಬಗ್ಗೆ ಮಾಹಿತಿ ನೀಡಿ.
೪೮. ಭಾರತದ ಬೀಳುಭೂಮಿಯ ಬಗ್ಗೆ ಮಾಹಿತಿ ನೀಡಿ.
೪೯. ಭಾರತದಲ್ಲಿ ಅಭಿವೃದ್ಧಿಪಡಿಸಬಹುದಾದ ವ್ಯರ್ಥಭೂಮಿಯ ಬಗ್ಗೆ ಮಾಹಿತಿ ನೀಡಿ.
೫೦. ಭಾರತದ ಹುಲ್ಲುಗಾವಲು ಮತ್ತು ಗೋಮಾಳಗಳ ಬಗ್ಗೆ ಮಾಹಿತಿ ನೀಡಿ.
೫೧. ಭಾರತದ ಅರಣ್ಯ ಪ್ರದೇಶದ ಬಗ್ಗೆ ಮಾಹಿತಿ ನೀಡಿ.
೫೨. ಬರಡು ಭೂಮಿಯ ಬಗ್ಗೆ ಮಾಹಿತಿ ನೀಡಿ.
೫೩. ಮಣ್ಣಿನ ಸವಕಳಿಯ ಅರ್ಥವನ್ನು ತಿಳಿಸಿ.
೫೪. ಮಣ್ಣಿನ ಸವಕಳಿಗೆ ನೈಸರ್ಗಿಕ ಕಾರಣಗಳೇನು?
೫೫. ಮಣ್ಣಿನ ಸವಕಳಿಯ ಕಾರಣಗಳನ್ನು ನಕ್ಷೆಯಲ್ಲಿ ತೋರಿಸಿ. (ನಕ್ಷೆ ೩.೧.)
೫೬. ಮಣ್ಣಿನ ಸವಕಳಿಗೆ ಕಾರಣವಾಗುವ ಮಾನವ ನಿರ್ಮಿತ ಅನಾಪುತಗಳಾವುವು?
೫೭. ಮಣ್ಣಿನ ಸವಕಳಿಯ ಪರಿಣಾಮಗಳಾವುವು?
೫೮. ಭೂಸಾರ ಸಂರಕ್ಷಣೆಯ ನಾಲ್ಕು ಕ್ರಮಗಳನ್ನು ತಿಳಿಸಿ.
೫೯. ನೀರಾವರಿಯ ಅರ್ಥವನ್ನು ತಿಳಿಸಿ.
೬೦. ಸಣ್ಣ, ಮಧ್ಯಮ ಮತ್ತು ಬೃಹತ್ ನೀರಾವರಿ ಎಂದರೇನು?
೬೧. ಸಣ್ಣ ನೀರಾವರಿಯ ಮೂಲಗಳು ಯಾವುವು?
೬೨. ಒಣಭೂಮಿ ಬೇಸಾಯ ಸುಧಾರಣೆಯ ಕಾರ್ಯತಂತ್ರವನ್ನು ತಿಳಿಸಿ.
೬೩. ನೀರು ಸಂರಕ್ಷಣೆ ಮತ್ತು ನಿರ್ವಹಣೆಯ ಅರ್ಥವನ್ನು ತಿಳಿಸಿ.
೬೪. ಮಳೆ ನೀರು ಕೊಯ್ಲಿನ ವಿಧಾನಗಳಾವುವು?
೬೫. ಭಾರತದ ಆಹಾರ ಸಮಸ್ಯೆಯನ್ನು ನಕ್ಷೆಯಲ್ಲಿ ತೋರಿಸಿ. (ನಕ್ಷೆ ೩.೨)
೬೬. ಆಹಾರ ಸಮಸ್ಯೆಗೆ ಕಾರಣವಾಗಿರುವ ಬೇಡಿಕೆಯ ಅಂಶಗಳಾವುವು?

೬೭. ಆಹಾರ ಸಮಸ್ಯೆಗೆ ಕಾರಣವಾಗಿರುವ ಪೂರೈಕೆಯ ಅಂಶಗಳಾವುವು?
೬೮. ಆಹಾರದ ಭದ್ರತೆ ಎಂದರೇನು ಆಹಾರಾದ ಅಭದ್ರತೆಯ ಎರಡು ಕಾರಣಗಳಾವುವು?
೬೯. ಆಹಾರ ಭದ್ರತೆಯ ಮೂರು ಭಾಗಗಳಾವುವು?
೭೦. ಆಹಾರ ಭದ್ರತೆಗೆ ಸಂಬಂಧಿಸಿದ ಪ್ರಮುಖ ಸಮಸ್ಯೆಗಳಾವುವು?
೭೧. ಆಹಾರ ಲಭ್ಯತೆಗೆ ಕೈಗೊಳ್ಳಲಾದ ಆಹಾರ ಭದ್ರತಾ ಕ್ರಮಗಳಾವುವು?
೭೨. ಆಹಾರ ಧಾನ್ಯಗಳ ಸಂಗ್ರಹಣೆಯ ಬಗ್ಗೆ ಮಾಹಿತಿ ನೀಡಿ.
೭೩. ಆಹಾರ ಧಾನ್ಯಗಳ ಕಾಪುದಾಸ್ತಾವಿನ ಬಗ್ಗೆ ಮಾಹಿತಿ ನೀಡಿ.
೭೪. ಸಾರ್ವಜನಿಕ ವಿತರಣೆಯ ಬಗ್ಗೆ ಮಾಹಿತಿ ನೀಡಿ.
೭೫. ಆಹಾರ ಧಾನ್ಯಗಳ ಬ್ಯಾಂಕುಗಳ ಬಗ್ಗೆ ಮಾಹಿತಿ ನೀಡಿ.
೭೬. ಪ್ಯೂರಾ ಕಾರ್ಯಕ್ರಮದ ಬಗ್ಗೆ ಮಾಹಿತಿ ಕೊಡಿ.
೭೭. ಸಾರ್ವಜನಿಕ ವಿತರಣಾ ವ್ಯವಸ್ಥೆಯ ಉದ್ದೇಶಗಳೇನು?
೭೮. ಸಾರ್ವಜನಿಕ ವಿತರಣಾ ವ್ಯವಸ್ಥೆಯ ನಾಲ್ಕು ದೋಷಗಳನ್ನು ತಿಳಿಸಿ.
೭೯. ಗುರಿಕೇಂದ್ರಿತ ಸಾರ್ವಜನಿಕ ವಿತರಣಾ ವ್ಯವಸ್ಥೆಯ ಮೂರು ಲಕ್ಷಣಗಳನ್ನು ತಿಳಿಸಿ.
೮೦. ಗುರಿಕೇಂದ್ರಿತ ಸಾರ್ವಜನಿಕ ವಿತರಣಾ ವ್ಯವಸ್ಥೆಯ ಮೂರು ಸಮಸ್ಯೆಗಳನ್ನು ತಿಳಿಸಿ.
೮೧. ಹಸಿರು, ನೀಲ, ಶ್ವೇತ ಮತ್ತು ಪೀತಕ್ರಾಂತಿಯ ಅರ್ಥವನ್ನು ತಿಳಿಸಿ.
೮೨. ಕೃಷಿ ತಂತ್ರಜ್ಞಾನವನ್ನು ನಕ್ಷೆಯಲ್ಲಿ ತೋರಿಸಿ. ನಕ್ಷೆ ೩.೩
೮೩. ಕೊಯ್ಲು ಪೂರ್ವದ ತಂತ್ರಜ್ಞಾನದ ಮಾಹಿತಿ ನೀಡಿ.
೮೪. ಕೊಯ್ಲು ಬಳಿಕಿನ ತಂತ್ರಜ್ಞಾನದ ಮಾಹಿತಿ ನೀಡಿ.
೮೫. ಅಧಿಕ ಇಳುವರಿ ತಳಿಗಳ ಬಗ್ಗೆ ಮಾಹಿತಿ ನೀಡಿ.
೮೬. ರಸಗೊಬ್ಬರ ಬಳಕೆಯ ಬಗ್ಗೆ ಮಾಹಿತಿ ನೀಡಿ.
೮೭. ಉಗ್ರಾಣ ವ್ಯವಸ್ಥೆ ಬಗ್ಗೆ ಮಾಹಿತಿ ನೀಡಿ.
೮೮. ಶೀತಲ ಸಂಗ್ರಹಾಲಯಗಳ ಬಗ್ಗೆ ಮಾಹಿತಿ ನೀಡಿ.
೮೯. ಕೃಷಿ ಉತ್ಪನ್ನ ವರ್ಗೀಕರಣ ಮತ್ತು ಪ್ರಮಾಣ ನಿರ್ಣಯ ಬಗ್ಗೆ ಮಾಹಿತಿ ನೀಡಿ.
೯೦. ನಿಯಂತ್ರಿತ ಮಾರುಕಟ್ಟೆಗಳ ಬಗ್ಗೆ ಮಾಹಿತಿ ನೀಡಿ.

೩. **ಈ ಕೆಳಗಿನ ಪ್ರಶ್ನೆಗಳಿಗೆ ೧೫ ವಾಕ್ಯಗಳಲ್ಲಿ ಉತ್ತರ ಬರೆಯಿರಿ.** (೫ ಅಂಕಗಳು)

೯೧. ಭಾರತದಲ್ಲಿ ಭೂಬಳಕೆಯ ಕ್ರಮದ ಬಗ್ಗೆ ಸಂಕ್ಷಿಪ್ತ ವಿವರಣೆ ನೀಡಿ.
೯೨. ಮಣ್ಣಿನ ಸವಕಳಿ ಎಂದರೇನು ಮಣ್ಣಿನ ಸವಕಳಿಗೆ ಕಾರಣಗಳೇನು?
೯೩. ಮಣ್ಣಿನ ಸವಕಳಿಯ ಕಾರಣ ಮತ್ತು ಪರಿಣಾಮಗಳನ್ನು ತಿಳಿಸಿ.
೯೪. ಭೂಸಾರ ಸಂರಕ್ಷಣೆ ಎಂದರೇನು ಭೂಸಾರ ಸಂರಕ್ಷಣೆಯ ಕ್ರಮಗಳಾವುವು?
೯೫. ನೀರಾವರಿ ಎಂದರೇನು ನೀರಾವರಿಯ ವಿಧಗಳಾವುವು?

೯೭. ಒಣಭೂಮಿ ಬೇಸಾಯದ ಸಮಸ್ಯೆ, ಕಾಯತಂತ್ರ, ವ್ಯಾಪ್ತಿಯನ್ನು ತಿಳಿಸಿ.
೯೭. ನೀರಿನ ಸಂರಕ್ಷಣೆ ಮತ್ತು ನಿರ್ವಹಣೆ ಎಂದರೇನು? ಅವುಗಳ ಅಗತ್ಯವನ್ನು ತಿಳಿಸಿ.
೯೮. ನೀರು ಸಂರಕ್ಷಣೆ ಮತ್ತು ನಿರ್ವಹಣೆಯ ವಿಧಾನಗಳನ್ನು ಸಂಕ್ಷಿಪ್ತವಾಗಿ ವಿವರಿಸಿ.
೯೯. ಭಾರತದಲ್ಲಿ ಆಹಾರ ಸಮಸ್ಯೆ ಉಂಟಾಗಲು ಕಾರಣಗಳೇನು?
೧೦೦. ಆಹಾರ ಭದ್ರತೆಯೆಂದರೇನು ಆಹಾರ ಭದ್ರತಾ ಕ್ರಮಗಳಾವುವು?
೧೦೧. ಆಹಾರ ಧಾನ್ಯ ಬ್ಯಾಂಕಿನ ಕಾರ್ಯವಿಧಾನ ಮತ್ತು ಪ್ರಯೋಜನಗಳನ್ನು ತಿಳಿಸಿ.
೧೦೨. ಹಸಿವು ಮುಕ್ತ ಭಾರತ ಮತ್ತು ಪ್ಯೂರಾ ಕಾರ್ಯಕ್ರಮಗಳನ್ನು ಸಂಕ್ಷಿಪ್ತವಾಗಿ ತಿಳಿಸಿ.
೧೦೩. ಗುರಿಕೇಂದ್ರಿತ ಸಾರ್ವಜನಿಕ ವಿತರಣಾ ವ್ಯವಸ್ಥೆಯ ಮುಖ್ಯಾಂಶಗಳಾವುವು?
೧೦೪. ಭಾರತದ ಪ್ರಾಥಮಿಕ ವಲಯದ ಕ್ರಾಂತಿಗಳನ್ನು ಪರಿಚಯಿಸಿ.
೧೦೫. ಕೊಯ್ಲು ಪೂರ್ವ ತಂತ್ರಜ್ಞಾನದ ವಿವರ ನೀಡಿ.
೧೦೬. ಕೊಯ್ಲಿನ ಬಳಿಕದ ತಂತ್ರಜ್ಞಾನವನ್ನು ವಿವರಿಸಿ.
೧೦೭. ಕೊಯ್ಲು ಪೂರ್ವ, ಕೊಯ್ಲಿನ ಬಳಿಕದ ತಂತ್ರಜ್ಞಾನವನ್ನು ಸಂಕ್ಷಿಪ್ತವಾಗಿ ವಿವರಿಸಿ.

**೪. ಈ ಕೆಳಗಿನ ಪ್ರಶ್ನೆಗಳಿಗೆ ೪೦ ವಾಕ್ಯಗಳ ಉತ್ತರ ಬರೆಯಿರಿ. (೧೦ ಅಂಕಗಳು)**

೧೦೮. ಭಾರತದಲ್ಲಿ ಭೂಬಳಕೆಯ ಕ್ರಮವನ್ನು ವಿವರಿಸಿ.
೧೦೯. ಮಣ್ಣಿನ ಸವಕಳಿಯ ಕಾರಣಗಳನ್ನು ಮತ್ತು ಪರಿಣಾಮಗಳನ್ನು ವಿವರಿಸಿ. ಭೂಸಾರ ಸಂರಕ್ಷಣೆಯ ಕ್ರಮಗಳನ್ನು ಸಾದರಪಡಿಸಿ.
೧೧೦. ನೀರಾವರಿಯ ವಿಧಗಳನ್ನು, ಒಣಭೂಮಿ ಬೇಸಾಯದ ಸಮಸ್ಯೆಗಳನ್ನು ಪರಾಮರ್ಶಿಸಿ.
೧೧೧. ನೀರಿನ ಸಂರಕ್ಷಣೆ ಮತ್ತು ಮತ್ತು ನಿರ್ವಹಣೆಯ ಅಗತ್ಯವನ್ನು ವಿವರಿಸಿ. ನೀರು ಸಂರಕ್ಷಣಾ ಮತ್ತು ನಿರ್ವಹಣಾ ವಿಧಾನಗಳನ್ನು ಸಾದರಪಡಿಸಿ.
೧೧೨. ಭಾರತದಲ್ಲಿ ಆಹಾರ ಸಮಸ್ಯೆಯ ಕಾರಣಗಳನ್ನು ವಿವರಿಸಿ. ಆಹಾರ ಲಭ್ಯತೆಗೆ ಕೈಗೊಳ್ಳಲಾದ ಆಹಾರ ಭದ್ರತಾ ಕ್ರಮಗಳನ್ನು ವಿಶ್ಲೇಷಿಸಿ.
೧೧೩. ಗುರಿಕೇಂದ್ರಿತ ಸಾರ್ವಜನಿಕ ವಿತರಣಾ ವ್ಯವಸ್ಥೆಯ ಲಕ್ಷಣಗಳನ್ನು ವಿವರಿಸಿ. ವಿತರಣಾ ವ್ಯವಸ್ಥೆಯ ಸಮಸ್ಯೆಗಳನ್ನು ಚರ್ಚಿಸಿ.
೧೧೪. ಭಾರತದಲ್ಲಿ ಅನುಷ್ಠಾನದಲ್ಲಿರುವ ಕೊಯ್ಲು ಪೂರ್ವದ ಮತ್ತು ಕೊಯ್ಲಿನ ಬಳಿಕದ ತಂತ್ರಜ್ಞಾನವನ್ನು ಪರಾಮರ್ಶಿಸಿ.

**೫. ಚಟುವಟಿಕೆಗಳು**

೧. ಭಾರತದ ವಿವಿಧೋದ್ದೇಶ ನೀರಾವರಿ ಯೋಜನೆಗಳ ಹೆಸರು, ಸ್ಥಳ ಮತ್ತು ಪ್ರಯೋಜನ ಪಡೆಯುವ ರಾಜ್ಯಗಳ ಪಟ್ಟಿ ಮಾಡಿ.
೨. ಬೃಹತ್ ನೀರಾವರಿ ಯೋಜನೆಗಳ ಸಾಧಕಬಾಧಕಗಳ ಬಗ್ಗೆ ಪ್ರಬಂಧ ರಚಿಸಿ.
೩. ಸಮೀಪದ ನೀರಾವರಿ ಯೋಜನೆಯೊಂದಕ್ಕೆ ಭೇಟಿ ನೀಡಿ ಅದರ ಸಂಪೂರ್ಣ ಮಾಹಿತಿ ಪಡೆದು ಲೇಖನವೊಂದನ್ನು ಸಿದ್ಧಪಡಿಸಿ ತರಗತಿಯಲ್ಲಿ ಮಂಡಿಸಿ.

೪. ನ್ಯಾಯಬೆಲೆ ಅಂಗಡಿಯೊಂದಕ್ಕೆ ಭೇಟಿ ನೀಡಿ ಸಾರ್ವಜನಿಕ ವಿತರಣಾ ವ್ಯವಸ್ಥೆ ಹೇಗೆ ಕಾರ್ಯನಿರ್ವಹಿಸುತ್ತದೆಂಬ ಮಾಹಿತಿ ಪಡೆದು ಲೇಖನ ಸಿದ್ಧಪಡಿಸಿ ವಿಚಾರ ಸಂಕಿರಣವೊಂದರಲ್ಲಿ ಮಂಡಿಸಿ.

೫. ಕೃಷಿ ಸಂಶೋಧನಾ ಕೇಂದ್ರವೊಂದಕ್ಕೆ ಭೇಟಿ ನೀಡಿ ಕೃಷಿ ತಳಿಗಳ ರಂಗದಲ್ಲಾಗುತ್ತಿರುವ ಬದಲಾವಣೆಗಳ ಬಗ್ಗೆ ಮಾಹಿತಿ ಪಡೆಯಿರಿ.

೬. ಉಗ್ರಾಣ ಮತ್ತು ನಿಯಂತ್ರಿತ ಮಾರುಕಟ್ಟೆಗಳನ್ನು ಸಂದರ್ಶಿಸಿ ಅವುಗಳ ಕಾರ್ಯ ವೈಖರಿ ಮತ್ತು ಸಮಸ್ಯೆಗಳ ಬಗ್ಗೆ ಪ್ರಬಂಧ ಬರೆಯಿರಿ.

**ಪದಕೋಶ**

Agricultural Land = ಕೃಷಿ ಭೂಮಿ ವ್ಯವಸಾಯಕ್ಕೆ ಬಳಕೆಯಾಗುತ್ತಿರುವ ಪ್ರದೇಶ

Agricultural Revolution= ಕೃಷಿ ಕ್ರಾಂತಿ ವಿಜ್ಞಾನ ಮತ್ತು ತಂತ್ರಜ್ಞಾನದ ಬಳಕೆಯಿಂದ ಕೃಷಿ ಉತ್ಪಾದನೆಯ ಹೆಚ್ಚಳ

AG MARK = ಅಗ್‌ಮಾರ್ಕ್/ರಾಷ್ಟ್ರೀಯ ಗುಣಮಟ್ಟ ಸಂಶೋಧನಾಲಯ ಕೃಷಿ ಉತ್ಪನ್ನಗಳ ಪ್ರಮಾಣ ನಿಷ್ಕರ್ಷಿಸಿ ನೀಡುವ ಸಂಕೇತ.

Black Market = ಕಾಳಸಂತೆ ಕೃತಕ ಅಭಾವ ನಿರ್ಮಿಸಿ ಗುಟ್ಟಾಗಿ ಹೆಚ್ಚು ಬೆಲೆಗೆ ಸರಕುಗಳು ವಿನಿಮಯವಾಗುವ ಸ್ಥಳ.

Black Money = ಕಪ್ಪು ಹಣ/ಆದಾಯ ತೆರಿಗೆಯನ್ನು ನೀಡದೆ ಸಂಗ್ರಹಿಸುವ ಹಣ.

Blle Revolution = ನೀಲಕ್ರಾಂತಿ/ಮೀನುಗಾರಿಕಾ ಕ್ಷೇತ್ರದಲ್ಲಿನ ಅಪೂರ್ವ ಸಾಧನೆ

Beffer Stock = ಕಾಪುದಾಸ್ತಾನು/ಬೆಂಬಲ ಬೆಲೆ ನೀಡಿ ಸಂಚಯಿಸಿಡುವ ಸಾಮಗ್ರಿಗಳು

Drip Irrigation = ಹನಿ ನೀರಾವರಿ/ಗಿಡದ ಬುಡಕ್ಕೆ ಹನಿಹನಿಯಾಗಿ ನೀರು ತೊಟ್ಟಿಕ್ಕುವಂತೆ ಮಾಡುವ ವ್ಯವಸ್ಥೆ

Dryland Farming = ಒಣಭೂಮಿ ಬೇಸಾಯ/ನೀರಾವರಿಯ ಸೌಲಭ್ಯವಿಲ್ಲದೆ ನಡೆಸುವ ಕೃಷಿ

Fallow Land = ಬೀಳು ಅಥವಾ ಹಡಿಲು ಭೂಮಿ/ಒಂದರಿಂದ ಐದು ವರ್ಷಗಳ ಅವಧಿಯವರೆಗೆ ಕೃಷಿ ಮಾಡದಿರುವ ಭೂಮಿ

Food Grains Bank = ಆಹಾರ ಧಾನ್ಯಗಳ ಬ್ಯಾಂಕು/ಸ್ಥಳೀಯವಾಗಿ ಆಹಾರ

ಧಾನ್ಯಗಳನ್ನು ಸಂಗ್ರಹಿಸಿ ವಿತರಿಸುವ ವ್ಯವಸ್ಥೆ

Food Security = ಆಹಾರ ಭದ್ರತೆ/ಆಹಾರದ ಲಭ್ಯತೆ ಮತ್ತು ಕೊಳ್ಳುವ ಸಾಮರ್ಥ್ಯದ ಅಸ್ತಿತ್ವ.

Golden Revolution = ಸುವರ್ಣಕ್ರಾಂತಿ/ಹೂವು, ಹಣ್ಣು ಮತ್ತು ತೋಟಗಾರಿಕಾ ಕ್ಷೇತ್ರದ ಅಪೂರ್ವ ಸಾಧನೆ.

Green Revollution = ಹಸಿರುಕ್ರಾಂತಿ/ಆಹಾರೋತ್ಪಾದನಾ ಕ್ಷೇತ್ರದ ಅಪೂರ್ವ ಸಾಧನೆ

HYE = ಅಧಿಕ ಇಳುವರಿಯ ತಳಿಗಳು/ಹಸಿರುಕ್ರಾಂತಿಯನ್ನು ಸಾಕ್ಷಾತ್ಕರಿಸಿದ ವೈವಿಧ್ಯಮಯ ಬಿತ್ತನೆ ಬೀಜಗಳು.

Irrigation = ನೀರಾವರಿ/ವಿವಿಧ ಜಲಮೂಲಗಳಿಂದ ಕೃಷಿಗೆ ನೀರು ಒದಗಿಸುವ ವ್ಯವಸ್ಥೆ.

Major Irrigation = ಬೃಹತ್ ನೀರಾವರಿ/ಹತ್ತು ಸಾವಿರ ಹೆಕ್ಟೇರುಗಳಿಗಿಂತ ಹೆಚ್ಚಿನ ಭೂಮಿಗೆ ನೀರು ಒದಗಿಸುವ ವ್ಯವಸ್ಥೆ.

Medilim Irrigation = ಮಧ್ಯಮ ನೀರಾವರಿ/ಎರಡು ಸಾವಿರ ಹೆಕ್ಟೇರುಗಳಿಂದ ಹತ್ತು ಸಾವಿರ ಹೆಕ್ಟೇರುಗಳವರೆಗಿನ ಭೂಮಿಗೆ ನೀರು ಒದಗಿಸುವ ವ್ಯವಸ್ಥೆ.

Minor Irrigation = ಸಣ್ಣ ನೀರಾವರಿ/ಎರಡು ಸಾವಿರ ಹೆಕ್ಟೇರುಗಳಿಗಿಂತ ಕಡಿಮೆ ಭೂಪ್ರದೇಶಕ್ಕೆ ನೀರು ಒದಗಿಸುವ ವ್ಯವಸ್ಥೆ

Net Cropped Area = ನಿವ್ವಳ ಬೆಲೆ ಪ್ರದೇಶ ವರದಿ ವರ್ಷದಲ್ಲಿ ಭೂವ್ಯವಸಾಯಕ್ಕೆ ಲಭ್ಯವಾಗುವ ಭೂಮಿ.

Net Sown Area = ನಿವ್ವಳ ಬಿತ್ತನೆ ಪ್ರದೇಶ/ಚಾಲ್ತಿ ವರ್ಷದಲ್ಲಿ ಬಿತ್ತನೆಯಾದ ಭೂಮಿ.

PDS = ಸಾರ್ವಜನಿಕ ವಿತರಣಾ/ವ್ಯವಸ್ಥೆ ಬೆಂಬಲ ಬೆಲೆಗೆ ಸರಕಾರ ತೆಗೆದುಕೊಂಡ ಅವಶ್ಯಕ ಸಾಮಗ್ರಿಗಳನ್ನು ಬಡತನದ ರೇಖೆಯ ಕೆಳಗಿರುವವರಿಗೆ ವಿತರಿಸುವುದು.

PURA = ಪ್ಯೂರಾ ಕಾರ್ಯಕ್ರಮ/ಗ್ರಾಮೀಣ ಪ್ರದೇಶಗಳಲ್ಲಿ ನಗರಗಳ ಸವಲತ್ತುಗಳನ್ನು ಒದಗಿಸುವ ಯೋಜನೆ.

Rainbow Revolution = ಕಾಮನಬಿಲ್ಲಿನ ಕ್ರಾಂತಿ/ಹಸಿರು, ನೀಲ ಮತ್ತು ಶ್ವೇತ ಕ್ರಾಂತಿಗಳ ಸಂಯುಕ್ತ ಹೆಸರು.

Rain water Harvesting= ಮಳೆ ನೀರಿನ ಕೊಯ್ಲು/ಮಳೆಯ ನೀರನ್ನು ಹಿಡಿದಿಟ್ಟು ಅಂತರ್ಜಲ ಮಟ್ಟ ಹೆಚ್ಚಿಸುವ ಕ್ರಮ.

| | | |
|---|---|---|
| Soil Conservation | = | ಭೂಸಾರ ಸಂರಕ್ಷಣೆ/ಭೂ ಸವಕಳಿಯನ್ನು ತಪ್ಪಿಸಿ ಮಣ್ಣಿನ ಫಲವತ್ತತೆಯನ್ನು ಕಾಪಾಡುವುದು. |
| Soil Erosion | = | ಭೂಸವಕಳಿ/ಭೂಮಿಯ ಮೇಲ್ಪದರದ ಮಣ್ಣು ಕೊರೆದು ಹೋಗಿ ಸಾರ ನಾಶವಾಗುವುದು. |
| Support Price | = | ಬೆಂಬಲ ಬೆಲೆ/ಸರಕಾರ ನಿಗದಿಪಡಿಸುವ ಬೆಲೆ. |
| Vented Dams | = | ಕಿಂಡಿ ಅಣೆಕಟ್ಟುಗಳು/ದಡದ ಮಟ್ಟ ಮೀರದಂತೆ ರಚಿಸುವ ಭೂಮಿಯ ಮುಳುಗಡೆಗೆ ಆಸ್ಪದವಿಲ್ಲದ ಶಾಶ್ವತ ಒಡ್ಡುಗಳು. |
| Water Conservation | = | ನೀರು ಸಂರಕ್ಷಣೆ/ನೀರಿನ ಮೂಲಗಳು ಬತ್ತಿ ಹೋಗದಂತೆ ಕಾಪಾಡುವುದು |
| Watershed Area | = | ಜಲಾನಯನ ಪ್ರದೇಶ/ನೀರು ಇಂಗುವ ನಿರ್ದಿಷ್ಟ ಪ್ರದೇಶ |
| Watershed Development | = | ಜಲಾನಯನ ಅಭಿವೃದ್ಧಿ/ಭೂ ಮತ್ತು ಜಲ ಸಂರಕ್ಷಣಾ ಕಾರ್ಯಕ್ರಮಗಳನ್ನು ಕೈಗೊಳ್ಳುವುದು. |
| White Revolution | = | ಶ್ವೇತಕ್ರಾಂತಿ ಹೈನುಗಾರಿಕಾ/ಕ್ಷೇತ್ರದ ಅಪೂರ್ವ ಸಾಧನೆ. |
| Yellow Revolution | = | ಪೀತಕ್ರಾಂತಿ/ಎಣ್ಣೆಕಾಳುಗಳ ಕ್ಷೇತ್ರದ ಅಪೂರ್ವ ಸಾಧನೆ. |

# ಅಧ್ಯಾಯ ೪

# ಕೈಗಾರಿಕಾ ಅಭಿವೃದ್ಧಿ

**೪.೧. ಕೈಗಾರಿಕೆಗಳ ವರ್ಗೀಕರಣ**

೪.೧.೧. ಸಣ್ಣ, ಮಧ್ಯಮ ಮತ್ತು ದೊಡ್ಡ ಪ್ರಮಾಣದ ಕೈಗಾರಿಕೆಗಳ ಅರ್ಥ

೪.೧.೨. ತಯಾರಿಕಾ ಕೈಗಾರಿಕೆಗಳು ಮತ್ತು ಸೇವಾ ಕೈಗಾರಿಕೆಗಳ ನಡುವಿನ ವ್ಯತ್ಯಾಸ

೪.೧.೩. ಭಾರತದ ಕೆಲವು ಪ್ರಮುಖ ದೊಡ್ಡ ಕೈಗಾರಿಕೆಗಳು

**೪.೨. ಕೈಗಾರಿಕೆಗಳ ಅಭಿವೃದ್ಧಿಯ ತಂತ್ರ**

**೪.೩. ಸಣ್ಣ ಪ್ರಮಾಣದ ಕೈಗಾರಿಕೆಗಳ ಉತ್ತೇಜನ**

೪.೩.೧. ಸಣ್ಣ ಪ್ರಮಾಣದ ಕೈಗಾರಿಕೆಗಳ ಉತ್ತೇಜನ ನೀತಿಯ ಉದ್ದೇಶಗಳು.

ಅರ್ಥ ವ್ಯವಸ್ಥೆಯಲ್ಲಿ ಕೈಗಾರಿಕಾಭಿವೃದ್ಧಿಗೆ ಅಗ್ರಸ್ಥಾನವಿದೆ. ಒಂದು ರಾಷ್ಟ್ರದ ಆರ್ಥಿಕ ಪ್ರಗತಿಯ ಮಟ್ಟವು ಆ ರಾಷ್ಟ್ರದ ಕೈಗಾರಿಕಾಭಿವೃದ್ಧಿಯನ್ನು ಆಧರಿಸಿರುತ್ತದೆ. ಆರ್ಥಿಕವಾಗಿ ಮುಂದುವರೆದ ರಾಷ್ಟ್ರಗಳೆಲ್ಲವೂ ಕೈಗಾರಿಕಾ ಅಭಿವೃದ್ಧಿಯನ್ನು ಸಾಧಿಸಿದ ರಾಷ್ಟ್ರಗಳಾಗಿವೆ. ಅಂತಹ ರಾಷ್ಟ್ರಗಳು ಜಾಗತಿಕ ಮಾರುಕಟ್ಟೆಗಳಾಗಿವೆ. ಅಂತಹ ರಾಷ್ಟ್ರಗಳು ಜಾಗತಿಕ ಮಾರುಕಟ್ಟೆಯಲ್ಲಿ ಯಶಸ್ವಿಯಾಗಿ ಪೈಪೋಟಿ ನಡೆಸಲು ಸಮರ್ಥವಾಗಿರುತ್ತವೆ. ಕೈಗಾರಿಕಾ ಅಭಿವೃದ್ಧಿಯಿಂದ ಯಾವುದೇ ರಾಷ್ಟ್ರದ ಆರ್ಥಿಕತೆಯಲ್ಲಿ ವೈವಿಧ್ಯತೆಯನ್ನು ಸಾಧಿಸಬಹುದಾಗಿದೆ. ಕೈಗಾರಿಕಾ ಅಭಿವೃದ್ಧಿ ಸಾದಿಸಿದರುವ ರಾಷ್ಟ್ರಗಳನ್ನು ಅಭಿವೃದ್ಧಿ ರಾಷ್ಟ್ರಗಳೆಂದು ಪರಿಗಣಿಸುವುದು ರೂಢಿಯಾಗಿದೆ. ಕೈಗಾರಿಕೆಗಳು ಮತ್ತು ಅವುಗಳ ಅಭಿವೃದ್ಧಿಗೆ ಸಂಬಂಧಿಸಿದ ಗಣಿ, ಸಾರಿಗೆ ಸಂಪರ್ಕ, ಶಕ್ತಿ ಸ್ಥಾವರಗಳನ್ನು ಅಭಿವೃದ್ಧಿ ಪಡಿಸುವುದೇ 'ಕೈಗಾರಿಕಾ ಅಭಿವೃದ್ಧಿ' ಅಥವಾ 'ಕೈಗಾರಿಕರಣ' ಭಾರತದಂತಹ ರಾಷ್ಟ್ರಗಳಲ್ಲಿ ಕೈಗಾರಿಕಾಭಿವೃದ್ಧಿಯ ಅವಶ್ಯಕತೆಯನ್ನು ಎಷ್ಟು ವರ್ಣಿಸಿದರೂ ಸಾಲದು.

## ೪.೧. ಕೈಗಾರಿಕೆಗಳ ವರ್ಗೀಕರಣ

### ೪.೧.೧. ಸಣ್ಣ ಪ್ರಮಾಣದ ಮಧ್ಯಮ ಮತ್ತು ದೊಡ್ಡ ಪ್ರಮಾಣದ ಕೈಗಾರಿಕೆಗಳ ಅರ್ಥ

ಕೈಗಾರಿಕೆಗಳಲ್ಲಿ ತೊಡಗಿಸಿರುವ ಬಂಡವಾಳದ ಗಾತ್ರದ ಆಧಾರದ ಮೇಲೆ ಕೈಗಾರಿಕೆಗಳನ್ನು ಸಾಮಾನ್ಯವಾಗಿ ಸಣ್ಣ ಪ್ರಮಾಣದ ಮಧ್ಯಮ ಪ್ರಮಾಣದ ಮತ್ತು ದೊಡ್ಡ ಪ್ರಮಾಣದ ಕೈಗಾರಿಕೆಗಳೆಂದು ವಿಂಗಡಿಸಲಾಗಿದೆ. ಈ ವಿಂಗಡಣೆ ಸರ್ಕಾರದ ವ್ಯಾಖ್ಯೆಗೆ ಬದ್ಧವಾಗಿದೆ.

## ೧. ಸಣ್ಣ ಪ್ರಮಾಣದ ಕೈಗಾರಿಕೆಗಳು

ಬಂಡವಾಳ ಹೂಡುವಿಕೆ, ತಾಂತ್ರಿಕ ಸಂಘಟನೆ ಮತ್ತು ಉತ್ಪಾದನಾ ವಿಧಾನದಲ್ಲಿ ವೈವಿಧ್ಯತೆ ಇವುಗಳನ್ನಾಧರಿಸಿ ಸಣ್ಣ ಪ್ರಮಾಣದ ಕೈಗಾರಿಕೆಗಳನ್ನು ಗೃಹ ಮತ್ತು ಸಣ್ಣ ಕೈಗಾರಿಕೆಗಳೆಂದು ವಿಂಗಡಿಸಲಾಗುವುದು.

### ಅ. ಗೃಹ ಕೈಗಾರಿಕೆಗಳು

ಗೃಹ ಕೈಗಾರಿಕೆಗಳನ್ನು ಗುಡಿ ಕೈಗಾರಿಕೆಗಳು ಎಂದೂ ಕರೆಯುಲಾಗುತ್ತದೆ. ಸಾಂಪ್ರದಾಯಿಕ ವಸ್ತುಗಳನ್ನು ಸಾಂಪ್ರದಾಯಿಕ ವಿಧಾನಗಳ ಮೂಲಕ ಉಸ್ಪಾದಿಸಲಾಗುತ್ತಿದ್ದರೆ ಅದನ್ನು ಗೃಹ ಕೈಗಾರಿಕೆಗಳೆಂದು ಕರೆಲಾಗುವುದು. ಬಹು ಹಿಂದೆ ಅಂಥ ವಸ್ತುಗಳಿಗೆ ಭಾರತ ಬಹು ಪ್ರಸಿದ್ಧಿಯನ್ನು ಪಡೆದಿತ್ತು. ಮನೆಯಲ್ಲಿಯೇ ಮನೆಯ ಮಂದಿ ನಡೆಸಿಕೊಂಡು ಹೋಗಬಹುದಾದ ಕೈಗಾರಿಕೆ ಇದಾಗಿದೆ.

ಈ ಕೈಗಾರಿಕೆಯಲ್ಲಿ ಸಾಮಾನ್ಯವಾಗಿ ಹೊರಗಿನವರನ್ನು ಕೆಲಸಕ್ಕೆ ನೇಮಿಸಿಕೊಳ್ಳುವುದಿಲ್ಲ. ಹೆಚ್ಚಾಗಿ ಕುಟುಂಬದ ಸದಸ್ಯರೇ ನಡೆಸಿಕೊಂಡು ಹೋಗುತ್ತಾರೆ. ಈ ಕೈಗಾರಿಕೆಯನ್ನು ನಡೆಸಲು ನವೀನ ಮಾದರಿಯ ಯಂತ್ರಗಳ ಅವಶ್ಯಕತೆಯಿಲ್ಲ. ಹಳೆಯ ಮಾದರಿಯ ಕೈ ಹತ್ಯಾರಗಳೇ ಸಾಕು. ಸ್ಥಳೀಯ ಮಾರುಕಟ್ಟೆಗಳಿಂದ ತಮಗೆ ಬೇಕಾದ ಕಚ್ಚಾ ವಸ್ತುಗಳನ್ನು ದೊರಕಿಸಿಕೊಂಡು ಸಿದ್ಧ ವಸ್ತುಗಳನ್ನು ತಯಾರಿಸಿ ಸ್ಥಳೀಯ ಮಾರುಕಟ್ಟೆಯಲ್ಲಿಯೇ ಮಾರುತ್ತಾರೆ. ಇವು ಸುಸಂಘಟಿತ ಕೈಗಾರಿಕೆಗಳೂ ಅಲ್ಲ ಮತ್ತು ಇಂಥ ಕೈಗಾರಿಕೆಗಳಿಗೆ ಅಷ್ಟೊಂದು ಬಂಡವಾಳದ ಅವಶ್ಯಕತೆಯೂ ಇರುವುದಿಲ್ಲ.

ಗೃಹ ಕೈಗಾರಿಕಾ ಉದಾಹರಣೆಗಳೆಂದರೆ ಕೈಮಗ್ಗದಿಂದ ನೇಯುವುದು ಬುಟ್ಟಿ ಮಾಡುವುದು, ಹಗ್ಗ ಹೊಸೆಯುವುದು, ಕೋಳಿ ಸಾಕಣಿಕೆ, ಜೇನು ಸಾಕಣಿಕೆ, ಮಡಿಕೆ ಮಾಡುವುದು, ದಂತಹ ಕೆತ್ತನೆ ಕೆಲಸ, ಆಟದ ಸಾಮಾನುಗಳನ್ನು ಗೊಂಬೆಗಳನ್ನು ಮಾಡುವುದು, ಚಿನ್ನ-ಬೆಳ್ಳಿಯ ಕೆಲಸಗಳು ಇತ್ಯಾದಿ.

ಗೃಹ ಕೈಗಾರಿಕೆಗಳು ಸಾಮಾನ್ಯವಾಗಿ ವಂಶ ಪಾರಂಪರ್ಯವಾಗಿ ಒಂದಿದ್ದು ಅವು ಲಕ್ಷಾಂತರ ಕುಟುಂಬಗಳಿಗೆ ಉದ್ಯೋಗವಕಾಶಗಳನ್ನು ಒದಗಿಸಿವೆ. ಈ ಕೈಗಾರಿಕೆಗಳು ಸಾಮಾನ್ಯವಾಗಿ ಗ್ರಾಮಾಂತರ ಪ್ರದೇಶಗಳಲ್ಲಿ ಕಂಡುಬರುವುದರಿಂದ ಇವುಗಳನ್ನು ಗ್ರಾಮೀಣ ಕೈಗಾರಿಕೆ ಎಂದು ಕರೆಯಲಾಗುತ್ತದೆ. ಆದರೆ ಈ ಕೈಗಾರಿಕೆಗಳನ್ನು ಇಂದು ನಾವು ನಗರಗಳಲ್ಲಿಯೂ ಕಾಣುತ್ತಿದ್ದೇವೆ.

### ಆ. ಸಣ್ಣ ಕೈಗಾರಿಕೆಗಳು

ಸಣ್ಣ ಕೈಗಾರಿಕೆಗಳೆಂದರೆ ಸಣ್ಣ ಪ್ರಮಾಣದಲ್ಲಿ ಉತ್ಪಾದಿಸುವ ಕೈಗಾರಿಕೆಗಳು. ಇದನ್ನು ಉತ್ಪಾದಕನು ಮನೆಯಲ್ಲಿ ನಡೆಸುವುದಿಲ್ಲ. ಈ ಕೈಗಾರಿಕೆಗಳಲ್ಲಿ ಸಣ್ಣ ಪ್ರಮಾಣದಲ್ಲಿ ಯಂತ್ರೋಪಕರಣಗಳನ್ನು ಮತ್ತು ವಿದ್ಯುಚ್ಛಕ್ತಿಯನ್ನು ಬಳಸಲಾಗುತ್ತದೆ. ಇಲ್ಲಿ ಕೂಲಿ

ಕೊಟ್ಟು ಅಧಿಕ ಪ್ರಮಾಣದಲ್ಲಿ ಕಾರ್ಮಿಕರನ್ನು ನೇಮಿಸಿಕೊಳ್ಳಲಾಗುತ್ತದೆ. ಸ್ಥಳೀಯ ಹಾಗೂ ದೂರದ ಮಾರುಕಟ್ಟೆಗಳಿಂದ ಕಚ್ಚಾ ವಸ್ತುಗಳನ್ನು ದೊರಕಿಸಿಕೊಂಡು ಸಿದ್ಧವಸ್ತುಗಳನ್ನು ದೂರದ ಮತ್ತು ಅಂತರ ರಾಷ್ಟ್ರೀಯ ಮಾರುಕಟ್ಟೆಯಲ್ಲಿ ಮಾರಾಟ ಮಾಡಲಾಗುತ್ತದೆ.

ಸಣ್ಣ ಕೈಗಾರಿಕೆಗಳನ್ನು ಮೊದಲು ಅವು ಬಳಸುವ ವಿದ್ಯುಚ್ಛಕ್ತಿ ಮತ್ತು ಕಾರ್ಮಿಕರ ಸಂಖ್ಯೆಯನ್ನು ಆದರಿಸಿ ವಿಂಗಡಿಸಲಾಗುತ್ತಿತ್ತು. ಆದರೆ ೧೯೭೭ ರಿಂದ ಸರ್ಕಾರವು ಗರಿಷ್ಠ ಸ್ಥಿರ ಬಂಡವಾಳದ ಆಧಾರದ ಮೇಲೆ ವಿಂಗಡಿಸಲಾಗುತ್ತಿದೆ. ಸ್ಥಿರ ಬಂಡವಾಳದ ಆಧಾರದ ಮೇಲೆ ವಿಂಗಡಿಸಲಾಗುತ್ತಿದೆ. ಸ್ಥಿರ ಬಂಡವಾಳ ಹೂಡಿಕೆಯ ಆಧಾರದ ಮೇಲೆ ಸಣ್ಣ ಪ್ರಮಾಣದ ಕೈಗಾರಿಕೆಗಳನ್ನು ಕೆಳಗಿನಂತೆ ವಿಂಗಡಿಸಲಾಗುತ್ತದೆ.

ಅ. ಅತಿ ಸಣ್ಣ ಘಟಕಗಳು

ಬ. ಸಣ್ಣ ಘಟಕಗಳು ಮತ್ತು

ಕ. ಪೂರಕ ಘಟಕಗಳು.

೧೯೯೧ರ ಕೈಗಾರಿಕಾ ನೀತಿಯ ಪ್ರಕಾರ ೫ ಲಕ್ಷ ರೂ.ಗಳ ವರೆಗೆ ಸ್ಥಿರ ಬಂಡವಾಳ ಹೂಡುವಿಕೆಯಿರುವ ಘಟಕಗಳನ್ನು ಅತಿ ಸಣ್ಣ ಘಟನೆಗಳು, ೬೦ ಲಕ್ಷ ರೂ.ಗಳವರೆಗೆ ಸ್ಥಿತಿ ಬಂಡವಾಳ ಹೂಡುವಿಕೆಯಿರುವ ಘಟಕಗಳನ್ನು ಸಣ್ಣ ಘಟಕಗಳು ಮತ್ತು ೭೫ ಲಕ್ಷ ರೂ.ಗಳವರೆಗೆ ಸ್ಥಿರ ಬಂಡವಾಳ ಹೂಡುವಿಕೆಯಿರುವ ಘಟಕಗಳನ್ನು ಪೂರಕ ಘಟಕಗಳು ಎಂದು ವಿಂಗಡಿಸಲಾಯಿತು. ಇಂದು ಸರಕಾರ ಇದರ ಮಿತಿಯನ್ನು ೧ ಕೋಟಿ ರೂ.ಗಳಿಗೆ ಸೀಮಿತಗೊಳಿಸಿದೆ. ಅಂದರೆ ಯಾವ ಕೈಗಾರಿಕೆಯಲ್ಲಿ ೧ ಕೋಟಿ ರೂ.ಗಳಂತಹ ಸ್ಥಿರ ಬಂಡವಾಳವನ್ನು ಹೂಡಲಾಗಿದೆಯೋ ಅಂಥ ಎಲ್ಲ ಕೈಗಾರಿಕೆಗಳನ್ನು ಸಣ್ಣ ಕೈಗಾರಿಕೆಗಳು ಎಂದು ಕರೆಯಲಾಗುವುದು. ಸಾಮಾನ್ಯವಾಗಿ ಬಿಡಿಬಾಗಗಳು ರೇಡಿಯೋ, ಹೊಲಿಯುವ ಯಂತ್ರಗಳು, ಮಧ್ಯವರ್ತಿ ವಸ್ತುಗಳು, ಫ್ಯಾನು, ಬ್ಲೇಡು, ವಿದ್ಯುತ್ತಿನ ಉಪಕರಣ, ಉಡುಪು, ಆಹಾರ ಪದಾರ್ಥ, ಪ್ಲಾಸ್ಟಿಕ್ ಸಾಮಾನು, ಬೆಂಕಿ ಪೆಟ್ಟಿಗೆ ಸೋಪು, ಇಂಜಿನಿಯರಿಂಗ್ ವಸ್ತುಗಳು ಮುಂತಾದ ಸಾವಿರಾರು ನಮೂನೆಯ ವಸ್ತುಗಳನ್ನು ಉತ್ಪಾದಿಸುತ್ತವೆ.

### ೨. ಮಧ್ಯಮ ಪ್ರಮಾಣದ ಕೈಗಾರಿಕೆಗಳು

೧ ಕೋಟಿ ರೂ.ಗಳಿಗಿಂತ ಹೆಚ್ಚು ಮತ್ತು ೧೦ ಕೋಟಿ ರೂ.ಗಳಿಗಿಂತ ಕಡಿಮೆ ಸ್ಥಿರ ಬಂಡವಾಳವನ್ನು ಹೂಡುವ ಎಲ್ಲ ವಿಧದ ಕೈಗಾರಿಕೆಗಳನ್ನು ಮಧ್ಯಮ ಪ್ರಮಾಣದ ಕೈಗಾರಿಕೆಗಳೆಂದು ಕರೆಯಲಾಗುತ್ತದೆ. ಇಂಥ ಕೈಗಾರಿಕೆಗಳಲ್ಲಿ ಉತ್ಪಾದನೆ ಮಧ್ಯಮ ಪ್ರಮಾಣದಲ್ಲಿರುತ್ತದೆ ಮತ್ತು ಯಂತ್ರಗಳನ್ನು ಹಾಗೂ ವಿದ್ಯುಚ್ಛಕ್ತಿಯನ್ನು ಬಳಸಿಕೊಂಡು ಮಧ್ಯಮ ಪ್ರಮಾಣದಲ್ಲಿ ಕಾರ್ಮಿಕರನ್ನು ನೇಮಿಸಿಕೊಳ್ಳಲಾಗುತ್ತದೆ. ಸಾಮಾನ್ಯವಾಗಿ ದೊಡ್ಡ ಪ್ರಮಾಣದ ಕೈಗಾರಿಕೆಗಳೆಂದು ಗುರುತಿಸಲ್ಪಡುವ ಕೈಗಾರಿಕೆಗಳೇ ಮಧ್ಯಮ ಪ್ರಮಾಣದ ಕೈಗಾರಿಕೆಗಳೂ ಆಗಿವೆ. ೧೯೯೭-೯೮ ರಲ್ಲಿ ಭಾರತದಲ್ಲಿ ಸುಮಾರು ೧೪೫೧೩ ಮಧ್ಯಮ ಪ್ರಮಾಣದ ಕೈಗಾರಿಕೆಗಳಿದ್ದವು.

**೩. ದೊಡ್ಡ ಪ್ರಮಾಣದ ಕೈಗಾರಿಕೆಗಳು:**

ದೊಡ್ಡ ಪ್ರಮಾಣದ ಉತ್ಪಾದನೆ ಆಧುನಿಕ ಅರ್ಥ ವ್ಯವಸ್ಥೆಯ ಒಂದು ಪ್ರಮುಖ ಲಕ್ಷಣ. ದೊಡ್ಡ ಪ್ರಮಾಣದಲ್ಲಿ ಬಂಡವಾಳ ಹೂಡಿರುವ ಮತ್ತು ದೊಡ್ಡ ಪ್ರಮಾಣದಲ್ಲಿ ಉತ್ಪಾದಿಸಲ್ಪಡುವ ಕೈಗಾರಿಕೆಗಳನ್ನು ಸಾಮಾನ್ಯವಾಗಿ ದೊಡ್ಡ ಪ್ರಮಾಣದ ಕೈಗಾರಿಕೆಗಳೆಂದು ಕರೆಯುತ್ತಾರೆ. ಅಂದರೆ, ಬಂಡವಾಳ ಹೂಡುವಿಕೆ ಮತ್ತು ಉತ್ಪಾದನೆಯ ಸಾಮರ್ಥ್ಯದ ಮೇಲೆ ದೊಡ್ಡ ಪ್ರಮಾಣದ ಕೈಗಾರಿಕೆಗಳನ್ನು ನಿರ್ಧರಿಸಬಹುದು. ಆದರೆ ಇಂದು ಅವುಗಳಲ್ಲಿ ಹೂಡಿದ ಬಂಡವಾಳದ ಗಾತ್ರದ ಆಧಾರದ ಮೇಲೆ ಕೈಗಾರಿಕೆಗಳನ್ನು ನಿರ್ಧರಿಸಲಾಗುವುದು. ಯಾವ ಕೈಗಾರಿಕೆಯಲ್ಲಿ ೧೦ ಕೋಟಿ ರೂ.ಗಳಿಗಿಂತ ಹೆಚ್ಚು ಸ್ಥಿರ ಬಂಡವಾಳ ಹೂಡಲಾಗಿದೆಯೋ ಅದನ್ನು ದೊಡ್ಡ ಪ್ರಮಾಣದ ಕೈಗಾರಿಕೆಯೆಂದು ಕರೆಯಲಾಗುತ್ತದೆ.

ಯಾಂತ್ರೀಕರಣವಾದಂದಿನಿಂದಾಗಿ ವಸ್ತುಗಳನ್ನು ಸಾಧ್ಯವಾದಷ್ಟು ದೊಡ್ಡ ಪ್ರಮಾಣದಲ್ಲಿ ಉತ್ಪಾದಿಸಲಾಗುತ್ತಾದೆ. ದೊಡ್ಡ ಪ್ರಮಾಣದ ಕೈಗಾರಿಕೆಗಳಲ್ಲಿ ಕಾರ್ಮಿಕರನ್ನು ದೊಡ್ಡ ಪ್ರಮಾಣದಲ್ಲಿ ಕೆಲಸಕ್ಕೆ ಸೇರಿಸಿಕೊಳ್ಳಲಾಗುವುದು. ದೊಡ್ಡ ಪ್ರಮಾಣದಲ್ಲಿ ಬಂಡವಾಳವನ್ನು ಹೂಡುವುದು, ಬೆಲೆಬಾಳುವ ಯಂತ್ರಗಳ ಉಪಯೋಗ ಶ್ರಮ ವಿಭಜನೆಯ ಕಾರ್ಯಾಚರಣೆ ಇವು ಇಲ್ಲಿ ವಿಶೇಷವಾಗಿ ಕಾಣಿಸಿಕೊಳ್ಳುತ್ತವೆ. ಭಾರತದಲ್ಲಿ ಇಂಥ ಕೈಗಾರಿಕೆಗಳನ್ನು ಸರಕಾರಿ, ಖಾಸಗಿ ಸಹಕಾರಿ ಮತ್ತು ಸಂಯುಕ್ತ ವಲಯಗಳಲ್ಲಿ ಸ್ಥಾಪಿಸಾಗಿದೆ. ೧೯೯೭-೯೮ರಲ್ಲಿ ಭಾರತದಲ್ಲಿ ಸುಮಾರು ೯೦೧೧ ದೊಡ್ಡ ಪ್ರಮಾಣದ ಕೈಗಾರಿಕೆಗಳಿದ್ದವು.

**೪.೧.೨. ತಯಾರಿಕಾ ಕೈಗಾರಿಕೆಗಳು ಮತ್ತು ಸೇವಾ ಕೈಗಾರಿಕೆಗಳ ನಡುವಿನ ವ್ಯತ್ಯಾಸ**

ಕೃಷಿ ಮತ್ತು ಗಣಿ ಉದ್ಯಮಗಳು ಒದಗಿಸುವ ಕಚ್ಚಾ ವಸ್ತುಗಳನ್ನು ಮತ್ತು ಇತರೆ ನೈಸರ್ಗಿಕ ಸಂಪನ್ಮೂಲಗಳನ್ನು ಉಪಯೋಗಿಸಿಕೊಂಡು ಸಿದ್ಧ ವಸ್ತುಗಳನ್ನು ತಯಾರಿಸುವ ಕೈಗಾರಿಕೆಗಳೇ ತಯಾರಿಕಾ ಕೈಗಾರಿಕೆಗಳು. ವಿಂಗಡಣೆ, ಜೋಡಣೆ ಅಥವಾ ಸ್ವರೂಪ ಬದಲಾವಣೆ ಮುಂತಾದ ರಾಸಾಯನಿಕ ಹಾಗೂ ಭೌತಿಕ ವಿಧಾನಗಳಿಂದ ಕಚ್ಚಾ ವಸ್ತುಗಳನ್ನು ಅಧಿಕ ಮೌಲ್ಯದ ಹಾಗೂ ಉಪಯುಕ್ತತೆಯ ವಸ್ತುಗಳನ್ನಾಗಿ ಪರಿವರ್ತಿಸುವ ಚಟುವಟಿಕೆಗೆ ತಯಾರಿಕಾ ಕೈಗಾರಿಕೆ ಎನ್ನುತ್ತೇವೆ. ವಿಶಾಲ ಅರ್ಥದಲ್ಲಿ ಕೈಗಾರಿಕಾ ಚಟುವಟಿಕೆಗಳು ಎಂಬುದು ಎಲ್ಲ ಆರ್ಥಿಕ ಚಟುವಟಿಕೆಗಳಿಗೆ ಅನ್ವಯಿಸಿದರೂ ನಿರ್ದಿಷ್ಟ ಅರ್ಥದಲ್ಲಿ ಅದನ್ನು ತಯಾರಿಸಿದರೂ ನಿರ್ದಿಷ್ಟ ಅರ್ಥದಲ್ಲಿ ಅದನ್ನು ತಯಾರಿಕಾ ಚಟುವಟಿಕೆಗಳಿಗೆ ಮಾತ್ರ ಅನ್ವಯಿಸಲಾಗುತ್ತದೆ. ಆಧುನಿಕ ಯುಗದಲ್ಲಿ ಯಂತ್ರಶಕ್ತಿ, ಕಾರ್ಮಿಕರ ಮತ್ತು ಪರಿಣಿತರ ನೆರವಿನಿಂದ ದೊಡ್ಡ ಪ್ರಮಾಣದಲ್ಲಿ ವಿವಿಧ ಗ್ರಾಹಕ ವಸ್ತುಗಳನ್ನು ಮತ್ತು ಬಂಡವಾಳ ವಸ್ತುಗಳನ್ನು ತಯಾರಿಕಾ ಕೈಗಾರಿಕೆಗಳು ಉತ್ಪಾದಿಸುತ್ತವೆ. ತಯಾರಿಸಲಾಗುವ ಗ್ರಾಹಕ ವಸ್ತುಗಳು ಸಿದ್ಧ ವಸ್ತುಗಳಾಗಿರುವುದರಿಂದ ಮಾನವನ ಬಯಕೆಗಳನ್ನು ನೇರವಾಗಿ ಪೂರೈಸುತ್ತವೆ. ಬಂಡವಾಳ ವಸ್ತುಗಳು ಗ್ರಾಹಕ ವಸ್ತುಗಳ ತಯಾರಿಕೆಗೆ ನೆರವಾಗುವುದರ

ಮೂಲಕ ಬಯಕೆಗಳನ್ನು ಪರೋಕ್ಷವಾಗಿ ಪೂರೈಸುತ್ತವೆ. ಕಬ್ಬಿಣ ಮತ್ತು ಉಕ್ಕು, ಯಂತ್ರ ನಿರ್ಮಾಣ, ಮೋಟರು ವಾಹನ, ಸಿಮೆಂಟ್, ಕಾಗದ, ಔಷಧ, ರಾಸಾಯನಿಕ ಗೊಬ್ಬರ, ಬಟ್ಟೆ, ಸಕ್ಕರೆ, ಗೋಡಂಬಿ ಮೊದಲಾದವುಗಳನ್ನು ತಯಾರಿಸುವ ಕೈಗಾರಿಕೆಗಳು ತಯಾರಿಕಾ ಕೈಗಾರಿಕೆಗಳಾಗಿವೆ.

### ಸೇವಾ ಕೈಗಾರಿಕೆಗಳು

ಸೇವೆಗಳನ್ನು ಉತ್ಪಾದಿಸುವ ಅಥವಾ ಸಲ್ಲಿಸುವ ಕೈಗಾರಿಕೆಗಳೇ ಸೇವಾ ಕೈಗಾರಿಕೆಗಳು. ಇನ್ನೊಂದು ಅರ್ಥದಲ್ಲಿ, ಭೌತಿಕ ವಸ್ತುಗಳಾದ ಸಕ್ಕರೆ, ರಬ್ಬರ್. ಪೆನ್ನು, ಕಬ್ಬಿಣ ಮುಂತಾದ ವಸ್ತುಗಳನ್ನು ಉತ್ಪಾದಿಸುವುದರ ಬದಲು ಸೇವೆ ಸಲ್ಲಿಸುವ ಬ್ಯಾಂಕಿಂಗ್, ಶಿಕ್ಷಣ, ವಿಮಾ, ವೈದ್ಯಕೀಯ, ಕೈಗಾರಿಕೆಗಳೇ ಸೇವಾ ಕೈಗಾರಿಕೆಗಳು. ಇವು ವಸ್ತುಗಳನ್ನು ಉತ್ಪಾದಿಸುವುದಿಲ್ಲ, ಸೇವೆಯನ್ನು ಸಲ್ಲಿಸುತ್ತವೆ. ಸಾರಿಗೆ, ಸಂಪರ್ಕ, ಶಿಪ್ಪಿಂಗ್, ಪೋಸ್ಟ್, ಹೋಟೆಲ್, ಬ್ಯಾಂಕಿಂಗ್, ವಿಮಾಸಂಸ್ಥೆಗಳು, ಮನರಂಜನೆ ಒದಗಿಸುವ ಸಿನೆಮಾ ಮತ್ತು ನಾಟಕ ಗೃಹಗಳು ಚಲನಚಿತ್ರ ಉದ್ದಿಮೆ, ಕರೆ ಕೇಂದ್ರಗಳು, ವೈದ್ಯಕೀಯ ಸೇವೆ, ಅಭಿಯಂತ್ರಿತರು, ಶಿಕ್ಷಕರು, ಡಾಕ್ಟರರು, ದಾದಿಯರು, ವಕೀಲರು, ಗಾಯಕರು, ತೆರಿಗೆ ಸಲಹೆಗಾರರು ಮುಂತಾದವರು ಸಲ್ಲಿಸುವ ಸೇವೆಗಳು ಸೇವಾ ಕೈಗಾರಿಕೆಗಳು. ರಾಷ್ಟ್ರೀಯ ಆದಾಯಕ್ಕೆ ಇತ್ತೀಚಿನ ದಿನಗಳಲ್ಲಿ ಸೇವಾ ಕೈಗಾರಿಕೆಗಳು ಅಧಿಕ ಕೊಡುಗೆ ಸಲ್ಲಿಸುತ್ತಿರುವುದನ್ನು ಅಂಕಿ ಅಂಶಗಳು ಸ್ಪಷ್ಟಪಡಿಸಿವೆ.

### ತಯಾರಿಕಾ ಕೈಗಾರಿಕೆ ಮತ್ತು ಸೇವಾ ಕೈಗಾರಿಕೆಗಳ ನಡುವಿನ ವ್ಯತ್ಯಾಸ

| ತಯಾರಿಕಾ ಕೈಗಾರಿಕೆಗಳು | ಸೇವಾ ಕೈಗಾರಿಕೆಗಳು |
|---|---|
| ೧. ಸಿದ್ಧವಸ್ತುಗಳನ್ನು ಪೂರೈಸುತ್ತವೆ | ೧. ಸೇವೆಗಳನ್ನು ಸಲ್ಲಿಸುತ್ತವೆ |
| ೨. ಉತ್ಪಾದಿಸುವ ವಸ್ತುಗಳು ಭೌತಿಕವಾಗಿರುತ್ತವೆ | ೨. ಸಲ್ಲಿಸುವ ಸೇವೆಗಳು ಅಭೌತಿಕವಾಗಿರುತ್ತವೆ ಮತ್ತು ಕಣ್ಣಿಗೆ ಕಾಣಿಸುವುದಿಲ್ಲ. |
| ೩. ದ್ವಿತೀಯ ವಲಯಕ್ಕೆ ಸಂಬಂಧ ಪಟ್ಟಿವೆ | ೩. ತೃತೀಯ ವಲಯಕ್ಕೆ ಸಂಬಂಧಿಸಿವೆ. |
| ೪. ವಸ್ತುಗಳು ಮಾರುವವನಿಂದ ಕೊಳ್ಳುವವನಿಗೆ ವರ್ಗಾಯಿಸಲ್ಪಡುತ್ತವೆ. ಮತ್ತು ಕೊಳ್ಳುವವನು ಅದರ ಒಡೆಯನಾಗುತ್ತಾನೆ. | ೪. ಸೇವೆಯನ್ನು ಸಲ್ಲಿಸಿದಾಗ ಅದು ಮಾರುವವನ ಹತ್ತಿರವೇ ಇರುತ್ತದೆ, ಅದರ ಅರಿವು ಮಾತ್ರ ಕೊಳ್ಳುವವನಿಗೆ ಆಗುತ್ತದೆ. |
| ೫. ವಸ್ತುಗಳನ್ನು ಯಾರ ಸಹಾಯ ದಿಂದಾದರೂ ಮಾರಾಟ ಮಾಡಬಹುದು | ೫. ಅವರವರ ಸೇವೆಯನ್ನು ಅವರೇ ಸ್ವತಃ ಸಲ್ಲಿಸಬೇಕಾಗುತ್ತದೆ. |
| ೬. ಬಂಡವಾಳ-ಸಾಂದ್ರ ಕೈಗಾರಿಕೆಗಳಾಗಿವೆ | ೬. ಶ್ರಮ ಸಾಂದ್ರ ಕೈಗಾರಿಕೆಗಳಾಗಿವೆ. |
| ೭. ಉತ್ಪಾದಕತೆಯ ಗುಣಮಟ್ಟ | ೭. ಗುಣಮಟ್ಟ ಶಿಕ್ಷಣ ಮತ್ತು ನೈಪುಣ್ಯತೆಯನ್ನು |

| | |
|---|---|
| ಉತ್ಪಾದನಾ ತಾಂತ್ರಿಕತೆಯನ್ನು ಅವಲಂಬಿಸಿದೆ. | ಅವಲಂಬಿಸಿದೆ. |
| ೮. ಚಲನ ಶಕ್ತಿ ಕಡಿಮೆ | ೮. ಅಪಾರ ಚಲನಶಕ್ತಿ. |

### ೪.೧.೩. ಭಾರತದ ಕೆಲವು ಪ್ರಮುಖ ದೊಡ್ಡ ಕೈಗಾರಿಕೆಗಳು

ಭಾರತದಲ್ಲಿ ಅತ್ಯಧಿಕ ಪ್ರಮಾಣದಲ್ಲಿ ಬಂಡವಾಳವನ್ನು ತೊಡಗಿಸಿ ಶ್ರಮ ವಿಭನೆಯ ಉಪಯೋಗವನ್ನು ಪಡೆದುಕೊಂಡು ದೊಡ್ಡ ಪ್ರಮಾಣದಲ್ಲಿ ವಸ್ತುಗಳನ್ನು ಉತ್ಪಾದಿಸುವ ಅನೇಕ ದೊಡ್ಡ ಕೈಗಾರಿಕೆಗಳು ಸ್ಥಾಪಿಸಲ್ಪಟ್ಟಿವೆ. ಅವುಗಳಲ್ಲಿ ಪ್ರಮುಖವಾದವುಗಳನ್ನು ಕೆಳಗೆ ಉಲ್ಲೇಖಿಸಲಾಗಿದೆ.

೧. ಕಬ್ಬಿಣ ಮತ್ತು ಉಕ್ಕಿನ ಕೈಗಾರಿಕೆ.
೨. ಯಂತ್ರೋಪಕರಣಗಳ ಕೈಗಾರಿಕೆ.
೩. ಮೋಟರ ವಾಹನಗಳ ಕೈಗಾರಿಕೆ.
೪. ಭಾರಿ ಎಂಜಿನಿಯರಿಂಗ್ ಕೈಗಾರಿಕೆ.
೫. ಸಾರಿಗೆ ಯಂತ್ರೋಪಕರಣಗಳ ಕೈಗಾರಿಕೆ.
೬. ಅಲ್ಯುಮಿನಿಯಂ ಕೈಗಾರಿಕೆ.
೭. ಭಾರಿ ವಿದ್ಯುದುಪಕರಣಗಳ ಕೈಗಾರಿಕೆ.
೮. ವಿಮಾನ ತಯಾರಿಕಾ ಕೈಗಾರಿಕೆ.
೯. ಹಡಗು ನಿರ್ಮಾಣ ಕೈಗಾರಿಕೆ.
೧೦. ಗೊಬ್ಬರ ಕೈಗಾರಿಕೆ.
೧೧. ಸಿಮೆಂಟ್ ಕೈಗಾರಿಕೆ.
೧೨. ಪೆಟ್ರೊಕೆಮಿಕಲ್ ಕೈಗಾರಿಕೆ.
೧೩. ರಬ್ಬರ್ ಕೈಗಾರಿಕೆ.
೧೪. ರೈಲ್ವೇ ವ್ಯಾಗನ್ನುಗಳು, ಇಂಜನ್ನುಗಳ ಮತ್ತು ಬೋಗಿಗಳ ತಯಾರಿಕಾ ಕೈಗಾರಿಕೆ.
೧೫. ಔಷಧ ಕೈಗಾರಿಕೆ.
೧೬. ಚಹದ ಕೈಗಾರಿಕೆ.
೧೭. ಹತ್ತಿ ಬಟ್ಟೆ ಕೈಗಾರಿಕೆ.
೧೮. ಸೆಣಬಿನ ಕೈಗಾರಿಕೆ.
೧೯. ಸಕ್ಕರೆ ಕೈಗಾರಿಕೆ.
೨೦. ಚರ್ಮದ ಕೈಗಾರಿಕೆ.
೨೧. ಆಹಾರ ಸಂಸ್ಕರಣ ಕೈಗಾರಿಕೆ.
೨೨. ಸಾಬೂನು ಕೈಗಾರಿಕೆ.

೨೩. ಟಿ.ವಿ. ಕೈಗಾರಿಕೆ.
೨೪. ಮಾಹಿತಿ ತಂತ್ರಜ್ಞಾನ ಉದ್ಯಮ.
೨೫. ಪ್ರವಾಸ ಮತ್ತು ಹೋಟೆಲ್ ಉದ್ಯಮ.

## ೪.೨. ಕೈಗಾರಿಕೆಗಳ ಅಭಿವೃದ್ಧಿಯ ತಂತ್ರ

ಕೈಗಾರಿಕೆಗಳ ಅಭಿವೃದ್ಧಿಗಾಗಿ ಭಾರತ ಸರಕಾರ ೧೯೯೧ ರಿಂದ ಹೊಸ ಹೊಸ ತಂತ್ರಗಳನ್ನು ಕಾರ್ಯರೂಪದಲ್ಲಿ ತರುತ್ತಲಿದೆ. ಕೈಗಾರಿಕಾ ನೀತಿಯಲ್ಲಿ ಅವಶ್ಯಕ ಸುಧಾರಣೆ ಮಾಡುವ ಸಲುವಾಗಿ ಸರಕಾರ ಜುಲೈ ೨೪, ೧೯೯೧ ರಂದು ತನ್ನ ಹೊಸ ಕೈಗಾರಿಕಾ ನೀತಿಯನ್ನು ಘೋಷಿಸಿತು.

ಭಾರತ ಸರಕಾರ ಪ್ರಕಟಿಸಿರುವ ಹೊಸ ಕೈಗಾರಿಕಾ ನೀತಿ ೧೯೪೮ ಮತ್ತು ೧೯೫೬ರ ಕೈಗಾರಿಕಾ ನೀತಿ ಕುರಿತ ನಿರ್ಣಯಗಳಿಗಿಂತ ತೀವ್ರ ಭಿನ್ನವಾಗಿದೆ. ೧೯೫೬ರ ನಂತರ ಸರಕಾರದ ಕೈಗಾರಿಕಾ ನೀತಿಯಲ್ಲಿ ಕೆಲವು ಸಣ್ಣ ಪುಟ್ಟ ಬದಲಾವಣೆಗಳನ್ನು ಮಾಡುವುದರ ಪ್ರಯತ್ನ ನಡೆಯಿತು ಎನ್ನುವುದರಲ್ಲಿ ಸಂದೇಹವಿಲ್ಲ. ೧೯೭೩ರಲ್ಲಿ ಗುರುತಿಸಲಾದ ಕೆಲವು ನಿರ್ದಿಷ್ಟ ಉನ್ನತ ಆದ್ಯತೆಯ ಕೈಗಾರಿಗಳಲ್ಲಿ ದೇಶೀಯ ಹಾಗೂ ವಿದೇಶಿ ಬಂಡವಾಳ ಹೂಡುವಿಕೆಗೆ ಅವಕಾಶ ಕೊಡಬೇಕೆಂದು ನಿರ್ಧರಿಸಲಾಯಿತು. ಅನಂತರ ೧೯೭೭ರಲ್ಲಿ ಕೈಗಾರಿಕಾ ವಿಕೇಂದ್ರೀಕರಣಕ್ಕೆ ಒತ್ತು ನೀಡಿತು. ೧೯೮೦ರಲ್ಲಿ ಭಾರತೀಯ ಕೈಗಾರಿಕಾ ಉತ್ಪಾದತೆ ಇಳಿಮುಖವಾಗುತ್ತದೆ ಎಂಬುದನ್ನು ಸರಕಾರ ಒಪ್ಪಿಕೊಳ್ಳಲೇಬೇಕಾಗಿ ಬಂತು. ಆದುದರಿಂದ ತಾಂತ್ರಿಕ ಜ್ಞಾನ ಸುಧಾರಿಸುವ ಮೂಲಕ ಸ್ವದೇಶಿ ಕೈಗಾರಿಕೆಗಳನ್ನು ಆಧುನೀಕರಣ ಗೊಳಿಸಬೇಕೆಂದು ಸರಕಾರ ನಿರ್ಧರಿಸಿತು. ಇವೆಲ್ಲವೂ ಸಣ್ಣ ಪುಟ್ಟ ಬದಲಾವಣೆಗಳಷ್ಟೇ. ಗಮನಾರ್ಹವಾದದ್ದೇನನ್ನು ಸಾಧಿಸಲಾಗಲಿಲ್ಲ.

ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ವ್ಯಾಪಕವಾಗಿ ಹರಡಿದ್ದ ಖಾಸಗಿ ವಲಯಕ್ಕೆ ಪರವಾದ ಸರಕಾರದ ನೀತಿಗಳ ಮೇಲೆ ಪ್ರಭಾವ ಬೀರಲಾರಂಭಿಸಿತು. ಸಾರ್ವಜನಿಕ ವಲಯದ ಮೂಲಕ ಆರ್ಥಿಕತೆಯ ಮುಖ್ಯ ಸೂತ್ರಗಳನ್ನು ನಿಯಂತ್ರಿಸುವುದನ್ನು ಸರಿಯೆಂದು ಕಾಣುವ ಸಮಾಜವಾದ ನಮೂನೆಯ ಸಮಾಜದ ಸಿದ್ಧಾಂತವನ್ನು ಬಿಟ್ಟು ಕೊಟ್ಟು, ಮಾರಕಟ್ಟೆ ಪರ ಸಿದ್ಧಾಂತವನ್ನು ಒಪ್ಪಿಕೊಳ್ಳುವ ಬಗ್ಗೆ ರಾಜಕೀಯ ಪಕ್ಷಗಳು ಡೋಲಾಯಮಾನ ಸ್ಥಿತಿ ಯಲ್ಲಿದ್ದವು. ಆದರೆ ಬೆಳೆಯುತ್ತಿರುವ ವಿದೇಶಿ ಸಾಲ, ಅಲ್ಪಾವಧಿ ಸಾಲಗಳನ್ನು ನಿರ್ವಹಿಸುವಲ್ಲಿನ ಅಸಮಾರ್ಥ್ಯ, ಕೆಳಮಟ್ಟದ ಉತ್ಪಾದಕತೆ ಹಾಗೂ ನಷ್ಟ ಅನುಭವಿಸುತ್ತಿ ರುವ ಸಾರ್ವಜನಿಕ ವಲಯದ ಕೈಗಾರಿಕೆಗಳ ಸಂಖ್ಯೆ ಹೆಚ್ಚುತ್ತಿರುವುದು ಇವುಗಳಿಂದಾಗಿ ಆರ್ಥಿಕ ನೀತಿಯಲ್ಲಿ ತೀವ್ರ ಸ್ವರೂಪದ ಬದಲಾವಣೆಗಳ್ನು ಮಾಡಬೇಕೆಂಬ ವಿಶ್ವಬ್ಯಾಂಕ್ ಮತ್ತು ಅಂತರಾಷ್ಟ್ರೀಯ ಹಣಕಾಸು ನಿಧಿಯ ಸಲಹೆಗಳನ್ನು ಸರಕಾರ ಒಪ್ಪಿಕೊಳ್ಳಬೇಕಾಗಿ ಬಂತು.

ದುಬಾರಿ ವೆಚ್ಚದ ಹಾಗೂ ಅಸಮರ್ಥ ಆಮದು, ಬದಲಿ ವ್ಯವಸ್ಥೆಯನ್ನು ಹುಟ್ಟು ಹಾಕಿ ಸ್ವಾವಲಂಬನೆ ನೀತಿಗೆ ಬದಲಾಗಿ ಸ್ವಲ್ಪಮಟ್ಟಿನ ಅವಲಂಬನೆ ಹಾಗೂ ಭಾರತದ ಆರ್ಥಿಕತೆಯು ಜಾಗತಿಕ ಮಾರುಕಟ್ಟೆಯಲ್ಲಿ ಪಾತ್ರವಹಿಸುವಂತೆ ಮಾಡುವ ನೀತಿಯನ್ನು ಹೊಂದಬೇಕೆಂಬ ಅಂಶವನ್ನು ಹೊಸ ಕೈಗಾರಿಕಾ ನೀತಿ ಸ್ಪಷ್ಟವಾಗಿ ಒಪ್ಪಿಕೊಂಡಿದೆ. ಬಹಳ ಬೇಗ ಬೆಳೆಯುತ್ತಿರುವ ನಮ್ಮ ಆಮದುಗಳಿಗೆ ಹಣ ಕೊಡುವುದಕ್ಕೆ ಮಾತ್ರವಲ್ಲವೇ ೭೯ ಶತಕೋಟಿ ಡಾಲರುಗಳನ್ನು ಮುಟ್ಟಿರುವ ನಮ್ಮ ವಿದೇಶಿ ಸಾಲವನ್ನು ತೀರಿಸಲು ರಫ್ತಿನ ಮೂಲಕ ವಿದೇಶಿ ವಿನಿಮಯವನ್ನು ಗಳಿಸಬೇಕಾದ ಅಗತ್ಯ ಈಗ ಬಹಳ ತುರ್ತಾಗಿರುವುದ ರಿಂದ ಇಂಥ ನೀತಿಯನ್ನು ಅನುಸರಿಸಲೇಬೇಕಾಗಿದೆ.

ಕೈಗಾರಿಕೆಗಳ ಹೊಸ ನೀತಿಯು ಉದಾರೀಕರಣ, ಖಾಸಗೀಕರಣ ಮತ್ತು ಜಾಗತೀಕರಣ ಗಳಿಗೆ ಹೆಚ್ಚಿನ ಪ್ರಾಶಸ್ತ್ಯ ನೀಡಿತು. ಆರ್ಥಿಕ ವ್ಯವಸ್ಥೆಯ ಎಲ್ಲ ಹತೋಟಿ ಮತ್ತು ನಿಯಂತ್ರಣ ಗಳಿಂದ ಮುಕ್ತಗೊಳಿಸುವುದಕ್ಕೆ ಆರ್ಥಿಕ ಉದಾರೀಕರಣ ಎನ್ನುವರು. ಸರಕಾರದ ಕೈಗಾರಿಕೆ ಗಳಲ್ಲಿ ಖಾಸಗಿ ವ್ಯಕ್ತಿಗಳು ಪಾಲುದಾರರಾಗಲು ಅವಕಾಶ ಮಾಡಿಕೊಡುವುದಕ್ಕೆ ಖಾಸಗೀಕರಣ ಎನ್ನುವರು.

ಹೊಸ ಕೈಗಾರಿಕಾ ನೀತಿಯು ಕೈಗಾರಿಕಾಭಿವೃದ್ಧಿಗಾಗಿ ಕೈಕೊಂಡ ಪ್ರಮುಖ ಉದ್ದೇಶಗಳು ಕೆಳಗಿನಂತಿವೆ.

ಅ. ಆರ್ಥಿಕ ಯೋಜನೆಯಡಿಯಲ್ಲಿ ಕಳೆದ ನಾಲ್ಕು ದಶಕಗಳಲ್ಲಿ ಸಾಧಿಸಿದ ಸಾಮರ್ಥ್ಯ ವನ್ನು ಕ್ರೋಢೀಕರಿಸುವ ಮತ್ತು ಈಗಾಗಲೇ ಸಾಧಿಸಿದ್ದನ್ನು ಬಲಪಡಿಸುವುದು.

ಆ. ಕಳೆದ ನಾಲ್ಕು ದಶಕಗಳಲ್ಲಿ ಕೈಗಾರಿಕಾಭಿವೃದ್ಧಿಯಲ್ಲಿ ಕಂಡು ಬಂದ ವಿಕೃತಾಂಶಗಳನ್ನು ಮತ್ತು ಇತಿಮಿತಿಗಳನ್ನು ನಿವಾರಿಸುವುದು ಹಾಗೂ ಕೈಗಾರಿಕಾ ವಲಯವನ್ನು ಸರಿಪಡಿಸುವುದು.

ಇ. ಉತ್ಪಾದಕತೆ ಮತ್ತು ಲಾಭದಾಯಕ ಉದ್ಯೋಗವಕಾಶಗಳನ್ನು ಹೆಚ್ಚಿಸಲು ಅವಿರತ ಬೆಳವಣಿಗೆಯನ್ನು ಸಾಧಿಸುವುದು.

ಊ. ಅಂತರಾಷ್ಟ್ರೀಯ ಮಟ್ಟದಲ್ಲಿ ತಾಂತ್ರಿಕ ಜ್ಞಾನದಲ್ಲಿ ಪ್ರಗತಿ ಸಾಧಿಸುವುದು.

ಹೊಸ ಕೈಗಾರಿಕಾ ನೀತಿಯ ಘೋಷಣೆಯ ನಂತರ ಕೆಲವು ಪ್ರಮುಖ ನೀತಿಗಳಲ್ಲಿ ಬದಲಾವಣೆ ಮಾಡಲಾಯಿತು. ಅವುಗಳಲ್ಲಿ ಪ್ರಮುಖವಾದವುಗಳು ಕೆಳಗಿನಂತಿವೆ.

**೧. ಪರವಾನಿಗೆ ರಹಿತ ನೀತಿ**

ಹೊಸ ಕೈಗಾರಿಕಾ ನೀತಿ ಘೋಷಣೆಯಾದ ನಂತರ ಹಳೆಯ ನೀತಿಯಲ್ಲಿರುವ ಪರವಾನಿಗೆ ನೀತಿಯನ್ನು ಕೈಬಿಡಲಾಯಿತು. ಅದರಲ್ಲಿರುವ ಪ್ರಮುಖ ಅಂಶಗಳು ಕೆಳಗಿನಂತಿವೆ

ಅ. ದೇಶದ ಭದ್ರತೆ ಮತ್ತು ಅದಕ್ಕೆ ಸಂಬಂಧಪಟ್ಟ ನಿರ್ದಿಷ್ಟ ಕೈಗಾರಿಕೆಗಳು, ಅಪಾಯಕಾರಿ ರಾಸಾಯನಿಕ ಕೈಗಾರಿಕೆಗಳು, ವಾತಾವರಣ ಕಲುಷಿತಗೊಳ್ಳುವ ಕೈಗಾರಿಕೆಗಳು ಮುಂತಾದ ೧೮ ಕೈಗಾರಿಕೆಗಳನ್ನು ಹೊರತುಪಡಿಸಿ ಉಳಿದ ಕೈಗಾರಿಕೆಗಳ ಸ್ಥಾಪನೆಗೆ

ಸರಕಾರದಿಂದ ಪೂರ್ವಾನ್ವಯ ಪರವಾನಿಗೆಯನ್ನು ಪಡೆಯಬೇಕೆಂಬ ಕಟ್ಟಳೆಯನ್ನು ಈಗ ತೆಗೆದು ಹಾಕಲಾಗಿದೆ.

ಪರವಾನಿಗೆ ಕಡ್ಡಾಯವಾಗಿರುವ ೧೮ ಕೈಗಾರಿಕೆಗಳೆಂದರೆ ೧. ಕಲ್ಲಿದಲು ಮತ್ತು ಲಿಗ್ನೈಟ, ೨. ಪೆಟ್ರೋಲಿಯಂ ವಸ್ತುಗಳು, ೩. ಸಕ್ಕರೆ, ೪. ಮದ್ಯ, ೫. ಪ್ರಾಣಿಗಳ ಕೊಬ್ಬು ಮತ್ತು ಉಣ್ಣೆ, ೬. ಸಿಗರೇಟ್, ಬೀಡಿ ಮತ್ತು ತಂಬಾಕಿನ ಇತರ ವಸ್ತುಗಳು, ೭. ಎಲಬು ಮತ್ತು ಚರ್ಮ ಮತ್ತಿತರ ವಸ್ತುಗಳು, ೮. ಆಸ್ಬೆಸ್ಟಾಸ್ ಮತ್ತು ಅದರ ಆದರಿತ ವಸ್ತುಗಳು, ೯. ಹಸಿ ಮಾಡಿದ ಅಥವಾ ತುಪ್ಪಳದ ಉಡುಪುಗಳು ಹಾಗೂ ವಸ್ತುಗಳು, ೧೦. ಪ್ಲೈವುಡ್ ಮತ್ತಿತರ ಕಟ್ಟಿಗೆಗಳು, ೧೧. ಕಾಗದ ಮತ್ತು ವೃತ್ತಪತ್ರಿಕೆಗಳು ಬೇಕಾಗುವ ಕಾಗದ, ೧೨. ಮೋಟರ ವಾಹನಗಳು, ೧೩. ಅಪಾಯಕಾರವಾದ ರಾಸಾಯನಿಕಗಳು, ೧೪. ಔದ್ಯಮಿಕ ಸ್ಫೋಟಕ ವಸ್ತುಗಳು, ೧೫. ವಾಯುಯಾನದ ಇಲೆಕ್ಟ್ರಾನಿಕ್ ವಸ್ತುಗಳು, ೧೬. ಔಷಧ, ೧೭. ಮನರಂಜನೆಯ ಇಲಾಕ್ಟ್ರಾನಿಕ್ ವಸ್ತುಗಳು (ಬಣ್ಣದ ಟಿ.ವಿ., ಸಿ.ಡಿ.ಪ್ಲೇಯರ್ಸ್, ವಿ.ಸಿ.ಆರ್, ಟೇಪ್‌ರಿಕಾರ್ಡರ್ಸ್) ಮತ್ತು ೧೮. ಐಷಾರಾಮಿ ವಸ್ತುಗಳು (ಹವಾ ನಿಯಂತ್ರ, ಬಟ್ಟೆ ತೊಳೆಯುವ ಯಂತ್ರ, ಶೀತಕ ಯಂತ್ರಗಳು ಇತ್ಯಾದಿ.)

ಆ. ಸಣ್ಣ ಕೈಗಾರಿಕೆಗಳು ಈ ಮೇಲಿನ ಯಾವುದೇ ಕೈಗಾರಿಕೆಗಳನ್ನು ಆರಂಭಿಸಿದರೆ ಅವು ಪರವಾನಿಗೆ ಪಡೆಯುವ ಅವಶ್ಯಕತೆಯಿಲ್ಲ.

ಇ. ಅಸ್ತಿತ್ವದಲ್ಲಿದ್ದ ನೊಂದಣಿ ಪದ್ಧತಿಯನ್ನು (ಪರವಾನಿಗೆ ಬೇಕಿಲ್ಲದ ಕೈಗಾರಿಕೆಗಳ ನೊಂದಣಿ, ವಿನಾಯಿತಿ ಹೊಂದಿದ ಕೈಗಾರಿಕೆಗಳ ನೊಂದಣಿ) ರದ್ದು ಪಡಿಸಲಾಯಿತು.

ಈ. ಉದ್ದಿಮೆದಾರರು ಇನ್ನು ಮೇಲೆ ಹೊಸದಾಗಿ ಸ್ಥಾಪಿಸಬೇಕೆಂಬ ಕೈಗಾರಿಕೆಗಳಿಗಾಗಲಿ ಅಥವಾ ಅಸ್ತಿತ್ವದಲ್ಲಿದ್ದ ಕೈಗಾರಿಕೆಗಳನ್ನು ವಿಸ್ತರಿಸುವುದಕ್ಕಾಗಲಿ ಸರಕಾರಕ್ಕೆ ಅದರ ಬಗ್ಗೆ ಮಾಹಿತಿಗಳನ್ನೊಳಗೊಂಡ ಮನವಿಯನ್ನು ಸಲ್ಲಿಸಿದರೇ ಸಾಕು.

ಉ. ೧೦ ಲಕ್ಷಕ್ಕಿಂತ ಕಡಿಮೆ ಜನಸಂಖ್ಯೆ ಇರುವ ನಗರಗಳಲ್ಲಿ ಕಡ್ಡಾಯವಾಗಿ ಅನುಮತಿ ಪಡೆದುಕೊಳ್ಳಬೇಕಾದ ಕೈಗಾರಿಕೆಗಳೇನು ಹೊರತುಪಡಿಸಿ ಉಳಿದ ಕೈಗಾರಿಕೆಗಳ ಸ್ಥಾಪನೆಗೆ ಕೇಂದ್ರ ಸರಕಾರದಿಂದರ ಮನ್ನಣೆ ಪಡೆದುಕೊಳ್ಳುವ ಅವಶ್ಯಕತೆ ಇರುವುದಿಲ್ಲ. ೧೦ ಲಕ್ಷಕ್ಕಿಂತ ಹೆಚ್ಚು ಜನಸಂಖ್ಯೆ ಇರುವ ನಗರಗಳಲ್ಲಿ ವಾತಾವರಣ ಕಲುಷಿತಕ್ಕೆ ಕಾರಣವಾಗುವ ಕೈಗಾರಿಕೆಗಳನ್ನು ಹೊರತುಪಡಿಸಿ ಉಳಿದ ಕೈಗಾರಿಕೆಗಳು ನಗರ ಪ್ರದೇಶಗಳಲ್ಲಿ ಸ್ಥಾಪಿಸಬೇಕು.

ಊ. ಎರಡು ಕೋಟಿ ರೂ.ಗಳಿಗೆ ಮಿಕ್ಕದಂತೆ ವಿದೇಶಿ ಬಂಡವಾಳದ ಸರಕುಗಳನ್ನು ಆಮದು ಮಾಡಬೇಕಾದ ಕೈಗಾರಿಕೆಗಳಿಗೆ ಸರಕಾರದ ವ್ಯಾಖ್ಯಾನಗಳು ಮೇಲೆ ಅಗತ್ಯ ವಿರುವುದಿಲ್ಲ.

ಈ ಪ್ರಕಾರ ಪರವಾನಿಗೆ ನೀತಿಯಲ್ಲಿ ಗಮನಾರ್ಹ ಬದಲಾವಣೆಯಾದ ಉದಾರೀಕರಣ ನೀತಿಗೆ ಹೆಚ್ಚು ಆಧ್ಯತೆ ದೊರೆತಿದೆ. ಪರವಾನಿಗೆ ರಹಿತ ನೀತಿಯು ಅನೇಕ ಕ್ರಿಯಾತ್ಮಕ ಉದ್ದಿಮೆದಾರರು ಉದ್ದಿಮೆಯನ್ನು ಸ್ಥಾಪಿಸಲು ಆಸಕ್ತರಾಗುವ ಹಾಗೆ ಮಾಡಿದೆ. ಒಟ್ಟಾರೆ

ಈ ನೀತಿಯಿಂದಾಗಿ ಭಾರತದ ಆರ್ಥಿಕತೆಗಳ ಲಾಭವಾಗಲಿದೆ, ಕೈಗಾರಿಕಾ ರಂಗ ತೀವ್ರ ಪ್ರಗತಿಹೊಂದಲಿವೆ.

**೨. ವಿದೇಶಿ ಬಂಡವಾಳ ಹೂಡುವಿಕೆಯ ಒಳಹರಿಯುವಿಕೆಗೆ ಉತ್ತೇಜನ**

ಭಾರತೀಯ ಕೈಗಾರಿಕೆಗಳನ್ನು ಅಧಿಕಾರಶಾಹಿ ನಿಯಂತ್ರಣದಿಂದ ಬಿಡುಗಡೆಗೊಳಿಸಿ ಭಾರತದಲ್ಲಿ ಲಭ್ಯವಿರುವ ಸಂಪನ್ಮೂಲಗಳನ್ನು ಬಳಸಿಕೊಳ್ಳಲು ಉತ್ತೇಜನ ನೀಡಲಾಗಿದೆ. ಬದಲಾಗುತ್ತಿರುವ ಜಾಗತಿಕ ಪರಿಸ್ಥಿತಿಯ ಹಿನ್ನಲೆಯಲ್ಲಿ ಜಗತ್ತಿನಲ್ಲಿರುವ ಬಂಡವಾಳದ ಚಲನೆಗೆ ಅನುಕೂಲ ಮಾಡಿಕೊಡಲು ಸರಕಾರ ಹಲವಾರು ನಿಯಂತ್ರಣ ಕ್ರಮಗಳನ್ನು ತೆಗೆದು ಹಾಕಿದೆ. ಮೊದಲು ಭಾರತದಲ್ಲಿ ವಿದೇಶಿ ಬಂಡವಾಳ ಹೂಡಲು ಭಾರತ ಸರಕಾರದ ಪ್ರತಿಯೊಂದು ಇಲಾಖೆಯ ಅನುಮತಿ ಅಗತ್ಯವಾಗಿತ್ತು. ೧೯೯೧ ರಿಂದ ಕೈಗಾರಿಕಾ ವಲಯದಲ್ಲಾದ ಸುಧಾರಣೆಯಿಂದ ವಿದೇಶೀ ಬಂಡವಾಳ ಹರಿದು ಬರಲು ಸರಕಾರ ಹಲವಾರು ಕ್ರಮಗಳನ್ನು ಕೈಗೊಂಡಿದೆ. ಅವು ಈ ಕೆಳಗಿನಂತಿವೆ.

ಅ. ಬಂಡವಾಳ ವಸ್ತುಗಳ ಆಮದು ಅವಶ್ಯಕವಿರುವ ಕೈಗಾರಿಕೆಗಳು ನಿಶ್ಚಿತವಾಗಿ ವಿದೇಶಿ ವಿನಿಮಯವನ್ನು ಗಳಿಸುವಂತಿದ್ದರೆ ಅಂಥ ಕೈಗಾರಿಕೆಗಳಿಗೆ ಸ್ವಯಂಚಾಲಿತ ಪರವಾನಿಗೆ ಕೊಡಲಾಗುವುದು.

ಆ. ಹೆಚ್ಚಿನ ಪ್ರಾಮುಖ್ಯತೆಯನ್ನು ಪಡೆದ ಕೈಗಾರಿಕೆಗಳಲ್ಲಿ ಶೇಕಡ ೫೧ರಷ್ಟು ವಿದೇಶಿ ಬಂಡವಾಳ ಹೂಡಲು ಒಪ್ಪಿಗೆ ಕೊಡಲಾಯಿತು.

ಇ. ವಿದೇಶಿ ಬಂಡವಾಳ ಹೂಡುವಿಕೆಯಿಂದ ಪ್ರಾರಂಭಿತವಾದ ಕೈಗಾರಿಕೆಗಳ ಲಾಭಾಂಶ ವಿತರಣೆಯು ಭಾರತ ರಿಝರ್ವ್ ಬ್ಯಾಂಕಿನ ನಿಯಂತ್ರಣಕ್ಕೊಳಪಡಿಸಕ್ಕದ್ದು ಎಂದು ನಿಶ್ಚಯಿಸಲಾಯಿತು.

ಈ ಮೂಲವಾಗಿ ರಫ್ತು ವ್ಯಾಪಾರ ಚಟುವಟಿಕೆಗಳಲ್ಲಿಯೇ ತೊಡಗಿದೆ ವ್ಯಾಪಾರಿ ಸಂಸ್ಥೆಗಳಿಗೆ ಇನ್ನೂ ಹೆಚ್ಚಿನ ವಿದೇಶಿ ಮಾರುಕಟ್ಟೆಯನ್ನು ವಿಸ್ತರಿಸಲು ಸಾಕ್ಷಿಯಾಗುವಂತೆ ಶೇಕಡ ೫೧ರಷ್ಟು ವಿದೇಶಿ ಬಂಡವಾಳ ಹೂಡುವಿಕೆಗೆ ಅವಕಾಶ ಮಾಡಿಕೊಡಲಾಗಿದೆ.

ಉ. ಕೆಲವೊಂದು ನಿರ್ದಿಷ್ಟ ಪಡಿಸಿದ ಕೈಗಾರಿಕೆಗಳಲ್ಲಿ ವಿದೇಶಿ ಬಂಡವಾಳ ಹೂಡುವವರ ಅರ್ಜಿಗಳನ್ನು ಪರಿಶೀಲಿಸಿ ಕ್ರಮ ಕೈಗೊಳ್ಳುವುದರ ಬಗ್ಗೆ ವಿಶೇಷ ಅಧಿಕಾರವುಳ್ಳ ಮಂಡಳಿಯನ್ನು ಸ್ಥಾಪಿಸಲಾಗಿದೆ.

ಊ. ಹೆಚ್ಚು ಆದ್ಯತೆಯುಳ್ಳ ಕೈಗಾರಿಕೆಗಳಿಗೆ ವಿದೇಶಿ ತಂತ್ರಜ್ಞಾನದ ಆಮದು ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

ಹೀಗೆ ಹೊಸ ಆರ್ಥಿಕ ನೀತಿಯು ವಿದೇಶಿ ಬಂಡವಾಳ ಹೂಡಿಕೆಯ ಬಗ್ಗೆ ಸಡಿಲ ನೀತಿಯನ್ನು ಅನುಸರಿಸಲಾಗಿದೆ. ಇದರ ಪರಿಣಾಮವಾಗಿ ವಿದೇಶಿ ಬಂಡವಾಳ ಹೂಡುವಿಕೆಯ ಒಳಹರಿವು ೧೯೯೧ ರಿಂದ ಅಧಿಕಗೊಳ್ಳುತ್ತಲೇ ಇದೆ. ಇದನ್ನು ಕೆಳಗಿನ ಪಟ್ಟಿಯ ಸಹಾಯದಿಂದ ತಿಳಿದುಕೊಳ್ಳಬಹುದು.

ನೇರ ವಿದೇಶಿ ಬಂಡವಾಳ ಹೂಡುವಿಕೆಗೆ ಅನುಮತಿ ಮತ್ತು ಒಳಹರಿವು ಕೋಟಿ ರೂ.ಗಳಲ್ಲಿ

| ವರ್ಷ | ಅನುಮತಿ | ಒಳಹರಿವು |
|---|---|---|
| ೧೯೯೧-೯೨ | ೧೩೪೫ | ೪೦೮ |
| ೧೯೯೫-೯೬ | ೩೬೭೦೮ | ೬೯೧೬ |
| ೧೯೯೯-೦೦ | ೧೭೧೯೭೬ | ೧೦೩೧೧ |
| ೨೦೦೦-೦೧ | ೨೫೨೦೭ | ೧೨೬೪೫ |
| ೨೦೦೧-೦೨ | ೧೪೪೬೫ | ೧೯೩೬೧ |
| ೨೦೦೨-೦೩ | ೭೯೦೪ | ೧೪೯೩೨ |
| ೨೦೦೩-೦೪ | ೬೨೨೪ | ೧೨೧೧೭ |
| ೨೦೦೪-೦೫ | ೬೭೮೪ | ೧೧೭೨೬ |

೧೯೯೧ ರಿಂದ ವಿದೇಶಿ ಬಂಡವಾಳ ನೇರ ಹೂಡುವಿಕೆಯ ಒಳಹರಿವು ಹೆಚ್ಚುತ್ತಲಿದೆ.

### ೩. ಖಾಸಗಿ ವಲಯದ ಭಾಗವಹಿಸುವಿಕೆ

ಹೊಸ ಆರ್ಥಿಕ ನೀತಿಯಿಂದ ಮತ್ತು ಆರ್ಥಿಕ ಸುಧಾರಣಾ ಕ್ರಮಗಳಿಂದಾಗಿ ಖಾಸಗಿ ವಲಯಕ್ಕೆ ಸಾಕಷ್ಟು ಸದಾವಕಾಶಗಳನ್ನು ಸರಕಾರ ಒದಗಿಸಿ ಕೊಟ್ಟಿದೆ. ಖಾಸಗಿ ವ್ಯಕ್ತಿ ಅಥವಾ ಸಂಸ್ಥೆಗಳ ಒಡೆತನ ಮತ್ತು ಆಡಳಿತಕ್ಕೊಳಪಟ್ಟ ಸಂಸ್ಥೆಗಳಿಗೆ ಖಾಸಗಿ ವಲಯ ಎಂದು ಕರೆಯುತ್ತಾರೆ. ಇವು ವೈಯಕ್ತಿಕ ಒಡೆತನಕ್ಕೆ ಸೇರಿರಬಹುದು ಇಲ್ಲವೇ ಪಾಲುಗಾರಿಕೆಯ ಅಥವಾ ಖಾಸಗಿ ಕಂಪನಿಯ ಒಡೆತನಕ್ಕೆ ಸೇರಿರಬಹುದು.

ಭಾರತದಲ್ಲಿ ಪಂಚವಾರ್ಷಿಕ ಯೋಜನೆಗಳು ಆರಂಭವಾದ ನಂತರ ಸಾರ್ವಜನಿಕ ವಲಯಕ್ಕೆ ಪ್ರಾಧಾನ್ಯತೆ ಬರತೊಡಗಿದ್ದರಿಂದ ಖಾಸಗಿ ವಲಯಕ್ಕೆ ಪ್ರಾಧಾನ್ಯತೆ ಕಡಿಮೆಯಾಯಿತು. ಆದರೆ ಈಗ ಹೊಸ ಆರ್ಥಿಕ ನೀತಿಯನ್ನು ಜಾರಿಗೊಳಿಸಿದ ನಂತರ ಭಾರತದ ಆರ್ಥಿಕ ವ್ಯವಸ್ಥೆಯಲ್ಲಿ ಅವು ಮಹತ್ವದ ಪಾತ್ರ ವಹಿಸುತ್ತಿರುವುದನ್ನು ಕಾಣಬಹುದಾಗಿದೆ. ಸರಕಾರವು ತನ್ನ ವಲಯದ ವ್ಯಾಪ್ತಿಯನ್ನು ಸೀಮಿತಗೊಳಿಸಿದ್ದು, ಖಾಸಗಿ ವಲಯದ ಘಟಕಗಳು ಬೆಳೆದು ಬರುವಂತೆ ಅವುಗಳಿಗೆ ಎಲ್ಲ ರೀತಿಯ ನೇರವನ್ನು ಹಾಗೂ ಉತ್ತೇಜನವನ್ನು ಅದು ನೀಡುತ್ತಲಿದೆ. ಸಾರ್ವಜನಿಕ ವಲಯವು ಖಾಸಗಿ ವಲಯದೊಂದಿಗೆ ಸಹಕರಿಸುವುದೇ ಹೊರತು ಅದರೊಂದಿಗೆ ಪೈಪೋಟಿಗೆ ಇಳಿಯಲಾರದೆಂಬುದನ್ನು ಸರಕಾರ ಅನೇಕ ಸಲ ತನ್ನ ನೀತಿಯಲ್ಲಿ ಸ್ಪಷ್ಟ ಪಡಿಸಿದೆ. ಸಾರ್ವಜನಿಕ ವಲಯವು ಬೆಳೆದಂತೆ ಖಾಸಗಿ ವಲಯವೂ ಬೆಳೆಯಲು ಎಲ್ಲ ಸೌಲಭ್ಯಗಳನ್ನು ನೀಡಲು ಸರಕಾರ ನಿರ್ಧರಿಸಿದೆ ಮತ್ತು ಸೌಲಭ್ಯಗಳನ್ನು ಒದಗಿಸುತ್ತಲಿದೆ. ಖಾಸಗಿ ವಲಯದ ಭಾಗವಹಿಸುವಿಕೆಗೆ ಉತ್ತೇಜನ ನೀಡುವುದರ ಸಲುವಾಗಿ ಕೆಳಗಿನ ಕೆಲವೊಂದು ಕ್ರಮಗಳನ್ನು ಸರಕಾರ ಸ್ವೀಕರಿಸಿದೆ.

ಅ. ತೈಲ, ದೂರಸಂಪರ್ಕ, ದೂರವಾಣಿ, ಬಂದರ, ವಿಮಾನಯಾನ ಮತ್ತು ಶಕ್ತಿ ಮುಂತಾದವುಗಳಲ್ಲಿ ಖಾಸಗಿ ವಲಯದ ಭಾಗವಹಿಸುವಿಕೆಗೆ ಉತ್ತೇಜನ ನೀಡಲಾಗಿದೆ.

ಆ. ಸಾರ್ವಜನಿಕ ವಲಯದ ಉದ್ದಿಮೆಗಳಿಗೆ ಇನ್ನು ಮುಂದೆ ಅಯವ್ಯಯದಲ್ಲಿ ಸಹಾಯ ಮಾಡದಿರಲು ನಿರ್ಧರಿಸಲಾಗಿದೆ.

ಇ. ಸಾರ್ವಜನಿಕ ವಲಯದ ಶೇರುಗಳ ಕೆಲವು ಪ್ರಮಾಣವನ್ನು ಖಾಸಗಿ ವಲಯಕ್ಕೆ ಮಾರಾಟ ಮಾಡುವುದು.

ಈ. ಸಾರ್ವಜನಿಕ ವಲಯದಲ್ಲಿ ಹೊಸ ಕೈಗಾರಿಕೆಗಳನ್ನು ಸ್ಥಾಪಿಸುವುದಕ್ಕಾಗಲಿ ಇದ್ದ ಕೈಗಾರಿಕೆಗಳನ್ನು ವಿಸ್ತರಿಸುವುದಕ್ಕಾಗಲಿ ನಿರ್ಬಂಧಿಸುವುದು.

ಈ ಎಲ್ಲ ಕ್ರಮಗಳಿಂದಾಗಿ ಇತ್ತೀಚಿನ ವರ್ಷಗಳಲ್ಲಿ ಖಾಸಗಿ ವಲಯದ ಭಾಗವಹಿಸುವಿಕೆ ಹೆಚ್ಚುತ್ತಲಿದೆ.

ಖಾಸಗಿ ವಲಯದ ಘಟಕಗಳು ಭಾರತದ ಆರ್ಥಿಕಾಭಿವೃದ್ಧಿಯಲ್ಲಿ ಮಹತ್ವದ ಪಾತ್ರವಹಿಸುತ್ತಲಿವೆ. ಅವು ಸಾವಿರಾರು ದೊಡ್ಡ, ಮಧ್ಯಮ ಮತ್ತು ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸಿ ರಾಷ್ಟ್ರದ ಉತ್ಪಾದನೆಯನ್ನು ಹೆಚ್ಚಿಸುವಲ್ಲಿ ಸಹಾಯಕಾರಿಯಾಗಿವೆ. ರಾಷ್ಟ್ರೀಯ ಆದಾಯದಲ್ಲಿ ಸಾರ್ವಜನಿಕ ವಲಯದ ಘಟಕಗಳಿಗಿಂತ ಖಾಸಗಿ ವಲಯದ ಘಟಕಗಳು ಹೆಚ್ಚಿನ ಪ್ರಮಾಣದಲ್ಲಿ ಆದಾಯವನ್ನೊದಗಿಸುವುದು ಗಮನಾರ್ಹವಾದ ಸಂಗತಿ ಖಾಸಗಿ ವಲಯದ ಕೈಗಾರಿಕೆಗಳು ಒಟ್ಟು ಕೈಗಾರಿಕಾ ಉತ್ಪಾದನೆಯಲ್ಲಿ ಶೇಕಡ ೮೦ರಷ್ಟು ಉತ್ಪಾದನೆಯನ್ನು ಇಂದು ಮಾಡುತ್ತಿದ್ದು ಶೇಕಡ ೯೦ರಷ್ಟು ಕೈಗಾರಿಕಾ ಕಾರ್ಮಿಕರು ಈ ಕೈಗಾರಿಕೆಗಳಲ್ಲಿಯೇ ಕೆಲಸಮಾಡುತ್ತಿದ್ದಾರೆ.

## ೪. ಬಂಡವಾಳ ಹೂಡಿಕೆಯ ಹಿಂತೆಗೆತ

ಬಂಡವಾಳ ಹೂಡಿಕೆಯ ಹಿಂತೆಗೆತವು ಖಾಸಗೀಕರಣದ ಒಂದು ಭಾಗ. ಬಂಡವಾಳ ಹೂಡಿಕೆಯ ಹಿಂತೆಗೆತ ನೀತಿ ಒಂದು ದಶಕಗಳಿಂದ ಕಾರ್ಯರೂಪದಲ್ಲಿ ಬಂದಿದೆ. ಕೈಗಾರಿಕಾ ಘಟಕಗಳಲ್ಲಿ ಹೂಡಿದ ಬಂಡವಾಳವನ್ನು ಮರಳಿ ಪಡೆಯುವುದಕ್ಕೆ ಬಂಡವಾಳ ಹೂಡಿಕೆಯ ಹಿಂತೆಗೆತ ಎಂದು ಕರೆಯುವರು. ಇನ್ನೊಂದು ವಿಧದಲ್ಲಿ ಹೇಳುವುದಾದರೆ "ಸಾರ್ವಜನಿಕ ವಲಯದ ಉದ್ಯಮಗಳಲ್ಲಿ ಅಧಿಕಾರವನ್ನು ವರ್ಗಾಯಿಸದೇ ಸರಕಾರದ ಶೇರು ಬಂಡವಾಳವನ್ನು ಕಡಿಮೆ ಮಾಡುವುದು ಬಂಡವಾಳ ಹೂಡುವಿಕೆಯ ಹಿಂತೆಗೆತ." ಇನ್ನೂ ಒಂದು ಅರ್ಥದಲ್ಲಿ ಹೇಳುವುದಾದರೆ "ಆರ್ಥಿಕ ಚಟುವಟಿಕೆಯಲ್ಲಿನ ಸರಕಾರದ ಹೂಡಿಕೆ ಯನ್ನು ಹಿಂದಕ್ಕೆ ಪಡೆಯುವುದು. ಇದು ಭಾಗಶಃವಾಗಿರಬಹುದು ಅಥವಾ ಸಂಪೂರ್ಣ ವಾಗಿರಬಹುದು.

ಭಾರತದಲ್ಲಿಯ ಬಹುತೇಕ ಸಾರ್ವಜನಿಕ ವಲಯದ ಕೈಗಾರಿಕೆಗಳು ನಷ್ಟವನ್ನು ಅನುಭವಿಸಲಾರಂಭಿಸಿದ್ದವು. ಅವು ಸರಕಾರದ ಖಜಾನೆಗೆ ಭಾರವಾಗ ಹತ್ತಿದವು. ಆಗ

ಸರಕಾರ ಬಂಡವಾಳ ಹಿಂತೆಗೆತದ ಕಡೆಗೆ ತನ್ನ ಗಮನ ಹರಿಸಲಾರಂಭಿಸಿತು. ೧೯೯೧ರಲ್ಲಿ ಹೊಸ ಕೈಗಾರಿಕಾ ನೀತಿ ಕಾರ್ಯರೂಪದಲ್ಲಿ ಬಂದ ನಂತರ ಬಂಡವಾಳ ಹಿಂತೆಗೆತಕ್ಕೆ ಚಾಲನೆ ದೊರಕಿತು.

ಭಾರತ ಸರಕಾರ ಬಂಡವಾಳ ಹೂಡಿಕೆಯ ಹಿಂತೆಗೆತದ ಕಾರ್ಯಕ್ಕಾಗಿ ಪ್ರತ್ಯೇಕ ಇಲಾಖೆಯನ್ನು ಪ್ರಾರಂಭಿಸಿದೆ. ರಾಷ್ಟ್ರೀಯ ಪ್ರಜಾಪ್ರಭುತ್ವ ಒಕ್ಕೂಟದ ಸರಕಾರವಿರುವಾಗ ಇದಕ್ಕೆ ಸಂಬಂಧಪಟ್ಟಂತೆ ಒಬ್ಬ ಕ್ಯಾಬಿನೆಟ್ ದರ್ಜೆಯ ಸಚಿವರೊಬ್ಬರು ಈ ಕಾರ್ಯ ನಿರ್ವಹಿಸುವುದಕ್ಕಾಗಿಯೇ ಇದ್ದರು.

ಬಂಡವಾಳ ಹೂಡುವಿಕೆ ಹಿಂತೆಗೆತದ ಹಿಂದೆ ಇರುವ ಪ್ರಮುಖ ಉದ್ದೇಶಗಳು ಕೆಳಗಿನಂತಿವೆ.

೧. ಸಾರ್ವಜನಿಕ ವಲಯದಲ್ಲಿ ಕಾರ್ಯರೂಪದಲ್ಲಿ ತಂದಿರುವ ನಿವೃತ್ತಿ ಯೋಜನೆಯ ವೆಚ್ಚವನ್ನು ಸರಿದೂಗಿಸಲು, ಉದ್ಯಮ ಸಂಸ್ಥೆಯನ್ನು ಪುನರ್‌ರಚಿಸುವುದು ಮತ್ತು ಉದ್ಯೋಗಿಗಳಿಗೆ ಪುನರ್‌ತರಬೇತಿ ಕೊಡುವುದರ ಸಲುವಾಗಿ ಸಂಪನ್ಮೂಲಗಳನ್ನು ಸಂಗ್ರಹಿಸುವುದು.

೨. ಪುನಶ್ಚೇತನ ಕಂಡುಬರದ ಉದ್ಯಮಗಳನ್ನು ಸಂಪೂರ್ಣವಾಗಿ ಮುಚ್ಚುವುದು.

೩. ಸಾರ್ವಜನಿಕ ವಲಯದ ಕಾರ್ಯನಿರ್ವಹಣೆಯನ್ನು ಸುಧಾರಿಸುವುದು.

೪. ಉತ್ಪಾದನಾ ಸಾಮರ್ಥ್ಯವನ್ನು ಎಲ್ಲ ಅಡ್ಡಗಲಗಳಿಂದ ಹೆಚ್ಚಿಸಿ ವಿಶಿಷ್ಟ ಸ್ಥಿತಿಯನ್ನು ನಿರ್ಮಾಣ ಮಾಡುವುದು.

೧೯೯೧-೯೨ ರಿಂದ ಬಂಡವಾಳ ಹೂಡಿಕೆ ಹಿಂತೆಗೆತ ಆರಂಭವಾಯಿತು. ಆದರೆ ಅದು ಆರಂಭದಲ್ಲಿ ಅಲ್ಪ ಪ್ರಮಾಣದಲ್ಲಿತ್ತು. ೧೯೯೮-೯೯ ರಿಂದ ೨೦೦೩-೦೪ ತನಕ ಬಂಡವಾಳ ಹೂಡಿಕೆಯ ಹಿಂತೆಗೆತದಿಂದ ಭಾರತ ಸರಕಾರ ದೊಡ್ಡ ಪ್ರಮಾಣದಲ್ಲಿ ಹಣ ಸಂಗ್ರಹಿಸಿವೆ.

೧೯೯೧-೯೨ ರಿಂದ ಬಂಡವಾಳ ಹೂಡಿಕೆ ಹಿಂತೆಗೆತದಿಂದ ಸರಕಾರ ಸಂಗ್ರಹಿಸಿದ ಆದಾಯವನ್ನು ಕೆಳಗಿನ ಪಟ್ಟಿಯ ಸಹಾಯದಿಂದ ತಿಳಿಯಬಹುದು.

**ಬಂಡವಾಳ ಹೂಡಿಕೆಯ ಹಿಂತೆಗೆತದಿಂದ**
**ಸರಕಾರ ಸಂಗ್ರಹಿಸಿದ ಆದಾಯ ಕೋಟಿ ರೂ.ಗಳಲ್ಲಿ**

| ವರ್ಷ | ಸಂಗ್ರಹಣೆಯ ಗುರಿ | ಸಂಗ್ರಹಿಸಿದ ಆದಾಯ |
|---|---|---|
| ೧೯೯೧-೯೨ | ೨೫೦೦ | ೩೦೩೮ |
| ೧೯೯೨-೯೩ | ೨೫೦೦ | ೧೯೧೩ |
| ೧೯೯೩-೯೪ | ೩೫೦೦ | ... |
| ೧೯೯೪-೯೫ | ೪೦೦೦ | ೪೮೪೩ |
| ೧೯೯೫-೯೬ | ೭೦೦೦ | ೩೬೨ |

| | | |
|---|---|---|
| ೧೯೯೬-೯೭ | ೫೦೦೦ | ೩೮೦ |
| ೧೯೯೭-೯೮ | ೪೦೦೦ | ೯೧೨ |
| ೧೯೯೮-೯೯ | ೫೦೦೦ | ೫೩೭೧ |
| ೧೯೯೯-೦೦ | ೧೪೦೦೦ | ೧೮೬೦ |
| ೨೦೦೦-೦೧ | ೧೦೦೦೦ | ೧೮೭೧ |
| ೨೦೦೧-೦೨ | ೧೨೦೦೦ | ೫೬೩೨ |
| ೨೦೦೨-೦೩ | ೧೨೦೦೦ | ೩೩೪೮ |
| ೨೦೦೩-೦೪ | ೧೪೫೦೦ | ೧೫೫೪೭ |
| ೨೦೦೪-೦೫ | ೪೦೦೦ | ೨೭೬೫* |

*ಡಿಸೆಂಬರ ೨೦೦೪ರ ತನಕ

ಬಂಡವಾಳ ಹೂಡಿಕೆಯ ಹಿಂತೆಗೆತ ಗುರಿಯನ್ನು ತಲುಪಲು ಸಾಧ್ಯವಾಗಿಲ್ಲ ಎಂಬ ಅಂಶ ಮೇಲಿನ ಪಟ್ಟಿ ಸ್ಪಷ್ಟಪಡಿಸುತ್ತದೆ. ಸಾಮಾನ್ಯವಾಗಿ ನಷ್ಟವನ್ನು ಅನುಭವಿಸುವ ಸಂಸ್ಥೆಗಳ ಶೇರು ಬಂಡವಾಳವನ್ನು ಖಾಸಗಿಯವರಿಗೆ ಮಾರಾಟ ಮಾಡುವುದನ್ನು ಎಲ್ಲರೂ ಒಪ್ಪುವ ಮಾತು. ಆದರೆ ಖಾಸಗೀಕರಣ ಮಾಡುವ ಉದ್ದೇಶವಿಟ್ಟುಕೊಂಡು ಲಾಭಗಳಿಸುವ ಉದ್ಯಮ ಸಂಸ್ಥೆಗಳ ಶೇರುಗಳನ್ನು ಮಾರಾಟ ಮಾಡಲು ಸರಕಾರ ಪ್ರಯತ್ನಸಿದ್ದುದನ್ನು ಅನೇಕ ರಾಜಕೀಯ ಪಕ್ಷಗಳು ವಿರೋಧಿಸಿವೆ. ಕೆಲವೊಮ್ಮೆ ಸರಕಾರದಲ್ಲಿರುವ ಕೆಲವು ಮಂತ್ರಿಗಳೇ ವಿರೋಧಿಸುವರು. ಈ ಸಮ್ಮಿಶ್ರ ಸರಕಾರವನ್ನು ಬೆಂಬಲಿಸುವ ಕೆಲವು ರಾಜಕೀಯ ಪಕ್ಷಗಳು ಈ ಬಂಡವಾಳ ಹಿಂತೆಗೆತ ಕ್ರಿಯೆಯನ್ನು ಬಲವಾಗಿ ವಿರೋಧಿಸುತ್ತಿವೆ. ಇದರ ಪರಿಣಾಮವಾಗಿ ಬಂಡವಾಳ ಹೂಡಿಕೆಯ ಹಿಂತೆಗೆತ ಕ್ರಿಯೆಗೆ ಅಡೆತಡೆಯಾಗುತ್ತದೆ.

**೫. ಏಕಸ್ವಾಮ್ಯ ಮತ್ತು ಪ್ರತಿಬಂಧಿತ ವ್ಯಾಪಾರಿ ಚಟುವಟಿಕೆಗಳ ಕಾನೂನಿಗೆ ತಿದ್ದುಪಡಿ**

ಒಂದು ಉದ್ಯಮ ಸಂಸ್ಥೆಯು ಅತಿಯಾಗಿ ಬೆಳೆದು ವಸ್ತುವಿನ ಪೂರೈಕೆಯ ಮೇಲೆ ನಿಯಂತ್ರಣ ಸಾಧಿಸುವ ಸ್ಥಿತಿ ಏಕಸ್ವಾಮ್ಯ ಸ್ಥಿತಿ ಇಂಥ ಸನ್ನಿವೇಶದಲ್ಲಿ ಸ್ಪರ್ಧೆ ಇಲ್ಲದಂತಾಗಿ ಕಾನೂನು ಬಾಹಿರ ಕ್ರಮಗಳನ್ನು ಅನುಸರಿಸಿ ಅತಿ ಹೆಚ್ಚು ಲಾಭಗಳಿಸುವ ಕಡೆಗೆ ಗಮನಹರಿಸುತ್ತಾನೆ. ಇದರಿಂದ ಆರ್ಥಿಕ ಶಕ್ತಿಯ ಕೇಂದ್ರೀಕರಣವಾಗಿ ಆರ್ಥಿಕ ಅಸಮಾನತೆ ಹೆಚ್ಚುತ್ತದೆ. ಇದನ್ನು ನಿಯಂತ್ರಿಸುವದಕ್ಕಾಗಿ ೧೯೬೯ರಲ್ಲಿ "ಏಕಸ್ವಾಮ್ಯ ಮತ್ತು ಪ್ರತಿಬಂಧಿತ ವ್ಯಾಪಾರಿ ಚಟುವಿಕೆಗಳ ಕಾನೂನು" ಜಾರಿಗೆ ಬಂದಿತು. ಸಂದರ್ಭಕ್ಕನುಗುಣವಾಗಿ ಈ ಕಾನೂನಿನಲ್ಲಿ ತಿದ್ದುಪಡಿ ಮಾಡಲಾಗಿದೆ. ೧೯೮೫ ರಿಂದ ೧೦೦ ಕೋಟಿ ರೂ.ಗಳಿಗಿಂತ ಅಧಿಕ ಬಂಡವಾಳ ಹೊಂದಿರುವ ಎಲ್ಲ ದೊಡ್ಡ ಕೈಗಾರಿಕೆಗಳಿಗೆ ಈ ಕಾನೂನು ಅನ್ವಯಿಸುತ್ತದೆ.

ಈ ಕಾನೂನಿನ ಪ್ರಕಾರ ೧೦೦ ಕೋಟಿ ರೂ.ಗಳಿಗಿಂತ ಅಧಿಕ ಬಂಡವಾಳ ಹೊಂದಿದ ಎಲ್ಲ ಕೈಗಾರಿಕೆಗಳು ಹೊಸ ಕೈಗಾರಿಕೆಗಳನ್ನು ಪ್ರಾರಂಭಿಸಲು, ವಿಸ್ತರಿಸಲು ಒಂದಕ್ಕೊಂದು ಕೂಡಿಸುವುದಕ್ಕಾಗಲಿ ಸರಕಾರದ ಪರವಾನಿಗೆ ಪಡೆಯಲೇಬೇಕಾಗುತ್ತದೆ. ಆದರೆ ೧೯೯೧ರ ಹೊಸ ಕೈಗಾರಿಕಾ ನೀತಿಯಲ್ಲಿ ಈ ಕಾನೂನಿಗೊಳಪಟ್ಟ ಅನೇಕ ಅಂಶಗಳನ್ನು ಸಡಿಲಿಸಲಾಗಿದೆ. ಅವು ಕೆಳಗಿನಂತಿವೆ.

೧. ಏಕಸ್ವಾಮ್ಯ ಮತ್ತು ಪ್ರತಿಬಂಧಿತ ವ್ಯಾಪಾರಿ ಚಟುವಟಿಕೆಗಳ ಕಾನೂನಿಗೆ ಒಳಪಟ್ಟ ಕೈಗಾರಿಕೆಗಳು ಮತ್ತು ಪ್ರಮುಖ ವಲಯಗಳಿಗೆ ಇದ್ದ ಆಸ್ತಿಗಳಿಕೆಯ ಮಿತಿಯನ್ನು ತೆಗೆದು ಹಾಕುವಂತೆ ಈ ಕಾನೂನಿನಲ್ಲಿ ಬದಲಾವಣೆ ಮಾಡಲಾಯಿತು.

೨. ಏಕಸ್ವಾಮ್ಯ ಮತ್ತು ಪ್ರತಿಬಂಧಿತ ಚಟುವಟಿಕೆಗಳಿಗೆ ಸಂಬಂಧಪಟ್ಟ ಹೊಸ ಸಂಸ್ಥೆಗಳ ಸ್ಥಾಪನೆಗಾಗಲಿ, ಇವುಗಳನ್ನು ವಿಸ್ತಾರಿಸುವುದಕ್ಕಾಗಲಿ, ಒಂದಕ್ಕೊಂದು ಕೂಡಿಸುವುದಕ್ಕಾಗಲಿ, ಹಸ್ತಾಂತರ ಮಾಡುವುದಕ್ಕಾಗಲಿ ಕೆಲವು ನಿರ್ದಿಷ್ಟ ಸಂದರ್ಭಗಳಲ್ಲಿ ನಿರ್ದೇಶಕರ ನೇಮಕ ಮಾಡಿಕೊಳ್ಳುವುದಕ್ಕಾಗಲಿ ಸರಕಾರದ ಪರವಾನಿಗೆ ಅವಶ್ಯಕತೆಯಿಲ್ಲ.

೩. ಶೇರುಗಳನ್ನು ಪಡೆದುಕೊಳ್ಳುವುದಕ್ಕಾಗಲಿ, ವರ್ಗಾವಣೆ ಮಾಡುವುದಕ್ಕಾಗಲಿ ಇದ್ದ ನಿರ್ಬಂಧನವನ್ನು ತೆಗೆದು ಹಾಕಲಾಗಿದೆ.

೪. ಏಕಸ್ವಾಮ್ಯ ಮತ್ತು ಪ್ರತಿಬಂಧಿತ ಚಟುವಟಿಕೆಗಳಲ್ಲಿ ಕಂಡುಬರುವ ಏಕಾಧಿಕಾರತ್ವ, ಅನೀತಿ ವ್ಯಾಪಾರಿ ಚಟುವಟಿಕೆ ಅಥವಾ ಬಳಕೆದಾರರಿಂದ ಬಂದ ದೂರುಗಳ ಪರಿಶೀಲನೆಗಾಗಿ ವಿಶೇಷ ಅಧಿಕಾರವುಳ್ಳ ಏಕಸ್ವಾಮ್ಯ ಮತ್ತು ಪ್ರತಿಬಂಧಿತ ವ್ಯಾಪಾರಿ ಚಟುವಟಿಕೆಗಳ ಸಮಿತಿಯನ್ನು ರಚಿಸಲಾಗಿದೆ.

ಜಾಗತೀರಣದ ಸಮಯದಲ್ಲಿ ಈ ಕಾನೂನಿಗೆ ಇಂಥ ತಿದ್ದುಪಡಿ ಅವಶ್ಯಕವಾಗಿತ್ತು.

### ವಿಮರ್ಶೆ

ಈ ಹೊಸ ಕೈಗಾರಿಕಾ ನೀತಿಯು ಪ್ರಾಮಾಣಿಕವಾಗಿ ಮತ್ತು ಯಾವುದೇ ಅಧಿಕಾರಶಾಹಿ ಆಡಳಿತಗಳಿಲ್ಲದೇ ಅನುಷ್ಠಾನಗೊಳ್ಳಬೇಕು. ಈ ವಿಷಯದಲ್ಲಿ ಸರಕಾರ ಕ್ರಮ ಕೈಗೊಂಡಿದೆ ಕೈಗಾರಿಕೆಗಳಿಗೆ ಪರವಾನಿಗೆ ಪದ್ಧತಿಯನ್ನು ತೆಗೆದು ಹಾಕುವ ಮೂಲಕ ಹಾಗೂ ಈ ಕೈಗಾರಿಕೆಗಳಲ್ಲಿ ವಿದೇಶಿ ಬಂಡವಾಳಕ್ಕೆ ಅವಕಾಶ ಮಾಡಿಕೊಟ್ಟಿದೆ. ಉತ್ತಮ ಗುಣ ಮತ್ತು ಬೆಲೆಯನ್ನು ಅವಲಂಬಿಸಿ ಗ್ರಾಹಕ ಅನೇಕ ತಯಾರಿಕಾ ವಸ್ತುಗಳಲ್ಲಿ ತನಗೆ ಬೇಕಾದದ್ದನ್ನು ಆರಿಸುವ ಅವಕಾಶ ಪಡೆಯುತ್ತಾನೆ. ಭಾರತದ ಗ್ರಾಹಕನಿಗೆ ದೊರಕುವ ಅನುಕೂಲ ಇದಾಗಿದೆ.

ದೇಶದ ಕೈಗಾರಿಕೆಗಳಿಗೆ ಅವಕಾಶ, ಸವಾಲು ಆದಾಗ್ಯೂ ಭಾರತದ ಕೈಗಾರಿಕೆಗಳಿಗೆ ಈ ಹೊಸ ಕೈಗಾರಿಕಾ ನೀತಿ ಸಮ್ಮಿಶ್ರವಾಗಿ ಕಾಣುತ್ತಿದೆ. ಆಧುನೀಕರಣಗೊಳಿಸುವ, ಸ್ಪರ್ಧಾತ್ಮಕ ಬೆಲೆಗಳನ್ನು ನಿಗದಿ ಮಾಡುವ ಅವುಗಳ ಸಾಮರ್ಥ್ಯಕ್ಕೆ ಇದು ಸವಾಲನನ್ನೊಡ್ಡುತ್ತದೆ. ಅದೇ ಸಮಯಕ್ಕೆ ಅವುಗಳ ಅದಕ್ಷತಿ ಮತ್ತು ಶೋಷಣೆಯ ಅಭಾಸಗಳಿಗೆ ಬೆದರಿಕೆಯನ್ನು

ಒಡ್ಡುತ್ತವೆ. ದಿಡೀರ್ ಹಣ ಸಂಪಾದನೆಯಲ್ಲಿ ತೊಡಗುವ ಕೈಗಾರಿಕೋದ್ಯಮಗಳ ಬಣ್ಣ ಬಯಲಾಗುತ್ತದೆ ಹಾಗೂ ಅಂಥವರು ತಮ್ಮ ಸ್ಥಾನ ಕಳೆದುಕೊಳ್ಳುತ್ತಾರೆ. ಆಶ್ಚರ್ಯದ ಸಂಗತಿಯೆಂದರೆ, ಕೈಗಾರಿಕೆ ಮತ್ತು ವಾಣಿಜ್ಯವನ್ನು ಪ್ರತಿನಿಧಿಸುವ ಸಂಸ್ಥೆಗಳಲ್ಲಿ ಹೆಚ್ಚಿನವು ಹೊಸ ಕೈಗಾರಿಕಾ ನೀತಿಯನ್ನು ಸ್ವಾಗತಿಸಿವೆ.

ಹೊಸ ಕೈಗಾರಿಕಾ ನೀತಿಯ ಮೇರೆಗೆ ಅತ್ಯಂತ ದೊಡ್ಡ ಪೆಟ್ಟು ತಿನ್ನುವವರೆಂದರೆ ಕಾರ್ಮಿಕ ವರ್ಗಗಳಿಗೆ ಸೇರಿದ ಜನ, ಏಕೆಂದರೆ ಸಧ್ಯದ ಭವಿಷ್ಯದಲ್ಲಿ ಕೈಗಾರಿಕಾ ಅಸ್ವಸ್ಥತೆ ಹೆಚ್ಚಾಗುತ್ತದೆ. ಅಸ್ವಸ್ಥವಾಗಿರುವ ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳನ್ನು ಮುಚ್ಚುವುದರಿಂದ ಕಾರ್ಮಿಕರು ಕೆಲಸ ಕಳೆದುಕೊಳ್ಳುತ್ತಾರೆ. ಆದರೆ ದೀರ್ಘಾವಧಿಯಲ್ಲಿ ಭಾರತದ ಉತ್ಪಾದನಾ ತಳಹದಿ ವಿಸ್ತರಿಸಿದಂತೆ ಭಾರಿ ಪ್ರಮಾಣದ ವಿದೇಶಿ ಬಂಡವಾಳ ಹೂಡಿಕೆಯಾದಂತೆ ಮಾರುಕಟ್ಟೆಯ ಶಕ್ತಿಗಳಿಂದ ನುರಿತ ಹಾಗೂ ಸ್ಪರ್ಧಾತ್ಮಕ ಕಾರ್ಮಿಕರಿಗೆ ಹೆಚ್ಚಿನ ಉದ್ಯೋಗ ವಕಾಶಗಳು ಉಂಟಾಗಬಹುದು. ಆದರೆ ಇದನ್ನು ಭವಿಷ್ಯ ನಿರ್ಧರಿಸಬಹುದು.

ವಿದೇಶಿ ಬಂಡವಾಳ ಹೂಡುವಿಕೆ ಅರ್ಜಿಗಳನ್ನು ಪರಿಶೀಲಿಸಿ ಕ್ರಮ ಕೈಗೊಳ್ಳುವುದಕ್ಕೆ ವಿಶೇಷ ಅಧಿಕಾರವುಳ್ಳ ಮಂಡಳಿಯನ್ನು ರಚಿಸಲಾಗಿದೆ. ಇಂಥ ಸಂಸ್ಥೆ ಅಂತಿಮವಾಗಿ ಮತ್ತೊಂದು ಅಧಿಕಾರಶಾಹಿ ಸಂಸ್ಥೆಯಾಗಿ ಪರಿಣಮಿಸಿ, ಹಿಂದಿನ ಪರವಾನಿಗೆ ಅನುಮತಿ ಆಡಳಿತಕ್ಕೆ ಹೆಸರಾಗಿದ್ದ ವಿಳಂಬ, ಭ್ರಷ್ಟಾಚಾರ ಮತ್ತು ಇತರ ಎಲ್ಲ ತೊಡಕುಗಳನ್ನು ಬಳಸುತ್ತದೇನೋ ಎಂಬ ಭಯವೂ ಇದೆ. ಹೀಗೇನಾದರೂ ಆದರೆ ಆಧುನೀಕರಣ ಭಾರತದ ಮಾರುಕಟ್ಟೆಯಲ್ಲಿ ವಿದೇಶಿ ಉತ್ಪಾದಕರ ಪ್ರದೇಶಕ್ಕೆ ಅವಕಾಶ ಜಾಗತಿಕ ಮಾರುಕಟ್ಟೆಯಲ್ಲಿ ಭರತದ ಪ್ರದೇಶ ಮುಂತಾದವುಗಳನ್ನು ಕುರಿತ ಮಾತಲ್ಲವೂ ಸಾರ್ವಜನಿಕ ಚರ್ಚೆಯಲ್ಲಿ ಬಳಸುವ ಆಕರ್ಷಣೀಯ ಮಾತುಗಳಾಗುತ್ತವೆಯೇ ಹೊರತು ಅಲ್ಪಾವಧಿಯಲ್ಲಾಗಲೀ, ದೀರ್ಘಾವಧಿಯಲ್ಲಾಗಲೀ ಏನನ್ನೂ ಸಾಧಿಸಲಾಗಲಿಲ್ಲ.

## ೪.೩ ಸಣ್ಣ ಪ್ರಮಾಣದ ಕೈಗಾರಿಕೆಗಳ ಉತ್ತೇಜನ

### ೪.೩.೧. ಸಣ್ಣ ಪ್ರಮಾಣದ ಕೈಗಾರಿಕೆಗಳ ಉತ್ತೇಜನ ನೀತಿಯ ಉದ್ದೇಶಗಳು

ಭಾರತದ ಅರ್ಥವ್ಯವಸ್ಥೆಯಲ್ಲಿ ಸಣ್ಣ ಪ್ರಮಾಣದ ಕೈಗಾರಿಕೆಗಳು ಯಾವಾಗಲೂ ಮಹತ್ತರವಾದ ಸ್ಥಾನವನ್ನು ಆಕ್ರಮಿಸಿಕೊಂಡಿವೆ. ಹೆಚ್ಚಿನ ಸಂಖ್ಯೆಯ ಉದ್ಯೋಗಗಳ ನಿರ್ಮಾಣ ಮತ್ತು ಗ್ರಾಮೀಣ ಸಮಾಜದ ಸ್ವಾವಲಂಬನೆಗೆ ನೆರವು ನೀಡುವುದರ ಮೂಲಕ ಈ ಕೈಗಾರಿಕೆಗಳು ಆರ್ಥಿಕಾಭಿವೃದ್ಧಿಗೆ ಗಮನಾರ್ಹವಾದ ಕೊಡುಗೆ ನೀಡುತ್ತಿವೆ. ಈ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಸಣ್ಣ ಪ್ರಮಾಣದ ಕೈಗಾರಿಕೆಗಳಿಗೆ ಉತ್ತೇಜನ ನೀಡುವುದು ಅತ್ಯಂತ ಅವಶ್ಯಕವಿದೆ. ಯಾಕೆ ಉತ್ತೇಜನದ ಅವಶ್ಯಕವಿದೆ ಎಂಬುದನ್ನು ಕೆಳಗಿನ ಅಂಶಗಳು ಸ್ಪಷ್ಟಪಡಿಸುತ್ತವೆ.

## ೧. ಉದ್ಯೋಗ ನಿರ್ಮಾಣ

ಸಣ್ಣ ಪ್ರಮಾಣದ ಕೈಗಾರಿಕೆಗಳು ಶ್ರಮಸಾಂದ್ರ ಕೈಗಾರಿಕೆಗಳಾಗಿವೆ. ಅತಿ ಕಡಿಮೆ ಬಂಡವಾಳದಲ್ಲಿ ಹೆಚ್ಚಿನ ಉದ್ಯೋಗವಕಾಶಗಳನ್ನು ಇವು ನಿರ್ಮಾಣಮಾಡುತ್ತವೆ.

ಭಾರತದಲ್ಲಿ ನಿರುದ್ಯೋಗ ಮತ್ತು ಅರೆ ಉದ್ಯೋಗ ದೊಡ್ಡ ಪ್ರಮಾಣದಲ್ಲಿದೆ. ಕೋಟಿಗಟ್ಟಲೆ ಜನರು ಭಾರತದಲ್ಲಿಂದು ಉದ್ಯೋಗವಿಲ್ಲದೆ ಅಲೆದಾಡುತ್ತಿದ್ದಾರೆ. ಸಣ್ಣ ಕೈಗಾರಿಕೆಗಳಿಗೆ ಉತ್ತೇಜನ ನೀಡಿದರೆ ಅಧಿಕ ಪ್ರಮಾಣದಲ್ಲಿ ಉದ್ಯೋಗಗಳನ್ನು ನಿರ್ಮಿಸಿ ಸರ್ವವ್ಯಾಪಿಯಾಗಿ ತಾಂಡವಾಡುತ್ತಿರುವ ನಿರುದ್ಯೋಗ ಸಮಸ್ಯೆಯನ್ನು ತಗ್ಗಿಸಬಹುದು.

ಭಾರತದಲ್ಲಿದುಡಿಯುವ ಕೈಗಳು ಹೆಚ್ಚಿರುವುದರಿಂದ ಸಣ್ಣ ಕೈಗಾರಿಕೆಗಳು ಕಡಿಮೆ ಬಂಡವಾಳದಲ್ಲಿ ಹೆಚ್ಚು ಜನಕ್ಕೆ ಉದ್ಯೋಗವಕಾಶ ಒದಗಿಸಬಲ್ಲವು. ೧೯೭೩-೭೪ರಲ್ಲಿ ೩೯.೭ ಲಕ್ಷ ಜನರಿಗೆ ಉದ್ಯೋಗವಕಾಶಗಳನ್ನು ಈ ಕೈಗಾರಿಕೆಗಳು ಒದಗಿಸಿದ್ದರೆ ಅದು ೨೦೦೦-೦೧ರಲ್ಲಿ ೧೮೬ ಲಕ್ಷಗಳಿಗೂ ಮತ್ತು ೨೦೦೩-೦೪ರಲ್ಲಿ ಸುಮಾರು ೨೦೦೪ ಲಕ್ಷಗಳಿಗೆ ಹೆಚ್ಚಿದೆ. ಸಣ್ಣ ಪ್ರಮಾಣದ ಬಂಡವಾಳ ಮತ್ತು ಸ್ಥಳೀಯವಾಗಿ ಲಭ್ಯವಿರುವ ಇತರ ಸಂಪನ್ಮೂಲಗಳೊಂದಿಗೆ ರಾಷ್ಟ್ರದ ಎಲ್ಲ ಭಾಗದಲ್ಲಿಯೂ ಸಣ್ಣ ಪ್ರಮಾಣದ ಕೈಗಾರಿಕೆಗಳನ್ನು ಸ್ಥಾಪಿಸಬಹುದಾಗಿದೆ. ಇದರಿಂದ ಉದ್ಯೋಗವಕಾಶಗಳೂ ಅಧಿಕವಾಗುತ್ತವೆ. ಹೀಗೆ ಸಣ್ಣ ಪ್ರಮಾಣದ ಕೈಗಾರಿಕೆಗಳಿಗೆ ಉತ್ತೇಜನ ನೀಡುವುದರಿಂದ ನಿರುದ್ಯೋಗಿಗಳಿಗೆ ಅರೆಉದ್ಯೋಗಿಗಳಿಗೆ, ಋತುಮಾನದ ಮತ್ತು ಮರೆಮಾಚಿದ ನಿರುದ್ಯೋಗಿಗಳಿಗೆ, ಕುಶಲ, ಅರೆಕುಶಲ ಮತ್ತು ಸಾಮಾನ್ಯ ಕೆಲಸಗಾರರೆಲ್ಲರಿಗೂ ಉದ್ಯೋಗಗಳನ್ನು ಒದಗಿಸುತ್ತವೆ.

## ೨. ರಫ್ತು ಉತ್ತೇಜನ

ವಿದೇಶಿ ವಿನಿಮಯ ಗಳಿಕೆಯಲ್ಲಿ ಸಣ್ಣ ಪ್ರಮಾಣದ ಕೈಗಾರಿಕೆಗಳು ಉತ್ಪಾದಿಸಿದ ವಸ್ತುಗಳ ಪಾತ್ರ ಅತ್ಯಂತ ಮಹತ್ವದ್ದಾಗಿದೆ. ಸಿದ್ಧ ಉಡುಪುಗಳು, ಚರ್ಮದ ವಸ್ತುಗಳು, ರೇಷ್ಮೆ ಬಟ್ಟೆಗಳು, ರತ್ನಗಂಬಳಿ, ಜಮಖಾನೆ, ವಜ್ರಾಭರಣಗಳು, ಎಂಜಿನಿಯರಿಂಗ್ ವಸ್ತುಗಳು, ಕರಕುಶಲ ವಸ್ತುಗಳು, ವೈದ್ಯಕೀಯ ಸಾಧನಗಳು, ದ್ವಿಚಕ್ರ ವಾಹನಗಳು ಮತ್ತು ಇನ್ನು ಅನೇಕ ಬಗೆಯ ವಸ್ತುಗಳು ರಫ್ತಾಗುತ್ತವೆ. ಕೆಲವು ವಸ್ತುಗಳು ನೇರವಾಗಿ ರಫ್ತಾದರೆ ಇನ್ನುಳಿದವುಗಳು ಇತರ ವಸ್ತುಗಳೊಂದಿಗೆ ಸೇರಿಕೊಂಡು ಪರೋಕ್ಷವಾಗಿ ರಫ್ತಾಗುತ್ತವೆ. ೨೦೦೨-೦೩ರಲ್ಲಿ ಈ ಕೈಗಾರಿಕೆಗಳು ೮೯೦೧೩ ಕೋಟಿ ರೂ.ಮೌಲ್ಯದ ವಸ್ತುಗಳನ್ನು ರಫ್ತು ಮಾಡಿವೆ. ಇದು ದೇಶದ ಒಟ್ಟು ರಫ್ತುಗಳ ಶೇಕಡ ೨೦.೭ ರಷ್ಟಾಗುತ್ತದೆ. ಹೀಗೆ ಸಣ್ಣ ಕೈಗಾರಿಕೆಗಳ ತಮ್ಮ ವಸ್ತುಗಳ ನಿರ್ಯಾತದಿಂದ ರಾಷ್ಟ್ರಕ್ಕೆ ಅತ್ಯವಶ್ಯಕವಾಗಿ ಬೇಕಾಗುವ ಅಮೂಲ್ಯವಾದ ವಿದೇಶಿ ವಿನಿಮಯವನ್ನು ಸಂಪಾದಿಸುತ್ತವೆ. ಈ ದಿಶೆಯಿಂದಲೂ ಸಹ ಸಣ್ಣ ಕೈಗಾರಿಕೆಗಳಿಗೆ ಭಾರತದಲ್ಲಿ ಉತ್ತೇಜನ ಕೊಡುವುದು ಅವಶ್ಯಕವಾಗಿದೆ.

### ೩. ಉತ್ಪಾದನೆ ಮತ್ತು ಬಂಡವಾಳ ಹೂಡಿಕೆಗಳಲ್ಲಿ ಹೆಚ್ಚಳ

ಬಂಡವಾಳದ ತೀವ್ರ ಕೊರತೆಯಿರುವ ಭಾರತ ಅರ್ಥವ್ಯವಸ್ಥೆಯಲ್ಲಿ ಸಣ್ಣ ಪ್ರಮಾಣದ ಕೈಗಾರಿಕೆಗಳಿಗೆ ಉತ್ತೇಜನ ನೀಡುವುದು ತೀವ್ರ ಅವಶ್ಯಕವಾಗಿದೆ. ಈ ಉದ್ದಿಮೆಗಳನ್ನು ಅತ್ಯಲ್ಪ ಬಂಡವಾಳವನ್ನು ಹೂಡುವುದರ ಮೂಲಕ ಯಾರು ಬೇಕಾದರೂ ಆರಂಭಿಸ ಬಹುದು. ಈ ಕೈಗಾರಿಕೆಗಳ ಸ್ಥಾಪನೆಗೆ ಹೆಚ್ಚಿನ ಬಂಡವಾಳದ ಕ್ರೋಢೀಕರಣ ಮತ್ತು ಹೂಡಿಯ ಭಾರವಿರುವುದಿಲ್ಲ. ದೊಡ್ಡ ಪ್ರಮಾಣದ ಕೈಗಾರಿಕೆಗಳನ್ನು ಹೆಚ್ಚು ಬಂಡವಾಳವುಳ್ಳ ಉದ್ಯಮಿಗಳು ಮಾತ್ರ ಸ್ಥಾಪಿಸುವರು. ಆದರೆ ಸಣ್ಣ ಪ್ರಮಾಣದ ಕೈಗಾರಿಕೆಗಳನ್ನು ಸಣ್ಣ ಉದ್ಯೋಗಸ್ಥರೂ, ಮಧ್ಯಮವರ್ಗದವರೂ ಪ್ರಾರಂಭಿಸುವರು. ಈ ಕೈಗಾರಿಕೆಗಳು ಹೆಚ್ಚು ಹೆಚ್ಚಿನ ಪ್ರಮಾಣದಲ್ಲಿ ಸ್ಥಾಪಿತವಾಗುವುದರಿಂದ ಉತ್ಪಾದನೆ ಅಧಿಕಗೊಂಡು ಜನಸಾಮಾನ್ಯರ ಆದಾಯವೂ ಅಧಿಕವಾಗುವುದು. ಜನರ ಜೀವನ ಮಟ್ಟದಲ್ಲಿ ಸುಧಾರರಣೆ ಯಾಗುವುದು. ಇತ್ತೀಚಿನ ದಿನಗಳಲ್ಲಿ ಸಣ್ಣ ಕೈಗಾರಿಕೆಗಳ ಉತ್ಪಾದನೆಯಲ್ಲಿ ಸಾಕಷ್ಟು ಹೆಚ್ಚಳವಾಗಿದೆ. ಇಂದು ಸಣ್ಣ ಪ್ರಮಾಣದ ಕೈಗಾರಿಕೆಗಳ ಸರಾಸರಿ ಬೆಳವಣಿಗೆ ಶೇಕಡ ೭.೪೪ ಇದೆ. ೨೦೦೪-೦೫ರಲ್ಲಿ ಈ ಕೈಗಾರಿಕೆಗಳು ೪೮೯೦೨೦ ಕೋಟಿ ರೂ.ಮೌಲ್ಯದ ವಸ್ತುಗಳನ್ನು ಉತ್ಪಾದಿಸಿವೆ.

ಜನಸಾಮಾನ್ಯರೂ ಸಹ ಈ ಕೈಗಾರಿಕೆಗಳನ್ನು ಸ್ಥಾಪಿಸಬಹುದಾಗಿದ್ದರಿಂದ ಅವರ ಉಳಿತಾಯವು ಬಂಡವಾಳ ಹೂಡಿಕೆಯಾಗಿ ಪರಿವರ್ತನೆಗೊಳ್ಳುತ್ತದೆ. ಇದರಿಂದ ಸಹಜವಾಗಿ ಬಂಡವಾಳ ಹೂಡಿಕೆಯಲ್ಲಿ ಹೆಚ್ಚಳವಾಗುತ್ತದೆ.

ಹೀಗೆ ಸಣ್ಣ ಪ್ರಮಾಣದ ಕೈಗಾರಿಕೆಗಳ ಬೆಳವಣಿಗೆ ಬಂಡವಾಳ ಹೂಡುವುದರಿಂದ ಉತ್ಪಾದನೆಯ ಪ್ರಮಾಣ ಮತ್ತು ಬಂಡವಾಳ ಹೂಡಿಕೆಗಳಲ್ಲಿ ಹೆಚ್ಚಳ ಕಂಡುಬರುತ್ತದೆ.

### ೪. ಸ್ಥಳೀಯ ಸಂಪನ್ಮೂಲಗಳ ಉಪಯೋಗ

ಸ್ಥಳೀಯವಾಗಿ ದೊರೆಯಬಹುದಾದ ಅನೇಕ ರೀತಿಯ ಸಂಪನ್ಮೂಲಗಳ ಹಿತಕರ ಬಳಕೆಗೆ ಈ ಕೈಗಾರಿಕೆಗಳು ಸಹಾಯಕಾರಿಯಾಗಿವೆ. ಈ ಕೈಗಾರಿಕೆಗಳು ಬೆಳೆಯದಿದ್ದರೆ ಸುಪ್ತವಾಗಿರುವ ಮತ್ತು ಗುಪ್ತವಾಗಿರುವ ಸಂಪನ್ಮೂಲಗಳು ನಿರರ್ಥಕವಾಗುತ್ತವೆ. ಉದಾಹರಣೆಗೆ ಹಲವಾರು ರೀತಿಯ ಕಚ್ಚಾ ವಸ್ತುಗಳು, ಕೂಡಿಟ್ಟ ಹಣ, ಕುಟುಂಬದ ಸದಸ್ಯರ ಕೆಲಸ, ಸತ್ಥಳೀಯ ವ್ಯಕ್ತಿಗಳ ಕಾರ್ಯ ಕುಶಲತೆ, ಉದ್ದಿಮೆದಾರಿಕೆ ಇತ್ಯಾದಿ. ಈ ಎಲ್ಲ ಸಂಪನ್ಮೂಲಗಳು ರಾಷ್ಟ್ರಾದ್ಯಂತ ಸಣ್ಣ ಪ್ರಮಾಣದಲ್ಲಿ ಹಂಚಿಹೋಗಿರುವದರಿಂದ ಅವು ದೊಡ್ಡ ಪ್ರಮಾಣದ ಕೈಗಾರಿಕೆಗಳಲ್ಲಿ ಬಳಕೆಯಾಗುತ್ತಿಲ್ಲ. ಏಕೆಂದರೆ ದೊಡ್ಡ ಪ್ರಮಾಣದ ಕೈಗಾರಿಕೆಗಳಿಗೆ ದೊಡ್ಡ ಪ್ರಮಾಣದಲ್ಲಿ ಸಂಪನ್ಮೂಲಗಳು ಬೇಕಾಗುತ್ತವೆ. ಆದ್ದರಿಂದ ಸಣ್ಣ ಪ್ರಮಾಣಗಳ ಕೈಗಾರಿಕೆಗಳು ಬೆಳೆದುಬಂದರೆ ಸಣ್ಣ ಪ್ರಮಾಣದಲ್ಲಿ ಲಭ್ಯವಾಗಿರುವ ಎಲ್ಲ ವಿಧದ ಸಂಪನ್ಮೂಲಗಳನ್ನು ಬಳಸಿಕೊಂಡು ಉತ್ಪಾದನೆಯನ್ನು ಹೆಚ್ಚಿಸಿಕೊಳ್ಳಬಹುದು, ಜೀವನ ಮಟ್ಟವನ್ನು ಹೆಚ್ಚಿಸಿಕೊಳ್ಳಬಹುದು. ಸಂಪನ್ಮೂಲಗಳನ್ನು ಸರಿಯಾಗಿ ಉಪಯೋಗಿಸಿ ಕೊಳ್ಳುವುದರಲ್ಲಿ ಜಪಾನ್ ರಾಷ್ಟ್ರ ಒಂದು ಮಾದರಿಯಾಗಿದೆ.

೫. ಇತರ ಅಂಶಗಳು

ಭಾರತದ ಅರ್ಥವ್ಯವಸ್ಥೆಯಲ್ಲಿ ಮೇಲಿನ ಅಂಶಗಳಲ್ಲದೇ ಇತರೇ ಅಂಶಗಳೂ ಸಹ ಪ್ರಮುಖ ಪಾತ್ರ ವಹಿಸುತ್ತಿದ್ದು ಸಣ್ಣ ಪ್ರಮಾಣದ ಕೈಗಾರಿಕೆಗಳನ್ನು ಅಭಿವೃದ್ಧಿ ಪಡಿಸುವುದು ಅವಶ್ಯಕವಾಗಿದೆ. ಅವು ಕೆಳಗಿನಂತಿವೆ.

ಅ. ಸಂಪತ್ತಿನ ಹಂಚಿಕೆಯಲ್ಲಿ ಸಮಾನತೆ

ಸಣ್ಣ ಪ್ರಮಾಣದ ಕೈಗಾರಿಕೆಗಳನ್ನು ಸಣ್ಣ ಉದ್ಯೋಗಸ್ಥರೂ ಮತ್ತು ಮಧ್ಯಮ ವರ್ಗದವರೂ ಪ್ರಾರಂಭಿಸಬಹುದು. ನೂರಾರು ರೂಪಾಯಿಗಳಲ್ಲಿಯೇ ಗೃಹ ಕೈಗಾರಿಕೆಗಳನ್ನು ಪ್ರಾರಂಭಿಸಬಹುದು. ಇದರಿಂದಾಗಿ ಜನಸಾಮಾನ್ಯರಲ್ಲಿ ಈ ಕೈಗಾರಿಕೆಗಳಿಂದ ಬರುವ ಉತ್ಪನ್ನ ಹಂಚಲ್ಪಡುತ್ತದೆ. ಆದ್ದರಿಂದ ಸಂಪತ್ತಿನ ಸಮಾನತೆಯನ್ನು ಸಾಧಿಸುವುದರಲ್ಲಿ ಈ ಕೈಗಾರಿಕೆಗಳು ಬಹಳ ಸಹಾಯಕಾರಿಯಾಗಿವೆ.

ಆ. ಕೈಗಾರಿಕೆಗಳ ವಿಕೇಂದ್ರೀಕರಣಕ್ಕೆ ಸಹಾಯ

ಸಧ್ಯಕ್ಕೆ ಭಾರತದಲ್ಲಿ ಕೈಗಾರಿಕೆಗಳೆಲ್ಲವೂ ಕೆಲವೇ ಪ್ರದೇಶಗಳಲ್ಲಿ ಕೇಂದ್ರೀಕೃತವಾಗಿವೆ. ಮುಂಬೈ, ಕೊಲ್ಕತ್ತಾ, ಅಹಮ್ಮದಾಬಾದ್, ಚೆನ್ನೈ, ಬೆಂಗಳೂರು ಮುಂತಾದ ಕೆಲವು ಪ್ರದೇಶಗಳಲ್ಲಿ ಮಾತ್ರ ಕೈಗಾರಿಕೆಗಳನ್ನು ಸ್ಥಾಪಿಸಲಾಗಿದೆ. ಆ ಪ್ರದೇಶಗಳು ಮಾತ್ರ ಕೈಗಾರಿಕೆಯ ದೃಷ್ಟಿಯಿಂದ ಮುಂದುವರೆದಿದ್ದು, ದೇಶದ ಇತರ ಕಡೆಗಳಲ್ಲಿ ಕೈಗಾರಿಕೆಗಳು ಬೆಳೆದಿಲ್ಲ, ಆದರೆ ದೇಶದ ಎಲ್ಲ ಪ್ರದೇಶಗಳೂ ಪ್ರಗತಿ ಹೊಂದುವುದು ಅವಶ್ಯಕ. ಸಣ್ಣ ಕೈಗಾರಿಕೆಗಳನ್ನು ಸಣ್ಣ ನಗರಗಳಲ್ಲೂ, ಗ್ರಾಮೀಣ ಪ್ರದೇಶಗಳಲ್ಲಿ ಸ್ಥಾಪಿಸಬಹುದಾಗಿದೆ. ಇದರಿಂದ ಪ್ರಾದೇಶಿಕ ಅಸಮತೋಲನೆಯನ್ನು ಹೋಗಲಾಡಿಸಬಹುದಾಗಿದೆ.

ಇ. ಉದ್ಯಮಶೀಲತೆಯ ಬೆಳವಣಿಗೆ

ಸಣ್ಣ ಪ್ರಮಾಣದ ಕೈಗಾರಿಕೆಗಳ ಸ್ಥಾಪನೆಯು ಸಾಮಾನ್ಯವಾಗಿ ಎಲ್ಲ ಜನರಿಂದಲೂ ಸಾಧ್ಯವಿರುವುದರಿಂದ ಇವು ಉದ್ಯಮ ಶೀಲತೆಯ ಬೆಳವಣಿಗೆಗೆ ಅವಕಾಶ ನೀಡತ್ತವೆ.

ಈ. ಕೃಷಿಗೆ ಸಹಾಯ

ಭಾರತ ಕೃಷಿ ಪ್ರಧಾನ ರಾಷ್ಟ್ರ ಗೃಹ ಮತ್ತು ಸಣ್ಣ ಕೈಗಾರಿಕೆಗಳು ತಮ್ಮ ವಸ್ತುಗಳ ಉತ್ಪಾದನೆಯಿಂದ ಕೃಷಿಗೆ ವಿಶೇಷವಾದ ಸಹಾಯ ಸಲ್ಲಿಸುತ್ತವೆ. ಬಡಿಗರ, ಕಮ್ಮಾರರ, ಹಗ್ಗ ಹೊಸೆಯುವವರ ಮತ್ತು ಬುಟ್ಟಿಯನ್ನು ಹೆಣೆಯುವವರ ಸಹಾಯವಿಲ್ಲದೇ ರೈತರು ತಮ್ಮ ಸಾಗುವಳಿ ಮಾಡಲು ಸಾಧ್ಯವಿಲ್ಲ. ಇವರೆಲ್ಲರ ಸೇವೆಗಳೂ ಈ ಕೈಗಾರಿಕೆಗಳ ಕಕ್ಷೆಯಲ್ಲಿ ಬರುತ್ತವೆ. ಇನ್ನು ಅನೇಕ ಸಣ್ಣ ಕೈಗಾರಿಕೆಗಳು ಕೃಷಿ ಅವಲಂಬಿತ ಕೈಗಾರಿಕೆಗಳಾಗಿವೆ. ಖಂಡಸಾರಿ, ಹಿಟ್ಟಿನ ಗಿರಿಣಿಗಳು, ಬೆಲ್ಲ ತಯಾರಿಕೆ ಇವೆಲ್ಲವೂ ಕೃಷಿ ಅವಲಂಬಿತ ಕೈಗಾರಿಕೆಯಾಗಿದ್ದು ಕೃಷಿಗೆ ಪರೋಕ್ಷವಾಗಿ ಸಹಾಯ ಮಾಡುತ್ತವೆ.

ಉ. ದೊಡ್ಡ ಕೈಗಾರಿಕೆಗಳಿಗೆ ಸಹಾಯ

ಅನೇಕ ಸಣ್ಣ ಕೈಗಾರಿಕೆಗಳು ದೊಡ್ಡ ಕೈಗಾರಿಕೆಗಳಿಗೆ ಬೇಕಾಗುವ ಸಹಸ್ರಾರು ಸಣ್ಣ ಬಿಡಿಭಾಗಗಳನ್ನು ತಯಾರಿಸಿ ಸಹಾಯ ಮಾಡುತ್ತವೆ. ಉದಾಹರಣೆಗೆ ಮೋಟರ ವಾಹನಗಳು, ಟ್ರಾನ್ಸಿಸ್ಟರ್, ವಿದ್ಯುತ್ ಕೈಗಾರಿಕೆಗಳು ಕಬ್ಬಿಣ, ಉಕ್ಕಿನ ಕೈಗಾರಿಕೆಗಳು ಮುಂತಾದ ನೂರಾರು ಕೈಗಾರಿಕೆಗಳಿಗೆ ಬೇಕಾಗುವ ಬಿಡಿಭಾಗಗಳನ್ನು ಈ ಕೈಗಾರಿಕೆಗಳು ಒದಗಿಸುತ್ತವೆ.

ಊ. ಗ್ರಾಮೀಣ ಸ್ವಯಂ ಸಾಮರ್ಥ್ಯದ ಸಾಧನೆ

ಗೃಹ ಮತ್ತು ಸಣ್ಣ ಪ್ರಮಾಣದ ಕೈಗಾರಿಕೆಗಳು ಅಗತ್ಯವಾದ ಹಲವಾರು ಸರಕುಗಳನ್ನು ಉತ್ಪಾದಿಸುವುದರಿಂದ, ಇವುಗಳ ಬೆಳವಣಿಗೆಯ ಮೂಲಕ ಗ್ರಾಮೀಣ ಪ್ರದೇಶದಲ್ಲಿ ಸ್ವಾವಲಂಬನೆ ಮತ್ತು ಸ್ವಯಂ ಸಾಮರ್ಥ್ಯವನ್ನು ಸಾಧಿಸಲು ಉತ್ತಮ ಅವಕಾಶ ದೊರೆಯುತ್ತದೆ.

ಋ. ಆಮದು ಅನಗತ್ಯ

ಹೆಚ್ಚಿನ ತಾಂತ್ರಿಕತೆಯ ನೆರವಿಲ್ಲದೇ ಉತ್ಪಾದಿಸುವ ಸಣ್ಣ ಕೈಗಾರಿಕೆಗಳಿಗೆ ವಿದೇಶಿ ಸಹಾಯದ ಅವಶ್ಯಕತೆಯಿರುವುದಿಲ್ಲ. ಇದರಿಂದಾಗಿ ಹೊರ ದೇಶದಿಂದ ಬಂಡವಾಳ ತರಿಸಿಕೊಳ್ಳುವ ಅಗತ್ಯವಿರುವುದಿಲ್ಲ.

ೠ. ರಾಷ್ಟ್ರೀಯ ಸ್ವಾಯತ್ತತೆ

ಸಣ್ಣ ಕೈಗಾರಿಕೆಗಳು ಬದುಕಲು ಅತಿಮುಖ್ಯವಾದ ವಸ್ತುಗಳನ್ನು ಉತ್ಪಾದಿಸುವುದರಿಂದ ಹೆಚ್ಚಿನ ಬೇಡಿಕೆಯನ್ನು ಪೂರೈಸುತ್ತದೆ. ಇದರಿಂದ ನಾವು ರಾಷ್ಟ್ರೀಯ ಸ್ವಾಯತ್ತತೆ ಕಾಪಾಡಿಕೊಳ್ಳಬೇಕಾಗಿದೆ.

ಎ. ಶೀಘ್ರ ಪ್ರತಿಫಲ

ಸಣ್ಣ ಕೈಗಾರಿಕೆಗಳು ಶೀಘ್ರದಲ್ಲಿ ಪ್ರತಿಫಲ ಕೊಡವ ಕೈಗಾರಿಕೆಗಳು. ಭಾರತ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರವಾಗಿರುವುದರಿಂದ ದೀರ್ಘಕಾಲದ ಪ್ರತಿಫಲವನ್ನು ನಿರೀಕ್ಷಿಸಲಾಗದೇ ಶೀಘ್ರ ಪ್ರತಿಫಲವನ್ನು ಅಪೇಕ್ಷಿಸುವುದರಿಂದ ಹಾಗೂ ಅನುಭೋಗಿಗಳಿಗೆ ನಿರಂತರವಾಗಿ ಬೇಡಿಕೆಗಳನ್ನು ಪೂರೈಸಲು ಸಣ್ಣ ಕೈಗಾರಿಕೆಗಳ ಅಗತ್ಯವಿದೆ.

ಏ. ಸಮಾಜವಾದಿ ಮಾದರಿಯ ಸಮಾಜದ ನಿರ್ಮಾಣ

ಗೃಹ ಮತ್ತು ಸಣ್ಣ ಕೈಗಾರಿಕೆಗಳು ಬಡವ ಮತ್ತು ಶ್ರೀಮಂತರ ನಡುವಿನ ಅಂತರವನ್ನು ಕಡಿಮೆಗೊಳಿಸುತ್ತವೆ ಹಾಗೂ ಪ್ರತಿಯೊಬ್ಬರಿಗೂ ಕೆಲಸ ಮಾಡುವುದಕ್ಕೆ ಸಮಾನವಾದ ಅವಕಾಶವನ್ನು ಒದಗಿಸಿ ಸಮಾಜವಾದಿ ಮಾದರಿಯ ಸಮಾಜದ ನಿರ್ಮಾಣಕ್ಕೆ ಅನುಕೂಲ ಮಾಡಿಕೊಡುತ್ತವೆ.

ಒಟ್ಟಿನಲ್ಲಿ ಹೇಳಬೇಕೆಂದರೆ ಕಡಿಮೆ ಬಂಡವಾಳ ಮತ್ತು ಅಧಿಕ ಕಾರ್ಮಿಕರುಳ್ಳ ಭಾರತ ದಂತಹ ರಾಷ್ಟ್ರದಲ್ಲಿ ಸಣ್ಣ ಕೈಗಾರಿಕೆಗಳಿಗೆ ಉತ್ತೇಜನ ನೀಡುವುದು ತೀರ ಅತ್ಯವಶ್ಯಕವಿದೆ.

### ೪.೩.೨. ಸಣ್ಣ ಪ್ರಮಾಣದ ಕೈಗಾರಿಕೆಗಳ ಸಮಸ್ಯೆಗಳು

ಸಣ್ಣ ಪ್ರಮಾಣದ ಕೈಗಾರಿಕೆಗಳು ನಮ್ಮ ದೇಶದ ಅರ್ಥವ್ಯವಸ್ಥೆಯಲ್ಲಿ ಇಷ್ಟೊಂದು ಪ್ರಮುಖ ಪಾತ್ರ ವಹಿಸಿದ್ದರೂ ಅವುಗಳ ಈಗಿನ ಪರಿಸ್ಥಿತಿ ತೃಪ್ತಿಕರವಾಗಿಲ್ಲ. ಒಂದಾನೊಂದು ಕಾಲದಲ್ಲಿ ಪ್ರಸಿದ್ಧವಾಗಿದ್ದ ಅನೇಕ ಕೈಗಾರಿಕೆಗಳು ಈಗ ಮಾಯವಾಗಿವೆ. ಇನ್ನು ಕೆಲವು ಕ್ಷೀಣಿಸುತ್ತಿವೆ. ಮತ್ತೆ ಕೆಲವು ಜೀವಿಸುವುದಕ್ಕಾಗಿ ಕಷ್ಟಕರವಾದ ಹೋರಾಟವನ್ನು ನಡೆಸುತ್ತಿವೆ. ಪಂಚವಾರ್ಷಿಕ ಯೋಜನೆಗಳ ಮೂಲಕ ಸಣ್ಣ ಕೈಗಾರಿಗೆಳ ಅಭಿವೃದ್ಧಿಗಾಗಿ ಕ್ರಮ ಕೈಗೊಂಡಿದ್ದರೂ ಅವುಗಳ ಪ್ರಗತಿ ನಿರೀಕ್ಷಿಸಿದಷ್ಟು ಆಗಿಲ್ಲ. ಅವು ಅನೇಕ ಸಮಸ್ಯೆಗಳನ್ನು ಎದುರಿಸುತ್ತಿವೆ. ಅವುಗಳನ್ನು ಕೆಳಗೆ ವಿವರಿಸಲಾಗಿದೆ.

#### ೧. ಕಚ್ಚಾ ವಸ್ತುಗಳ ಅಭಾವ

ಸಣ್ಣ ಪ್ರಮಾಣದ ಕೈಗಾರಿಗೆಳಿಗೆ ಬೇಕಾಗುವ ಕಚ್ಚಾ ವಸ್ತುಗಳು ಸರಿಯಾದ ಪ್ರಮಾಣದಲ್ಲಿ, ಸರಿಯಾದ ಗುಣಮಟ್ಟದಲ್ಲಿ ಮತ್ತು ಸರಿಯಾದ ಕಾಲದಲ್ಲಿ ದೊರೆಯುವುದಿಲ್ಲ. ಸರಿಯಾದ ಪ್ರಮಾಣದಲ್ಲಿ ಮತ್ತು ಸರಿಯಾದ ಕಾಲದಲ್ಲಿ ಕಚ್ಚಾ ವಸ್ತುಗಳು ದೊರೆಯದಿದ್ದಾಗ ಲಭ್ಯವಿರುವಷ್ಟೇ ಕಚ್ಚಾ ವಸ್ತುಗಳನ್ನು ಬಳಸಿಕೊಳ್ಳಬೇಕಾಗುತ್ತದೆ. ಇದರಿಂದ ಸಣ್ಣ ಕೈಗಾರಿಕೆಗಳಿಗೆ ತಮ್ಮ ಸಂಪೂರ್ಣ ಉತ್ಪಾದನಾ ಸಾಮರ್ಥ್ಯವನ್ನು ಬಳಸಿಕೊಳ್ಳಲು ಸಾಧ್ಯವಾಗುತ್ತಿಲ್ಲ. ಇದರಿಂದ ಸಹಜವಾಗಿ ಉತ್ಪಾದನೆ ಕುಂಠಿತಗೊಂಡು ಉತ್ಪಾದನಾ ವೆಚ್ಚ ಹೆಚ್ಚಾಗಿ ಅವುಗಳ ಬೆಲೆಗಳು ದುಬಾರಿಯಾಗುತ್ತವೆ. ಸಾಕಷ್ಟು ಪ್ರಮಾಣದಲ್ಲಿ ಮತ್ತು ಸರಿಯಾದ ಕಾಲದಲ್ಲಿ ಕಚ್ಚಾ ವಸ್ತುಗಳು ದೊರೆಯದಿದ್ದಾಗ ಒಮ್ಮೊಮ್ಮೆ ಕಳಪೆ ಗುಣಮಟ್ಟದ ಕಚ್ಚಾ ವಸ್ತುಗಳನ್ನೆ ಬಳಸಬೇಕಾಗುತ್ತದೆ. ಇದರಿಂದಾಗಿ ಸಣ್ಣ ಪ್ರಮಾಣದ ಕೈಗಾರಿಕೆಗಳು ಉತ್ಪಾದಿಸುವ ವಸ್ತುಗಳು ಕಳಪೆ ಗುಣಮಟ್ಟದ್ದಾಗುತ್ತವೆ.

#### ೨. ವಿದ್ಯುಚ್ಛಕ್ತಿಯ ಸಮಸ್ಯೆ

ಸಣ್ಣ ಪ್ರಮಾಣದ ಕೈಗಾರಿಕೆಗಳು ಎದುರಿಸುತ್ತಿರುವ ಸಮಸ್ಯೆಗಳಲ್ಲಿ ವಿದ್ಯುಚ್ಛಕ್ತಿಯ ಕೊರತೆ ಅತ್ಯಂತ ಪ್ರಮುಖವಾಗಿದೆ. ವಿದ್ಯುಚ್ಛಕ್ತಿಯ ಬಳಕೆಯಿಲ್ಲದೇ ವಸ್ತುಗಳ ಉತ್ಪಾದನೆ ಅಸಾಧ್ಯ ಅನ್ನುವ ಮಟ್ಟಿಗೆ ವಿದ್ಯುಚ್ಛಕ್ತಿ ತನ್ನ ಪ್ರಾಮುಖ್ಯತೆಯನ್ನು ಬೆಳೆಸಿಕೊಂಡಿದೆ. ಭಾರತ ಇಂದು ತೀವ್ರ ವಿದ್ಯುಚ್ಛಕ್ತಿಯ ಕೊರತೆಯನ್ನು ಎದುರಿಸುತ್ತಿದ್ದು ದೊಡ್ಡ ಕೈಗಾರಿಕೆಗಳು ತಮಗೆ ಅವಶ್ಯಕವಿದ್ದ ವಿದ್ಯುಚ್ಛಕ್ತಿಯನ್ನು ತಾವೇ ಉತ್ಪಾದಿಸಿಕೊಳ್ಳುವ ಸಾಮರ್ಥ್ಯ ಹೊಂದಿವೆ. ಆದರೆ ಸಣ್ಣ ಕೈಗಾರಿಕೆಗಳಿಗೆ ಇಂಥ ಸಾಮರ್ಥ್ಯವಿರುವುದಿಲ್ಲ. ಅವು ಎಷ್ಟಿದ್ದರೂ ವಿದ್ಯುಚ್ಛಕ್ತಿಗಾಗಿ ವಿದ್ಯುಚ್ಛಕ್ತಿ ಮಂಡಳಿಯನ್ನೇ ಅವಲಂಬಿಸಬೇಕಾಗುತ್ತದೆ. ಆದರೆ ನಮ್ಮ ವಿದ್ಯುಚ್ಛಕ್ತಿ ಮಂಡಳಿಗಳು ಸರ್ಮಪಕವಾಗಿ ವಿದ್ಯುಚ್ಛಕ್ತಿಯನ್ನು ಒದಗಿಸಲು ಅಸಮರ್ಥವಾಗಿವೆ. ಇದರಿಂದಾಗಿ ಈ ಕೈಗಾರಿಕೆಗಳಿಗೆ ತಮ್ಮ ಉತ್ಪಾದನಾ ಸಾಮರ್ಥ್ಯವನ್ನು

ಸಂಪೂರ್ಣವಾಗಿ ಬಳಸಿಕೊಳ್ಳಲು ಸಾಧ್ಯವಾಗತ್ತಿಲ್ಲ. ಇದಿರಂದ ಉತ್ಪಾದನೆ ಕುಂಠಿತಗೊಂಡು ಆದಾಯ ಕಡಿಮೆಯಾಗಿ ನಷ್ಟದತ್ತ ಸಾಗುತ್ತಿವೆ.

**೩. ಹಣಕಾಸು ಸಮಸ್ಯೆ**

ಹಣಕಾಸು ಆರ್ಥಿಕತೆಯ ರಕ್ತವಾಹಿನಿ ಸಾಕಷ್ಟು ಹಣಕಾಸಿನ ಸೌಲಭ್ಯವಿಲ್ಲದೇ ಆರ್ಥಿಕತೆಯ ಯಾವುದೇ ವಲಯ ಅಭಿವೃದ್ಧಿ ಹೊಂದಲು ಸಾಧ್ಯವಿಲ್ಲ. ಆದರೆ ಭಾರತದಲ್ಲಿ ಹಣಕಾಸು ಸಮಸ್ಯೆ ಎಲ್ಲ ವಲಯಗಳನ್ನು ಬಾಧಿಸುತ್ತಿದೆ. ಅದರಲ್ಲಿಯೂ ಸಣ್ಣ ಕೈಗಾರಿಕೆಗಳಿಗೆ ಅದರ ಬಾಧೆ ಬಹಳ.

ಸಣ್ಣ ಕೈಗಾರಿಕೆಗಳ ವ್ಯವಹಾರ ಸಾಮರ್ಥ್ಯ ಕಡಿಮೆಯಿರುವುದರಿಂದ ಅವು ಮುಕ್ತವಾಗಿ ಬಂಡವಾಳ ಪೇಟೆಯನ್ನು ಪ್ರವೇಶಿಸಿ ಬಂಡವಾಳ ಸಂಗ್ರಹಿಸಲಾರವು. ಅವು ಎಷ್ಟಿದ್ದರೂ ಹಣಕಾಸು ಸಂಸ್ಥೆಗಳನ್ನೇ ಅವಲಂಬಿಸಬೇಕಾಗುತ್ತದೆ. ಆದರೆ ಅಷ್ಟು ಸುಲಭವಾಗಿ ಹಣಕಾಸು ಸಂಸ್ಥೆಗಳು ಅವುಗಳಿಗೆ ಸಾಲ ಕೊಡಲು ಮುಂದೆ ಬರುವುದಿಲ್ಲ. ಇದರಿಂದಾಗಿ ಅವರು ಅನೇಕ ಸಲ ಸಾಲ ಸೌಲಭ್ಯಕ್ಕಾಗಿ ಸ್ಥಳೀಯ ಸಾಹುಕಾರರನ್ನೇ ಅವಲಂಬಿಸುತ್ತಾರೆ. ದುಬಾರಿ ಬಡ್ಡಿ ದರದಲ್ಲಿ ಸಾಲ ಪಡೆಯುತ್ತಾರೆ.

ಹಣಕಾಸಿನ ಸಮ್ಯೆಯಿರುವುದರಿಂದ ಕಡಿಮೆ ಬೆಲೆಯಿದ್ದಾಗ ದೊಡ್ಡ ಪ್ರಮಾಣದಲ್ಲಿ ಕಚ್ಚಾ ವಸ್ತುಗಳನ್ನು ಸಂಗ್ರಹಿಸಲೂ ಆಗುವುದಿಲ್ಲ. ಉತ್ಪಾದನೆಗೆ ಅವಶ್ಯಕವಾದ ನವೀನ ಮಾದರಿಯ ಯಂತ್ರಗಳನ್ನು ಖರೀದಿ ಮಾಡಲಾಗುವುದಿಲ್ಲ. ದುಬಾರಿ ಬಡ್ಡಿದರದಲ್ಲಿ ಸಾಲ ಪಡೆದುಕೊಂಡರೆ ಅದರ ಮರುಪಾವತಿಗಾಗಿ ಕಡಿಮೆ ಬೆಲೆಯಲ್ಲಿ ವಸ್ತುಗಳನ್ನು ಶೀಘ್ರವಾಗಿ ಮಾರಾಟ ಮಾಡಬೇಕಾಗುತ್ತದೆ. ಇಂಥ ಸಂದರ್ಭದಲ್ಲಿ ಈ ಕೈಗಾರಿಕೆಗಳು ಹಣಕಾಸಿನ ತೀವ್ರ ಬಿಕ್ಕಟ್ಟನ್ನು ಎದುರಿಸಬೇಕಾಗುತ್ತದೆ.

**೪. ತಂತ್ರಜ್ಞಾನದ ಅಭಾವ**

ಸಣ್ಣ ಕೈಗಾರಿಕೆಗಳು ಅನುಸರಿಸುವ ಉತ್ಪಾದನೆಯ ವಿಧಾನಗಳು ಮತ್ತು ತಂತ್ರಗಳು ಸಾಮಾನ್ಯವಾಗಿ ಹಳೆಯ ಮಾದರಿಯವುಗಳಾಗಿರುತ್ತವೆ. ಹಳೆಯ ತಂತ್ರಜ್ಞಾನವನ್ನು ಅನುಸರಿಸಿ ಉತ್ಪಾದಿಸುತ್ತಿರುವುದರಿಂದ ಅವುಗಳ ಉತ್ಪಾದನೆಯೂ ಕಡಿಮೆ ಮತ್ತು ಅವರು ಉತ್ಪಾದಿಸಿದ ಸರಕುಗಳ ಗುಣಮಟ್ಟವೂ ಕಡಿಮೆಯಿರುತ್ತದೆ. ಅದೇ ವೇಳೆಗೆ ಅದರ ಉತ್ಪಾದನಾ ವೆಚ್ಚವೂ ಅಧಿಕವಾಗಿರುತ್ತದೆ. ಅನಿವಾರ್ಯವಾಗಿ ಹೆಚ್ಚು ಬೆಲೆಗೆ ಮಾರಾಟ ಮಾಡಬೇಕಾಗುತ್ತದೆ. ಇದರಿಂದ ಸಹಜವಾಗಿ ಈ ಕೈಗಾರಿಕೆಗಳು ಉತ್ಪಾದಿಸಲ್ಪಟ್ಟ ವಸ್ತುಗಳ ಬೇಡಿಕೆ ಕಡಿಮೆ ಯಾಗುತ್ತವೆ.

ಸಣ್ಣ ಪ್ರಮಾಣದ ಉದ್ದಿಮೆದಾರರಿಗೆ ನವೀನ ತಂತ್ರಜ್ಞಾನದ ಬಗ್ಗೆ ಮಾಹಿತಿ ಇರುವುದಿಲ್ಲ. ಇದ್ದರೂ ಅದನ್ನು ಹೊಂದಲು ಅವರು ಅಸಮರ್ಥರಾಗಿದ್ದಾರೆ. ಏಕೆಂದರೆ ತಂತ್ರಜ್ಞಾನದ ಸೌಲಭ್ಯಗಳು ನಮ್ಮ ದೇಶದಲ್ಲಿ ಲಭ್ಯವಿರುವುದಿಲ್ಲ. ಇದ್ದರೂ ಈ ಸೌಲಭ್ಯ ಪಡೆಯುವ ಅವಕಾಶ ಇವರಿಗೆ ಇರುವುದಿಲ್ಲ.

೫. ವಿಳಂಬಿತ ಸಂದಾಯಗಳು

ವಿಳಂಬಿತ ಸಂದಾಯಗಳು ಸಣ್ಣ ಪ್ರಮಾಣದ ಕೈಗಾರಿಕೆಗಳು ಎದುರಿಸುತ್ತಿರುವ ಇನ್ನಿತರ ಒಂದು ಸಮಸ್ಯೆ. ಈ ಕೈಗಾರಿಕಾ ವಸ್ತುಗಳನ್ನು ಖರೀದಿಸುವ ದೊಡ್ಡ ಖರೀದಿದಾರರು ಸಾಮಾನ್ಯವಾಗಿ ಖರೀದಿ ಮಾಡಿದ ತಕ್ಷಣ ಹಣ ಪಾವತಿಸುವುದಿಲ್ಲ. ಒಂದು ಅಧ್ಯಯನದ ಪ್ರಕಾರ ಸುಮಾರು ೪೦ ದಿನಗಳ ನಂತರ ಖರೀದಿದಾರರಿಂದ ಹಣ ಪಾವತಿಯಾಗುತ್ತದೆ. ಇದೂ ಅಲ್ಲದೆ ಅವರು ಸರಕಾರಿ, ಅರೆ, ಸರಕಾರಿ ಸಂಸ್ಥೆಗಳಿಗೆ ಮರಾಟ ಮಾಡಿದ್ರು ಇದೇ ಪರಿಸ್ಥಿತಿ ಇರುತ್ತದೆ. ಅನಿವಾರ್ಯವಾಗಿ ಈ ಉದ್ದಿಮೆದಾರರು ಅವರಿಗೆ ಮಾರಾಟ ಮಾಡಲೇ ಬೇಕಾಗುತ್ತದೆ. ಖರೀದಿಸಿದ ತಕ್ಷಣ ಹಣ ಪಾವತಿಸಬೇಕು ಎಂಬ ಕರಾರನ್ನು ಈ ಉದ್ದಿಮೆ ದಾರರು ಹಾಕಿದರೆ ಅವರ ಉತ್ಪಾದನ ಮಾರಾಟವಾಗದೆ ಹಾಗೆಯೇ ಉಳಿಯ ಬಹುದು. ಇದರಿಂದಾಗಿ ಉಳಂಬಿತ ಸಂದಾಯವಾದರೂ ಸಹ ಈ ಉದ್ದಿಮೆದಾರರು ಮಾರಾಟ ಮಾಡುತ್ತಾರೆ.

ಇನ್ನೊಂದು ಕಡೆ ಈ ಉದ್ದಿಮೆದಾರರು ಖರೀದಿಸಿದ ಕಚ್ಚಾವಸ್ತುಗಳ ಹಣವನ್ನು ತಕ್ಷಣ ಅಥವಾ ಕೆಲವು ದಿನಗಳಲ್ಲಿ ಹಣ ಪಾವತಿಸಲೇ ಬೇಕಾಗುತ್ತದೆ. ಒಂದು ವರದಿಯ ಪ್ರಕಾರ ಇವರು ೧೪ ದಿನಗಳಲ್ಲಿ ಕಚ್ಚಾ ವಸ್ತುಗಳ ಪೂರೈಕೆದಾರರಿಗೆ ಹಣ ಪಾವತಿಸುತ್ತಾರೆ.

ಈ ಎರಡೂ ಅಂಶಗಳನ್ನು ಗಮನಿಸಲಾಗಿದೆ. ಈ ಉದ್ದಿಮೆದಾರರು ವಿಳಂಬಿತ ಹಣ ಪಾವತಿಯಿಂದಾಗಿ ತೀವ್ರ ಹಣಕಾಸಿನ ಸಂಕಷ್ಟಕ್ಕೀಡಾಗಿದ್ದರೆ. ಇದು ಅವನಿಗೆ ಒಂದು ಪ್ರಕ್ರಿಯೆಯಾಗಿಯೇ ಉಳಿದುಕೊಂಡಿದೆ.

೬. ಮಾರಾಟ ಸಮಸ್ಯೆ

ಸಣ್ಣ ಪ್ರಮಾಣದ ಕೈಗಾರಿಕೆಗಳು ವಸ್ತುಗಳನ್ನು ಉತ್ಪಾದಿಸುವುದು ಬಹಳ ಸುಲಭ. ಆದರೆ ಅದರ ಮಾರಾಟ ಒಂದು ಸಮಸ್ಯೆ. ಇವು ವ್ಯವಸ್ಥಿತ ಮಾರುಕಟ್ಟೆ ಸೌಲಭ್ಯಗಳಿಂದ ವಂಚಿತವಾಗಿವೆ. ಹಲವಾರು ಕಾರಣಗಳಿಂದಾಗಿ ಮಾರಾಟ ಸಮಸ್ಯೆಗಳನ್ನು ಇವು ಎದುರಿಸು ತ್ತಿವೆ. ಅವುಗಳನ್ನು ಸಾಮಾನ್ಯವಾಗಿ ಕೆಳಗಿನಂತೆ ಪಟ್ಟಿ ಮಾಡಬಹುದು.

ಅ. ವ್ಯವಸ್ಥಿತ ಮಾರಾಟ ವ್ಯವಸ್ಥೆಯಿರುವುದಿಲ್ಲ.

ಆ. ಉತ್ಪಾದಿತ ವಸ್ತುಗಳು ಪ್ರಮಾಣೀಕೃತವಾಗಿರುವುದಿಲ್ಲ.

ಇ. ಮಾರುಕಟ್ಟೆಯ ಬಗ್ಗೆ ಜ್ಞಾನವಿರುವುದಿಲ್ಲ.

ಈ. ಮಾರಾಟದ ಸ್ಥಳಗಳಿಗೆ ಸಾಗಿಸಲು ಯೋಗ್ಯವಾದ ಸಾರಿಗೆ ಸೌಲಭ್ಯಗಳಿರುವುದಿಲ್ಲ.

ಉ. ಮಾರಾಟ ಕಲೆ ಮತ್ತು ಜಾಹಿರಾತಿನ ಅಭಾವವಿರುತ್ತದೆ.

ಊ. ಉತ್ಪಾದಿತ ವಸ್ತುಗಳನ್ನು ಯೋಗ್ಯ ಬೆಲೆ ಬರುವವರೆಗೆ ಮಾರಾಟ ಮಾಡದೇ ಸಂಗ್ರಹಿಸಿಡುವ ಸಾಮರ್ಥ್ಯವಿರುವುದಿಲ್ಲ.

ಋ. ಉತ್ಪಾದನಾ ವೆಚ್ಚದ ಬಗ್ಗೆ ಕೆಲವೊಮ್ಮೆ ಸರಿಯಾದ ಮಾಹಿತಿ ದೊರೆಯದ ಕಡಿಮೆ ಬೆಲೆಯಲ್ಲಿ ವಸ್ತುಗಳನ್ನು ಮಾರಾಟ ಮಾಡುತ್ತಾರೆ.

ಋ.	ಜಾಗತೀಕರಣದಿಂದಾಗಿ ವಿದೇಶಿ ವಸ್ತುಗಳು ಕಡಿಮೆ ಬೆಲೆಯಲ್ಲಿ ಮಾರುಕಟ್ಟೆಯಲ್ಲಿ ಮಾರಾಟಕ್ಕೆ ಲಭ್ಯವಿರುತ್ತವೆ.

ಹೀಗೆ ಸಣ್ಣ ಪ್ರಮಾಣದ ಕೈಗಾರಿಕೆಗಳಲ್ಲಿ ಉತ್ಪಾದಿಸಲ್ಪಟ್ಟ ವಸ್ತುಗಳನ್ನು ಮಾರಾಟ ಮಾಡಲು ಸಣ್ಣ ಉದ್ದಿಮೆದಾರರು ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಇದರಿಂದಾಗಿ ಉತ್ಪಾದಿತ ವಸ್ತುಗಳು ಸರಿಯಾದ ಸಮಯಕ್ಕೆ ಸರಿಯಾದ ಬೆಲೆಗೆ ಮಾರಾಟವಾಗದೇ ಉಳಿದು ಬಿಡುತ್ತವೆ. ಅನೇಕ ಸಂದರ್ಭಗಳಲ್ಲಿ ಅವುಗಳನ್ನು ಮಧ್ಯಮವರ್ತಿಗಳಿಗೆ ಕಡಿಮೆ ಬೆಲೆಯಲ್ಲಿ ಮಾರಾಟ ಮಾಡಬೇಕಾಗುತ್ತದೆ.

**೭. ಅಮೀಸಲಾತಿ**

ಅನೇಕ ವರ್ಷಗಳವರೆಗೆ ಅನೇಕ ವಸ್ತುಗಳ ಉತ್ಪಾದನೆಯನ್ನು ಸಣ್ಣ ಕೈಗಾರಿಕೆಗಳು ಮಾತ್ರ ಉತ್ಪಾದಿಸಬೇಕು ಮತ್ತು ಅಂತಹ ವಸ್ತುಗಳನ್ನು ದೊಡ್ಡ ಕೈಗಾರಿಕೆಗಳು ಉತ್ಪಾದಿಸುವಂತಿಲ್ಲ ಎಂಬ ನೀತಿಯನ್ನು ಅನುಸರಿಸಲಾಗಿತ್ತು. ಈ ಮೀಸಲಾತಿ ನಿಯಮವಿದ್ದರೂ ಸಣ್ಣ ಕೈಗಾರಿಕೆಗಳಿಂದ ನಿರೀಕ್ಷಿತ ಫಲ ದೊರೆಯಲಿಲ್ಲ ಮತ್ತು ವಸ್ತುಗಳ ಗುಣಮಟ್ಟ ಹೆಚ್ಚಲಿಲ್ಲ. ೧೯೯೧ರ ಹೊಸ ಕೈಗಾರಿಕಾ ನೀತಿಯಲ್ಲಿ ಈ ಮೀಸಲಾತಿ ನಿಯಮವನ್ನು ಕೈಬಿಟ್ಟು ದೊಡ್ಡ ಕೈಗಾರಿಕೆಗಳಿಗೂ ಸಹ ಅಂತಹ ವಸ್ತುಗಳನ್ನು ಉತ್ಪಾದಿಸುವ ಅವಕಾಶ ಮಾಡಿಕೊಡಲಾಯಿತು. ಇದರ ಪರಿಣಾಮವಾಗಿ ಸಣ್ಣ ಕೈಗಾರಿಕೆಗಳು ಉತ್ಪಾದಿಸುವ ಅನೇಕ ವಸ್ತುಗಳನ್ನು ದೊಡ್ಡ ಕೈಗಾರಿಕೆಗಳೂ ಉತ್ಪಾದಿಸಲು ಪ್ರಾರಂಭಿಸಿದವು.

ಅಮೀಸಲಾತಿಯ ಪರಿಣಾಮವಾಗಿ ಸಣ್ಣ ಮತ್ತು ದೊಡ್ಡ ಕೈಗಾರಿಕೆಗಳು ಒಂದೇ ವಿಧದ ವಸ್ತುಗಳನ್ನು ಉತ್ಪಾದಿಸತೊಡಗಿದ್ದುದರಿಂದ ಸಣ್ಣ ಕೈಗಾರಿಕೆಗಳಿಗೆ ದೊಡ್ಡ ಕೈಗಾರಿಕೆಗಳು ತೀವ್ರ ಪೈಪೋಟಿಯೊಡ್ಡತೊಡಗಿದವು. ದೊಡ್ಡ ಕೈಗಾರಿಕೆಗಳು ಅತ್ಯಾಧುನಿಕ ತಂತ್ರವನ್ನು ಮತ್ತು ಯಂತ್ರೋಪಕರಣಗಳನ್ನು ಬಳಸಿ ಉತ್ತಮ ಗುಣಮಟ್ಟದ ವಸ್ತುಗಳನ್ನು ದೊಡ್ಡ ಪ್ರಮಾಣದಲ್ಲಿ ಉತ್ಪಾದಿಸುವ ಸಾಮರ್ಥ್ಯ ಪಡೆದಿದೆ. ಇದರ ಪರಿಣಾಮವಾಗಿ ಸಾಮರ್ಥ್ಯ ಪಡೆದಿವೆ. ಇದರ ಪರಿಣಾಮವಾಗಿ ಅವುಗಳಿಗೆ ಕಡಿಮೆ ಬೆಲೆಯಲ್ಲಿ ವಸ್ತುಗಳನ್ನು ಮಾರಾಟ ಮಾಡಲು ಸಾಧ್ಯವಾಗುತ್ತದೆ. ವಸ್ತುಗಳ ಗುಣಮಟ್ಟ ಮತ್ತು ಬೆಲೆಯನ್ನು ಸಣ್ಣ ಕೈಗಾರಿಕೆಗಳು ದೊಡ್ಡ ಪ್ರಮಾಣದ ಕೈಗಾರಿಕೆಗಳಿಗೆ ಪೈಪೋಟಿ ಒಡ್ಡಲು ಅಸಮರ್ಥವಾಗಿವೆ. ಕಾರಣ ಅಮೀಸಲಾತಿ ನಿಯಮವೂ ಸಹ ನಮ್ಮ ಸಣ್ಣ ಕೈಗಾರಿಕೆಗಳ ಬೆಳವಣಿಗೆ ಕುಂಠಿತವಾಗಲು ಒಂದು ಕಾರಣವಾಗಿದೆ.

ಈ ಪ್ರಕಾರ ನಮ್ಮ ಸಣ್ಣ ಪ್ರಮಾಣದ ಕೈಗಾರಿಕೆಗಳು ಅನೇಕ ಸಮಸ್ಯೆಗಳನ್ನು ಎದುರಿಸುತ್ತಿರುವುದರಿಂದ ಅವುಗಳ ಪ್ರಗತಿ ಕುಂಠಿತವಾಗಿದೆ.

**೪.೩.೩. ಸಣ್ಣ ಪ್ರಮಾಣದ ಕೈಗಾರಿಕೆಗಳ ಅಸ್ವಸ್ಥತೆ**

ಅನೇಕ ಸಣ್ಣ ಪ್ರಮಾಣದ ಕೈಗಾರಿಕೆಗಳು ಒಂದಿಲ್ಲೊಂದು ಕಾರಣದಿಂದಾಗಿ ಅಸ್ವಸ್ಥ

ಅಥವಾ ರೋಗಗ್ರಸ್ಥವಾಗಿವೆ. ಅವುಗಳ ಸಂಖ್ಯೆ ಇಂದು ಲಕ್ಷದಲ್ಲಿ ಹೊರಟಿದೆ. ಅಸ್ವಸ್ಥ ಕೈಗಾರಿಕೆಗಳನ್ನು ದೊಡ್ಡ ಪ್ರಮಾಣದ ಕೈಗಾರಿಕೆಗಳಲ್ಲಿಯೂ ಕಾಣುತ್ತೇವೆ. ಆದರೆ ಅಂಥವುಗಳು ಇಂದು ಸಣ್ಣ ಪ್ರಮಾಣದ ಕೈಗಾರಿಕೆಗಳಲ್ಲಿ ವ್ಯಾಪಕವಾಗಿ ಪಸರಿಸುತ್ತಿವೆ.

ಸಾಮಾನ್ಯವಾಗಿ ಹಾನಿಯಲ್ಲಿ ನಡೆಯುವ ಕೈಗಾರಿಕೆಗಳನ್ನು 'ಅಸ್ವಸ್ಥ' ಅಥವಾ 'ರೋಗಗ್ರಸ್ಥ' ಕೈಗಾರಿಕೆಗಳು ಎಂದು ಕರೆಯುವರು. ಆದರೆ ಸಣ್ಣ ಕೈಗಾರಿಕೆಗಳ ಅಸ್ವಸ್ಥತೆಯನ್ನು ವಿವಿಧ ರೀತಿಯಿಂದ ಅರ್ಥೈಸಲಾಗಿದೆ. ಅವುಗಳಲ್ಲಿ ಭಾರತೀಯ ಸ್ಟೇಟ್ ಬ್ಯಾಕ್ ಮತ್ತು ಭಾರತೀಯ ರಿಝರ್ವ್‌ಬ್ಯಾಂಕ್‌ಗಳು ನೀಡಿದ ಅರ್ಥಕ್ಕೆ ಹೆಚ್ಚಿನ ಮಹತ್ವವಿದೆ.

**ಭಾರತೀಯ ಸ್ಟೇಟ್ ಬ್ಯಾಂಕಿನ** ಅಧ್ಯಯನ ತಂಡವು ೧೯೭೫ರಲ್ಲಿ ಅಸ್ವಸ್ಥ ಘಟಕ ಕುರಿತು ಹೀಗೆ ವ್ಯಾಖ್ಯೆ ನೀಡಿದೆ "ಒಂದು ಕೈಗಾರಿಕೆಯು ತನ್ನ ಸ್ವಂತ ಬಂಡವಾಳದ ಮೇಲೆ ನಿಂತುಕೊಳ್ಳದೇ ಅಥವಾ ನಡೆಯದೇ ಕೇವಲ ಹೊರಗಿನಿಂದ ದೊರಕುವಂತಹ ಹಣಕಾಸಿನ ಸೌಲಭ್ಯಗಳ ಮೇಲೆ ಹಲವು ವರ್ಷಗಳವರೆಗೆ ನಿರಂತರವಾಗಿ ನಡೆಯುತ್ತಿದ್ದರೆ ಅದು ಅಸ್ವಸ್ಥ ಕೈಗಾರಿಕೆ."

**ಭಾರತೀಯ ರಿಝರ್ವ ಬ್ಯಾಂಕಿನ** ವ್ಯಾಖ್ಯೆಯ ಪ್ರಕಾರ, ಒಂದು ಘಟಕವು "ಒಂದು ವರ್ಷದಲ್ಲಿ ನಗದು ಹಾನಿಯನ್ನು ಹೊಂದಿದ್ದರೆ ಮತ್ತು ಬ್ಯಾಂಕಿನ ನಿರ್ಣಯದಂತೆ ಚಾಲ್ತಿ ವರ್ಷದಲ್ಲಿ ಮತ್ತು ಬ್ಯಾಂಕಿನ ನಿರ್ಣಯದಂತೆ ಚಾಲ್ತಿ ವರ್ಷದಲ್ಲಿ ಮತ್ತು ಮುಂಬರುವ ವರ್ಷದಲ್ಲಿಯೂ ಹಾನಿ ಸಂಭವಿಸಬಹುದಾಗಿದ್ದರೆ ಮತ್ತು ಹಣಕಾಸು ರಚನೆಯಲ್ಲಿ ಅಸಮತೋಲನೆಯಾದರೂ ಅಂದರೆ ಚಾಲ್ತಿ ಹೊಣೆಗಾರಿಕೆ ಪ್ರಮಾಣ ೧:೧ಕ್ಕಿಂತಲೂ ಕಡಿಮೆಯಿದ್ದರೆ ಅದು 'ಅಸ್ವಸ್ಥ' ಅಥವಾ 'ರೋಗಗ್ರಸ್ಥ' ಕೈಗಾರಿಕೆ."

**ಭಾರತೀಯ ರಿಝರ್ವ ಬ್ಯಾಂಕಿನ** ಮಾರ್ಗದರ್ಶನದ ಪ್ರಕಾರ ಸಣ್ಣ ಕೈಗಾರಿಕೆಗಳ ಅಸ್ವಸ್ಥತೆ ಕುರಿತು ಪ್ರತ್ಯೇಕ ವ್ಯಾಖ್ಯೆಯನ್ನು ರಚಿಸಲಾಗಿದೆ. ಅದೇ ಪ್ರಕಾರ ಸಣ್ಣ ಪ್ರಮಾಣದ ಕೈಗಾರಿಕೆಗಳನ್ನು ಅಸ್ವಸ್ಥ ಅಥವಾ ರೋಗಗ್ರಸ್ಥ ಎಂದು ಕರೆಯಲು ಕೆಳಗಿನ ಅಂಶಗಳನ್ನು ಗಣನೆಗೆ ತೆಗೆದುಕೊಳ್ಳಲಾಗುವುದು.

ಅ. ಹಿಂದಿನ ಹಣಕಾಸು ವರ್ಷದಲ್ಲಿ ನಗದು ಹಾನಿ ಸಂಭವಿಸಿದ್ದರೆ ಮತ್ತೆ ಅದು ಚಾಲ್ತಿ ವರ್ಷದಲ್ಲಿಯೂ ಮುಂದುವರಿಯಬಹುದಾಗಿದ್ದರೆ ಮತ್ತು ರೋಗಗ್ರಸ್ಥ ಘಟಕವು ಕಳೆದ ಐದು ವರ್ಷಗಳಿಂದ ಶೇಕಡ ೫೦ ಅಥವಾ ಅದಕ್ಕಿಂತ ಹೆಚ್ಚಿನ ಪ್ರಮಾಣದ ದುಡಿಯುವ ಬಂಡವಾಳದ ನಗದು ಸವಕಳಿ ಹೊಂದಿದ್ದರೆ ಮತ್ತೂ ಅಥವಾ

ಬ. ಪ್ರತಿ ಮೂರು ತಿಂಗಳಿಗೊಮ್ಮೆ ಹಣಕಾಸು ಸಂಸ್ಥೆಗಳಿಗೆ ಬಡ್ಡಿ ತುಂಬಲು ವಿಫಲವಾದಲ್ಲಿ ಅಥವಾ ಎರಡು ಅರ್ಧವಾರ್ಷಿಕ ಕಂತುಗಳಲ್ಲಿ ತೆಗೆದುಕೊಂಡ ಸಾಲದ ಅಸಲನ್ನು ತುಂಬಲು ತಪ್ಪಿದಲ್ಲಿ ಅಥವಾ ಬ್ಯಾಂಕಿನ ಸಾಲಮಿತಿಯಲ್ಲಿ ಅಸಮತೋಲನೆ ಹೊಂದಿದ್ದರೆ ರೋಗಗ್ರಸ್ಥ ಘಟಕ ಎನ್ನಲಾಗುವುದು.

ಅಸ್ವಸ್ಥ ಸಣ್ಣ ಕೈಗಾರಿಕೆಗಳು ಭಾರತದಲ್ಲಿಂದು ದೊಡ್ಡ ಪ್ರಮಾಣದಲ್ಲಿದ್ದು ಅವುಗಳ ಸಂಖ್ಯೆಯಲ್ಲಿ ಗಣನೀಯ ಹೆಚ್ಚಳವಾಗುತ್ತದೆ. ಅಸ್ವಸ್ಥ ಸಣ್ಣ ಕೈಗಾರಿಕೆಗಳು ೧೯೮೦ ಡಿಸೆಂಬರ್‌ದಲ್ಲಿ ಕೇವಲ ೨೩೧೪ ಇದ್ದರೆ ೧೯೯೦ ಮಾರ್ಚ್‌ದಲ್ಲಿ ೨೨೧೯೭ಕ್ಕೂ ಮತ್ತು ೨೦೦೧ ವರ್ಷದಲ್ಲಿ ೨೪೯೬೩೦ಕ್ಕೂ ಹೆಚ್ಚಿದೆ. ಈ ಅಸ್ವಸ್ಥ ಕೈಗಾರಿಕೆಗಳಲ್ಲಿ ೨೨೫೪೮೮ ಕೈಗಾರಿಕೆಗಳು ೩೯೪೩ ಕೋಟಿ ರೂ.ಗಳಷ್ಟು ಬ್ಯಾಂಕ್ ಸಾಲವನ್ನು ಬಾಕಿ ಇರಿಸಿಕೊಂಡಿವೆ.

### ಅಸ್ವಸ್ಥತೆಗೆ ಪ್ರಮುಖ ಕಾರಣಗಳು

ಸಣ್ಣ ಪ್ರಮಾಣದ ಕೈಗಾರಿಕೆಗಳು ಅನೇಕ ಕಾರಣಗಳಿಂದ ಅಸ್ವಸ್ಥತೆ ಹೊಂದಿದ್ದರೂ ಅವುಗಳಲ್ಲಿ ಪ್ರಮುಖವಾದವುಗಳನ್ನು ಕೆಳಗಿನಂತೆ ಗುರುತಿಸಬಹುದು.

೧. ವ್ಯವಹಾರ ನಿರ್ವಹಣೆಯ ನೈಪುಣ್ಯತೆಯ ಅಭಾವ.

೨. ಉತ್ಪಾದನಾ ಸಾಮರ್ಥ್ಯದ ಅಪೂರ್ಣ ಬಳಕೆ.

೩. ಹಣಕಾಸು ವ್ಯವಸ್ಥೆಯ ಅಭಾವ.

೪. ವ್ಯವಹಾರ ನಿರ್ವಹಣೆಯ ಮೂಲತತ್ವಗಳನ್ನು ಪಾಲಿಸದಿರುವುದು.

೫. ಸಣ್ಣ ಕೈಗಾರಿಕಾ ಘಟಕಗಳಿಗೆ ಸರಕಾರ ಸುಲಭವಾಗಿ ಅನುಮತಿ ನೀಡುವುದು.

೬. ಅಧಿಕಗೊಳ್ಳುತ್ತಿರುವ ಉತ್ಪಾದನಾ ವೆಚ್ಚ.

೭. ಮಾರುಕಟ್ಟೆಯ ಜ್ಞಾನ ಸರಿಯಾಗಿ ಇಲ್ಲದಿರುವುದು.

೮. ಜಾಗತೀಕರಣ

### ಅಸ್ವಸ್ಥತೆ ಮತ್ತು ಇತರ ಸಮಸ್ಯೆಗಳ ನಿವಾರಣೆಗೆ ಕ್ರಮಗಳು

ಸಣ್ಣ ಕೈಗಾರಿಕೆಗಳ ಅಸ್ವಸ್ಥತೆ ಮತ್ತು ಇತರ ಸಮಸ್ಯೆಗಳ ನಿವಾರಣೆಗಾಗಿ ಸರಕಾರ ಹಲವಾರು ವಿಧದ ಕ್ರಮಗಳನ್ನು ಕೈಕೊಂಡಿದೆ. ಅವುಗಳಲ್ಲಿ ಪ್ರಮುಖವಾದವುಗಳು ಕೆಳಗಿನಂತಿವೆ.

**೧. ಮಾರಾಟಕ್ಕೆ ಸಹಾಯ :** ಸಣ್ಣ ಕೈಗಾರಿಕೆಗಳು ಉತ್ಪಾದಿಸಿದ ವಸ್ತುಗಳನ್ನು ಮಾರಾಟ ಮಾಡುವುದರ ಸಲುವಾಗಿ ಸರಕಾರ ಹಲವಾರು ವಿಧದ ಕ್ರಮಗಳನ್ನು ಕೈಕೊಂಡಿದೆ. ಈ ದಿಶೆಯಲ್ಲಿ ಸರಕಾರ ಕೈಕೊಂಡ ಕ್ರಮಗಳು ಕೆಳಗಿನಂತಿವೆ.

ಅ. ರಾಷ್ಟ್ರೀಯ ಸಣ್ಣ ಕೈಗಾರಿಕಾ ನಿಗಮವನ್ನು ಸ್ಥಾಪಿಸಿ ಆ ಸಂಸ್ಥೆಯ ಮೂಲಕ ರಾಷ್ಟ್ರಾದ್ಯಂತ ಸಣ್ಣ ಕೈಗಾರಿಕೆಗಳು ಉತ್ಪಾದಿಸಿದ ಸಿದ್ಧ ವಸ್ತುಗಳನ್ನು ಖರೀದಿಸಿ ಅವುಗಳನ್ನು ಸರಕಾರಿ ಇಲಾಖೆಗಳಿಗೆ ಅವುಗಳ ಬಳಕೆಗೆ ಹಂಚುತ್ತದೆ. ಈ ನಿಗಮವು ರಾಷ್ಟ್ರದಾದ್ಯಂತ ಈ ವಸ್ತುಗಳನ್ನು ಮಾರಲು ಮಾರಾಟ ಕೇಂದ್ರಗಳನ್ನು ತೆರೆದಿದೆ.

ಆ. ಸಾರ್ವಜನಿಕ ವಲಯದ ಸಂಸ್ಥೆಗಳು ಸಣ್ಣ ಕೈಗಾರಿಕಾ ಉತ್ಪನ್ನಗಳನ್ನು ಸ್ವಲ್ಪ ಹೆಚ್ಚಿನ ಬೆಲೆಗೆ ಖರೀದಿಸುತ್ತವೆ.

ಆ. ಅಖಿಲ ಭಾರತ ಕೈಗಾರಿಕಾ ಮಂಡಳಿಯು ದೇಶದ ಅನೇಕ ಭಾಗಗಳಲ್ಲಿ ತನ್ನದೇ ಮಳಿಗೆಗಳನ್ನು ತೆರೆದು ಅಲ್ಲಿ ಕೈಮಗ್ಗದ ಬಟ್ಟೆಗಳನ್ನು ಮಾರುತ್ತವೆ.

ಇ. ಅಖಿಲ ಭಾರತ ಕರಕುಶಲ ಮಂಡಳಿಯು ದೇಶದ ವಿವಿಧ ಭಾಗಗಳಲ್ಲಿ ತನ್ನ ಮಳಿಗೆಗಳನ್ನು ಪ್ರಾರಂಭಿಸುವುದರ ಮೂಲಕ ಕರಕುಶಲ ವಸ್ತುಗಳನ್ನು ಮಾರಾಟ ಮಾಡುತ್ತವೆ.

ಹೀಗೆ ಹಲವಾರು ಅಖಿಲ ಭಾರತ ಮಂಡಳಿಗಳು ಸ್ಥಾಪಿಸಲ್ಪಟ್ಟಿದ್ದು ಅವು ಗೃಹ ಮತ್ತು ಸಣ್ಣ ಕೈಗಾರಿಕೆಗಳು ಉತ್ಪಾದಿಸಿದ ವಸ್ತುಗಳನ್ನು ಮಾರಾಟ ಮಾಡುತ್ತವೆ.

ಈ. ಸಣ್ಣ ಕೈಗಾರಿಕಾ ವಸ್ತುಗಳಿಗೆ ಸ್ಪರ್ಧಾತ್ಮಕ ಗುಣಮಟ್ಟವನ್ನು ಹೆಚ್ಚಿಸುವುದರ ಸಲುವಾಗಿ ಗುಣಾತ್ಮಕ ವಸ್ತುಗಳ ಉತ್ಪಾದನೆಗೆ ಸರಕಾರ ಸಹಾಯ ನೀಡುತ್ತದೆ.

ಉ. ಸಣ್ಣ ಕೈಗಾರಿಕಾ ಉತ್ಪನ್ನಗಳ ಬೆಲೆಗಳು ಹೆಚ್ಚಾಗದಂತೆ ನೋಡಿಕೊಳ್ಳಲು ಅವುಗಳಿಗೆ ತೆರಿಗೆಯನ್ನು ನೀಡಲಾಗಿದೆ ಮತ್ತು ತೆರಿಗೆ ರಿಯಾಯಿತಿ ಕೊಡಲಾಗಿದೆ.

ಊ. ಬೇಡಿಕೆ ಹೆಚ್ಚಿಸಲು ಪ್ರಚಾರ ಕಾರ್ಯ ಕೈಕೊಳ್ಳಲಾಗಿದೆ ಮತ್ತು ಮೇಲಿಂದ ಮೇಲೆ ಪ್ರದರ್ಶನಾಲಯಗಳನ್ನು ಏರ್ಪಡಿಸುವುದರ ಮೂಲಕ ಮಾರಾಟವಾಗುವ ಹಾಗೆ ಕ್ರಮ ಕೈಗೊಂಡಿದೆ.

ಋ. ಸಣ್ಣ ಕೈಗಾರಿಕಾ ವಸ್ತುಗಳು ಹೆಚ್ಚು ಮಾರಾಟವಾಗಲು ಮೇಲಿಂದ ಮೇಲೆ ಅವುಗಳ ಬೆಲೆಗಳಿಗೆ ರಿಯಾಯತಿಯನ್ನು ಘೋಷಣೆ ಮಾಡಿ ಅವುಗಳನ್ನು ಘೋಷಿಸುತ್ತದೆ.

**೨. ತಂತ್ರಜ್ಞಾನದ ಉನ್ನತೀಕರಣ:** ಸಣ್ಣ ಪ್ರಮಾಣದ ಕೈಗಾರಿಕೆಗಳು ಕಡಿಮೆ ಗುಣಮಟ್ಟದ ತಂತ್ರಜ್ಞಾನವನ್ನು ಬಳಸುತ್ತಿರುವುದರಿಂದ ಅವುಗಳ ಉತ್ಪನ್ನಗಳ ಗುಣಮಟ್ಟ ಕಡಿಮೆಯಿರುತ್ತಗೆ. ಈ ದೋಷಗಳನ್ನು ಹೋಗಲಾಡಿಸುವ ಸಲುವಾಗಿ ತಂತ್ರಜ್ಞಾನದ ಉನ್ನತೀಕರಣಕ್ಕೆ ಹೆಚ್ಚಿನ ಪ್ರಾಮುಖ್ಯತೆ ಕೊಟ್ಟಿದೆ. ಈ ದಿಶೆಯಲ್ಲಿ ಸರಕಾರ ಕೆಳಗಿನ ಕ್ರಮಗಳನ್ನು ಕೈಕೊಂಡಿದೆ.

**ಅ. ಕೇಂದ್ರ ಸಣ್ಣ ಕೈಗಾರಿಕೆಗಳ ಸಂಸ್ಥೆ:** ಈ ಸಂಸ್ಥೆಯು ಸಣ್ಣ ಕೈಗಾರಿಕೆಗಳ ತಾಂತ್ರಿಕ ಸಹಾಯವನ್ನು ಸಲ್ಲಿಸುತ್ತದೆ. ಇದಕ್ಕಾಗಿ ಈ ಸಂಸ್ಥೆಯು ದೇಶದಲ್ಲಿ ೨೮ ಸಣ್ಣ ಕೈಗಾರಿಕಾ ಸೇವಾ ಸಂಸ್ಥೆಗಳನ್ನು ಮತ್ತು ೩೮ ವಿಸ್ತರಣಾ ಕೇಂದ್ರಗಳನ್ನು ಸ್ಥಾಪಿಸಿದೆ. ಇದಲ್ಲದೆ ೪ ಪ್ರಾಂತೀಯ ಪರೀಕ್ಷಾ ಕೇಂದ್ರಗಳನ್ನು ೨ ಕಾರ್ಯಕ್ಷೇತ್ರ ಪರೀಕ್ಷಾ ಕೇಂದ್ರಗಳನ್ನು ಪಾದರಕ್ಷಾ ತರಬೇತಿ ಕೇಂದ್ರಗಳನ್ನು ಸ್ಥಾಪಿಸಿದೆ. ಈ ಸಂಸ್ಥೆಗಳು ಸಣ್ಣ ಕೈಗಾರಿಕೆಗಳಿಗೆ ತಾಂತ್ರಿಕ ಜ್ಞಾನವನ್ನು ಒದಗಿಸುತ್ತವೆ. ಯಂತ್ರಗಳ ರಿಪೇರಿ, ಕಚ್ಚಾ ವಸ್ತು ಮತ್ತು ಶಕ್ತಿಯ ಮಿತವ್ಯಯದ ಬಳಕೆ, ಉತ್ಪಾದನಾ ಖರ್ಚುಗಳನ್ನು ತಗ್ಗಿಸುವ ಕ್ರಮ ಇವೇ ಮೊದಲಾದ ವಿಷಯಗಳ ಮೇಲೆ ಈ ಸಂಸ್ಥೆಗಳು ಸಲಹೆಯನ್ನು ನೀಡುತ್ತವೆ.

**ಆ. ಪ್ರೊಟೋಟೈಪ್ ಉತ್ಪಾದನಾ ಕೇಂದ್ರಗಳು:** ಈ ಕೇಂದ್ರಗಳು ಸಣ್ಣ ಕೈಗಾರಿಕೆಗಳಿಗೆ ಬೇಕಾಗುವ ಅನೇಕ ಮಾದರಿಯ ಯಂತ್ರಗಳನ್ನು ತಯಾರಿಸುತ್ತವೆ. ಆ ಮೂಲಕ ಸಣ್ಣ ಕೈಗಾರಿಕೆಗಳ ಯಂತ್ರಗಳ ನವೀಕರಣದ ಯೋಜನೆಯನ್ನು ಮಾಡಲಾಗಿದೆ.

**ಇ. ಕೈಗಾರಿಕಾ ನಕ್ಷೆಗಳ ಕೇಂದ್ರ ಸಂಸ್ಥೆ :** ವಸ್ತುವಿನ ಉತ್ಪಾದನೆಯು ಕೈಗಾರಿಕಾ ನಕ್ಷೆಗಳನ್ನು ಅವಲಂಬಿಸಿದೆ. ಆಧುನಿಕ ರೀತಿಯ ನಕ್ಷೆಗಳು ಆಧುನಿಕ ಮಾದರಿಯ ಆಕರ್ಷಕ ವಸ್ತುಗಳನ್ನು ಉತ್ಪಾದಿಸಬಲ್ಲವು.

**ಈ. ಸಣ್ಣ ಕೈಗಾರಿಕೆಗಳ ಸಂಶೋಧನಾಭಿವೃದ್ಧಿ ಮಂಡಳಿ:** ಸರಕಾರವು ಸಣ್ಣ ಕೈಗಾರಿಕೆಗಳ ಬಗ್ಗೆ ಅಭ್ಯಾಸಮಾಡಿ ಅವುಗಳಿಗೆ ಬೇಕಾಗುವ ಯಂತ್ರಗಳನ್ನು ಮತ್ತು ಉತ್ಪಾದನಾ ವಿಧಾನಗಳ ಬಗ್ಗೆ ಸಂಶೋಧನೆ ಮಾಡಲು ಈ ಸಂಸ್ಥೆಯನ್ನು ರಚಿಸಿದೆ.

**ಉ. ತಾಂತ್ರಿಕ ತರಬೇತಿ:** ತಾಂತ್ರಿಕ ತರಬೇತಿಯನ್ನು ನೀಡುವುದರ ಸಲುವಾಗಿ ರಾಷ್ಟ್ರದಾದ್ಯಂತ ತರಬೇತಿ ಕೇಂದ್ರಗಳನ್ನು ಸ್ಥಾಪಿಸಲಾಗಿದೆ.

**೩. ರಿಯಾಯತಿ ಹಣಕಾಸು:** ಸಣ್ಣ ಕೈಗಾರಿಕೆಗಳನ್ನು ನಡೆಸುವವರು ಸಾಮಾನ್ಯವಾಗಿ ಬಡವರು ಮತ್ತು ಮಧ್ಯಮ ವರ್ಗದವರಾಗಿದ್ದು ಅವರು ಬಂಡವಾಳದ ತೀವ್ರ ಕೊರತೆಯನ್ನು ಎದುರಿಸುತ್ತಿದ್ದಾರೆ. ಅದನ್ನು ಹೋಗಲಾಡಿಸಲು ಸರಕಾರ ವಿವಿಧ ಕ್ರಮಗಳನ್ನು ಕೈಕೊಂಡು ರಿಯಾಯತಿ ಹಣಕಾಸನ್ನು ಒದಗಿಸುತ್ತದೆ. ಅವು ಕೆಳಗಿನಂತಿವೆ.

**ಅ. ಸರಕಾರ:** ಸಣ್ಣ ಕೈಗಾರಿಕೆಗಳಿಗೆ ರಿಯಾಯತಿ ದರದಲ್ಲಿ ಹಣಕಾಸನ್ನು ಒದಗಿಸುವುದರ ಸಲುವಾಗಿ ಭಾರತ ಸರಕಾರ ಕಾನೂನನ್ನು ಪಾಸುಮಾಡಿದೆ. ಈ ಕಾನೂನಿನ ಪ್ರಕಾರ ರಾಜ್ಯ ಸರಕಾರಗಳು ಸಣ್ಣ ಕೈಗಾರಿಕೆಗಳಿಗೆ ಕಡಿಮೆ ಬಡ್ಡಿ ದರದಲ್ಲಿ ಸಾಲ ನೀಡುತ್ತವೆ.

**ಆ. ರಾಜ್ಯ ಹಣಕಾಸು ನಿಗಮಗಳು:** ಪ್ರತಿಯೊಂದು ರಾಜ್ಯ ಸರಕಾರವು ಹಣಕಾಸು ಸಂಸ್ಥೆಯೊಂದನ್ನು ಸ್ಥಾಪಿಸಿ ಸಣ್ಣ ಕೈಗಾರಿಕೆಗಳಿಗೆ ಮಧ್ಯಮಾವಧಿ ಮತ್ತು ದೀರ್ಘಾವಧಿ ಸಾಲಗಳನ್ನು ಕಡಿಮೆ ಬಡ್ಡಿ ದರದಲ್ಲಿ ಕೊಡುವ ಏರ್ಪಾಡು ಮಾಡಿದೆ.

**ಇ. ರಾಷ್ಟ್ರೀಯ ಸಣ್ಣ ಪ್ರಮಾಣದ ಕೈಗಾರಿಕೆಗಳ ನಿಗಮ:** ಸಣ್ಣ ಕೈಗಾರಿಕೆಗಳಿಗೆ ಬೇಕಾಗುವ ಯಂತ್ರೋಪಕರಣಗಳನ್ನು ಕಂತುಗಳ ಮೂಲಕ ಕೊಳ್ಳುವ ವ್ಯವಸ್ಥೆ ಮಾಡಿದೆ.

**ಈ. ವಾಣಿಜ್ಯ ಬ್ಯಾಂಕುಗಳು:** ಭಾರತೀಯ ಸ್ಟೇಟ್ ಬ್ಯಾಂಕ್ ಮತ್ತು ವಾಣಿಜ್ಯ ಬ್ಯಾಂಕುಗಳು ಸಣ್ಣ ಕೈಗಾರಿಕೆಗಳನ್ನು ಆದ್ಯತಾ ಕ್ಷೇತ್ರವೆಂದು ಪರಿಗಣಿಸಿ ಸಾಲ ನೀಡುತ್ತವೆ.

**ಉ. ಸಹಕಾರಿ ಸಂಘಗಳು :** ರಾಷ್ಟ್ರದಾದ್ಯಂತ ಗೃಹ ಮತ್ತು ಸಣ್ಣ ಕೈಗಾರಿಕೆಗಳ ಸಹಕಾರಿ ಸಂಘಗಳನ್ನು ಸ್ಥಾಪಿಸಲಾಗಿದೆ. ಈ ಸಹಕಾರಿ ಸಂಘಗಳಿಗೆ ರಾಜ್ಯ ಸಹಕಾರಿ ಬ್ಯಾಂಕುಗಳು ಹಣದ ಸಹಾಯ ಮಾಡುತ್ತವೆ. ಕಡಿಮೆ ಬಡ್ಡಿ ದರದಲ್ಲಿ ಇವು ಸಾಲ ನೀಡುತ್ತವೆ.

**ಊ. ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ಬ್ಯಾಂಕು :** ೧೦೦೦ ಕೋಟಿ ರೂ. ಅಧಿಕೃತ ಬಂಡವಾಳದೊಂದಿಗೆ ಈ ಬ್ಯಾಂಕು ೧೯೯೦ರಲ್ಲಿ ಕಾರ್ಯಾರಂಭ ಮಾಡಿದೆ. ವಿವಿಧ ರಾಜ್ಯಗಳಲ್ಲಿ ಇದು ತನ್ನ ಶಾಖೆಗಳನ್ನು ಹೊಂದಿದೆ. ಸಣ್ಣ ಕೈಗಾರಿಕೆಗಳಿಗೆ ಪ್ರತ್ಯಕ್ಷವಾಗಿ ಮತ್ತು ಅಪ್ರತ್ಯಕ್ಷವಾಗಿ ಹಣಕಾಸಿನ ನೆರವನ್ನು ನೀಡಿ ಅವುಗಳ ಬೆಳವಣಿಗೆಗೆ ಶ್ರಮಿಸುವುದೇ ಈ ಬ್ಯಾಂಕಿನ ಮೂಲ ಉದ್ದೇಶ.

**ಋ. ಸಾಲ ಹಣದ ಭದ್ರತೆಯ ಯೋಜನೆ:** ಭಾರತೀಯ ರಿಝರ್ವ್ ಬ್ಯಾಂಕ್ ೧೯೬೦ರಲ್ಲಿ ಈ ಯೋಜನೆಯನ್ನು ಪ್ರಾರಂಭಿಸಿದ್ದು ಈ ಯೋಜನೆಯನ್ವಯ ಸಣ್ಣ ಕೈಗಾರಿಕೆಗಳಿಗೆ ಬ್ಯಾಂಕುಗಳು ಮತ್ತು ಹಣಕಾಸು ಸಂಸ್ಥೆಗಳು ನೀಡುವ ಸಾಲಕ್ಕೆ ಭದ್ರತೆಯನ್ನು ನೀಡಲಾಗುತ್ತದೆ. ಈಗ ಈ ಯೋಜನೆಯನ್ನು ಠೇವಣಿ ವಿಮಾ ಪತ್ತು ಭರವಸೆಯ ನಿಗಮವು ನೋಡಿಕೊಳ್ಳುತ್ತದೆ.

**ೠ. ಏಕಗವಾಕ್ಷಿ ವ್ಯವಸ್ಥೆ:** ಸಣ್ಣಕೈಗಾರಿಕೆಗಳು ತಮಗೆ ಬೇಕಾಗುವ ದುಡಿಯುವ ಬಂಡವಾಳವನ್ನು ಪಡೆಯುವಲ್ಲಿ ವಿಳಂಬವನ್ನು ತಪ್ಪಿಸಲು ಮತ್ತು ಅನೇಕ ಸಮಸ್ಯೆಗಳನ್ನು ತಪ್ಪಿಸುವುದರ ಸಲುವಾಗಿ ಏಕಗವಾಕ್ಷಿ ವ್ಯವಸ್ಥೆಯನ್ನು ಕಾರ್ಯರೂಪದಲ್ಲಿ ತರಲಾಗಿದ್ದು ಅದ ರಾಜ್ಯ ಹಣಕಾಸು ನಿಗಮಗಳಲ್ಲಿ ಕಾರ್ಯರೂಪಕ್ಕೆ ಬಂದಿದೆ.

**ಎ. ಇಕ್ವಿಟಿಯಲ್ಲಿ ಭಾಗವಹಿಸುವಿಕೆ:** ಸರಕಾರವು ೧೯೯೧ರಿಂದ ಸಣ್ಣ ಕೈಗಾರಿಕೆಗಳ ಶೇರು ಬಂಡವಾಳದಲ್ಲಿ ಇತರ ಕೈಗಾರಿಕಾ ಸಂಸ್ಥೆಗಳು ಶೇಕಡ ೨೪ರವರೆಗೆ ಭಾಗವಹಿಸಲು ಅನುಮತಿ ನೀಡಿದೆ.

**ಏ. ಮೂಲ ಸೌಲಭ್ಯಗಳು:** ಮೂಲ ಸೌಲಭ್ಯಗಳಿಲ್ಲದೇ ಕೈಗಾರಿಕೆಗಳ ಅದರಲ್ಲಿಯೂ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ಅಸಾಧ್ಯ. ಕಟ್ಟಡ, ರಸ್ತೆ, ವಿದ್ಯುತ್, ನೀರು, ದೂರವಾಣಿ ಇವೇ ಮುಂತಾದ ಮೂಲಸೌಲಭ್ಯಗಳನ್ನು ಸಣ್ಣ ಕೈಗಾರಿಕೆಗಳಿಗೆ ಒದಗಿಸುವುದು ಅತ್ಯವಶ್ಯಕ. ಅವುಗಳನ್ನು ಮೊದಲು ಒದಗಿಸಬೇಕು. ಈ ಸೌಲಭ್ಯಗಳನ್ನು ಒದಗಿಸಿದರೆ ಸಣ್ಣ ಕೈಗಾರಿಕೆಗಳು ಬೆಳೆಯಲು ಅನುಕೂಲವಾಗುವುದು. ಈ ದಿಶೆಯಲ್ಲಿ ಸರಕಾರ ಹಲವಾರು ವಿಧದ ಕ್ರಮಗಳನ್ನು ಕೈಕೊಂಡಿದೆ.

ಅ. ಸಣ್ಣ ಕೈಗಾರಿಕೆಗಳ ಅಭಿವೃದ್ಧಿಗಾಗಿ ಆಯ್ದ ಪ್ರದೇಶಗಳ ಎಲ್ಲ ರಾಜ್ಯ ಸರಕಾರಗಳು ಕೈಗಾರಿಕಾ ವಸಾಹತುಗಳನ್ನು ನಿರ್ಮಿಸಿವೆ. ಕೈಗಾರಿಕಾ ವಸಾಹತುಗಳೇನು ಇಂದು ನಾವು ಭಾರತದಾದ್ಯಂತ ಗ್ರಾಮೀಣ ಪ್ರದೇಶಗಳಿಂದ ಹಿಡಿದು ದೊಡ್ಡ ದೊಡ್ಡ ನಗರಗಳಲ್ಲಿಯೂ ಕಾಣುತ್ತೇವೆ. ವಿಶಾಲವಾದ ಪ್ರದೇಶದಲ್ಲಿ ಕೈಗಾರಿಕಾ ಮಳಿಗೆಗಳನ್ನು ನಿರ್ಮಿಸಿ ರಸ್ತೆ, ನೀರು, ವಿದ್ಯುತ್, ಅಂಚೆ, ದೂರಸಂಪರ್ಕ ಮುಂತಾದ ಸೌಲಭ್ಯಗಳನ್ನು ಒದಗಿಸಿ ಕೊಟ್ಟಂತೆ ವ್ಯವಸ್ಥೆಯೇ ಕೈಗಾರಿಕಾ ವಸಾಹತು ಈ ಮಳಿಗೆಗಳನ್ನು ಸಾಮಾನ್ಯವಾಗಿ ಸರಕಾರ ಸಣ್ಣ ಉದ್ದಿಮೆದಾರರಿಗೆ ಬಾಡಿಗೆಯ ರೂಪದಲ್ಲಿ ಕೊಡುತ್ತದೆ. ಪರಸ್ಪರ ಸಂಬಂಧವಿರುವ ಮತ್ತು ಒಂದನ್ನೊಂದು ಆಶ್ರಿತವಾಗಿರುವ ಕೈಗಾರಿಕೆಗಳಿಗೆ ಹೆಚ್ಚಿನ ಲಾಭ ಸಿಗಲು ಮತ್ತು ಶೀಘ್ರಗತಿಯಲ್ಲಿ ಅವುಗಳ ಅಭಿವೃದ್ಧಿಯಾಗಲಿ ಎಂದು ಸರಕಾರ ಈ ವ್ಯವಸ್ಥೆ ಮಾಡಿದೆ.

ಆ. ಭಾರತದ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ಬ್ಯಾಂಕು ಹೊಸ ಯೋಜನೆಯನ್ನು ಆರಂಭಿಸುವುದರ ಮೂಲಕ ಸಣ್ಣ ಕೈಗಾರಿಕೆಗಳ ಅಭಿವೃದ್ಧಿಗೆ ಸಹಾಯ ಸಲ್ಲಿಸುತ್ತಲಿದೆ. ಸಣ್ಣ ಕೈಗಾರಿಕೆಗಳ ಬೆಳವಣಿಗೆಗಾಗಿ ಕೈಗಾರಿಕಾ ಪ್ರದೇಶಗಳನ್ನು ಗುರುತಿಸಿ ಅದರ ಅಭಿವೃದ್ಧಿ ನಿಗಮಗಳ, ರಾಜ್ಯಗಳ ಮೂಲ ಸೌಲಭ್ಯಗಳ ಅಭಿವೃದ್ಧಿ ಮಂಡಳಿ ಮುಂತಾದ ಸಂಸ್ಥೆಗಳ

ಮೂಲಕ ಸಹಾಯ ಮಾಡುತ್ತಿದೆ. ಸಣ್ಣ ನಗರಗಳಲ್ಲಿಯೂ ಕೈಗಾರಿಕಾ ಪ್ರದೇಶಗಳನ್ನು ಗುರುತಿಸಿ ಅಭಿವೃದ್ಧಿಪಡಿಸಲಾಗುತ್ತಿದೆ.

ಇ. ನಬಾರ್ಡ್ ಜಿಲ್ಲಾ ಗ್ರಾಮೀಣ ಕೈಗಾರಿಕಾ ಯೋಜನೆಯನ್ನು ಪ್ರಾರಂಭಿಸಿದ್ದು ಅದರ ಮೂಲಕ ಗ್ರಾಮೀಣ ಪ್ರದೇಶಗಳಿಗೆ ಯೋಗ್ಯವಾದ ಸಣ್ಣ ಕೈಗಾರಿಕೆಗಳ ಸ್ಥಾಪನೆಗೆ ಅವಶ್ಯವಿರುವ ಮೂಲಸೌಕರ್ಯಗಳನ್ನು ಒದಗಿಸಲಾಗುತ್ತಿದೆ.

ಈ. ತಂತ್ರಜ್ಞಾನ ಪಾರ್ಕ್‌ಗಳನ್ನು ನಿರ್ಮಿಸಿ ಮೂಲ ಸೌಲಭ್ಯಗಳನ್ನು ಒದಗಿಸಲಾಗುತ್ತದೆ.

ಹೀಗೆ, ಹಲವು ವಿಧಗಳಲ್ಲಿ ಸಣ್ಣ ಕೈಗಾರಿಕೆಗಳ ಬೆಳವಣಿಗೆಗೆ ಮೂಲ ಸೌಲಭ್ಯಗಳನ್ನು ಒದಗಿಸಲಾಗುತ್ತದೆ.

ಈ ಪ್ರಕಾರ ಸಣ್ಣ ಕೈಗಾರಿಕೆಗಳ ಅಭಿವೃದ್ಧಿಗಾಗಿ ಹಲವಾರು ವಿಧದ ಕ್ರಮಗಳನ್ನು ಕೈಕೊಳ್ಳಲಾಗಿದೆ. ಇದು ಅನಿವಾರ್ಯವೂ ಹೌದು ಮತ್ತು ಅವಶ್ಯಕವೂ ಹೌದು. ರಾಷ್ಟ್ರದ ಕೈಗಾರೀಕರಣಕ್ಕೆ ಮತ್ತು ಆರ್ಥಿಕಾಭಿವೃದ್ಧಿಯಲ್ಲಿ ಕೈಗಾರಿಕೆಗಳ ಪಾತ್ರ ಅತ್ಯಂತ ಮಹತ್ವದ್ದಾಗಿದೆ.

**ಸಾರಾಂಶ**

**ಕೈಗಾರಿಕಾಭಿವೃದ್ಧಿಯ ಅರ್ಥ**

ಕೈಗಾರಿಕೆಗಳು ಮತ್ತು ಅವುಗಳ ಅಭಿವೃದ್ಧಿಗೆ ಸಂಬಂಧಿಸಿದ ಗಣಿ, ಸಾರಿಗೆ ಸಂಪರ್ಕ, ಶಕ್ತಿ ಸ್ಥಾವರಗಳನ್ನು ಅಭಿವೃದ್ಧಿ ಪಡಿಸುವುದು.

**ಕೈಗಾರಿಕೆಗಳ ವರ್ಗೀಕರಣ**

ಸಣ್ಣ, ಮಧ್ಯಮ ಮತ್ತು ದೊಡ್ಡ ಪ್ರಮಾಣದ ಕೈಗಾರಿಕೆಗಳು.

**ಗೃಹ ಕೈಗಾರಿಕೆಗಳ ಅರ್ಥ**

ಸಾಂಪ್ರದಾಯಿಕ ವಸ್ತುಗಳನ್ನು ಸಾಂಪ್ರದಾಯಿಕ ವಿಧಾನಗಳ ಮೂಲಕ ಉತ್ಪಾದಿಸಲಾಗುತ್ತಿದ್ದರೆ ಅದು ಗೃಹ ಕೈಗಾರಿಕೆ.

**ಸಣ್ಣ ಕೈಗಾರಿಕೆಗಳ ಅರ್ಥ**

ಯಾವ ಕೈಗಾರಿಕೆಯಲ್ಲಿ ೧ ಕೋಟಿ ರೂ.ಗಳ ತನಕ ಸ್ಥಿರ ಬಂಡವಾಳವನ್ನು ಹೂಡಲಾಗಿದೆಯೋ ಅಂಥ ಎಲ್ಲ ಕೈಗಾರಿಕೆಗಳು ಸಣ್ಣ ಪ್ರಮಾಣದ ಕೈಗಾರಿಕೆಗಳು

**ಗೃಹ ಕೈಗಾರಿಕೆಗಳ ಲಕ್ಷಣಗಳು**

೧. ಸಾಂಪ್ರದಾಯಿಕ ವಸ್ತುಗಳನ್ನು ಉತ್ಪಾದಿಸಲಾಗುವುದು.

೨. ಸಾಂಪ್ರದಾಯಿಕ ಪದ್ಧತಿಯ ಅನುಕರಣೆ.

೩. ಸಾಮಾನ್ಯವಾಗಿ ಹೊರಗಿನವರನ್ನು ಕೆಲಸಕ್ಕೆ ನೇಮಿಸಿಕೊಳ್ಳಲಾಗುವುದಿಲ್ಲ.

೪. ಮನೆಯಲ್ಲಿಯೇ ವಸ್ತುಗಳನ್ನು ಉತ್ಪಾದಿಸಲಾಗುವುದು.

೫. ವಿದ್ಯುಚ್ಛಕ್ತಿ ಮತ್ತು ಯಂತ್ರಗಳ ಉಪಯೋಗವಿಲ್ಲ.

**ಸಣ್ಣ ಕೈಗಾರಿಕೆಗಳ ಲಕ್ಷಣಗಳು**

೧. ಹೊರಗಿನವರನ್ನು ಕೆಲಸಕ್ಕೆ ನೇಮಿಸಿಕೊಳ್ಳಲಾಗುವುದು.

೨. ವಿದ್ಯುಚ್ಛಕ್ತಿಯನ್ನು ಬಳಸಿಕೊಳ್ಳಲಾಗುವುದು.

೩. ಯಂತ್ರೋಪಕರಣಗಳನ್ನು ಬಳಸಿಕೊಳ್ಳಲಾಗುತ್ತದೆ.

೪. ಸ್ಥಳೀಯ ಹಾಗೂ ದೂರದ ಮಾರುಕಟ್ಟೆಗಳಿಂದ ಕಚ್ಚಾ ವಸ್ತುಗಳನ್ನು ದೊರಕಿಸಿ ಕೊಳ್ಳಲಾಗುವುದು.

೫. ಸಿದ್ಧ ವಸ್ತುಗಳನ್ನು ಅಂತರಾಷ್ಟ್ರೀಯ ಮಾರುಕಟ್ಟೆಯಲ್ಲಿಯೂ ಮಾರಾಟ ಮಾಡಲಾಗುತ್ತವೆ.

**ಮಧ್ಯಮ ಪ್ರಮಾಣದ ಕೈಗಾರಿಕೆಗಳ ಅರ್ಥ**

೧ ಕೋಟಿ ರೂ.ಗಳಿಗಿಂತ ಹೆಚ್ಚು ಮತ್ತು ೧೦ ಕೋಟಿ ರೂ.ಗಳಿಗಿಂತ ಕಡಿಮೆ ಸ್ಥಿತಿ ಬಂಡವಾಳವನ್ನು ಹೂಡುವ ಎಲ್ಲ ವಿಧದ ಕೈಗಾರಿಕೆಗಳು ಮಧ್ಯಮ ಪ್ರಮಾಣದ ಕೈಗಾರಿಕೆಗಳು.

**ಸಣ್ಣ ಪ್ರಮಾಣದ ಕೈಗಾರಿಕೆಗಳ ಉತ್ತೇಜನ ನೀತಿಯ ಉದ್ದೇಶಗಳು**

**ಅಥವಾ**

**ಸಣ್ಣ ಪ್ರಮಾಣದ ಕೈಗಾರಿಕೆಗಳ ಮಹತ್ವ**

೧. ಉದ್ಯೋಗ ನಿರ್ಮಾಣ.

೨. ರಫ್ತು ಉತ್ತೇಜನ.

೩. ಉತ್ಪಾದನೆ ಮತ್ತು ಬಂಡವಾಳ ಹೂಡಿಕೆಗಳಲ್ಲಿ ಉತ್ತೇಜನ.

೪. ಸ್ಥಳೀಯ ಸಂಪನ್ಮೂಲಗಳ ಉಪಯೋಗ.

೫. ಸಂಪತ್ತಿನ ಹಂಚಿಕೆಯಲ್ಲಿ ಸಮಾನತೆ.

೬. ಉದ್ಯಮಶೀಲತೆಯ ಬೆಳವಣಿಗೆ.

೭. ಕೃಷಿಗೆ ಸಹಾಯ.

೮. ದೊಡ್ಡ ಕೈಗಾರಿಕೆಗಳಿಗೆ ಸಹಾಯ.

೯. ಗ್ರಾಮೀಣ ಸ್ವಯಂ ಸಾಮರ್ಥ್ಯದ ಸಾಧನೆ.

೧೦. ಶೀಘ್ರ ಪ್ರತಿಫಲ.

**ಸಣ್ಣ ಪ್ರಮಾಣದ ಕೈಗಾರಿಕೆಗಳ ಸಮಸ್ಯೆಗಳು**

೧. ಕಚ್ಚಾ ವಸ್ತುಗಳ ಅಭಾವ

೨. ವಿದ್ಯುಚ್ಛಕ್ತಿಯ ಸಮಸ್ಯೆ

೩. ಹಣಕಾಸು ಸಮಸ್ಯೆ

೪. ತಂತ್ರಜ್ಞಾನದ ಅಭಾವ

೫. ವಿಳಂಬಿತ ಸಂದಾಯಗಳು

೬. ಮಾರಾಟ ಸಮಸ್ಯೆ

೭. ಅಮೀಸಲಾತಿ

**ಸಣ್ಣ ಪ್ರಮಾಣದ ಕೈಗಾರಿಕೆಗಳ ಅಸ್ವಸ್ಥತೆಯ ಅರ್ಥ**

ಹಿಂದಿನ ಹಣಕಾಸು ವರ್ಷದಲ್ಲಿ ನಗದು ಹಾನಿ ಸಂಭವಿಸಿದ್ದರೆ ಮತ್ತೆ ಅದು ಚಾಲ್ತಿ ವರ್ಷದಲ್ಲಿಯೂ ಮುಂದುವರೆಯಬಹುದಾಗಿದ್ದರೆ ಮತ್ತು ಕಳೆದ ಐದು ವರ್ಷಗಳಿಂದ ಶೇಕಡ ೫೦ ಅಥವಾ ಅದಕ್ಕಿಂತ ಹೆಚ್ಚಿನ ಪ್ರಮಾಣದ ದುಡಿಯುವ ಬಂಡವಾಳದ ನಗದು ಸವಕಳಿ ಹೊಂದಿದ್ದರೆ ಅದು ಅಸ್ವಸ್ಥ ಕೈಗಾರಿಕೆ.

**ಅಸ್ವಸ್ಥತೆ ಮತ್ತು ಇತರ ಸಮಸ್ಯೆಗಳ ನಿವಾರಣೆಗೆ ಕ್ರಮಗಳು**

೧. ಮಾರಾಟಕ್ಕೆ ಸಹಾಯ

೨. ತಂತ್ರಜ್ಞಾನದ ಉನ್ನತೀಕರಣ

೩. ರಿಯಾಯಿತಿ ಹಣಕಾಸು

೪. ಮೂಲ ಸೌಲಭ್ಯಗಳು

**ದೊಡ್ಡ ಪ್ರಮಾಣದ ಕೈಗಾರಿಕೆಗಳ ಅರ್ಥ**

ಯಾವ ಕೈಗಾರಿಕೆಯಲ್ಲಿ ೧೦ ಕೋಟಿ ರೂ.ಗಳಿಗಿಂತ ಹೆಚ್ಚು ಸ್ಥಿರ ಬಂಡವಾಳ ಹೂಡಲಾಗಿದೆಯೋ ಅದು ದೊಡ್ಡ ಪ್ರಮಾಣದ ಕೈಗಾರಿಕೆ.

**ದೊಡ್ಡ ಪ್ರಮಾಣದ ಕೈಗಾರಿಕೆಯ ಲಕ್ಷಣಗಳು**

೧. ದೊಡ್ಡ ಪ್ರಮಾಣದ ಉತ್ಪಾದನೆ

೨. ದೊಡ್ಡ ಪ್ರಮಾಣದಲ್ಲಿ ಬಂಡವಾಳ ಹೂಡುವಿಕೆ

೩. ಯಂತ್ರಗಳ ಬಳಕೆ

೪. ಶ್ರಮ ವಿಭಜನೆಯ ಪ್ರಯೋಜನ

೫. ದೊಡ್ಡ ಪ್ರಮಾಣದಲ್ಲಿ ಕಾರ್ಮಿಕರ ಬಳಕೆ

**ತಯಾರಿಕಾ ಕೈಗಾರಿಕೆಗಳ ಅರ್ಥ**

ಕೃಷಿ ಮತ್ತು ಗಣಿ ಉದ್ಯಮಗಳು ಒದಗಿಸುವ ಕಚ್ಚಾ ವಸ್ತುಗಳನ್ನು ಮತ್ತು ಇತರೆ ನೈಸರ್ಗಿಕ ಸಂಪನ್ಮೂಲಗಳನ್ನು ಉಪಯೋಗಿಸಿಕೊಂಡು ಸಿದ್ಧ ವಸ್ತುಗಳನ್ನು ತಯಾರಿಸುವ ಕೈಗಾರಿಕೆಗಳು ತಯಾರಿಕಾ ಕೈಗಾರಿಕೆಗಳು.

**ಸೇವಾ ಕೈಗಾರಿಕೆಗಳು**

ಸೇವೆಗಳನ್ನು ಉತ್ಪಾದಿಸುವ ಅಥವಾ ಸಲ್ಲಿಸುವ ಕೈಗಾರಿಕೆಗಳು. ಸೇವೆ ಸಲ್ಲಿಸುವ ಶಿಕ್ಷಣ, ಬ್ಯಾಂಕಿಂಗ್, ವೈದ್ಯಕೀಯ, ವಿಮಾಸಂಸ್ಥೆಗಳು ಮುಂತಾದವು.

**ಕೈಗಾರಿಕಾ ನೀತಿ**

ಕೈಗಾರಿಕೆಗಳ ಸ್ಥಾಪನೆ ಮತ್ತು ಪ್ರಗತಿಪುಷ್ಟ ನೀಡುವ ಸಂಗತಿಗಳ ಬಗೆಗೆ ಅಳವಡಿಸಿಕೊಂಡ ಅಧಿಕೃತ ನಿಯಮಗಳೇ ಕೈಗಾರಿಕಾ ನೀತಿ.

ಕೈಗಾರಿಕೆಗಳ ಕ್ರಮಬದ್ಧವಾದ ಪ್ರಗತಿ ಮತ್ತು ಅವುಗಳ ನಿಯಂತ್ರಣವು ಕೈಗಾರಿಕಾ ನೀತಿಯ ದ್ಯೇಯವಾಗಿವೆ.

**ಉದಾರೀಕರಣದ ಅರ್ಥ**

ಆರ್ಥಿಕ ವ್ಯವಸ್ಥೆಯ ಎಲ್ಲ ಹತೋಟಿ ಮತ್ತು ನಿಯಂತ್ರಣಗಳಿಂದ ಮುಕ್ತಗೊಳಿಸುವುದು ಉದಾರೀಕರಣ.

**ಖಾಸಗೀಕರಣದ ಅರ್ಥ**

ಸರಕಾರಿ ವಲಯದಲ್ಲಿ ಖಾಸಗಿ ವ್ಯಕ್ತಿಗಳು ಪಾಲುದಾರರಾಗಲು ಅವಕಾಶ ಮಾಡಿ ಕೊಡುವುದು ಖಾಸಗಿ ವಲಯ.

**ಕೈಗಾರಿಕೆಗಳ ಅಭಿವೃದ್ಧಿಗಾಗಿ ರೂಪಿಸಿದ ತಂತ್ರಗಳು**

೧. ಪರವಾನಿಗೆ ರಹಿತ ನೀತಿ

೨. ವಿದೇಶಿ ಬಂಡವಾಳ ಹೂಡುವಿಕೆಗೆ ಉತ್ತೇಜನ

೩. ಖಾಸಗಿ ವಲಯದ ಭಾಗವಹಿಸುವಿಕೆ

೪. ಬಂಡವಾಳ ಹೂಡಿಕೆಯ ಹಿಂತೆಗೆತ

೫. ಏಕಸ್ವಾಮ್ಯ ಮತ್ತು ಪ್ರತಿಬಂಧಿತ ಚಟುವಟಿಕೆ ಕಾನೂನು.

**ಪಾರಿಭಾಷಿಕ ಕೋಶ**

ಗೃಹ ಕೈಗಾರಿಕೆ - Cottage Industry = ಸಾಂಪ್ರದಾಯಿಕ ವಸ್ತುಗಳನ್ನು ಸಾಂಪ್ರದಾಯಿಕ ವಿಧಾನದಲ್ಲಿ ಉತ್ಪಾದಿಸುವುದು.

ಸಣ್ಣ ಪ್ರಮಾಣದ ಕೈಗಾರಿಕೆ - Small Scale Industry =೧ ಕೋಟಿ ರೂ.ಗಳ ತನಕ ಸ್ಥಿರ ಬಂಡವಾಳ ಹೂಡುವ ಕೈಗಾರಿಕೆ

ಮಧ್ಯಮ ಪ್ರಮಾಣದ ಕೈಗಾರಿಕೆ - Medium Scale Industry = ೧೦ ಕೋಟಿ ರೂ.ಗಳ ತನಕ ಸ್ಥಿರ ಬಂಡವಾಳ ಹೂಡುವ ಕೈಗಾರಿಕೆ.

ದೊಡ್ಡ ಪ್ರಮಾಣದ ಕೈಗಾರಿಕೆ - Large Scale Industry = ೧೦ ಕೋಟಿ ರೂ.ಗಳಿಗಿಂತ ಹೆಚ್ಚು ಸ್ಥಿರ ಬಂಡವಾಳ ಹೂಡುವ ಕೈಗಾರಿಕೆ

ಪೂರಕ ಕೈಗಾರಿಕೆ - Ancillary Industry = ಇತರ ಕೈಗಾರಿಕೆಗಳಿಗೆ ಸಹಾಯಕವಾಗುವ ವಸ್ತುಗಳನ್ನು ಉತ್ಪಾದಿಸುವ ಕೈಗಾರಿಕೆ.

ತಯಾರಿಕಾ ಕೈಗಾರಿಕೆ - Manufacturing Industry = ಸಿದ್ಧ ವಸ್ತುಗಳನ್ನು ಉತ್ಪಾದಿಸುವ ಕೈಗಾರಿಕೆ.

ಸೇವಾ ಕೈಗಾರಿಕೆ - Service Industry = ಸೇವೆಗಳನ್ನು ಸಲ್ಲಿಸುವ ಕೈಗಾರಿಕೆ.

ಕೈಗಾರಿಕೆಗಳ ಅಭಿವೃದ್ಧಿಯ ತಂತ್ರ - Strategy for Industrial Development = ಕೈಗಾರಿಕೆಗಳ ಅಭಿವೃದ್ಧಿಗಾಗಿ ಸರಕಾರ ರೂಪಿಸಿದ ಕ್ರಮಗಳು.

ಕೈಗಾರಿಕಾ ನೀತಿ - Industrial Policy = ಕೈಗಾರಿಕೆಗಳ ಪ್ರಗತಿ ಮತ್ತು ಸ್ಥಾಪನೆಗೆ ಸಂಬಂಧಪಟ್ಟ ಸರಕಾರದ ನಿಯಮ.

ಪರವಾನಿಗೆ ರಹಿತ ನೀತಿ - Delicencing Policy = ಕೈಗಾರಿಕೆಗಳ ಸ್ಥಾಪನೆಗೆ ಅವಶ್ಯಕವಾದ ಪರವಾನಿಗೆಯನ್ನು ರದ್ದು ಪಡಿಸುವುದು.

ವಿದೇಶಿ ಬಂಡವಾಳ ಹೂಡುವಿಕೆಯ ಒಳಹರಿಯುವಿಕೆ - Inflow of Foreign Investment = ವಿದೇಶಗಳಿಂದ ಭಾರತದಲ್ಲಿ ಬಂಡವಾಳ ಹೂಡುವುದು.

ಬಂಡವಾಳ ಹೂಡುವಿಕೆಯ ಹಿಂತೆಗೆತ - Disinvestment = ಸಾರ್ವಜನಿಕ ವಲಯದಲ್ಲಿ ಹೂಡಿದ ಬಂಡವಾಳವನ್ನು ಖಾಸಗಿಯವರಿಗೆ ಮಾರಾಟ ಮಾಡಬಹುದು.

ಏಕಸ್ವಾಮ್ಯ ಮತ್ತು ಪ್ರತಿಬಂಧಿತ ವ್ಯಾಪಾರಿ ಚಟುವಟಿಕೆಗಳ ಕಾನೂನು - Monopoly and Restrictive Trade Practices Act - MRTP ACT = ಆರ್ಥಿಕ ಶಕ್ತಿಯ ಕೇಂದ್ರೀಕರಣವನ್ನು ನಿಯಂತ್ರಿಸುವುದಕ್ಕಾಗಿ ತಂದ ಕಾನೂನು.

## ಪ್ರಶ್ನೆಗಳು

**ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ಉತ್ತರಿಸಿ. ೧ ಅಂಕಗಳು**

೧. ಕೈಗಾರಿಕಾ ಅಭಿವೃದ್ಧಿ ಎಂದರೇನು?

೨. ಕೈಗಾರೀಕರಣದ ಅರ್ಥ ತಿಳಿಸಿ.

೩. ಗೃಹ ಕೈಗಾರಿಕೆಯೆಂದರೇನು?

೪. ಗೃಹ ಕೈಗಾರಿಕೆಗಳ ಯಾವುದಾದರೂ ಎರಡು ಗೃಹ ಕೈಗಾರಿಕೆಗಳನ್ನು ಹೆಸರಿಸಿ.

೫. ಮನೆಯಲ್ಲಿಯೇ ಮನೆಯ ಮಂದಿ ನಡೆಸಿಕೊಂಡು ಹೋಗುವ ಕೈಗಾರಿಕೆ ಯಾವುದು?

೬. ಸಣ್ಣ ಕೈಗಾರಿಕೆಯ ಅರ್ಥ ತಿಳಿಸಿ.

೭. ಸಣ್ಣ ಕೈಗಾರಿಕೆಗಳ ಯಾವುದಾದರೂ ಎರಡು ಕೈಗಾರಿಕೆಗಳನ್ನು ತಿಳಿಸಿ.

೮. ಅತಿ ಸಣ್ಣ ಕೈಗಾರಿಕೆಗಳು ಎಂದರೆ ಯಾವುವು?

೯. ಪೂರಕ ಕೈಗಾರಿಕೆಗಳು ಎಂದರೇನು?

೧೦. ಮಧ್ಯಮ ಪ್ರಮಾಣದ ಕೈಗಾರಿಕೆಯ ಅರ್ಥ ತಿಳಿಸಿ.

೧೧. ದೊಡ್ಡ ಕೈಗಾರಿಕೆ ಎಂದರೇನು?

೧೨. ಭಾರತದಲ್ಲಿಯ ಯಾವುದಾದರೂ ಎರಡು ದೊಡ್ಡ ಕೈಗಾರಿಕೆಗಳನ್ನು ಹೆಸರಿಸಿ.

೧೩. ತಯಾರಿಕಾ ಕೈಗಾರಿಕೆಗಳು ಎಂದರೇನು?

೧೪. ಸೇವಾ ಕೈಗಾರಿಕೆಗಳು ಎಂದರೆ ಯಾವುವು?

೧೫. ಯಾವುದಾದರೂ ಎರಡು ಸೇವಾ ಕೈಗಾರಿಕೆಯನ್ನು ಹೆಸರಿಸಿ.

೧೬. ಹೊಸ ಕೈಗಾರಿಕಾ ನೀತಿ ಯಾವಾಗ ಘೋಷಣೆಯಾಯಿತು.

೧೭. ಉದಾರೀಕರಣ ಎಂದರೇನು?

೧೮. ಖಾಸಗೀಕರಣದ ಅರ್ಥ ತಿಳಿಸಿ.

೧೯. ಖಾಸಗಿ ವಲಯ ಎಂದರೇನು?

೨೦. ಬಂಡವಾಳ ಹೂಡಿಕೆಯ ಹಿಂತೆಗೆತದ ಅರ್ಥ ಕೊಡಿ.

೨೧. ಭಾರತದಲ್ಲಿ ಬಂಡವಾಳ ಹಿಂತೆಗೆತ ಯಾವ ವರ್ಷದಿಂದ ಆರಂಭವಾಯಿತು?

೨೨. M.R.T.P. Actದ ವಿಸ್ತೃತ ರೂಪ ಕೊಡಿ.

೨೩. ಏಕಸ್ವಾಮ್ಯ ಮತ್ತು ಪ್ರತಿಬಂಧಿತ ವ್ಯಾಪಾರಿ ಚಟುವಟಿಕೆಗಳ ಕಾನೂನಿನ ಮೂಲ ಉದ್ದೇಶ ಯಾವುದು?

೨೪. ಶ್ರಮ ಸಾಂದ್ರ ಕೈಗಾರಿಕೆ ಯಾವುದು?

೨೫. ಸಣ್ಣ ಕೈಗಾರಿಕೆಗಳ ಯಾವುದಾದರೂ ಎರಡು ರಫ್ತು ವಸ್ತುಗಳನ್ನು ಹೆಸರಿಸಿ.

೨೬. ಸಣ್ಣ ಪ್ರಮಾಣದ ಕೈಗಾರಿಕೆಗಳ ಯಾವುದಾದರೂ ಒಂದು ಸಮಸ್ಯೆಯನ್ನು ಹೆಸರಿಸಿ.

೨೭. ಅಸ್ವಸ್ಥ ಕೈಗಾರಿಕೆಯ ಅರ್ಥ ತಿಳಿಸಿ.

೨೮. ಕೈಗಾರಿಕಾ ವಸಾಹತು ಎಂದರೇನು?

೨೯. SIDBI ವಿಸ್ತರಿಸಿ.

೩೦. ಸಣ್ಣ ಕೈಗಾರಿಕೆಗಳ ಅಸ್ವಸ್ಥತೆಗೆ ಯಾವುದಾದರೂ ಒಂದು ಕಾರಣ ತಿಳಿಸಿ.

೩೧. ಸಣ್ಣ ಕೈಗಾರಿಕೆಗಳನ್ನು ಅಭಿವೃದ್ಧಿಪಡಿಸಲು ಸರಕಾರ ಸ್ಥಾಪಿಸಿದ ಯಾವುದಾದರೂ ಒಂದು ಸಂಸ್ಥೆಯನ್ನು ಹೆಸರಿಸಿ.

**ಕೆಳಗಿನ ಪ್ರಶ್ನೆಗಳನ್ನು ಸುಮಾರು ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ. ೨ ಅಂಕಗಳು**

೩೨. ಕೈಗಾರಿಕೆಗಳನ್ನು ವರ್ಗೀಕರಿಸಿ.

೩೩. ಗೃಹ ಕೈಗಾರಿಕೆಗಳ ಲಕ್ಷಣಗಳನ್ನು ತಿಳಿಸಿ.

೩೪. ಸಣ್ಣ ಕೈಗಾರಿಕೆಗಳ ಲಕ್ಷಣಗಳು ಯಾವುವು

೩೫. ದೊಡ್ಡ ಪ್ರಮಾಣದ ಕೈಗಾರಿಕೆಗಳ ಲಕ್ಷಣಗಳನ್ನು ಬರೆಯಿರಿ.

೩೬. ತಯಾರಿಕಾ ಕೈಗಾರಿಕೆ ಮತ್ತು ಸೇವಾ ಕೈಗಾರಿಕೆಗಳ ನಡುವಿನ ಎರಡು ವ್ಯತ್ಯಾಸಗಳೇನು ತಿಳಿಸಿ.

೩೭. ಸೇವಾ ಕೈಗಾರಿಕೆಗಳ ಬಗ್ಗೆ ಟಿಪ್ಪಣಿ ಬರೆಯಿರಿ.

೩೮. ತಯಾರಿಕಾ ಕೈಗಾರಿಕೆ ಕುರಿತು ಬರೆಯಿರಿ.

೩೯. ಸಣ್ಣ ಕೈಗಾರಿಕೆಗಳ ವಿವಿಧ ಪ್ರಕಾರಗಳು ಯಾವುವು

೪೦. ದೊಡ್ಡ ಕೈಗಾರಿಕೆ ಎಂದರೇನು ಯಾವುದಾದರೂ ಎರಡು ದೊಡ್ಡ ಕೈಗಾರಿಕೆಗಳನ್ನು ಹೆಸರಿಸಿ.

೪೧. ಯಾವುದಾದರೂ ನಾಲ್ಕು ದೊಡ್ಡ ಕೈಗಾರಿಕೆಗಳನ್ನು ತಿಳಿಸಿ.

೪೨. ಬಂಡವಾಳ ಹಿಂತೆಗೆತ ಕುರಿತು ಬರೆಯಿರಿ.

೪೩. ೧೯೯೧ರ ಹೊಸ ಕೈಗಾರಿಕಾ ನೀತಿಯ ಯಾವುದಾದರೂ ನಾಲ್ಕು ಲಕ್ಷಣಗಳನ್ನು ತಿಳಿಸಿ.

೪೪. ಪರವಾನಿಗೆ ಕಡ್ಡಾಯವಾಗಿರುವ ಯಾವುದಾದರೂ ನಾಲ್ಕು ಕೈಗಾರಿಕೆಗಳನ್ನು ಹೆಸರಿಸಿ.

೪೫. ವಿದೇಶಿ ಬಂಡವಾಳ ಹೂಡುವಿಕೆಗೆ ಉತ್ತೇಜನ ನೀಡುವ ಎರಡು ಅಂಶಗಳನ್ನು ತಿಳಿಸಿ.

೪೬. ಖಾಸಗಿ ವಲಯಕ್ಕೆ ಉತ್ತೇಜನ ನೀಡುವುದರ ಸಲುವಾಗಿ ಸರಕಾರ ಕೈಗೊಂಡ ಎರಡು ಕ್ರಮಗಳನ್ನು ತಿಳಿಸಿ.

೪೭. ಬಂಡವಾಳ ಹೂಡುವಿಕೆ ಹಿಂತೆಗೆತದ ಹಿಂದೆ ಇರುವ ಯಾವುದಾದರೂ ಎರಡು ಉದ್ದೇಶಗಳನ್ನು ತಿಳಿಸಿ.

೪೮. ಸಣ್ಣ ಪ್ರಮಾಣದ ಕೈಗಾರಿಕೆಗಳು ಹೆಚ್ಚು ಉದ್ಯೋಗವನ್ನು ಹೇಗೆ ಸೃಷ್ಟಿಸ ಬಲ್ಲವು

೪೯. ಸಣ್ಣ ಪ್ರಮಾಣದ ಕೈಗಾರಿಕೆಗಳ ಯಾವುದಾದರೂ ನಾಲ್ಕು ಸಮಸ್ಯೆಗಳನ್ನು ತಿಳಿಸಿ.

೫೦. ಭಾರತೀಯ ರಿಝರ್ವ್ ಬ್ಯಾಂಕಿನ ಪ್ರಕಾರ ಸಣ್ಣ ಪ್ರಮಾಣದ ಕೈಗಾರಿಕೆಯ ಅಸ್ವಸ್ಥತೆ ಎಂದರೇನು?

೫೧. ಸಣ್ಣ ಪ್ರಮಾಣದ ಕೈಗಾರಿಕೆಗಳ ಅಸ್ವಸ್ಥತೆಗೆ ಯಾವುದಾದರೂ ಎರಡು ಕಾರಣ ತಿಳಿಸಿ.

೫೨. ಸಣ್ಣ ಕೈಗಾರಿಕೆಗಳ ಅಸ್ವಸ್ಥತೆ ಮತ್ತು ಇತರ ಸಮಸ್ಯೆಗಳಿಗೆ ಸರಕಾರ ಕೈಗೊಂಡ ಯಾವುದಾದರೂ ನಾಲ್ಕು ಕ್ರಮಗಳನ್ನು ತಿಳಿಸಿ.

೫೩. ತಂತ್ರಜ್ಞಾನದ ಉನ್ನತೀಕರಣಕ್ಕಾಗಿ ಸರಕಾರ ಸ್ಥಾಪಿಸಿದ ಯಾವುದಾದರೂ ನಾಲ್ಕು ಸಂಸ್ಥೆಗಳನ್ನು ಹೆಸರಿಸಿ.

೫೪. ಕೈಗಾರಿಕಾ ವಸಾಹತು ಕುರಿತು ಬರೆಯಿರಿ.

**ಕೆಳಗಿನ ಪ್ರಶ್ನೆಗಳಿಗೆ ೧೫ ರಿಂದ ೨೦ ವಾಕ್ಯಗಳಲ್ಲಿ ಉತ್ತರಿಸಿ. ೫ ಅಂಕಗಳು**

೫೫. ದೊಡ್ಡ ಪ್ರಮಾಣದ ಕೈಗಾರಿಕೆಗಳ ಬಗ್ಗೆ ಟಿಪ್ಪಣಿ ಬರೆಯಿರಿ.

೫೬. ಸಣ್ಣ ಕೈಗಾರಿಕೆಗಳ ಬಗ್ಗೆ ವಿವರಣೆ ಕೊಡಿ.

೫೭. ಕೈಗಾರಿಕಾ ಅಭಿವೃದ್ಧಿ ಎಂದರೇನು? ಕೈಗಾರಿಕೆಗಳನ್ನು ವರ್ಗೀಕರಿಸಿ.

೫೮. ತಯಾರಿಕಾ ಕೈಗಾರಿಕೆಗಳು ಮತ್ತು ಸೇವಾ ಕೈಗಾರಿಕೆಗಳ ನಡುವಿನ ವ್ಯತ್ಯಾಸ ವಿವರಿಸಿ.

೫೯. ಕೈಗಾರಿಕಾ ವಲಯ ಸುಧಾರಣೆ ಕುರಿತು ಚರ್ಚಿಸಿ.

೬೦. ಕೈಗಾರಿಕೆಗಳ ಅಭಿವೃದ್ಧಿಗಾಗಿ ಸರಕಾರ ಕೈಗೊಂಡ ಕ್ರಮಗಳನ್ನು ವಿವರಿಸಿ.

೬೧. ೧೯೯೧ರ ಹೊಸ ಕೈಗಾರಿಕಾ ನೀತಿ ಕೈಗಾರಿಕೆಗಳ ಬೆಳವಣಿಗೆಗೆ ಹೇಗೆ ಸಹಾಯಕ ವಾಗಬಲ್ಲದು ಎಂಬುದನ್ನು ವಿಷದೀಕರಿಸಿ.

೬೨. ೧೯೯೧ರ ಕೈಗಾರಿಕಾ ನೀತಿಯ ಪ್ರಮುಖ ಲಕ್ಷಣಗಳನ್ನು ವಿವರಿಸಿ.

೬೩. ಪರವಾನಿಗೆ ರಹಿತ ನೀತಿಯ ಪ್ರಮುಖ ಲಕ್ಷಣಗಳನ್ನು ವಿವರಿಸಿ.

೬೪. ಹೊಸ ಕೈಗಾರಿಕಾ ನೀತಿಯಲ್ಲಿ ವಿದೇಶಿ ಬಂಡವಾಳ ಹೂಡಿವಿಕೆಗೆ ಉತ್ತೇಜನ ಕುರಿತು ಒಳಗೊಂಡ ಅಂಶಗಳನ್ನು ತಿಳಿಸಿ.

೬೫. ಖಾಸಗಿ ವಲಯದ ಭಾಗವಹಿಸುವಿಕೆಗೆ ಉತ್ತೇಜನ ನೀಡುವ ಸಂಗತಿಗಳನ್ನು ವಿವರಿಸಿ.

೬೬. ಬಂಡವಾಳ ಹೂಡಿಕೆಯ ಹಿಂತೆಗೆತ ಎಂದರೇನು

೬೭. ಬಂಡವಾಳ ಹೂಡಿಕೆಯ ಹಿಂತೆಗೆತ ಕುರಿತು ಬರೆಯಿರಿ.

೬೮. ಭಾರತದಲ್ಲಿ ಏಕಸ್ವಾಮ್ಯ ಮತ್ತು ಪ್ರತಿಬಂಧಿತ ವ್ಯಾಪಾರಿ ಚಟುವಟಿಕೆಗಳ ಕಾನೂನು ಕುರಿತು ವಿವರಿಸಿ.

೬೯. ಭಾರತದ ಆರ್ಥಿಕತೆಯಲ್ಲಿ ಸಣ್ಣ ಕೈಗಾರಿಕೆಯ ಪ್ರಾಮುಖ್ಯತೆಯನ್ನು ವಿವರಿಸಿ.

೭೦. ಭಾತದಲ್ಲಿ ಸಣ್ಣ ಪ್ರಮಾಣದ ಕೈಗಾರಿಕೆಗಳಿಗೆ ಉತ್ತೇಜನ ಕೊಡುವದು ಅವಶ್ಯಕವೇ ಚರ್ಚಿಸಿ.

೭೧. ಉದ್ಯೋಗ ನಿರ್ಮಾಣ ಮತ್ತು ಉತ್ಪಾದನೆ ಹಾಗೂ ಬಂಡವಾಳ ಹೂಡಿಕೆಗಳಲ್ಲಿ ಹೆಚ್ಚಳದ ದೃಷ್ಟಿಯಿಂದ ಸಣ್ಣ ಕೈಗಾರಿಕೆಗಳ ಮಹತ್ವವನ್ನು ವಿವರಿಸಿ.

೭೨. ಸಣ್ಣ ಪ್ರಮಾಣದ ಕೈಗಾರಿಕೆಗಳ ಉತ್ತೇಜನ ನೀತಿಯ ಉದ್ದೇಶಗಳನ್ನು ವಿವರಿಸಿ.

೭೩. ಭಾರತದಲ್ಲಿ ಸಣ್ಣ ಪ್ರಮಾಣದ ಕೈಗಾರಿಕೆಗಳು ಎದುರಿಸುತ್ತಿರುವ ಪ್ರಮುಖ ಸಮಸ್ಯೆಗಳು ಯಾವುವು ಚರ್ಚಿಸಿ.

೭೪. ಭಾರತದಲ್ಲಿ ಸಣ್ಣ ಪ್ರಮಾಣದ ಕೈಗಾರಿಕೆಗಳ ಪ್ರಗತಿ ನಿರೀಕ್ಷಿಸಿದಷ್ಟು ಆಗಲಿಲ್ಲ ಚರ್ಚಿಸಿ.

೭೫. ವಿಳಂಬಿತ ಸಂದಾಯಗಳು ಮತ್ತು ಮಾರಾಟ ಸಮಸ್ಯೆಗಳು ಸಣ್ಣ ಕೈಗಾರಿಕೆಗಳ ಬೆಳವಣಿಗೆಯನ್ನು ಕುಂಠಿತಗೊಳಿಸಿವೆ ಎಂಬುದನ್ನು ಸಿದ್ಧಪಡಿಸಿ.

೭೬. ಸಣ್ಣ ಪ್ರಮಾಣದ ಕೈಗಾರಿಕೆಗಳ ಅಸ್ವಸ್ಥತೆ ಎಂದರೇನು ಅದರ ನಿವಾರಣೆಗೆ ಸರಕಾರ ಕೈಗೊಂಡ ಕ್ರಮಗಳನ್ನು ಸಂಕ್ಷಿಪ್ತವಾಗಿ ವಿವರಿಸಿ.

೭೭. ಸಣ್ಣ ಪ್ರಮಾಣದ ಕೈಗಾರಿಕೆಗಳ ಸಮಸ್ಯೆಗಳ ನಿವಾರಣೆಗೆ ಸರಕಾರ ಕೈಗೊಂಡ ಕ್ರಮಗಳನ್ನು ಚರ್ಚಿಸಿ.

೭೮. ಸರಕಾರವು ಯಾವ ರೀತಿಯಲ್ಲಿ ಸಣ್ಣ ಕೈಗಾರಿಕೆಗಳಿಗೆ ಹಣಕಾಸಿನ ಮತ್ತು ಮಾರಾಟಕ್ಕೆ ಸಹಾಯವನ್ನು ಸಲ್ಲಿಸುತ್ತಿದೆ.

೭೯. ಸಣ್ಣ ಪ್ರಮಾಣದ ಕೈಗಾರಿಕೆಗಳ ತಂತ್ರಜ್ಞಾನದ ಉನ್ನತೀಕರಣ ಕುರಿತು ಸರಕಾರ ಕೈಗೊಂಡ ಕ್ರಮಗಳ್ನು ವಿವರಿಸಿ.

೮೦. ಸಣ್ಣ ಪ್ರಮಾಣದ ಕೈಗಾರಿಕೆಗಳ ಬೆಳವಣಿಗೆಗೆ ಸರಕಾರ ಕೈಗೊಂಡ ವಿವಿಧ ಕ್ರಮಗಳನ್ನು ಚರ್ಚಿಸಿ.

# ಅಧ್ಯಾಯ ೫

## ಕಾರ್ಮಿಕ ನೀತಿ

**೫.೧. ಕೃಷಿ ಕಾರ್ಮಿಕರು** ಕೃಷಿ ಕಾರ್ಮಿಕರ ಗಾತ್ರ, ಕೃಷಿ ಕಾರ್ಮಿಕರು ಮತ್ತು ಕೃಷಿಕರ ನಡುವಣ ವ್ಯತ್ಯಾಸ, ಕೃಷಿ ಕಾರ್ಮಿಕರ ಸಾಮಾಜಿಕ, ಆರ್ಥಿಕ ಸ್ಥಾನಮಾನ. ಜಾತಿ ಮತ್ತು ಲಿಂಗ ಸಂರಚನೆ. ಜೀತ ಪದ್ಧತಿ ವ್ಯವಸ್ಥೆ ಮತ್ತು ಅದರ ನಿರ್ಮೂಲನೆ. ಬಾಲ ಕಾರ್ಮಿಕರು ಮತ್ತು ಅದರ ನಿರ್ಮೂಲನೆ. ಅಸಂಘಟಿತ ಕಾರ್ಮಿಕ ಮಾರುಕಟ್ಟೆಗಳು, ಸಾಮಾಜಿಕ ಭದ್ರತಾ ಕ್ರಮಗಳ ಕೊರತೆ. ಕೃಷಿ ಕೂಲಿ ಪದ್ಧತಿಯ ಪ್ರವೃತ್ತಿಗಳು, ನೈಜ ಕೂಲಿ, ಹಣರೂಪಿ ಕೂಲಿ, ಕನಿಷ್ಟ ಕೂಲಿ ಕಾಯಿದೆ.

**೫.೨. ಕೈಗಾರಿಕಾ ಕಾರ್ಮಿಕರು** ಕೈಗಾರಿಕಾ ಕಾರ್ಮಿಕರ ವ್ಯಾಖ್ಯೆ. ಕೈಗಾರಿಕಾ ಕಾರ್ಮಿಕರ ಗಾತ್ರ. ಕೈಗಾರಿಕ ಕಾರ್ಮಿಕರಿಗೆ ಖಾಸಗಿ ಮತ್ತು ಸಾರ್ವಜನಿಕ ಕ್ಷೇತ್ರದ ಕೊಡುಗೆ. ಸಂಘಟಿತ ಕಾರ್ಮಿಕರು ಮತ್ತು ಅಸಂಘಟಿತ ಕಾರ್ಮಿಕರು. ಕಾರ್ಮಿಕ ಸಂಘಟನೆಗಳು, ಉದ್ದೇಶಗಳು, ರಾಷ್ಟ್ರೀಯ ಮಟ್ಟದ ಕಾರ್ಮಿಕ ಸಂಘಟನೆಗಳು. ಕಾರ್ಮಿಕ ಸುಧಾರಣೆಗಳು ಎರಡನೆಯ ರಾಷ್ಟ್ರೀಯ ಕಾರ್ಮಿಕ ಆಯೋಗದ ಶಿಫಾರಸ್ಸುಗಳು. ಕೈಗಾರಿಕಾ ಕಾರ್ಮಿಕರಿಗೆ ಸಾಮಾಜಿಕ ಭದ್ರತಾ ಕ್ರಮಗಳು. ರಾಷ್ಟ್ರೀಯ ಪುನರಾವರ್ತನ ನಿಧಿಯ ಮಹತ್ವ.

### ೫.೧. ಕೃಷಿ ಕಾರ್ಮಿಕರು

ಕೃಷಿ ಕಾರ್ಮಿಕರು ಹೆಚ್ಚಾಗಿ ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಹಿಂದುಳಿದ ವರ್ಗದವರಾಗಿರುತ್ತಾರೆ. ಇವರು ಬಡವರೂ, ಕೆಳಸ್ತರದ ಜೀವನ ಮಟ್ಟವನ್ನು ಹೊಂದಿದ ವರಾಗಿರುತ್ತಾರೆ. ಕೃಷಿ ಕಾರ್ಮಿಕರನ್ನು ಪ್ರಮುಖವಾಗಿ ನಾಲ್ಕು ವರ್ಗಗಳಾಗಿ ವಿಂಗಡಿಸಲಾಗಿದೆ. ಅವುಗಳಾವುವೆಂದರೆ

೧. ಭೂ ಮಾಲೀಕರನ್ನೇ ಅವಲಂಬಿಸಿಕೊಂಡಿರುವ ಭೂರಹಿತ ಕಾರ್ಮಿಕರು.

೨. ಸ್ವತಂತ್ರವಾಗಿ ಜೀವನ ನಡೆಸುವ ಆದರೆ ಸಂಪೂರ್ಣವಾಗಿ ಬೇರೆಯವರ ಕೃಷಿ ಭೂಮಿಯಲ್ಲಿ ಕೆಲಸ ಮಾಡುವ ಭೂ ರಹಿತ ಕಾರ್ಮಿಕರು.

೩. ಅತೀ ಚಿಕ್ಕ ಅಥವಾ ಸಣ್ಣ ಹಿಡುವಳಿಗಳನ್ನು ಹೊಂದಿರುವ ಕಾರ್ಮಿಕರು. ಇವರು

ತಮ್ಮ ಹೆಚ್ಚಿನ ಸಮಯವನ್ನು ಬೇರೆಯವರ ಕೃಷಿ ಭೂಮಿಯಲ್ಲಿ ಕೆಲಸ ಮಾಡುವುದಕ್ಕಾಗಿ ಉಪಯೋಗಿಸುವರು. ಮತ್ತು

೪. ಆರ್ಥಿಕ ಹಿಡುವಳಿಗಳನ್ನು ಹೊಂದಿದ್ದು ತನ್ನ ಮಕ್ಕಳನ್ನು ಅಥವಾ ಅವಲಂಬಿತರನ್ನು ಇತರರ ಕೃಷಿ ಭೂಮಿಯಲ್ಲಿ ಕೆಲಸಕ್ಕಾಗಿ ಕಳುಹಿಸುವವರು.

ಈ ಮೇಲಿನ ನಾಲ್ಕು ವರ್ಗಗಳ ಕಾರ್ಮಿಕರಲ್ಲಿ ಒಂದನೆಯ ವರ್ಗದ ಕಾರ್ಮಿಕರು ಯಾವುದೇ ರೀತಿಯ ಸ್ವಾತಂತ್ರ್ಯವನ್ನು ಹೊಂದಿರುವುದಿಲ್ಲ. ಇವರು ಜೀತ ಕಾರ್ಮಿಕರ ಎಲ್ಲಾ ಗುಣಲಕ್ಷಣಗಳನ್ನು ಹೊಂದಿರುತ್ತಾರೆ. ಇವರಿಗೆ ಭೂ ಮಾಲೀಕರು ಹೆಚ್ಚಾಗಿ ತಾವು ಬೆಳೆದ ಬೆಳೆಯನ್ನೇ ಕೂಲಿಯಾಗಿ ಕೊಡುತ್ತಾರೆಯೇ ಹೊರತು, ಹಣದ ರೂಪದಲ್ಲಿ ಕೊಡುವ ಕೂಲಿಯ ಪ್ರಮಾಣ ತುಂಬಾ ಕಡಿಮೆಯಿರುತ್ತದೆ. ಎರಡನೆಯ ವರ್ಗದ ಕೃಷಿ ಕಾರ್ಮಿಕರು ಸ್ವತಂತ್ರರಾಗಿದ್ದರೂ, ಇವರು ತಮ್ಮ ಜೀವನಕ್ಕಾಗಿ ಸಂಪೂರ್ಣವಾಗಿ ಭೂ ಮಾಲೀಕರನ್ನೇ ಅವಲಂಬಿಸಿಕೊಂಡಿರುತ್ತಾರೆ. ಮೂರು ಮತ್ತು ನಾಲ್ಕನೆಯ ವರ್ಗದ ಕಾರ್ಮಿಕರು ಕೃಷಿ ಭೂಮಿಯನ್ನು ಹೊಂದಿದ್ದರೂ ತಮ್ಮ ಕುಟುಂಬ ನಿರ್ವಹಣೆಗಾಗಿ ಇತರರ ಕೃಷಿ ಭೂಮಿಯನ್ನು ಅವಲಂಬಿಸಿಕೊಂಡಿರುತ್ತಾರೆ.

**ಕೃಷಿ ಕಾರ್ಮಿಕರ ಗಾತ್ರ**

ಕೃಷಿ ಕಾರ್ಮಿಕರು ಅಸಂಘಟಿತ ಕಾರ್ಮಿಕರಾಗಿದ್ದು, ಇವರ ಗಾತ್ರದ ಬಗ್ಗೆ ನಿಖರವಾದ ಚಿತ್ರಣವನ್ನು ಕೊಡಲು ಸಾಧ್ಯವಿಲ್ಲ. ಸರಕಾರವು ನೇಮಿಸಿದ ಸಮಿತಿಗಳು ಮತ್ತು ಸಮೀಕ್ಷೆಗಳ ಆಧಾರದಲ್ಲಿ ಕೃಷಿ ಕಾರ್ಮಿಕರ ಗಾತ್ರದ ಬಗ್ಗೆ ಅಂದಾಜು ಮಾಡಬಹುದು. ೧೯೯೧ ರಲ್ಲಿ ಗ್ರಾಮೀಣ ಕಾರ್ಮಿಕರ ಬಗೆಗಿನ ರಾಷ್ಟ್ರೀಯ ಆಯೋಗ ಪ್ರಕಟಿಸಿದ ಪ್ರಕಟಣೆಯ ಪ್ರಕಾರ ೧೯೮೭-೮೮ ರಲ್ಲಿ ಭಾರತದಲ್ಲಿ ೩೩.೩ ಮಿಲಿಯ ಗ್ರಾಮೀಣ ಕಾರ್ಮಿಕ ಕುಟುಂಬಗಳು ಕೃಷಿಯನ್ನು ಅವಲಂಬಿಸಿಕೊಂಡಿದ್ದವು. ಈ ಅವಧಿಯಲ್ಲಿ ಭಾರತದ ಗ್ರಾಮೀಣ ಕಾರ್ಮಿಕ ಕುಟುಂಬಗಳ ಪ್ರಮಾಣವು ಶೇಕಡಾ ೩೯.೭ ಆಗಿದ್ದು ಇದರಲ್ಲಿ ೩೦.೭. ಶೇಕಡಾ ಕುಟುಂಬಗಳು ಕೃಷಿ ಕಾರ್ಮಿಕ ಕುಟುಂಬಗಳಾಗಿದ್ದವು. ಅಂದರೆ ಈ ಅವಧಿಯಲ್ಲಿ ಶೇಕಡಾ ೭೭ ರಷ್ಟು ಗ್ರಾಮೀಣ ಕಾರ್ಮಿಕರು ಕೃಷಿಯನ್ನು ಅವಲಂಬಿಸಿಕೊಂಡಿದ್ದರು.

೧೯೮೧ರ ಜನಗಣತಿಯ ಪ್ರಕಾರ ೬೪.೪ ಮಿಲಿಯ ಜನರು ಕೃಷಿ ಕಾರ್ಮಿಕರಾಗಿದ್ದರು. ೧೯೯೧ರ ಜನಗಣತಿಯ ಪ್ರಕಾರ ಭಾರತದಲ್ಲಿ ೭೪.೬ ಮಿಲಿಯ ಜನರು ಕೃಷಿ ಕಾರ್ಮಿಕರಾಗಿದ್ದರು. ಆದರೆ ೧೯೫೧ರಲ್ಲಿ ಇವರ ಸಂಖ್ಯೆಯು ಕೇವಲ ೨೭.೫ ಮಿಲಿಯವಾಗಿತ್ತು. ೧೯೫೧ರಿಂದ ೧೯೯೧ರ ಅವಧಿಯಲ್ಲಿ ಕೃಷಿ ಕಾರ್ಮಿಕರ ಸಂಖ್ಯೆಯು ಶೇಕಡಾ ೧೭ ರಷ್ಟು ಹೆಚ್ಚಳಗೊಂಡಿದೆ. ೧೯೫೧ ರಲ್ಲಿ ಕೃಷಿ ಅವಲಂಬಿತರ ಸಂಖ್ಯೆಯು ೯೭.೨. ಮಿಲಿಯವಿದ್ದುದು ೧೯೯೧ರಲ್ಲಿ ೧೮೫.೩ ಮಿಲಿಯಕ್ಕೆ ಹೆಚ್ಚಳಗೊಂಡು ಈ

ಅವಧಿಯಲ್ಲಿ ಇವರ ಪ್ರಮಾಣವು ಶೇಕಡಾ ೯೦.೫ ರಷ್ಟು ಹೆಚ್ಚಳಗೊಂಡಿದೆ. ಕೃಷಿ ಕಾರ್ಮಿಕರ ಮೇಲಣ ಅಧ್ಯಯನದ ಪ್ರಕಾರ ಶೇಕಡಾ ೬೧ ರಷ್ಟು ಗ್ರಾಮೀಣ ಕುಟುಂಬಗಳು ಒಂದು ಹೆಕ್ಟೇರ್‌ಗಿಂತ ಕಡಿಮೆ ಕೃಷಿ ಭೂಮಿಯನ್ನು ಹೊಂದಿರುವವರು ಅಥವಾ ಭೂ ರಹಿತ ಕೃಷಿ ಕಾರ್ಮಿಕರು. ಇವರಲ್ಲಿ ಹೆಚ್ಚಿನವರು ಕಡುಬಡವರಾಗಿದ್ದು ಸಂಪೂರ್ಣವಾಗಿ ಕೃಷಿಯನ್ನೇ ಅವಲಂಬಿಸಿಕೊಂಡಿರುತ್ತಾರೆ.

**ಕೃಷಿ ಕಾರ್ಮಿಕರು ಮತ್ತು ಕೃಷಿಕರ ನಡುವಣ ವ್ಯತ್ಯಾಸಗಳು**

ಕೃಷಿ ಕಾರ್ಮಿಕರೆಂದರೆ ಬೇರೆಯವರ ಭೂಮಿಯಲ್ಲಿ ತಮ್ಮ ಜೀವನ ನಿರ್ವಹಣೆಗಾಗಿ ಉದ್ಯೋಗ ಮಾಡುವವರು. ಕೃಷಿಕರು ಸ್ವಂತ ಭೂಮಿಯನ್ನು ಹೊಂದಿದವರಾಗಿರುತ್ತಾರೆ. ಕೃಷಿ ಕಾರ್ಮಿಕರು ಹೆಚ್ಚಾಗಿ ಕೃಷಿಕರಿಂದ ಶೋಷಣೆಗೆ ಒಳಗಾಗುತ್ತಾರೆ. ಕೃಷಿಕರು ತಮ್ಮದೇ ಆದ ಸ್ವಂತ ಭೂಮಿ ಅಥವಾ ಬೇರೆಯವರಿಂದ ಗುತ್ತಿಗೆ ಅಥವಾ ಗೇಣಿಗೆ ಭೂಮಿಯನ್ನು ಹೊಂದಿದ್ದು, ಕೃಷಿ ಕಾರ್ಮಿಕರಿಗೆ ಉದ್ಯೋಗವನ್ನು ಕೊಡುವವರಾಗಿದ್ದು ಕೃಷಿ ಕಾರ್ಮಿಕರನ್ನು ಸಂಪೂರ್ಣವಾಗಿ ತಮ್ಮ ನಿಯಂತ್ರಣದಲ್ಲಿ ಇಟ್ಟುಕೊಂಡಿರುತ್ತಾರೆ. ಕೃಷಿಕರು ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಉತ್ತಮ ಸ್ಥಾನಮಾನವನ್ನು ಹೊಂದಿದ್ದು ಕೃಷಿ ಕಾರ್ಮಿಕರು ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಕೆಳಸ್ತರದ ಸ್ಥಾನಮಾನವನ್ನು ಹೊಂದಿರುತ್ತಾರೆ. ಜೀತ ಪದ್ಧತಿ ಹೆಚ್ಚಾಗಿರುವುದು ಕೃಷಿಯಲ್ಲಿ ಹಾಗೂ ಇಲ್ಲಿ ಕೃಷಿ ಕಾರ್ಮಿಕರ ಮಕ್ಕಳು ಅಥವಾ ಕುಟುಂಬದವರು ಕೃಷಿಕರ ಮನೆಯಲ್ಲಿ ಜೀತದಾಳುಗಳಾಗಿ ಕೆಲಸ ಮಾಡುತ್ತಾರೆ. ಸರಕಾರವು ಕೃಷಿ ಕ್ಷೇತ್ರಕ್ಕೆ ಕೊಡುವ ಎಲ್ಲಾ ಸೌಲಭ್ಯಗಳನ್ನು ಉಪಯೋಗಿಸಿಕೊಳ್ಳುವವರು ಕೃಷಿಕರಾಗಿರುತ್ತಾರೆಯೇ ಹೊರತು ಕೃಷಿ ಕಾರ್ಮಿಕರಲ್ಲ. ಕೃಷಿ ಕಾರ್ಮಿಕರು ಅಸಂಘಟಿತ ಕ್ಷೇತ್ರದ ಕಾರ್ಮಿಕರಾಗಿದ್ದು ಇವರಿಗೆ ಯಾವುದೇ ರೀತಿಯ ಭದ್ರತೆ ಇರುವುದಿಲ್ಲ. ಆದುದರಿಂದ ಇವರು ಕೃಷಿಕರ ನಿಯಂತ್ರಣದಲ್ಲೇ ಇರುತ್ತಾರೆ.

**ಕೃಷಿ ಕಾರ್ಮಿಕರ ಸಾಮಾಜಿಕ ಮತ್ತು ಆರ್ಥಿಕ ಸ್ಥಾನಮಾನ**

ಭಾರತದ ಕೃಷಿ ಕಾರ್ಮಿಕರು ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಈ ಕೆಳಗಿನ ಸ್ಥಾನಮಾನವನ್ನು ಹೊಂದಿರುತ್ತಾರೆ.

೧. ಕೃಷಿ ಕಾರ್ಮಿಕರು ಸಂಪ್ರದಾಯವಾದಿಗಳಾಗಿದ್ದು, ಪುರಾತನ ಪದ್ಧತಿ ಮತ್ತು ಶಿಷ್ಟಾಚಾರಗಳನ್ನು ಪಾಲಿಸುತ್ತಿದ್ದಾರೆ. ಇವರು ಯಾವುದೇ ರೀತಿಯಲ್ಲಿ ಸಮಾಜದಲ್ಲಿ ಉಂಟಾಗುವ ಬದಲಾವಣೆಗೆ ಅನುಗುಣವಾಗಿ ಬದಲಾಗಲು ಸಿದ್ಧರಿರುವುದಿಲ್ಲ.

೨. ಕೃಷಿ ಕಾರ್ಮಿಕರು ಅನಕ್ಷರಸ್ಥರು ಹಾಗೂ ಮುಗ್ಧರೂ ಆಗಿರುತ್ತಾರೆ.

೩. ಕೃಷಿ ಕಾರ್ಮಿಕರು ಕಡಿಮೆ ಕುಶಲತೆಯನ್ನು ಹೊಂದಿದ್ದು ಇತರ ಕ್ಷೇತ್ರಗಳಲ್ಲಿ ಉದ್ಯೋಗ ಕೈಗೊಳ್ಳಲು ಸಿದ್ಧರಿರುವುದಿಲ್ಲ.

೪. ಕೃಷಿ ಕಾರ್ಮಿಕರು ಅಸಂಘಟಿತರಾಗಿರುವುದರಿಂದ ತಮ್ಮ ಹಕ್ಕು ಮತ್ತು ಸೌಲಭ್ಯಗಳಿಗೆ ಸಂಬಂಧಿಸಿದಂತೆ ಹೋರಾಟ ನಡೆಸುವಲ್ಲಿ ವಿಫಲರಾಗಿರುತ್ತಾರೆ.

೫. ಕೃಷಿ ಕಾರ್ಮಿಕರು ವರ್ಷದ ಕೆಲವು ತಿಂಗಳುಗಳಲ್ಲಿ ಮಾತ್ರ ಉದ್ಯೋಗ ಹೊಂದಿರುತ್ತಾರೆ. ಇವರು ವರ್ಷಕ್ಕೆ ಸುಮಾರು ೨೦೦ ದಿವಸಗಳ ಉದ್ಯೋಗನ್ನು ಹೊಂದಿದ್ದು, ಉಳಿದ ದಿವಸಗಳಲ್ಲಿ ನಿರುದ್ಯೋಗಿಗಳಾಗಿರುತ್ತಾರೆ. ಆದುದರಿಂದ ಇವರನ್ನು ಋತು ಸಂಬಂಧ ಉದ್ಯೋಗಿಗಳು ಎಂದೂ ಕರೆಯಲಾಗುವುದು.

೬. ಕೈಗಾರಿಕಾ ಕಾರ್ಮಿಕರಿಗೆ ಹೋಲಿಸಿದಾಗ ಭಾರತದ ಕೃಷಿ ಕಾರ್ಮಿಕರು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಕಡಿಮೆ ಸ್ಥಾನಮಾನವನ್ನು ಹೊಂದಿರುತ್ತಾರೆ.

೭. ಭಾರತದ ಇತರ ಕ್ಷೇತ್ರಗಳ ಕಾರ್ಮಿಕರಿಗೆ ಹೋಲಿಸಿದಾಗ ಕೃಷಿ ಕಾರ್ಮಿಕರು ಕಡಿಮೆ ಕೂಲಿಯನ್ನು ಪಡೆಯುವವರಾಗಿರುತ್ತಾರೆ. ಸರಕಾರವು ಇವರಿಗೆ ಕನಿಷ್ಟ ಕೂಲಿಯನ್ನು ನಿಗದಿ ಪಡಿಸಿದರೂ ಇನ್ನೂ ಹೆಚ್ಚಿನ ರಾಜ್ಯಗಳು ಇದನ್ನು ಅನುಷ್ಠಾನಕ್ಕೆ ತಂದಿರುವುದಿಲ್ಲ. ಇದಕ್ಕೆ ಪ್ರಮುಖ ಕಾರಣ ಕೃಷಿ ಕಾರ್ಮಿಕರ ಸಂಖ್ಯೆಯು ಅಗತ್ಯಕ್ಕಿಂತ ಹೆಚ್ಚಾಗಿರುವುದು. ಸುಮಾರು ಶೇಕಡಾ ೭೦ರಷ್ಟು ಕೃಷಿ ಕುಟುಂಬಗಳು ತಿಂಗಳಿಗೆ ತಲಾ ೧೦೦ ರೂಪಾಯಿಗಳಿಗಿಂತ ಕಡಿಮೆ ವೆಚ್ಚವನ್ನು ಮಾಡುವವು. ಇದರಿಂದಾಗಿ ಹೆಚ್ಚಿನ ಕೃಷಿ ಕಾರ್ಮಿಕ ಕುಟುಂಬಗಳು ಬಡತನ ರೇಖೆಗಿಂತ ಕೆಳಗೆ ವಾಸಿಸುವರು.

೮. ಕೃಷಿ ಕಾರ್ಮಿಕರು ಹೆಚ್ಚಿನ ಸಾಲವನ್ನು ಹೊಂದಿರುತ್ತಾರೆ. ಇವರು ಸಾಮಾನ್ಯವಾಗಿ ತಾವು ಕೆಲಸ ಮಾಡುವ ಭೂ ಮಾಲೀಕರಿಂದ ಅಥವಾ ಗ್ರಾಮೀಣ ಲೇವಾದೇವಿಗಾರರಿಂದ ತಮಗೆ ಬೇಕಾದ ಸಾಲವನ್ನು ತೆಗೆದುಕೊಳ್ಳುತ್ತಾರೆ. ಇದರಿಂದಾಗಿ ಇವರು ಕಡಿಮೆ ಕೂಲಿಯನ್ನು ಪಡೆಯಲೇ ಬೇಕಾಗುತ್ತದೆ.

೯. ಗ್ರಾಮೀಣ ಪ್ರದೇಶಗಳಲ್ಲಿ ಇತರ ಕ್ಷೇತ್ರಗಳಲ್ಲಿ ಉದ್ಯೋಗವು ದೊರಕದೇ ಇರುವುದರಿಂದ ಹಾಗೂ ಜನಸಂಖ್ಯಾ ಹೆಚ್ಚಳದಿಂದಾಗಿ ಕೃಷಿ ಕಾರ್ಮಿಕರ ಗಾತ್ರವು ಬೇಡಿಕೆಗಿಂತ ಅಧಿಕವಾಗಿದ್ದು ಪಡೆಯುವ ಕೂಲಿಯು ಕಡಿಮೆಯಾಗಿದೆ.

೧೦. ಹೆಚ್ಚಿನ ಕೃಷಿ ಕಾರ್ಮಿಕರು ಹಿಂದುಳಿದ, ಶೋಷಿತ ವರ್ಗದವರಾಗಿದ್ದು ಅವರು ತಮ್ಮ ಶೋಷಣೆಯ ವಿರುದ್ಧಧ ಹೋರಾಡುವ ಸಾಮರ್ಥ್ಯವನ್ನು ಹೊಂದಿರುವುದಿಲ್ಲ.

ಈ ಮೇಲಿನ ಎಲ್ಲಾ ಕಾರಣಗಳಿಂದಾಗಿ ಕೃಷಿ ಕಾರ್ಮಿಕರು ತಮ್ಮ ಶೋಷಣೆ, ಕಡಿಮೆ ಕೂಲಿ ಇತ್ಯಾದಿಗಳ ವಿರುದ್ಧ ಹೋರಾಡುವ ಸಾಮರ್ಥ್ಯವನ್ನು ಹೊಂದಿರುವುದಿಲ್ಲ. ಈ ಎಲ್ಲಾ ಅಂಶಗಳು ಅವರ ಬಡತನಕ್ಕೆ ಕಾರಣಗಳಾಗಿವೆ.

**ಜಾತಿ ಮತ್ತು ಲಿಂಗ ಸಂರಚನೆ**

ಹೆಚ್ಚಿನ ಕೃಷಿ ಕಾರ್ಮಿಕರು ಹಿಂದುಳಿದ, ಶೋಷಿತ ವರ್ಗಕ್ಕೆ ಸೇರಿದವರಾಗಿರುತ್ತಾರೆ. ಇವರು ಹಲವಾರು ವರ್ಷಗಳಿಂದ ಸಮಾಜದ ಅವಕೃಪೆಗೆ ಪಾತ್ರರಾದವರಾಗಿರುತ್ತಾರೆ. ಭೂ ಮಾಲೀಕರು ಅವರಿಗೆ ಕೊಡುವ ಕನಿಷ್ಟ ಕೂಲಿಯಿಂದಲೇ ಇವರು ತೃಪ್ತರಾಗುತ್ತಾರೆ. ಇವರಿಗೆ ಶೋಷಣೆಯ ವಿರುದ್ಧ ಹೋರಾಡುವುದಕ್ಕೆ ಯಾವುದೇ ರೀತಿಯ ಸಾಮರ್ಥ್ಯವಾಗಲಿ, ಸಂಘಟನೆಯಾಗಲಿ ಇರುವುದಿಲ್ಲ. ಇವರು ಮೂಕ ಪ್ರಾಣಿಗಳಂತೆ ಕೆಲಸ ಮಾಡುತ್ತಾರೆ.

ಭಾರತದಲ್ಲಿ ಮೇಲ್ಜಾತಿಯ ಜನರನ್ನು ಕೆಳಜಾತಿಯ ಜನರು ಆರಾಧನಾ ಭಾವನೆಯಿಂದ ನೋಡುತ್ತಿರುವುದರಿಂದ ಅಧಿಕ ಸಂಖ್ಯೆಯಲ್ಲಿರುವ ಕೆಳಜಾತಿಯ ಕೃಷಿ ಕಾರ್ಮಿಕರು ಇನ್ನೂ ಶೋಷಣೆಗೆ ಒಳಗಾಗುತ್ತಿದ್ದಾರೆ. ಇತ್ತೀಚಿನ ವರ್ಷಗಳಲ್ಲಿ ಜನರಿಗೆ ದೊರಕುತ್ತಿರುವ ಸಾರ್ವತ್ರಿಕ ಶಿಕ್ಷಣದಿಂದಾಗಿ ಕೃಷಿ ಕಾರ್ಮಿಕರು ಕೆಲವೊಮ್ಮೆ ತಮ್ಮ ಕೆಲಸದ ಸಮಯದಲ್ಲಿ ಭೂ ಮಾಲೀಕರನ್ನು ಪ್ರಶ್ನಿಸಲು ಆರಂಭಿಸಿದ್ದಾರೆ. ಕೃಷಿ ಕಾರ್ಮಿಕರ ಅಂಕೆ ಸಂಖ್ಯೆಯನ್ನು ಗಣನೆಗೆ ತೆಗೆದುಕೊಂಡಾಗ ಇವರಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗದವರ ಸಂಖ್ಯೆ ಅಧಿಕವಾಗಿದೆ. ಇದಕ್ಕೆ ಪ್ರಮುಖ ಕಾರಣ ಹಲವಾರು ವರ್ಷಗಳಿಂದಲೂ ಇವರು ಮುಂದುವರಿದ ಜನಾಂಗದ ನಿಯಂತ್ರಣ ದಲ್ಲಿರುವುದು.

ಲಿಂಗ ಸಂರಚನೆ ಎಂದರೆ ದೇಶವೊಂದರಲ್ಲಿ ನಿರ್ದಿಷ್ಟ ಕಾಲಾವದಿಯಲ್ಲಿ ಮಹಿಳೆ ಪುರಷ ಲಿಂಗ ಅನುಪಾತ ಎಂದರ್ಥ. ಜನಸಂಖ್ಯಾ ಶಾಸ್ತ್ರಜ್ಞರು ಲಿಂಗ ಅನುಪಾತವನ್ನು ಪ್ರತಿ ಒಂದು ಸಾವಿರ ಪುರುಷರಿಗೆ ಎಷ್ಟು ಮಂದಿ ಮಹಿಳೆಯರಿರುವರು ಎಂದು ಅಭಿವ್ಯಕ್ತಿಸುವರು. ಇದು ಕಾಲದಿಂದ ಕಾಲಕ್ಕೆ, ದೇಶದಿಂದ ದೇಶಕ್ಕೆ ಬದಲಾವಣೆಯನ್ನು ಹೊಂದುತ್ತದೆ.

ಭಾರತದಲ್ಲಿ ಲಿಂಗ ಅನುಪಾತವು ವರ್ಷದಿಂದ ವರ್ಷಕ್ಕೆ ಕುಸಿಯುತ್ತಿದೆ. ಉದಾಹರಣೆಗೆ ೧೯೦೧ ರ ಜನಗಣತಿಯ ಪ್ರಕಾರ ೧೦೦೦ ಪುರುಷರಿಗೆ ೯೭೨ ಮಹಿಳೆಯರಿದ್ದರೆ ೨೦೦೧ ರ ಜನಗಣತಿಯ ಪ್ರಕಾರ ಇದು ೯೩೩ ಕ್ಕೆ ಇಳಿದಿದೆ. ಆದರೆ ನಗರ ಪ್ರದೇಶಗಳಿಗೆ ಹೋಲಿಸಿದಾಗ ಗ್ರಾಮೀಣ ಪ್ರದೇಶಗಳಲ್ಲಿ ಮಹಿಳೆಯರ ಪ್ರಮಾಣವು ಅಧಿಕವಾಗಿದೆ.

ಪುರುಷರಿಗೆ ಹೋಲಿಸಿದಾಗ ಕೃಷಿಯನ್ನು ಅವಲಂಬಿಸಿಕೊಂಡಿರುವ ಮಹಿಳೆಯರ ಸಂಖ್ಯೆಯು ತುಂಬಾ ಕಡಿಮೆಯಾಗಿದೆ. ಇದಕ್ಕೆ ಹಲವಾರು ಕಾರಣಗಳಿವೆ. ಇವುಗಳಾವು ವೆಂದರೆ ಮಹಿಳೆಯರು ಪುರುಷರಿಗೆ ಸಮನಾಗಿ ಕೃಷಿ ಕಾರ್ಯದಲ್ಲಿ ತೊಡಗಲು ಸಾಧ್ಯವಿಲ್ಲ. ಮಹಿಳೆಯರಿಗೆ ಕೌಟುಂಬಿಕ ಜವಾಬ್ದಾರಿ ಹೆಚ್ಚಾಗಿರುತ್ತದೆ. ಯಾಂತ್ರೀಕೃತ ಹಾಗೂ ವೈಜ್ಞಾನಿಕ ಕೃಷಿ ಪದ್ಧತಿಯಿಂದಾಗಿ ಇತ್ತೀಚಿನ ವರ್ಷಗಳಲ್ಲಿ ಕೃಷಿಯಲ್ಲಿ ತೊಡಗಿರುವ ಮಹಿಳೆಯರ ಸಂಖ್ಯೆಯು ಕಡಿಮೆಯಾಗುತ್ತಿದೆ. ಈ ಎಲ್ಲಾ ಕಾರಣಗಳಿಂದಾಗಿ ಗ್ರಾಮೀಣ ಮಹಿಳೆಯರಿಗೆ ದೊರಕುವ ಉದ್ಯೋಗಾವಕಾಶಗಳು ಕಡಿಮೆಯಾಗುತ್ತಿದೆ.

### ಜೀತ ಪದ್ಧತಿ ವ್ಯವಸ್ಥೆ ಮತ್ತು ಅದರ ನಿರ್ಮೂಲನೆ

ಹಲವು ಶತಮಾನಗಳಿಂದಲೂ ಭಾರತದಲ್ಲಿ ಜೀತಪದ್ಧತಿಯು ಸಾಮಾನ್ಯವಾಗಿದೆ. ಇದು ಹೆಚ್ಚಾಗಿ ಕಂಡುಬರುವುದು ಕೃಷಿ ಕ್ಷೇತ್ರದಲ್ಲಿ. ಜೀತ ಪದ್ಧತಿಗೆ ಪ್ರಮುಖ ಕಾರಣ ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ, ಆದಿವಾಸಿ ಮುಂತಾದ ಜನಾಂಗದವರ ಕಡು ಬಡತನ. ಇವರಿಗೆ ವರ್ಷಪೂರ್ತಿ ಉದ್ಯೋಗವಿಲ್ಲದೇ ಇರುವುದರಿಂದ, ಇವರು ನಿರುದ್ಯೋಗಿಗಳಾಗಿರ ಬೇಕಾದ ಅನಿವಾರ್ಯತೆ ಇದೆ. ಆಹಾರ ಧಾನ್ಯ ಹಾಗೂ ವಿಶೇಷ ಸಂದರ್ಭಗಳಾದ ವಿವಾಹ, ಹಬ್ಬ ಇತ್ಯಾದಿಗಳ ಆಚರಣೆ, ಅನಾರೋಗ್ಯ ಉಂಟಾದಾಗ ಬೇಕಾದ ಔಷಧಿ

ಇತ್ಯಾದಿಗಳಿಗಾಗಿ ಭೂ ಮಾಲೀಕರಿಂದ ಸಾಲವನ್ನು ಪಡೆದುಕೊಳ್ಳುತ್ತಾರೆ. ಈ ರೀತಿ ಸಾಲ ಪಡೆಯುವಾಗ ಭದ್ರತೆಯಾಗಿ ಕೊಡುವುದಕ್ಕೆ ಭೂಮಿ ಅಥವಾ ಬೆಲೆ ಬಾಳುವ ಆಸ್ತಿ ಇಲ್ಲದೇ ಇರುವುದರಿಂದ ತಮ್ಮ ಕುಟುಂಬದ ಓರ್ವ ಸದಸ್ಯನನ್ನು ಭದ್ರತೆಯಾಗಿ ನೀಡುತ್ತಾರೆ. ಈ ರೀತಿಯಾಗಿ ಭದ್ರತೆಯಾಗಿ ಒಪ್ಪಿಸಲ್ಪಟ್ಟ ವ್ಯಕ್ತಿಯು ಕುಟುಂಬಕ್ಕೆ ಅವರು ಹೇಳಿದ ಎಲ್ಲಾ ರೀತಿಯ ಸೇವೆಯನ್ನು ಒದಗಿಸಬೇಕಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಕೊಡುವ ಕೂಲಿಯು ತುಂಬಾ ಕಡಿಮೆಯಿದ್ದು ಸಾಲದ ಮೇಲಣ ಬಡ್ಡಿಯ ದರವು ಹೆಚ್ಚಾಗಿರುತ್ತದೆ. ಎಷ್ಟೋ ಸಂದರ್ಭಗಳಲ್ಲಿ ಈ ಸಾಲವನ್ನು ತೀರಿಸುವುದಕ್ಕಾಗಿ ಸಾಲಗಾರರ ಕುಟುಂಬದ ಹಲವು ತಲೆಮಾರಿನ ಜನರು ದುಡಿಯಬೇಕಾಗುತ್ತದೆ. ಭಾರತದೆಲ್ಲೆಡೆ ಜೀತ ಪದ್ಧತಿಯು ಸಾಮಾನ್ಯವಾಗಿ ಆಚರಣೆಯಲ್ಲಿತ್ತು.

ಜೀತಗಾರರ ಬಗ್ಗೆ ಸ್ಪಷ್ಟ ಲೆಕ್ಕ ಪತ್ರ ಮತ್ತು ದಾಖಲಾತಿಗಳು ದೊರಕುವುದಿಲ್ಲ. ೧೯೭೮-೭೯ರಲ್ಲಿ ಗಾಂಧಿ ಶಾಂತಿ ಪ್ರತಿಷ್ಠಾನ ಹಾಗೂ ರಾಷ್ಟ್ರೀಯ ಶ್ರಮ ಸಂಸ್ಥೆಯು (National Labour Institute) ದೇಶದ ಪ್ರಮುಖ ೧೦ ರಾಜ್ಯಗಳಲ್ಲಿ ಜೀತ ಕಾರ್ಮಿಕರ ಮೇಲೆ ಒಂದು ಸಮೀಕ್ಷೆಯನ್ನು ನಡೆಸಿ ಈ ಕೆಳಗಿನ ತೀರ್ಮಾನಗಳನ್ನು ಕೈಗೊಂಡಿದೆ.

೧. ೧೦ ಪ್ರಮುಖ ರಾಜ್ಯಗಳಲ್ಲಿದ್ದ ಜೀತ ಕಾರ್ಮಿಕರ ಸಂಖ್ಯೆಯು ೨೬.೧೭ ಲಕ್ಷಗಳು.

೨. ಉತ್ತರ ಪ್ರದೇಶವು ದೇಶದಲ್ಲಿ ಅತೀ ಹೆಚ್ಚು ಜೀತ ಕಾರ್ಮಿಕರನ್ನು ಹೊಂದಿದ್ದರೆ, ಭಾರತದ ಒಟ್ಟು ಕೃಷಿ ಕಾರ್ಮಿಕರಲ್ಲಿ ಶೇಕಡಾ ೫.೭. ರಷ್ಟು ಕೃಷಿ ಕಾರ್ಮಿಕರು ಜೀತ ಕಾರ್ಮಿಕರಾಗಿದ್ದಾರೆ.

೩. ಜೀತ ಕಾರ್ಮಿಕರಲ್ಲಿ ಶೇಕಡ ೮೭ ರಷ್ಟು ಕಾರ್ಮಿಕರು ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ ಮತ್ತು ಆದಿವಾಸಿಗಳಾಗಿರುತ್ತಾರೆ.

೧೯೯೦ ರಲ್ಲಿ ಮಾಡಿದ ಒಂದು ಸಮೀಕ್ಷೆಯ ಪ್ರಕಾರ ೧೨ ರಾಜ್ಯಗಳಲ್ಲಿರುವ ಜೀತ ಕಾರ್ಮಿಕರ ಸಂಖ್ಯೆಯು ಸುಮಾರು ೨.೪೫ ಲಕ್ಷಗಳಾಗಿದ್ದವು. ಅಂತರರಾಷ್ಟ್ರೀಯ ಕಾರ್ಮಿಕ ಸಂಘಟನೆಯ(ILO) ಪ್ರಕಾರ ಭಾರತದಲ್ಲಿ ಒಟ್ಟು ೧೫೦ ಲಕ್ಷ ಜೀತ ಕಾರ್ಮಿಕರಿದ್ದು, ಇವರಲ್ಲಿ ೫೦ ಲಕ್ಷ ಮಕ್ಕಳಾಗಿರುತ್ತಾರೆ. ಹಾಗೂ ಕೃಷಿಯಲ್ಲಿ ಸುಮಾರು ೨೦ ಲಕ್ಷ ಜೀತ ಕಾರ್ಮಿಕರಿರುತ್ತಾರೆ. ಭಾರತ ಸರಕಾರದ ಪ್ರಕಾರ ದೇಶದಲ್ಲಿರುವ ಜೀತ ಕಾರ್ಮಿಕರ ಸಂಖ್ಯೆ ಸುಮಾರು ೩.೫೩ ಲಕ್ಷಗಳು. ದೇಶದಲ್ಲಿ ಕೃಷಿಯಲ್ಲಲ್ಲದೆ ಗಣಿಗಾರಿಕೆ, ಕಂಬಳಿ ನೇಯ್ಗೆ ಮತ್ತು ಗೃಹಕೃತ್ಯದ ಸೇವೆಗಳಲ್ಲೂ ಜೀತ ಕಾರ್ಮಿಕರಿರುತ್ತಾರೆ.

### ಜೀತ ಪದ್ಧತಿ ನಿರ್ಮೂಲನಾ ಕ್ರಮಗಳು

ಭಾರತದಲ್ಲಿ ಬ್ರಿಟಿಷ್ ಆಡಳಿತ ಕಾಲದಿಂದಲೂ ಜೀತ ಪದ್ಧತಿ ನಿರ್ಮೂಲನೆಗಾಗಿ ಕ್ರಮಗಳನ್ನು ಕೈಗೊಳ್ಳಲಾಗಿದೆ. ೧೯೩೩ ರಲ್ಲಿ ಬ್ರಿಟಿಷ್ ಸರಕಾರವು ಬ್ರಿಟಿಷ್ ಆಡಳಿತವಿದ್ದ ರಾಜ್ಯಗಳಲ್ಲಿ ಜೀತ ಪದ್ಧತಿ ನಿರ್ಮೂಲನೆಗೆ ಆದೇಶ ಹೊರಡಿಸಿತ್ತು. ಆದರೆ ಇದು

ಭಾರತದ ಮೇಲೆ ಯಾವುದೇ ರೀತಿಯ ಪರಿಣಾಮ ಬೀರಲಿಲ್ಲ. ಸ್ವಾತಂತ್ರ್ಯ ನಂತರ ಭಾರತದ ಸಂವಿಧಾನವು ಭಿಕ್ಷಾಟನೆ, ಜೀತ ಪದ್ಧತಿ ಇತ್ಯಾದಿಗಳನ್ನು ಸಂಪೂರ್ಣವಾಗಿ ನಿಷೇಧಿಸಿದರೂ ಗ್ರಾಮೀಣ ಪ್ರದೇಶಗಳಲ್ಲಿ ಈ ಪದ್ಧತಿಯು ಮುಂದುವರೆಯಿತು. ಕಮ್ಯುನಿಸ್ಟ್ ಪಕ್ಷವು ಆಗಾಗ್ಗೆ ಜೀತ ಪದ್ಧತಿಯ ವಿರುದ್ಧ ಹೋರಾಟ ನಡೆಸಿತು. ಆದರೆ ಈ ಹೋರಾಟವನ್ನು ಆರಂಭದಲ್ಲೇ ಹೊಸಕಿ ಹಾಕಲಾಗುತ್ತಿತ್ತು. ಪರಿಶಿಷ್ಟ ಜಾತಿ ಮತ್ತು ವರ್ಗದ ಆಯುಕ್ತರರು ಕೊಟ್ಟ ಮಾಹಿತಿಯು ಜೀತ ಪದ್ಧತಿ ನಿರ್ಮೂಲನೆಗೆ ಹೆಚ್ಚಿನ ಅವಕಾಶ ಮಾಡಿಕೊಟ್ಟಿತು. ೧೯೭೫ನೇ ಇಸವಿ ಅಕ್ಟೋಬರ್ ೨೫ ರಿಂದ ಜಾರಿಗೆ ಬರುವಂತೆ ಭಾರತ ಸರಕಾರವು ೧೯೭೬ರಲ್ಲಿ ಜೀತ ಪದ್ಧತಿ ನಿರ್ಮೂಲನಾ ಕಾಯಿದೆಯನ್ನು ಜಾರಿಗೆ ತಂದಿತು.

ಆರನೇ ಪಂಚವಾರ್ಷಿಕ ಯೋಜನಾವಧಿಯಲ್ಲಿ(೧೯೮೦-೮೫) ಜೀತ ಮುಕ್ತರ ಪುನರ್‌ವಸತಿಗಾಗಿ ೪೦೦೦ ರೂಪಾಯಿಗಳನ್ನು ಒದಗಿಸಲಾಯಿತು. ಅಲ್ಲದೆ ಜೀತ ಮುಕ್ತರಿಗೆ ಕೃಷಿ ಉಪಕರಣಗಳು, ಕೋಳಿ, ಕುರಿ, ಹಂದಿ ಇತ್ಯಾದಿಗಳನ್ನು ಸಾಕುವುದಕ್ಕಾಗಿ ಒದಗಿಸಲಾಯಿತು.

ಜೀತ ಮುಕ್ತರಿಗೆ ದೊರಕುವ ಸೌಲಭ್ಯಗಳು ಅವರ ಜೀವನ ಮಟ್ಟವನ್ನು ಉತ್ತಮ ಪಡಿಸುವಲ್ಲಿ ಸಾಕಷ್ಟು ಯಶಸ್ವಿಯಾಗಿಲ್ಲ. ರಾಜ್ಯ ಹಾಗೂ ಜಿಲ್ಲಾ ಸರಕಾರಗಳು ಜೀತ ಮುಕ್ತರಿಗೆ ಕೊಡುವ ಪ್ರತಿಫಲವು ಅವರ ಜೀವನಾವಶ್ಯಕತೆಗಳಿಗಿಂತ ಕಡಿಮೆಯಾಗಿದೆ. ಶೇಕಡಾ ೫೦ ರಷ್ಟು ಜೀತ ಮುಕ್ತರು ಜೀವನ ನಿರ್ವಹಣೆಗಾಗಿ ಸಾಲ ತೆಗೆದುಕೊಳ್ಳುವುದರಿಂದ ಮುಂದೆ ಸಾಲಗಾರರಾಗಿ ಜೀತ ಕಾರ್ಮಿಕರಾಗುವ ಭಯವಿದೆ.

೧೯೯೫ ಮಾರ್ಚ್ ೩೦ ರವರೆಗೆ ಭಾರತ ಸರಕಾರದ ಸಚಿವಾಲಯದ ಪ್ರಕಾರ ೨,೫೧,೪೨೪ ಜೀತ ಕಾರ್ಮಿಕರನ್ನು ಬಿಡುಗಡೆಗೊಳಿಸಲಾಗಿದೆ. ಈ ರೀತಿ ಬಿಡುಗಡೆ ಗೊಂಡವರಲ್ಲಿ ೨,೨೭,೪೦೪ ಕಾರ್ಮಿಕರಿಗೆ ಪುನರ್‌ವಸತಿ ಕಲ್ಪಿಸಲಾಗಿದೆ. ೧೯೯೪ ಆಗಸ್ಟ್ ತಿಂಗಳಿನಿಂದೀಚೆಗೆ ಕೇಂದ್ರ ಸರಕಾರವು ಜೀತ ಮುಕ್ತರಿಗೆ ಪುನರ್ ವಸತಿಗಾಗಿ ೧೦,೦೦೦ ರೂಪಾಯಿಗಳನ್ನು ಒದಗಿಸುತ್ತಿದೆ.

ಕಾರ್ಮಿಕರ ಸಚಿವಾಲಯದ ಪ್ರಕಾರ ಪ್ರಸ್ತುತ ೫,೭೦೦ ಜೀತ ಕಾರ್ಮಿಕರಿಗೆ ಪುನರ್‌ವಸತಿ ಕಲ್ಪಿಸಬೇಕಾಗಿದೆ. ಆದರೆ ಅವರನ್ನು ಹುಡುಕುವುದು ಕಷ್ಟಕರವಾಗಿದೆ. ಗಾಂಧಿ ಶಾಂತಿ ಪ್ರತಿಷ್ಠಾನ, ಬಂಧ ಮುಕ್ತಿ ಮೋರ್ಚಾ ಮತ್ತು ಇನ್ನೂ ಹಲವು ಸರಕಾರೇತರ ಸಂಘಟನೆಗಳು ಜೀತ ಪದ್ಧತಿ ನಿರ್ಮೂಲನೆಗಾಗಿ ಹೋರಾಡುತ್ತಿವೆ. ಈ ಕಾರ್ಮಿಕರು ಯಾವುದೇ ರೀತಿಯ ಸಂಘಟನೆಗೆ ಒಳಪಡದಿರುವುದರಿಂದ ಹೆಚ್ಚಿನ ಸೌಲಭ್ಯಕ್ಕಾಗಿ ಇವರು ಸರಕಾರದ ಮೇಲೆ ಒತ್ತಡ ಹೇರುವುದು ದುಸ್ತರವಾಗಿದೆ.

**ಬಾಲ ಕಾರ್ಮಿಕ ಪದ್ಧತಿ ಮತ್ತು ಅದರ ನಿರ್ಮೂಲನೆ**

ಜಗತ್ತಿನಾದ್ಯಂತ ಬಾಲ ಕಾರ್ಮಿಕ ಪದ್ಧತಿಯು ಕಂಡು ಬರುತ್ತದೆ. ಆದರೆ

ಭಾರತದಂತಹ ಹಿಂದುಳಿದ ಬಡ ರಾಷ್ಟ್ರಗಳಲ್ಲಿ ಕುಟುಂಬ ನಿರ್ವಹಣೆಗಾಗಿ ಬಾಲ ಕಾರ್ಮಿಕ ಪದ್ಧತಿಯು ಸಾಮಾನ್ಯವಾಗಿದೆ. ಹಾಗೂ ಇವರ ಸಂಖ್ಯೆಯು ಅಧಿಕವಾಗಿದೆ. ಸಮಾಜವಾದೀ ಸಮಾಜ ಹಾಗೂ ಸುಖೀ ರಾಷ್ಟ್ರದ ನಿರ್ಮಾಣ ಭಾರತದ ಗುರಿಯಾಗಿದೆ. ಈ ಉದ್ದೇಶಗಳನ್ನು ಹೊಂದಿರುವ ರಾಷ್ಟ್ರದಲ್ಲಿ ಮುಗ್ಧ, ಅಪ್ರಾಪ್ತ ವಯಸ್ಕ ಮಕ್ಕಳನ್ನು ಕಾರ್ಮಿಕರಾಗಿ ಉಪಯೋಗಿಸಿಕೊಳ್ಳುವುದು ನ್ಯಾಯ ಬಾಹಿರವಾಗಿದೆ.

ಹದಿನೈದು ವರ್ಷಕ್ಕಿಂತ ಕೆಳಗಿನ ವಯಸ್ಸಿನ ಮಕ್ಕಳು ಅಂದರೆ ಯಾವುದೇ ರೀತಿಯಲ್ಲಿ ಮಾನಸಿಕವಾಗಿ ಬೆಳವಣಿಗೆ ಹೊಂದದೇ ಇರುವ, ಮತ್ತು ಯೋಚನಾ ಶಕ್ತಿ ಬೆಳವಣಿಗೆ ಹೊಂದದೇ ಇರುವ ಹಾಗೂ ದೈಹಿಕವಾಗಿ ಇನ್ನೂ ಬೆಳವಣಿಗೆ ಹೊಂದುತ್ತಿರುವ ಕಾರ್ಮಿಕರನ್ನು ಬಾಲಕಾರ್ಮಿಕರು ಎಂದು ಪರಿಗಣಿಸಲಾಗಿದೆ. ಸಾಮಾನ್ಯವಾಗಿ ಬೆಳೆಯುವ ಮಕ್ಕಳು ಬಾಲ್ಯಾವಸ್ಥೆಯಲ್ಲೇ ದುಡಿಯುವುದಕ್ಕೆ ಪ್ರಮುಖ ಕಾರಣ ಬಡತನ ಹಾಗೂ ಅವರ ಹೆತ್ತವರು. ಬಾಲ ಕಾರ್ಮಿಕರನ್ನು ನಾವು ಹೆಚ್ಚಾಗಿ ಅಸಂಘಟಿತ ಕ್ಷೇತ್ರದಲ್ಲಿ ಕಾಣುತ್ತೇವೆ. ಇವರ ಪ್ರಮಾಣವು ಮನೆಗಳಲ್ಲಿ, ಅಂಗಡಿಗಳಲ್ಲಿ, ಕೃಷಿಯಲ್ಲಿ, ಹೋಟೆಲ್ ಉದ್ಯಮದಲ್ಲಿ ಅಧಿಕವಾಗಿದೆ.

ವಿ.ವಿ. ಗಿರಿಯವರ ಪ್ರಕಾರ "ಬಾಲ ಕಾರ್ಮಿಕರೆಂದರೆ ತಮ್ಮ ವೈಯುಕ್ತಿಕ ಅವಶ್ಯಕತೆಗಳಾದ ಶಿಕ್ಷಣ, ಆರೋಗ್ಯ, ವಸತಿ, ತರಬೇತಿ, ಕ್ರೀಡೆ ಮುಂತಾದವುಗಳ ಬಗ್ಗೆ ಯಾವುದೇ ರೀತಿಯ ಆದ್ಯತೆಯನ್ನು ಕೊಡದೇ ಇರುವವರು ಹಾಗೂ ತಮ್ಮ ಕುಟುಂಬಗಳ ಅವಶ್ಯಕತೆಗಳ ಈಡೇರಿಕೆಗಾಗಿ ದುಡಿಯುವುದರಿಂದ ಅವರು ದುರ್ಬಲರಾಗುತ್ತಾರೆ ಸಾಮಾನ್ಯವಾಗಿ ಬಾಲ ಕಾರ್ಮಿಕರು ಎಳೆ ವಯಸ್ಸಲ್ಲೇ ದುಡಿಯಲು ಆರಂಭಿಸುವುದರಿಂದ ಅವರಿಗೆ ಸೂಕ್ತ ಶಿಕ್ಷಣ, ತರಬೇತಿ ಇತ್ಯಾದಿಗಳು ದೊರಕದೆ ಅವರ ದಕ್ಷತೆಯು ಕಡಿಮೆಯಾಗುತ್ತದೆ. ಆದುದರಿಂದ ಬಾಲ ಕಾರ್ಮಿಕರ ಪದ್ಧತಿಯು ದೇಶದ ಉತ್ಪಾದನೆಯ ಮೇಲೂ ಪ್ರಭಾವ ಬೀರುವುದು.

ನಮ್ಮ ದೇಶದಲ್ಲಿ ಆಂಧ್ರ ಪ್ರದೇಶವು ಅತೀ ಹೆಚ್ಚು ಅಂದರೆ ೧೬,೬೧೯೪೦ ಬಾಲ ಕಾರ್ಮಿಕರನ್ನು ಹೊಂದಿರುವ ರಾಜ್ಯವಾಗಿದ್ದು, ಲಕ್ಷದ್ವೀಪವು ೩೪ ಬಾಲ ಕಾರ್ಮಿಕರನ್ನು ಅಂದರೆ ಅತೀ ಕಡಿಮೆ ಬಾಲ ಕಾರ್ಮಿಕರನ್ನು ಹೊಂದಿರುವ ರಾಜ್ಯವಾಗಿದೆ. ಗ್ರಾಮೀಣ ಪ್ರದೇಶಗಳಲ್ಲಿ ಕೃಷಿ, ಮನೆಕೆಲಸ ಇತ್ಯಾದಿಗಳಲ್ಲಿ ಮಕ್ಕಳನ್ನು ದುಡಿಸಿಕೊಂಡರೆ ನಗರ ಪ್ರದೇಶಗಳಲ್ಲಿ ಹೋಟೆಲ್, ವ್ಯಾಪಾರಿ ಮಳಿಗೆಗಳು, ಸಣ್ಣಪುಟ್ಟ ಕೈಗಾರಿಕೆಗಳು ಇತ್ಯಾದಿಗಳಲ್ಲಿ ಬಾಲ ಕಾರ್ಮಿಕರು ಕೂಲಿಯಾಳುಗಳಾಗಿ ಕಾರ್ಯ ನಿರ್ವಹಿಸುತ್ತಾರೆ. ಇಂತಹ ಬಾಲ ಕಾರ್ಮಿಕರಿಗೆ ಕೊಡುವ ಕೂಲಿಯ ಪ್ರಮಾಣವು ಮಾಲೀಕರಿಂದ ಮಾಲೀಕರಿಗೆ ವ್ಯತ್ಯಾಸವಾಗುವುದರೊಂದಿಗೆ ಇವರು ದೈಹಿಕವಾಗಿ ಮತ್ತು ಲೈಂಗಿಕವಾಗಿ ಶೋಷಣೆಗೂ ಒಳಗಾಗುತ್ತಾರೆ.

## ಬಾಲ ಕಾರ್ಮಿಕ ಪದ್ಧತಿಯ ನಿರ್ಮೂಲನೆ

ಬಾಲ ಕಾರ್ಮಿಕ ಪದ್ಧತಿಯ ನುರ್ಮೂಲನೆಯು ದೇಶದ ಆರ್ಥಿಕ ಮತ್ತು ಸಾಮಾಜಿಕ ಪ್ರಗತಿಯ ದೃಷ್ಟಿಯಿಂದ ಅತೀ ಅಗತ್ಯವಾಗಿದೆ. ಭಾರತದ ಸಂವಿಧಾನ ಪ್ರಕಾರ ಶಿಕ್ಷಣವನ್ನು ಪಡೆಯುವುದು ಆ ಮಗುವಿನ ಮೂಲಭೂತ ಹಕ್ಕಾಗಿದೆ. ಆದರೆ ಎಷ್ಟೋ ಸಂದರ್ಭಗಳಲ್ಲಿ ಸರಕಾರವು ಮಕ್ಕಳಿಗೆ ಉಚಿತ ಶಿಕ್ಷಣವನ್ನು ಒದಗಿಸಿದರೂ, ಆ ಶಿಕ್ಷಣವನ್ನು ಪಡೆಯುವ ಅವಕಾಶವನ್ನು ಹೆತ್ತವರು ಮಕ್ಕಳಿಗೆ ಒದಗಿಸುವುದಿಲ್ಲ. ಇದಕ್ಕೆ ಅವರ ಬಡತನವು ಪ್ರಮುಖ ಕಾರಣವಾಗಿದೆ. ಆದುದರಿಂದ ಈ ಕೆಳಗಿನ ಕ್ರಮಗಳ ಮೂಲಕ ಬಾಲ ಕಾರ್ಮಿಕ ಪದ್ಧತಿಯನ್ನು ಸಂಪೂರ್ಣವಾಗಿ ತೊಡೆದು ಹಾಕಬಹುದು.

೧. ಹೆಚ್ಚಿನ ಬಡ ಕುಟುಂಬಗಳಲ್ಲಿ ಕುಟುಂಬ ನಿರ್ವಹಣೆಗಾಗಿ ಹೆತ್ತವರು ದಿನವಿಡೀ ಕೂಲಿಯಾಳುಗಾಗಿ ದುಡಿಯುತ್ತಾರೆ. ಆಗ ಕುಟುಂಬದಲ್ಲಿರುವ ಎಳೆ ವಯಸ್ಸಿನ ಮಕ್ಕಳ ಲಾಲನೆ, ಪಾಲನೆಯ ಜವಾಬ್ದಾರಿಯು ಕುಟುಂಬದ ದೊಡ್ಡ ಮಕ್ಕಳ ಮೇಲೆ ಬೀಳುವುದರಿಂದ ಅವರೂ ಒಂದು ರೀತಿಯಲ್ಲಿ ಕಾರ್ಮಿಕರೇ ಆಗಿರುತ್ತಾರೆ. ಆದುದರಿಂದ ಸರಕಾರವು ಎಳೆ ವಯಸ್ಸಿನ ಮಕ್ಕಳ ಲಾಲನೆ ಪಾಲನೆಗಾಗಿ ಅಂಗನವಾಡಿ, ಬಾಲವಾಡಿ ಇತ್ಯಾದಿಗಳನ್ನು ಸ್ಥಾಪಿಸಿ ಮಕ್ಕಳಿಗೆ ಬೇಕಾದ ಎಲ್ಲಾ ಸೌಲಭ್ಯವನ್ನು ಒದಗಿಸಬೇಕು. ಇದರಿಂದಾಗಿ ಮಕ್ಕಳು ಶಿಕ್ಷಣ ಪಡೆಯುವುದರೊಂದಿಗೆ ತಾವೂ ಸಮಾಜದಲ್ಲಿ ಬೆಳೆಯಲು ಸಾಧ್ಯವಾಗುವುದು.

೨. ಶಾಲೆಗಳಲ್ಲಿ ಕೊಡುವ ಶಿಕ್ಷಣದೊಂದಿದೆ ಮಕ್ಕಳಿಗೆ ಬಿಡುವಿನ ವೇಳೆಯಲ್ಲಿ ಆದಾಯ ಗಳಿಸುವಂತಹ ಶಿಕ್ಷಣವನ್ನು ಒದಗಿಸಬೇಕು. ಉದಾಹರಣೆಗೆ ಟೈಲರಿಂಗ್, ಕಸೂತಿ, ಬಡಗಿ ಇತ್ಯಾದಿ. ಇದರಿಂದಾಗಿ ಮಕ್ಕಳ ಬಿಡುವಿನ ವೇಳೆ ಸದುಪಯೋಗ ಆಗುವುದರೊಂದಿಗೆ ಅವರು ಕುಟಂಬಕ್ಕೂ ಆಧಾರವಾಗುತ್ತಾರೆ.

೩. ಮಕಳು ಶಿಕ್ಷಣ ಪಡೆಯುವಂತೆ ಮಾಡುವುದಕ್ಕಾಗಿ ಅವರಿಗೆ ಉಚಿತ ಶಿಕ್ಷಣದೊಂದಿಗೆ, ಊಟ, ವಸತಿ, ಉಡುಪು ಇತ್ಯಾದಿಗಳನ್ನು ಒದಗಿಸಬೇಕು. ಇದರಿಂದಾಗಿ ಹೆತ್ತವರಿಗೆ ಮಕ್ಕಳ ಶಿಕ್ಷಣ ಮತ್ತು ಅವರ ಜೀವನ ನಿರ್ವಹಣೆಯ ಹೊಣೆಗಾರಿಕೆಯು ತಪ್ಪಿ ಬಾಲ ಕಾರ್ಮಿಕರ ಸಂಖ್ಯೆಯು ಕಡಿಮೆಯಾಗುವುದು.

೪. ಸರಕಾರವು ಕೈಗೊಂಡ ಹಲವಾರು ಕ್ರಮಗಳಾದ ಸರ್ವಶಿಕ್ಷಣ ಅಭಿಯಾನ, ಬಾ ಬಾಲೆ ಶಾಲೆಗೆ, ಮರಳಿ ಬಾ ಶಾಲೆಗೆ, ಅಕ್ಷರ ದಾಸೋಹ, ಚಿನ್ನರ ಅಂಗಳ ಮುಂತಾದ ಕಾರ್ಯಕ್ರಮಗಳನ್ನು ಸೂಕ್ತ ರೀತಿಯಲ್ಲಿ ಅನುಷ್ಠಾನಕ್ಕೆ ತರಬೇಕು. ಅಕ್ಷರ ದಾಸೋಹವು ಶಾಲೆಯಲ್ಲಿ ಮಕ್ಕಳ ಹಾಜರಾತಿಯನ್ನು ಹೆಚ್ಚಿಸಿರುವುದು ಯಶಸ್ವೀ ಕಾರ್ಯಕ್ರಮಗಳ ಮೂಲಕ ಮಕ್ಕಳನ್ನು ಶಾಲೆಗೆ ಆಕರ್ಷಿಸುವುದರೊಂದಿಗೆ ಬಾಲ ಕಾರ್ಮಿಕರ ಸಂಖ್ಯೆಯನ್ನು ಕಡಿಮೆಗೊಳಿಸಬಹುದು ಎನ್ನುವುದಕ್ಕೆ ಒಳ್ಳೆಯ ಉದಾಹರಣೆ.

೫. ಮಹಿಳೆಯರಿಗೆ ಹೆಚ್ಚಿನ ಶಿಕ್ಷಣ ಹಾಗೂ ಉದ್ಯೋಗವಕಾಶಗಳನ್ನು ಒದಗಿಸಬೇಕು. ಸುಶಿಕ್ಷಿತ, ಸ್ವಾವಲಂಬಿ ಮಹಿಳೆಯು ತನ್ನ ಕುಟುಂಬದ ಹಾಗೂ ಮಕ್ಕಳ ಉನ್ನತಿಗಾಗಿ

ತನ್ನನ್ನು ಸರಿಯಾದ ರೀತಿಯಲ್ಲಿ ತೊಡಗಿಸಿಕೊಳ್ಳುವುದರಿಂದ ತನ್ನ ಮಕ್ಕಳನ್ನು ಚಿಕ್ಕ ವಯಸ್ಸಿನಲ್ಲೇ ಕಾರ್ಮಿಕರಾಗಿ ದುಡಿಯಲು ಕಳುಹಿಸುವುದಕ್ಕೆ ಸಿದ್ಧರಿರುವುದಿಲ್ಲ. ಇದರಿಂದಾಗಿ ಬಾಲ ಕಾರ್ಮಿಕ ಪದ್ಧತಿಯು ತಾನಾಗಿಯೇ ನಿರ್ಮೂಲನೆಗೊಳ್ಳುವುದು.

೬. ಸರಕಾರವು ಪ್ರತೀ ವರ್ಷವು ಮಕ್ಕಳ ಗಣತಿ ಕಾರ್ಯಕ್ರಮವನ್ನು ಕೈಗೊಳ್ಳುವುದು. ಈ ರೀತಿ ಗಣತಿಯಲ್ಲಿ ಸೇರಿಕೊಂಡ ಮಕ್ಕಳು ಶಿಕ್ಷಣವನ್ನು ಪಡೆಯುತ್ತಿದ್ದಾರೆಯೇ ಎಂಬ ಅಂಶವನ್ನು ಮುಂದಿನ ವರ್ಷಗಳಲ್ಲಿ ಸ್ಪಷ್ಟಪಡಿಸಬೇಕು. ಮಕ್ಕಳು ಶಾಲೆಗೆ ಹಾಜರಾಗದಿದ್ದಲ್ಲಿ ಅದಕ್ಕೆ ಸಂಬಂಧಿಸಿದ ಕಾರಣಗಳನ್ನು ತಿಳಿದುಕೊಂಡು ಪರಿಹಾರ ಕ್ರಮಗಳನ್ನು ಸೂಚಿಸಬೇಕು.

ಬಾಲ ಕಾರ್ಮಿಕ ಪದ್ಧತಿಯಂತಹ ಅನಿಷ್ಟ ಪದ್ಧತಿಯ ನಿರ್ಮೂಲನೆಗಾಗಿ ಸರಕಾರ, ಶಿಕ್ಷಣ ಸಂಸ್ಥೆಗಳು, ಸ್ವಯಂ ಸೇವಾ ಸಂಘಗಳು ಹೆಚ್ಚಿನ ಕ್ರಮ ಕೈಗೊಳ್ಳಬೇಕು. ಇದಕ್ಕೆ ಸಂಬಂದಿಸಿದಂತೆ ಹೆತ್ತವರಿಗೆ ತಮ್ಮ ಮಕ್ಕಳ ಶಿಕ್ಷಣದ ಬಗ್ಗೆ ಹೆಚ್ಚಿನ ಮಾಹಿತಿಯನ್ನು ಮತ್ತು ಜ್ಞಾನವನ್ನು ಒದಗಿಸಬೇಕು. ಅಲ್ಲದೆ ಬಾಲ ಕಾರ್ಮಿಕರನ್ನು ಉದ್ಯೋಗದಲ್ಲಿ ತೊಡಗಿಸುವವರಿಗೆ ಕಠಿಣ ಶಿಕ್ಷೆಯನ್ನು ನೀಡಬೇಕು. ಆಗ ಮಾತ್ರ ವಿವಿಧ ರೀತಿಯಲ್ಲಿ ಶೋಷಣೆಗೆ ಒಳಗಾಗುತ್ತಿರುವ ಅಪ್ರಾಪ್ತ ವಯಸ್ಕರು ಸಮಾಜದಲ್ಲಿ ಸರಿಯಾದ ಸ್ಥಾನಮಾನದೊಂದಿಗೆ ಬದುಕಲು ಸಾಧ್ಯ.

**ಅಸಂಘಟಿತ ಕಾರ್ಮಿಕ ಮಾರುಕಟ್ಟೆಗಳು**

ಯಾವುದೇ ರೀತಿಯ ಸಂಘಟನೆಗಳನ್ನು ಹೊಂದದೇ ಇರುವ ಕಾರ್ಮಿಕರನ್ನು ಅಸಂಘಟಿತ ಕಾರ್ಮಿಕರೆಂದು ಪರಿಗಣಿಸಲಾಗಿದೆ. ಇವರು ಕೃಷಿ, ಹೋಟೆಲ್, ಬೇಕರಿ, ಸಣ್ಣಪುಟ್ಟ ವ್ಯಾಪಾರ ಇತ್ಯಾದಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುತ್ತಾರೆ. ಅಸಂಘಟಿತ ಕಾರ್ಮಿಕರ ಸಂಖ್ಯೆಯು ಗ್ರಾಮೀಣ ಹಾಗೂ ನಗರ ಪ್ರದೇಶಗಳೆರಡರಲ್ಲಿ ಕಂಡು ಬಂದರೂ, ಕೃಷಿಯಲ್ಲಿ ಇವರ ಸಂಖ್ಯೆ ಅಧಿಕವಾಗಿದೆ. ಅಸಂಘಟಿತ ಕಾರ್ಮಿಕ ಮಾರುಕಟ್ಟೆಗಳಲ್ಲಿ ಉದ್ಯೋಗಿಗಳಾಗಿರುವವರು ಹೆಚ್ಚಿನ ಶೋಷಣೆಗೆ ಒಳಗಾಗುವುದ ರೊಂದಿಗೆ ಇವರಿಗೆ ಯಾವುದೇ ರೀತಿಯ ಹೆಚ್ಚಿನ ಸೌಲಭ್ಯಗಳು ದೊರಕುವುದಿಲ್ಲ.

ಅಸಂಘಟಿತ ಕಾರ್ಮಿಕ ಮಾರುಕಟ್ಟೆಗಳಲ್ಲಿ ಕಾರ್ಮಿಕರು ಮತ್ತು ಮಾಲೀಕರ ನಡುವೆ ಯಾವುದೇ ರೀತಿಯ ಶಾಸನಬದ್ಧ ಒಪ್ಪಂದವಿರುವುದಿಲ್ಲ. ಹಾಗೂ ಸರಕಾರದ ಹಸ್ತಕ್ಷೇಪವಿರುವುದಿಲ್ಲ. ಇಲ್ಲಿ ಕೆಲಸದ ಅವಧಿ, ವೇತನ ಇತ್ಯಾದಿಗಳು ಯಾವುದೇ ರೀತಿಯ ಕಾರ್ಮಿಕ ಸಂಘಗಳ ನಿಯಂತ್ರಣದಲ್ಲಿರುವುದಿಲ್ಲ. ಈ ಕ್ಷೇತ್ರದ ಕಾರ್ಮಿಕರಿಗೆ ಯಾವುದೇ ರೀತಿಯ ಸಾಮಾಜಿಕ ಭದ್ರತೆ ಇರುವುದಿಲ್ಲ. ಅಸಂಘಟಿತ ಕಾರ್ಮಿಕ ಮಾರುಕಟ್ಟೆಯ ಕಾರ್ಮಿಕರಿಗೆ ಸಾಮಾಜಿಕ ಭದ್ರತೆ, ವಿಮಾ ಸೌಲಭ್ಯ ಇತ್ಯಾದಿಗಳು ಇರುವುದಿಲ್ಲ. ಅಸಂಘಟಿತ ಮಾರುಕಟ್ಟೆಯಲ್ಲಿ ಉದ್ಯೋಗ ಮಾಡುವ ಕಾರ್ಮಿಕರ ಸಂಖ್ಯೆಯನ್ನು ಸರಿಯಾಗಿ ಲೆಕ್ಕ ಹಾಕಲು ಸಾಧ್ಯವಿಲ್ಲ. ಏಕೆಂದರೆ ಇವರು ಯಾವನೇ ಓರ್ವ ಮಾಲೀಕನ ಕೈಕೆಳಗೆ ಅಥವಾ ಒಂದು ಉದ್ಯೋಗದಲ್ಲಿ ಶಾಶ್ವತವಾಗಿ ನೆಲೆ ನಿಲ್ಲುವುದಿಲ್ಲ.

ಅಲ್ಲದೆ ವರ್ಷಪೂರ್ತಿ ಉದ್ಯೋಗದಲ್ಲಿ ತೊಡಗಿರುವುದಿಲ್ಲ. ಅಸಂಘಟಿತ ಕಾರ್ಮಿಕ ಮಾರುಕಟ್ಟೆಯಲ್ಲಿ ಉದ್ಯೋಗ ಮಾಡುವ ಕಾರ್ಮಿಕರ ಸ್ಥಾನಮಾನ ಮತ್ತು ಜೀವನ ಮಟ್ಟವು ಕಡಿಮೆಯಾಗಿರುತ್ತದೆ. ಅಲ್ಲದೆ ಇವರು ಕಡಿಮೆ ಕೂಲಿ ಹೆಚ್ಚು ಅವಧಿಯ ಕೆಲಸ, ಉದ್ಯೋಗ ಖಾತರಿ ಇಲ್ಲದಿರುವಿಕೆ ಮುಂತಾದ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ.

ಅಸಂಘಟಿತ ಕಾರ್ಮಿಕ ಮಾರುಕಟ್ಟೆಯಲ್ಲಿ ಮಾಲೀಕರು ಪಡೆಯುವ ಲಾಭ ಅಧಿಕವಾಗಿದ್ದದು, ಕಾರ್ಮಿಕರಿಗೆ ದೊರಕುವ ಪ್ರತಿಫಲವು ಕಡಿಮೆಯಾಗಿದೆ. ನಮ್ಮ ದೇಶದಲ್ಲಿರುವ ಆದಾಯ ಮತ್ತು ಸಂಪತ್ತಿನ ಹಂಚುವಿಕೆಯಲ್ಲಿರುವ ಅಸಮಾನತೆಯನ್ನು ಹೋಗಲಾಡಿಸುವುದಕ್ಕೆ ಅಸಂಘಟಿತ ಕಾರ್ಮಿಕರಿಗೂ ಸೂಕ್ತ ಉದ್ಯೋಗ ರಕ್ಷಣೆ ಮತ್ತು ಸಾಮಾಜಿಕ ಭದ್ರತೆಯನ್ನು ಕೊಡುವುದು ಅಗತ್ಯವಾಗಿದೆ. ಆಗ ಮಾತ್ರ ಭಾರತದಂತಹ ರಾಷ್ಟ್ರವು ಮುಂದುವರೆಯಲು ಸಾಧ್ಯ.

**ಸಾಮಾಜಿಕಾ ಭದ್ರತಾ ಕ್ರಮಗಳ ಕೊರತೆ**

ಕೈಗಾರಿಕಾ ಕಾರ್ಮಿಕರಿಗಿದ್ದಂತೆ ಕೃಷಿ ಕಾರ್ಮಿಕರಿಗೆ ಯಾವುದೇ ರೀತಿಯ ಸಾಮಾಜಿಕ ಭದ್ರತೆಗಳಿರವುದಿಲ್ಲ. ಇದರಿಂದಾಗಿ ಇವರ ಹಾಗೂ ಇವರ ಕುಟುಂಬದವರ ಜೀವನವು ಅನಿಶ್ಚಿತತೆಯಿಂದ ಕೂಡಿದೆ. ಗ್ರಾಮೀಣ ಕಾರ್ಮಿಕರ ರಾಷ್ಟ್ರೀಯ ಆಯೋಗದ ಪ್ರಕಾರ ಆಧುನಿಕ ತಂತ್ರಜ್ಞಾನವು ಮಾರುಕಟ್ಟೆ ಪ್ರೇರಿತ ಹಾಗೂ ಬಂಡವಾಳ ಆಧಾರಿತವಾಗಿದ್ದು, ದೊಡ್ಡ ಪ್ರಮಾಣದ ರೈತರಿಗೆ ಸಂಪನ್ಮೂಲದ ಕೊರತೆಯಿದ್ದು ಇದಕ್ಕೆ ಸಂಬಧಿಸಿದ ಜ್ಞಾನ ಹಾಗೂ ತೊಂದರೆಗಳನ್ನು ಎದುರಿಸುವ ಸಾಮರ್ಥ್ಯವೂ ಕಡಿಮೆಯಿದ್ದು, ಇವರು ಆಧುನಿಕ ತಂತ್ರಜ್ಞಾನವನ್ನು ಉಪಯೋಗಿಸಿಕೊಳ್ಳಲು ಸಾಧ್ಯವಾಗಿಲ್ಲ. ಇದರಿಂದಾಗಿ ಸಣ್ಣ ಹಾಗೂ ಸೀಮಾಂತ ರೈತರಿಗೆ ಅನಾನುಕೂಲತೆ ಉಂಟಾಗಿದ್ದು, ಕೆಲವೊಮ್ಮೆ ಉಂಟಾಗುವ ಆರ್ಥಿಕ ಒತ್ತಡವು ಇವರನ್ನು ಕೃಷಿ ಕಾರ್ಮಿಕರನ್ನಾಗಿಸುತ್ತದೆ. ಅಂದರೆ ನಮ್ಮ ದೇಶದಲ್ಲಿ ಕೃಷಿ ಕ್ಷೇತ್ರದಲ್ಲಿ ದುಡಿಯುವವರಿಗೆ ಇರುವ ಸಾಮಾಜಿಕ ಭದ್ರತೆಗಳು ತುಂಬಾ ಕಡಿಮೆಯಾಗಿವೆ. ಕೃಷಿ ಕಾರ್ಮಿಕರ ಸ್ಥಾನಮಾನವನ್ನು ಹೆಚ್ಚಿಸುವುದಕ್ಕಾಗಿ ಈ ಕೆಳಗಿನ ಭದ್ರತಾ ಕ್ರಮಗಳನ್ನು ಗ್ರಾಮೀಣ ಕಾರ್ಮಿಕರ ರಾಷ್ಟ್ರೀಯ ಆಯೋಗವು ಸೂಚಿಸಿದೆ.

೧. ಕೃಷಿಗೆ ಬೇಕಾದ ಮೂಲಭೂತ ಸೌಲಭ್ಯಗಳಾದ ನೀರಾವರಿ, ಒಳಚರಂಡಿ, ನೆರೆ ನಿಯಂತ್ರಣ, ವಿದ್ಯುತ್ ಪೂರೈಕೆ, ಒಣಭೂಮಿ ಕೃಷಿ ತಾಂತ್ರಿಕತೆ ಇತ್ಯಾದಿಗಳನ್ನು ಅಭಿವೃದ್ಧಿಗೊಳಿಸಬೇಕು. ಇದರಿಂದಾಗಿ ಕೃಷಿ ಉತ್ಪತ್ತಿಯು ಹೆಚ್ಚಳಗೊಳ್ಳುವುದರೊಂದಿಗೆ ಕೃಷಿಯಲ್ಲಿ ದೊರಕುವ ಉದ್ಯೋಗಾವಕಾಶಗಳು ಹೆಚ್ಚಾಗುವುವು.

೨. ಉದ್ಯೋಗ ಸೃಷ್ಟಿ ಕಾರ್ಯಕ್ರಮಗಳನ್ನು ಹೆಚ್ಚು ಹೆಚ್ಚಾಗಿ ಅಳವಡಿಸಿಕೊಳ್ಳಬೇಕು. ಅಂದರೆ, ಕೃಷಿ ಕ್ಷೇತ್ರಕ್ಕೆ ಪೂರೈಕೆಯಾಗುವ ಶ್ರಮವು ಆ ಕ್ಷೇತ್ರದಲ್ಲಿ ಸೂಕ್ತ ಉದ್ಯೋಗವನ್ನು ಪಡೆಯುವಂತಿರಬೇಕು. ಇದರಿಂದಾಗಿ ಕೃಷಿ ಕಾರ್ಮಿಕರ ಆದಾಯದಲ್ಲಿ

ಹೆಚ್ಚಳವಾಗುವುದು. ಉದ್ಯೋಗ ಸೃಷ್ಟಿಯೊಂದಿಗೆ ಕನಿಷ್ಟ ಕೂಲಿ ಮತ್ತು ಸಾಮಾಜಿಕ ಭದ್ರತಾ ಕ್ರಮಗಳನ್ನು ಜಾರಿಗೊಳಿಸಬೇಕು.

೩. ಕೃಷಿ ಕಾರ್ಮಿಕರು ಕೃಷಿಯೊಂದಿಗೆ ಪೂರಕ ಉದ್ಯೋಗಗಳಾದ ಕೋಳಿ ಸಾಕಾರಣೆ, ಪಶುಸಂಗೋಪನೆ ಇತ್ಯಾದಿಗಳನ್ನು ಕೈಗೊಳ್ಳಲು ಅನುಕೂಲವಾಗುವಂತೆ ಅವರಿಗೆ ವಸತಿ ನಿವೇಶನಗಳನ್ನು ಒದಗಿಸಬೇಕು.

೪. ಗ್ರಾಮೀಣ ಕಾರ್ಮಿಕರ ರಾಷ್ಟ್ರೀಯ ಆಯೋಗದ ಪ್ರಕಾರ ಕೃಷಿ ಕಾರ್ಮಿಕರಿಗೆ ಸಂಬಂಧಿಸಿದಂತೆ ಕೇಂದ್ರೀಯ ಶಾಸನವು ಅಗತ್ಯವಾಗಿದೆ. ಈ ಶಾಸನದ ಮೂಲಕ ಕೃಷಿ ಕಾರ್ಮಿಕರಿಗೆ ಉದ್ಯೋಗ ಭದ್ರತೆ, ನಿಗದಿತ ಅವಧಿಯ ಕೆಲಸ, ನಿಗದಿತ ವೇತನ ಪಾವತಿ ಮತ್ತು ವಿವಾದ ಉಂಟಾದಾಗ ಸೂಕ್ತ ವಿಧಾನದ ಮೂಲಕ ಪರಿಹಾರ ಕ್ರಮ ಇತ್ಯಾದಿಗಳನ್ನು ಒದಗಿಸಬೇಕು. ಈ ಶಾಸನವು ಕಾರ್ಮಿಕರ ಕಲ್ಯಾಣ ಮತ್ತು ಭದ್ರತೆಗಳಿಗೂ ಆದ್ಯತೆಯನ್ನು ಕೊಡಬೇಕು. ಈ ಆಯೋಗವು ಕೃಷಿ ಕಾರ್ಮಿಕ ಸಂಘಟನೆಗಳನ್ನು ಸ್ಥಾಪಿಸುವುದಕ್ಕೆ ಅವಕಾಶ ಮಾಡಿಕೊಡುವಂತೆ ಶಿಫಾರಸ್ಸು ಮಾಡಿದೆ. ಈ ಸಂಘಟನೆಗಳ ಮೂಲಕ ಕಾರ್ಮಿಕರು ತಮ್ಮ ಚಟುವಟಿಕೆಗಳನ್ನು ನಡೆಸಬಹುದು.

ಗ್ರಾಮೀಣ ಕಾರ್ಮಿಕರ ರಾಷ್ಟ್ರೀಯ ಆಯೋಗವು ಕೃಷಿ ಮಹಿಳಾ ಕಾರ್ಮಿಕರಿಗೆ ಎರಡು ಜೀವಂತ ಮಕ್ಕಳನ್ನು ಪಡೆಯುವ ಅವಧಿಗೆ ಹೆರಿಗೆ ಕಾಲದ ರಜೆ ಮತ್ತು ಸಹಾಯಧನವನ್ನು ಒದಗಿಸುವುದಕ್ಕಾಗಿ ಹಾಗೂ ಕೃಷಿ ಕಾರ್ಮಿಕರಿಗೆ ವೃದ್ಧಾಪ್ಯದಲ್ಲಿ ಅಥವಾ ಅಂಗವಿಕಲತೆ ಉಂಟಾದಾಗ ತಿಂಗಳಿಗೆ ರೂ.೧೦೦ರ ಮಾಸಿಕ ವೇತನವನ್ನು ಶಿಫಾರಸ್ಸು ಮಾಡಿದೆ. ಇದಕ್ಕಾಗಿ ಭೂ ಮಾಲೀಕ ಹಾಗೂ ಕಾರ್ಮಿಕ ಕೊಡುಗೆಯನ್ನು ಕೊಡಬೇಕು. ಆದರೆ ಇದು ಕಷ್ಟಕರವಾಗಿರುವುದರಿಂದ ಆರಂಭದ ಮೊದಲ ಮೂರು ವರ್ಷಗಳಲ್ಲಿ ಶೇಕಡಾ ೧೦೦ ರಷ್ಟು ಹಣಕಾಸನ್ನು ಕೇಂದ್ರ ಸರಕಾರ ಹಾಗೂ ನಂತರದ ವರ್ಷಗಳಲ್ಲಿ ರಾಜ್ಯ ಹಾಗೂ ಕೇಂದ್ರ ಸರಕಾರಗಳು ಕ್ರಮವಾಗಿ ೫೦:೫೦ರ ಪ್ರಮಾಣದಲ್ಲಿ ಹಣಕಾಸು ಒದಗಿಸಬೇಕು ಎಂಬುದಾಗಿ ಈ ಆಯೋಗವು ಶಿಫಾರಸ್ಸು ಮಾಡಿದೆ.

ಗ್ರಾಮೀಣ ಕಾರ್ಮಿಕರು ಕಡು ಬಡವರಾಗಿದ್ದು, ಇವರ ಸ್ಥಿತಿಗತಿಯನ್ನು ಉತ್ತಮ ಪಡಿಸುವುದಕ್ಕೆ ಗ್ರಾಮೀಣ ಕಾರ್ಮಿಕರ ರಾಷ್ಟ್ರೀಯ ಆಯೋಗವು ಮಾಡಿದ ಶಿಫಾರಸ್ಸುಗಳನ್ನು ಅನುಷ್ಠಾನಕ್ಕೆ ತರುವುದು ಅತೀ ಅಗತ್ಯವಾಗಿದೆ. ದೇಶದಲ್ಲಿ ಆಹಾರ ಸಮಸ್ಯೆಯನ್ನು ಹೋಗಲಾಡಿಸುವಲ್ಲಿ, ಏರುತ್ತಿರುವ ಜನಸಂಖ್ಯೆಗೆ ಆಹಾರ ಧಾನ್ಯಗಳನ್ನು ಪೂರೈಸುವಲ್ಲಿ ಹಾಗೂ ಹಸಿರುಕ್ರಾಂತಿಯ ಯಶಸ್ಸಿನಲ್ಲಿ ಗ್ರಾಮೀಣ ಕಾರ್ಮಿಕರ ಪಾತ್ರ ಅಪಾರವಾದುದು. ಆದುದರಿಂದ ಗ್ರಾಮೀಣ ಕಾರ್ಮಿಕರ ರಾಷ್ಟ್ರೀಯ ಆಯೋಗದ ಶಿಫಾರಸ್ಸಿನ ಅನುಷ್ಠಾನಕ್ಕೆ ಕೇಂದ್ರ ಸರಕಾರವು ೧೯೯೩ರ ನಂತರ ನಮ್ಮ ಸಮಾಜದ ಬಡವರಲ್ಲಿ ಬಡವರಾದ ಗ್ರಾಮೀಣ ಕಾರ್ಮಿಕರ ಅಭಿವೃದ್ಧಿಗಾಗಿ ನಿಧಾನವಾಗಿ ಕ್ರಮ ಕೈಗೊಳ್ಳುತ್ತಿದೆ.

### ಕೃಷಿ ಕೂಲಿ ಪದ್ಧತಿಯ ಪ್ರವೃತ್ತಿಗಳು

ಕೃಷಿ ಕಾರ್ಮಿಕರು ಭಾರತದಲ್ಲಿ ಪಡೆಯುವ ಕೂಲಿಯು ಸರಕಾರ ನಿಗದಿ ಪಡಿಸಿದ ಕನಿಷ್ಟ ಕೂಲಿಗಿಂತ ಕಡಿಮೆಯಾಗಿದೆ. ಕೇರಳ, ಪಂಜಾಬ್, ಹರಿಯಾಣ ಮತ್ತು ಉತ್ತರ ಪ್ರದೇಶದ ಕೆಲವು ಭಾಗಗಳಲ್ಲಿ ಈ ಕೂಲಿಯು ಸರಕಾರ ನಿಗದಿಪಡಿಸಿದ ಕೂಲಿಯಾಗಿದೆ. ಆದರೆ ಈ ರಾಜ್ಯದಲ್ಲಿ ಮಹಿಳೆಯರಿಗೆ ದೊರಕುವ ಕೂಲಿಯು ನಿಗದಿತ ಕೂಲಿಗಿಂತ ಕಡಿಮೆಯಾಗಿದೆ. ಕೃಷಿ ಕಾರ್ಮಿಕರು ಅಸಂಘಟಿತ ಕಾರ್ಮಿಕರಾಗಿರುವುದರಿಂದ ಅವರು ಹೆಚ್ಚಿನ ವೇತನಕ್ಕಾಗಿ ಹೋರಾಡುವ ಸಾಮರ್ಥ್ಯವನ್ನು ಹೊಂದಿರುವುದಿಲ್ಲ. ಸರಕಾರವು ಅಸಂಘಟಿತ ಕ್ಷೇತ್ರದ ಕಾರ್ಮಿಕರಿಗೆ ಕನಿಷ್ಟ ೪೦ ರೂ.ಗಳ ದಿನಗೂಲಿಯನ್ನು ನಿಗದಿ ಪಡಿಸಿದೆ. ಕರ್ನಾಟಕ ಸರಕಾರವು ಅಸಂಘಟಿತ ಕ್ಷೇತ್ರದ ಕಾರ್ಮಿಕರಿಗೆ ೫೬-೫೦ ರೂ.ಗಳ ಕನಿಷ್ಟ ದಿನಗೂಲಿಯನ್ನು ನಿಗದಿಪಡಿಸಿದೆ.

### ನೈಜಕೂಲಿ

ಕಾರ್ಮಿಕರು ತಾವು ಪಡೆದ ಹಣದ ರೂಪದ ಕೂಲಿಯಿಂದ ಪಡೆಯಬಹುದಾದ ಸರಕು ಮತ್ತು ಸೇವೆಗಳ ಪ್ರಮಾಣವು ನೈಜ ಕೂಲಿಯಾಗಿರುತ್ತದೆ. ನೈಜ ಕೂಲಿಯು ಜನರ ಜೀವನ ಮಟ್ಟವನ್ನು ವಿವರಿಸುವ ಸೂಚ್ಯಂಕವಾಗಿದೆ ಅಂದರೆ ನೈಜಕೂಲಿ ಹೆಚ್ಚಾದಂತೆ ಕಾರ್ಮಿಕರ ಅನುಭೋಗವು ಹೆಚ್ಚಾಗುತ್ತದೆ. ಯಾವ ದೇಶದಲ್ಲಿ ನೈಜ ಕೂಲಿಯು ಅಧಿಕವಾಗಿರುತ್ತದೋ ಅಂತಹ ರಾಷ್ಟ್ರವು ಮುಂದುವರಿದ ರಾಷ್ಟ್ರವಾಗಿರುತ್ತದೆ. ನೈಜ ಕೂಲಿಯು ಹೆಚ್ಚಾಗಿರುವ ರಾಷ್ಟ್ರಗಳಲ್ಲಿ ಹಣದುಬ್ಬರದ ದರವು ಕಡಿಮೆಯಿರುತ್ತದೆ ಹಣದ ರೂಪದ ಕೂಲಿಯಲ್ಲಿ ಹೆಚ್ಚಳವಾದಂತೆ ಸರಕು ಮತ್ತು ಸೇವೆಗಳ ಬೆಲೆಯಲ್ಲಿ ಹೆಚ್ಚಳ ಉಂಟಾದರೆ ನೈಜಕೂಲಿಯು ಹೆಚ್ಚಳವಾಗುವುದಿಲ್ಲ. ನೈಜಕೂಲಿ ಹೆಚ್ಚಾದಾಗ ಮಾತ್ರ ಕಾರ್ಮಿಕರ ದಕ್ಷತೆ, ಉತ್ಪಾದನೆಯಲ್ಲಿ ಆಸಕ್ತಿ ಇತ್ಯಾದಿಗಳು ಹೆಚ್ಚಾಗುತ್ತವೆ.

### ಹಣರೂಪಿ ಕೂಲಿ

ಕೂಲಿಯ ದರವನ್ನು ಹಣದ ಮೂಲಕ ಹೇಳುವುದೇ ಹಣರೂಪಿ ಕೂಲಿಯಾಗಿದೆ. ಇದು ನೈಜ ಕೂಲಿಗಿಂತ ಭಿನ್ನವಾಗಿದೆ. ಹಣರೂಪದ ಕೂಲಿಯಲ್ಲಿ ಹೆಚ್ಚಳವಾದಂತೆ ಸರಕು ಮತ್ತು ಸೇವೆಯ ಬೆಲೆಯಲ್ಲಿ ಹೆಚ್ಚಳವುಂಟಾದರೆ ಕಾರ್ಮಿಕರ ಅನುಭೋಗ, ಜೀವನಮಟ್ಟ ಇತ್ಯಾದಿಗಳು ಹೆಚ್ಚಳಗೊಳ್ಳುವುದಿಲ್ಲ. ಸಾಮಾನ್ಯವಾಗಿ ಕಾರ್ಮಿಕರು ತಮ್ಮ ಹಣದ ರೂಪದ ಕೂಲಿಗಾಗಿ ಹೋರಾಟ ನಡೆಸುತ್ತಾರೆಯೇ ಹೊರತು ನೈಜ ಕೂಲಿಗಾಗಿಯಲ್ಲ. ಹಣದ ರೂಪದ ಕೂಲಿಯಲ್ಲಿ ಹೆಚ್ಚಳವಾದಂತೆ ಸರಕು ಮತ್ತು ಸೇವೆಗಳ ಬೆಲೆಯಲ್ಲಿ ಹೆಚ್ಚಳವುಂಟಾದರೆ ಪರಿಣಾಮವಾಗಿ ಹಣದುಬ್ಬರ ಉಂಟಾಗುವ ಸಾಧ್ಯತೆಯಿದೆ.

### ಕನಿಷ್ಟ ಕೂಲಿ ಕಾಯಿದೆ

ಕಾನೂನಿನ ಮೂಲಕ ಕಾರ್ಮಿಕರಿಗೆ ನಿಗದಿ ಪಡಿಸಿದ ಕೂಲಿಯನ್ನು ಕನಿಷ್ಟ ಕೂಲಿ

ಕಾಯಿದೆ ಎನ್ನುವರು. ಇದರ ಅನುಕೂಲತೆಯೆಂದರೆ, ಇದರಿಂದಾಗಿ ಕಾರ್ಮಿಕರ ಶೋಷಣೆಯು ನಿಯಂತ್ರಣಕ್ಕೊಳಗಾಗುತ್ತದೆ. ನಮ್ಮ ದೇಶದಲ್ಲಿ ೧೯೪೮ ರಲ್ಲಿ ಕನಿಷ್ಟ ಕೂಲಿ ಕಾಯಿದೆಯನ್ನು ಜಾರಿಗೊಳಿಸಲಾಯಿತು. ಈ ಕಾಯಿದೆಯು ಪ್ರತಿಯೊಂದು ರಾಜ್ಯ ಸರಕಾರವು ೧೯೪೮ ರಿಂದ ಮೂರು ವರ್ಷಗಳೊಳಗೆ ಕನಿಷ್ಟ ವೇತನವು ಕೃಷಿ ಕಾರ್ಮಿಕರಿಗೆ ನಿಗದಿ ಪಡಿಸುವಂತೆ ಸೂಚಿಸಿದೆ. ರಾಜ್ಯಗಳ ಜೀವನ ವೆಚ್ಚ ಮತ್ತು ಜೀವನ ಮಟ್ಟವನ್ನು ಆಧರಿಸಿ ಕನಿಷ್ಟ ಕೂಲಿಯನ್ನು ನಿಗದಿ ಪಡಿಸಲಾಗುವುದು. ಹೆಚ್ಚಿನ ರಾಜ್ಯ ಸರಕಾರಗಳು ನಿಗದಿ ಪಡಿಸಿದ ಕೂಲಿಯು ಆ ರಾಜ್ಯಗಳ ಕೃಷಿ ಕಾರ್ಮಿಕರು ಪಡೆಯುತ್ತಿದ್ದ ಕೂಲಿಗಿಂತ ಕಡಿಮೆಯಾಗಿರುತ್ತದೆ. ಇದರಿಂದಾಗಿ ಈ ಕಾಯಿದೆಯು ಕಾರ್ಮಿಕರ ಕೂಲಿಯನ್ನು ನಿಗದಿ ಪಡಿಸುವುದರಲ್ಲಿ ವಿಫಲವಾಗಿದೆ. ಕನಿಷ್ಟ ಕೂಲಿಯನ್ನು ನಿಗದಿ ಪಡಿಸಿ ಕಾರ್ಮಿಕರಿಗೆ ಅದು ದೊರಕುವಂತೆ ಮಾಡುವುದಕ್ಕೆ ಸರಕಾರವು ಯಾವುದೇ ಪ್ರತ್ಯೇಕ ಸಂಸ್ಥೆಯನ್ನು ನೇಮಕಾತಿ ಮಾಡಿರುವುದಿಲ್ಲ. ಗ್ರಾಮೀಣ ಕೃಷಿ ಕಾರ್ಮಿಕರ ಅನಕ್ಷರತೆ, ಮುಗ್ಧತೆ, ಕನಿಷ್ಟ ಕೂಲಿ ಶಾಸನ ಬಗ್ಗೆ ಮಾಹಿತಿಯ ಕೊರತೆ ಹಾಗೂ ಅಸಂಘಟನೆ ಇತ್ಯಾದಿಗಳಿಂದಾಗಿ ಕೃಷಿ ಕಾರ್ಮಿಕರು ಇನ್ನೂ ಕನಿಷ್ಟ ಕೂಲಿಯಿಂದ ವಂಚಿತರಾಗಿರುತ್ತಾರೆ.

## ೫.೨. ಕೈಗಾರಿಕಾ ಕಾರ್ಮಿಕರು ಅಥವಾ ಕೈಗಾರಿಕಾ ಶ್ರಮ

ಸಾಮಾನ್ಯ ಭಾಷೆಯಲ್ಲಿ ಕೈಗಾರಿಕಾ ಕಾರ್ಮಿಕರೆಂದರೆ ದೊಡ್ಡ ಹಾಗೂ ಸಣ್ಣ ಮತ್ತು ಗುಡಿ ಕೈಗಾರಿಕೆಗಳಲ್ಲಿ ಉದ್ಯೋಗ ಮಾಡುವವರಾಗಿರುತ್ತಾರೆ. ಆದರೆ ಭಾರತದಲ್ಲಿ ಫ್ಯಾಕ್ಟರಿ ಕಾಯಿದೆಯ ನಿಯಂತ್ರಣದಲ್ಲಿರುವ, ಸಂಘಟಿತ ಕೈಗಾರೀಕೆಗಳಲ್ಲಿ ಕೆಲಸ ಮಾಡುತ್ತಿರುವ ಕಾರ್ಮಿಕರನ್ನು ಮಾತ್ರ ಕೈಗಾರಿಕಾ ಕಾರ್ಮಿಕರು ಎಂದು ಪರಿಗಣಿಸಲಾಗಿದೆ. ಗುಡಿ ಕೈಗಾರಿಕೆಗಳಲ್ಲಿ ಕೆಲಸ ಮಾಡುತ್ತಿರುವವರನ್ನು ಕೈಗಾರಿಕಾ ಕಾರ್ಮಿಕರು ಎಂದು ಪರಿಗಣಿಸಲಾಗಿಲ್ಲ. ನಮ್ಮ ದೇಶದಲ್ಲಿ ಕೈಗಾರಿಕೀಕರಣವು ಮಂದಗತಿಯಲ್ಲಿ ಆಗುತ್ತಿರುವುದರಿಂದ ಕೈಗಾರಿಕಾ ಕಾರ್ಮಿಕರ ಸಂಖ್ಯೆಯು ನಿಧಾನವಾಗಿ ಬೆಳವಣಿಗೆ ಹೊಂದುತ್ತಿದೆ.

೧೯೦೦ ರಲ್ಲಿ ನಮ್ಮ ದೇಶದಲ್ಲಿ ಕೇವಲ ೫ ಲಕ್ಷ ಕಾರ್ಮಿಕರು ಬೇರೆ ಬೇರೆ ಫ್ಯಾಕ್ಟರಿಗಳಲ್ಲಿ ಉದ್ಯೋಗಿಗಳಾಗಿದ್ದರು. ೧೯೫೦ ಮತ್ತು ೧೯೬೩ರ ನಡುವೆ ಕೈಗಾರಿಕಾ ಕಾರ್ಮಿಕರ ಸಂಖ್ಯೆಯು ೩ ಮಿಲಿಯದಿಂದ ೯.೧. ಮಿಲಿಯಕ್ಕೆ ಹೆಚ್ಚಳಗೊಂಡಿತು. ೧೯೯೮-೧೯೯೯ರ ನಡುವೆ ಕೈಗಾರಿಕಾ ಕಾರ್ಮಿಕರ ಸಂಖ್ಯೆಯು ೮.೮ ಮಿಲಿಯದಿಂದ ೬.೧ ಮಿಲಿಯಕ್ಕೆ ಇಳಿಮುಖವಾಯಿತು. ೧೯೯೮ ರಲ್ಲಿ ಸಂಘಟಿತ ಕ್ಷೇತ್ರದ ಶೇಕಡಾ ೩.೨ ರಷ್ಟು ಕಾರ್ಮಿಕರು ಕೈಗಾರಿಕಾ ಕ್ಷೇತ್ರದಲ್ಲಿ ತೊಡಗಿದ್ದರೆ, ೧೯೯೯ ರಲ್ಲಿ ಇವರ ಪ್ರಮಾಣವು ಶೇಕಡಾ ೨೪ ಕ್ಕೆ ಇಳಿದಿದೆ. ಅಂದರೆ ಒಟ್ಟು ದುಡಿಯುವ ಜನಸಂಖ್ಯೆಯ ಶೇಕಡ ೨.೪ರಷ್ಟು ಜನಸಂಖ್ಯೆ ಮಾತ್ರ ಕೃಷಿಯನ್ನು ಅವಲಂಬಿಸಿಕೊಂಡಿರುತ್ತಾರೆ. ಆದರೆ ರಾಷ್ಟ್ರೀಯ ಆದಾಯಕ್ಕೆ ಕೈಗಾರಿಕಾ ಕಾರ್ಮಿಕರ ಕೊಡುಗೆ ಮಹತ್ವದ್ದಾಗಿದೆ.

ಹೆಚ್ಚಿನ ಕೈಗಾರಿಕಾ ಕಾರ್ಮಿಕರು ಗ್ರಾಮೀಣ ಪ್ರದೇಶಗಳಿಂದ ವಲಸೆ ಬಂದವರಾಗಿದ್ದು, ಇವರು ತಮ್ಮ ಹಳ್ಳಿಯೊಂದಿಗೆ ಸಂಬಂಧವನ್ನು ಹೊಂದಿರುತ್ತಾರೆ. ಆದುದರಿಂದ ಕೃಷಿ ಕಾಲದಲ್ಲಿ ಹಳ್ಳಿಗಳಿಗೆ ಹೋಗಿ ಕೃಷಿಯಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವರು. ಆದುದರಿಂದ ಕೆಲಸಕ್ಕೆ ಗೈರು ಹಾಜರಿ, ಉದ್ಯೋಗವನ್ನು ಆಗಾಗ್ಗೆ ಬದಲಾಯಿಸುವುದು ಇವರ ಒಂದು ಪ್ರಮುಖ ಗುಣಲಕ್ಷಣವಾಗಿದೆ. ಹೆಚ್ಚಿನ ಕೈಗಾರಿಕಾ ಕಾರ್ಮಿಕರು ಅನಕ್ಷರಸ್ಥರಾಗಿರುವುದರಿಂದ ಇವರಿಗೆ ಕೈಗಾರಿಕೆಗಳು ಎದುರಿಸುತ್ತಿರುವ ಸಮಸ್ಯೆಗಳು ಸುಲಭದಲ್ಲಿ ಅರ್ಥವಾಗುವುದಿಲ್ಲ. ಗೈರು ಹಾಜರಿ, ಅಶಿಸ್ತು ಇತ್ಯಾದಿಗಳು ಕೈಗಾರಿಕಾ ಕಾರ್ಮಿಕರಲ್ಲಿ ಸಾಮಾನ್ಯವಾಗಿದೆ.

**ಕೈಗಾರಿಕಾ ಕಾರ್ಮಿಕರಿಗೆ ಖಾಸಗಿ ಮತ್ತು ಸಾರ್ವಜನಿಕ ಕ್ಷೇತ್ರದ ಕೊಡುಗೆ**

ಖಾಸಗಿ ಜನರ ನಿಯಂತ್ರಣದಲ್ಲಿರುವ ಉತ್ಪಾದನಾ ಕ್ಷೇತ್ರವನ್ನು ಖಾಸಗಿ ಕ್ಷೇತ್ರ ಎನ್ನುವರು. ಖಾಸಗೀ ಕ್ಷೇತ್ರವು ಭಾರತದ ಅರ್ಥ ವ್ಯವಸ್ಥೆಯಲ್ಲಿ ಪ್ರಮುಖ ಪಾತ್ರ ವಹಿಸುತ್ತಿದೆ. ಈ ಕ್ಷೇತ್ರವು ದೇಶದ ಒಟ್ಟು ಉತ್ಪಾದನೆಯ ಶೇಕಡ ೮೦ರಷ್ಟನ್ನು ಉತ್ಪಾದಿಸುವುದರೊಂದಿಗೆ, ಒಟ್ಟು ಉದ್ಯೋಗಾವಕಾಶಗಳಲ್ಲಿ ಶೇಕಡ ೬೦ರಷ್ಟು ಉದ್ಯೋಗಾವಕಾಶಗಳನ್ನು ಒದಗಿಸುತ್ತಿದೆ. ೧೯೫೭ರಲ್ಲಿ ನಮ್ಮ ದೇಶದಲ್ಲಿ ೭೪ ಸಾರ್ವಜನಿಕ ಕ್ಷೇತ್ರದ ಕಂಪನಿಗಳಿದ್ದುದು ೨೦೦೦ ನೇ ವರ್ಷಕ್ಕಾಗುವಾಗ ೧೨೫೭ ಆಗಿವೆ. ಇದೇ ರೀತಿಯಲ್ಲಿ ಖಾಸಗಿ ಕಂಪನಿಗಳ ಪ್ರಮಾಣವು ೧೯೫೭ ರಲ್ಲಿ ೨೯,೨೮೩ ಇದ್ದುದು ೨೦೦೦ ನೇ ವರ್ಷದಲ್ಲಿ ೫೪೧,೦೫೧ ಕ್ಕೆ ಹೆಚ್ಚಳಗೊಂಡಿವೆ.

೧೯೪೭ಕ್ಕಿಂತ ಮೊದಲು ಭಾರತೆದಲ್ಲಿ ಬ್ರಿಟಿಷ್ ಅಧಿಕಾರವಿದ್ದಾಗ ಹತ್ತಿಬಟ್ಟೆ, ಸೆಣಬು, ಸಕ್ಕರೆ, ಕಾಗದ, ಖಾದ್ಯ ತೈಲ ಮುಂತಾದ ಕೈಗಾರಿಕೆಗಳು ಖಾಸಗಿ ಕ್ಷೇತ್ರದಲ್ಲಿ ಸ್ಥಾಪಿಸಲ್ಪಟ್ಟವು. ೨೦ ನೇ ಶತಮಾನದಲ್ಲಿ ಟಾಟಾ ಕಬ್ಬಿಣ ಮತ್ತು ಉಕ್ಕಿನ ಕೈಗಾರಿಕೆಯು ಸಾಕಷ್ಟು ಅಭಿವೃದ್ಧಿಯನ್ನು ಹೊಂದಿತು. ಈಗ ಭಾರತದಲ್ಲಿ ರಾಸಾಯನಿಕಗಳು, ಬಣ್ಣ, ಪ್ಲಾಸ್ಟಿಕ್, ಯಂತ್ರೋಪಕರಣ, ರಬ್ಬರ್ ಮುಂತಾದ ಕೈಗಾರಿಕೆಗಳು ಖಾಸಗಿ ಕ್ಷೇತ್ರದಲ್ಲಿ ಸಾಕಷ್ಟು ಪ್ರಗತಿಯನ್ನು ಸಾಧಿಸಿವೆ. ಖಾಸಗಿ ಕ್ಷೇತ್ರವು ಜನರಿಗೆ ಉದ್ಯೋಗಾವಕಾಶಗಳನ್ನು ಒದಗಿಸುವ ಒಂದು ಪ್ರಮುಖ ಮೂಲವಾಗಿದೆ. ಈ ಕ್ಷೇತ್ರವು ಅಭಿವೃದ್ಧಿ ಹೊಂದಿದಂತೆ, ಎಲ್ಲಾ ವರ್ಗದ ಜನರಿಗೆ ಸಿಗುವ ಉದ್ಯೋಗಾವಕಾಶಗಳು ಅಧಿಕವಾಗಿ ದೇಶದಲ್ಲಿ ನಿರುದ್ಯೋಗ ಕಡಿಮೆ ಮಾಡುವುದರಲ್ಲಿ ಇದು ಪ್ರಮುಖ ಪಾತ್ರ ವಹಿಸುತ್ತಿದೆ. ಆದರೆ ಖಾಸಗಿ ಕ್ಷೇತ್ರದಲ್ಲಿ ಉದ್ಯೋಗ ಮಾಡುವವರಿಗೆ ಉದ್ಯೋಗ ಖಾಯಮಾತಿ ಇಲ್ಲದೇ ಇರುವುದರೊಂದಿಗೆ ಸಾರ್ವಜನಿಕ ಕ್ಷೇತ್ರದೊಂದಿಗೆ ಹೋಲಿಸಿದಾಗ ಇವರಿಗೆ ದೊರಕುವ ವೇತನ ಮತ್ತು ಇತರ ಸೌಲಭ್ಯಗಳು ಕಡಿಮೆಯಾಗಿವೆ. ಇವರು ಒಂದಲ್ಲ ಒಂದು ರೀತಿಯಲ್ಲಿ ಶೋಷಣೆಗೆ ಒಳಗಾಗುತ್ತಾರೆ. ಆದರೂ ಉದ್ಯೋಗದ ದೃಷ್ಟಿಯಿಂದ ಖಾಸಗಿ ಕ್ಷೇತ್ರವು ಭಾರತದಲ್ಲಿ ಪ್ರಮುಖ ಪಾತ್ರ ವಹಿಸುತ್ತಿದೆ.

ಸಾರ್ವಜನಿಕ ಕ್ಷೇತ್ರವೆಂದರೆ ಸರಕಾರದ ನಿಯಂತ್ರಣದಲ್ಲಿರುವ ಕ್ಷೇತ್ರವಾಗಿದೆ. ಸಾರ್ವಜನಿಕ ಕ್ಷೇತ್ರದಲ್ಲಿ ಉದ್ಯೋಗ ಮಾಡುತ್ತಿರುವವರಿಗೆ ದೊರಕುವ ವೇತನ, ವಸತಿ ಸೌಲಭ್ಯ, ವೈದ್ಯಕೀಯ ಹಾಗೂ ಶಿಕ್ಷಣ ಸೌಲಭ್ಯದ ಪ್ರಮಾಣವೂ ಅಧಿಕವಾಗಿದೆ. ಈ ಕೆಳಗಿನ ಅಂಕಿ ಅಂಶಗಳು ಈ ಮೇಲಿನ ಅಂಶಗಳನ್ನು ಪುಷ್ಟೀಕರಿಸುವವು. ೧೯೮೬-೮೭ ರಲ್ಲಿ ಸಾರ್ವಜನಿಕ ರಂಗದ ನೌಕರರ ನೈಜ ವೇತನವು ೨೮,೮೨೦ ರೂಪಾಯಿಗಳಿದ್ದುದು, ೨೦೦೧-೦೨ ರಲ್ಲಿ ೫೬,೫೬೪ ರೂಪಾಯಿಗಳಾಗಿವೆ. ಅಂದರೆ ನೈಜ ವೇತನವು ವಾರ್ಷಿಕ ೪.೩. ಶೇಕಡ ದರದಲ್ಲಿ ಹೆಚ್ಚಳಗೊಂಡಿದೆ. ೨೦೦೧-೦೨ ರ ಅವಧಿಯಲ್ಲಿ ಸಾರ್ವಜನಿಕ ಕ್ಷೇತ್ರವು ತನ್ನ ಕಾರ್ಮಿಕರ ವಸತಿ, ಶಿಕ್ಷಣ, ವೈದ್ಯಕೀಯ ಸೌಲಭ್ಯ ಇತ್ಯಾದಿಗಳಿಗಾಗಿ ೩೦೬೦ ಕೋಟಿ ರೂಪಾಯಿಗಳನ್ನು ವಿನಿಯೋಗಿಸಿದೆ. ಸಾರ್ವಜನಿಕ ಕ್ಷೇತ್ರದ ಶೇಕಡಾ ೪೪ ರಷ್ಟು ಕಾರ್ಮಿಕರಿಗೆ ವಸತಿ ಸೌಲಭ್ಯವನ್ನು ಒದಗಿಸಲಾಗಿದೆ. ಈ ಸೌಲಭ್ಯವು ಅವರ ಜೀವನ ಮಟ್ಟವನ್ನು ಹೆಚ್ಚಿಸುವುದಲ್ಲದೆ ಸ್ಥಾನಮಾನವನ್ನು ಹೆಚ್ಚಿಸುವುದರಲ್ಲಿ ಯಾವುದೇ ರೀತಿಯ ಸಂಶಯವಿಲ್ಲ.

ಸಾರ್ವಜನಿಕ ಕ್ಷೇತ್ರದ ಕೈಗಾರಿಕೆಗಳು ರೋಗಗ್ರಸ್ಥವಾದರೂ ಸರಕಾರವು ರೋಗಗ್ರಸ್ಥ ಕೈಗಾರಿಕೆಗಳ ಜವಾಬ್ದಾರಿಯನ್ನು ನೋಡಿಕೊಳ್ಳುತ್ತದೆ. ಉದಾಹರಣೆಗೆ ನಮ್ಮ ದೇಶದಲ್ಲಿ ೧.೬ ಲಕ್ಷ ಹತ್ತಿ ಬಟ್ಟೆ ಕೈಗಾರಿಕೆಯ ಕಾರ್ಮಿಕರು ರೋಗಗ್ರಸ್ಥ ಕೈಗಾರಿಕೆಯಲ್ಲಿ ದುಡಿಯುತ್ತಿದ್ದರೂ, ಅವರ ಸ್ಥಾನಮಾನವು ಖಾಸಗಿ ಕೈಗಾರಿಕೆಗಳ ಕಾರ್ಮಿಕರ ಸ್ಥಾನಮಾನಕ್ಕಿಂತ ಉತ್ತಮವಾಗಿದೆ. ಅಂದರೆ ಸಾರ್ವಜನಿಕ ಕ್ಷೇತ್ರದ ಪ್ರಮುಖ ಉದ್ದೇಶ ಕೇವಲ ಲಾಭ ಗಳಿಸುವುದು ಮಾತ್ರವಲ್ಲ ತನ್ನನ್ನು ಅವಲಂಬಿಸಿಕೊಂಡಿರುವವರ ಯೋಗಕ್ಷೇಮವನ್ನು ಕಾಪಾಡುವುದಾಗಿದೆ.

**ಸಂಘಟಿತ ಮತ್ತು ಅಸಂಘಟಿತ ಕಾರ್ಮಿಕರು**

ಕಾರ್ಮಿಕ ಸಂಘಗಳ ಸದಸ್ಯತ್ವವನ್ನು ಪಡೆದಿರುವ ಕಾರ್ಮಿಕರನ್ನು ಸಂಘಟಿತ ಕಾರ್ಮಿಕರು ಎಂದು ಪರಿಗಣಿಸಲಾಗಿದೆ. ಇಲ್ಲಿ ನೌಕರರ ವೇತನ, ಕೆಲಸದ ಅವಧಿ, ಕೆಲಸದ ವಿಧಾನ ಇತ್ಯಾದಿಗಳನ್ನು ಸಂಘಟನಾಕಾರರು ಮಾಲೀಕರು ಕಾರ್ಮಿಕ ಸಂಘಟನೆಗಳೊಂದಿಗೆ ಚರ್ಚಿಸಿ ನಿರ್ಣಯಿಸುವವು. ಕಾರ್ಮಿಕ ಸಂಘಗಳು ತಮ್ಮ ಸದಸ್ಯರಿಗೆ ತೊಂದರೆ ಉಂಟಾದಾಗ ಬೇಕಾದ ಸೌಲಭ್ಯಗಳನ್ನು ಒದಗಿಸುವಲ್ಲಿ ಕ್ರಮ ಕೈಗೊಳ್ಳುವವು. ಸಂಘಟಿತ ಕಾರ್ಮಿಕರಿಗೆ ಇರುವ ರಕ್ಷಣೆಯು ಹೆಚ್ಚಾಗಿದ್ದು ಅವರು ಪಡೆದುಕೊಳ್ಳುವ ಸೌಲಭ್ಯವೂ ಅಧಿಕವಾಗಿದೆ. ಇವರು ದೊಡ್ಡ ಹಾಗೂ ಸಣ್ಣ ಕೈಗಾರಿಕೆಗಳು ಅಂದರೆ ಫ್ಯಾಕ್ಟರಿ ಕಾಯಿದೆಯ ನಿಯಂತ್ರಣದಲ್ಲಿರುವ ಕೈಗಾರಿಕೆಗಳಲ್ಲಿ ದುಡಿಯುವ ಕಾರ್ಮಿಕರಾಗಿರುತ್ತಾರೆ.

ಯಾವುದೇ ಸಂಘಟನೆಗೆ ಒಳಪಡದೆ ಕೈಗಾರಿಕೆಗಳಲ್ಲಿ ದುಡಿಯುವ ಕಾರ್ಮಿಕರು ಅಸಂಘಟಿತ ಕಾರ್ಮಿಕರಾಗಿರುತ್ತಾರೆ. ಇವರು ಗುಡಿ ಕೈಗಾರಿಕೆಗಳಲ್ಲಿ ಉದ್ಯೋಗಿಗಳಾಗಿದ್ದು, ಇವರಿಗೆ ಉದ್ಯೋಗದಲ್ಲಾಗಲಿ ಅಥವಾ ಇನ್ನು ಯಾವುದೇ ರೀತಿಯಲ್ಲಿ ಭದ್ರತೆ

ಇರುವುದಿಲ್ಲ. ಈ ಕಾರ್ಮಿಕರ ಶೋಷಣೆ ಅಧಿಕವಾಗಿದ್ದು, ಇವರು ಅತಂತ್ರ ಸ್ಥಿತಿಯ ಬದುಕನ್ನು ನಡೆಸುತ್ತಾರೆ. ಇವರ ಸಾಮಾಜಿಕ ಮತ್ತು ಆರ್ಥಿಕ ಸ್ಥಾನಮಾನವು ಕಡಿಮೆಯಿದ್ದು, ಇವರಿಗೆ ಶೋಷಣೆಯ ವಿರುದ್ಧ ಹೋರಾಡುವ ಸಾಮರ್ಥ್ಯವೂ ಕಡಿಮೆಯಾಗಿದೆ. ಆದುದರಿಂದ ಅಸಂಘಟಿತ ಕೈಗಾರಿಕಾ ಕಾರ್ಮಿಕರನ್ನು ಕೈಗಾರಿಕಾ ಕಾರ್ಮಿಕರೆಂದು ಪರಿಗಣಿಸಲಾಗುವುದಿಲ್ಲ. ಅಸಂಘಟಿತ ಕಾರ್ಮಿಕರ ಶೋಷಣೆ ಹೆಚ್ಚಾಗಿದ್ದು, ಅವರ ಜೀವನಮಟ್ಟವು ಕಡಿಮೆಯಿರುತ್ತದೆ.

**ಕಾರ್ಮಿಕ ಸಂಘಟನೆಗಳು**

ಕಾರ್ಮಿಕ ಸಂಘಟನೆಗಳು ಕಾರ್ಮಿಕರ ಸ್ವಯಂ ಪ್ರೇರಿತ ಸಂಘಟನೆಗಳಾಗಿದ್ದು, ಇವುಗಳ ಮುಖ್ಯ ಉದ್ದೇಶ ಕಾರ್ಮಿಕರ ಹಿತಾಸಕ್ತಿಯನ್ನು ಕಾಪಾಡುವುದರೊಂದಿಗೆ, ಅವುಗಳನ್ನು ಪ್ರೋತ್ಸಾಹಿಸುವುದು. ೧೯ನೇ ಶತಮಾನದ ಉತ್ತರಾರ್ಧದಲ್ಲಿ ಭಾರತದಲ್ಲಿ ಕಾರ್ಮಿಕ ಸಂಘಗಳು ಹುಟ್ಟಿಕೊಂಡರೂ, ೨೦ ನೇ ಶತಮಾನದ ಮೊದಲ ಭಾಗದಲ್ಲಿ ಇವುಗಳು ಬೆಳವಣಿಗೆಯನ್ನು ಹೊಂದಲು ಆರಂಭಿಸಿದವು. ಎಸ್.ಎಸ್. ಬಂಗಲೀ, ಎಂ. ಲೋಖಂಡೇ ಮತ್ತು ಇತರರು ಕಾರ್ಮಿಕ ಸಂಘಗಳನ್ನು ಸ್ಥಾಪಿಸಿ, ಅವುಗಳ ಮೂಲಕ ಮುಷ್ಕರಗಳನ್ನು ಸಂಘಟಿಸುವಲ್ಲಿ ಹಾಗೂ ದುಡಿಯುವ ವರ್ಗದವರ ಸ್ಥಿತಿಗತಿಯನ್ನು ಸುಧಾರಿಸುವಲ್ಲಿ ಪ್ರಮುಖ ಪಾತ್ರವನ್ನು ವಹಿಸಿದವರು. ಆದರೆ ಭಾರತದಲ್ಲಿ ಇದರ ನಿಜವಾದ ಬೆಳವಣಿಗೆಯು ಪ್ರಥಮ ಜಾಗತಿಕ ಯುದ್ಧದ ಅವಧಿಯಲ್ಲಿ ಆರಂಭವಾಯಿತು.

**ಕಾರ್ಮಿಕ ಸಂಘಗಳ ಉದ್ದೇಶಗಳು**

ಈ ಕೆಳಗಿನವುಗಳು ಕಾರ್ಮಿಕ ಸಂಘಗಳ ಪ್ರಮುಖ ಉದ್ದೇಶಗಳಾಗಿವೆ.

೧ ಕಾರ್ಮಿಕರನ್ನು ಸಂಘಟಿಸಿ ಅವರಲ್ಲಿ ಒಗ್ಗಟ್ಟನ್ನುಂಟು ಮಾಡುವುದು.

೨. ಕಾರ್ಮಿಕರ ಶೋಷಣೆಯ ವಿರುದ್ಧ ಹೋರಾಡಿ, ಅವರನ್ನು ಶೋಷಣಾ ಮುಕ್ತರನ್ನಾಗಿಸುವುದು.

೩. ಕಾರ್ಮಿಕರಿಗೆ ಬೇಕಾದ ತರಬೇತಿ ಕೊಡುವುದರ ಮೂಲಕ ಅವರ ದಕ್ಷತೆಯನ್ನು ಹೆಚ್ಚಿಸುವುದು.

೪. ಕಾರ್ಮಿಕರಿಗೆ ಅನಾರೋಗ್ಯ ಮತ್ತು ಇತರ ರೀತಿಯ ತೊಂದರೆಗಳುಂಟಾದಾಗ ಅವರಿಗೆ ಬೇಕಾದ ಸೌಲಭ್ಯಗಳನ್ನು ಒದಗಿಸುವುದು.

೫. ಕಾರ್ಮಿಕರು ಮತ್ತು ಮಾಲೀಕರ ನಡುವೆ ಸೌಹಾರ್ದಯುತ ಸಂಬಂಧವನ್ನು ಕಲ್ಪಿಸುವುದರ ಮೂಲಕ ಕೈಗಾರಿಕಾ ಉತ್ಪಾದನೆಯನ್ನು ಹೆಚ್ಚಿಸುವುದಕ್ಕೆ ಅವಕಾಶ ಮಾಡಿಕೊಡುವುದು.

೬. ಕಾರ್ಮಿಕರು ಅನಗತ್ಯ ಮುಷ್ಕರ ಕೈಗೊಳ್ಳದಂತೆ ನೋಡಿಕೊಳ್ಳುವುದರೊಂದಿಗೆ, ಮಾಲೀಕರು ಬೀಗಮುದ್ರೆ ಕೈಗೊಳ್ಳುವುದನ್ನು ತಡೆಯುವುದು.

೭. ಕಾರ್ಮಿಕರಿಗೆ ಕಾಲ ಕಾಲಕ್ಕೆ ದೊರಕಬೇಕಾದ ಸೌಲಭ್ಯಗಳೊಂದಿಗೆ ಬೋನಸ್ಸು ದೊರಕುವಂತೆ ನೋಡಿಕೊಳ್ಳುವುದು.

೮. ಕಾರ್ಮಿಕರಿಗೆ ದೊರಕಬೇಕಾದ ಮುಂಬಡ್ತಿ ಕಾಲ ಕಾಲಕ್ಕೆ ದೊರಕುವಂತೆ ನೋಡಿಕೊಳ್ಳುವುದು.

ಕಾರ್ಮಿಕರ ಅಭಿವೃದ್ಧಿಯೊಂದಿಗೆ ಕೈಗಾರಿಕಾ ಉತ್ಪಾದನೆ ಮತ್ತು ದೇಶದ ಅಭಿವೃದ್ಧಿಯನ್ನು ಸಾಧಿಸುವುದು ಕಾರ್ಮಿಕ ಸಂಘಗಳ ಉದ್ದೇಶ.

### ರಾಷ್ಟ್ರೀಯ ಮಟ್ಟದ ಕಾರ್ಮಿಕ ಸಂಘಟನೆಗಳು

ಭಾರತವು ಸ್ವಾತಂತ್ರ್ಯಗೊಂಡ ನಂತರ ದೇಶದಲ್ಲಿ ನಿರುದ್ಯೋಗಿಗಳ ಸಂಖ್ಯೆಯಲ್ಲಿ ಗಣನೀಯವಾದ ಹೆಚ್ಚಳವುಂಟಾಯಿತು. ಕಾರ್ಮಿಕರು ತಾವು ನಿರೀಕ್ಷಿಸಿದ್ದ ಉತ್ತಮ ಕೂಲಿ, ಕೆಲಸದ ಪರಿಸರ ಮತ್ತು ಇತರ ಸೌಲಭ್ಯಗಳನ್ನು ಪಡೆಯುವುದರಲ್ಲಿ ವಿಫಲಗೊಂಡರು. ಪರಿಣಾಮವಾಗಿ ತಾವು ಹಿಂದೆ ಪಡೆದಿದ್ದುದನ್ನು ಕಾಪಾಡಿಕೊಂಡು ಬರುವುದಕ್ಕಾಗಿ ಕಾರ್ಮಿಕರು ಹೋರಾಟ ನಡೆಸಬೇಕಾದ ಸಂದಿಗ್ಧ ಸ್ಥಿತಿ ಉಂಟಾಯಿತು. ದೇಶದಲ್ಲಿ ಹಲವಾರು ಮುಷ್ಕರಗಳು ಉಂಟಾಗುವುದರೊಂದಿಗೆ ಉತ್ಪಾದನಾ ದಿವಸಗಳ ನಷ್ಟ ಉಂಟಾಯಿತು. ಪರಿಣಾಮವಾಗಿ ಕಾರ್ಮಿಕರ ಶೋಷಣೆಯ ವಿರುದ್ಧ ಹೋರಾಡುವುದಕ್ಕಾಗಿ ಕಾರ್ಮಿಕ ಸಂಘಗಳು ಸ್ಥಾಪಿಸಲ್ಪಟ್ಟವು. ಈ ಕೆಳಗಿನವುಗಳು ಪ್ರಸ್ತುತದಲ್ಲಿ ನಮ್ಮ ದೇಶದ ಪ್ರಮುಖ ಕಾರ್ಮಿಕ ಸಂಘಗಳಾಗಿವೆ.

### ೧. ಭಾರತದ ರಾಷ್ಟ್ರೀಯ ಕಾರ್ಮಿಕ ಸಂಘಗಳ ಮಹಾ ಒಕ್ಕೂಟ

(INTUC- Indian National Trade Union Congress)

ಭಾರತದ ರಾಷ್ಟ್ರೀಯ ಸಂಘಗಳ ಮಹಾ ಒಕ್ಕೂಟವು ೧೯೪೭ ರಲ್ಲಿ ಸ್ಥಾಪಿಸಲ್ಪಟ್ಟಿತು. ಇದು ಕಾಂಗ್ರೆಸ್ ಐ ಪಕ್ಷದ ನಿಯಂತ್ರಣದಲ್ಲಿದ್ದು, ಸುಮಾರು ೨೭.೦೬ ಲಕ್ಷಕ್ಕಿಂತ ಅಧಿಕ ಕಾರ್ಮಿಕ ಸದಸ್ಯರನ್ನು, ಸುಮಾರು ೨೩೩೭೩ ಸಂಘಗಳನ್ನು ಹೊಂದಿದೆ. ಇದು ಭಾರತದ ಎರಡನೆಯ ಅತೀ ದೊಡ್ಡ ಕಾರ್ಮಿಕ ಸಂಘವಾಗಿದೆ.

### ೨. ಅಖಿಲ ಭಾರತ ಕಾರ್ಮಿಕ ಸಂಘಗಳ ಒಕ್ಕೂಟ

(AITUC - All Indian Trade Union Congress)

ಅಖಿಲ ಭಾರತ ಕಾರ್ಮಿಕ ಸಂಘಗಳ ಒಕ್ಕೂಟ (AITUC) ಪುರಾತನ ಕಾರ್ಮಿಕ ಸಂಘವಾಗಿದ್ದು, ೧೯೨೦ ರಲ್ಲಿ ಸ್ಥಾಪಿಸಲ್ಪಟ್ಟಿದೆ. ಇದು ೧೦ ಲಕ್ಷಕ್ಕಿಂತ ಹೆಚ್ಚಿನ ಸಂಖ್ಯೆಯ ಸದಸ್ಯರನ್ನು ಹೊಂದಿದ್ದು, ಅದರಲ್ಲಿ ೪,೨೩೧ ಸಂಘಗಳು ಸೇರ್ಪಡೆಗೊಂಡಿವೆ. ಈ ಕಾರ್ಮಿಕ ಸಂಘವು ಭಾರತದ ಕಮ್ಯುನಿಸ್ಟ್ ಪಕ್ಷ (CPI) ದ ನಿಯಂತ್ರಣದಲ್ಲಿದೆ.

## ೩. ಭಾರತೀಯ ಕಾರ್ಮಿಕ ಸಂಘದ ಕೇಂದ್ರ

(CITU - Centre of Indian Trade Unions)

ಈ ಸಂಘಟನೆಯು ೧೯೭೦ ರಲ್ಲಿ ಸ್ಥಾಪಿಸಲ್ಪಟ್ಟಿದೆ. ಇದು ೧೭.೯೮ ಲಕ್ಷಕ್ಕಿಂತ ಅಧಿಕ ಸಂಖ್ಯೆಯಲ್ಲಿ ಸದಸ್ಯರನ್ನು ಹೊಂದಿದ್ದು, ಸುಮಾರು ೧೪೪೦ ಕ್ಕಿಂತ ಅಧಿಕ ಸಂಘಗಳನ್ನು ಒಳಗೊಂಡಿದೆ. ಈ ಸಂಘದ ಪ್ರಮುಖ ಉದ್ದೇಶ ಕಾರ್ಮಿಕರಿಗೆ ಉದ್ದೇಶ ಖಾತರಿಯನ್ನು ಒದಗಿಸುವುದು. ಇದು ಮಾರ್ಕ್ಸ್‌ವಾದಿ ಕಮ್ಯುನಿಸ್ಟ್ ಪಕ್ಷ (CPI-M)ದ ನಿಯಂತ್ರಣದಲ್ಲಿದೆ.

## ೪. ಹಿಂದೂ ಮಜ್ದೂರ್ ಸಭಾ

(HMS - Hindu Mazdoor Sabha)

ಹಿಂದೂ ಮಜ್ದೂರ್ ಸಭಾ ಕಾರ್ಮಿಕ ಸಂಘವನ್ನು ಪ್ರಜಾ ಸೋಶಿಯಲಿಸ್ಟ್ ಪಕ್ಷವು ೧೯೪೮ ರಲ್ಲಿ ಸ್ಥಾಪಿಸಿದೆ. ಇದು ೧೪.೭೭ ಲಕ್ಷ ಸದಸ್ಯರನ್ನು ಮತ್ತು ೫೨೫ ಕಾರ್ಮಿಕ ಸಂಘಗಳನ್ನು ಹೊಂದಿದೆ.

## ೫. ಅಖಿಲ ಭಾರತೀಯ ಮಜ್ದೂರ್ ಸಂಘ

(BMS - Bharathiya Mazdoor Sangha)

ಈ ಸಂಘಟನೆಯನ್ನು ೧೯೫೪ ರಲ್ಲಿ ಸ್ಥಾಪಿಸಲಾಗಿದೆ. ಈ ಸಂಘಟನೆಯು ಅತೀ ಹೆಚ್ಚು ಅಂದರೆ ೩೧.೧೭ ಲಕ್ಷ ಸದಸ್ಯರನ್ನು ಹೊಂದಿದ್ದು, ಭಾರತೀಯ ಜನತಾ ಪಕ್ಷದ ನಿಯಂತ್ರಣದಲ್ಲಿದೆ. ಇದರ ಮುಖ್ಯ ಉದ್ದೇಶ ಕಾರ್ಮಿಕರಿಗೆ ಒಳ್ಳೆಯ ವೇತನ, ಸಾಮಾಜಿಕ ಭದ್ರತೆ, ಉತ್ತಮ ಕೆಲಸದ ಪರಿಸರ ಇತ್ಯಾದಿಗಳು ದೊರಕುವಂತೆ ನೋಡಿಕೊಳ್ಳುವುದು.

## ೬. ಸಂಯುಕ್ತ ಕಾರ್ಮಿಕ ಸಂಘಗಳ ಒಕ್ಕೂಟ

(UTUC - United Trade Union Congress)

ಈ ಕಾರ್ಮಿಕ ಸಂಘವು ೧೯೪೯ ರಲ್ಲಿ ಸ್ಥಾಪಿಸಲ್ಪಟ್ಟಿದೆ. ಇದು ಕಮ್ಯುನಿಸ್ಟ್ ಪಕ್ಷ (ಮಾರ್ಕ್ಸ್ Cpm) ನಿಯಂತ್ರಣದಲ್ಲಿದ್ದದು ೧೭.೯೮ ಸದಸ್ಯರನ್ನು ಹೊಂದಿದೆ.

ಮೇಲೆ ಹೇಳಿದ ಕಾರ್ಮಿಕ ಸಂಘಗಳಲ್ಲದೆ ಇನ್ನೂ ಬೇರೆ ಬೇರೆ ನಿರ್ದಿಷ್ಟ ಕಾರ್ಮಿಕ ಸಂಘಗಳು ನಮ್ಮ ದೇಶದಲ್ಲಿ ಅಸ್ತಿತ್ವದಲ್ಲಿವೆ. ಉದಾಹರಣೆಗೆ ರೈಲ್ವೇ ನೌಕರರ ಸಂಘ, ಅಂಚೆ ಮತ್ತು ತಂತಿ ಇಲಾಖೆ ನೌಕರರ ಸಂಘ ಇತ್ಯಾದಿ. ಭಾರತದ ಕಾರ್ಮಿಕ ಸಂಘಗಳು ಕಾರ್ಮಿಕರ ಸ್ಥಾನ ಮಾನವನ್ನು ಹೆಚ್ಚಿಸುವಲ್ಲಿ ಮತ್ತು ಕಾರ್ಮಿಕರನ್ನು ಸಂಘಟಿಸುವಲ್ಲಿ ಪ್ರಮುಖ ಪಾತ್ರ ವಹಿಸುತ್ತಿವೆ.

## ಕಾರ್ಮಿಕ ಸಂಘಗಳ ಲೋಪದೋಷಗಳು

ವಿ.ವಿ. ಗಿರಿಯವರ ಪ್ರಕಾರ ಈ ಕೆಳಗಿನ ಮೂರು ಅಂಶಗಳು ಕಾರ್ಮಿಕ ಸಂಘಗಳ ಪ್ರಮುಖ ಲೋಪದೋಷಗಳಾಗಿವೆ.

೧. ಅತೀ ಸಣ್ಣ ಸಂಘಟನೆಗಳ ಪ್ರಾಬಲ್ಯ. ದೇಶದಲ್ಲಿ ಸುಮಾರು ಶೇಕಡ ೭೫ ರಷ್ಟು ಕಾರ್ಮಿಕ ಸಂಘಗಳು ೫೦೦ ಕ್ಕಿಂತ ಕಡಿಮೆ ಸದಸ್ಯತ್ವವನ್ನು ಹೊಂದಿವೆ.

೨. ಕಡಿಮೆ ಸದಸ್ಯತ್ವ ಮತ್ತು ಸದಸ್ಯತ್ವ ಶುಲ್ಕದಿಂದಾಗಿ ಕಾರ್ಮಿಕ ಸಂಘಗಳು ಹಣಕಾಸಿನ ಕೊರತೆಯನ್ನು ಎದುರಿಸುತ್ತಿವೆ. ಇದರಿಂದಾಗಿ ಇವುಗಳು ಯಾವುದೇ ರೀತಿಯ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲು ಸಾಧ್ಯವಾಗುವುದಿಲ್ಲ.

೩. ಸಂಘಟನೆಯಲ್ಲಿ ಪೂರ್ಣಾವಧಿ ವೇತನ ಪಡೆಯುವ ಅಧಿಕಾರಿಗಳ ಕೊರತೆ.

ಈ ಮೇಲಿನ ಮೂರು ಲೋಪದೋಷಗಳಲ್ಲದೆ ಈ ಕೆಳಗಿನ ಅಂಶಗಳು ಕಾರ್ಮಿಕ ಸಂಘಗಳು ಹಿಂದುಳಿಯುವುದಕ್ಕೆ ಪ್ರಮುಖ ಕಾರಣಗಳಾಗಿವೆ.

೧. ಕಾರ್ಮಿಕ ಸಂಘಗಳು ರಾಜಕಾರಣಿಗಳ ನಿಂಯತ್ರಣದಲ್ಲಿದ್ದು, ಇವರಿಗೆ ಕಾರ್ಮಿಕರ ಸಮಸ್ಯೆಗಳ ನೈಜ ಚಿತ್ರಣವಿರುವುದಿಲ್ಲ. ಇವರು ಸಾಮಾನ್ಯವಾಗಿ ಪಕ್ಷದ ಹಿತಾಸಕ್ತಿ ಕಾಪಾಡುವುದಕ್ಕೆ ಬದ್ಧರಾಗಿರುತ್ತಾರೆಯೇ ಹೊರತು ಕಾರ್ಮಿಕರ ಹಿತಾಸಕ್ತಿಗಾಗಿಯಲ್ಲ.

೨. ಹೆಚ್ಚಿನ ಕಾರ್ಮಿಕ ಸಂಘಗಳು ಮುಷ್ಕರಗಳನ್ನು ಸಂಘಟಿಸುತ್ತವೆಯೇ ಹೊರತು ಕಾರ್ಮಿಕರಿಗೆ ಬೇಕಾದ ಶಿಕ್ಷಣ, ವೈದ್ಯಕೀಯ ಸೌಲಭ್ಯ, ಕುಟುಂಬಗಳಿಗೆ ಬೇಕಾದ ಸೌಲಭ್ಯ ಇತ್ಯಾದಿಗಳನ್ನು ಒದಗಿಸುವುದರಲ್ಲಿ ಆಸಕ್ತಿ ಹೊಂದಿರುವುದಿಲ್ಲ.

೩. ಕೊನೆಯದಾಗಿ ಕಾರ್ಮಿಕರ ಅನಕ್ಷರತೆ, ಮುಗ್ಧತೆ, ಕಡಿಮೆ ಕೂಲಿ, ಜಾತಿ, ಭಾಷೆ ಇತ್ಯಾದಿಗಳು ಕಾರ್ಮಿಕ ಸಂಘಗಳ ಅದಕ್ಷತೆಗೆ ಕಾರಣಗಳಾಗಿವೆ.

ಎರಡನೇ ಪಂಚವಾರ್ಷಿಕ ಯೋನೆಯು ಅಧಿಕ ಸಂಖ್ಯೆಯಲ್ಲಿರುವ ಕಾರ್ಮಿಕ ಸಂಘಗಳು, ರಾಜಕೀಯ ವೈರತ್ವ, ಸಂಪನ್ಮೂಲಗಳ ಕೊರತೆ, ಕಾರ್ಮಿಕರ ಅಸಂಘಟನೆ ಇತ್ಯಾದಿಗಳು ಅಸ್ತಿತ್ವದಲ್ಲಿರುವ ಹಲವು ಕಾರ್ಮಿಕ ಸಂಘಟನೆಗಳ ಲೋಪದೋಷಗಳು ಎಂಬುದಾಗಿ ಪಟ್ಟಿ ಮಾಡಿದೆ.

**ಕಾರ್ಮಿಕ ಆಂದೋಲನವನ್ನು (ಸಂಘಗಳನ್ನು) ಬಲಪಡಿಸಲು ಕೆಲವು ಸಲಹೆಗಳು**

ದೇಶದ ಉತ್ಪಾದನೆಯನ್ನು ಹೆಚ್ಚಿಸುವಲ್ಲಿ ಕಾರ್ಮಿಕರು ಮಹತ್ವದ ಪಾತ್ರವನ್ನು ವಹಿಸುತ್ತಾರೆ. ಕಾರ್ಮಿಕರ ಹಿತಾಸಕ್ತಿಯನ್ನು ಕಾಪಾಡಿದಾಗ ಮಾತ್ರ ಕಾರ್ಮಿಕರು ದಕ್ಷತೆಯಿಂದ ಕೆಲಸ ಮಾಡಲು ಸಾಧ್ಯ. ಇದಕ್ಕಾಗಿ ದಕ್ಷ ಕಾರ್ಮಿಕ ಸಂಘಗಳು ಅಗತ್ಯವಾಗಿವೆ. ಈ ಕೆಳಗಿನ ಕ್ರಮಗಳ ಮೂಲಕ ಕಾರ್ಮಿಕರ ದಕ್ಷತೆಯನ್ನು ಹೆಚ್ಚಿಸಬಹುದು.

೧. ಕಾರ್ಮಿಕರ ನಡುವೆ ಒಗ್ಗಟ್ಟಿರಬೇಕು. ಈ ರೀತಿಯ ಒಗ್ಗಟ್ಟನ್ನು ತರುವುದಕಾಗಿ ಕಾರ್ಮಿಕ ಸಂಘಗಳು ಕ್ರಿಯಾಶೀಲವಾಗಬೇಕು. ಇದಕ್ಕಾಗಿ ದೇಶದಲ್ಲಿ ಒಂದು ಕಾರ್ಮಿಕ ಸಂಘವಿದ್ದು, ಕಾರ್ಮಿಕರೆಲ್ಲ ಆ ಸಂಘದ ಸದಸ್ಯರಾಗಬೇಕು.

೨. ಈಗ ಕಾರ್ಮಿಕ ಸಂಘಗಳು ರಾಜಕೀಯ ಪಕ್ಷಗಳ ನಾಯಕರ ನಿಯಂತ್ರಣದಲ್ಲಿವೆ.

ಇದರಿಂದಾಗಿ ಕಾರ್ಮಿಕರು ರಾಜಕೀಯ ಪಕ್ಷಗಳಿಗೆ ಪ್ರಾಮಾಣಿಕರಾಗಿರುತ್ತಾರೆಯೇ ಹೊರತು ಕಾರ್ಮಿಕ ಸಂಘಟನೆಗಳಿಗಲ್ಲ. ಆದುದರಿಂದ ಕಾರ್ಮಿಕ ಸಂಘಗಳ ನಾಯಕತ್ವವು ಕಾರ್ಮಿಕರಲ್ಲೇ ಇರಬೇಕು.

೩. ಒಂದು ಕೈಗಾರಿಕೆಯಲ್ಲಿ ಒಂದು ಕಾರ್ಮಿಕ ಸಂಘ ಮಾತ್ರವಿರಬೇಕು. ಆಗ ಮಾತ್ರ ಕೈಗಾರಿಕಾ ಕಾರ್ಮಿಕರಲ್ಲಿ ಒಗ್ಗಟ್ಟಿದ್ದು ಅವರ ಬೇಡಿಕೆಗಳನ್ನು ಈಡೇರಿಸಿಕೊಳ್ಳಲು ಸಾಧ್ಯ.

೪. ಕಾರ್ಮಿಕ ಸಂಘಗಳು ಕಾರ್ಮಿಕರಿಗೆ ತಮ್ಮ ಹಕ್ಕು, ಕರ್ತವ್ಯ, ಜವಾಬ್ದಾರಿ ಇತ್ಯಾದಿಗಳನ್ನು ಮನದಟ್ಟು ಮಾಡಿಕೊಡಬೇಕು. ಆಗ ಮಾತ್ರ ಕಾರ್ಮಿಕ ಸಂಘಗಳು ರಾಷ್ಟ್ರೀಯ ಉತ್ಪಾದನೆಯನ್ನು ಹೆಚ್ಚಿಸಲು ಹಾಗೂ ಕಾರ್ಮಿಕರ ಸ್ಥಾನಮಾನವನ್ನು ಹೆಚ್ಚಿಸಲು ಸಾಧ್ಯ.

ದಕ್ಷ ಹಾಗೂ ಆಡಳಿತ ವರ್ಗದೊಂದಿಗೆ ಸಮನಾದ ಅಧಿಕಾರ ಹೊಂದಿರುವ ಸಂಘಗಳು ಮಾತ್ರ ಕಾರ್ಮಿಕರ ಹಿತಾಸಕ್ತಿಯನ್ನು ಕಾಪಾಡಲು ಸಾಧ್ಯ. ಭಾರತದಲ್ಲಿ ಕಾರ್ಮಿಕ ಆಂದೋಲನಕ್ಕೆ ಒಳ್ಳೇಯ ಭವಿಷ್ಯವಿದೆ. ಇತ್ತೀಚಿನ ವರ್ಷಗಳಲ್ಲಿ ಸರಕಾರವು ಕಾರ್ಮಿಕರ ಸಂಘಗಳ ಅಭಿವೃದ್ಧಿಗೆ ಹೆಚ್ಚಿನ ಮಹತ್ವವನ್ನು ಕೊಡುತ್ತಿದೆ.

### ಕಾರ್ಮಿಕ ಸುಧಾರಣೆಗಳು (Labour Reforms)

ದೇಶವೊಂದರ ಆರ್ಥಿಕ ಸುಧಾರಣೆಯಲ್ಲಿ ಕಾರ್ಮಿಕ ಸುಧಾರಣೆಯು ಪ್ರಮುಖವಾಗಿದೆ. ೧೯೯೧ರ ನಂತರ ನಮ್ಮ ದೇಶದ ಆರ್ಥಿಕ ವ್ಯವಸ್ಥೆಯ ಪ್ರಮುಖ ಉದ್ದೇಶ ಉದಾರೀಕರಣ, ಜಾಗತೀಕರಣ ಮತ್ತು ಖಾಸಗೀಕರಣ. ಈ ಅಂಶಗಳಿಗೆ ಆದ್ಯತೆಯನ್ನು ಕೊಡುತ್ತ ಸರಕಾರವು ಕಾರ್ಮಿಕರ ಸುಧಾರಣೆಗಳಿಗೂ ಮಹತ್ವವನ್ನು ಕೊಟ್ಟಿದೆ. ಇದರಲ್ಲಿ ಕಾರ್ಮಿಕ ಪೇಟೆ, ಕಾರ್ಮಿಕ ಕಾನೂನುಗಳು, ಕೈಗಾರಿಕಾ ವಿವಾದಗಳ ಕಾನೂನು, ಸಾಮಾಜಿಕ ಭದ್ರತೆ, ಕಾರ್ಮಿಕ ಸಂಘಗಳು ಹೆಚ್ಚಿನ ಮಹತ್ವವನ್ನು ಪಡೆದಿವೆ.

ಕಾರ್ಮಿಕ ಕಾನೂನುಗಳು ಕ್ಲಿಷ್ಟತೆಯಿಂದ ಕೂಡಿದ್ದು, ಅವುಗಳ ತಿದ್ದುಪಡಿಯು ಅತೀ ಅಗತ್ಯವಾಗಿದೆ. ಕಾರ್ಮಿಕರ ಬಗ್ಗೆ ಈ ಕೆಳಗಿನ ಸುಧಾರಣೆಗಳನ್ನು ಕೈಗೊಳ್ಳಲು ಉದ್ದೇಶಿಸಲಾಗಿದೆ.

### ಕಾರ್ಮಿಕರ ಗುತ್ತಿಗೆ ಪದ್ಧತಿಯಲ್ಲಿ ಬದಲಾವಣೆ

ಅಶಿಸ್ತಿನಿಂದ ಕೂಡಿದ ಕಾರ್ಮಿಕರನ್ನು ಸಂರಕ್ಷಿಸುವ ಕೆಲವು ನಿಬಂಧನೆಗಳಿದ್ದು ಅವುಗಳು ಉತ್ಪಾದನೆಯ ಮೇಲೆ ಪ್ರತಿಕೂಲಕರ ಪರಿಣಾಮ ಬೀರುತ್ತವೆ. ಇದಕ್ಕಾಗಿ ಅಂದರೆ ಈ ಸಮಸ್ಯೆಯ ಪರಿಹಾರ ಮತ್ತು ಕೈಗಾರಿಕಾ ಕಾರ್ಮಿಕರ ರಕ್ಷಣೆಗಾಗಿ ಕೇಂದ್ರ ಮುಂಗಡಪತ್ರ ಎರಡು ಅಂಶಗಳಿಗೆ ಆದ್ಯತೆಯನ್ನು ಕೊಟ್ಟಿವೆ.

೧. ಕಾರ್ಮಿಕರನ್ನು ಬೇರೆ ಕಡೆಯಿಂದ ನೇಮಿಸಿಕೊಳ್ಳಲು ಕಾನೂನಿಗೆ ತಿದ್ದುಪಡಿ.

೨. ಗುತ್ತಿಗೆ ನೇಮಕಾತಿ ಮಾಡಲು ಉದ್ಯಮಗಳಿಗೆ ನೆರವಾಗುವುದು. ಈ ರೀತಿಯಲ್ಲಿ

ನೇಮಕಾತಿ ಹೊಂದಿದ ಕಾರ್ಮಿಕರಿಗೆ ಆರೋಗ್ಯ ಭದ್ರತೆ, ಸಾಮಾಜಿಕ ಸುರಕ್ಷತೆ ನೀಡಲು ನಿರ್ಧರಿಸಲಾಗಿದೆ. ಈ ಕ್ರಮವು ಕೈಗಾರಿಕಾ ಸಂಬಂಧಗಳನ್ನು ಉತ್ತಮಪಡಿಸಲು ಸಹಕಾರಿಯಾಗುವುದು.

**ಎರಡನೆಯ ರಾಷ್ಟ್ರೀಯ ಕಾರ್ಮಿಕ ಆಯೋಗದ ಶಿಫಾರಸ್ಸುಗಳು**

ಅಕ್ಟೋಬರ್ ೧೫, ೧೯೯೯ರಂದು ಭಾರತ ಸರಕಾರವು ಶ್ರೀಯುತ ರವೀಂದ್ರ ವರ್ಮರವರ ಅಧ್ಯಕ್ಷತೆಯಲ್ಲಿ ರಾಷ್ಟ್ರೀಯ ಕಾರ್ಮಿಕ ಆಯೋಗವನ್ನು ನೇಮಿಸುವುದಕ್ಕೆ ನಿರ್ಧರಿಸಿತು. ಈ ಆಯೋಗವನ್ನು ನೇಮಿಸುವುದಕ್ಕೆ ಈ ಕೆಳಗಿನ ಎರಡು ಅಂಶಗಳು ಕಾರಣಗಳಾಗಿವೆ.

೧. ಸಂಘಟಿತ ಕ್ಷೇತ್ರದ ಕಾರ್ಮಿಕರಿಗೆ ಸಂಬಂಧಿಸಿದಂತೆ ಪ್ರಸ್ತುತದಲ್ಲಿರುವ ಕಾನೂನುಗಳನ್ನು ಹೆಚ್ಚು ಪರಿಪೂರ್ಣಗೊಳಿಸಲು ಬೇಕಾದ ಕ್ರಮಗಳನ್ನು ಸೂಚಿಸುವುದು.

೨. ಅಸಂಘಟಿತ ಕ್ಷೇತ್ರದಲ್ಲಿರುವ ಕಾರ್ಮಿಕರ ಕನಿಷ್ಟ ರಕ್ಷಣೆಗೆ ಬೇಕಾದ ಶಾಸನಗಳನ್ನು ಸೂಚಿಸುವುದು.

ಸರಕಾರವು ಈ ಆಯೋಗದ ನೇಮಕಾತಿಗೆ ನಿರ್ಣಯಗಳನ್ನು ಕೈಗೊಳ್ಳುವುದಕ್ಕೆ ಪ್ರಮುಖ ಕಾರಣ ಆರ್ಥಿಕತೆಯ ಜಾಗತೀಕರಣ ವ್ಯಾಪಾರ ಮತ್ತು ಕೈಗಾರಿಕೆಗಳ ಉದಾರೀಕರಣ. ಈ ಅಂಶಗಳನ್ನೊಳಗೊಂಡಂತೆ ಕಾರ್ಮಿಕರ ರಕ್ಷಣೆ ಮತ್ತು ಯೋಗಕ್ಷೇಮ, ಸಾಮಾಜಿಕ ಭದ್ರತೆ, ಕೆಲಸದ ಸ್ಥಳದಲ್ಲಿ ಸೂಕ್ತ ಸುರಕ್ಷೆ, ಮಹಿಳಾ ಕಾರ್ಮಿಕರ ಸಮಸ್ಯೆಗಳಿಗೆ ಪ್ರತ್ಯೇಕ ಆದ್ಯತೆ, ಕನಿಷ್ಟ ಕೂಲಿ, ಕೂಲಿ ಮತ್ತು ಉತ್ಪತ್ತಿಯ ನಡುವೆ ಸಂಬಂಧ, ಕಾರ್ಮಿಕರ ರಕ್ಷಣೆ ಮತ್ತು ಯೋಗಕ್ಷೇಮಕ್ಕೆ ಹೆಚ್ಚಿನ ಆದ್ಯತೆಯನ್ನು ಕೊಡುವಂತೆ ಸರಕಾರವು ಈ ಆಯೋಗಕ್ಕೆ ಸಲಹೆಯನ್ನು ಕೊಟ್ಟಿತು. ಈ ಅಂಶಗಳನ್ನು ಪ್ರಮುಖವಾಗಿಟ್ಟುಕೊಂಡು ಜೂನ್ ೧, ೨೦೦೨ರಂದು ಎರಡನೆಯ ರಾಷ್ಟ್ರೀಯ ಕಾರ್ಮಿಕ ಆಯೋಗವು ತನ್ನ ವರದಿಯನ್ನು ಒಪ್ಪಿಸಿತು.

ರಾಷ್ಟ್ರೀಯ ಕಾರ್ಮಿಕ ಆಯೋಗವು ಈ ಕೆಳಗಿನ ತತ್ವಗಳನ್ನು ಒಳಗೊಂಡಿದೆ. ಈ ತತ್ವಗಳ ಆಧಾರದಲ್ಲಿ ತನ್ನ ನೀತಿಯನ್ನು ರೂಪಿಸಿಕೊಂಡಿದೆ. ಎರಡನೆಯ ಕಾರ್ಮಿಕ ಆಯೋಗದ ಪ್ರಕಾರ ಪೈಪೋಟಿಯು ಕೇವಲ ತಾಂತ್ರಿಕತೆ, ಹಣಕಾಸು, ಉತ್ಪಾದನಾಂಗಗಳು ಹಾಗೂ ಆಡಳಿತ ದಕ್ಷತೆಯನ್ನು ಮಾತ್ರವಲ್ಲದೆ ಕಾರ್ಮಿಕರ ಕೊಡುಗೆಯನ್ನು ಅವಲಂಬಿಸಿಕೊಂಡಿದೆ. ಉತ್ಪನ್ನದ ಪ್ರಮಾಣ ಮತ್ತು ಗುಣಮಟ್ಟಕ್ಕೆ ಸಂಬಂಧಿಸಿದಂತೆ ಕಾರ್ಮಿಕರ ಕೊಡುಗೆಯು ಹೆಚ್ಚಾಗಿರಬೇಕು. ಇದು ಹೆಚ್ಚಾಗಿರಬೇಕಾದರೆ ಕಾರ್ಮಿಕರಿಗೆ ಕೊಡುವ ಕೂಲಿ ಮತ್ತು ಲಾಭದಲ್ಲಿ ಪಾಲು ಹಾಗೂ ಪ್ರೋತ್ಸಾಹಗಳು ಉತ್ತಮವಾಗಿರುವುದರೊಂದಿಗೆ ಅವರನ್ನು ಪಾಲುದಾರರಂತೆ ನೋಡಿಕೊಳ್ಳಬೇಕು.

ಆಯೋಗದ ಪ್ರಕಾರ ಕೂಲಿಯು ಕೈಗಾರಿಕೆಯ ಆರ್ಥಿಕ ದಕ್ಷತೆಯನ್ನು ಅವಲಂಬಿಸಿಕೊಂಡಿದೆ. ಕಾರ್ಮಿಕರು ಆಡಳಿತ ವರ್ಗದವರ ರೀತಿಯಲ್ಲೇ ಉತ್ಪತ್ತಿಯಲ್ಲಿ ಆಸಕ್ತಿಯನ್ನು

ಹೊಂದಿರಬೇಕು. ಆಡಳಿತ ವರ್ಗದವರು ಪಡೆಯುವ ಭತ್ಯೆ ಮತ್ತು ಕಾರ್ಮಿಕರು ವೇತನದ ಕೂಲಿ ನಡುವೆ ಅತೀ ಹೆಚ್ಚಿನ ಪ್ರಮಾಣದ ಅಂತರವಿರಬಾರದು ಎನ್ನುವ ಅಭಿಪ್ರಾಯವನ್ನು ಕಾರ್ಮಿಕ ಆಯೋಗವು ಹೊಂದಿದೆ.

**ಎರಡನೇ ಕಾರ್ಮಿಕ ಆಯೋಗದ ಶಿಫಾರಸ್ಸುಗಳು**

ಎರಡನೇ ಕಾರ್ಮಿಕ ಆಯೋಗವು ಕಾರ್ಮಿಕರ ಅಭಿವೃದ್ದಿಗಾಗಿ ಈ ಕೆಳಗಿನ ಕ್ರಮಗಳನ್ನು ಶಿಫಾರಸ್ಸು ಮಾಡಿದೆ.

೧. ಓರ್ವನ ಆಯ್ಕೆಯ ಪ್ರಕಾರ ಉದ್ಯೋಗ ಮಾಡುವ ಹಕ್ಕು

೨. ತಾರತಮ್ಯದ ವಿರುದ್ಧ ಹೋರಾಡುವ ಹಕ್ಕು

೩. ಬಾಲ ಕಾರ್ಮಿಕರ ನಿಷೇಧ

೪. ನ್ಯಾಯೋಚಿತ ಮತ್ತು ಮಾನವೀಯವಾದ ಕೆಲಸದ ಪರಿಸರ

೫. ಸಾಮಾಜಿಕ ಭದ್ರತಾ ಹಕ್ಕು

೬. ಕೂಲಿಯ ಭದ್ರತೆ ಹಾಗೂ ನಿಗದಿತ ಕೂಲಿ ಪಡೆಯುವ ಹಕ್ಕು

೭. ಕುಂದು ಕೊರತೆಗಳನ್ನು ನಿವಾರಿಸಿಕೊಳ್ಳುವ ಹಕ್ಕು

೮. ಕಾರ್ಮಿಕ ಸಂಘಗಳ ರಚನೆ ಮತ್ತು ಸಂಘಟನೆಯ ಹಕ್ಕು ಹಾಗೂ ಸಾಮೂಹಿಕ ಹೋರಾಟದ ಹಕ್ಕು ಮತ್ತು

೯. ಆಡಳಿತದಲ್ಲಿ ಪಾಲ್ಗೊಳ್ಳುವ ಹಕ್ಕು.

ಈ ಎಲ್ಲಾ ಅಂಶಗಳು ಸಂಘಟಿತ ಕಾರ್ಮಿಕರನ್ನು ಒಳಗೊಂಡಿದೆಯಲ್ಲದೆ ಅತೀ ಸಣ್ಣ ಕೈಗಾರಿಕಾ ಘಟಕಗಳಿಗಲ್ಲ. ಕನಿಷ್ಟ ೧೯ ಜನ ಕಾರ್ಮಿಕರನ್ನೊಳಗೊಂಡ ಕೈಗಾರಿಕೆಗಳಿಗೆ ಮಾತ್ರ ಅನ್ವಯಿಸಲು ಸಾಧ್ಯ.

ಕೆಲವು ಕಾರ್ಮಿಕ ಕಾಯಿದೆಗಳಲ್ಲಿರುವಂತೆ ಕಾರ್ಮಿಕರ ನಡುವೆ ಲಿಂಗ ಬೇಧ ಸರಿಯಲ್ಲ ಎನ್ನುವ ಅಂಶವನ್ನು ಈ ಕಾನೂನು ಸ್ಪಷ್ಟಪಡಿಸಿದೆ. ಪುರುಷ ಹಾಗೂ ಮಹಿಳಾ ಕಾರ್ಮಿಕರನ್ನು ಕೇವಲ ಕಾರ್ಮಿಕರೆಂದು ಪರಿಗಣಿಸಬೇಕೇ ಹೊರತು ಲಿಂಗ ಆಧಾರದಲ್ಲಲ್ಲ. ಈ ಆಯೋಗದ ಪ್ರಕಾರ ಕೈಗಾರಿಕೆಗಳಲ್ಲಿ ದುಡಿಯುವ ತಿಂಗಳಿಗೆ ರೂ. ೨೫,೦೦೦ ವರೆಗೆ ಮಾತ್ರ ಭತ್ಯೆ ಪಡೆಯುವವರನ್ನು ಸಾಮಾನ್ಯ ಕಾರ್ಮಿಕರೆಂದು ಪರಿಗಣಿಸಬಹುದು. ಎರಡನೇ ಕಾರ್ಮಿಕ ಆಯೋಗದ ಪ್ರಕಾರ ಕೈಗಾರಿಕಾ ವಿವಾದ ಕಾಯಿದೆ ೧೯೪೭, ಕಾರ್ಮಿಕ ಸಂಘಗಳ ಕಾನೂನು ೧೯೨೬, ಕೈಗಾರಿಕಾ ಉದ್ಯೋಗ ಕಾನೂನು ೧೯೪೬, ಇತ್ಯಾದಿಗಳನ್ನು ಒಟ್ಟಿಗೆ ಕಾರ್ಮಿಕ ಆಡಳಿತ ಸಂಬಂಧಿ ಕಾನೂನು ಎಂದು ಪರಿಗಣಿಸಬೇಕು ಎನ್ನುವುದಕ್ಕಾಗಿ ಶಿಫಾರಸ್ಸು ಮಾಡಿದೆ. ೧೯ ಜನರಿಗಿಂತ ಕಡಿಮೆ ಕಾರ್ಮಿಕರಿರುವ ಸಣ್ಣ ಕೈಗಾರಿಕಾ ಘಟಕಗಳಿಗೆ ಪ್ರತ್ಯೇಕ ಕಾನೂನನ್ನು ಜಾರಿಗೊಳಿಸುವಂತೆ ಶಿಫಾರಸ್ಸು ಮಾಡಿದೆ.

ಎರಡನೇ ಕಾರ್ಮಿಕ ಆಯೋಗವು ಕಾರ್ಮಿಕರ ಸುಧಾರಣೆಗಾಗಿ ಹಲವು ಕ್ರಮಗಳನ್ನು ಸೂಚಿಸಿದರೂ ಇದು ಕಾರ್ಮಿಕರ ನಿರೀಕ್ಷೆಗಿಂತ ಕೆಳಗಿನ ಮಟ್ಟದಲ್ಲಿದೆ.

### ಕೈಗಾರಿಕಾ ಕಾರ್ಮಿಕರಿಗೆ ಸಾಮಾಜಿಕ ಭದ್ರತೆಗಳು

ಕೈಗಾರಿಕಾ ಕ್ಷೇತ್ರದಲ್ಲಿ ದುಡಿಯುತ್ತಿರುವ ಕಾರ್ಮಿಕರು ಹಲವಾರು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಅವುಗಳಲ್ಲಿ ಪ್ರಮುಖವಾದವುಗಳೆಂದರೆ, ವ್ಯಾಪಾರದಲ್ಲಿ ಏರಿಳಿತ, ಅನಾರೋಗ್ಯ, ಕೈಗಾರಿಕಾ ಅಪಘಾತಗಳು, ವೃದ್ಧಾಪ್ಯ ಇತ್ಯಾದಿ. ಇಂತಹ ಸಂದರ್ಭಗಳಲ್ಲಿ ಅವರಿಗೆ ಉದ್ಯೋಗ ಮಾಡುವುದು ಕಷ್ಟಕರವಾಗುತ್ತದೆ. ಆಗ ಸರಕಾರವು ಅವರಿಗೆ ಬೇಕಾದ ಸೌಲಭ್ಯಗಳನ್ನು ಒದಗಿಸುವುದು ಅತೀ ಅಗತ್ಯವಾಗಿದೆ. ಪಾಶ್ಚಾತ್ಯ ದೇಶಗಳಲ್ಲಿ ಸರಕಾರವು ಕೈಗಾರಿಕಾ ಕಾರ್ಮಿಕರಿಗೆ ಅನಾರೋಗ್ಯ ಮತ್ತು ಇತರ ಕಾರಣಗಳಿಂದ ನಿರುದ್ಯೋಗ ಉಂಟಾದಾಗ ಅಗತ್ಯವಿರುವ ಸೌಲಭ್ಯಗಳನ್ನು ಒದಗಿಸುತ್ತದೆ. ಇವುಗಳನ್ನು ಸಾಮಾಜಿಕ ಭದ್ರತಾ ಕಾರ್ಯಕ್ರಮಗಳು ಎನ್ನುವರು.

ಭಾರತದಲ್ಲಿ ಸ್ವಾತಂತ್ರ್ಯಾ ನಂತರ ಸಾಮಾಜಿಕ ಭದ್ರತಾ ಕ್ರಮಗಳು ಜಾರಿಗೆ ಬಂದವು. ಸಾಮಾಜಿಕ ಭದ್ರತಾ ಕ್ರಮಗಳು ಕಾರ್ಮಿಕರಿಗೆ ಅತೀ ಅಗತ್ಯವಾಗಿವೆ. ಕೈಗಾರಿಕೆಗಳಲ್ಲಿ ದುಡಿಯುವ ವೇಳೆಯಲ್ಲಿ ಕಾರ್ಮಿಕರಿಗೆ ಅಪಘಾತಗಳು ಉಂಟಾಗಿ ದುಡಿಯಲು ಸಾಧ್ಯವಾಗದೇ ಇದ್ದಲ್ಲಿ ಅವರಿಗೆ ಪರಿಹಾರಧನವನ್ನು ಕೊಡುವುದಕ್ಕಾಗಿ ಕಾರ್ಮಿಕರ ಪರಿಹಾರ ಕಾನೂನನ್ನು ೧೯೨೩ರಲ್ಲಿ ಜಾರಿಗೊಳಿಸಲಾಯಿತು. ಸ್ವಾತಂತ್ರ್ಯಾ ನಂತರ ಕೈಗಾರಿಕಾ ಕಾರ್ಮಿಕರ ಅಭಿವೃದ್ಧಿಗಾಗಿ ಈ ಕೆಳಗಿನ ಕಾನೂನುಗಳನ್ನು ಜಾರಿಗೆ ತರಲಾಗಿದೆ.

೧. ಕೈಗಾರಿಕಾ ವಿವಾದಗಳ ಕಾನೂನು ೧೯೪೭

೨. ಕಾರ್ಮಿಕರ ರಾಜ್ಯ ವಿಮಾ ಕಾನೂನು ೧೯೪೮

೩. ಭವಿಷ್ಯನಿಧಿ ಕಾನೂನು ೧೯೫೨

೪. ಗ್ರ್ಯಾಚ್ಯುಟಿ ಕಾನೂನು ೧೯೭೨

೫. ಬೋನಸ್ಸು ಕಾನೂನು ೧೯೬೫

ನಮ್ಮ ದೇಶದಲ್ಲಿ ಪ್ರಸ್ತುತದಲ್ಲಿರುವ ಕಾರ್ಮಿಕರ ಸಾಮಾಜಿಕ ಭದ್ರತಾ ಕ್ರಮಗಳನ್ನು ಈ ಕೆಳಗಿನಂತೆ ವಿವರಿಸಬಹುದು.

### ಕಾರ್ಮಿಕರ ಪರಿಹಾರ ಕಾನೂನು ೧೯೨೩
(The Women's Compensotion Act 1923)

ಸ್ವಾತಂತ್ರ್ಯ ಪೂರ್ವದಲ್ಲಿ ಜಾರಿಗೆ ಬಂದ ಕಾರ್ಮಿಕ ಪರಿಹಾರ ಕಾನೂನಿಗೆ ೧೯೭೬ ರಲ್ಲಿ ತಿದ್ದುಪಡಿ ತರಲಾಗಿದೆ. ಉದ್ಯೋಗದಲ್ಲಿದ್ದಾಗ ಕೈಗಾರಿಕೆಯಲ್ಲಿ ಯಾವುದೇ ರೀತಿಯ ಅಪಘಾತ ಉಂಟಾದರೆ ಅಥವಾ ಮರಣಹೊಂದಿದರೆ ಸಂಬಂಧಿಸಿದ ಕಾರ್ಮಿಕರನಿಗೆ ಅಥವಾ ಅವನ ಕುಟುಂಬದವರಿಗೆ ಮಾಲೀಕರು ಕಡ್ಡಾಯವಾಗಿ ಪರಿಹಾರ ಧನವನ್ನು ಕೊಡಲೇಬೇಕು. ಈ ಪರಿಹಾರ ಧನದ ಮೊತ್ತವು ಉಂಟಾದ ಅಪಘಾತಗಳ ಸ್ವರೂಪವನ್ನು ಅವಲಂಬಿಸಿಕೊಂಡಿದೆ. ಇದು ತಿಂಗಳಿಗೆ ರೂ.೧೦೦೦ ಕ್ಕಿಂತ ಕಡಿಮೆ ವೇತನವನ್ನು

ಪಡೆಯುವ ಕಾರ್ಮಿಕರಿಗೆ ಮಾತ್ರ ಅನ್ವಯಿಸುತ್ತದೆ, ಅಲ್ಲದೆ ಕಾರ್ಮಿಕರ ರಾಜ್ಯ ವಿಮಾ ಕಾನೂನು ೧೯೪೮ರ ನಿಯಂತ್ರಣಕ್ಕೆ ಒಳಪಡುವ ಕಾರ್ಮಿಕರಿಗೆ ಇದು ಅನ್ವಯಿಸುವುದಿಲ್ಲ.

**ಕೈಗಾರಿಕಾ ವಿವಾದಗಳ ಕಾನೂನು ೧೯೪೭** (The Industrial Disputes Act of 1947)

೧೯೪೭ ರ ಕೈಗಾರಿಕಾ ವಿವಾದಗಳ ಕಾನೂನಿಗೆ ೧೯೫೩ ರಲ್ಲಿ ತಿದ್ದುಪಡಿ ತರಲಾಯಿತು. ಈ ಕಾನೂನಿನ ಪ್ರಕಾರ ಒಂದು ವರ್ಷ ಅಥವಾ ಅದಕ್ಕಿಂತ ಹೆಚ್ಚುಕಾಲ ನಿರಂತರ ಸೇವೆ ಸಲ್ಲಿಸಿದ ಕಾರ್ಮಿಕನನ್ನು ಒಂದು ತಿಂಗಳಿಗಿಂತ ಪೂರ್ವಭಾವಿಯಾಗಿ ಸೂಚನೆ ಕೊಡದೆ ಕೆಲಸದಿಂದ ತೆಗೆದು ಹಾಕುವಂತಿಲ್ಲ ಅಥವಾ ಕೆಲಸದಿಂದ ತೆಗೆಯುವಾಗ ಅವನಿಗೆ ಒಂದು ತಿಂಗಳ ವೇತನವನ್ನು ಕೊಡಬೇಕು. ಅಲ್ಲದೆ ಕಾರ್ಮಿಕನನ್ನು ಕೆಲಸದಿಂದ ತೆಗೆದು ಹಾಕುವಾಗ ಅವನು ಸೇವೆ ಸಲ್ಲಿಸಿದ ವರ್ಷಕ್ಕೆ ೧೫ ದಿವಸಗಳ ಸರಾಸರಿ ವೇತನವನ್ನು ಅವನಿಗೆ ಪಾವತಿಸಬೇಕು.

**ಕಾರ್ಮಿಕರ ರಾಜ್ಯ ವಿಮಾ ಕಾನೂನು ೧೯೪೮**

(The Employees State Insurance Act of 1948)

೧೯೪೮ರ ಕಾರ್ಮಿಕರ ರಾಜ್ಯ ವಿಮಾ ಕಾನೂನು ವಿದ್ಯುತ್ತನ್ನು ಉಪಯೋಗಿಸಿ ೨೦ಕ್ಕಿಂತ ಹೆಚ್ಚು ಕಾರ್ಮಿಕರನ್ನು ಹೊಂದಿರುವ ಕೈಗಾರಿಕೆಗಳಿಗೆ ಅನ್ವಯಿಸುತ್ತದೆ. ಇದು ರೂ.೧೦೦೦ ಕ್ಕಿಂತ ಹೆಚ್ಚು ಮಾಸಿಕ ವೇತನವನ್ನು ಪಡೆಯುವ ಕಾರ್ಮಿಕರಿಗೆ ಮಾತ್ರ ಅನ್ವಯಿಸುತ್ತದೆ. ಈ ಕಾನೂನು ಕೈಗಾರಿಕ ಕಾರ್ಮಿಕರಿಗೆ ಈ ಕೆಳಗಿನ ಐದು ರೀತಿ.ಯ ಅನುಕೂಲತೆಗಳನ್ನು ತನ್ನ ಕಾರ್ಮಿಕರಿಗೆ ಮಾಡಿಕೊಡುತ್ತದೆ.

**೧. ಅನಾರೋಗ್ಯ ಅನುಕೂಲತೆ** (Sickness Benefit)

ಕಾರ್ಮಿಕರಿಗೆ ಅನಾರೋಗ್ಯ ಉಂಟಾದಾಗ ಅದು ವೈದ್ಯಕೀಯ ನೆಲೆಯಲ್ಲಿ ದೃಢೀಕರಿಸಲ್ಪಟ್ಟರೆ ಒಂದು ವರ್ಷದಲ್ಲಿ ೯೧ ದಿವಸಗಳ ಕಾಲದ ವೇತನವನ್ನು ಪಡೆಯಲು ಅರ್ಹರಾಗಿರುತ್ತಾರೆ. ಅನಾರೋಗ್ಯ ಅನುಕೂಲತೆಯನ್ನು ಸರಾಸರಿ ದೈನಂದಿನ ಕೂಲಿಯ ಅರ್ಧದ ಆಧಾರದಲ್ಲಿ ಲೆಕ್ಕ ಹಾಕಲಾಗುವುದು. ಆದರೆ ಈ ಅನುಕೂಲತೆಯನ್ನು ಪಡೆಯಬೇಕಾದರೆ ಕೈಗಾರಿಕೆಗಳಿಂದ ಅನುಮೋದನೆ ಪಡೆದ ಆಸ್ಪತ್ರೆಗಳಿಂದ ವೈದ್ಯಕೀಯ ಸೇವೆಯನ್ನು ಪಡೆದಿರಬೇಕು.

**೨. ವೈದ್ಯಕೀಯ ಸೌಲಭ್ಯ** (Medical Benefit)

ವೈದ್ಯಕೀಯ ಸೌಲಭ್ಯವನ್ನು ವಿಮಾ ಸೌಲಭ್ಯವನ್ನು ಪಡೆದಿರುವ ಕಾರ್ಮಿಕರಿಗೆ ಹಾಗೂ ಅವರ ಕುಟುಂಬದವರಿಗೆ ಅನಾರೋಗ್ಯ ಉಂಟಾದಾಗ ಒದಗಿಸಲಾಗುವುದು.

**೩. ಹೆರಿಗೆ ಸೌಲಭ್ಯ ಕಾನೂನು ೧೯೬೧** (Maternity Benefit)

ಹೆರಿಗೆ ಸೌಲಭ್ಯವನ್ನು ಮಹಿಳಾ ಕಾರ್ಮಿಕರಿಗೆ ಹೆರಿಗೆ ಸಮಯದಲ್ಲಿ ಒದಗಿಸಲಾಗುವುದು.

ವಿಮಾ ಸೌಲಭ್ಯವನ್ನು ಹೊಂದಿರುವ ಮಹಿಳಾ ಕಾರ್ಮಿಕಳು ಹೆರಿಗೆಯ ನಂತರ ಅಥವಾ ಮೊದಲು ೧೨ ವಾರಗಳ ವೇತನ ಸಹಿತ ರಜೆ ಪಡೆಯಲು ಅರ್ಹಳಾಗಿರುತ್ತಾಳೆ.

**ಈ. ಅಂಗವಿಕಲತೆಯ ಸೌಲಭ್ಯ** (Disablement Benefit)

ಕಾರ್ಮಿಕರಿಗೆ ಅಪಘಾತ ಉಂಟಾದಾಗ ಕಾರ್ಮಿಕರಿಗೆ ಕೊಡುವ ಪರಿಹಾರ ಧನವನ್ನು ಅಂಗವಿಕಲತೆಯ ಸೌಲಭ್ಯ ಎನ್ನುವರು. ಕಾರ್ಮಿಕರಿಗೆ ತಾತ್ಕಾಲಿಕ ಅಂಗವಿಕಲತೆ ಉಂಟಾದರೆ ಶೇಕಡ ೭೦ ರಷ್ಟು ಕೂಲಿಯನ್ನು ಅಂಗವಿಕಲತೆಯ ಸೌಲಭ್ಯಕ್ಕಾಗಿ ಕೊಡಲಾಗುವುದು. ಶಾಶ್ವತ ಅಂಗವಿಕಲತೆ ಉಂಟಾದಲ್ಲಿ ಶೇಕಡ ೭೦ ರಷ್ಟು ಕೂಲಿಯನ್ನು ನಿವೃತ್ತಿ ವೇತನಕ್ಕಾಗಿ ಪಾವತಿಸಲಾಗುವುದು.

**ಉ. ಅವಲಂಬಿತರ ಸೌಲಭ್ಯ** (Dependant's Benefit)

ಕೈಗಾರಿಕಾ ಅಪಘಾತದಿಂದ ಕೈಗಾರಿಕಾ ಕಾರ್ಮಿಕರು ಮರಣ ಹೊಂದಿದಾಗ ಅವರ ಅವಲಂಬಿತರಿಗೆ ಈ ಸೌಲಭ್ಯವನ್ನು ಕೊಡಲಾಗುವುದು. ಈ ರೀತಿಯಾಗಿ ಕೊಡುವ ಸೌಲಭ್ಯವು ಮರಣ ಹೊಂದಿದ ವ್ಯಕ್ತಿಯು ಸೌಲಭ್ಯವನ್ನು ಪಡೆಯುವ ವ್ಯಕ್ತಿಯೊಂದಿಗೆ ಹೊಂದಿರುವ ಸಂಬಂಧವನ್ನು ಅವಲಂಬಿಸಿಕೊಂಡಿದೆ.

**ಕಾರ್ಮಿಕರ ಭವಿಷ್ಯ ನಿಧಿ ಕಾನೂನು ೧೯೫೨** (The Provident Fund Act of 1952)

೧೯೫೨ ರಲ್ಲಿ ಮೊತ್ತ ಮೊದಲ ಬಾರಿಗೆ ಈ ಕಾನೂನು ಕಬ್ಬಿಣ ಮತ್ತು ಉಕ್ಕಿನ ಕೈಗಾರಿಕೆ, ಹತ್ತಿ ಬಟ್ಟೆ, ಇಂಜನಿಯರಿಂಗ್, ಸಿಮೆಂಟ್, ಕಾಗದ ಮತ್ತು ಸಿಗರೇಟು ಕೈಗಾರಿಕೆಗಳಿಗೆ ಮಾತ್ರ ಅನ್ವಯಿಸುತ್ತಿತ್ತು. ಆದರೆ ಈಗ ಇದನ್ನು ೨೦ ಅಥವಾ ಹೆಚ್ಚು ಕಾರ್ಮಿಕರಿರುವ ಮತ್ತು ಮಾಸಿಕ ೬,೫೦೦ ರೂಪಾಯಿಯವರೆಗೆ ವೇತನವನ್ನು ಪಡೆಯುವ ಕಾರ್ಮಿಕರಿಗೆ ಕೊಡಲಾಗುವುದು. ಇದರಲ್ಲಿ ಮಾಲೀಕರು ಮತ್ತು ಕಾರ್ಮಿಕರು ಒಟ್ಟಿಗೆ ಸೇರಿ ಒಂದು ನಿಧಿಯನ್ನು ಆರಂಭಿಸಿ ಪ್ರತೀ ತಿಂಗಳು ಆ ನಿಧಿಗೆ ಕೊಡುಗೆಯನ್ನು ಕೊಡಲಾಗುವುದು. ಕಾರ್ಮಿಕರು ಕೆಲಸದಿಂದ ನಿವೃತ್ತಿ ಹೊಂದಿದಾಗ ಅವರ ಖಾತೆಯಲ್ಲಿರುವ ಹಣವನ್ನು ಅವರಿಗೆ ಪಾವತಿಸಲಾಗುವುದು.

**ಗ್ರ್ಯಾಚ್ಯುವಿಟಿ ಕಾನೂನು ೧೯೭೨** (Gratuity Act 1972)

ಮಾಹೆಯಾನ ರೂ.೧೦೦೦ಕ್ಕಿಂತ ಹೆಚ್ಚು ಸಂಬಳ ಪಡೆಯದ ಎಲ್ಲಾ ಕೈಗಾರಿಕಾ ಕಾರ್ಮಿಕರಿಗೂ ಗ್ರ್ಯಾಚ್ಯುವಿಟಿ ಕಾನೂನು ೧೯೭೨ ಅನ್ವಯಿಸುತ್ತದೆ. ಕಾರ್ಮಿಕರು ನಿವೃತ್ತಿ ಹೊಂದಿದಾಗ ಗ್ರ್ಯಾಚ್ಯುವಿಟಿ ಮೊತ್ತವನ್ನು ಮಾಲೀಕರು ಪಾವತಿಸಬೇಕೆಂದು ಈ ಕಾನೂನು ವಿವರಿಸುತ್ತದೆ.

**ಬೋನಸ್ ಕಾನೂನು ೧೯೬೫** (The Bonus Act of 1965)

ಕಾರ್ಖಾನೆಗಳ ಕಾನೂನಿಗೆ ಒಳಪಟ್ಟ ಎಲ್ಲಾ ಕೈಗಾರಿಕೆಗಳಿಗೂ ೧೯೬೫ರ ಬೋನಸ್

ಕಾನೂನು ಅನ್ವಯಿಸುವುದು. ಈ ಕಾನೂನಿನ ಪ್ರಕಾರ ಮಾಲೀಕರು ತನ್ನ ಕಾರ್ಮಿಕರಿಗೆ ಬೋನಸ್ಸನ್ನು ಪಾವತಿಸಬೇಕಾಗುತ್ತದೆ.

ಭಾರತದಲ್ಲಿ ಸ್ವಾತಂತ್ರ್ಯಾನಂತರ ಹಲವು ಸಾಮಾಜಿಕ ಭದ್ರತಾ ಕಾನೂನುಗಳು ಜಾರಿಗೆ ಬಂದರೂ, ಅಭಿವೃದ್ಧಿ ಹೊಂದಿದ ರಾಷ್ಟ್ರಗಳಾದ ಅಮೆರಿಕಾ, ಇಂಗ್ಲೆಂಡ್, ಜರ್ಮನಿ ಇವುಗಳಿಗೆ ಹೋಲಿಸಿದಾಗ ಇವುಗಳ ಪ್ರಮಾಣವು ಕಡಿಮೆಯಾಗಿದೆ. ಈ ಕಾನೂನುಗಳು ದೇಶದ ಎಲ್ಲಾ ಭಾಗಗಳಲ್ಲಿ ಸೂಕ್ತ ರೀತಿಯಲ್ಲಿ ಅನುಷ್ಠಾನಕ್ಕೆ ಬಂದಿರುವುದಿಲ್ಲ.

## ರಾಷ್ಟ್ರೀಯ ಪುನರಾವರ್ತನಾ ನಿಧಿಯ ಮಹತ್ವ

## (Importance of National Renewal Fund)

ಕಾರ್ಮಿಕರ ಅಭಿವೃದ್ಧಿಗಾಗಿ ಹಾಗೂ ಅವರ ವಿರೋಧವನ್ನು ಹೋಗಲಾಡಿಸಲು ಕೇಂದ್ರ ಸರಕಾರವು ರಾಷ್ಟ್ರೀಯ ಪುನರಾವರ್ತನ ನಿಧಿಯೊಂದನ್ನು ಸ್ಥಾಪಿಸಿದೆ. ಈ ನಿಧಿಗಾಗಿ ೧೯೯೧-೯೨ ಮತ್ತು ೧೯೯೩-೯೪ ರ ಅವಧಿಯಲ್ಲಿ ಅಂತರ ರಾಷ್ಟ್ರೀಯ ಅಭಿವೃದ್ಧಿ ಸಂಸ್ಥೆಯು ವರ್ಷಕ್ಕೆ ೫೦೦ ಕೋಟಿ ರೂಪಾಯಿಗಳಂತೆ ಎರಡು ವರ್ಷಗಳ ಅವಧಿಗೆ ೧೦೦೦ ಕೋಟಿ ರೂಪಾಯಿಗಳ ರಿಯಾಯಿತಿ ಬಡ್ಡಿ ದರದ ಸಾಲವನ್ನು ನೀಡಿದೆ. ೧೯೯೩-೯೪ ರಲ್ಲಿ ಕೇಂದ್ರ ಸರಕಾರವು ತನ್ನ ಮುಂಗಡ ಪತ್ರದಲ್ಲಿ ೧೦೦೦ ಕೋಟಿ ರೂಪಾಯಿಗಳ ನೆರವು ನೀಡಿದೆ.

## ರಾಷ್ಟ್ರೀಯ ಪುನರಾವರ್ತನ ನಿಧಿಯ ಉದ್ದೇಶಗಳು

ಈ ಕೆಳಗಿನವುಗಳು ರಾಷ್ಟ್ರೀಯ ಪುನರಾವರ್ತನ ನಿಧಿಯ ಪ್ರಮುಖ ಉದ್ದೇಶಗಳು

೧. ಹೊಸದಾಗಿ ಜಾರಿಗೊಳಿಸಲಾಗುವ ಕೈಗಾರಿಕಾ ಪುನರ್‌ರಚನೆ ಮತ್ತು ಅಸ್ತಿತ್ವದಲ್ಲಿರುವ ಕೈಗಾರಿಕೆಗಳ ಉತ್ಪಾದನಾ ಸಾಮರ್ಥ್ಯ ಹೆಚ್ಚಳ, ತಾಂತ್ರಿಕತೆಯ ಬದಲಾವಣೆ ಹಾಗೂ ಆಧುನೀಕರಣದ ಪರಿಣಾಮವಾಗಿ ಉಂಟಾಗುವ ಉದ್ಯೋಗಿಗಳ ಕಾರ್ಮಿಕರ ಪುನರ್ ತರಬೇತಿ ಮತ್ತು ಪುನರ್ ಉದ್ಯೋಗದ ವೆಚ್ಚಗಳನ್ನು ಕೈಗಾರಿಕೆಗಳು ಭರಿಸಲು ಬೇಕಾದ ಹಣಕಾಸು ನೆರವನ್ನು ನೀಡುವುದು.

೨. ಸಾರ್ವಜನಿಕ ಹಾಗೂ ಖಾಸಗಿ ಉದ್ಯಮಗಳೆರಡರಲ್ಲೂ ಪುನರ್ ತರಭೇತಿ ಮತ್ತು ಉದ್ಯೋಗ ಕಾರ್ಯಕ್ರಮಗಳನ್ನು ಅಳವಡಿಸಿಕೊಳ್ಳುವುದು.

೩. ಯಾವುದೇ ಕೈಗಾರಿಕೆಯು ಖಾಸಗಿ ಹಾಗೂ ಸಾರ್ವಜನಿಕ ಕ್ಷೇತ್ರಗಳಲ್ಲಿ ಮುಚ್ಚಲ್ಪಟ್ಟರೆ ಅಥವಾ ಪುನರ್ ರಚನೆಯಿಂದಾಗಿ ಕಾರ್ಮಿಕರು ಉದ್ಯೋಗ ಕಳೆದುಕೊಂಡರೆ ಅವರಿಗೆ ಪರಿಹಾರ ನೀಡಲು ನಿಧಿ ಪೂರೈಸುವುದು.

೪. ಕಾರ್ಮಿಕರಿಗೆ ಸಾಮಾಜಿಕ ಭದ್ರತೆಯನ್ನು ಒದಗಿಸಲು ಸಂಘಟಿತ ಮತ್ತು ಅಸಂಘಟಿತ ಕ್ಷೇತ್ರಗಳೆರಡರಲ್ಲೂ ಉದ್ಯೋಗ ಸೃಷ್ಟಿ ಕಾರ್ಯಕ್ರಮಗಳಿಗಾಗಿ ನಿಧಿಯನ್ನು ಒದಗಿಸುವುದು.

ಕೇಂದ್ರ ಸರಕಾರದ ಕೈಗಾರಿಕಾ ಅಭಿವೃದ್ಧಿ ವಿಭಾಗವು ರಾಷ್ಟ್ರೀಯ ಪುನರಾವರ್ತನಾ ನಿಧಿಯನ್ನು ಜಾರಿಗೊಳಿಸುತ್ತದೆ. ೧೯೯೧-೯೨ರಲ್ಲಿ ಈ ಕಾರ್ಯಕ್ರಮವನ್ನು ಜವಳಿ ನಿಗಮದ ನಿಯಂತ್ರಣದಲ್ಲಿರುವ ಹತ್ತಿಬಟ್ಟೆ ಕೈಗಾರಿಕೆಗಳಿಗೆ, ೧೯೯೨-೯೩ರಲ್ಲಿ ಇಂಜಿನಿಯರಿಂಗ್, ರಾಸಾಯನಿಕಗಳು, ಗಣಿಗಾರಿಕೆ ಮುಂತಾದ ಕೈಗಾರಿಕೆಗಳಿಗೂ ಜಾರಿಗೊಳಿಸಲಾಗಿದೆ. ಕಾರ್ಮಿಕರ ಹಿತಾಸಕ್ತಿಯನ್ನು ಕಾಪಾಡುವಲ್ಲಿ ರಾಷ್ಟ್ರೀಯ ಪುನರಾವರ್ತನ ನಿಧಿಯ ಪಾಲು ಗಮನಾರ್ಹವಾಗಿದೆ.

## ೫.೩. ಮಹಿಳೆಯರ ಸಬಲೀಕರಣ

### ೫.೩.೧. ಪ್ರಸ್ತಾವನೆ

ಅರ್ಥಶಾಸ್ತ್ರವನ್ನು ಸೇರಿಸಿಕೊಂಡು ಸಮಾಜವಿಜ್ಞಾನಗಳೆಲ್ಲವೂ ಮೂಲತಃ ಲಿಂಗನಿರಪೇಕ್ಷ ಜ್ಞಾನಶಿಸ್ತುಗಳಾಗಿವೆ. ಆದರೆ ವಾಸ್ತವದಲ್ಲಿ ಅವು ಪುರುಷಶಾಹಿ-ಪುರುಷ ಪ್ರಧಾನತೆಯಿಂದ ಮೆರೆಯುತ್ತಿವೆ. ಪುರುಷರ ನೆಲೆಯಿಂದ ಜ್ಞಾನವನ್ನು ಪರಿಭಾವಿಸಿ ಕೊಳ್ಳುವುದು ರೂಢಿಯಲ್ಲಿದೆ. ಈ ಎಲ್ಲ ಜ್ಞಾನಶಿಸ್ತುಗಳು ಮಹಿಳೆಯರನ್ನು 'ಜೈವಿಕ ಘಟಕ'ವೆಂದು ಪರಿಭಾವಿಸುತ್ತವೆ ವಿನಾ ಅಭಿವೃದ್ಧಿ ಘಟಕವೆಂದು ಪರಿಭಾವಿಸುವುದಿಲ್ಲ, ಸಾಮಾಜಿಕವಾಗಿ ಅಸ್ತಿತ್ವದಲ್ಲಿರುವ ಲಿಂಗ ತಾರತಮ್ಯ, ಲಿಂಗ ಅಸಮಾನತೆ, ಮಹಿಳೆಯರ ಮೇಲಿನ ಹಿಂಸೆಗಳನ್ನು ಜ್ಞಾನಶಿಸ್ತುಗಳು ದೃಢಪಡಿಸುತ್ತಿರುವಂತೆ ಕಾಣುತ್ತದೆ. ಅಭಿವೃದ್ಧಿಗೆ ಸಂಬಂಧಿಸಿದ ಯಾವುದೆ ಸೂಚಿಯನ್ನು ತೆಗೆದುಕೊಂಡರೂ ಮಹಿಳೆಯರ ಸ್ಥಾನಮಾನ ಹಾಗೂ ಸ್ಥಿತಿಗತಿಗಳು ಪುರುಷರ ಸ್ಥಾನಮಾನ ಹಾಗೂ ಸ್ಥಿತಿಗತಿಗಿಂತ ಕೆಳಮಟ್ಟದಲ್ಲಿರುವುದು ಕಂಡುಬರುತ್ತದೆ. ಇದನ್ನು ಅತ್ಯಂತ ಸ್ಪಷ್ಟವಾಗಿ ಕೆಳಮಟ್ಟದಲ್ಲಿರುವ ಲಿಂಗ ಅನುಪಾತದಿಂದ ತಿಳಿದುಕೊಳ್ಳಬಹುದು. ಜನಸಂಖ್ಯೆಯಲ್ಲಿನ ಮಹಿಳೆಯರ ಮತ್ತು ಪುರುಷರ ಸಂಖ್ಯೆಗಳ ನಡುವಣ ಅನುಪಾತವು ನಮ್ಮ ಸಮಾಜದ ಸಂದರ್ಭದಲ್ಲಿ ಪೂರ್ಣಾಂಕಕ್ಕಿಂತ ಕಡಿಮೆಯಿದೆ. ಎಳೆಮಕ್ಕಳಿಗೆ (೦-೬ ವರ್ಷ) ಸಂಬಂಧಿಸಿದಂತೆ ಲಿಂಗ ಅನುಪಾತವು ಕುಸಿಯುತ್ತಿದೆ. ಇವು ಮಹಿಳೆಯರ ದುಸ್ಥಿತಿಯ ಸೂಚಿಗಳಾಗಿವೆ.

ಈ ಬಗೆಯ ತಾರತಮ್ಯ, ಅಸಮಾನತೆಗಳನ್ನು ನಿವಾರಿಸಲು ರಾಷ್ಟ್ರೀಯ ಮತ್ತು ಅಂತಾರಾಷ್ಟ್ರೀಯ ಮಟ್ಟದಲ್ಲಿ ಪ್ರಯತ್ನಗಳು ನಡೆಯುತ್ತಿವೆ. ಈ ಪ್ರಯತ್ನದಲ್ಲಿ ಮಹಿಳಾ ಚಳುವಳಿಯ ಪಾತ್ರ, ಸ್ತ್ರೀ ವಾದದ ಪಾತ್ರ ಮಹತ್ವದ್ದಾಗಿದೆ. ಮಹಿಳೆಯ ಅಭಿವೃದ್ಧಿ ಕುರಿತಂತೆ ಇಂದು ಪ್ರಚಲಿತದಲ್ಲಿರುವ ಸಿದ್ಧಾಂತವೆಂದರೆ ಮಹಿಳೆಯರ ಸಬಲೀಕರಣ. ಸಬಲೀಕರಣ ಕಾರ್ಯಕ್ರಮಗಳನ್ನು ಸರ್ಕಾರಗಳು ಜಾರಿಗೊಳಿಸುತ್ತಿವೆ. ಪ್ರಸ್ತುತ ಘಟಕದಲ್ಲಿ ಮಹಿಳೆಯರ ಸಬಲೀಕರಣ ಕುರಿತಂತೆ ಅನೇಕ ಸಂಗತಿಗಳನ್ನು ಚರ್ಚಿಸಲಾಗಿದೆ.

### ಅಭಿವೃದ್ಧಿಯಲ್ಲಿ ಮಹಿಳೆಯ ಪಾತ್ರ

ಇದೊಂದು ಕುತೂಹಲಕಾರಿ ಸಂಗತಿಯಾಗಿದೆ. ಏಕೆಂದರೆ ಇಂತಹ ಪ್ರಶ್ನೆಯನ್ನು

ಪುರುಷರಿಗೆ ಸಂಬಂಧಿಸಿದಂತೆ ಕೇಳುತ್ತಿಲ್ಲ. ಸಾಮಾಜಿಕ ಅವಕಾಶದಲ್ಲಿ ಮಹಿಳೆಯರಿಗೆ ಯಾವುದೆ ಪಾತ್ರ ಮತ್ತು ಸ್ಥಾನವಿಲ್ಲವೆಂದು ಅನೂಚಾನದಿಂದ ಹೇಳಿಕೊಂಡು ಬರಲಾಗಿದೆ. ಅವಳ ಕ್ರಿಯಾಶೀಲತೆ ಮತ್ತು ಕಾರ್ಯವ್ಯಾಪ್ತಿ ಕುಟುಂಬಕ್ಕೆ ಮೀಸಲು ಎಂಬ ನಂಬಿಕೆಗಳು ಸಮಾಜದಲ್ಲಿ ಆಳವಾಗಿ ಬೇರೂರಿವೆ. ಅಭಿವೃದ್ಧಿಯಲ್ಲಿ ಅವಳ ಪಾತ್ರ ಹಾಗೂ ಕೊಡುಗೆ ಕುರಿತಂತೆ ಸಮಾಜದಲ್ಲಿ ಅನುಮಾನಗಳಿವೆ. ಆದರೆ ಇಂದು ಮಹಿಳೆಯರ ಅಭಿವೃದ್ಧಿ ಕುರಿತಂತೆ ಅಧ್ಯಯನಗಳನ್ನು ನಡೆಸುತ್ತಿರುವ ವಿದ್ವಾಂಸರು ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮಹಿಳೆಯರ ಪಾತ್ರ ಹಾಗೂ ಕೊಡುಗೆಯು ಪುರುಷರಷ್ಟೇ ಮಹತ್ವದ್ದಾಗಿದೆ ಎಂಬುದನ್ನು ಸಾಧಿಸಿ ತೋರಿಸಿಕೊಟ್ಟಿದ್ದಾರೆ. ಈ ಉಪಘಟಕದಲ್ಲಿ ಅಭಿವೃದ್ಧಿಯಲ್ಲಿ ಮಹಿಳೆಯರ ಪಾತ್ರವನ್ನು ಕುರಿತಂತೆ ಚರ್ಚಿಸಲಾಗಿದೆ.

**ಅ. ಮಹಿಳೆ : ಜೈವಿಕ ಘಟಕವೊ ಅಥವಾ ಸಾಮಾಜಿಕ ಘಟಕವೊ?**

ಅಭಿವೃದ್ಧಿಯಲ್ಲಿ ಮಹಿಳೆಯರ ಪಾತ್ರವನ್ನು ಕುರಿತಂತೆ ಚರ್ಚೆ ಮಾಡುವಾಗ ನಾವು ಮೊದಲು ಬಗೆಹರಿಸಿಕೊಳ್ಳಬೇಕಾದ ಸಂಗತಿಯೆಂದರೆ ಮಹಿಳೆಯನ್ನು ಕೇವಲ ಜೈವಿಕ ಘಟಕವೆಂದು ಪರಿಭಾವಿಸಿಕೊಳ್ಳಬೇಕೋ ಅಥವಾ ಸಾಮಾಜಿಕ ಘಟಕವೆಂದು ಪರಿಭಾವಿಸಿ ಕೊಳ್ಳಬೇಕೋ ಎಂಬುದಾಗಿದೆ. ಮಹಿಳೆಯರನ್ನು ಕೇವಲ ಸಂತಾನೋತ್ಪತ್ತಿ ಹಾಗೂ ಸಂಗೋಪನಾ ಕಾರ್ಯಗಳನ್ನು ನಿರ್ವಹಿಸುವ ಮಂದಿಯೆಂದು ನಂಬಲಾಗಿದೆ. ಸಂತಾನೋ ತ್ಪತ್ತಿ, ಸಂಗೋಪನೆ ಮತ್ತು ಕುಟುಂಬ ನಿರ್ವಹಣೆಗಳನ್ನು ಪ್ರಕೃತಿಯು ಮಹಿಳೆಯರಿಗೆ ನಿರ್ದಿಷ್ಟಪಡಿಸಿದೆ ಎಂದು ಹೇಳಲಾಗುತ್ತಿದೆ. ಆದ್ದರಿಂದ ಅವರ ಕಾರ್ಯಗಳೇನಿದ್ದರೂ ಜೈವಿಕವಾದದ್ದು ಎಂದು ಭಾವಿಸಲಾಗಿದೆ.

ಮಹಿಳೆಯರು ಜೈವಿಕ ಚಟವಟಿಕೆಗಳಲ್ಲಿ ತೊಡಗಿರುವರಾದ ಕಾರಣವಾಗಿ ಅವರಿಗೆ ಅಭಿವೃದ್ಧಿಯಲ್ಲಿ ಯಾವುದೇ ಪಾತ್ರವನ್ನು ನೀಡಿಲ್ಲ. ಏಕೆಂದರೆ ಸಂತಾನೋತ್ಪತ್ತಿ ಚಟುವಟಿಕೆ ಗಳು ಕುಟುಂಬದ ಚೌಕಟ್ಟಿನಲ್ಲಿ ನಡೆಯುತ್ತವೆ. ಅವು ಖಾಸಗಿ ಜಗತ್ತಿಗೆ ಸೇರಿವೆ. ಆದರೆ ಅಭಿವೃದ್ಧಿ ಚಟುವಟಿಕೆಗಳು ಸಾಮಾಜಿಕ ನೆಲೆಯಲ್ಲಿ ನಡೆಯುತ್ತವೆ. ಅವು ಮನೆಯ ಹೊರಗೆ ನಡೆಯುವ ಕ್ರಿಯೆಗಳು. ಮಹಿಳೆಯರಿಗೆ ಸಾರ್ವಜನಿಕವಾದ ಪಾತ್ರವಿಲ್ಲ. ಅಂದಮೇಲೆ ಅಭಿವೃದ್ಧಿಯಲ್ಲಿ ಅವಳ ಪಾತ್ರ ಗೌಣವೆನ್ನಲಾಗಿದೆ.

ಸಂತಾನೋತ್ಪತ್ತಿ ದುಡಿಮೆಯಿಂದ ಬಂಡವಾಳದ ಉತ್ಪಾದನೆಯಾಗುವುದಿಲ್ಲ. ಈ ಬಗೆಯ ದುಡಿಮೆಯಿಂದ ಉತ್ಪಾದಿತವಾದ ಸರಕನ್ನು ಮಾರುಕಟ್ಟೆಯಲ್ಲಿ ಮಾರಲು ಸಾಧ್ಯವಿಲ್ಲ. ಅದು ಕೇವಲ ವಾತ್ಸಲ್ಯಕ್ಕೆ ಸಂಬಂಧಪಟ್ಟದ್ದು. ಬಂಡವಾಳಶಾಹಿ ಅಥವಾ ಅರ್ಥಶಾಸ್ತ್ರದ ಪರಿಭಾಷೆಯಲ್ಲಿ ಹೇಳುವುದಾದರೆ ಮಹಿಳೆಯರು ನಡೆಸುವ ಸಂತಾನೋತ್ಪತ್ತಿ ದುಡಿಮೆಯಿಂದ ಯಾವುದೇ ಮೌಲ್ಯದ ಉತ್ಪಾದನೆಯಾಗುವುದಿಲ್ಲ. ಏಕೆಂದರೆ ಮಾರುಕಟ್ಟೆ ಮತ್ತು ಲಾಭದ ಸಂಗತಿಗಳಿದ್ದಾಗ ಮಾತ್ರ ಆರ್ಥಿಕ ಮೌಲ್ಯ ಉಂಟಾಗಲು ಸಾಧ್ಯ.

ಇಂದು ಈ ಬಗೆಯ ವಿಚಾರಗಳನ್ನು ಸ್ತ್ರೀವಾದಿಗಳು ತಿರಸ್ಕರಿಸಿದ್ದಾರೆ. ಜೈವಿಕ

ಜವಾಬುದಾರಿಯ ಜೊತೆಗೆ ಮಹಿಳೆಯರು ಆರ್ಥಿಕ ದುಡಿಮೆಯ ಜವಾಬುದಾರಿಯನ್ನು ನಿರ್ವಹಿಸುತ್ತಿದ್ದಾರೆ. ಮಹಿಳೆಯರನ್ನು ಸಾಮಾಜಿಕ ಘಟಕವಾಗಿ ಅಭಿವೃದ್ಧಿ ಘಟಕವಾಗಿ ಪರಿಭಾವಿಸುವ ಕ್ರಮವನ್ನು ಒತ್ತಾಯಿಸಲಾಗುತ್ತಿದೆ. ಮನೆಯೊಳಗೆ ಹಾಗೂ ಮನೆಯ ಹೊರಗೆ ಎರಡೂ ಅವಕಾಶಗಳಲ್ಲಿ ಅವರು ದುಡಿಯುತ್ತಿದ್ದಾರೆ. ಅಭಿವೃದ್ಧಿಯಲ್ಲಿ ಮಹಿಳೆಯರ ಪಾತ್ರ, ನಿರ್ಣಾಯಕವಾದುದಾಗಿದೆ. ಅನೇಕ ಸ್ತ್ರೀವಾದಿಗಳು ಹಾಗೂ ಅರ್ಥಶಾಸ್ತ್ರಜ್ಞರು ಅಭಿವೃದ್ಧಿಯಲ್ಲಿ ಮಹಿಳೆಯರ ಪಾತ್ರ ಹಾಗೂ ಕೊಡುಗೆಯನ್ನು ಗುರುತಿಸಿದ್ದಾರೆ ಮತ್ತು ಮಾಪನ ಮಾಡಿದ್ದಾರೆ. ಖಾಸಗಿ-ಸಾರ್ವಜನಿಕ ಎಂಬ ವರ್ಗೀಕರಣವು ಅರ್ಥಪೂರ್ಣ ವಾದುದೇನಲ್ಲ.

**ಆ. ಮಹಿಳೆಯರು ಮತ್ತು ಗೃಹಣಿಯರು**

ಮಹಿಳೆಯರನ್ನು ಸಮಾಜದಲ್ಲಿ 'ಗೃಹಿಣಿ'ಯದೆಂದು ಗುರುತಿಸುವುದು ವಾಡಿಕೆಯಲ್ಲಿದೆ. ಅವಳ ಜವಾಬುದಾರಿಯನ್ನು ಕೇವಲ ಗೃಹವಾರ್ತೆಗೆ ಮೀಸಲಿಡಲಾಗಿದೆ. ಅವಳನ್ನು ಗೃಹಿಣಿಯೆಂದು ಪರಿಗಣಿಸುವ ವಿಚಾರದ ಹಿಂದೆ ಜೈವಿಕವಾದದ ಪಾತ್ರವೂ ಇದೆ. ಮಹಿಳೆಯರನ್ನು 'ಗೃಹಿಣೀಕರಣ'ಕ್ಕೆ ಒಳಪಡಿಸಲಾಗಿದೆ. ಅವಳನ್ನು ಗೃಹಿಣಿಯನ್ನಾಗಿ ಸಮಾಜವು ಗುರುತಿಸುತ್ತದೆ ವಿನಾ ದುಡಿಮೆಗಾರಳಾಗಿಯಲ್ಲ. ಗೃಹವಾರ್ತೆಗಳಿಗೆ ಯಾವುದೆ ಸಂಭಾವನೆ ಇರುವುದಿಲ್ಲ. ಗೃಹವಾರ್ತೆ ದುಡಿಮೆಗೆ ಮಾರುಕಟ್ಟೆಯಿಲ್ಲ. ಈ ಕಾರಣಗಳಿಂದಾಗಿ ಮಹಿಳೆಯರನ್ನು ಉತ್ಪಾದಕರೆಂದು ಅರ್ಥಶಾಸ್ತ್ರ ಒಪ್ಪಿಕೊಳ್ಳಲು ಸಿದ್ಧವಿಲ್ಲ. ಮಹಿಳೆಯರ ಚಟುವಟಿಕೆಗಳನ್ನು ಹೀಗೆ ಸಾರ್ವಜನಿಕ ಕ್ಷೇತ್ರದಿಂದ, ಉತ್ಪಾದನಾ ವಲಯದಿಂದ, ಮಾರುಕಟ್ಟೆ ವ್ಯಾಪ್ತಿಯಿಂದ ಹೊರಗಿಡಲಾಗಿದೆ. ಮನೆಯ ಹೊರಗಿನ ದುಡಿಮೆ ಅಥವಾ ಉತ್ಪಾದನಾ ದುಡಿಮೆಯನ್ನು ಮಹಿಳೆಯರು ನಿರ್ವಹಿಸುವುದರಿಂದ ಗೃಹವಾರ್ತೆಯಲ್ಲಿ ವ್ಯತ್ಯಯವುಂಟಾಗುತ್ತದೆ. ಕುಟುಂಬ ನಿರ್ವಹಣೆಯಲ್ಲಿ ವ್ಯತ್ಯಯ ಉಂಟಾಗುತ್ತದೆ. ಮಹಿಳೆಯರನ್ನು ದುಡಿಮೆಗಾರರೆಂದು ಪರಿಗಣಿಸದಿರುವುದರಿಂದ ಅವರು ಅಭಿವೃದ್ಧಿಯಲ್ಲಿ ನಿರ್ವಹಿಸುವ ಪಾತ್ರವನ್ನು ಕುರಿತಂತೆ ಅರ್ಥಶಾಸ್ತ್ರದಲ್ಲಿ ಹೆಚ್ಚಿನ ಚರ್ಚೆ ಸಾಧ್ಯವಾಗಿಲ್ಲ.

**ಇ. ಸಾಮಾಜಿಕ ತಂತ್ರಜ್ಞಾನ**

ಅಮರ್ತ್ಯಸೇನ್ ಅವರು ತಮ್ಮ ಪ್ರಸಿದ್ಧ ಲೇಖನವೊಂದರಲ್ಲಿ (ಜೆಂಡರ್ ಅಂಡ್ ಕೋಆಪರೇಟಿವ್ ಕಾನ್‌ಫ್ಲಿಕ್ಟ್ಸ್) ಮಹಿಳೆಯರು ಅಭಿವೃದ್ಧಿಯಲ್ಲಿ ನಿರ್ವಹಿಸುವ ಪಾತ್ರವನ್ನು ಕುರಿತಂತೆ ಚರ್ಚಿಸಿದ್ದಾರೆ. ಅವರ ಪ್ರಕಾರ ತಂತ್ರಜ್ಞಾನವನ್ನು ಕೇವಲ ಯಂತ್ರಗಳ ಬಳಕೆ, ರಾಸಾಯನಿಕ ಪ್ರಕ್ರಿಯೆ ಅಥವಾ ಜೀವಶಾಸ್ತ್ರಕ್ಕೆ ಸಂಬಂಧಿಸಿದ ಸಂಗತಿಯಾಗಿ ಮಾತ್ರ ನೋಡುವ ಪರಿ ಪ್ರಚಲಿತದಲ್ಲಿದೆ. ಆದರೆ ಅದನ್ನು ಸಾಮಾಜಿಕ ನೆಲೆಯಲ್ಲೂ ನೋಡುವ ಅಗತ್ಯವಿದೆಯೆಂದು ಅವರು ಹೇಳುತ್ತಾರೆ. ಅದನ್ನು ಅವರು ಸಾಮಾಜಿಕ ತಂತ್ರಜ್ಞಾನವೆಂದು ಕರೆದಿದ್ದಾರೆ. ಉತ್ಪಾದನಾ ಚಟುವಟಿಕೆಗಳು 'ಅವಲಂಬಿತ' ಸ್ವರೂಪ ಹೊಂದಿರುತ್ತವೆ.

ಗೃಹವಾರ್ತೆ, ಆಹಾರ ಸಂಬಂಧಿ ಸಂಸ್ಕರಣೆ, ಅಡುಗೆ ಕಾರ್ಯ, ಮಕ್ಕಳ ಲಾಲನೆ, ಹೊಲಕ್ಕೆ ಬುತ್ತಿ ಒಯ್ಯುವುದು ಮುಂತಾದವು ಉತ್ಪಾದನೆಗೆ ಪೂರಕವಾದ ಕಾರ್ಯಗಳಾಗಿವೆ. ತಂತ್ರಜ್ಞಾನವೆನ್ನುವುದು ಕೇವಲ ಉಪಕರಣಗಳಿಗೆ, ಅವುಗಳ ಬಳಕೆಗೆ ಮಾತ್ರ ಸಂಬಂಧಿಸಿದ ಸಂಗತಿಯಲ್ಲ. ಅದು ಉತ್ಪಾದನೆಗೆ ಸಂಬಂಧಿಸಿದ ಸಾಮಾಜಿಕ ವ್ಯವಸ್ಥೆಯನ್ನು ಒಳಗೊಳ್ಳುತ್ತದೆ. ಉತ್ಪಾದನೆಗೆ ಅನುಕೂಲಕರವಾದ ಸಾಮಾಜಿಕ ವ್ಯವಸ್ಥೆ ಇಲ್ಲದಿದ್ದರೆ ಉಪಕರಣ-ತಂತ್ರಜ್ಞಾನವು ಅನುಪಯುಕ್ತವಾಗಿ ಬಿಡುತ್ತದೆ. ಉತ್ಪಾದನೆಗೆ ಪೂರಕವಾದ ಚಟುವಟಿಕೆಗಳನ್ನು ಅನುತ್ಪಾದಕವೆಂದು ಪರಿಗಣಿಸುವುದು ತಪ್ಪು. ಅವು ಉತ್ಪಾದನೆಗೆ, ಅಭಿವೃದ್ಧಿಗೆ ಅಪಾರ ಕಾಣಿಕೆ ನೀಡುತ್ತವೆ.

ಉತ್ಪಾದನೆಗೆ ಪೂರಕವಾದ ಸಾಮಾಜಿಕ ತಂತ್ರಜ್ಞಾನವನ್ನು ನೂರಕ್ಕೆ ನೂರರಷ್ಟು ಮಹಿಳೆಯರು ನಿರ್ವಹಿಸುತ್ತಿದ್ದಾರೆ. ಈ ಸಾಮಾಜಿಕ ತಂತ್ರಜ್ಞಾನವು ಮಹಿಳೆಯರ ದುಡಿಮೆಯನ್ನು ಅವಲಂಬಿಸಿದೆ.

**ಕಾಲ ಬಳಕೆ ಅಧ್ಯಯನ**

ಮಹಿಳೆಯರ ದುಡಿಮೆ, ಅಭಿವೃದ್ಧಿಯಲ್ಲಿ ಅವರ ಪಾತ್ರ, ದೇಶದ ಪ್ರಗತಿಗೆ ಅವರ ಕೊಡುಗೆಗಳಿಗೆ ಸಂಬಂಧಿಸಿದಂತೆ ಇರುವ ಪ್ರಮುಖ ಸಮಸ್ಯೆಯೆಂದರೆ ಅವುಗಳ ಮಾಪನ. ಮಹಿಳೆಯರ ದುಡಿಮೆಯನ್ನು ಹಣದ ರೂಪದಲ್ಲಿ ಅಳೆಯುವುದು ಕಷ್ಟಸಾಧ್ಯ. ಮೊದಲನೆಯದಾಗಿ ಅವರು ಮಾಡುವ ಅನೇಕ ಕೆಲಸಗಳು ಗೃಹವಾರ್ತೆಗೆ ಸಂಬಂಧಿಸಿದಿವೆ. ಎರಡನೆಯದಾಗಿ ಅವರು ಉತ್ಪಾದಿಸುವ ಸರಕುಗಳು ಮಾರುಕಟ್ಟೆಯಲ್ಲಿ ಮಾರಾಟಕ್ಕೆ ದೊರೆಯುವುದಿಲ್ಲ. ಅವರ ಉತ್ಪಾದನೆಗೆ ಆರ್ಥಿಕ ಮೌಲ್ಯ ಅಥವಾ ಹಣರೂಪ ಬೆಲೆಯೆಂಬುದಿಲ್ಲ. ಮೂರನೆಯದಾಗಿ ಅವರು ಅನೇಕ ದುಡಿಮೆಗಳನ್ನು ಏಕಕಾಲದಲ್ಲಿ ನಿರ್ವಹಿಸುತ್ತಿರುತ್ತಾರೆ.

ಅವರ ದುಡಿಮೆಯನ್ನು ಅಳೆಯಲು ಸಾಧ್ಯವಿಲ್ಲವೆಂದು ಅವರ ದುಡಿಮೆಯನ್ನೋ ಅಲ್ಲಗಳೆಯಲು ಸಾಧ್ಯವಿಲ್ಲ. ಈ ಸಮಸ್ಯೆಯನ್ನು ಬಗೆಹರಿಸಲು ದೇವಕಿಜೈನ್ ಮುಂತಾದ ಸ್ತ್ರೀವಾದಿಗಳು 'ಕಾಲ ಬಳಕೆ ಅಧ್ಯಯನ'ವೆಂಬ ಹೊಸ ಸಿದ್ಧಾಂತವನ್ನು ರೂಪಿಸಿದ್ದಾರೆ. ಅವರ ಪ್ರಕಾರ ದುಡಿಮೆಗೆ ಸಂದ ಕಾಲವನ್ನು ಗಣನೆ ಮಾಡಿ ಮಹಿಳೆಯರ ದುಡಿಮೆಯನ್ನು ಅಳೆಯಲು ಸಾಧ್ಯವೆಂಬುದನ್ನು ತೋರಿಸಿದ್ದಾರೆ.

ಯುಎನ್‌ಡಿಪಿಯು ೧೯೯೫ರಲ್ಲಿ ಪ್ರಕಟಿಸಿರುವ 'ಮಾನವ ಅಭಿವೃದ್ಧಿ ವರದಿ'ಯಲ್ಲಿ ಮಹಿಳೆಯರ ದುಡಿಮೆಯನ್ನು ಮಾಪನ ಮಾಡುವುದನ್ನು ಕುರಿತಂತೆ ವಿವರವಾಗಿ ಚರ್ಚಿಸಲಾಗಿದೆ. ಈ ವರದಿಯು ಸಾಮಾನ್ಯವಾಗಿ ಎಲ್ಲ ದೇಶಗಳಲ್ಲೂ ಮಹಿಳೆಯರು ಪುರುಷರಿಗಿಂತ ಹೆಚ್ಚು ಗಂಟೆಗಳ ಕಾಲ ದುಡಿಯುತ್ತಾರೆ ಎಂಬುದನ್ನು ದೃಢಪಡಿಸಿದೆ. ಒಟ್ಟಾರೆ ರಾಷ್ಟ್ರೀಯ ದುಡಿಮೆಯಲ್ಲಿ ಮಹಿಳೆಯರ ಪಾಲು ಅಭಿವೃದ್ಧಿಶೀಲ ದೇಶಗಳಲ್ಲಿ ಶೇ. ೫೩ರಷ್ಟಿದ್ದರೆ ಮುಂದುವರಿದ ದೇಶಗಳಲ್ಲಿ ಅವರ ಪಾಲು ಶೇ. ೫೧.

ಮಹಿಳೆಯರ ದುಡಿಮೆಯಲ್ಲಿ ಕೇವಲ ಮೂರನೆಯ ಒಂದರಷ್ಟು ೧/೩ರಷ್ಟು ಮಾತ್ರ ಆರ್ಥಿಕ ಮೌಲ್ಯದ ಗಣನೆಗೆ ಒಳಗಾದರೆ ಪುರುಷರ ದುಡಿಮೆಯಲ್ಲಿ ಮೂರನೆಯ ಎರಡರಷ್ಟು ಆರ್ಥಿಕ ಮೌಲ್ಯದ ಗಣನೆಗೆ ಒಳಪಡುತ್ತದೆ. ಅಂದಗೆ ಮಹಿಳೆಯರ ದುಡಿಮೆಯಲ್ಲಿ ೨/೩ರಷ್ಟು 'ಅಗೋಚರವಾಗಿ' ಉಳಿದುಬಿಡುತ್ತದೆ. ಇದನ್ನು ಪರಿಹರಿಸಲು ದಿನವೊಂದಕ್ಕೆ ಮಹಿಳೆಯರು ಮನೆಯೊಳಗೆ ಮತ್ತು ಮನೆಯ ಹೊರಗೆ ಎಷ್ಟು ಗಂಟೆಗಳ ಕಾಲ ದುಡಿಯುತ್ತಾರೆ ಎಂಬುದನ್ನು ಗಣನೆ ಮಾಡುವುದರ ಮೂಲಕ ಅವರ ದುಡಿಮೆಯನ್ನು ಗುರುತಿಸುವುದು ಸಾಧ್ಯ. ಮಹಿಳೆಯರು, ಗ್ರಾಮೀಣ ಪ್ರದೇಶದಲ್ಲಿ ಇಂದಿಗೂ ಪ್ರತಿದಿನ ೧೫ ರಿಂದ ೧೬ ಗಂಟೆಗಳ ಕಾಲ ದುಡಿಯುತ್ತಾರೆ. ಅಂದರೆ ಅವರು ಪ್ರತಿದಿನ ಎರಡು ಮಹಿಳೆಯರ ಪಾತ್ರ ನಿರ್ಣಾಯಕವಾದುದು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

**ಉ. ಮಹಿಳೆಯರ ದುಡಿಮೆ ಸಹಭಾಗಿತ್ವ ಪ್ರಮಾಣ**

ಒಂದು ದೇಶದ/ಪ್ರದೇಶದ ಜನಸಂಖ್ಯೆಯಲ್ಲಿ ಒಟ್ಟು ದುಡಿಮೆಗಾರರ ಪ್ರಮಾಣ ವಿಷ್ಟೆದೆಯೋ, ಅದನ್ನು ದುಡಿಮೆ ಸಹಭಾಗಿತ್ವ ಪ್ರಮಾಣವೆಂದು ಕರೆಯಲಾಗಿದೆ. ನಮ್ಮ ದೇಶದ ೨೦೦೧ರ ಜನಗಣತಿ ಪ್ರಕಾರ ಮಹಿಳೆಯರ ಮತ್ತು ಪುರುಷರ ದುಡಿಮೆ ಸಹಭಾಗಿತ್ವ ಪ್ರಮಾಣವನ್ನು ಲೆಕ್ಕ ಹಾಕಿ ಕೋಷ್ಟಕ ೫.೩.೧. ರಲ್ಲಿ ತೋರಿಸಲಾಗಿದೆ.

**ದುಡಿಮೆ ಸಹಭಾಗಿತ್ವ ಪ್ರಮಾಣ ೨೦೦೧**

| ದೇಶ ಪ್ರದೇಶ | ಒಟ್ಟು | ಮಹಿಳೆಯರು | ಪುರುಷರು |
|---|---|---|---|
| **ಭಾರತ** | | | |
| ಜನಸಂಖ್ಯೆ | ೧೦೨.೫೩ ಕೋಟಿ | ೪೯.೪೯ ಕೋಟಿ | ೫೩.೦೪ ಕೋಟಿ |
| ಒಟ್ಟು ದುಡಿಮೆಗಾರರು (ಪ್ರಧಾನ+ಅವಲಂಬಿ) | ೪೦.೨೫ ಕೋಟಿ | ೧೨.೭೦ ಕೋಟಿ | ೨೭.೫೫ ಕೋಟಿ |
| ದುಡಿಮೆ ಸಹಭಾಗಿತ್ವ ಪ್ರಮಾಣ | ಶೇ. ೩೯.೨೬ | ಶೇ. ೨೫.೬೬ | ಶೇ. ೫೫.೯೪ |
| **ಕರ್ನಾಟಕ** | | | |
| ಜನಸಂಖ್ಯೆ | ೨೫೭.೩೪ ಲಕ್ಷ | ೨೫೮.೭೮ ಲಕ್ಷ | ೨೬೮.೫೬ ಲಕ್ಷ |
| ಒಟ್ಟು ದುಡಿಮೆಗಾರರು (ಪ್ರಧಾನ+ಅವಲಂಬಿ) | ೨೩೫.೨೨ ಲಕ್ಷ | ೮೨.೪೯ ಲಕ್ಷ | ೧೫೨.೭೩ ಲಕ್ಷ |
| ದುಡಿಮೆ ಸಹಭಾಗಿತ್ವ ಪ್ರಮಾಣ | ಶೇ. ೪೪.೬೦ | ಶೇ. ೩೧.೮೮ | ಶೇ. ೫೬.೮೭ |

ಮೂಲ: ಸೆನ್ಸಸ್ ಆಫ್ ಇಂಡಿಯಾ, ೨೦೦೧, ಸಿರೀಸ್ ೩೦ ಕರ್ನಾಟಕ
(ದುಡಿಮೆಗಾರರ ಮತ್ತು ದುಡಿಮೆಗಾರರಲ್ಲದವರ ವಿವರಣೆ ಸಂಪುಟ)

ಅಖಿಲ ಭಾರತ ಮಟ್ಟದಲ್ಲಿ ಮಹಿಳೆಯರ ದುಡಿಮೆ ಸಹಭಾಗಿತ್ವ ಕೇವಲ ಶೇ. ೨೫.೬೬ ರಷ್ಟಿದೆ. ಆದರೆ ಪುರುಷರಿಗೆ ಸಂಬಂಧಿಸಿದಂತೆ ಇದು ಶೇ. ೫೧.೯೪ ಈ ವಿವರದ ಆಧಾರದ ಮೇಲೆ ಮಹಿಳೆಯರಲ್ಲಿ ದುಡಿಯದೆ ಇರುವವರು ಅಧಿಕವೆಂದು ತಿಳಿಯಬಾರದು. ಇಲ್ಲಿ ಬಳಸಿರುವ ದುಡಿಮೆಯ ವ್ಯಾಖ್ಯೆಯು ತುಂಬಾ ಸೀಮಿತವಾದುದಾಗಿದೆ. ಅವರ ಅನೇಕ ಬಗೆಯ ಗೃಹವಾರ್ತೆ ದುಡಿಮೆ, ಸಂಗೋಪನಾ ದುಡಿಮೆ, ಸ್ವಂತ ಹೊಲಗದ್ದೆಗಳಲ್ಲಿನ ದುಡಿಮೆ ರಾಷ್ಟ್ರೀಯ ವರಮಾನದ ಗಣನೆಗೆ ಒಳಗಾಗಿಲ್ಲ. ಇಷ್ಟಾದರೂ ಕರ್ನಾಟಕದಲ್ಲಿ ಮಹಿಳೆಯರ ದುಡಿಮೆ ಸಹಭಾಗಿತ್ವ ಪ್ರಮಾಣ ಶೇ. ೩೧.೮ರಷ್ಟಿದೆ. ಅಭಿವೃದ್ಧಿಯಲ್ಲಿ ಮಹಿಳೆಯರ ಪಾತ್ರವೆಷ್ಟು ಎಂಬುದರ ಒಂದು ಚಿತ್ರ ಮೇಲಿನ ವಿವರದಿಂದ ತಿಳಿದುಬರುತ್ತದೆ.

ಒಟ್ಟಂದದಲ್ಲಿ ಜ್ಞಾನಶಿಸ್ತುಗಳಲ್ಲಿನ ಪೂರ್ವಗ್ರಹಗಳಿಂದಾಗಿ ಮತ್ತು ಸಮಾಜದಲ್ಲಿ ಬೇರೂರಿರುವ ಪುರುಷಶಾಹಿ ವಿಚಾರ ಪ್ರಣಾಳಿಕೆಯಿಂದಾಗಿ ಮಹಿಳೆಯರು ಅಭಿವೃದ್ಧಿಯಲ್ಲಿ ನಿರ್ವಹಿಸುವ ಪಾತ್ರ, ಅವರ ದುಡಿಮೆ ಮತ್ತು ಅವರು ಅಭಿವೃದ್ಧಿಗೆ ನೀಡುವ ಕೊಡುಗೆ ನಿರ್ಲಕ್ಷ್ಯಕ್ಕೆ ಒಳಗಾಗಿದೆ. ಅದನ್ನು ಗುರುತಿಸುವ ಕೆಲಸವಾಗುತ್ತಿಲ್ಲ. ವಸ್ತುಸ್ಥಿತಿಯೆಂದರೆ ಅವರು ಅಭಿವೃದ್ಧಿಯಲ್ಲಿ, ದುಡಿಮೆಯಲ್ಲಿ ನಿರ್ವಹಿಸುತ್ತಿರುವ ಪಾತ್ರವು ಪುರುಷರಿಗೆ ಸಮವಾಗಿದೆ. ಅಗೋಚರವಾಗಿರುವ ಅವರ ದುಡಿಮೆಯನ್ನು ಮಾಪನ ಮಾಡಲು ಅಗತ್ಯವಾದ ಸಿದ್ಧಾಂತಗಳನ್ನು ರೂಪಿಸುವ ಅಗತ್ಯವಿದೆ. ಮಹಿಳೆಯರಿಗೆ ಸಂಬಂಧಿಸಿದಂತೆ ದುಡಿಮೆ ಮತ್ತು ಬಿಡುವುಗಳ ನಡುವೆ ಭಿನ್ನತೆಯಿದ್ದಂತೆ ಕಾಣುವುದಿಲ್ಲ.

ಸಾಂಸ್ಕೃತಿಕವಾಗಿ ಅವರನ್ನು ನಾಗರಿಕತೆಯ ಆರಂಭದಿಂದಲೂ ದುಡಿಮೆಯ, ಉತ್ಪಾದನೆಯ, ವಾಣಿಜ್ಯದ, ಸಾರ್ವಜನಿಕ ವ್ಯಾಪ್ತಿಯಿಂದ ಹೊರಗಿಡಲಾಗಿದೆ. ಈ ಬಗೆಯ ಪೂರ್ವಗ್ರಹ, ಅಪನಂಬಿಕೆಗಳನ್ನು ಒಡೆದು ಹಾಕಬೇಕಾಗಿದೆ.

### ೫.೩.೨. ಮಹಿಳಾ ದುಡಿಮೆಗಾರರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿ

ಮಹಿಳಾ ದುಡಿಮೆಗಾರರನ್ನು ಅಖಂಡ ಸಮೂಹವಾಗಿ ಪರಿಗಣಿಸುವುದು ಸಾಧ್ಯವಿಲ್ಲ. ಏಕೆಂದರೆ ಸಾಮಾಜಿಕ ಏಣಿಶ್ರೇಣಿಗಳಲ್ಲಿ ಮಹಿಳೆಯರು ವಿವಿಧ ವರ್ಗ, ಜಾತಿಗಳಿಗೆ ಸೇರಿದ್ದಾರೆ. ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡಗಳಿಗೆ ಸೇರಿದ ಮಹಿಳೆಯರ ಸ್ಥಿತಿಗತಿಗಳು ಉನ್ನತ ಜಾತಿವರ್ಗಗಳಿಗೆ ಸೇರಿದ ಮಹಿಳೆಯರಿಗಿಂತ ದುರ್ಬಲವಾಗಿರುವುದು ಸಾಧ್ಯ. ಇವೆರಡೂ ಅಲೆಗಳ ನಡುವೆ ಹಿಂದುಳಿದ ವರ್ಗಗಳಿಗೆ ಸೇರಿದ ಮಹಿಳೆಯರು ಕಂಡುಬರುತ್ತಾರೆ. ಕಳೆದ ೫೦ ವರ್ಷಗಳಲ್ಲಿ ಭಾರತದಲ್ಲಿ ಮಹಿಳೆಯರ ಆರ್ಥಿಕ ಸ್ಥಿತಿಗತಿಯು ಉತ್ತಮಗೊಂಡಿದೆ. ಅವರ ಆಯುರ್ಮಾನವು ೧೯೫೧ರಲ್ಲಿ ೪೫ ವರ್ಷಗಳಿದ್ದುದು ಇಂದು ೬೪ ವರ್ಷಗಳಿಗೆ ಏರಿಕೆಯಾಗಿದೆ. ಅವರು ಇಂದು ದೊಡ್ಡ ಪ್ರಮಾಣದಲ್ಲಿ ಉದ್ಯೋಗ ಕ್ಷೇತ್ರವನ್ನು ಪ್ರವೇಶಿಸುತ್ತಿದ್ದಾರೆ. ದುಡಿಮೆಯು ಇಂದು ಮಹಿಳೀಕರಣಕ್ಕೆ ಒಳಗಾಗಿದೆ. ರಾಜಕೀಯ ಕ್ಷೇತ್ರದಲ್ಲಿ ಅವರಿಗೆ ಪ್ರಾತಿನಿಧ್ಯ ನೀಡಲಾಗುತ್ತಿದೆ. ಮಹಿಳಾ ಚಳುವಳಿಯು

ಅವರಿಗೆ ಅನೇಕ ಅನುಕೂಲಗಳನ್ನು ತಂದುಕೊಟ್ಟಿದೆ. ಅವರ ಅಭಿವೃದ್ಧಿಯನ್ನು ನಿರ್ದಿಷ್ಟವಾಗಿ ಮಾಪನ ಮಾಡಲು ಲಿಂಗ ಸಂಬಂಧಿ ಅಭಿವೃದ್ಧಿ ಸೂಚ್ಯಂಕವನ್ನು (ಜಿಡಿಐ) ರೂಪಿಸಲಾಗಿದೆ. ಮಾನವ ಅಭಿವೃದ್ಧಿ ಸೂಚ್ಯಂಕದಲ್ಲೂ (ಎಚ್.ಡಿ.ಐ.) ಮಹಿಳೆಯರಿಗೆ ಸಮಾನ ಸ್ಥಾನಮಾನ ನೀಡಲಾಗಿದೆ. ಸರ್ಕಾರಗಳು ವಾರ್ಷಿಕವಾಗಿ ರೂಪಿಸುವ ಬಜೆಟ್ಟನ್ನು ಮಹಿಳೀಕರಣ ಗೊಳಿಸಲಾಗುತ್ತಿದೆ.

ಇಷ್ಟಾದರೂ ಮಹಿಳೆಯರ ಆರ್ಥಿಕ ಸಾಮಾಜಿಕ ಸ್ಥಿತಿಗತಿಗಳು ಪುರುಷ ಸ್ಥಿತಿಗತಿಗಳಿಗಿಂತ ಕೆಳಮಟ್ಟದಲ್ಲಿವೆ. ಲಿಂಗ ಅಸಮಾನತೆಯನ್ನು ತೊಡೆದು ಹಾಕುವುದು ಸಾಧ್ಯವಾಗಿಲ್ಲ. ಲಿಂಗ ತಾರತಮ್ಯವೆನ್ನುವುದು ಢಾಳಾಗಿ ಸಮಾಜದಲ್ಲಿ ಗೋಚರಿಸುತ್ತದೆ. ಲೋಕಸಭೆ ಮತ್ತು ವಿಧಾನಸಭೆಗಳಲ್ಲಿ ಮಹಿಳೆಯರಿಗೆ ಮೀಸಲಾತಿ ನೀಡುವುದು ಇನ್ನೂ ಸಾಧ್ಯವಾಗಿಲ್ಲ. ಮಹಿಳೆಯರ ಕಾರ್ಯವ್ಯಾಪ್ತಿಯು ಕುಟುಂಬಕ್ಕೆ ಮಾತ್ರ ಎಂಬ ನಂಬಿಕೆ ಪೂರ್ವಗ್ರಹ ಇನ್ನೂ ಸಮಾಜದಲ್ಲಿ ಗಟ್ಟಿಯಾಗಿದೆ.

ಮಹಿಳೆಯರ ಆರ್ಥಿಕ ಸಾಮಾಜಿಕ ಸ್ಥಿತಿಗತಿಗಳನ್ನು ಅನೇಕ ಸೂಚಿಗಳ ಆಧಾರದ ಮೇಲೆ ಗುರುತಿಸಬಹುದಾಗಿದೆ.

**ಅ. ಲಿಂಗ ಅನುಪಾತ : ಮಹಿಳೆಯರ ಕೊರತೆ**

ಈಗಾಗಲೆ ತಿಳಿಸಿರುವಂತೆ ಜನಸಂಖ್ಯೆಯಲ್ಲಿನ ಮಹಿಳೆಯರು ಮತ್ತು ಪುರುಷರ ಸಂಖ್ಯೆಗಳ ನಡುವೆ ಅನುಪಾತವೇ ಲಿಂಗ ಅನುಪಾತ. ಇದನ್ನು ಪ್ರತಿ ಸಾವಿರ ಪುರುಷರಿಗೆ ಎದುರಾಗಿರುವ ಮಹಿಳೆಯರ ಸಂಖ್ಯೆಯಲ್ಲಿ ಅಭಿವ್ಯಕ್ತಪಡಿಸಲಾಗುತ್ತದೆ. ಉದಾಹರಣೆಗೆ ೨೦೦೧ರಲ್ಲಿ ಭಾರತದ ಲಿಂಗ ಅನುಪಾತ ೯೩೩. ಕರ್ನಾಟಕದಲ್ಲಿ ಲಿಂಗ ಅನುಪಾತ ೯೬೪. ಅಂದರೆ ಅಖಿಲ ಭಾರತಮಟ್ಟದಲ್ಲಿ ಪ್ರತಿ ಸಾವಿರ ಪುರುಷರಿಗೆ ಎದುರಾಗಿ ೯೩೩ ಮಹಿಳೆಯರಿದ್ದಾರೆ ಮತ್ತು ಕರ್ನಾಟಕದಲ್ಲಿ ಪ್ರತಿಸಾವಿರ ಪುರುಷರಿಗೆ ಎದುರಾಗಿ ೯೬೪ ಮಹಿಳೆಯರಿದ್ದಾರೆ. ಅಖಿಲ ಭಾರತ ಮಟ್ಟದಲ್ಲಿ ಮಹಿಳೆಯರ ಕೊರತೆ ಪ್ರತಿ ಸಾವಿರ ಪುರುಷರಿಗೆ ೬೭ ಮತ್ತು ಕರ್ನಾಟಕದಲ್ಲಿ ಅದು ೩೬.

ಸರ್ವೆ ಸಾಮಾನ್ಯವಾಗಿ ಮಹಿಳೆಯರ ಮತ್ತು ಪುರುಷರ ಸ್ಥಿತಿಗತಿಗಳು ಸಮಾನವಾಗಿದ್ದರೆ ಲಿಂಗ ಅನುಪಾತವು ೧೦೦೦ವಿರಬೇಕು. ಭಾರತದಲ್ಲಿ ಅದು ೧೦೦೦ಕ್ಕಿಂತ ಕಡಿಮೆಯಿದೆ. ಇದು ಮಹಿಳೆಯರ ದುಸ್ಥಿತಿಯನ್ನು ಸೂಚಿಸುತ್ತದೆ. ಭಾರತದಲ್ಲಿ ಪ್ರತಿ ಸಾವಿರ ಪುರುಷರಿಗೆ ೬೭ ಮಹಿಳೆಯರು ಕಾಣೆಯಾಗಿಲ್ಲದೆ ಒಟ್ಟು ಜನಸಂಖ್ಯೆಯಲ್ಲಿ ಅವರ ಕೊರತೆ ೩.೫೫ ಕೋಟಿ. ಕರ್ನಾಟಕದಲ್ಲಿ ಮಹಿಳೆಯರ ಕೊರತೆ ೯.೭೯ ಲಕ್ಷ. ಅಮರ್ತ್ಯಸೇನ್ ಪ್ರಕಾರ ಲಿಂಗ ಅನುಪಾತವು ಸಾವಿರಕ್ಕಿಂತ ಕಡಿಮೆಯಿರುವುದು ಮಹಿಳೆಯರ ಅನುಭವಿಸುತ್ತಿರುವ ತಾರತಮ್ಯ ಮತ್ತು ದುಸ್ಥಿತಿಯ ಸೂಚಿಯಾಗಿದೆ.

ಭಾರತದ ೨೦೦೧ರ ಜನಗಣತಿಯು ಲಿಂಗ ಅನುಪಾತವು ೦-೬ ವರ್ಷಗಳ ವಯೋ ಗುಂಪಿನಲ್ಲೂ ಕಡಿಮೆಯಾಗುತ್ತಿರುವುದನ್ನು ತೋರಿಸಿಕೊಟ್ಟಿದೆ. ಭಾರತದಲ್ಲಿ ೦-೬ ವರ್ಷಗಳ

ವಯೋಮಾನದಲ್ಲಿ ೧೯೯೧ರಲ್ಲಿ ಲಿಂಗ ಅನುಪಾತ ೯೪೫ ಇದ್ದುದು ೨೦೦೧ರಲ್ಲಿ ಅದು ೯೪೫ಕ್ಕೆ ಕುಸಿದಿದೆ. ಇದು ಮಹಿಳೆಯರಿಗೆ ಸಂಬಂಧಿಸಿದಂತೆ ತುಂಬಾ ಆಘಾತಕಾರಿಯಾದ ಸಂಗತಿಯಾಗಿದೆ. ಭಾಗತದಲ್ಲಿ ಜನಸಂಖ್ಯೆ ಹೆಚ್ಚು ಪುರುಷಾಧಿಕ್ಯವಾಗಿ ಬೆಳೆಯುತ್ತಿದೆ. ಇದು ಅಭಿವೃದ್ಧಿಯ ದೃಷ್ಟಿಯಿಂದ ಅಪೇಕ್ಷಣೀಯ ಸಂಗತಿಯಲ್ಲ.

**ಆ. ಪ್ರಕೃತಿ ಮತ್ತು ಸಂಸ್ಕೃತಿ**

ಮಹಿಳೆಯರನ್ನು ಪ್ರಕೃತಿಗೆ ಸಂವಾದಿಯಾಗಿ ಮತ್ತು ಪುರುಷರನ್ನು ಸಂಸ್ಕೃತಿಗೆ ಸಂವಾದಿಯಾಗಿ ಪರಿಭಾವಿಸಿಕೊಳ್ಳುವುದು ರೂಢಿಯಲ್ಲಿದೆ. ಯಾವುದು ಪ್ರಕೃತಿಗೆ ಸಂಬಂಧಿಸಿದೆಯೋ ಅದು 'ಜೈವಿಕ' ಗುಣವನ್ನು ಹೊಂದಿರುತ್ತದೆ. ಆದರೆ ಸಂಸ್ಕೃತಿಯು ಸಾಮಾಜಿಕವಾದ ಮತ್ತು ಕಟ್ಟಿಕೊಂಡ ಒಂದು ಸಂಗತಿಯಾಗಿದೆ. ಪ್ರಕೃತಿಗೆ ಸಂವಾದಿಯಾದ ಮಹಿಳೆಯರ ಚಟುವಟಿಕೆಗಳು ಮನೆಯೊಳಗೆ ಇದ್ದರೆ ಸಂಸ್ಕೃತಿಗೆ ಸಂವಾದಿಯಾದ ಪುರುಷರ ಚಟುವಟಿಕೆಗಳು ಮನೆಯ ಹೊರಗೆ ಎಂದು ನಂಬಲಾಗಿದೆ.

ಯಾವುದು ಪ್ರಕೃತಿಗೆ ಸಂಬಂಧಿಸಿದೆಯೋ ಅದು ಕೀಳಾದುದೆಂದು ಮತ್ತು ಯಾವುದು ಸಂಸ್ಕೃತಿಗೆ ಸಂಬಂಧಿಸಿದೆಯೋ ಅದು ಜೇಷ್ಠವಾದುದೆಂದು ಭಾವಿಸಲಾಗಿದೆ. ಈ ಬಗೆಯ ಭಾವನೆಯಿಂದಾಗಿ ಮಹಿಳೆಯರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಯು ಅತ್ಯಂತ ಕಳೆಮಟ್ಟದಲ್ಲಿದೆ. ಲಿಂಗಸಂಬಂಧಿ ಶ್ರಮ ವಿಭಜನೆಯು ಪ್ರಕೃತಿ ಸಂಸ್ಕೃತಿ ಕುರಿತ ಚಿಂತನೆಯಲ್ಲಿದೆ. ಮಹಿಳೆಯರ ಕೆಲಸಗಳು ಇವು ಮತ್ತು ಪುರುಷರ ಕೆಲಸಗಳು ಇವು ಎಂದು ನಿರ್ದಿಷ್ಟಪಡಿಸಲಾಗಿದೆ. ಇದನ್ನು ಲಿಂಗ ಸಂಬಂಧಿ ಶ್ರಮ ವಿಭಜನೆಯೆಂದು ಕರೆಯಲಾಗಿದೆ. ಲಿಂಗಸಂಬಂಧಿ ಶ್ರಮವಿಭಜನೆಯು ಜೈವಿಕತೆಯನ್ನು ಆಧರಿಸಿದೆ.

ಜೈವಿಕ ನಿಯತಿ ಹಾಗೂ ಲಿಂಗ ಸಂಬಂಧಿ ಶ್ರಮ ವಿಭಜನೆಗಳು ಮಹಿಳೆಯರ ಆರ್ಥಿಕ ಮತ್ತು ಸಾಮಾಜಿಕ ದುಸ್ಥಿತಿಗೆ ಕಾರಣಗಳಾಗಿವೆ.

**ಇ. ಮೂರು ಬಗೆಯ ದುಡಿಮೆ**

ಲಿಂಗ ಸಂಬಂಧಿ ದೃಷ್ಟಿಕೋನದಿಂದ ಮಹಿಳೆಯರ ದುಡಿಮೆಯನ್ನು ಮೂರು ವಿಧಗಳಾಗಿ ವರ್ಗೀಕರಿಸಬಹುದು. ಮೊದಲನೆಯದಾಗಿ ಉತ್ಪಾದನಾ ದುಡಿಮೆ. ಮನೆಯೊಳಗೆ ಹಾಗೂ ಮನೆಯ ಹೊರಗೆ ಬೆವರನ್ನು ಹರಿಸಿ ಮಹಿಳೆಯರು ಉತ್ಪಾದನೆ ದುಡಿಮೆಯಲ್ಲಿ ನಿರತರಾಗಿರುವುದನ್ನು ಗುರುತಿಸಬಹುದಾಗಿದೆ. ಎರಡನೆಯದು ಕೌಟುಂಬಿಕ ದುಡಿಮೆ. ಇದನ್ನು ಮನೆಯೊಳಗಿನ ದುಡಿಮೆಯೆಂದು ಕರೆಯಬಹುದು. ಮೂರನೆಯದು ಸಂತಾನೋತ್ಪತ್ತಿ ದುಡಿಮೆ. ಇದು ಮಹಿಳೆಯರಿಗೆ ನಿರ್ದಿಷ್ಟವಾದ ದುಡಿಮೆಯಾಗಿದೆ. ಮಗುವೊಂದಕ್ಕೆ ಜನ್ಮ ನೀಡುವ, ರಕ್ತವನ್ನು ಹಂಚಿಕೊಳ್ಳುವ ಕ್ರಿಯೆಯೇ ಸಂತಾನೋತ್ಪತ್ತಿ ದುಡಿಮೆ. ಇದನ್ನು ಸಂಗೋಪನಾ ದುಡಿಮೆಯೆಂದು ಕರೆಯಬಹುದು.

ಮಹಿಳೆಯರು ಮೂರು ಬಗೆಯ ದುಡಿಮೆಯನ್ನು ನಿರ್ವಹಿಸುತ್ತಿದ್ದಾರೆ. ಆದರೆ ಪುರುಷರು ಕೇವಲ ಬೆವರು ಹರಸಿ ಉತ್ಪಾದನಾ ದುಡಿಮೆಯನ್ನು ಮಾತ್ರ ನಿರ್ವಹಿಸುತ್ತಿದ್ದಾರೆ. ಮೂರು ಬಗೆಯ ದುಡಿಮೆಯನ್ನು ಮಹಿಳೆಯರು ನಿರ್ವಹಿಸುತ್ತಿರುವುದರಿಂದ ಅವರ ದುಡಿಮೆಯ ಅವಧಿ ದಿನನಹಿ ಪುರುಷ ದುಡಿಮೆಯ ಅವಧಿಗಿಂತ ಅಧಿಕವಾಗಿರುತ್ತದೆ. ಮೂರೂ ಬಗೆಯ ದುಡಿಮೆಯನ್ನು ಮಹಿಳೆಯರು ನಿರ್ವಹಿಸುತ್ತಿರುವುದಕ್ಕೆ ಮುಖ್ಯ ಕಾರಣ ಲಿಂಗ ಸಂಬಂಧಿ ಶ್ರಮವಿಭಜನೆ. ಲಿಂಗಸಂಬಂಧಿ ಶ್ರಮವಿಭಜನೆ ಮಹಿಳೆಯರಿಗೆ ಅಘಾತಕಾರಿಯಾಗಿ ಪರಿಣಮಿಸಿದೆ.

**ಈ. ಇಬ್ಬಗೆಯ ಹೊಣೆಗಾರಿಕೆ**

ಮಹಿಳೆಯರು ಎರಡು ಬಗೆಯ ಹೊಣೆಗಾರಿಕೆಯನ್ನು ನಿರ್ವಹಿಸಬೇಕಾದ ಸನ್ನಿವೇಶವನ್ನು ಎದುರಿಸುತ್ತಿದ್ದಾರೆ. ಮೊದಲನೆಯದಾಗಿ ಕೌಟುಂಬಿಕ ಹೊಣೆಗಾರಿಕೆ. ಮಹಿಳೆಯಾಗಿ ಕುಟುಂಬದಲ್ಲಿ ಆಕೆಯು ನಿರ್ದಿಷ್ಟವಾಗಿ ನಿರ್ವಹಿಸಬೇಕಾದ ಅನೇಕ ಜವಾಬುದಾರಿಗಳಿವೆ. ಗೃಹಿಣಿಯಾಗಿ, ತಾಯಿಯಾಗಿ, ಹೆಂಡತಿಯಾಗಿ ಆಕೆಯು ಕುಟುಂಬದ ಹಿತಕಾಯಲು ದುಡಿಯಬೇಕಾಗುತ್ತದೆ. ಆಕೆಯ ದುಡಿಮೆಯ ಮೇಲೆ ಕುಟುಂಬದ ಏಳಿಗೆ ನಿಂತಿದೆ.

ಇಂದು ಅನೇಕ ಬದಲಾವಣೆಗಳ ಕಾರಣದಿಂದಾಗಿ ಮಹಿಳೆಯರು ಉದ್ಯೋಗ ಕ್ಷೇತ್ರವನ್ನು ಪ್ರವೇಶಿಸುತ್ತಿದ್ದಾರೆ. ಸಾಮಾಜಿಕವಾಗಿ ಅವರು ಪುರುಷರಿಗೆ ಸರಿಸಮವಾಗಿ ದುಡಿಯುತ್ತಿದ್ದಾರೆ. ಮನೆಯ ಹೊರಗೆ ಲಿಂಗ ಸಂಬಂಧಿ ಶ್ರಮ ವಿಭಜನೆಯ ಒತ್ತಡ ಕಡಿಮೆಯಾಗುತ್ತಿದೆ. ಉದ್ಯೋಗದ ಕ್ಷೇತ್ರದಲ್ಲಿ ಆಕೆಯ ದುಡಿಮೆಯು ಅನಿವಾರ್ಯವಾಗಿದೆ. ಮನೆಯ ಹೊರಗೆ ಪುರುಷರಿಗೆ ಸರಿಸಮವಾಗಿ ದುಡಿಯುತ್ತಿರುವ ಕಾರಣವಾಗಿ ಆಕೆಗೆ ಕೌಟುಂಬಿಕ ದುಡಿಮೆಯಿಂದ ವಿನಾಯಿತಿ ದೊರೆಯುವುದಿಲ್ಲ. ಏಕೆಂದರೆ ಕೌಟುಂಬಿಕ ದುಡಿಮೆಯನ್ನು ಮಹಿಳೆಗೆ ನಿರ್ದಿಷ್ಟಪಡಿಸಲಾಗಿದೆ. ಹೀಗಾಗಿ ಮಹಿಳೆಯರು ಮನೆಯೊಳಗೆ ಹಾಗೂ ಮನೆಯು ಹೊರಗೆ ಎರಡೂ ಕ್ಷೇತ್ರಗಳಲ್ಲಿ ದುಡಿಯಬೇಕಾದ ಪ್ರಮೇಯ ಬಂದಿದೆ. ಇದರಿಂದಾಗಿ ಯಾವುದೇ ಕ್ಷೇತ್ರದಲ್ಲಿ ಆಕೆ ದೊಡ್ಡ ಸಾಧನೆಯನ್ನು ಮಾಡಲಾರದ ಸ್ಥಿತಿಯಲ್ಲಿದ್ದಾರೆ. ಇಬ್ಬಗೆಯ ಹೊಣೆಗಾರಿಕೆಯಿಂದಾಗಿ ಅವಳು ದಿನವಹಿಪುರುಷನಿಗಿಂತ ಹೆಚ್ಚು ಗಂಟೆಗಳ ಕಾಲ ದುಡಿಯಬೇಕಾಗಿದೆ. ಇದರಿಂದ ಮಹಿಳೆಯರಿಗೆ ಉಂಟಾಗುತ್ತಿರುವ ಪರಿಣಾಮವನ್ನು ನಾವು ಊಹಿಸಕೊಳ್ಳಬಹುದಾಗಿದೆ.

**ಉ. ಅಸಂಘಟಿತ ವಲಯದಲ್ಲಿ ಮಹಿಳೆಯರ ದುಡಿಮೆ**

ಮಹಿಳೆಯರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳು ಕೆಳಮಟ್ಟದಲ್ಲಿರಲು ಮುಖ್ಯ ಕಾರಣವೆಂದರೆ ಅವಳು ಸಾಮಾನ್ಯವಾಗಿ ಅಸಂಘಟಿತ ವಲಯದಲ್ಲಿ ದುಡಿಯುತ್ತಿರುತ್ತಾಳೆ. ಮಹಿಳೆಯರ ಉದ್ಯೋಗದ ಸ್ಥಿತಿಗತಿಯನ್ನು ಅಧ್ಯಯನ ಮಾಡಲು ಸರ್ಕಾರವು ನೇಮಿಸಿದ್ದ ಸಮಿತಿ ೧೯೮೮ರಲ್ಲಿ ಪ್ರಕಟಿಸಿರುವ ಶ್ರಮಶಕ್ತ ವರದಿಯಲ್ಲಿ ಮನೆಯ ಹೊರಗೆ ದುಡಿಯುವ

ಮಹಿಳೆಯರಲ್ಲಿ ಶೇ. ೯೦ರಷ್ಟು ಅಸಂಘಟಿತ ವಲಯದಲ್ಲಿದ್ದಾರೆ ಎಂಬುದು ತಿಳಿದುಬಂದಿದೆ. ಇದರಿಂದಾಗಿ ಕಾರ್ಮಿಕರಿಗೆ ದೊರೆಯಬೇಕಾದ ಯಾವುದೆ ವಿಮಾ ಸೌಲಭ್ಯ, ಆರೋಗ್ಯ ಸೌಲಭ್ಯ ಅವರಿಗೆ ದೊರೆಯುತ್ತಿಲ್ಲ. ಅಸಂಘಟಿತ ವಲಯದಲ್ಲಿ ಮಹಿಳೆಯರು ಅನೇಕ ಬಗೆಯ ಶೋಷಣೆಗೆ ಒಳಗಾಗುತ್ತಿದ್ದಾರೆ. ಅವರು ಪಡೆಯುವ ಕೂಲಿಯು ಕನಿಷ್ಟತಮವಾಗಿದೆ. ಇಲ್ಲಿ ಉದ್ಯೋಗವು ಹಂಗಾಮಿಯಾದುದಾಗಿದೆ.

ಮಹಿಳೆಯರ ದುಡಿಮೆ ಮತ್ತು ಗಳಿಕೆಗಳನ್ನು ಪ್ರಾಸಂಗಿಕವೆಂದು ಪರಿಭಾವಿಸಿ ಕೊಂಡಿರುವುದರಿಂದ ಹಾಗೂ ಅವಳು ಗಳಿಸುವ ವರಮಾನವು ಕೇವಲ ಪೂರಕ ಸ್ವರೂಪ ದ್ದಾಗಿರುವುದರಿಂದ ಅವರು ಹೆಚ್ಚಾಗಿ ಅಸಂಘಟಿತ ವಲಯದಲ್ಲಿ ನೆಲೆ ನಿಂತಿದ್ದಾರೆ. ಈ ವಲಯದಲ್ಲಿ ಮಹಿಳೆಯರು ಪಡೆಯುವ ಕೂಲಿಸಂಭಾವನೆ ಕನಿಷ್ಟವಾಗಿರುತ್ತದೆ. ದಿನವಹಿ ಹೆಚ್ಚು ಗಂಟೆಗಳ ಕಾಲ ದುಡಿಯಬೇಕಾಗುತ್ತದೆ. ಮಹಿಳೆಯರು ಅಸಂಘಟಿತ ವಲಯದಲ್ಲಿ ಅಧಿಕವಾಗಿ ನೆಲೆ ನಿಂತಿರುವುದರಿಂದ ಅವರ ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳು ದುರ್ಬಲವಾಗಿವೆ.

**ಉ. ದುಸ್ಥಿತಿಗಳು**

ಮಹಿಳೆಯರು ಅನೇಕ ಬಗೆಯದುದು ಸ್ಥಿತಿಗಳಿಗೆ ಒಳಗಾಗಿದ್ದಾರೆ.

**೧. ಆರೋಗ್ಯ ದುಸ್ಥಿತಿ**

ನಮ್ಮ ಸಮಾಜದ ಸಂದರ್ಭದಲ್ಲಿ ೩೦ ರಿಂದ ೩೫ ವರ್ಷದವರೆಗೆ ಮಹಿಳೆಯರ ಮರಣ ಪ್ರಮಾಣವು ಪುರುಷರ ಮರಣ ಪ್ರಮಾಣಕ್ಕಿಂತ ಅಧಿಕವಾಗಿದೆ. ಶಿಶುಮರಣ ಪ್ರಮಾಣಕ್ಕೆ ಸಂಬಂದಿಸಿದಂತೆಯೂ ಹೆಣ್ಣುಶಿಶುಗಳ ಮರಣ ಪ್ರಮಾಣವು ಗಂಡುಶಿಶುಗಳ ಮರಣ ಪ್ರಮಾಣಕ್ಕಿಂತ ಅಧಿಕವಾಗಿದೆ. ಹೆರಿಗೆ ಸಂದರ್ಭದಲ್ಲಿ ಸಂಭವಿಸುವ ತಾಯಂದಿರ ಸಾವು ಅಧಿಕ. ವೈದ್ಯರನ್ನು ಮತ್ತು ಆಸ್ಪತ್ರೆಗಳನ್ನು ಮಹಿಳೆಯರು ಭೇಟಿ ಮಾಡುವುದು ಕಡಿಮೆ. ಲಿಂಗ ಅನುಪಾತವು ಮಹಿಳೆಯರಿಗೆ ವಿರೋಧವಾಗಿದೆ. ಇವೆಲ್ಲವೂ ಮಹಿಳೆಯರ ಆರೋಗ್ಯ ಸ್ಥಿತಿಗತಿಯು ಪುರುಷರ ಆರೋಗ್ಯ ಸ್ಥಿತಿಗತಿಗಿಂತ ಕೆಳಮಟ್ಟದಲ್ಲಿರುವುದನ್ನು ಸೂಚಿಸುತ್ತವೆ.

ಮಹಿಳೆಯರ ಆರೋಗ್ಯವನ್ನು ವಿಶೇಷವಾಗಿ ನಿರ್ವಹಿಸುವ ವ್ಯವಸ್ಥೆ ನಮ್ಮ ದೇಶದಲ್ಲಿಲ್ಲ. ಇಂದಿಗೂ ಅರ್ಧಕ್ಕಿಂತ ಹೆಚ್ಚು ಹೆರಿಗೆಗಳು ತರಬೇತಿ ಪಡೆಯದ ದಾದಿಯ ರಿಂದ ಮನೆಗಳಲ್ಲಿ ನಡೆಯುತ್ತವೆ. ಸರ್ಕಾರವು ಮಹಿಳೆಯರನ್ನು ಕೇವಲ ಕುಟುಂಬ ಯೋಜನೆಗೆ ಸಂಬಂಧಿಸಿದ ಶಸ್ತ್ರ ಕ್ರಿಯೆಗೆ ಮಾತ್ರ ಬಳಸಿಕೊಳ್ಳುತ್ತಿದೆ. ಹೀಗೆ ಮಹಿಳೆಯರು ಆರೋಗ್ಯಕ್ಕೆ ಸಂಬಂಧಿಸಿದ ದುಸ್ಥಿತಿಯಿಂದ ನರಳುತ್ತಿದ್ದಾರೆ.

**೨. ಅಕ್ಷರ ದುಸ್ಥಿತಿ**

ಮಹಿಳೆಯರ ಸಾಕ್ಷರತಾ ಪ್ರಮಾಣವು ಪುರುಷರ ಸಾಕ್ಷರತಾ ಪ್ರಮಾಣಕ್ಕಿಂತ ಕಡಿಮೆಯಿದೆ. ಇದು ಅಕ್ಷರ ದುಸ್ಥಿತಿಯು ಸೂಚಿಯಾಗಿದೆ. ಮಹಿಳೆಯರ ಶಿಕ್ಷಣವನ್ನು

ಪುರುಷರ ಶಿಕ್ಷಣದಷ್ಟು ಮಹತ್ವವಾದುದೆಂದು ಸಮಾಜವು ಪರಿಗಣಿಸಲ್ಲ. ಇದರಿಂದಾಗಿ ಮಹಿಳೆಯರ ಸಾಕ್ಷರತಾ ಪ್ರಮಾಣವು ಪುರುಷರ ಸಾಕ್ಷರತಾ ಪ್ರಮಾಣಕ್ಕಿಂತ ಕಡಿಮೆಯಿದೆ.

**ಮಹಿಳೆಯರ ಮತ್ತು ಪುರುಷರ ಸಾಕ್ಷರತೆ ೨೦೦೧**

**ಕೋಷ್ಟಕ ೫.೩.೨.**

| ದೇಶ ಪ್ರದೇಶ | | ಸಾಕ್ಷರತಾ ಪ್ರಮಾಣ | | |
|---|---|---|---|---|
| | ಒಟ್ಟು | ಮಹಿಳೆಯರು | ಪುರುಷರು | ಅಂತರ |
| ಭಾರತ | | ಶೇ. ೫೪.೧೬ | ಶೇ. ೭೫.೮೫ | ಶೇ. ೩೧.೬೯ ಅಂಶಗಳು |
| ಕರ್ನಾಟಕ | ಶೇ. ೬೭.೦೪ | ಶೇ. ೫೭.೪೫ | ಶೇ. ೭೬.೨೯ | ಶೇ.೧೮.೮೪ ಅಂಶಗಳು |

ಕೋಷ್ಟಕ ೫.೩ರಲ್ಲಿ ಮಹಿಳೆಯರ ಸಾಕ್ಷರತೆಯು ಪುರುಷರ ಸಾಕ್ಷರತೆಗಿಂತ ಎಷ್ಟು ಕಡಿಮೆಯಿದೆ ಎಂಬುದನ್ನು ತೋರಿಸಿದೆ. ಇದೇ ರೀತಿ ಶಾಲೆಯನ್ನು ಮಧ್ಯದಲ್ಲಿ ತ್ಯಜಿಸುವ ಮಕ್ಕಳಲ್ಲಿ ಹೆಣ್ಣುಮಕ್ಕಳ ಪ್ರಮಾಣವು ಗಂಡುಮಕ್ಕಳ ಪ್ರಮಾಣಕ್ಕಿಂತ ಅಧಿಕವಾಗಿದೆ.

**೯. ಆಹಾರ ಅಭದ್ರತೆ**

ಆಹಾರ ಅಭದ್ರತೆಯು ಬಡವರನ್ನು ಕಾಡುತ್ತಿದೆ. ಆದರೆ ಈ ಅಭದ್ರತೆಯ ಪರಿಣಾಮ ಮಹಿಳೆಯರ ಮೇಲೆ ಅಧಿಕವಾಗಿದೆ. ಬಡ ಕುಟುಂಬಗಳಲ್ಲಿ ಮಹಿಳೆಯರ ದುಡಿಮೆಯು ನಿರ್ಣಾಯಕವಾದುದಾಗಿರುತ್ತದೆ. ಬಡತನವು ತೀವ್ರಗೊಂಡಂತೆ ಅದರ ನಿರ್ವಹಣೆಯ ಜವಾಬುದಾರಿಯು ಮಹಿಳೆಯರ ಮೇಲೆ ಬೀಳುತ್ತದೆ. ಇದನ್ನು 'ಬಡತನದ ಮಹಿಳೀಕರಣ'ವೆಂದು ಕರೆಯಲಾಗಿದೆ.

ಆಹಾರ ಅಭದ್ರತೆಯ ಬಹುಮುಖ್ಯ ಪರಿಣಾಮವೆಂದರೆ ಅಪೌಷ್ಟಿಕತೆ. ಮಹಿಳೆಯರು ತೀವ್ರ ಅಪೌಷ್ಟಕತೆಯಿಂದ ನರಳುತ್ತಿದ್ದಾರೆ. ಕುಟುಂಬದೊಳಗೆ ಆಹಾರ ಸೇವನೆ ಹಾಗೂ ವಿತರಣೆಯಲ್ಲಿ ಮಹಿಳೆಯರು ಮತ್ತು ಪುರುಷರು ನಡುವೆ ಅಸಮಾನತೆಯಿದೆ. ಮನೆಯಲ್ಲಿ ಸಾಂಪ್ರದಾಯಿಕವಾಗಿ ಪುರುಷರೆಲ್ಲ ಊಟ ಮಾಡಿದ ನಂತರ ಮಹಿಳೆಯರು ಆಹಾರ ಸೇವನೆ ಮಾಡಬೇಕಾದ ಸಂಗತಿಯಿದೆ.

ಸಾರ್ವಜನಿಕ ವಿತರಣೆ ವ್ಯವಸ್ಥೆಯಿಂದ ನಿಯಮಿತವಾಗಿ ಆಹಾರ ಪದಾರ್ಥಗಳು ಬಡವರಿಗೆ ದೊರೆಯುತ್ತಿಲ್ಲ. ಇದರ ಪರಿಣಾಮವು ಮಹಿಳೆಯರ ಮೇಲೆ ತೀವ್ರವಾಗಿರುತ್ತದೆ. ಕರ್ನಾಟಕದಲ್ಲಿ ಆಹಾರ ಅಭದ್ರತೆಯಿಂದ ನರಳುತ್ತಿರುವವರ ಸಂಖ್ಯೆ ೬೨.೦೯ ಲಕ್ಷ. ಇವರಲ್ಲಿ ಮಹಿಳೆಯರ ಪ್ರಮಾಣ ಶೇ. ೫೮.೧೯. ದಿನಗೂಲಿ ದುಡಿಮೆಗಾರರೆಲ್ಲರೂ ಆಹಾರ ಅಭದ್ರತೆಯಿಂದ ನರಳುತ್ತಿದ್ದಾರೆ.

ಹೀಗೆ ಮಹಿಳೆಯರು ಅನೇಕ ಬಗೆಯ ದುಸ್ಥಿತಿಯಿಂದ ನರಳುತ್ತಿದ್ದಾರೆ.

**೧೦. ಲಿಂಗ ಅಸಮಾನತೆ**

ಲಿಂಗ ಅಸಮಾನತೆಯೆಂಬುದು ಅನೇಕ ರೂಪಗಳಲ್ಲಿ ಕಂಡುಬರುತ್ತದೆ. ಈಗಾಗಲೆ

ತಿಳಿಸಿರುವಂತೆ ಮಹಿಳೆಯರ ಸಾಕ್ಷರತಾ ಪ್ರಮಾಣವು ಪುರುಷರು ಸಾಕ್ಷರತಾ ಪ್ರಮಾಣಕ್ಕಿಂತ ಕಡಿಮೆಯಿದೆ. ಮಹಿಳೆಯಿಂದ ಕೂಲಿ ಪುರುಷರ ಕೂಲಿಗಿಂತ ಕಡಿಮೆ. ಅಸಂಘಟಿತ ವಲಯದಲ್ಲಿ ದುಡಿಯುವವರಲ್ಲಿ ಮಹಿಳೆಯರ ಪ್ರಮಾಣವು ಅಧಿಕ. ಲಿಂಗ ಅನುಪಾತವು ಮಹಿಳೆಯರಿಗೆ ವಿರೋಧವಾಗಿದೆ. ಎಳೆಯ ಹಾಗೂ ಹರೆಯ ವಯೋಮಾನದಲ್ಲಿ ಮಹಿಳೆಯರ ಪ್ರಾತಿನಿಧ್ಯವು ಅತ್ಯಂತ ಕಡಿಮೆಯಿದೆ. ಸಂಘಟಿತ ಉದ್ಯೋಗಗಳಲ್ಲಿ ಮಹಿಳೆಯರ ಪ್ರಮಾಣವು ಕನಿಷ್ಟತಮವಾಗಿದೆ.

### ೫.೩.೪. ಕೂಲಿಯಲ್ಲಿನ ವ್ಯತ್ಯಯಗಳು

ವೃತ್ತಿ-ವೃತ್ತಿಗಳ ನಡುವೆ, ಪ್ರದೇಶ-ಪ್ರದೇಶಗಳ ನಡುವೆ ದುಡಿಮೆಗಾರರ ಕೂಲಿಯಲ್ಲಿ ವ್ಯತ್ಯಾಸಗಳು ಕಂಡುಬರುತ್ತವೆ. ಇದನ್ನು ಅರ್ಥ ಮಾಡಿಕೊಳ್ಳಬಹುದು. ಆದರೆ ಒಂದು ವೃತ್ತಿಯೊಳಗೆ, ಪ್ರದೇಶದೊಳಗೆ ಪುರುಷ-ಮಹಿಳಾ ದುಡಿಮೆಗಾರರ ಕೂಲಿಯಲ್ಲಿನ ವ್ಯತ್ಯಾಸವನ್ನು ಅರ್ಥ ಮಾಡಿಕೊಳ್ಳುವುದು ಕಷ್ಟ. ಒಂದೇ ಬಗೆಯ ಕೆಲಸದಲ್ಲಿ ನಿರತರಾಗಿದ್ದರೂ ಮಹಿಳೆಯರು ಮತ್ತು ಪುರುಷರ ಕೂಲಿಯಲ್ಲಿ ವ್ಯತ್ಯಾಸಗಳು ಯಾಕೆ ಉಂಟಾಗುತ್ತವೆ? ಈ ಕೂಲಿ/ವೇತನ ಸಂಬಂಧಿ ವ್ಯತ್ಯಯವನ್ನು ಅರ್ಥ ಮಾಡಿಕೊಳ್ಳುವುದು ಹೇಗೆ? ಇದನ್ನು ತಾರತಮ್ಯದ ಸೂಚಿಯೆಂದು ಕರೆಯಬಹುದೆ?

ಗ್ರಾಮೀಣ ಪ್ರದೇಶದಲ್ಲಿ, ಕೃಷಿ ಚಟುವಟಿಕೆಗಳಲ್ಲಿ ಮಹಿಳೆ-ಪುರುಷರ ನಡುವೆ ಕೂಲಿಯಲ್ಲಿನ ವ್ಯತ್ಯಾಸಗಳು ಸ್ಪಷ್ಟವಾಗಿ ಕಂಡುಬರುತ್ತವೆ. ನಗರ ಪ್ರದೇಶಗಳಲ್ಲಿ, ಕೈಗಾರಿಕೆಗಳಲ್ಲಿ ಒಂದೇ ಬಗೆಯ ಕೆಲಸಕ್ಕೆ ಸಂಬಂಧಿಸಿದಂತೆ ಕೂಲಿಯಲ್ಲಿ ವ್ಯತ್ಯಾಸಗಳಿರುವುದಿಲ್ಲ. ಆದರೆ ಇಲ್ಲಿ ಮಹಿಳೆಯರು ಕೇವಲ ಕೆಳಮಟ್ಟದ ಹುದ್ದೆಗಳಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ. ಸೇವಾ ಕ್ಷೇತ್ರದಲ್ಲಿಯೂ ಮಹಿಳೆಯರು ಕೆಳಮಟ್ಟದ ಹುದ್ದೆಗಳಲ್ಲಿ ಕಂಡುಬರುತ್ತಾರೆ. ಉನ್ನತ ಮಟ್ಟದ ಹುದ್ದೆಗಳಲ್ಲಿ ಮಹಿಳೆಯರ ಪ್ರಮಾಣ ತುಂಬಾ ಕಡಿಮೆ. ಇದರಿಂದಾಗಿ ಮಹಿಳೆಯರು ಮತ್ತು ಪುರುಷರ ನಡುವೆ ವರಮಾನಕ್ಕೆ ಸಂಬಂಧಿಸಿದಂತೆ ವ್ಯತ್ಯಾಸಗಳು ಕಂಡುಬರುತ್ತವೆ.

ಅಸಂಘಟಿತ/ಅನೌಪಚಾರಿಕ ವಲಯದಲ್ಲಿ ಮಹಿಳೆಯರು ಮತ್ತು ಪುರುಷರ ಕೂಲಿ ವರಮಾನದಲ್ಲಿ ತೀವ್ರ ವ್ಯತ್ಯಯಗಳು ಕಂಡುಬರುತ್ತವೆ. ಇಲ್ಲಿ ಮುಖ್ಯವಾಗಿ ನಾವು ಪರಿಗಣಿಸಬೇಕಾದ ಸಂಗತಿಯೆಂದರೆ ಇಲ್ಲಿ ಕೆಲಸದಿಂದ ದುಡಿಮೆಗಾರರನ್ನು ತೆಗೆದುಹಾಕುವ ಸಂದರ್ಭ ಬಂದರೆ ಮೊದಲು ಮಹಿಳಾ ಕಾರ್ಮಿಕರನ್ನು ತೆಗೆದು ಹಾಕಲಾಗುತ್ತದೆ. ಇದರಿಂದಾಗಿಯೂ ಮಹಿಳೆಯರು ಕೂಲಿ ವರಮಾನಕ್ಕೆ ಸಂಬಂಧಿಸಿದ ತಾರತಮ್ಯದಿಂದ ನರಳುತ್ತಿದ್ದಾರೆ. ಪುರುಷರಿಗಿಂತ ಮಹಿಳಾ ಕಾರ್ಮಿಕರು ಎದುರಿಸುವ ಕೂಲಿ ಅಭದ್ರತೆಯು ತೀವ್ರವಾದುದಾಗಿದೆ.

ಬಡ ಕುಟುಂಬಗಳಿಗೆ ಸಂಬಂಧಿಸಿದಂತೆ, ಬಡ ಕೂಲಿಗಾರರಿಗೆ ಸಂಬಂಧಿಸಿದಂತೆ ಅವರು ಪುರಷರಿರಲಿ ಅಥವಾ ಮಹಿಳೆಯರಿರಲಿ, ಕೂಲಿಯ ತುಂಬಾ ಕೆಳಮಟ್ಟದಲ್ಲಿರುವುದನ್ನು

ಗುರುತಿಸಬಹುದಾಗಿದೆ. ಇದು ಸಮಸ್ಯೆಯ ಒಂದು ಮುಖವಾಗಿದೆ. ಇಂತಹ ಸಮಸ್ಯೆಗಳಲ್ಲಿ ತೀವ್ರ ಆಘಾತ ಅನುಭವಿಸುವವರು ಮಹಿಳಾ ದುಡಿಮೆಗಾರರಾಗಿದ್ದಾರೆ.

**ಯಾಕೆ ಇಂತಹ ವ್ಯತ್ಯಯಗಳಿವೆ?**

ಇದಕ್ಕೆ ಅನೇಕ ಕಾರಣಗಳನ್ನು ನೀಡಬಹುದಾಗಿದೆ. ಕೆಲವು ಕಾರಣಗಳನ್ನು ಇಲ್ಲಿ ಪಟ್ಟಿ ಮಾಡಲಾಗಿದೆ.

೧. ಮಹಿಳೆಯರನ್ನು ಸಮಾಜದಲ್ಲಿ ಗೃಹಿಣಿಯರೆಂದು ಪರಿಗಣಿಸಲಾಗುತ್ತದೆ ವಿನಾ ದುಡಿಮೆಗಾರರೆಂದಲ್ಲ. ಮಹಿಳೆಯರ ದುಡಿಮೆಯು ಕೇವಲ ಆನುಷಂಗಿಕವಾದುದು. ದುಡಿಮೆಯು ಅವರ ಬದುಕಿನ ಅವಿಭಾಜ್ಯ ಅಂಗವಲ್ಲ. ಈ ಕಾರಣದಿಂದಾಗಿ ಮಹಿಳೆಯರಿಗೆ ಕಡಿಮೆ ಕೂಲಿ ನಿಗದಿಯಾಗುವುದನ್ನು ಕಾಣಬಹುದು.

೨. ಮಹಿಳೆಯರು ಕೂಲಿ-ವೇತನದ ರೂಪದಲ್ಲಿ ಗಳಿಸುವುದು ಕುಟುಂಬದ ದೃಷ್ಟಿಯಿಂದ ಪೂರಕ ಗಳಿಕೆಯೇ ವಿನಾ ಪ್ರಧಾನ ಗಳಿಕೆಯಲ್ಲ. ಮಹಿಳೆಯರನ್ನು 'ಬ್ರೆಡ್‌ವಿನ್ನರ್ಸ್' ಎಂದು ಸಮಾಜ ಪರಿಗಣಿಸುವುದಿಲ್ಲ. ಇದರಿಂದಾಗಿ ಮಹಿಳಾ ಕೂಲಿಕಾರರಿಗೆ ಎಷ್ಟು ಕೊಟ್ಟರೂ ನಡೆಯುತ್ತದೆ ಎಂಬ ಧೋರಣೆ ಸಮಾಜದಲ್ಲಿ ನೆಲೆಗೊಂಡಿದೆ.

೩. ಮಾನವ ಬಂಡವಾಳದ ದೃಷ್ಟಿಯಿಂದ ಮಹಿಳಾ ದುಡಿಮೆಗಾರರಿಗೂ ಮತ್ತು ಪುರುಷ ದುಡಿಮೆಗಾರರಿಗೂ ನಡುವೆ ಅನೇಕ ವ್ಯತ್ಯಾಸಗಳನ್ನು ಗುರುತಿಸಬಹುದು. ಸಾಕ್ಷರತೆ, ಉನ್ನತ ಶಿಕ್ಷಣ, ವೃತ್ತಿ ಸಂಬಂಧಿ ತರಬೇತಿ ಮುಂತಾದ ಸಂಗತಿಗಳಲ್ಲಿ ಮಹಿಳೆಯರ ಸ್ಥಾನಮಾನವು ಪುರುಷರ ಸ್ಥಾನಮಾನಕ್ಕಿಂತ ಕಡಿಮೆ. ಇದರಿಂದಾಗಿಯೂ ಅವರ ಕೂಲಿ ಪ್ರಮಾಣ ಕಡಿಮೆಯಿದೆ.

೪. ಸಂಚಾರ-ಸಂಚಲನೆಗೆ ಸಂಬಂಧಿಸಿದಂತೆ ಮಹಿಳೆಯರು ಪುರುಷರಿಗಿಂತ ತೀವ್ರ ತರವಾದ ಅಡಚಣೆ ಎದುರಿಸುತ್ತಿದ್ದಾರೆ. ಗೃಹವಾರ್ತೆ ಒತ್ತಡದಿಂದಾಗಿ, ಕುಟುಂಬದ ಜವಾಬುದಾರಿಯಿಂದಾಗಿ ಮಹಿಳೆಯರು ತಮ್ಮ ಮನೆಯಿಂದ ದೂರ, ಊರಿನಿಂದ ದೂರ ಕೆಲಸ ಹುಡುಕಿಕೊಂಡು ಹೋಗುವುದು ಸಾಧ್ಯವಿಲ್ಲ. ಕೂಲಿಯು ಎಷ್ಟೇ ಕಡಿಮೆಯಾದರೂ ಪರವಾಗಿಲ್ಲ ಮನೆಯ ಬಳಿ, ಊರಿನಲ್ಲೇ ದೊರೆಯುವ ಕೂಲಿಯನ್ನು ಅವರು ಆಯ್ಕೆ ಮಾಡಿಕೊಳ್ಳುತ್ತಾರೆ. ಅಂದರೆ ಮಹಿಳಾ ದುಡಿಮೆಗಾರರಿಗೆ ದುಡಿಮೆ ಕೂಲಿಗಳನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯವಿಲ್ಲ.

೫. ಇಬ್ಬಗೆಯ ಹೊಣೆಗಾರಿಕೆಯಿಂದಾಗಿ ವೃತ್ತಿ ಸಂಬಂಧಿ ಕ್ಷೇತ್ರಗಳಲ್ಲಿ ಮಹಿಳೆಯರು ಉನ್ನತ ಹುದ್ದೆಗಳಿಗೆ ಬಡ್ತಿ ಪಡೆಯುವ ಸಾಧ್ಯತೆ ಕಡಿಮೆ. ತಾವು ಆರಂಭದಲ್ಲಿ ಯಾವ ಹುದ್ದೆಗೆ ಸೇರಿಕೊಂಡಿರುತ್ತಾರೋ ಅದೇ ಹುದ್ದೆಯಲ್ಲಿ ಜೀವನಪೂರ್ತಿ ದುಡಿಯುವುದನ್ನು ಕಾಣಬಹುದು. ಇದರಿಂದಾಗಿ ಮಹಿಳೆಯರು ಮತ್ತು ಪುರುಷರು ವರಮಾನದಲ್ಲಿ ವ್ಯತ್ಯಾಸವನ್ನು ಕಾಣಬಹುದಾಗಿದೆ.

೫.೩.೫. ಕೂಲಿಯೇತರ / ಕೂಲಿರಹಿತ ದುಡಿಮೆ

ಮಹಿಳೆಯರ ದುಡಿಮೆಗೆ ಸಂಬಂಧಿಸಿದಂತೆ ತುಂಬಾ ಸಂಕೀರ್ಣವಾದ ಸಂಗತಿಯೆಂದರೆ ಮಹಿಳೆಯರು ಮಾಡುವ ಅನೇಕ ಕೆಲಸಗಳಿಗೆ ಸಂಭಾವನೆ ಇರುವುದಿಲ್ಲ. ಅವರ ಅನೇಕ ದುಡಿಮೆಗೆ ಯಾರೂ ಕೂಲಿ ನೀಡುವುದಿಲ್ಲ. ಈ ಕಾರಣಕ್ಕೆ ಅವರನ್ನು ದುಡಿಮೆಗಾರರೆಂದು ಪರಿಗಣಿಸಲು ಜ್ಞಾನಶಿಸ್ತುಗಳು ಸಿದ್ಧವಿಲ್ಲ. ಪುರುಷರು ಮಾಡುವ ಕೆಲವು ಕೆಲಸಗಳಿಗೆ ಸಂಭಾವನೆ ಇರುವುದಿಲ್ಲ. ಆದರೆ ಮಹಿಳೆಯರಿಗೆ ಸಂಬಂಧಿಸಿದಂತೆ ಕೂಲಿರಹಿತ ಅಥವಾ ಸಂಭಾವನೆರಹಿತ ದುಡಿಮೆ ಪ್ರಮಾಣವು ಪುರುಷರ ದುಡಿಮೆಗೆ ಹೋಲಿಸಿದರೆ ಅಧಿಕವಾಗಿದೆ. ಯುಎನ್‌ಡಿಪಿಯು ಪ್ರಕಟಿಸಿರುವ ೧೯೯೫ರ ಮಾನವ ಅಭಿವೃದ್ಧಿ ವರದಿಯಲ್ಲಿ ಈ ಬಗ್ಗೆ ಕುತೂಹಲಕಾರಿ ಸಂಗತಿಗಳನ್ನು ಬೆಳಕಿಗೆ ತಂದಿದೆ.

ವಿಶ್ವದ ೩೧ ಆಯ್ದ ದೇಶಗಳಿಗೆ ಸಂಬಂಧಿಸಿದಂತೆ ದುಡಿಮೆ ಕುರಿತಂತೆ ನಡೆಸಿದ ಅಧ್ಯಯನದ ಪ್ರಕಾರ ಪ್ರತಿ ದೇಶದ ಒಟ್ಟು ದುಡಿಮೆಯಲ್ಲಿ ಮಹಿಳೆಯರು ಶೇ. ೫೩ರಷ್ಟನ್ನು ಅಭಿವೃದ್ಧಿಶೀಲ ದೇಶಗಳಲ್ಲಿ ನಿಭಾಯಿಸುತ್ತಿದ್ದರೆ ಶೇ. ೫೧ರಷ್ಟನ್ನು ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ನಿಭಾಯಿಸುತ್ತಿದ್ದಾರೆ.

ಅಭಿವೃದ್ಧಿ ಹೊಂದಿದ ದೇಶಗಳಲ್ಲಿ ಪುರುಷರ ದುಡಿಮೆಯಲ್ಲಿ ಮೂರನೆಯ ಎರಡರಷ್ಟು ಸಂಭಾವನೆ ಸಹಿತವಾಗಿದ್ದರೆ ಉಳಿದ ಮೂರನೆಯ ಒಂದರಷ್ಟು ಸಂಭಾವನೆ ರಹಿತ ವಾದುದಾಗಿದೆ.

ಆದರೆ ಮಹಿಳೆಯರ ದುಡಿಮೆಯಲ್ಲಿ ಮೂರನೆಯ ಒಂದರಷ್ಟು ಸಂಭಾವನೆ ಸಹಿತವಾಗಿದ್ದರೆ ಮೂರನೆಯ ಎರಡರಷ್ಟು ಸಂಭಾವನೆರಹಿತವಾಗಿದೆ.

ಹಿಂದುಳಿದ ದೇಶಗಳಲ್ಲಿ ಪುರುಷರ ದುಡಿಮೆಯಲ್ಲಿ ನಾಲ್ಕನೆಯ ಒಂದರಷ್ಟು ಸಂಭಾವನೆರಹಿತವಾಗಿದ್ದರೆ ಮಹಿಳೆಯರ ದುಡಿಮೆಯಲ್ಲಿ ನಾಲ್ಕನೆಯ ಮೂರರಷ್ಟು ಸಂಭಾವನೆರಹಿತವಾಗಿದೆ.

ಈ ಕಾರಣದಿಂದಾಗಿ ವರಮಾನದಲ್ಲಿ ಸಿಂಹಪಾಲನ್ನು ಪುರುಷರು ಪಡೆದುಕೊಂಡು ಬಿಡುತ್ತಾರೆ ಮತ್ತು ಅವರ ಆರ್ಥಿಕ ಕಾಣಿಕೆಯೆಂದು ಗುರುತಿಸಲ್ಪಡುತ್ತದೆ. ಆದರೆ ಮಹಿಳೆಯರ ದುಡಿಮೆಯಲ್ಲಿ ಮೂರು ಮುಕ್ಕಾಲು ವೀಸೆ ಪಾಲು ಸಂಭಾವನೆರಹಿತವಾಗಿರುತ್ತದೆ, ಮೌಲ್ಯರಹಿತವಾಗಿರುತ್ತದೆ ಮತ್ತು ಅವರ ಕೊಡುಗೆ ಅಗೋಚರವಾಗುಳಿದುಬಿಡುತ್ತದೆ.

ಈ ಬಗೆಯ ಸಂಭಾವನಾರಹಿತ / ಕೂಲಿರಹಿತ ದುಡಿಮೆಯಲ್ಲಿ ತೊಡಗಿರುವುದರಿಂದ ಮಹಿಳೆಯರ ಆರ್ಥಿಕ ಕೊಡುಗೆ ನಿರ್ಲಕ್ಷ್ಯಕ್ಕೆ ಒಳಗಾಗಿಬಿಟ್ಟಿದೆ.

ಮಹಿಳೆಯರ ಗೃಹವಾರ್ತೆ ದುಡಿಮೆಯ ಆರ್ಥಿಕ ಸಾಮಾಜಿಕ ಮಹತ್ವವನ್ನು ಜ್ಞಾನಶಿಸ್ತುಗಳು ಗುರುತಿಸುವುದರಲ್ಲಿ ಸೋತಿವೆ. ಮನೆಗೆಲಸದಲ್ಲಿ ಕೂಲಿಯಾಳುಗಳಾಗಿ ದುಡಿಯುವ ಮಹಿಳೆಯರಿಗೆ ಕೂಲಿಯನ್ನು ಅನೇಕ ಸಂದರ್ಭಗಳಲ್ಲಿ ವಸ್ತುರೂಪದಲ್ಲಿ ನೀಡಲಾಗುತ್ತದೆ.

ಇದರಿಂದಾಗಿ ಅವರು ಶೋಷಣೆಗೆ ಒಳಗಾಗಿದ್ದಾರೆ. ಮನೆಗೆಲಸದಲ್ಲಿ ಕೂಲಿಯಾಳುಗಳಾಗಿ ದುಡಿಮೆಯ ದುಡಿಮೆಗಾರರನ್ನು ಸರ್ಕಾರವು ಕಾರ್ಮಿಕರೆಂದು ಪರಿಗಣಿಸುತ್ತಿಲ್ಲ.

ದುಡಿಮೆಯನ್ನು ಮಾರ್ಕೆಟ್ ಕೇಂದ್ರಿತವಾಗಿ ನಿರ್ವಚಿಸುವುದರಿಂದ ಮಹಿಳಾ ದುಡಿಮೆಗಾರರಿಗೆ ಅನ್ಯಾಯವಾಗುತ್ತಿದೆ. ಮಾರ್ಕೆಟ್ಟೇತರ ದುಡಿಮೆ, ಅಂದರೆ ಗೃಹವಾರ್ತೆ ಮತ್ತು ಮನೆಗೆಲಸದಾಳುಗಳ ದುಡಿಮೆಯು ದುಡಿಮೆಯ ವ್ಯಾಖ್ಯೆಗೆ ಒಳಪಡುವುದಿಲ್ಲ. ದುಡಿಮೆ ಕುರಿತ ನಿರ್ವಚನದ ವ್ಯಾಪ್ತಿಯನ್ನು ವಿಸ್ತೃತಗೊಳಿಸುವ ಅಗತ್ಯವಿದೆ. ಮಹಿಳೆಯರ ದುಡಿಮೆಯನ್ನು ರಾಷ್ಟ್ರೀಯ ವರಮಾನದ ಗಣನೆಯಲ್ಲಿ ಸೇರಿಸಿಕೊಳ್ಳುವ ಬಗ್ಗೆ ಕ್ರಮ ತೆಗೆದುಕೊಳ್ಳಬೇಕಾದ ಅಗತ್ಯವಿದೆ. ಮನೆಯಲ್ಲಿ ಅಡುಗೆ ಮಾಡಲು ಕೂಲಿಯರನ್ನು ನೇಮಿಸಿಕೊಂಡರೆ ಅದು ದುಡಿಮೆ. ಆದರೆ ಅದೇ ಕೆಲಸವನ್ನು ಗೃಹಣಿ ಮಾಡಿದರೆ ಅದು ದುಡಿಮೆಯಲ್ಲ! ಇದು ಅನ್ಯಾಯ. ಇಂತಹ ಅನ್ಯಾಯವನ್ನು ಸರಿಪಡಿಸುವ ದಿಶೆಯಲ್ಲಿ ಯೋಚಿಸಬೇಕಾಗಿದೆ.

### ೫.೩.೬. ದುಡಿಮೆ ಸಹಭಾಗಿತ್ವ ಪ್ರಮಾಣ

ಇದರ ಬಗ್ಗೆ ಹಿಂದೆ ಚರ್ಚೆ ಮಾಡಲಾಗಿದೆ. ಇಲ್ಲಿ ಇದರ ಬಗ್ಗೆ ವಿವರವಾಗಿ ಚರ್ಚೆ ಮಾಡಬಹುದಾಗಿದೆ.

ಒಂದು ದೇಶದ ಒಟ್ಟು ಜನಸಂಖ್ಯೆಯಲ್ಲಿ ೧೫ ರಿಂದ ೬೦ ವರ್ಷದೊಳಗಿನ ದುಡಿಮೆಗಾರರ ಪ್ರಮಾಣವನ್ನು ದುಡಿಮೆ ಸಹಭಾಗಿತ್ವ ಪ್ರಮಾಣವೆಂದು ಕರೆಯಲಾಗಿದೆ.

$$\text{ದುಡಿಮೆ ಸಹಭಾಗಿತ್ವ ಪ್ರಮಾಣ} = \frac{\text{ದುಡಿಮೆಗಾರರ ಪ್ರಮಾಣ}}{\text{ಒಟ್ಟು ಜನಸಂಖ್ಯೆ}} \times ೧೦೦$$

ಈ ಪ್ರಮಾಣವನ್ನು ಮಹಿಳೆಯರಿಗೆ ಮತ್ತು ಪುರುಷರಿಗೆ ಪ್ರತ್ಯೇಕವಾಗಿ ಗಣನೆ ಮಾಡಬಹುದು.

$$\text{ಪುರುಷರ ದುಡಿಮೆ ಸಹಭಾಗಿತ್ವ ಪ್ರಮಾಣ} = \frac{\text{ಪುರುಷ ದುಡಿಮೆಗಾರರ ಪ್ರಮಾಣ}}{\text{ಒಟ್ಟು ಪುರುಷರ ಜನಸಂಖ್ಯೆ}} \times ೧೦೦$$

$$\text{ಮಹಿಳೆಯರ ದುಡಿಮೆ ಸಹಭಾಗಿತ್ವ ಪ್ರಮಾಣ} = \frac{\text{ಮಹಿಳಾ ದುಡಿಮೆಗಾರರ ಪ್ರಮಾಣ}}{\text{ಒಟ್ಟು ಮಹಿಳೆಯರ ಜನಸಂಖ್ಯೆ}} \times ೧೦೦$$

ಈ ಹಿಂದೆ ತಿಳಿಸಿರುವಂತೆ ೨೦೦೧ರ ಜನಗಣತಿ ಪ್ರಕಾರ ಮಹಿಳೆಯರ ದುಡಿಮೆ ಸಹಭಾಗಿತ್ವ ಪ್ರಮಾಣ ಶೇ. ೨೫.೬೭ ರಷ್ಟಾದರೆ ಪುರುಷರ ದುಡಿಮೆ ಸಹಭಾಗಿತ್ವ ಪ್ರಮಾಣ ಶೇ. ೫೧.೯೪. ಮಹಿಳೆಯರ ದುಡಿಮೆ ಸಹಭಾಗಿತ್ವ ಪ್ರಮಾಣವು ೧೯೭೧ರಲ್ಲಿ ಶೇ. ೧೪.೨ರಷ್ಟಿತ್ತು. ಪುರುಷರ ದುಡಿಮೆ ಸಹಭಾಗಿತ್ವ ಪ್ರಮಾಣಕ್ಕಿಂತ ಮಹಿಳೆಯರ ಸಹಭಾಗಿತ್ವ ಪ್ರಮಾಣವು ಕಡಿಮೆಯಿರಲು ಅನೇಕ ಕಾರಣಗಳಿವೆ. ಕೆಲವನ್ನು ಇಲ್ಲಿ ಪಟ್ಟಿ ಮಾಡಲಾಗಿದೆ.

೧. ದುಡಿಮೆಯ ಸೀಮಿತ ನಿರ್ವಚನ
೨. ದುಡಿಮೆಯ ಪುರುಷಶಾಹಿ ನಿರ್ವಚನ
೩. ಮಹಿಳೆಯರ ಗೃಹವಾರ್ತೆಯನ್ನು ದುಡಿಮೆಯೆಂದು ಪರಿಗಣಿಸದಿರುವುದು.
೪. ಮಹಿಳೆಯರು ಅನೇಕ ಕೆಲಸಗಳನ್ನು ಏಕಕಾಲದಲ್ಲಿ ಮಾಡುವುದು.
೫. ಮಹಿಳೆಯರ ಸಂಭಾವನಾರಹಿತ ದುಡಿಮೆಯು ಪುರುಷರ ಸಂಭಾವನಾರಹಿತ ದುಡಿಮೆಗಿಂತ ಅಧಿಕವಿರುವುದು.
೬. ಮಹಿಳೆಯರನ್ನು ದುಡಿಮೆಗಾರರೆಂದು ಪರಿಗಣಿಸದಿರುವುದು.
೭. ಮಹಿಳೆಯರ ದುಡಿಮೆಯ ಮಾಪನಕ್ಕೆ ಅಗತ್ಯವಾದ ಸೂತ್ರಗಳಿಲ್ಲದಿರುವುದು.
೮. ಅಭಿವೃದ್ಧಿಯನ್ನು ಲಿಂಗ ನಿರಪೇಕ್ಷ ನೆಲೆಯಲ್ಲಿ ಪರಿಭಾವಿಸಿಕೊಂಡಿರುವುದು.
೯. ಮಹಿಳೆಯರ ದುಡಿಮೆಯನ್ನು ಆನುಷಂಗಿಕವೆಂದು, ಪೂರಕವಾದುದೆಂದು ಪರಿಗಣಿಸುವುದು.
೧೦. ಮಹಿಳೆಯರ ದುಡಿಮೆಯ ಅಪಮೌಲ್ಯ.

**ಮಹಿಳಾ ಸಬಲೀಕರಣ ಕಾರ್ಯಕ್ರಮಗಳು**

ಮಹಿಳೆಯರ ಆರ್ಥಿಕ ಸಾಮಾಜಿಕ ಸ್ಥಿತಿಗತಿಯನ್ನು ಉತ್ತಮಪಡಿಸುವ ದಿಶೆಯಲ್ಲಿ ಸರ್ಕಾರಗಳು ಅನೇಕ ಬಗೆಯ ಕ್ರಮಗಳನ್ನು ಕೈಗೊಂಡಿವೆ. ಕೇಂದ್ರ ಸರ್ಕಾರ ಹಾಗೂ ರಾಜ್ಯ ಸರ್ಕಾರಗಳು ಲಿಂಗ ಸಮಾನತೆ ಸಾಧಿಸುವ ಉದ್ದೇಶದ ಅನೇಕ ಕಾರ್ಯಕ್ರಮಗಳನ್ನು ಜಾರಿಗೊಳಿಸಿವೆ. ಮಹಿಳಾ ಸಬಲೀಕರಣ ಕಾರ್ಯಕ್ರಮಗಳು ರೂಪುಗೊಳ್ಳುವ ಹಿನ್ನೆಲೆಯಲ್ಲಿ ಮಹಿಳಾ ಸಂಘಟನೆಗಳ ಹಾಗೂ ಮಹಿಳಾ ಹೋರಾಟದ ಪಾತ್ರ ಮುಖ್ಯವಾದುದಾಗಿದೆ. ಈ ಕಾರಣಕ್ಕೆ ನೈಲಾ ಕಬೀರ್ ಅವರು ಸಬಲೀಕರಣ ಸಿದ್ಧಾಂತವು ಮಹಿಳಾ ಸಂಘಟನೆಗಳು ನಡೆಸಿದ ಹೋರಾಟದ ಒಂದು ಫಲವೆಂದು ಹೇಳಿದ್ದಾರೆ. ವಾಸ್ತವವಾಗಿ ಮಹಿಳೆಯರನ್ನು ಸಂಘಟಿಸುವ ಪರಿಯನ್ನೇ ಸಬಲೀಕರಣವೆಂದು ಕರೆಯಬಹುದು.

ಸರ್ಕಾರವು ಮಹಿಳೆಯರಿಗೆ ಸಂಬಂಧಿಸಿದಂತೆ ಹಮ್ಮಿಕೊಂಡಿರುವ ಕಾರ್ಯಕ್ರಮಗಳನ್ನು ಸಬಲೀಕರಣ ಕಾರ್ಯಕ್ರಮಗಳೆಂದು ಕರೆಯುವುದು ರೂಢಿಯಲ್ಲಿದೆ. ಇದು ಸರಿಯಲ್ಲ. ಏಕೆಂದರೆ ಸರ್ಕಾರದ ಅನೇಕ ಮಹಿಳಾ ಅಭಿವೃದ್ಧಿ ಕಾರ್ಯಕ್ರಮಗಳು 'ಕಲ್ಯಾಣವಾದಿ' ನೆಲೆಯಿಂದ ರೂಪುಗೊಂಡಿರುತ್ತವೆ. ಅವುಗಳನ್ನು ಸಬಲೀಕರಣ ಕಾರ್ಯಕ್ರಮಗಳೆಂದು ಕರೆಯುವುದು ಸಾಧ್ಯವಿಲ್ಲ. ಸಂಘರ್ಷವನ್ನು ಒಳಗೊಂಡ ಕಾರ್ಯಕ್ರಮಗಳು ಮಾತ್ರ ಸಬಲೀಕರಣ ಕಾರ್ಯಕ್ರಮಗಳೆನಿಸಿಕೊಳ್ಳಬಲ್ಲವು. ಯಾವ ಕಾರ್ಯಕ್ರಮಗಳು ಮಹಿಳೆಯರ 'ಅಧಿಕಾರ'ವನ್ನು ಹೆಚ್ಚಿಸುತ್ತವೆಯೋ ಮತ್ತು ಪುರುಷರ ಅಧಿಕಾರವನ್ನು ಕಡಿತಗೊಳಿಸುತ್ತವೆಯೇ ಅವುಗಳನ್ನು ಮಾತ್ರ ಸಬಲೀಕರಣ ಕಾರ್ಯಕ್ರಮಗಳೆಂದು ಕರೆಯಬಹುದು.

ಕರ್ನಾಟಕದಲ್ಲಿ 'ಸ್ತ್ರೀಶಕ್ತಿ', ಮಹಿಳಾ ಸ್ವಸಹಾಯ ಗುಂಪುಗಳನ್ನು ಸಬಲೀಕರಣ

ಕಾರ್ಯಕ್ರಮಗಳೆಂದು ಗುರುತಿಸಲಾಗುತ್ತಿದೆ. ಇಲ್ಲಿ ಸಬಲೀಕರಣವನ್ನು ಸ್ವಾವಲಂಬನೆಗೆ ಗುರುತಿಸಲಾಗುತ್ತದೆ. ಇಲ್ಲಿ ಸಬಲೀಕರಣವನ್ನು ಸ್ವಾವಲಂಬನೆಗೆ ತಳುಕು ಹಾಕಲಾಗಿದೆ. ಮಹಿಳೆಯರು ಸ್ವಾವಲಂಬಿಗಳಾಗಬೇಕೆಂಬುದು ನಿಜ. ಆದರೆ ಸ್ವಾವಲಂಬನೆಯು ಸಬಲೀಕರಣವೆನ್ನಿಸಿಕೊಳ್ಳುವುದಿಲ್ಲ. ಏಕೆಂದರೆ ಸ್ವಾವಲಂಬಿನೆಯು ಮಹಿಳೆಯರ ಸ್ಥಿತಿಗತಿಯನ್ನು ಉತ್ತಮಪಡಿಸಬಹುದು. ಆದರೆ ಸಮಸ್ಯೆಯಿರುವುದು ಮಹಿಳೆಯರ ಸ್ಥಾನಮಾನಕ್ಕೆ ಸಂಬಂಧಿಸಿದಂತೆ ಎಂಬುದು ಮುಖ್ಯ. ಮಹಿಳೆಯರಿಗೆ ಸ್ವಸಹಾಯ ಗುಂಪುಗಳು ಶೇರು. ಆದರೆ ಅವು 'ಸಬಲೀಕರಣ' ಪ್ರಕ್ರಿಯೆಯನ್ನು ಉಂಟು ಮಾಡುತ್ತವೆಯೆಂದು ಹೇಳಲು ಬರುವುದಿಲ್ಲ.

ಅಸ್ತಿತ್ವದಲ್ಲಿರುವ ಲಿಂಗ ಸಂಬಂಧಗಳ ನೆಲೆಯಲ್ಲಿ ಬದಲಾವಣೆಗಳಾಗಬೇಕು. 'ಪುರುಷಶಾಹಿ'ಯನ್ನು ಎದುರಿಸಬೇಕು. ಎಲ್ಲಿಯವರೆಗೆ ಪುರುಷ ಪ್ರಧಾನತೆಯನ್ನು ತೆಗೆದು ಹಾಕಲಾಗುವುದಿಲ್ಲವೋ ಅಲ್ಲಿಯವರೆಗೆ ಮಹಿಳಾ ಸಬಲೀಕರಣ ಸಾಧ್ಯವಾಗುವುದಿಲ್ಲ.

ಮಹಿಳೆಯರಿಗೆ ಆಸ್ತಿ ಮಾಲಿಕತ್ವದ ಹಕ್ಕು ಪ್ರಾಪ್ತವಾಗಬೇಕು. ಅದು ಸಬಲೀಕರಣ ಕಾರ್ಯಕ್ರಮ.

ಮಹಿಳೆಯರ ಜೊತೆ ಪುರುಷರು ಗೃಹವಾರ್ತೆಯನ್ನು ಹಂಚಿಕೊಳ್ಳಬೇಕು. ಅದು ಸಬಲೀಕರಣ.

ಸಮಾಜದಲ್ಲಿ ಲಿಂಗ ಅನುಪಾತವು ಉತ್ತಮಗೊಳ್ಳಬೇಕು. ಅದು ಸಬಲೀಕರಣ.

ಸಮಾಜದಲ್ಲಿ ಹೆಣ್ಣು ಭ್ರೂಣ ಹತ್ಯೆ ನಿಲ್ಲಬೇಕು. ಅದು ಸಬಲೀಕರಣ.

**ಮಹಿಳಾ ಸ್ವಸಹಾಯ ಗುಂಪುಗಳು**

ಸ್ವಸಹಾಯ ಗುಂಪುಗಳನ್ನು ಸಂಕ್ಷಿಪ್ತವಾಗಿ ಎಸ್.ಎಚ್.ಜಿ.ಗಳೆಂದು ಕರೆಯಲಾಗಿದೆ. ಇದನ್ನು ಮಹಿಳಾ ಸಬಲೀಕರಣ ಕಾರ್ಯಕ್ರಮವೆಂದೂ ಬಣ್ಣಿಸಲಾಗಿದೆ. ಮಹಿಳಾ ಸ್ವಸಹಾಯ ಗುಂಪುಗಳ ಮುಖ್ಯ ಉದ್ದೇಶ ಮಹಿಳೆಯರನ್ನು ಸ್ವಾವಲಂಬಿಗಳನ್ನಾಗಿ ಮಾಡುವುದಾಗಿದೆ. ಮಹಿಳೆಯರಿಗೆ ತಮ್ಮದೇ ಆದ ಆದಾಯದ ಮೂಲವಿರಬೇಕು ಎಂಬುದು ಇಲ್ಲಿನ ಮುಖ್ಯ ಸಂಗತಿಯಾಗಿದೆ. ಮಹಿಳೆಯರು ತಮ್ಮ ಕಾಲ ಮೇಲೆ ತಾವು ನಿಲ್ಲುವಂತಾಗಬೇಕು ಎಂಬುದು ಎಸ್.ಎಚ್.ಜಿ.ಗಳ ಒಂದು ಉದ್ದೇಶವಾಗಿದೆ.

ಎಸ್.ಎಚ್.ಜಿ.ಗಳಿಂದಾಗಿ ಮಹಿಳೆಯರು ಮನೆಯಿಂದ ಹೊರಗೆ ಬರುವಂತಾಗಿದೆ. ಅವರು ಹಣಕಾಸು ವ್ಯವಹಾರವನ್ನು ನಡೆಸುವಂತಾಗಿದೆ. ಅವರು ಬ್ಯಾಂಕುಗಳ ಜೊತೆ ವ್ಯವಹರಿಸುತ್ತಿದ್ದಾರೆ. ಇವೆಲ್ಲ ತುಂಬ ಸ್ವಾಗತಾರ್ಹವಾದ ಸಂಗತಿಗಳಾಗಿವೆ. ಕರ್ನಾಟಕದಲ್ಲಿ ಲಕ್ಷಾಂತರ ಸ್ವಸಹಾಯ ಗುಂಪುಗಳು ಇಂದು ಕ್ರಿಯಾಶೀಲವಾಗಿವೆ. ಅವು ಕೋಟಿಗಟ್ಟಲೆ ಹಣವನ್ನು ಉಳಿತಾಯ ಮಾಡಿವೆ. ಸಾವಿರಾರು ಮಹಿಳೆಯರಿಗೆ ಉದ್ಯೋಗವನ್ನು ಅವು ಒದಗಿಸಿಕೊಟ್ಟಿವೆ.

### ಎಸ್.ಎಚ್.ಜಿ.ಗಳ ರಚನೆ

ಗ್ರಾಮೀಣ ಪ್ರದೇಶದಲ್ಲಿ ಇಪ್ಪತ್ತು ಮಹಿಳೆಯರು ಸೇರಿ ಎಸ್.ಎಚ್.ಜಿ. ಆರಂಭಿಸಬಹುದು. ಇಪ್ಪತ್ತು ಸದಸ್ಯರಲ್ಲಿ ಒಬ್ಬರನ್ನು ಪ್ರಧಾನ ಕಾರ್ಯಕರ್ತೆಯೆಂದು ಗುರುತಿಸಲಾಗುತ್ತದೆ. ಒಂದು ಎಸ್.ಎಚ್.ಜಿ.ಯ ಸದಸ್ಯರೆಲ್ಲವೂ ವಾರಕ್ಕೊಮ್ಮೆ ಸಭೆ ಸೇರಬೇಕು. ವಾರಕ್ಕೊಮ್ಮೆ ನಡೆಯುವ ಸಭೆಯಲ್ಲಿ ಸದಸ್ಯರು ತಮ್ಮ ಸದಸ್ಯತ್ವ ಕಂತನ್ನು ನೀಡಬೇಕು. ಸದಸ್ಯರ ಒಟ್ಟಿಗೆ ಮಾಡಿದ ಹಣದಿಂದ ಅಗತ್ಯವಿರುವ ಮಹಿಳೆಯರಿಗೆ ಸಾಲ ನೀಡಲಾಗುತ್ತದೆ.

ಮಹಿಳಾ ಸ್ವಸಹಾಯ ಗುಂಪುಗಳಿಗೆ ಸರ್ಕಾರವು ಆವರ್ತನಿಧಿಯಾಗಿ ರೂ. ೫,೦೦೦ ನೀಡುತ್ತದೆ. ಎಸ್.ಎಚ್.ಜಿ.ಗಳು ತಮ್ಮ ಗುಂಪಿನ ಖಾತೆಯನ್ನು ಬ್ಯಾಂಕಿನಲ್ಲಿ ತೆರೆಯಬೇಕು. ಬ್ಯಾಂಕುಗಳು ಗುಂಪಿಗೆ ಸಾಲ ನೀಡುತ್ತವೆ. ಇಲ್ಲಿ ಬ್ಯಾಂಕುಗಳು ವ್ಯಕ್ತಿಗೆ ಸಾಲ ನೀಡುವುದಕ್ಕೆ ಪ್ರತಿಯಾಗಿ ಗುಂಪಿಗೆ ಸಾಲ ನೀಡುತ್ತವೆ. ಸಾಲವನ್ನು ವಾಪಸ್ಸು ಮಾಡುವ ಜವಾಬುದಾರಿ ಗುಂಪಿನ ಎಲ್ಲ ಸದಸ್ಯರಿದ್ದಾಗಿರುತ್ತದೆ. ಇದರಿಂದ ಬ್ಯಾಂಕುಗಳಿಗೆ ಭದ್ರತೆ ಒದಗುತ್ತದೆ.

ಗುಂಪುಗಳು ತಾವು ಸದಸ್ಯರಿಗೆ ನೀಡುವ ಸಾಲದ ಮೇಲೆ ಬಡ್ಡಿ ವಿಧಿಸುತ್ತವೆ. ಗುಂಪು ದುಡಿದ ಬಡ್ಡಿಯು ಗುಂಪಿನ ಆದಾಯವಾಗುತ್ತದೆ. ಗುಂಪಿನ ಸದಸ್ಯರೆಲ್ಲರೂ ವಾರಕ್ಕೊಮ್ಮೆ ಸಭೆ ಸೇರುತ್ತಾರೆ. ವಾರದ ಸಭೆಯಲ್ಲಿ ಗುಂಪಿನ ಉಳಿತಾಯ ಹಾಗೂ ಬಡ್ಡಿಯ ಲೆಕ್ಕಾಚಾರದ ಜೊತೆ ಯಾರಿಗೆ ಸಾಲ ನೀಡಬೇಕು ಎಂಬುದನ್ನು ತೀರ್ಮಾನಿಸಲಾಗುತ್ತದೆ. ಇದಕ್ಕಿಂತ ಮುಖ್ಯವಾಗಿ ವಾರದ ಸಭೆಗಳಲ್ಲಿ ಗುಂಪಿನ ಹಣಕಾಸು ಲೆಕ್ಕಾಚಾರದ ಜೊತೆಯಲ್ಲಿ ಸದಸ್ಯರ ಕೌಟುಂಬಿಕ ಸಮಸ್ಯೆ, ಸಾಮಾಜಿಕ ಸಮಸ್ಯೆಗಳನ್ನು ಚರ್ಚಿಸುವ ಅಗತ್ಯವಿದೆ. ಗ್ರಾಮದಲ್ಲಿನ ಮಹಿಳೆಯರ ಅಗತ್ಯಗಳು, ಸಮಸ್ಯೆಗಳು ಇಲ್ಲಿ ಚರ್ಚೆಗೆ ವಸ್ತುವಾಗಬೇಕು.

ಎಸ್.ಎಚ್.ಜಿ.ಗಳು ಕೇವಲ ಉಳಿತಾಯ ಮಾಡುವ ಗುಂಪುಗಳಾಗದೆ ಸಬಲೀಕರಣ ಗುಂಪುಗಳಾಗಬೇಕು. ಸಮಾಜದಲ್ಲಿ ನಡೆಯುವ ಲಿಂಗ ತಾರತಮ್ಯ, ಮಹಿಳೆಯರ ಮೇಲಿನ ಹಿಂಸೆಯ ವಿರುದ್ಧ ಹೋರಾಟ ಮಾಡುವ ಸಂಘಟನೆಗಳಾಗಬೇಕು. ಎಸ್.ಎಚ್.ಜಿ.ಗಳು ಇಂದು ಜಿಲ್ಲಾಮಟ್ಟದಲ್ಲಿ ಹಾಗೂ ರಾಜ್ಯ ಮಟ್ಟದಲ್ಲಿ ಒಕ್ಕೂಟ ರಚಿಸಿಕೊಳ್ಳುತ್ತಿವೆ. ಬ್ಯಾಂಕುಗಳು ಮತ್ತು ಸರ್ಕಾರಿ ಇಲಾಖೆಗಳು ಎಸ್.ಎಚ್.ಜಿ.ಗಳಿಗೆ ಬೆಂಬಲವಾಗಿ ನಿಂತಿವೆ. ಸಬಲೀಕರಣದ ದಿಶೆಯಲ್ಲಿ ಎಸ್.ಎಚ್.ಜಿ.ಗಳು ಕೇವಲ ಆರಂಭವೆನ್ನುವುದನ್ನು ನಾವು ನೆನಪಿನಲ್ಲಿಟ್ಟುಕೊಳ್ಳಬೇಕು.

### ಪಾರಿಭಾಷಿಕ ಪದಕೋಶ

ಲಿಂಗ ನಿರಪೇಕ್ಷತೆ - Gender Neutrality

ಜ್ಞಾನ ಶಿಸ್ತು - Discipline

ಜೈವಿಕ ಘಟಕ - Biological Unit

ಲಿಂಗ ತಾರತಮ್ಯ - Gender Discrimination

ಲಿಂಗ ಅನುಪಾತ - Sex ratio
ಸಬಲೀಕರಣ - Empowerment
ಸಂತಾನೋತ್ಪತ್ತಿ - Reproduction
ಕಾಲಬಳಕೆ ಅಧ್ಯಯನ - Time use study
ಅವಕಾಶ - Space
ಸಂಗೋಪನೆ - Care taking (Nurfusing)
ಅಗೋಚರ - Invisible
ಮಾನವ ಅಭಿವೃದ್ಧಿ ವರದಿ - Human Development Report
ದುಡಿಮೆ ದಿನಗಳು - Man days
ಮಹಿಳೆಯರ ದುಡಿಮೆ ಸಹಭಾಗಿತ್ವ ಪ್ರಮಾಣ - Female work participation Rates
ಪುರುಷಶಾಹಿ - Patriarchy
ದುಡಿಮೆಯ ಮಹಿಳೀಕರಣ - Feminisation of Labour
ಆಯುರ್ಮಾನ - Expectation of Life
ಲಿಂಗ ಸಂಬಂಧಿ ಅಭಿವೃದ್ಧಿ ಸೂಚ್ಯಂಕ - Gender related development Index (GDI)
ಗೃಹಿಣೀಕರಣ - House Wifisation
ಕೂಲಿ - Wage
ವೇತನ - Salary
ತಾರತಮ್ಯ - Discrimanation
ಅಸಂಘಟಿತ - Un organised
ಅನೌಪಚಾರಿಕ - Informal
ಅಭದ್ರತೆ - Insecurity
ಮಾನವ ಬಂಡವಾಳ - Human Capital
ಕೂಲಿರಹಿತ ದುಡಿಮೆ - Unpaid Work
(ಸಂಭಾವನೆರಹಿತ ದುಡಿಮೆ)
ಕೈಗಾರಿಕಾ ಕಾರ್ಮಿಕರು - Industrial Workers
ಖಾಸಗಿ ಕ್ಷೇತ್ರ - private sector
ಸಾರ್ವಜನಿಕ ಕ್ಷೇತ್ರ - Public sector
ಕಾರ್ಮಿಕ ಸಂಘಗಳು - Labour (Workers) Unions
ಕಾರ್ಮಿಕ ಕ್ಷೇತ್ರದ ಸುಧಾರಣೆಗಳು - Labour sector Reforms
ಕೈಗಾರಿಕಾ ಕಾರ್ಮಿಕರಿಗೆ ಸಾಮಾಜಿಕ ಭದ್ರತೆ - Social Security for Industrial workers

ರಾಷ್ಟ್ರೀಯ ಪುನರಾವರ್ತನಾ ನಿಧಿ - National Revewal Fund
ಸ್ವಯಂ ಪ್ರೇರಿತ ನಿವೃತ್ತಿ ಯೋಜನೆ - Valuantary Retirement Scheme
ಪುನರ್ ತರಬೇತಿ ಮತ್ತು ಪುನರ್ ಉದ್ಯೋಗ ಕಲ್ಪಿಸುವುದು - Retraining and Re-employment
ಭೂ ಮಾಲೀಕರು - Landlords
ಕೃಷಿಕರು - Peasants
ಕೃಷಿ ಕಾರ್ಮಿಕರು - Agricultural labourers
ಬೆಳೆ ಪಾಲುದಾರರು - Share cropper
ಸಾಮಾಜಿಕ ಮತ್ತು ಆರ್ಥಿಕ ಸ್ಥಾನಮಾನ - Socio-Economic Status
ಜೀತ ಪದ್ಧತಿ - Bonded labour system
ಕನಿಷ್ಟ ಕೂಲಿಗಳು - Minimum wages
ಅಸಂಘಟಿತ ಕಾರ್ಮಿಕ ಮಾರುಕಟ್ಟೆಗಳು - Unorganised labour markets
ಬಾಲ ಕಾರ್ಮಿಕರ ಪದ್ಧತಿ - Child labour system
ನೈಜಕೂಲಿ - Real Wages
ಕೃಷಿಕೂಲಿ - Agricultural Wages
ಕನಿಷ್ಟ ಕೂಲಿ ಕಾಯ್ದೆ - Minimum wages
ಹಣರೂಪಿ ಕೂಲಿ - Money Wages

## ಭಾಗ ಎ

**ಒಂದು ಅಂಕದ ಪ್ರಶ್ನೆಗಳು.**

**ಎಲ್ಲಾ ಪ್ರಶ್ನೆಗಳಿಗೂ ಕಡ್ಡಾಯವಾಗಿ ಎರಡು ವಾಕ್ಯಗಳಲ್ಲಿ ಉತ್ತರಿಸಿ.**

೧. ಕೈಗಾರಿಕಾ ಕಾರ್ಮಿಕರ ಗುಣಲಕ್ಷಣಗಳಾವುವು?
೨. ಖಾಸಗಿ ಕ್ಷೇತ್ರವೆಂದರೇನು?
೩. ಸಾರ್ವಜನಿಕ ಕ್ಷೇತ್ರ ಎಂದರೇನು?
೪. ಕೈಗಾರಿಕಾ ಕಾರ್ಮಿಕರ ಸಂಘಟನೆಯ ಅಗತ್ಯವೇನು?
೫. ಕಾರ್ಮಿಕ ಕ್ಷೇತ್ರದ ಸುಧಾರಣೆ ಎಂದರೇನು?

## ಭಾಗ ಬಿ

**ಎರಡು ಅಂಕದ ಪ್ರಶ್ನೆಗಳು.**

**ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಕೈಗಾರಿಕಾ ಕಾರ್ಮಿಕರ ವರ್ಗ ಎಂದರೇನು?
೨. ಖಾಸಗಿ ಮತ್ತು ಸಾರ್ವಜನಿಕ ಕ್ಷೇತ್ರದ ನಡುವಣ ವ್ಯತ್ಯಾಸಗಳಾವುವು?

೩. ಕಾರ್ಮಿಕ ಸಂಘಟನೆಯ ಪ್ರಮುಖ ಉದ್ದೇಶಗಳೇನು?
೪. ಅಖಿಲ ಭಾರತ ಮಟ್ಟದ ಕಾರ್ಮಿಕ ಸಂಘಟನೆಗಳಾವುವು?
೫. ಕಾರ್ಮಿಕ ಕ್ಷೇತ್ರದ ಸುಧಾರಣೆಗಳ ಪ್ರಮುಖ ಉದ್ದೇಶಗಳಾವುವು?

### ಭಾಗ ಸಿ

**ಐದು ಅಂಕಗಳ ಪ್ರಶ್ನೆಗಳು.**

**೧೫ ವಾಕ್ಯಗಳಲ್ಲಿ ಉತ್ತರಿಸಿರಿ.**

೧. ಅಖಿಲ ಭಾರತ ಮಟ್ಟದ ಕೈಗಾರಿಕಾ ಕಾರ್ಮಿಕ ಸಂಘಗಳ ಪ್ರಮುಖ ಉದ್ದೇಶಗಳು ಮತ್ತು ಕಾರ್ಯಾಚರಣೆ ಶೈಲಿಯನ್ನು ತಿಳಿಸಿರಿ.
೨. ಕೈಗಾರಿಕಾ ಕಾರ್ಮಿಕ ಸಂಘಗಳ ಪ್ರಮುಖ ಉದ್ದೇಶಗಳು ಮತ್ತು ಸಮಸ್ಯೆಗಳನ್ನು ಸಂಕ್ಷಿಪ್ತವಾಗಿ ವಿವರಿಸಿರಿ.
೩. ರಾಷ್ಟ್ರೀಯ ಪುನರಾವರ್ತನ ನಿಧಿ ಎಂದರೇನು? ಅದು ಹೇಗೆ ಕಾರ್ಯಚರಿಸುತ್ತದೆ?
೪. ಎರಡನೆಯ ರಾಷ್ಟ್ರೀಯ ಕಾರ್ಮಿಕ ಆಯೋಗದ ಪ್ರಮುಖ ಶಿಫಾರಸ್ಸುಗಳಾವುವು?
೫. ಭಾರತದ ಸಂಘಟಿತ ಮತ್ತು ಅಸಂಘಟಿತ ಕಾರ್ಮಿಕ ಕ್ಷೇತ್ರಗಳ ನಡುವಣ ಪ್ರಮುಖ ವ್ಯತ್ಯಾಸಗಳಾವುವು?

### ಭಾಗ ಡಿ

**೧೦ ಅಂಕಗಳ ಪ್ರಶ್ನೆಗಳು. ಪ್ರಬಂಧ ರೂಪದಲ್ಲಿ ಉತ್ತರಿಸಿರಿ.**

೧. ಭಾರತದ ಕಾರ್ಮಿಕ ಸಂಘಗಳ ರಚನೆ, ಉದ್ದೇಶಗಳು ಮತ್ತು ಕಾರ್ಯಾಚರಣೆಯನ್ನು ವಿವರಿಸಿರಿ.
೨. ಭಾರತದಲ್ಲಿ ಕೈಗಾರಿಕಾ ಕಾರ್ಮಿಕ ಕ್ಷೇತ್ರದ ಸುಧಾರಣೆಗೆ ಸರ್ಕಾರ ಕೈಗೊಂಡಿರುವ ಕ್ರಮಗಳಾವುವು ಅವುಗಳು ಯಶಸ್ವಿಯಾಗಿವೆಯೇ? ತೊಡಕುಗಳಾವುವು?
೩. ಭಾರತದ ಎರಡನೆಯ ರಾಷ್ಟ್ರೀಯ ಕಾರ್ಮಿಕ ಆಯೋಗದ ನೇಮಕದ ಅಗತ್ಯ ಮತ್ತು ಉದ್ದೇಶವೇನು? ಅದರ ಪ್ರಮುಖ ಶಿಫಾರಸ್ಸುಗಳ ಜಾರಿಯಲ್ಲಿನ ತೊಡಕುಗಳಾವುವು? ಇದುವರೆಗೆ ಸರ್ಕಾರ ಯಾವ ಶಿಫಾರಸ್ಸುಗಳನ್ನು ಜಾರಿಗೊಳಿಸಿದೆ

## ಮಾದರಿ ಪ್ರಶ್ನೆಗಳು

### ಭಾಗ ಎ

ಒಂದು ಅಂಕದ ಪ್ರಶ್ನೆಗಳು. ಎಲ್ಲಾ ಪ್ರಶ್ನೆಗಳಿಗೂ ಕಡ್ಡಾಯವಾಗಿ ಎರಡು ವಾಕ್ಯಗಳಲ್ಲಿ ಉತ್ತರಿಸಿರಿ.

೧. ಭೂರಹಿತ ಕೃಷಿ ಕಾರ್ಮಿಕರು ಎಂದರೆ ಯಾರು? ಅವರ ಲಕ್ಷಣಗಳಾವುವು?

೨. ಹಣರೂಪಿ ಕೂಲಿ ಮತ್ತು ನೈಜ ಕೂಲಿ ನಡುವಣ ವ್ಯತ್ಯಾಸವೇನು?
೩. ಜೀತ ಪದ್ಧತಿ ಎಂದರೇನು?
೪. ಬಾಲ ಕಾರ್ಮಿಕ ಪದ್ಧತಿ ಎಂದರೇನು?
೫. ಅಸಂಘಟಿತ ಕಾರ್ಮಿಕ ಪೇಟೆಯ ಎರಡು ಲಕ್ಷಣಗಳನ್ನು ತಿಳಿಸಿರಿ.
೬. ಕನಿಷ್ಠ ಕೂಲಿಗಳ ಕಾಯ್ದೆಯ ಉದ್ದೇಶವೇನು?
೭. ಕೃಷಿ ಕಾರ್ಮಿಕರಿಗೆ ಸಾಮಾಜಿಕ ಭದ್ರತೆ ಅಗತ್ಯವೇ?
೮. ಕೃಷಿ ಕಾರ್ಮಿಕರು ಕಡುಬಡವರಾಗಿರಲು ಕಾರಣವೇನು?
೯. ಕೃಷಿಕರು ಮತ್ತು ಕೃಷಿ ಕಾರ್ಮಿಕರು ಒಂದೇ ವರ್ಗದ ಜನರೇ?
೧೦. ಕೃಷಿ ಕಾರ್ಮಿಕರ ಸಂಘಟನೆಯ ಅಗತ್ಯ

## ಭಾಗ ಬಿ

ಎರಡು ಅಂಕಗಳ ಪ್ರಶ್ನೆಗಳು. ನಾಲ್ಕು ವಾಕ್ಯಗಳೊಳಗೆ ಉತ್ತರಿಸಿರಿ.

೧. ಕೃಷಿ ಕಾರ್ಮಿಕರ ಪ್ರಮುಖ ಗುಣಲಕ್ಷಣಗಳಾವುವು?
೨. ಜೀತ ಪದ್ಧತಿ ಎಂದರೇನು? ಅದು ಹೇಗೆ ಅಸ್ತಿತ್ವಕ್ಕೆ ಬಂತು?
೩. ಕನಿಷ್ಠ ಕೂಲಿ ಕಾಯ್ದೆಯ ಅನುಷ್ಠಾನದಲ್ಲಿನ ಪ್ರಮುಖ ಸಮಸ್ಯೆಗಳಾವುವು?
೪. ಬಾಲ ಕಾರ್ಮಿಕ ಪದ್ಧತಿ ಅಸ್ತಿತ್ವಕ್ಕೆ ಕಾರಣಗಳಾವುವು?
೫. ಬಾಲ ಕಾರ್ಮಿಕ ಪದ್ಧತಿ ನಿರ್ಮೂಲನೆಗೆ ಸರ್ಕಾರ ಕೈಗೊಂಡಿರುವ ಕ್ರಮಗಳಾವುವು?

## ಭಾಗ ಸಿ

ಐದು ಅಂಕದ ಪ್ರಶ್ನೆಗಳು. ೧೫ ವಾಕ್ಯಗಳಲ್ಲಿ ಉತ್ತರಿಸಿರಿ.

೧. ಬಾಲ ಕಾರ್ಮಿಕ ಪದ್ಧತಿಯ ಕಾರಣ ಮತ್ತು ಪರಿಣಾಮಗಳನ್ನು ವಿವರಿಸಿ.
೨. ಕೃಷಿ ಕಾರ್ಮಿಕರಿಗೆ ಕನಿಷ್ಠ ಕೂಲಿ ಕಾಯ್ದೆಯನ್ನು ಜಾರಿಗೊಳಿಸುವಾಗ ಎದುರಾಗುವ ಸಮಸ್ಯೆಗಳಾವುವು?
೩. ಜೀತ ಪದ್ಧತಿ ಭಾರತೀಯ ಸಮಾಜಕ್ಕಂಟಿದ ಒಂದು ಶಾಪ ಚರ್ಚಿಸಿ.
೪. ಜೀತ ಪದ್ಧತಿಯ ನಿರ್ಮೂಲನಕ್ಕೆ ಸರ್ಕಾರ ಕೈಗೊಂಡಿರುವ ಕ್ರಮಗಳನ್ನು ಕುರಿತು ಬರೆಯಿರಿ.

## ಭಾಗ ಡಿ

ನಿಮ್ಮ ಉತ್ತರ ಪ್ರಬಂಧದ ರೂಪದಲ್ಲಿರಲಿ. ೧೦ ಅಂಕಗಳ ಪ್ರಶ್ನೆಗಳು.

೧. ಬಾಲ ಕಾರ್ಮಿಕ ಪದ್ಧತಿಯು ಭಾರತದ ಕಡುಬಡತನದ ನೇರ ಪರಿಣಾಮವಾಗಿದೆ ಚರ್ಚಿಸಿ.
೨. ಜೀತ ಪದ್ಧತಿ ನಿರ್ಮೂಲನ ದೀರ್ಘಾವಧಿಯಲ್ಲಿ ಮಾತ್ರವೆ? ಸಾಧ್ಯ ಚರ್ಚಿಸಿ.

# ಅಧ್ಯಾಯ ೬

# ಆರ್ಥಿಕ ಮೂಲ ಸೌಕರ್ಯಗಳು

**ಉದ್ದೇಶಗಳು**

ಈ ಅಧ್ಯಾಯವು ಕೆಳಗಿನ ಉದ್ದೇಶಗಳನ್ನು ಹೊಂದಿದೆ.

೧. ಆರ್ಥಿಕ ಮೂಲ ಸೌಲಭ್ಯಗಳ ಪ್ರಾಮುಖ್ಯತೆಯನ್ನು ವಿವರಿಸುವುದು.

೨. ಆರ್ಥಿಕ ಮೂಲ ಸೌಲಭ್ಯಗಳ ಆಯ್ದ ಕ್ಷೇತ್ರಗಳ ರಚನೆ, ಈಗಿನ ಸ್ಥಿತಿ ಮತ್ತು ಸುಧಾರಣೆಗಳನ್ನು ಪರಿಚಯಿಸುವುದು.

**ಪೀಠಿಕೆ**

ಮೂಲ ಸೌಲಭ್ಯಗಳು ಎಂದರೆ ಅರ್ಥವ್ಯವಸ್ಥೆಗೆ ಅಗತ್ಯವಿರುವ ಮೂಲಾಧಾರ ಸೇವೆಗಳನ್ನು ಒದಗಿಸುವ ಚಟುವಟಿಕೆಗಳು ಎಂದರ್ಥ. ಅರ್ಥವ್ಯವಸ್ಥೆಯ ಅಭಿವೃದ್ಧಿಗೆ ಹಲವಾರು ಮೂಲ ಸೌಲಭ್ಯಗಳು ಅವಶ್ಯಕವಾಗಿರುತ್ತವೆ. ಈ ಸೌಲಭ್ಯಗಳ ವ್ಯವಸ್ಥೆಯು ಅಭಿವೃದ್ಧಿ ಹೊಂದಿದಾಗ ಮತ್ತು ಅವು ಕೊರತೆಯಿಲ್ಲದಂತೆ ಲಭಿಸಿದಾಗ ಮಾತ್ರ ಆರ್ಥಿಕಾಭಿವೃದ್ಧಿಯ ಸಾಧನೆ ಸಾಧ್ಯವಾಗುತ್ತದೆ. ಅರ್ಥವ್ಯವಸ್ಥೆಯ ಮೂಲ ಕ್ಷೇತ್ರಗಳಾದ ವ್ಯವಸಾಯ ಮತ್ತು ಕೈಗಾರಿಕೆಗೆ ಸೂಕ್ತ ಸೇವೆಗಳನ್ನು ಒದಗಿಸುವ ಮುಖಾಂತರ ರಾಷ್ಟ್ರದ ಸರ್ವತೋಮುಖ ಅಭಿವೃದ್ಧಿಗೆ ಸಹಾಯ ಮಾಡುವ ಚಟುವಟಿಕೆಗಳೇ ಮೂಲ ಸೌಲಭ್ಯಗಳು.

## ೬.೧. ಸಾರಿಗೆ ಸೌಲಭ್ಯ

**ಪೀಠಿಕೆ** ಸಾರಿಗೆ ವ್ಯವಸ್ಥೆಯು ಒಂದು ಆರ್ಥಿಕತೆಯ ಜೀವನಾಡಿ ಇದ್ದಂತೆ. ವ್ಯವಸಾಯ, ಗಣಿಗಾರಿಕೆ ಮತ್ತು ಕೈಗಾರಿಕೆಗಳಂತೆಯೇ ಸಾರಿಗೆಯೂ ಕೂಡಾ ಆರ್ಥಿಕಾಭಿವೃದ್ಧಿಗೆ ಮಹತ್ವದ ಕೊಡುಗೆ ನೀಡುತ್ತದೆ. ಕೃಷಿ ಮತ್ತು ಕೈಗಾರಿಕಾವಲಯಗಳ ಪ್ರಗತಿಯ ಬಲದ ಮೇಲೆ ಅಭಿವೃದ್ಧಿ ಹೊಂದಿದ ಸಾರಿಗೆಯು ನಂತರ ಆ ವಲಯಗಳ ಅಭಿವೃದ್ಧಿಗೆ ಪೂರಕವಾಗಿ ಕಾರ್ಯನಿರ್ವಹಿಸುತ್ತದೆ. ಯಾವುದೇ ದೇಶದಲ್ಲಿ ಸಾಗಣೆ ಸೌಲಭ್ಯಗಳ ಬೆಳವಣಿಗೆಯ ಹೊರತು ಇತರ ಕ್ಷೇತ್ರಗಳ ಅಭಿವೃದ್ಧಿ ಸಾಧನೆಯಾಗುವುದಿಲ್ಲ. ಸಾಗಣೆ ವ್ಯವಸ್ಥೆಯು ಜನರನ್ನು ಮತ್ತು ಸರಕುಗಳನ್ನು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಬೇಡಿಕೆ ಇರುವ ಸಮಯದಲ್ಲಿ ಸಾಗಿಸಲು ಸಹಾಯ ಮಾಡುತ್ತದೆ.

**ಸಾರಿಗೆಯ ಪ್ರಾಮುಖ್ಯತೆ**

ಯಾವುದೇ ಆರ್ಥಿಕತಕೆಯಲ್ಲಿ, ಅದರಲ್ಲೂ ಭಾರತದಂತಹ ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ಸಾಗಣೆ ವ್ಯವಸ್ಥೆಯ ಪ್ರಾಮುಖ್ಯತೆಯನ್ನು ಈ ಕೆಳಗಿನಂತೆ ವಿವರಿಸಬಹುದು.

**೧. ಉತ್ಪಾದನೆಗೆ ಅಗತ್ಯವಿರುವ ಸರಕುಗಳ ಸಾಗಣೆ:** ಉತ್ಪಾದನೆಗೆ ಅವಶ್ಯಕವಾಗಿರುವ ಕಚ್ಚಾವಸ್ತುಗಳು ಮತ್ತು ಯಂತ್ರಗಳನ್ನು ಉತ್ಪಾದನ ಕೇಂದ್ರಗಳಿಗೆ ಸಾಗಿಸಲು ನೆರವಾಗುವ ಮೂಲಕ ಸಾಗಣೆ ವ್ಯವಸ್ಥೆಯು ಆರ್ಥಿಕಾಭಿವೃದ್ಧಿಗೆ ಕೊಡುಗೆ ನೀಡುತ್ತದೆ. ಅಭಿವೃದ್ಧಿಶೀಲ ಆರ್ಥಿಕತೆಯಲ್ಲಿ ಬೃಹತ್ ಪ್ರಮಾಣದ ಉತ್ಪಾದನೆಗೆ ಅಗತ್ಯವಾಗಿರುವ ಭಾರೀ ಯಂತ್ರಗಳು, ಇಂಧನ, ಕಚ್ಚಾ ಸರಕುಗಳು ಮತ್ತಿತರ ವಸ್ತುಗಳನ್ನು ಲಭ್ಯವಿರುವ ಸ್ಥಳಗಳಿಂದ ಉತ್ಪಾದನಾ ಕೇಂದ್ರಗಳಿಗೆ ಸಾಗಿಸಲು ಸಾರಿಗೆ ಸೌಕರ್ಯಗಳು ಅನಿವಾರ್ಯವಾಗಿದೆ.

**೨. ಶ್ರಮದ ಚಲನೆಗೆ ಪ್ರೇರಣೆ:** ಶ್ರಮವು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಚಲಿಸಲು ಸಾರಿಗೆ ವ್ಯವಸ್ಥೆಯು ನೆರವಾಗುತ್ತದೆ. ಅಂದರೆ ಶ್ರಮದ ಚಲನೆಗೆ ಸಾರಿಗೆಯು ಪ್ರೇರಣೆ ನೀಡುತ್ತದೆ.

**೩. ಬೆಲೆ ಸ್ಥಿಮಿತತೆಯ ಸಾಧನೆ:** ಆಹಾರಪದಾರ್ಥಗಳು ಮತ್ತು ಕೈಗಾರಿಕೋತ್ಪನ್ನಗಳನ್ನು ಹೆಚ್ಚುವರಿ ಇರುವ ಸ್ಥಳಗಳಿಂದ ಕೊರತೆಯಿರುವ ಸ್ಥಳಗಳಿಗೆ ಸಾಗಿಸಬೇಕಾಗುತ್ತದೆ. ಅಲ್ಲದೆ ಪ್ರವಾಹ, ಬರಗಾಲ, ಕ್ಷಾಮ ಮುಂತಾದ ಪ್ರಕೃತಿ ವಿಕೋಪಗಳಿಗೆ ತುತ್ತಾಗಿ ಬೆಳೆ ಹಾಗೂ ಜನರು ನಷ್ಟವನ್ನು ಅನುಭವಿಸುತ್ತಿರುವ ಪ್ರದೇಶಗಳಿಗೆ ಅತಿ ಶೀಘ್ರದಲ್ಲಿ ಆಹಾರವಸ್ತುಗಳು ಹಾಗೂ ವಸತಿ ನಿರ್ಮಾಣ ಸಾಮಗ್ರಿಗಳನ್ನು ಸಾಗಿಸುವುದು ಅನಿವಾರ್ಯ. ಈ ಕಾರ್ಯ ನಿರ್ವಹಣೆಗೆ ವ್ಯವಸ್ಥಿತ ಸಾರಿಗೆ ವ್ಯವಸ್ಥೆಯ ಹೊರತು ಬೇರೆ ಮಾಧ್ಯಮಗಳ ಸೌಲಭ್ಯವೇ ಇಲ್ಲ. ಅಧಿಕ್ಯತೆಯಿರುವ ಸ್ಥಳಗಳಿಂದ ಕೊರತೆಯ ಸ್ಥಳಗಳಿಗೆ ಸರಕುಗಳನ್ನು ಸಾಗಿಸಿ, ಅವುಗಳ ಅಸಮ ವಿವರಣೆಯನ್ನು ಪರಿಹರಿಸುವ ಮೂಲಕ ಸಾಗಣೆ ವ್ಯವಸ್ಥೆಯು ಬೆಲೆಯ ಸ್ಥಿಮಿತತೆ ಸಾಧಿಸಲು ನೆರವಾಗುತ್ತದೆ.

**೪. ಉದ್ಯೋಗ ಸೃಷ್ಟಿ:** ಉದ್ಯೋಗ ಸೃಷ್ಟಿಯಲ್ಲಿ ಸಾರಿಗೆ ವ್ಯವಸ್ಥೆಯ ಪಾತ್ರ ಹಿರಿದಾದುದು. ರಸ್ತೆ ಸಂಚಾರದ ವಾಹನಗಳಲ್ಲದೆ ರೈಲುಗಳು, ಹಡಗುಗಳು ಮತ್ತು ವಿಮಾನಗಳ ನಿರ್ಮಾಣಕ್ಕೆ ಅಗತ್ಯವಾದ ಯಂತ್ರೋಪಕರಣಗಳು ಹಾಗೂ ಬಿಡಿಭಾಗಗಳ ತಯಾರಿಕೆ, ವಿವಿಧ ರೀತಿಯ ವಾಹನಗಳು ಮತ್ತು ರಸ್ತೆ ಹಾಗೂ ರೈಲುಮಾರ್ಗಗಳ ನಿರ್ಮಾಣ, ವಾಹನಗಳನ್ನು ನಡೆಸುವಿಕೆ ಮತ್ತು ಸರಕುಗಳ ಸಾಗಣೆ ಕಾರ್ಯಗಳು ಕೋಟ್ಯಂತರ ಉದ್ಯೋಗಾವಕಾಶಗಳನ್ನು ಒದಗಿಸುತ್ತವೆ.

**೫. ಮಾರುಕಟ್ಟೆಯ ವಿಸ್ತರಣೆಗೆ ನೆರವು:** ಸರಕುಗಳನ್ನು ಒಂದು ಕ್ಷೇತ್ರದಿಂದ ಇನ್ನೊಂದು ಕ್ಷೇತ್ರಕ್ಕೆ ಮತ್ತು ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸಾಗಿಸಲು ನೆರವಾಗುವ ಮೂಲಕ ಸಾರಿಗೆ ವ್ಯವಸ್ಥೆಯು ಮಾರುಕಟ್ಟೆಯ ವಿಸ್ತರಣೆಯನ್ನು ಪ್ರಚೋದಿಸುತ್ತದೆ. ಇದರ

ಫಲವಾಗಿ ದೊಡ್ಡ ಪ್ರಮಾಣದ ಉತ್ಪಾದನೆಗೆ ಉತ್ತಮ ಅವಕಾಶ ದೊರೆತು, ಶ್ರಮ ವಿಭಜನೆ ಹೆಚ್ಚುತ್ತದೆ.

**೬. ಭೌಗೋಳಿಕ ಸಂಶೋಧನೆಗೆ ಉತ್ತೇಜನ:** ಸಾಗಣೆ ವ್ಯವಸ್ಥೆಯ ಪ್ರಗತಿಯು ಭೌಗೋಳಿಕ ಸಂಶೋಧನೆಯನ್ನು ಉತ್ತೇಜಿಸುತ್ತದೆ. ನೈಸರ್ಗಿಕ ಸಂಪತ್ಸಾಧನಗಳನ್ನು ಹೊಂದಿದ್ದರೂ ಕೂಡ ಸಾರಿಗೆ ಸಂಪರ್ಕದ ಕೊರತೆಯಿಂದಾಗಿ ಹಲವು ಮೂಲೆ-ಕಾಡುಪ್ರದೇಶಗಳು ಶಾಶ್ವತ ವಾಗಿ ಹಿಂದುಳಿದಿರುತ್ತವೆ. ಸಾರಿಗೆ ಮಾಧ್ಯಮವು ಇಂತಹ ಪ್ರದೇಶಗಳಲ್ಲಿ ಅಗೋಚರ ವಾಗಿರುವ ಹಲವಾರು ರೀತಿಯ ಸಂಪನ್ಮೂಲಗಳ ಸಂಶೋಧನೆಗೆ ಸಹಾಯ ಮಾಡುತ್ತದೆ. ಉತ್ಪಾದನೆಯಲ್ಲಿ ಇನ್ನೂ ತೊಡಗಿಸಿಲ್ಲದಿರುವ ಅನೇಕ ಸಂಪತ್ಸಾಧನಗಳ ಬಳಕೆಯನ್ನು ಪ್ರಭಾವಗೊಳಿಸುವುದರ ಮೂಲಕ ಸಾಗಣೆ ವ್ಯವಸ್ಥೆಯು ಆರ್ಥಿಕಾಭಿವೃದ್ಧಿಯ ಕಾರ್ಯಕ್ಕೆ ಕೊಡುಗೆ ನೀಡುತ್ತದೆ.

**೭. ಕಾನೂನು ಮತ್ತು ಸುವ್ಯವಸ್ಥೆಯ ಪಾಲನೆಗೆ ನೆರವು:** ಗಲಾಟೆ, ದೊಂಬಿ, ಹೊಡೆದಾಟಗಳು ಸಂಭವಿಸಿ ಕಾನೂನು ವ್ಯವಸ್ಥೆಗೆ ಧಕ್ಕೆ ಒದಗಿರುವ ಸ್ಥಳಗಳಿಗೆ ಪೊಲೀಸ್ ಪಡೆ, ಗಡಿಭದ್ರತಾ ಪಡೆ ಮತ್ತು ಸೈನ್ಯವನ್ನು ಸಾಗಿಸಿ, ವಿಪರೀತ ಪರಿಸ್ಥಿತಿಯನ್ನು ತಡೆಗಟ್ಟಿ ಅನರ್ಥಗಳನ್ನು ನಿವಾರಿಸಲು ಸಾರಿಗೆ ವ್ಯವಸ್ಥೆಯು ಸಹಾಯ ಮಾಡುತ್ತದೆ. ಆಂತರಿಕ ಗಲಭೆಗಳನ್ನು ನಿವಾರಿಸಲು ಮತ್ತು ಸುವ್ಯವಸ್ಥೆಯನ್ನು ಕಾಪಾಡಲು ಸಾರಿಗೆ ವ್ಯವಸ್ಥೆಯು ನೆರವು ನೀಡುತ್ತದೆ.

**೮. ರಾಷ್ಟ್ರೀಯ ರಕ್ಷಣೆಗೆ ನೆರವು:** ಬಾಹ್ಯದಾಳಿಗಳನ್ನು ಎದುರಿಸಲು ಸೈನ್ಯ, ಶಸ್ತ್ರಾಸ್ತ್ರಗಳು, ಸೈನಿಕರು, ಆಹಾರ ಮತ್ತು ವಸತಿ ಸಾಮಗ್ರಿಗಳನ್ನು ಯುದ್ಧ ನಡೆಯುತ್ತಿರುವ ಪ್ರದೇಶಗಳಿಗೆ ಸಾಗಿಸುವುದಕ್ಕೆ ಸಾರಿಗೆಯು ಅನಿವಾರ್ಯವಾಗಿದೆ. ಯುದ್ಧದಲ್ಲಿ ಒಂದು ರಾಷ್ಟ್ರದ ಗೆಲುವು ವಿಶೇಷವಾಗಿ ರಸ್ತೆ, ರೈಲು, ಸಾರಿಗೆ, ನೌಕಾ ಸಾರಿಗೆ ಮತ್ತು ವಾಯು ಸಾರಿಗೆಯ ದಕ್ಷತೆಯನ್ನು ಅವಲಂಬಿಸಿದೆ. ವಾಯು ಸಾರಿಗೆಯ ದಕ್ಷತೆಯು ಆಧುನಿಕ ಯುದ್ಧದಲ್ಲಿ ಜರುಗುವ ಅಣು ಯುದ್ಧಗಳಲ್ಲಿ ಒಂದು ರಾಷ್ಟ್ರದ ಯಶಸ್ಸನ್ನು ನಿರ್ಧರಿಸುತ್ತದೆ.

**೯. ವಿದೇಶೀ ವ್ಯಾಪಾರದ ಪ್ರಗತಿಗೆ ಕೊಡುಗೆ :** ವಿದೇಶೀ ವ್ಯಾಪ ರದ ಪ್ರಗತಿಯು ಸಾರಿಗೆ ವ್ಯವಸ್ಥೆಯನ್ನು ಅವಲಂಬಿಸಿದೆ. ಸರಕುಗಳನ್ನು ವಿದೇಶಗಳಿಗೆ ರಫ್ತು ಮಾಡಲು ಮತ್ತು ವಿದೇಶಗಳಿಂದ ಆಮದು ಮಾಡಿಕೊಳ್ಳಲು ವಿಶೇಷವಾಗಿ ನೌಕಾ ಸಾರಿಗೆ ಅತ್ಯಾವಶ್ಯಕವಾಗಿದೆ.

## ಸಾರಿಗೆಯ ವಿಧಗಳು

ಸಾರಿಗೆ ವ್ಯವಸ್ಥೆಯು ವ್ಯಾಪಕವಾಗಿ ಮೂರು ವಿಧಗಳನ್ನು ಒಳಗೊಂಡಿದೆ. ಅವುಗಳು ಕೆಳಗಿನಂತಿವೆ.

೧. ಭೂಸಾರಿಗೆ

೨. ಜಲ ಸಾರಿಗೆ

೩. ವಾಯು ಸಾರಿಗೆ




ಭೂಸಾರಿಗೆಯು ಎರಡು ವಿಧಗಳನ್ನು ಒಳಗೊಂಡಿದೆ. ಅವುಗಳೆಂದರೆ ೧. ರಸ್ತೆ ಸಾರಿಗೆ ಮತ್ತು ೨. ರೈಲು ಸಾರಿಗೆ

**ರಸ್ತೆ ಸಾರಿಗೆ**

ಭಾರತದಂತಹ ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ರಸ್ತೆ ಸಾರಿಗೆಯು ವಿಶೇಷವಾದ ಸ್ಥಾನವನ್ನು ಪಡೆದಿದೆ. ಆರ್ಥಿಕಾಭಿವೃದ್ಧಿಗೆ ಮಹತ್ತರವಾದ ಕೊಡುಗೆ ನೀಡುವಂತಹ ಮೂಲಭೂತ ಲಕ್ಷಣಗಳನ್ನು ಅದು ಹೊಂದಿದೆ.

ಭಾರತದ ರಸ್ತೆ ವ್ಯವಸ್ಥೆಯು ಪ್ರಪಂಚದ ಅತಿ ದೊಡ್ಡ ರಸ್ತೆ ವ್ಯವಸ್ಥೆಗಳಲ್ಲಿ ಒಂದಾಗಿದೆ. ೧೯೫೦-೫೧ರಲ್ಲಿ ೪ ಲಕ್ಷ ಕಿ.ಮೀ. ಉದ್ದವಿದ್ದ ಒಟ್ಟು ರಸ್ತೆ ಮಾರ್ಗವು ೨೦೦೪ರಲ್ಲಿ ೨೭ ಲಕ್ಷ ಕಿ.ಮೀ.ಗಳಿಗೆ ಹೆಚ್ಚಿದೆ. ಕೆಳಗೆ ಕಾಣಿಸಿದ ಪಟ್ಟಿಯು ರಸ್ತೆ ಮಾರ್ಗಗಳ ಬೆಳವಣಿಗೆಯನ್ನು ಸೂಚಿಸುತ್ತದೆ.

ರಸ್ತೆ ನಿರ್ಮಾಣದ ಬೆಳವಣಿಗೆ — ಲಕ್ಷ ಕಿ.ಮೀ.ಗಳಲ್ಲಿ

| ರಸ್ತೆಯ ವಿಧ | ೧೯೫೦-೫೧ | ೧೯೬೦-೬೧ | ೨೦೦೩-೦೪ |
|---|---|---|---|
| ಮೇಲ್ಮೈ ಹೊಂದುತ್ತಿರುವ ರಸ್ತೆ | | | |
| ಮೇಲ್ಮೈ ಹೊಂದಿರದ ರಸ್ತೆ | ೨.೪೩ | ೨.೬೨ | ೧೪.೦ |
| ಒಟ್ಟು | ೪.೦೦ | ೫.೨೫ | ೨೭.೦ |

**ರಸ್ತೆಗಳ ವರ್ಗೀಕರಣ**

೧೯೪೩ರ ನಾಗಪುರ ಯೋಜನೆಯ ಭಾರತದಲ್ಲಿ ಅಸ್ತಿತ್ವದಲ್ಲಿರುವ ಎಲ್ಲಾ ರಸ್ತೆಗಳನ್ನು ನಾಲ್ಕು ವಿಧಗಳಾಗಿ ವರ್ಗೀಕರಿಸಿತು. ಅವುಗಳು ಮುಂದಿನಂತಿವೆ.

೧. ರಾಷ್ಟ್ರೀಯ ಹೆದ್ದಾರಿಗಳು.

೨. ಪ್ರಾಂತೀಯ ಹೆದ್ದಾರಿಗಳು.

೩. ಜಿಲ್ಲಾ ರಸ್ತೆಗಳು ಮತ್ತು

೪. ಗ್ರಾಮೀಣ ರಸ್ತೆಗಳು

**೧. ರಾಷ್ಟ್ರೀಯ ಹೆದ್ದಾರಿಗಳು :** ರಾಷ್ಟ್ರದ ರಾಜಧಾನಿ ನಗರವಾದ ದೆಹಲಿ ಮತ್ತು ವಿವಿಧ ರಾಜ್ಯಗಳ ರಾಜಧಾನಿ ನಗರಗಳ, ಪ್ರಮುಖ ಪಟ್ಟಣಗಳು ಮತ್ತು ಬಂದರುಗಳನ್ನು ಸಂಪರ್ಕಿಸುವ ರಸ್ತೆಗಳೇ ರಾಷ್ಟ್ರೀಯ ಹೆದ್ದಾರಿಗಳು. ಭಾರತದಲ್ಲಿ ಈಗ ಸುಮಾರು ೫೦ ರಾಷ್ಟ್ರೀಯ ಹೆದ್ದಾರಿಗಳಿವೆ. ಇವುಗಳಲ್ಲಿ ಪ್ರತಿಯೊಂದಕ್ಕೂ ಸಂಖ್ಯೆಯನ್ನು ನೀಡಲಾಗಿದೆ. ದೇಶದಲ್ಲಿ ಅಸ್ತಿತ್ವದಲ್ಲಿರುವ ರಾಷ್ಟ್ರೀಯ ಹೆದ್ದಾರಿಗಳ ಒಟ್ಟು ಉದ್ದ ೫೮,೧೧೨ ಕಿಲೋಮೀಟರ್ ಆಗಿದೆ. ಈ ರಸ್ತೆಗಳ ನಿರ್ಮಾಣ, ದುರಸ್ತಿ ಮತ್ತು ನಿರ್ವಹಣೆ ಸಂಪೂರ್ಣವಾಗಿ ಕೇಂದ್ರ ಸರ್ಕಾರಕ್ಕೆ ಸೇರಿದೆ.

**೨. ರಾಜ್ಯ ಹೆದ್ದಾರಿಗಳು :** ರಾಜ್ಯದಲ್ಲಿನ ಮುಖ್ಯ ಪಟ್ಟಣಗಳು, ಜಿಲ್ಲಾ ಕೇಂದ್ರಗಳು ಮತ್ತು ರಾಷ್ಟ್ರೀಯ ಹೆದ್ದಾರಿಗಳನ್ನು ಸಂಪರ್ಕಿಸುವ ರಸ್ತೆಗಳೇ ರಾಜ್ಯ ಹೆದ್ದಾರಿಗಳು. ದೇಶದಲ್ಲಿ ಈಗ ಸುಮಾರು ೧,೩೯,೦೦೦ ಕಿಲೋ ಮೀಟರ್‌ಗಳ ಉದ್ದದ ರಾಜ್ಯ ಹೆದ್ದಾರಿಗಳಿವೆ. ಇವುಗಳ ನಿರ್ಮಾಣ, ದುರಸ್ತಿ ಮತ್ತು ನಿರ್ವಹಣೆ ಸಂಬಂಧಪಟ್ಟ ರಾಜ್ಯ ಸರ್ಕಾರಗಳಿಗೆ ಸೇರಿದೆ.

**೩. ಜಿಲ್ಲಾ ರಸ್ತೆಗಳು :** ಜಿಲ್ಲಾ ರಸ್ತೆಗಳು ಜಿಲ್ಲೆಯ ತಾಲ್ಲೂಕು ಕೇಂದ್ರಗಳು, ಪ್ರಮುಖ ಸ್ಥಳಗಳು, ರಾಜ್ಯ ಹೆದ್ದಾರಿಗಳು ಮತ್ತು ರಾಷ್ಟ್ರೀಯ ಹೆದ್ದಾರಿಗಳನ್ನು ಸಂಪರ್ಕಿಸುತ್ತವೆ. ಈ ರಸ್ತೆಗಳ ನಿರ್ಮಾಣ, ದುರಸ್ತಿ ಮತ್ತು ನಿರ್ವಹಣೆ ಸ್ಥಳೀಯ ಸಂಸ್ಥೆಗಳಿಗೆ ಸೇರಿದೆ.

**೪. ಗ್ರಾಮೀಣ ರಸ್ತೆಗಳು :** ಗ್ರಾಮೀಣ ರಸ್ತೆಗಳು ತಾಲ್ಲೂಕು ಕೇಂದ್ರಗಳು ಮತ್ತು ವಿವಿಧ ಹಳ್ಳಿಗಳನ್ನು ಸಂಪರ್ಕಿಸುತ್ತವೆ. ಭಾರತದಲ್ಲಿ ಸುಮಾರು ೨,೦೦,೦೦೦ ಕಿಲೋಮೀಟರ್‌ಗಳ ಉದ್ದದ ಗ್ರಾಮೀಣ ರಸ್ತೆಗಳಿವೆ.

ರಾಷ್ಟ್ರೀಯ ಹೆದ್ದಾರಿಗಳ ವ್ಯವಸ್ಥೆಯ ನಿರ್ವಹಣೆಯು ಕೇಂದ್ರ ಸರಕಾರದ ಹೊಣೆಯಾಗಿರುತ್ತದೆ. ಉಳಿದ ಎಲ್ಲಾ ವಿಧದ ರಸ್ತೆ ವ್ಯವಸ್ಥೆಗಳು ರಾಜ್ಯ ಸರಕಾರಗಳಿಗೆ ಸೇರಿರುತ್ತವೆ.

### ರಸ್ತೆಗಳ ಮತ್ತು ಸೇತುವೆಗಳ ನಿರ್ಮಾಣದಲ್ಲಿ ಖಾಸಗಿ ಮತ್ತು ಸಾರ್ವಜನಿಕ ವಲಯಗಳ ಸಹಭಾಗಿತ್ವ

ರಸ್ತೆ ಸಾರಿಗೆಯ ಅಭಿವೃದ್ಧಿ ಮತ್ತು ಸುಗುಮ ಸಾಗಾಣಿಕೆಯ ದೃಷ್ಟಿಗಳಿಂದ ಉತ್ತಮವಾದ ರಸ್ತೆಗಳ ಮತ್ತು ಸೇತುವೆಗಳ ನಿರ್ಮಾಣಕ್ಕೆ ಆದ್ಯತೆ ನೀಡಲಾಗಿದೆ. ರಸ್ತೆಗಳ ಮತ್ತು ಸೇತುವೆಗಳ ನಿರ್ಮಾಣದಲ್ಲಿ ಸಾರ್ವಜನಿಕ ವಲಯದ ಬಂಡವಾಳದ ಕೊರತೆಯನ್ನು ಗಮನಿಸಿ, ಖಾಸಗಿ ವಲಯವೂ ಸಹ ಪಾಲುದಾರನಾಗಿ ಬಂಡವಾಳವನ್ನು ತೊಡಗಿಸಲು ಅವಕಾಶ

ಮಾಡಿಕೊಡಲಾಗಿದೆ. ಈ ದಿಸೆಯಲ್ಲಿ "ನಿರ್ಮಾಣ, ಒಡೆತನ, ನಿರ್ವಹಣೆ ಮತ್ತು ವರ್ಗಾವಣೆ" ನೀತಿಯನ್ನು ರಸ್ತೆ ಸಾರಿಗೆಯಲ್ಲಿ ಅನುಸರಿಸಲಾಗುತ್ತಿದೆ. ಸುಮಾರು ೧೫ ರಿಂದ ೨೦ ವರ್ಷಗಳವರೆಗೆ ಖಾಸಗಿ ಉದ್ಯಮಿಗಳು ರಸ್ತೆಗಳನ್ನು ನಿರ್ಮಿಸುವ, ಅದರ ಒಡೆತನವನ್ನು ಹೊಂದುವ, ವಾಹನಗಳ ಕಾರ್ಯಾಚರಣೆಯ ಮೂಲಕ ಆದಾಯವನ್ನು ಗಳಿಸುವ ಮತ್ತು ನಂತರ ಸರ್ಕಾರಕ್ಕೆ ವರ್ಗಾಯಿಸುವ ನೀತಿ ಇದಾಗಿದೆ. ಇತರ ಅನೇಕ ದೇಶಗಳ ಮಾದರಿಯಲ್ಲಿ ಭಾರತದಲ್ಲಿಯೂ ಇದನ್ನು ಮಾಡಲಾಗಿದೆ.

### ಆ. ರೈಲು ಸಾರಿಗೆ

ಭಾರತದ ರೈಲು ಸಾರಿಗೆ ವ್ಯವಸ್ಥೆಯು ಏಷ್ಯಾಖಂಡದಲ್ಲಿಯೇ ಅತಿ ದೊಡ್ಡದು ಮತ್ತು ಪ್ರಪಂಚದಲ್ಲಿ ನಾಲ್ಕನೆಯ ದೊಡ್ಡ ಸಾರಿಗೆ ವ್ಯವಸ್ಥೆಯಾಗಿದೆ. ದೇಶದಲ್ಲಿ ಅದು ಅತ್ಯಂತ ದೊಡ್ಡ ಸಾರ್ವಜನಿಕ ಉದ್ಯಮವೂ ಕೂಡ ಆಗಿದೆ. ಭಾರತದಲ್ಲಿ ಪ್ರತಿದಿನ ಸುಮಾರು ೧೧,೦೦೦ ರೈಲುಗಳು ೧೩ ಲಕ್ಷ ಕಿ.ಮೀ.ಗಳ ದೂರವನ್ನು ವ್ಯಾಪಿಸಿ ಸಂಚಾರದಲ್ಲಿರುತ್ತವೆ. ಪ್ರತಿದಿನ ಸುಮಾರು ೧೨೦ ಲಕ್ಷ ಪ್ರಯಾಣಿಕರು ಮತ್ತು ೯.೫ ಲಕ್ಷ ಟನ್ನುಗಳಷ್ಟು ಸರಕುಗಳ ಸಾಗಣೆಯು ರೈಲು ಸಾರಿಗೆಯ ಮೂಲಕ ನಡೆಯುತ್ತಿದೆ. ರಸ್ತೆ ಸಾರಿಗೆ ಮತ್ತು ರೈಲು ಸಾರಿಗೆಯ ನಡುವೆ ಹೋಲಿಸಿದರೆ ರೈಲು ವ್ಯವಸ್ಥೆಯು ಶೇಕಡ ೬೭ ಭಾಗ ಸರಕುಗಳು ಮತ್ತು ಶೇಕಡ ೩೯ ಭಾಗ ಪ್ರಯಾಣಿಕರ ಸಾಗಣೆಯ ಸಾಧನಾವಾಗಿದೆ. ಸುಮಾರು ೧೮ ಲಕ್ಷ ಜನರು ನಮ್ಮ ರೈಲು ಸಾರಿಗೆ ವ್ಯವಸ್ಥೆಯಲ್ಲಿ ಉದ್ಯೋಗ ನಿರತರಾಗಿರುವರು. ಇದರ ಮೇಲಿನ ಹೂಡಿಕೆ ರೂ. ೫,೮೯೬ ಕೋಟಿ ಮತ್ತು ಇದರಿಂದ ಒದಗುತ್ತಿರುವ ವಾರ್ಷಿಕ ವರಮಾನ ರೂ. ೩,೨೦೦ ಕೋಟಿ ಆಗಿವೆ.

ಭಾರತದಲ್ಲಿ ರೈಲು ಸಾರಿಗೆಯು ೧೮೫೩ರಲ್ಲಿ ಪ್ರಾರಂಭವಾಯಿತು. ಆ ವರ್ಷ ಮುಂಬಯಿ ಮತ್ತು ಥಾಣಾ ನಡುವೆ ೨೨ ಮೈಲುಗಳ ದೂರದಲ್ಲಿ ಪ್ರಥಮ ಬಾರಿಗೆ ಒಂದು ರೈಲು ಸಂಚರಿಸಿತು. ಇದರ ನಂತರ ಅನೇಕ ಪ್ರದೇಶಗಳಲ್ಲಿ ರೈಲುಮಾರ್ಗಗಳ ನಿರ್ಮಾಣಕಾರ್ಯ ಪ್ರಾರಂಭವಾಯಿತು. ರೈಲು ಸಾರಿಗೆಯ ಪ್ರಾರಂಭದಿಂದಾಗಿ ಅನೇಕ ಪಟ್ಟಣಗಳು ಮತ್ತು ಕೈಗಾರಿಕೆಗಳು ಶೀಘ್ರವಾಗಿ ಬೆಳೆದವು. ೧೯೧೦ರ ಹೊತ್ತಿಗೆ ದೇಶದಲ್ಲಿ ೨೫,೦೦೦ ಮೈಲುಗಳಷ್ಟು ಉದ್ದದ ರೈಲು ಮಾರ್ಗ ಅಸ್ತಿತ್ವದಲ್ಲಿತ್ತು.

ಪ್ರಾರಂಭದಲ್ಲಿ ರೈಲು ಸಾರಿಗೆಯು ಬ್ರಿಟಿಷರ ಒಡೆತನದ ಖಾಸಗಿ ಕಂಪನಿಗಳ ಆಡಳಿತಕ್ಕೆ ಒಳಪಟ್ಟಿತ್ತು. ಕಚ್ಚಾ ಸಾಮಗ್ರಿಗಳ ರಫ್ತು ಮತ್ತು ಸಿದ್ಧಪಡಿಸಿದ ಸರಕುಗಳ ಆಮದಿಗೆ ಸಂಬಂಧಿಸಿದಂತೆ ಸಾರಿಗೆ ದರದಲ್ಲಿ ರಿಯಾಯಿತಿ ತೋರುವಿಕೆ ಮುಂತಾದ ಪಕ್ಷಪಾತ ಕ್ರಮಗಳ ಕುರಿತಂತೆ ಹಲವಾರು ಟೀಕೆಗಳು ಬಂದುದರಿಂದ ೧೯೨೫ರಲ್ಲಿ ಸರಕಾರವು ಒಂದು ರೈಲು ಕಂಪನಿಯನ್ನು ತನ್ನ ಸ್ವಾಧೀನಕ್ಕೆ ತೆಗೆದುಕೊಂಡಿತು. ಕ್ರಮೇಣ ಇತರ ರೈಲು ಕಂಪನಿಗಳ ಆಡಳಿತವೂ ಸರಕಾರವದ ವಶವಾಯಿತು. ೧೯೫೦ರ ಸಮಯಕ್ಕೆ ರೈಲು ಸಾರಿಗೆಯ ಸಂಪೂರ್ಣ

ರಾಷ್ಟ್ರೀಕರಣ ಕಾರ್ಯ ಮುಗಿಯಿತು. ರೈಲು ಸಾರಿಗೆಯನ್ನು ಆಧುನೀಕರಣಗೊಳಿಸಲು ಸರಕಾರವು ಹಲವಾರು ಕಾರ್ಯಕ್ರಮಗಳನ್ನು ಕೈಗೊಳ್ಳುತ್ತಾ ಬಂದಿದೆ. ಅದರ ಒಂದು ಭಾಗವಾಗಿ ೧೯೫೧ರಲ್ಲಿ ರೈಲು ಮಂಡಳಿಯ ಸಮಿತಿಯೊಂದರ ಶಿಫಾರಸ್ಸಿನ ಮೇರೆಗೆ ಇಡೀ ರೈಲು ವ್ಯವಸ್ಥೆಯನ್ನು ಆರು ಗುಂಪುಗಳಾಗಿ ವಿಂಗಡಿಸಿ, ಅವುಗಳ ಆಡಳಿತ ಮತ್ತು ಹಣಕಾಸನ್ನು ಪ್ರತ್ಯೇಕ ವಿಭಾಗಗಳಿಗೆ ವಹಿಸಲಾಯಿತು. ಪ್ರಸ್ತುತ ಒಟ್ಟು ಹತ್ತು ವಿಭಾಗಗಳು ಅಸ್ತಿತ್ವದಲ್ಲಿವೆ. ೧೯೬೬ಕ್ಕೆ ಮೊದಲು ೯ ವಿಭಾಗಗಳಿದ್ದವು. ೧೯೬೬ರಲ್ಲಿ ಬೆಂಗಳೂರನ್ನು ಕೇಂದ್ರವನ್ನಾಗಿಸಿ ಒಂದು ಹೊಸ ರೈಲು ವಿಭಾಗಗಳನ್ನು ಸ್ಥಾಪಿಸಲಾಯಿತು. ನಂತರ ಆ ವಿಭಾಗದ ಕೇಂದ್ರವನ್ನು ಹುಬ್ಬಳ್ಳಿಗೆ ಬದಲಾಯಿಸಲಾಯಿತು. ಆ ವಿಭಾಗಗಳು, ಅವುಗಳ ಮುಖ್ಯ ಕಚೇರಿಯ ಸ್ಥಳಗಳು ಮತ್ತು ಅವುಗಳ ವ್ಯಾಪ್ತಿಯಲ್ಲಿರುವ ರೈಲು ಮಾರ್ಗದ ಉದ್ದಳತೆಯು ಈ ಮುಂದಿನಂತಿದೆ.

**ರೈಲು ವಿಭಾಗಗಳು**

| ಕ್ರ.ಸಂ. | ವಿಭಾಗಗಳ ಹೆಸರು | ಮುಖ್ಯ ಕಚೇರಿಯ ಸ್ಥಳ | ರೈಲು ಮಾರ್ಗ ಕಿ.ಮೀ. ಗಳಲ್ಲಿ |
|---|---|---|---|
| ೧. | ಕೇಂದ್ರೀಯ ವಿಭಾಗ | ಮುಂಬಯಿ ವಿ.ಟಿ. | ೬,೬೭೯ |
| ೨. | ಪೂರ್ವ ವಿಭಾಗ | ಕಲ್ಕತ್ತಾ | ೪,೧೯೭ |
| ೩. | ಉತ್ತರ ವಿಭಾಗ | ಹೊಸ ದೆಹಲಿ | ೧೦,೭೮೧ |
| ೪. | ಈಶಾನ್ಯ ವಿಭಾಗ | ಗೋರಖಪುರ | ೫,೧೦೪ |
| ೫. | ಈಶಾನ್ಯ ಗಡಿನಾಡು ವಿಭಾಗ | ಗೌಹಾತಿ | ೩,೬೨೮ |
| ೬. | ದಕ್ಷಿಣ ವಿಭಾಗ | ಚೆನ್ನೈ | ೬,೪೮೯ |
| ೭. | ದಕ್ಷಿಣ ಕೇಂದ್ರೀಯ ವಿಭಾಗ | ಸಿಕಂದರಾಬಾದ್ | ೬,೪೭೯ |
| ೮. | ಆಗ್ನೇಯ ವಿಭಾಗ | ಕಲ್ಕತ್ತಾ | ೬,೯೯೯ |
| ೯. | ಪಶ್ಚಿಮ ವಿಭಾಗ | ಮುಂಬಯಿ ಚರ್ಚ್‌ಗೇಟ್ | ೧೦,೩೩೭ |
| ೧೦. | ನೈರುತ್ಯ ವಿಭಾಗ | ಹುಬ್ಬಳ್ಳಿ | |

ಮೂಲ : India, 1980, P.355

ರೈಲು ವ್ಯವಸ್ಥೆಯ ಆಡಳಿತ ಮತ್ತು ಕಾರ್ಯನಿರ್ವಹಣೆಗಾಗಿ ಒಬ್ಬ ಹಿರಿಯ ಮಂತ್ರಿಯನ್ನೊಳಗೊಂಡು ಪ್ರತ್ಯೇಕ ಸಚಿವ ಶಾಖೆ ಇದೆ. ಒಬ್ಬ ಅಧ್ಯಕ್ಷರನ್ನೊಳಗೊಂಡ ರೈಲು ಮಂಡಳಿಯೂ ಅಸ್ತಿತ್ವದಲ್ಲಿದೆ. ಪ್ರತಿಯೊಂದು ವಿಭಾಗದ ರೈಲು ಸಾರಿಗೆ ವ್ಯವಸ್ಥೆಯ ಆಡಳಿತ, ಅಭಿವೃದ್ಧಿ ಮತ್ತು ಹಣಕಾಸಿನ ಜವಾಬ್ದಾರಿಯು ಒಬ್ಬೊಬ್ಬ ಮಹಾ ಕಾರ್ಯನಿರ್ವಾಹಕನ ನೇತೃತ್ವದಲ್ಲಿದೆ.

ರೈಲು ಸಾರಿಗೆಯಲ್ಲಿ ಮಹತ್ವದಲ್ಲಿ ಬದಲಾವಣೆಗಳನ್ನು ತರಲು ಐದನೆಯ ಪಂಚವಾರ್ಷಿಕ ಯೋಜನೆಯ ನಂತರದ ಅವಧಿಯಲ್ಲಿ ಪ್ರಯತ್ನಿಸಲಾಗಿದೆ. ಪ್ರಯಾಣಿಕರ ಸುರಕ್ಷತೆ, ಡೀಸಲ್ ಇಂಜಿನ್ನುಗಳ ಮತ್ತು ವಿದ್ಯುತ್ ಚಾಲಿತ ಇಂಜಿನ್ನುಗಳ ಅಳವಡಿಕೆಗೆ ಹೆಚ್ಚಿನ ಮಹತ್ವ ನೀಡಲಾಗಿದೆ. ೧೯೫೧ ಮತ್ತು ೨೦೦೧ರ ನಡುವಿನ ಅವಧಿಯಲ್ಲಿ ಡೀಸೆಲ್ ಮತ್ತು ವಿದ್ಯುತ್‌ಚಾಲಿತ ರೈಲುಗಳ ಸಂಖ್ಯೆ ೯೦ ರಿಂದ ೭೫೧೨ಕ್ಕೆ ಹೆಚ್ಚಿದೆ. ಈ ಅವಧಿಯಲ್ಲಿ ಹಬೆಯ ಸಹಾಯದಿಂದ ಚಲಿಸುವ ರೈಲುಗಳ ಸಂಖ್ಯೆಯ ೮,೧೨೦ ರಿಂದ ೫೪ಕ್ಕೆ ಇಳಿಯಿತು. ಒಟ್ಟು ಸರಕು ಸಾಗಣಿಕೆಯ ಶೇಕಡ ೯೫ರಷ್ಟನ್ನು ಡೀಸೆಲ್ ಮತ್ತು ವಿದ್ಯುತ್‌ಚಾಲಿತ ಇಂಜಿನ್ನುಗಳ ರೈಲುಗಳು ನಿರ್ವಹಿಸುತ್ತಿವೆ. ಆಧುನೀಕರಣ, ಸಂಕೇತದ ಸುಧಾರಣೆ ಮತ್ತು ಟೆಲಿ ಸಂಪರ್ಕಕ್ಕೆ ಇತ್ತೀಚಿನ ವರ್ಷಗಳಲ್ಲಿ ಹೆಚ್ಚಿನ ಆದ್ಯತೆ ನೀಡಲಾಗಿದೆ.

**೩. ವಾಯು ಸಾರಿಗೆ (ನಾಗರಿಕ ವಿಮಾನಯಾನ)**

ವಿಮಾನವು ಅತ್ಯಂತ ಚುರುಕಾದ ಸಾರಿಗೆಯಾಗಿದೆ. ಈ ಸಾರಿಗೆ ಮಾಧ್ಯಮದಿಂದ ಪ್ರಪಂಚದ ಗಾತ್ರವು ಕುಗ್ಗಿದೆ. ಜಗತ್ತಿನಾದ್ಯಂತ ಜನರ ಪ್ರಯಾಣ ಮತ್ತು ಕಾಗದಪತ್ರಗಳ ಶೀಘ್ರ ರಾಜಕಾರಣಿಗಳು, ಯೋಜಕರು, ಅರ್ಥತಜ್ಞರು, ವಿಜ್ಞಾನಿಗಳು, ಆಡಳಿತಗಾರರು, ಶಿಕ್ಷಣಾನುಭವಿಗಳು, ಉದ್ಯಮಿಗಳು ಮತ್ತು ಸಾಮಾನ್ಯ ಜನರು ಒಂದು ದೇಶದಿಂದ ಇನ್ನೊಂದು ದೇಶಕ್ಕೆ ಅಥವಾ ಪ್ರಪಂಚದ ಯಾವ ಮೂಲೆಗಾದರೂ ಚುರುಕಾದ ಪ್ರಯಾಣ ಮಾಡುವ ಅಗತ್ಯವನ್ನು ವಾಯು ಸಾರಿಗೆ ಪೂರೈಸಿದೆ. ಆಧುನಿಕ ಯುಗದಲ್ಲಿ ನಡೆಯುವ ಅಣು ಯುದ್ಧಗಳಿಗೂ ಅದು ಅತ್ಯುತ್ತಮ ಸಾಧನವಾಗಿದೆ.

ಭಾರತದಲ್ಲಿ ವಿಮಾನವು ೧೯೧೧ರಲ್ಲಿ ಪ್ರಾರಂಭವಾಯಿತು. ಅಲಹಾಬಾದಿನಿಂದ ನೈನಿಗೆ ೧೦ಕಿ.ಮೀ.ಗಳ ದೂರದಲ್ಲಿ ಪ್ರಥಮ ಬಾರಿಗೆ ಒಂದು ಟಪಾಲು ವಿಮಾನವು ಸಂಚರಿಸುವ ಮೂಲಕ ಇದು ಪ್ರಾರಂಭವಾಯಿತು. ೧೯೨೭ರಲ್ಲಿ ನಾಗರಿಕ ವಿಮಾನಯಾನ ಖಾತೆ ಸ್ಥಾಪನೆಗೊಂಡಿತು. ೧೯೨೯ರಲ್ಲಿ ಇಂಗ್ಲೆಂಡಿನೊಂದಿಗೆ ವಿಮಾನದ ಸಂಪರ್ಕ ಹೊಂದುವ ಮುಖಾಂತರ ಅಂತಾರಾಷ್ಟ್ರೀಯ ವಾಯು ಸಾರಿಗೆಯಲ್ಲಿ ಮುನ್ನಡೆ ಸಾಧಿಸಲಾಯಿತು. ಇದರ ಜೊತೆಗೆ ಕರಾಚಿ ಮತ್ತು ದೆಹಲಿ ಆಂತರಿಕ ವಿಮಾನ ಮಾರ್ಗವು ಕಾರ್ಯಾರಂಭಗೊಂಡಿತು. ೧೯೩೨ರಲ್ಲಿ ಪ್ರಾರಂಭಗೊಂಡಂತೆ ನಂತರದ ವರ್ಷಗಳಲ್ಲಿ ದೇಶದ ಅನೇಕ ಭಾಗಗಳಲ್ಲಿ ವಿಮಾನ ಮಾರ್ಗಗಳು ಬೆಳವಣಿಗೆಗೆ ಬಂದವು.

ಭಾರತದ ನಾಗರಿಕ ವಿಮಾನಯಾನದಲ್ಲಿ ಮೂರು ಘಟಕಗಳಿವೆ. ಅವುಗಳೆಂದರೆ ೧. ಇಂಡಿಯನ್ ಏರ್ ಲೈನ್ಸ್, ೨. ಏರ್ ಇಂಡಿಯಾ ಮತ್ತು ೩. ವಾಯು ದೂತ್.

ಏರ್ ಇಂಡಿಯಾ ಭಾರತದಿಂದ ವಿದೇಶಗಳಿಗೆ ಹೋಗುವ ಹಾಗೂ ಬರುವ ಜನರಿಗೆ ವಿಮಾನಯಾನದ ಸೇವೆಗಳನ್ನು ಒದಗಿಸುತ್ತಿದೆ. ಇಂಡಿಯನ್ ಏರ್ ಲೈನ್ಸ್ ಭಾರತದ ಪ್ರಮುಖ ಪಟ್ಟಣಗಳು ಮತ್ತು ಪ್ರವಾಸ ಕೇಂದ್ರಗಳು ಹಾಗೂ ನೆರೆಯ ರಾಷ್ಟ್ರಗಳಾದ ನೇಪಾಳ,

ಬರ್ಮಾ, ಶ್ರೀಲಂಕಾ ಮತ್ತು ಬಾಂಗ್ಲಾದೇಶಗಳೊಂದಿಗೆ ಸಂಪರ್ಕ ಕಲ್ಪಿಸಿದೆ.

ದೇಶದಲ್ಲಿ ಕೆಲವು ಸಣ್ಣ ಪಟ್ಟಣಗಳಿಗೆ ವಾಯು ಸಾರಿಗೆಯ ಸೌಲಭ್ಯವನ್ನು ವಿಸ್ತರಿಸಲು ೧೯೮೧ರಲ್ಲಿ ಮೂರನೆಯ ಸ್ತರದ ವಿಮಾನಯಾನವನ್ನು ಪ್ರಾರಂಭಿಸಲಾಯಿತು. ಇದಕ್ಕೆ 'ವಾಯು ದೂತ್' ಎಂದು ಹೆಸರು. ೧೯೮೩ರಲ್ಲಿ ೧೮ ಪಟ್ಟಣಗಳ ನಡುವೆ ಮಾತ್ರ ವಾಯುದೂತ್ ಸಂಚಾರ ಸೌಲಭ್ಯವನ್ನು ಕಲ್ಪಿಸಿತು. ೧೯೯೭ರಲ್ಲಿ ಅದು ೯೧ಕ್ಕೆ ಏರಿದೆ.

೧೯೯೧ರ ಪ್ರಾರಂಭದಲ್ಲಿ ದೇಶದ ಒಟ್ಟು ಸುಮಾರು ೧೪೦೦ ವಿಮಾನಗಳಿದ್ದವು. ೧೯೭೮ರಲ್ಲಿ ಭಾರತದ ವಿಮಾನಗಳು ಸುಮಾರು ೮೦ ದಶಲಕ್ಷ ಕಿ.ಮೀಗಳ ಉದ್ದದಲ್ಲಿ ಸಂಚರಿಸಿ ಸುಮಾರು ೬೦.೪ ಲಕ್ಷ ಪ್ರಯಾಣಿಕರು ಹಾಗೂ ಸುಮಾರು ೧.೦೫ ಲಕ್ಷ ಟನ್ನುಗಳ ಸರಕುಗಳು ಮತ್ತು ಟಪಾಲುಗಳನ್ನು ಸಾಗಿಸುತ್ತಿದ್ದರೆ ೨೦೦೪ರಲ್ಲಿ ಇವು ಸುಮಾರು ೧೦೦ ದಶಲಕ್ಷ ಕಿ.ಮೀ.ಉದ್ದದಲ್ಲಿ ಸಂಚರಿಸಿ ಸುಮಾರು ೨೦೦ ಲಕ್ಷ ಪ್ರಯಾಣಿಕರು ಹಾಗೂ ಸುಮಾರು ೪.೨ ಲಕ್ಷ ಟನ್ನುಗಳ ಸರಕುಗಳು ಮತ್ತು ಅಂಚೆಯನ್ನು ಸಾಗಿಸುತ್ತಿದ್ದವು.

ಭಾರತದಲ್ಲಿ ಒಟ್ಟು ನಾಲ್ಕು ಅಂತರಾಷ್ಟ್ರೀಯ ವಿಮಾನ ನಿಲ್ದಾಣಗಳು ಮತ್ತು ೧೧೪ ವಿಮಾನ ನಿಲ್ದಾಣಗಳಿವೆ. ಅಂತಾರಾಷ್ಟ್ರೀಯ ವಿಮಾನ ನಿಲ್ದಾಣಗಳೆಂದರೆ ೧. ಮುಂಬಯಿಯ ಸಾಂತಾಕ್ರುಜ್, ೨. ಕಲ್ಕತ್ತಾದ ಡಮ್‌ಡಮ್, ೩. ದೆಹಲಿಯ ಪಾಲಂ ಮತ್ತು ೪. ಚೆನ್ನೈ (ಮದ್ರಾಸ್) ಅಣ್ಣಾ (ಮೀನಂಬಾಕ್ಕಮ್).

## ಸಮಸ್ಯೆಗಳು

**೧. ದುಬಾರಿ ನಿರ್ಮಾಣದ ವೆಚ್ಚ:** ದುಬಾರಿ ಕಾರ್ಯನಿರ್ವಹಣಾ ವೆಚ್ಚವು ಭಾರತದ ವಾಯು ಸಾರಿಗೆಯು ಎದುರಿಸುತ್ತಿರುವ ಮುಖ್ಯ ಸಮಸ್ಯೆ. ಅಧಿಕ ಪ್ರಮಾಣದ ಇಂಧನದ ವೆಚ್ಚವು ಇದಕ್ಕೆ ಕಾರಣವಾಗಿದೆ. ಭಾರತದ ವಿಮಾನಯಾನದ ಕಾರ್ಯನಿರ್ವಹಣಾ ವೆಚ್ಚದಲ್ಲಿ ಶೇಕಡ ೩೦ ಭಾಗ ಇಂಧನದ ವೆಚ್ಚವಾಗಿದ್ದರೆ ಇತರ ದೇಶಗಳಲ್ಲಿ ಕೇವಲ ಶೇಕಡ ೧೦ರಷ್ಟಾಗಿದೆ. ಈ ಸಂಗತಿಯು ವಾಯು ಸಾರಿಗೆಯಲ್ಲಿ ನಷ್ಟಕ್ಕೆ ದಾರಿಯಾಗಿದೆ.

**೨. ವಿದೇಶೀ ಸ್ಪರ್ಧೆ:** ಏರ್ ಇಂಡಿಯಾವು ಉತ್ತಮ ಸೇವೆಯನ್ನೊದಗಿಸುತ್ತಿದ್ದ ಲಾಭಗಳಿಕೆಯ ದಿಸೆಯಲ್ಲಿದ್ದರೂ ಕೂಡ ವಿದೇಶಗಳಿಂದ ತೀವ್ರ ಸ್ಪರ್ಧೆಯನ್ನು ಎದುರಿಸಬೇಕಾಗಿದೆ.

**೩. ವಿಮಾನಗಳ ಕೊರತೆ:** ವಿಮಾನಗಳ ಕೊರತೆಯಿಂದಾಗಿ ಕೆಲವೇ ವಿಮಾನಗಳಲ್ಲಿ ಹೆಚ್ಚಿನ ಜನರನ್ನು ಪ್ರಯಾಸಕರವಾಗಿ ಸಾಗಿಸಬೇಕಾಗಿರುವುದು ಇಂಡಿಯನ್ ಏರ್‌ಲೈನ್ಸ್‌ನ ಸಮಸ್ಯೆಯಾಗಿದೆ.

**೪. ಕಡಿಮೆ ಸೌಲಭ್ಯಗಳು:** ವಾಯುದೂತ್‌ನ ಸೇವೆಗಳನ್ನು ಅನಿರ್ಬಂಧಿತವಾಗಿ ವಿಸ್ತರಿಸ ಲಾಗುತ್ತಿದೆ. ಆದರೆ ವಿಸ್ತರಣೆಗೆ ತಕ್ಕಂತೆ ಅದರಲ್ಲಿ ಸೌಲಭ್ಯಗಳು ಬೆಳೆದಿಲ್ಲ.

ಇತ್ತೀಚಿನ ವರ್ಷಗಳಲ್ಲಿ ವಾಯು ಸಾರಿಗೆಯು ಸುಧಾರಿಸುತ್ತಿದೆ. ಕೆಲವು ವರ್ಷಗಳಲ್ಲಿ ಇದು ಲಾಭಗಳನ್ನು ಗಳಿಸುವ ಸಾಧ್ಯತೆಯಿದೆ.

ಆಂತರಿಕ ವಿಮಾನದಲ್ಲಿ ಖಾಸಗೀಕರಣವನ್ನು ತರಲಾಗಿದೆ. ಜೆಟ್ ಮತ್ತು ಸಹಾರಾ ಕಂಪೆನಿಗಳ ವಿಮಾನಗಳು ದೇಶದ ಅನೇಕ ನಗರಗಳ ನಡುವೆ ಸಂಚರಿಸುತ್ತಿವೆ. ಕಳೆದ ೧೦ ವರ್ಷಗಳ ಅವಧಿಯಲ್ಲಿ ಖಾಸಗೀಕರಣವು ಬಹಳ ತೀವ್ರವಾಗಿ ನಡೆದಿದೆ. ವಿಮಾನಯಾನ ಸೇವೆಗಳನ್ನು ಉತ್ತಮಪಡಿಸುವುದು ಮತ್ತು ಪ್ರಯೋಜನಕಾರಿ ಸ್ಪರ್ಧೆಯನ್ನು ಹೆಚ್ಚುಸುವುದು ಈ ಕ್ರಮದ ಉದ್ದೇಶವಾಗಿದೆ.

### ೪. ಜಲ ಸಾರಿಗೆ

ಆರ್ಥಿಕಾಭಿವೃದ್ಧಿಯ ಸಾಧನೆ ಮತ್ತು ದೇಶದ ರಕ್ಷಣೆಯ ದೃಷ್ಟಿಯಿಂದ ಜಲ ಸಾರಿಗೆಯ ಪ್ರಾಮುಖ್ಯತೆ ವರ್ಣನೆಗೆ ಮೀರಿದ್ದು. ನದಿಗಳು ಮತ್ತು ಕಡಲುಗಳು ಹೆಚ್ಚಾಗಿರುವ ದೇಶಗಳಲ್ಲಿ ಜಲ ಸಾರಿಗೆಯು ಬೆಳವಣಿಗೆಗೆ ಉತ್ತಮ ಅವಕಾಶಗಳಿವೆ. ಮುಖ್ಯವಾಗಿ ಹಡಗು ಮತ್ತು ದೋಣಿಗಳು ಜಲ ಸಾರಿಗೆಯ ಸಾಧನೆಗಳಾಗಿವೆ. ಇದರಲ್ಲಿ ಎರಡು ಭಾಗಗಳಿವೆ. ಅವುಗಳೆಂದರೆ ೧. ಆಂತರಿಕ ಜಲ ಸಾರಿಗೆ ಮತ್ತು ೨. ನೌಕಾ ಕಡಲ ಸಾರಿಗೆ. ನದಿಗಳು ಮತ್ತು ಕಾಲುವೆಗಳು ಆಂತರಿಕ ಜಲ ಸಾರಿಗೆಯ ಆಶ್ರಯಗಳಾಗಿವೆ. ಈ ಸಾರಿಗೆಯ ಮೂಲಕ ಆಂತರಿಕ ವ್ಯಾಪಾರ, ಸರಕುಗಳು ಮತ್ತು ಪ್ರಯಾಣಿಕರ ಸಗಣೆ ನಡೆಯುತ್ತಿದೆ. ಕಡಲ ಸಾರಿಗೆಯು ಅಂತಾರಾಷ್ಟ್ರೀಯ ಸಂಪರ್ಕ ಕಲ್ಪನೆ ಮತ್ತು ವ್ಯಾಪಾರದ ಮುಖ್ಯ ಸಾಧನವಾಗಿದೆ.

### ಮಹತ್ವ

**೧. ಕಡಿಮೆ ವೆಚ್ಚದ ಸಾಗಣೆ ವ್ಯವಸ್ಥೆ :** ಜಲಮಾರ್ಗಗಳು ಪ್ರಕೃತಿದತ್ತವಾಗಿದ್ದು ಅವುಗಳ ನಿರ್ಮಾಣಕ್ಕೆ ಯಾವ ರೀತಿಯ ವೆಚ್ಚವನ್ನು ಕೈಗೊಳ್ಳಬೇಕಾಗಿಲ್ಲದಿರುವುದರಿಂದ ಜಲಸಾರಿಗೆಯು ಅತ್ಯಂತ ಸುಲಭವಾದ ಮತ್ತು ಕಡಿಮೆ ವೆಚ್ಚದ ಸಾಗಣೆಯ ವ್ಯವಸ್ಥೆಯಾಗಿದೆ. ಜಲಮಾರ್ಗಗಳು ಶಾಶ್ವತವಾಗಿರುವುದರಿಂದ ಅವುಗಳ ವಿಸ್ತರಣೆ ಅಥವಾ ದುರಸ್ತಿ ಕಾರ್ಯಗಳನ್ನು ಮಾಡುವ ಪ್ರಮೇಯವಿರುವುದಿಲ್ಲ. ಇದರ ಫಲವಾಗಿ ಜಲ ಸಾರಿಗೆಯ ಅಭಿವೃದ್ಧಿಗೆ ಅತ್ಯುತ್ತಮ ಅವಕಾಶಗಳಿರುತ್ತವೆ.

**೨. ಭಾರಿ ವಸ್ತುಗಳ ಸಾಗಣೆಕೆಗೆ ಅತ್ಯುತ್ತಮ :** ಅದಿರುಗಳು, ಕಲ್ಲಿದ್ದಲು, ಬೃಹತ್ ಯಂತ್ರಗಳು, ಸಿಮೆಂಟು ಮೊದಲಾದ ಭಾರೀ ತೂಕದ ಸರಕುಗಳು ಹಾಗೂ ಗಾಜುಗಳು, ವಿದ್ಯುತ್ ಸಾಮಗ್ರಿಗಳು ಮುಂತಾದ ಭಾರಿ ವಸ್ತುಗಳ ಸಾಗಣೆಗೆ ಜಲಸಾರಿಗೆಯು ಉತ್ತಮವಾದ ಸಾರಿಗೆ ಮಧ್ಯವೆನಿಸಿದೆ.

**೩. ಅಂತಾರಾಷ್ಟ್ರೀಯ ವ್ಯಾಪಾರಕ್ಕೆ ಸೂಕ್ತವಾದುದು :** ಬಹಳ ದೂರದ ಸಾಗಣೆ ಮತ್ತು ಅಂತಾರಾಷ್ಟ್ರೀಯ ವ್ಯಾಪಾರಕ್ಕೆ ಜಲ ಸಾರಿಗೆಯು ಮಹತ್ವಪೂರ್ಣವಾಗಿ ಸಹಾಯ ಮಾಡುತ್ತದೆ. ರಕ್ಷಣೆಯ ದೃಷ್ಟಿಯಿಂದ ಜಲ ಸಾರಿಗೆಯ ಪ್ರಾಮುಖ್ಯವು ಗಣನೀಯವಾದುದು. ಹದಿನೆಂಟನೆಯ ಶತಮಾನದ ಅಂತ್ಯ ಮತ್ತು ಹತ್ತೊಂಬತ್ತನೆಯ ಶತಮಾನದ ಆದಿಭಾಗದಲ್ಲಿ ವ್ಯಾಪಕವಾಗಿ ಬೆಳೆದಿದ್ದ ನೌಕಾ ಸಾರಿಗೆಯ ಮೂಲಕ ಇಂಗ್ಲೆಂಡ್, ನೆಪೋಲಿಯನ್ನನ

ಫ್ರಾನ್ಸನ್ನು ಯಶಸ್ವಿಯಾಗಿ ಎದುರಿಸಲು ಸಾಧ್ಯವಾಯಿತು ಎಂಬುದು ಗಮನಾರ್ಹವಾದ ವಿಚಾರ. ಪ್ರಥಮ ಹಾಗೂ ದ್ವಿತೀಯ ಜಾಗತಿಕ ಯುದ್ಧಗಳ ಅವಧಿಯಲ್ಲಿಯೂ ನೌಕಾ ಸಾರಿಗೆ ಪಾತ್ರ ವಹಿಸಿತು. ಇಂದಿನ ಅಣು ಯುಗದಲ್ಲಿ ಕೂಡ ಶತ್ರುಗಳ ಮೇಲೆ ಗೂಢಾಚಾರಿಕೆ ಮತ್ತು ಆಕ್ರಮಣದಲ್ಲಿ ವಿವಿಧ ಆಧುನಿಕ ನೌಕೆಗಳು ಫಲಪ್ರದವಾಗಿ ಕಾರ್ಯ ನಿರ್ವಹಿಸುತ್ತವೆ.

**೧. ಹಡಗು ಸಾರಿಗೆ (ನೌಕಾ ಸಾರಿಗೆ) (ಸಾಗರೋತ್ತರ ಸಾರಿಗೆ)**

ಸುಮಾರು ೫೭೦೦ ಕಿ.ಮೀ.ಗಳ ಉದ್ದದ ಕಡಲ ತೀರವನ್ನು ಹೊಂದಿರುವ ಭಾರತದಲ್ಲಿ ನೌಕಾ ಸಾರಿಗೆಯ ಬೆಳವಣಿಗೆಗೆ ಸ್ವಾಭಾವಿಕವಾದ ಅವಕಾಶಗಳಿವೆ. ಬ್ರಿಟಿಷರ ಆಡಳಿತ ಕಾಲದಲ್ಲಿ ಭಾರತದಲ್ಲಿ ಹಡಗು ಸಾರಿಗೆಯ ಬೆಳವಣಿಗೆಗೆ ಅವಕಾಶಗಳೇ ಇಲ್ಲದಂತಾಗಿದ್ದವು. ಸ್ವಾತಂತ್ರ್ಯೋತ್ತರ ಅವಧಿಯಲ್ಲಿ ನೀಡಿದ ಗಮನದ ಫಲವಾಗಿ ಹಡಗುಗಳ ಸಂಖ್ಯೆ ಸಾಗಣೆ ಸಾಮರ್ಥ್ಯ ಮತ್ತು ವೈವಿಧ್ಯತೆಯಲ್ಲಿ ಅಸಾಧಾರಣ ಪ್ರಗತಿಯುಂಟಾಗಿದೆ. ೧೯೪೭ರಲ್ಲಿ ೫೯, ಮತ್ತು ೧೯೫೧ರಲ್ಲಿ ೯೪, ೧೯೬೭ರಲ್ಲಿ ೨೨೧ ಇದ್ದ ಹಡಗುಗಳ ಸಂಖ್ಯೆ ೧೯೭೮ರಲ್ಲಿ ೩೭೫ಕ್ಕೆ ಹಾಗೂ ೨೦೦೪ರಲ್ಲಿ ೪೬೦ಕ್ಕೆ ಏರಿತು. ಅವುಗಳ ಸರಕು ಸಾಗಣೆ ಸಾಮರ್ಥ್ಯವು ಈ ವರ್ಷಗಳಲ್ಲಿ ಕ್ರಮವಾಗಿ, ೧.೯, ೪.೦, ೯.೦ ಮತ್ತು ೫೪.೦ ಮತ್ತು ೨೦೦೪ಕ್ಕೆ ೧೧೦೮ ಲಕ್ಷ ಟನ್ನುಗಳಷ್ಟಾಗಿದೆ. ತೃತೀಯ ಪಂಚವಾರ್ಷಿಕ ಯೋಜನೆಯ ನಂತರದ ಅವಧಿಯಲ್ಲಿ ಉಜ್ವಲ ಬೆಳವಣಿಗೆ ಸಂಭವಿಸಿದೆ. ಭಾರವಾದ ಸರಕುಗಳನ್ನು, ಆಹಾರಧಾನ್ಯಗಳನ್ನು ಹಾಗೂ ಪೆಟ್ರೋಲಿಯಂ ಮುಂತಾದ ದ್ರವ ವಸ್ತುಗಳನ್ನು ಸಾಗಿಸಲು ಅವಶ್ಯಕವಾಗಿರುವ ವಿವಿಧ ರೀತಿಯ ನೌಕಾ ಪಂಕ್ತಿಗಳ ಸಂಖ್ಯೆ ಗಣನೀಯವಾಗಿ ಬೆಳೆದಿದೆ. ಆರನೇ ಯೋಜನೆಯ ಕೊನೆಯಲ್ಲಿ ಸರಕುಗಳ ಸಾಗಣಿಕೆಯ ಒಟ್ಟು ಸಾಮರ್ಥ್ಯವನ್ನು ೭೮ ಲಕ್ಷ ಟನ್ನುಗಳಿಗೆ ಏರಿಸಲಾಯಿತು.

ಭಾರತದಲ್ಲಿ ಹಡಗು ಸಾರಿಗೆಯ ಆಡಳಿತ ಮತ್ತು ಅಭಿವೃದ್ಧಿಯನ್ನು ನೋಡಿಕೊಳ್ಳುವ ಹಲವು ಹಡಗು ಸಾರಿಗೆ ಕಂಪನಿಗಳಿವೆ. ಅಸ್ತಿತ್ವದಲ್ಲಿರುವ ೬೩ ಕಂಪನಿಗಳಲ್ಲಿ ೩ ಕಂಪನಿಗಳು ಸಾರ್ವಜನಿಕ ವಲಯದಲ್ಲಿವೆ. ಅವುಗಳೆಂದರೆ

೧. ಭಾರತದ ಹಡಗು ಸಾರಿಗೆ ನಿಗಮ, ೨. ಜಯಂತಿ ಹಡುಗ ಸಾರಿಗೆ ಕಂಪನಿ ಮತ್ತು ೩. ಮೊಗಲ್ ಲೈನ್ ನಿಯಮಿತ. ಉಳಿದ ಎಲ್ಲ ಕಂಪನಿಗಳು ಖಾಸಗಿ ಕ್ಷೇತ್ರದಲ್ಲಿವೆ. ಭಾರತದಲ್ಲಿ ನಾಲ್ಕು ದೊಡ್ಡ ಹಡಗು ನಿರ್ಮಾಣ ಕೇಂದ್ರಗಳಿವೆ. ಅವುಗಳೆಂದರೆ

೧. ವಿಶಾಖಪಟ್ಟಣದಲ್ಲಿನ ಹಿಂದೂಸ್ತಾನ ಶಿಫ್‌ಯಾರ್ಡ್, ೨. ಕಲ್ಕತ್ತಾದಲ್ಲಿನ ಗಾರ್ಡನ್ ರಿಚ್ ಶಿಫ್‌ಯಾರ್ಡ್, ೩. ಕೊಚ್ಚಿನ್‌ಲ್ಲಿನ, ಕೊಚ್ಚಿನ್ ಶಿಫ್‌ಯಾರ್ಡ್ ಮತ್ತು ೪. ಮುಂಬಯಿನಲ್ಲಿನ ಮಜಗಾಂವ ಡಾಕ್, ಈ ಎಲ್ಲಾ ಹಡಗುಕಟ್ಟೆಗಳು ಸಾರ್ವಜನಿಕ ವಲಯದಲ್ಲಿವೆ.

ದೇಶದಲ್ಲಿ ಇಂದು ಹತ್ತು ಪ್ರಮುಖ ಬಂದರುಗಳೆಂದರೆ ಪಶ್ಚಿಮ ಕರಾವಳಿಯಲ್ಲಿ ಮುಂಬಯಿ, ಕಾಂಡ್ಲಾ, ಮರ್ಮಾ, ಗೋವಾ, ಮಂಗಳೂರು ಮತ್ತು ಕೊಚ್ಚಿನ್. ಪೂರ್ವ ಕರಾವಳಿಯಲ್ಲಿ ಟ್ಯೂಟಿಕಾರಿನ್, ಮದ್ರಾಸ್, ವಿಶಾಖ ಪಟ್ಟಣ, ಪ್ಯಾರದೀಪ್ ಮತ್ತು ಕಲ್ಕತ್ತ ಬಂದರುಗಳು ಭಾರತದಲ್ಲಿ ಅತಿ ದೊಡ್ಡ ಬಂದರುಗಳಾಗಿದ್ದು ಸುಮಾರು ೨೫ರಷ್ಟು ವಿದೇಶೀ ವ್ಯಾಪಾರವು ಅವುಗಳ ಮೂಲಕ ನಡೆಯುತ್ತಿದೆ.

**ಸಮಸ್ಯೆಗಳು**

ಸ್ವಾತಂತ್ರ್ಯಾನಂತರ ಭಾರತದ ನೌಕಾ ಸಾರಿಗೆಯಲ್ಲಿ ವಿಶೇಷ ಪ್ರಗತಿಯಾಗಿದ್ದರೂ ಸಹ ಅದು ಹಲವಾರು ಸಮಸ್ಯೆಗಳಿಗೆ ಸಿಕ್ಕಿದೆ.

**೧. ಸಾಗಣೆ ಸಾಮರ್ಥ್ಯದ ಕೊರತೆ :** ಸಾಗಣೆ ಸಾಮರ್ಥ್ಯದ ಕೊರತೆಯು ಪ್ರಮುಖ ಸಮಸ್ಯೆಯಾಗಿದೆ. ಹಡಗುಗಳು, ನೌಕಾಪಂಕ್ತಿಗಳ ಮತ್ತು ಸಾಗಣೆ ಸಾಮರ್ಥ್ಯವು ನಿರೀಕ್ಷಿಸಿದಷ್ಟು ಬೆಳೆದಿಲ್ಲ.

**೨. ವಿದೇಶೀ ವಿನಿಮಯದ ಅಭಾವ :** ವಿದೇಶೀ ವಿನಿಮಯದ ತೀವ್ರ ಕೊರತೆಯು ನೌಕಾ ಸಾರಿಗೆಯ ಪ್ರಗತಿಯನ್ನು ಬಾಧಿಸುತ್ತದೆ. ಸರಕು ಸಾಗಣೆ ಸಾಮರ್ಥ್ಯದ ಅನುರೂಪ ಬೆಳವಣಿಗೆಯ ಪರಿಣಾಮವಾಗಿ ವಿದೇಶೀ ವ್ಯಾಪಾರದ ಉದ್ದೇಶಕ್ಕೆ ಇತರ ದೇಶಗಳ ನೌಕಾ ಸಾರಿಗೆಯ ಸೇವೆಗಳನ್ನು ಕೋರಬೇಕಾಗಿದೆ. ಇದು ವಿದೇಶೀ ವಿನಿಮಯದ ಅಗಾಧ ಕೊರತೆಗೆ ಕಾರಣವಾಗಿದ್ದು ನೌಕಾ ಸಾರಿಗೆಯ ಬೆಳವಣಿಗೆಯ ಬುಡವನ್ನೇ ಅಲ್ಲಾಡಿಸುತ್ತಿದೆ.

**೩. ದುಬಾರಿ ವೆಚ್ಚ :** ಭಾರತದ ನೌಕಾ ಸಾರಿಗೆ ದುಬಾರಿ ವೆಚ್ಚದಲ್ಲಿ ನಡೆಯುತ್ತಿದೆ. ನೌಕೆಗಳ ದುರಸ್ತಿಗಾಗಿ ಭಾರೀ ವೆಚ್ಚ, ಹೆಚ್ಚಿನ ವೇತನಗಳು, ಸರಕುಗಳನ್ನು ಭರ್ತಿಮಾಡುವಿಕೆ ಮತ್ತು ಇಳಿಸುವಿಕೆಯ ವೆಚ್ಚ ಮುಂತಾದವುಗಳಿಂದ ಕಾರ್ಯನಿರ್ವಹಣೆ ಬಹಳ ದುಬಾರಿಯಾಗಿದೆ.

**೪. ಶ್ರಮದ ಅಧ್ಯಕ್ಷತೆ :** ಕಾರ್ಮಿಕರ ವ್ಯವಸ್ಥೆ ಹಾಗೂ ಮೇಲ್ವಿಚಾರಣೆ ಕೊರತೆಯಿಂದ ಶ್ರಮದ ಅಧ್ಯಕ್ಷತೆ ತಾಂಡವಾಡುತ್ತಿದೆ. ಜೊತೆಗೆ ತಾಂಡವಾಡುತ್ತಿದೆ. ಜೊತೆಗೆ ಕಾರ್ಮಿಕರ ಮುಷ್ಕರಗಳೂ ಅಪರೂಪವೇನಲ್ಲ. ಇದರಿಂದ ನೌಕಾ ಸಾರಿಗೆಯ ಗಳಿಕೆ ತಗ್ಗಿದೆ.

**೫. ಸ್ಪರ್ಧೆ :** ಆಂತರಿಕ ಸಾರಿಗೆಯಲ್ಲಿ ರಸ್ತೆ ಮತ್ತು ರೈಲು ಸಾರಿಗೆಯಿಂದ ಇದು ಸ್ಪರ್ಧೆಯನ್ನು ಎದುರಿಸುತ್ತಿದೆ. ಇದರಿಂದ ಜಲಸಾರಿಗೆಯ ಸರಕು ಸಾಗಣೆ ಸಾಮರ್ಥ್ಯದ ಹೆಚ್ಚಳಕ್ಕೆ ಧಕ್ಕೆಯುಂಟಾಗಿದೆ.

**೬. ಅಂತಾರಾಷ್ಟ್ರೀಯ ಹಡಗು ಕಂಪನಿಗಳಿಂದ ಪೈಪೋಟಿ :** ಭಾರತದ ಹಡಗು ಕಂಪನಿಗಳು ಅನೇಕ ಅಂತಾರಾಷ್ಟ್ರೀಯ ಹಡಗು ಕಂಪನಿಗಳ ಅಸಮಾನ್ಯ ಪೈಪೋಟಿಗೆ ತುತ್ತಾಗಿವೆ. ತಗ್ಗಿದ ಸಾಗಣೆ ಸಾಮರ್ಥ್ಯ, ವಿದೇಶೀ ವಿನಿಮಯ ಕೊರತೆ, ವಿಸ್ತರಣ ಕಾರ್ಯಗಳಿಗೆ ಅಡಚಣೆ, ಪರಾವಲಂಬನೆಯ ನಿರಂತರ ಮುನ್ನಡೆ ಮೊದಲಾದವು ಇದರ ಫಲವಾಗಿದೆ.

ಕಾರ್ಯನಿರ್ವಹಣ ವೆಚ್ಚವನ್ನು ತಗ್ಗಿಸುವಿಕೆ ಮತ್ತು ಆಡಳಿತಾತ್ಮಕ ಹಾಗೂ ಕಾರ್ಮಿಕ ಅಧ್ಯಕ್ಷತೆಯ ನಿವಾರಣೆಯು ನೌಕಾ ಸಾರಿಗೆಯ ಅಭಿವೃದ್ಧಿಯಲ್ಲಿ ಗಮನಾರ್ಹ ಪಾತ್ರ ವಹಿಸುವುದರಲ್ಲಿ ಸಂದೇಹವಿಲ್ಲ. ಸಾಗಣೆ ಸಾಮರ್ಥ್ಯದ ಹೆಚ್ಚಳ ಮತ್ತು ವಿಸ್ತರಣಾ ಕಾರ್ಯಗಳಿಗೆ ಅವಿಚ್ಛಿನ್ನವಾಗಿ ವಿಶೇಷ ಗಮನ ಹರಿಸಬೇಕಾಗಿದೆ. ಇದಕ್ಕಾಗಿ ಯೋಜನೆಗಳಲ್ಲಿ ಹೆಚ್ಚಿನ ಮೊತ್ತದ ವೆಚ್ಚವು ಅವಶ್ಯಕವಾಗಿದೆ.

**೨. ಆಂತರಿಕ ಜಲ ಸಾರಿಗೆ:** ಆಂತರಿಕ ಜಲಸಾರಿಗೆಯು ದೇಶದ ಒಳಗಡೆಯೇ ನದಿಗಳಲ್ಲಿ ಮತ್ತು ಕಾಲುವೆಗಳಲ್ಲಿ ಹಡಗುಗಳ ಮತ್ತು ದೋಣಿಗಳ ಮೂಲಕ ನಡೆಯುವ ಸಾರಿಗೆಯಾಗಿದೆ. ಭಾರತದಲ್ಲಿ ಸುಮಾರು ೧೪,೧೫೦ ಕಿಲೋಮೀಟರ್‌ಗಳ ಉದ್ದದ ನದಿ ಸಂಚಾರ ಮಾರ್ಗಗಳು ಅಸ್ತಿತ್ವದಲ್ಲಿರುವುದರಿಂದ ಆಂತರಿಕ ಜಲಸಾರಿಗೆಯ ಅಭಿವೃದ್ಧಿಗೆ ಹೇರಳವಾದ ವ್ಯಾಪ್ತಿ ಇದೆ. ಗಂಗಾ, ಬ್ರಹ್ಮಪುತ್ರಾ ಮತ್ತು ಇವುಗಳ ಉಪನದಿಗಳು, ಕೃಷ್ಣಾ, ಗೋದಾವರಿ ಮತ್ತು ಅವುಗಳ ಕಾಲುವೆಗಳು ಹಾಗೂ ಮಾಂಡೇವಿ ಮತ್ತು ಝ್ಯೂರಿ ನದಿಗಳು ಆಂತರಿಕ ಜಲಸಾರಿಗೆಗೆ ವ್ಯಾಪಕವಾದ ಅವಕಾಶಗಳನ್ನು ದೊರಕಿಸಿವೆ. ಆದರೆ ಇತ್ತೀಚಿನ ವರ್ಷಗಳಲ್ಲಿ ರೈಲು ಸಾರಿಗೆಯ ಪ್ರಗತಿಯ ಕಡೆಗೆ ವಿಶೇಷ ಗಮನ ನೀಡಿರುವಿಕೆ ಮತ್ತು ನೀರಾವರಿಗೆ ನೀರಿನ ದಿಕ್ಚ್ಯುತಿಯಿಂದ ಆಂತರಿಕ ಜಲಸಾರಿಗೆಯ ಬೆಳವಣಿಗೆಗೆ ನಿರ್ಬಂಧ ಉಂಟಾಗಿದೆ. ಆದಾಗ್ಯೂ ಕೆಲವು ರಾಜ್ಯಗಳಲ್ಲಿ ಸರಕುಗಳ ಸಾಗಣೆಗೆ ಇಂದಿಗೂ ಇದು ಪ್ರಮುಖ ಸಾರಿಗೆ ಮಾಧ್ಯಮವಾಗಿ ಉಳಿದಿದೆ.

**ಬಂದರುಗಳ ಅಭಿವೃದ್ಧಿಯಲ್ಲಿ ಖಾಸಗಿ ಮತ್ತು ಸಾರ್ವಜನಿಕ ವಲಯಗಳ ಸಹಭಾಗಿತ್ವ**

ಭಾರತದಲ್ಲಿ ೧೦ ಪ್ರಮುಖ ಬಂದರುಗಳಿದ್ದು ಅವುಗಳನ್ನು ಕೇಂದ್ರ ಸರ್ಕಾರದ ವ್ಯಾಪ್ತಿಯಲ್ಲಿರುವ ಭಾರತದ ಬಂದರು ವಿಶ್ವಸ್ಥ ಸಂಸ್ಥೆ ನಿರ್ವಹಿಸುತ್ತಿದೆ. ೧೮೦ ಸಣ್ಣ ಪ್ರಮಾಣದ ಬಂದರುಗಳು ರಾಜ್ಯ ಸರ್ಕಾರಗಳ ವ್ಯಾಪ್ತಿಗೆ ಒಳಪಟ್ಟಿವೆ. ಪ್ರಮುಖ ಬಂದರುಗಳು ೨೭೨ ದಶಲಕ್ಷ ಟನ್ನುಗಳ ಸರಕು ಸಾಗಣಿಕೆಯನ್ನು ನಿರ್ವಹಿಸುತ್ತಿವೆ. ಅಂದರೆ ಒಟ್ಟು ಸರಕು ಸಾಗಾಣಿಕೆಯಲ್ಲಿ ಶೇಕಡ ೯೦ರಷ್ಟು ಬಂದರುಗಳ ಮೂಲಕ ನಡೆಯುತ್ತಿವೆ. ಸರಕು ಸಾಗಣಿಕೆಯನ್ನು ಪರಿಣಾಮಕಾರಿಯಾಗಿ ನಿರ್ವಹಿಸಲು ಬಂದರುಗಳಲ್ಲಿ ಮೂಲ ಸೌಲಭ್ಯಗಳ ಕೊರತೆ ಇದೆ.

ಬಂದರುಗಳ ಸಾಮರ್ಥ್ಯದಲ್ಲಿರುವ ಬೇಡಿಕೆ ಮತ್ತು ಪೂರೈಕೆಯ ನಡುವಿನ ಕೊರತೆಯನ್ನು ತುಂಬಲು ಬಂದರುಗಳ ಅಭಿವೃದ್ಧಿಗೆ ಖಾಸಗಿ ಬಂಡವಾಳ ಹೂಡಿಕೆಯನ್ನು ಪ್ರೋತ್ಸಾಹಿಸಲಾಗುತ್ತಿದೆ.

೧. ಖಾಸಗಿ ಉದ್ಯಮಿಗಳು ಹಡಗು ದುರಸ್ತಿಯ ಸೌಲಭ್ಯಗಳನ್ನು ಅಭಿವೃದ್ಧಿಪಡಿಸಲು ಮತ್ತು ಬಂದರುಗಳಲ್ಲಿ ದಾಸ್ತಾನು ಮಳಿಗೆಗಳನ್ನು ನಿರ್ಮಿಸಲು ಅವಕಾಶ ಕಲ್ಪಿಸಲಾಗಿದೆ.
೨. ನಿರ್ಮಿಸುವ, ಕಾರ್ಯಾಚರಣೆ ಮಾಡುವ ಮತ್ತು ವರ್ಗಾಯಿಸುವ ಮಾದರಿಯನ್ನು

ಬಂದರು ಅಭಿವೃದ್ಧಿಯಲ್ಲಿಯೂ ಅನುಸರಿಸಲಾಗುತ್ತಿದೆ. ಖಾಸಗಿ ಉದ್ಯಮಿಗಳು ಬಂದರುಗಳನ್ನು ನಿರ್ಮಿಸಿ ಕೆಲವು ವರ್ಷಗಳ ನಂತರ ಭಾರತದ ಬಂದರು ವಿಶ್ವಸ್ಥ ಮಂಡಳಿಗೆ ವರ್ಗಾಯಿಸಬೇಕು.

೩. ಬಂದರು ವಲಯದಲ್ಲಿ ವಿದೇಶೀ ಹೂಡಿಕೆಗೆ ಬಹಳ ಉದಾರವಾದ ಅವಕಾಶಗಳನ್ನು ಕಲ್ಪಿಸಲಾಗಿದೆ. ಬಂದರು ನಿರ್ಮಾಣ ಚಟುವಟಿಕೆಗಳಲ್ಲಿ ಶೇಕಡ ೭೪ರವರೆಗೆ ವಿದೇಶೀ ಪಾಲು ಬಂಡವಾಳವನ್ನು ತೊಡಗಿಸಲು ತಕ್ಷಣವೇ ಅನುಮೋದನೆ ನೀಡಲಾಗುತ್ತದೆ.

## ೬.೨. ಸಂಪರ್ಕ (ಸಂವಹನ)

ಸುದ್ದಿಗಳ ಮತ್ತು ಮಾಹಿತಿಗಳ ಪ್ರಸಾರ ಮಾಧ್ಯಮಕ್ಕೆ ಸಂಪರ್ಕ ವ್ಯವಸ್ಥೆ ಅಥವಾ ಸಂವಹನ ವ್ಯವಸ್ಥೆ ಎಂದು ಹೆಸರು. ಸಂಪರ್ಕವು ಒಂದು ಮಾಧ್ಯಮವಾಗಿದ್ದು ಅಭಿವೃದ್ಧಿ ಕ್ರಿಯೆಗೆ ಅತ್ಯಾವಶ್ಯಕ ಅಂಗವಾಗಿದೆ.

**ಆರ್ಥಿಕಾಭಿವೃದ್ಧಿಯಲ್ಲಿ ಸಂಪರ್ಕದ ಪಾತ್ರ**

ಆರ್ಥಿಕಾಭಿವೃದ್ಧಿಯಲ್ಲಿ ಸಂಪರ್ಕದ ಪಾತ್ರವನ್ನು ಕೆಳಕಂಡಂತೆ ವಿವರಿಸಬಹುದು.

೧. ಸಂಪರ್ಕವು ಸುದ್ದಿಗಳ ಪ್ರಸಾರ ಮತ್ತು ಸಾಗಟಕ್ಕೆ ಅತ್ಯಾವಶ್ಯಕವಾಗಿದೆ.

೨. ಸಂಪರ್ಕ ವ್ಯವಸ್ಥೆಯು ಮಾರುಕಟ್ಟೆಗಳ ಬಗ್ಗೆ ಅಗತ್ಯ ಮಾಹಿತಿಗಳನ್ನು ಒದಗಿಸುವ ಮೂಲಕ ಮಾರುವವರನ್ನು ಮತ್ತು ಕೊಳ್ಳುವವರನ್ನು ಪರಿಣಾಮಕಾರಿಯಾಗಿ ಒಂದೆಡೆ ಸೇರಿಸುತ್ತದೆ.

೩. ಸಂಪರ್ಕವು ಉದ್ಯಮ, ವಾಣಿಜ್ಯ ಮತ್ತು ವ್ಯಾಪಾರದ ಬೆಳವಣಿಗೆಗೆ ಅತ್ಯಾವಶ್ಯಕವಾಗಿದೆ.

೪. ಆಧುನಿಕ ಯುಗದಲ್ಲಿ ಶಿಕ್ಷಣ, ಬ್ಯಾಂಕೋದ್ಯಮ ಮುಂತಾದ ಸೇವೆಗಳ ವಿಸ್ತರಣೆಗೆ ಸಂಪರ್ಕವು ಅತಿ ಪ್ರಮುಖ ಮಾಧ್ಯಮವಾಗಿದೆ.

**ರಚನೆ**

ಸಂಪರ್ಕ ವ್ಯವಸ್ಥೆಯು ಅಂಚೆ ಸೇವೆ, ದೂರವಾಣಿ, ದೂರಸಂಪರ್ಕ, ರೇಡಿಯೋ, ದೂರದರ್ಶನ, ನಿಸ್ತಂತು ಸೇವೆ, ಫ್ಯಾಕ್ಸ್, ಪೇಜರ್, ಮೊಬೈಲ್, ಇಂಟರ್‌ನೆಟ್, ಮೊದಲಾದವುಗಳನ್ನು ಒಳಗೊಂಡಿದೆ. ಇವೆಲ್ಲವೂ ಸುದ್ದಿ ಪ್ರಸಾರದ ಮತ್ತು ಮಾಹಿತಿಯನ್ನು ಒದಗಿಸುವಿಕೆಯ ಮಾಧ್ಯಮಗಳಾಗಿವೆ.

೧. ಅಂಚೆ ವ್ಯವಸ್ಥೆ: ಅಂಚೆ ವ್ಯವಸ್ಥೆಯು ಸುದ್ದಿ ಸಾಗಣೆಗೆ ಲಭ್ಯವಿರುವ ಮೂಲ ಸೌಲಭ್ಯವಾಗಿದೆ. ಆಧುನಿಕ ರೀತಿಯ ಅಂಚೆ ವ್ಯವಸ್ಥೆಯು ಭಾರತದಲ್ಲಿ ೧೮೩೭ರಲ್ಲಿ ಆಚರಣೆಗೆ ಬಂದಿತು. ೧೯೫೦-೫೧ರ ತರುವಾಯ ಅಂಚೆ ಜಾಲವನ್ನು ದೇಶದಾದ್ಯಂತ ವಿಸ್ತರಿಸಲಾಯಿತು. ಇತ್ತೀಚಿನ ವರ್ಷಗಳಲ್ಲಿ ಗ್ರಾಮೀಣ ಮತ್ತು ಗುಡ್ಡಗಾಡು ಪ್ರದೇಶಗಳಲ್ಲಿಯೂ ಅಂಚೆ ಸೇವೆಯನ್ನು ವ್ಯವಸ್ಥಿತವಾಗಿ ಅಭಿವೃದ್ಧಿಪಡಿಸಲಾಗುತ್ತಿದೆ. ದೇಶದಾದ್ಯಂತ ಸುಮಾರು

೧.೫೫ ಲಕ್ಷ ಅಂಚೆ ಕಚೇರಿಗಳಿವೆ. ಭಾರತದ ಅಂಚೆ ವ್ಯವಸ್ಥೆಯು ಪ್ರಪಂಚದಲ್ಲಿಯೇ ಅತಿ ದೊಡ್ಡದಾಗಿದೆ. ಅಂಚೆ ಇಲಾಖೆಯು ಪ್ರತಿ ವರ್ಷ ಸುಮಾರು ೧,೨೦೦ ಕೋಟಿ ರೂ. ಆದಾಯವನ್ನು ಪಡೆಯುತ್ತಿದೆ.

ಅಂಚೆ ಸೇವೆಯಲ್ಲಿ ಸುದ್ದಿ ರವಾನೆಗೆ ಮುಖ್ಯವಾಗಿ ಅಂಚೆ ಕಾರ್ಡುಗಳು, ಅಂತರದೇಶೀಯ ಪತ್ರಗಳು ಮತ್ತು ಲಕೋಟೆಗಳು ಅಸ್ತಿತ್ವದಲ್ಲಿವೆ. ನೋಂದಣಿ ಅಂಚೆಯ ಮೂಲಕ ಕಾಗದ ಪತ್ರಗಳನ್ನು ಕಳುಹಿಸುವ ವ್ಯವಸ್ಥೆಯೂ ಇದೆ. ಒಂದು ನಿರ್ದಿಷ್ಟ ತೂಕಕ್ಕಿಂತ ಕಡಿಮೆ ಇರುವ ಕಾಗದಪತ್ರಗಳನ್ನು ಮತ್ತು ಸರಕುಗಳನ್ನು ಭಾಂಗಿಗಳ ಮೂಲಕ ರವಾನಿಸಬಹುದಾಗಿರುತ್ತದೆ. ಅಂಚೆ ವ್ಯವಸ್ಥೆಯ ಮೂಲಕ ಹಣ ರವಾನೆಯನ್ನು ಮಾಡಲಾಗುತ್ತದೆ. ೧೯೭೨ರಲ್ಲಿ ಅಂಚೆ ಸೂಚಿ ಸಂಖ್ಯೆ ಯನ್ನು ಅಳವಡಿಸಿಕೊಳ್ಳಲಾಗಿದೆ. ಇದು ವೈಜ್ಞಾನಿಕವಾಗಿ ಸಿದ್ಧಗೊಳಿಸಲಾದ ಆರು ಸಂಖ್ಯೆಗಳ ವ್ಯವಸ್ಥೆಯಾಗಿದ್ದು ಕಾಗದಪತ್ರಗಳನ್ನು ವಿಂಗಡಿಸಲು ಮತ್ತು ಸುಲಭವಾಗಿ ರವಾನಿಸಲು ನೆರವಾಗುತ್ತದೆ. ೧೯೭೫ರಲ್ಲಿ ಶೀಘ್ರ ಅಂಚೆ ಸೇವೆಯನ್ನು ಆಚರಣೆಗೆ ತರಲಾಗಿದೆ. ಇದು ರಾಜ್ಯಗಳ ರಾಜಧಾನಿಗಳು ಮತ್ತು ಪ್ರಮುಖ ವಾಣಿಜ್ಯ ಕೇಂದ್ರಗಳನ್ನು ಹಾಗೂ ನಗರಗಳನ್ನು ಬೆಸೆಯುತ್ತದೆ. ೧೯೮೬ರಲ್ಲಿ ವೇಗದ ಅಂಚೆ ಸೇವೆ ಸೌಲಭ್ಯವನ್ನು ಜಾರಿಗೆ ತರಲಾಗಿದ್ದು ಈ ವ್ಯವಸ್ಥೆಯಲ್ಲಿ ನಿರ್ದಿಷ್ಟ ಪತ್ರ ಅಥವಾ ಸರಕನ್ನು ಒಂದು ಪಟ್ಟಣದಿಂದ ಇನ್ನೊಂದು ಪಟ್ಟಣಕ್ಕೆ ತ್ವರಿತವಾಗಿ ರವಾನಿಸಲಾಗುತ್ತದೆ.

ಪ್ರತಿಯೊಂದು ಗ್ರಾಮದ ೩ ಕಿ.ಮೀ. ಸರಹದ್ದಿನೊಳಗೆ ಒಂದು ಅಂಚೆ ಕಛೇರಿಯನ್ನು ಸ್ಥಾಪಿಸಬೇಕೆಂಬುದು ಹಾಗೂ ೫೦೦ಕ್ಕಿಂತ ಅಧಿಕ ಜನಸಂಖ್ಯೆ ಇರುವ ಪ್ರತಿಯೊಂದು ಗ್ರಾಮದಲ್ಲಿ ಒಂದು ಕಾಗದ ಪೆಟ್ಟಿಗೆಯ ಸೌಲಭ್ಯವನ್ನು ಒದಗಿಸಬೇಕೆಂಬುದು ಸರ್ಕಾರದ ನೀತಿಯಾಗಿದೆ.

**೨. ದೂರ ಸಂಪರ್ಕ:** ದೂರ ಸಂಪರ್ಕವು ಅತ್ಯಾದುನಿಕ ಸಂಪರ್ಕ ಮಾಧ್ಯಮಗಳನ್ನು ಒಳಗೊಂಡಿದೆ. ದೂರ ಸಂಪರ್ಕ ವ್ಯವಸ್ಥೆಯಲ್ಲಿ ದೂರವಾಣಿ, ಟೆಲಿಗ್ರಾಂ, ಟೆಲೆಕ್ಸ್ ಸೇವೆ, ರೇಡಿಯೋ ಮತ್ತು ದೂರದರ್ಶನ, ಫ್ಯಾಕ್ಸ್ ಸೇವೆ ಮುಂತಾದವು ಸೇರಿವೆ. ಸಂಪರ್ಕ ಜಾಲದ ತ್ವರಿತ ಪ್ರಗತಿಗೆ ಈ ಸೇವೆಗಳ ಕೊಡುಗೆ ಗಣನೀಯವಾದುದಾಗಿದೆ.

ಸ್ವಾತಂತ್ರ್ಯದ ತರುಣದಲ್ಲಿ ಭಾರತದಲ್ಲಿ ಕೇವಲ ೩೨೧ ದೂರವಾಣಿ ವಿನಿಮಯ ಕೇಂದ್ರಗಳು ಮತ್ತು ೮೨,೦೦೦ ಸಂಪರ್ಕಗಳಿದ್ದವು. ಪಂಚವಾರ್ಷಿಕ ಯೋಜನೆಗಳ ಅವಧಿ ಯಲ್ಲಿ ದೂರವಾಣಿ ವ್ಯವಸ್ಥೆಯು ಗಮನಾರ್ಹವಾಗಿ ಅಭಿವೃದ್ಧಿ ಹೊಂದಿದೆ. ೧೯೯೭ರಲ್ಲಿ ೨೦,೫೦೦ ದೂರವಾಣಿ ವಿನಿಮಯ ಕೇಂದ್ರಗಳು ಮತ್ತು ೧೩ ದಶಲಕ್ಷ ಸಂಪರ್ಕಗಳಿದ್ದವು. ಪ್ರತಿ ವರ್ಷ ಸುಮಾರು ೨ ದಶಲಕ್ಷ ಹೊಸ ದೂರವಾಣಿ ಸಂಪರ್ಕಗಳನ್ನು ನೀಡಲಾಗುತ್ತಿದೆ.

೧೯೬೦ರಲ್ಲಿ 'ಸ್ಟ್ಯಾಂಡರ್ಡ್ ಟ್ರಂಕ್ ಡಯಲಿಂಗ್' ಸೌಲಭ್ಯವನ್ನು ಆಚರಣೆಗೆ ತರಲಾಯಿತು. ಇತ್ತೀಚಿನ ವರ್ಷಗಳಲ್ಲಿ ಈ ಸೌಲಭ್ಯವನ್ನು ವ್ಯಾಪಕವಾಗಿ ವಿಸ್ತರಿಸಲಾಗಿದೆ.

ದೇಶದ ಯಾವುದೇ ಭಾಗದಿಂದ ಬೇರಾವುದೇ ಭಾಗಕ್ಕಾದರೂ ಕೂಡಲೇ ದೂರವಾಣಿ ಸಂಪರ್ಕವನ್ನು ಹೊಂದುವುದು ಈ ವ್ಯವಸ್ಥೆಯ ವೈಶಿಷ್ಟ್ಯವಾಗಿದೆ. ದೇಶದ ಎಲ್ಲಾ ಪ್ರಮುಖ ಪಟ್ಟಣಗಳಲ್ಲಿ ಈಗ ಎಸ್.ಟಿ.ಡಿ.ಸೌಲಭ್ಯ ಅಸ್ತಿತ್ವದಲ್ಲಿದೆ. ಇತ್ತೀಚಿನ ವರ್ಷಗಳಲ್ಲಿ ಈ ಸೌಲಭ್ಯದ ವಿಸ್ತರಣೆಯೊಂದಿಗೆ ದೂರಸಂಪರ್ಕ ಕ್ಷೇತ್ರದಲ್ಲಿ ಒಂದು ಕ್ರಾಂತಿಯೇ ಉಂಟಾಯಿತು. ವ್ಯಾಪಾರ ಮತ್ತು ವಾಣಿಜ್ಯದ ಅಭಿವೃದ್ಧಿಗೆ ಎಸ್.ಟಿ.ಡಿ. ಸೌಲಭ್ಯವು ಅಪೂರ್ವ ಸೇವೆ ಸಲ್ಲಿಸಿದೆ. ಅಂತಾರಾಷ್ಟ್ರೀಯ ಮಟ್ಟದಲ್ಲಿ ದೂರ ಸಂಪರ್ಕ ವ್ಯವಸ್ಥೆಗೆ ಐ.ಎಸ್.ಡಿ. ಸೌಲಭ್ಯವಿದೆ.

ದೂರಲೇಖನ (Telegraphs) ವ್ಯವಸ್ಥೆಯು ಭಾರತದಲ್ಲಿ ತುಂಬಾ ಹಳೆಯದಾದ ಸಂಪರ್ಕ ಮಾಧ್ಯಮವಾಗಿದೆ. ದೂರ ಲೇಖನ ಕಛೇರಿಗಳ ಸಂಖ್ಯೆ ೧೯೫೧ ಮತ್ತು ೧೯೯೭ರ ನಡುವೆ ೮,೨೦೦ ರಿಂದ ಸುಮಾರು ೩೦,೦೦೦ಕ್ಕೆ ಹೆಚ್ಚಿದೆ. ದೂರವಾಣಿಯ ಮೂಲಕ ಟೆಲಿಗ್ರಾಂಗಳನ್ನು ಸ್ವೀಕರಿಸಲು ಮತ್ತು ಕಳುಹಿಸಲು ಫೋನೋಗ್ರಾಂ ಸೇವೆ, ಮುದ್ರಿತ ಸುದ್ದಿಯನ್ನು ಒಂದು ಕೇಂದ್ರದಿಂದ ಇನ್ನೊಂದು ಕೇಂದ್ರಕ್ಕೆ ನೇರವಾಗಿ ಕಳುಹಿಸಲು ಟೆಲೆಕ್ಸ್ ಸೇವೆ ಮುಂತಾದವು ಅಗಾಧವಾಗಿ ವಿಸ್ತರಿಸಿವೆ.

ರೇಡಿಯೋ ಮತ್ತು ದೂರದರ್ಶನ ಸಂಪರ್ಕ ಜಾಲದ ಪ್ರಮುಖ ಮಾಧ್ಯಮಗಳಾಗಿವೆ. ೧೯೪೭ರಲ್ಲಿ ದೇಶದಲ್ಲಿ ಕೇವಲ ಆರು ರೇಡಿಯೋ ಕೇಂದ್ರಗಳಿದ್ದವು. ೧೯೯೫ರಲ್ಲಿ ಇವುಗಳ ಸಂಖ್ಯೆ ಸುಮಾರು ೧೫೦ಕ್ಕೆ ಏರಿದೆ. ದೂರದರ್ಶನ ಪ್ರಸಾರವು ೧೯೫೯ರಲ್ಲಿ ಪ್ರಾರಂಭಗೊಂಡಿತು. ಇಂದು ದೂರದರ್ಶನವು ಸುಮಾರು ೬೦೦ ಪ್ರಸಾರ ಕೇಂದ್ರಗಳನ್ನು ಹೊಂದಿದ್ದು ಶೇಕಡ ೮೦ರಷ್ಟು ಜನರನ್ನು ತಲುಪುತ್ತಿದೆ.

ಇತ್ತೀಚಿನ ವರ್ಷಗಳಲ್ಲಿ ಸಂಪರ್ಕ ವ್ಯವಸ್ಥೆಯಲ್ಲಿ ಬಹಳ ವ್ಯಾಪಕವಾದ ಮತ್ತು ಶೀಘ್ರಗತಿಯ ಪ್ರಗತಿಯಾಗುತ್ತಿದೆ. ಈ ಕ್ಷೇತ್ರದಲ್ಲಿಯೂ ಸಹ ಖಾಸಗೀಕರಣವು ಹೆಚ್ಚಾಗುತ್ತಿದೆ. ಮೊದಲು ಅಂಚೆ ಮತ್ತು ತಂತಿಯು ಕೇಂದ್ರ ಸರ್ಕಾರದ ಒಡೆತನದಲ್ಲಿತ್ತು. ಆದರೆ ಈಗಿನ ದಿವಸಗಳಲ್ಲಿ ಉದ್ಯಮ, ವ್ಯಾಪಾರ ಮತ್ತು ಸೇವೆಗಳು ಶೀಘ್ರದಲ್ಲಿ ವಿಸ್ತರಿಸುತ್ತಿರುವುದರಿಂದ ಸಂಪರ್ಕ ಸಾಧನಗಳ ಹೆಚ್ಚಳ ಅತ್ಯಾವಶ್ಯಕವಾಗಿದೆ.

ಪತ್ರಗಳನ್ನು, ಲಕೋಟೆಗಳನ್ನು ಮತ್ತು ದಾಖಲೆಗಳನ್ನು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಸಾಗಿಸಲು 'ಕೊರಿಯರ್ ಸೇವೆ' ಈಗ ವ್ಯವಸ್ಥಿತವಾಗಿ ಬೆಳೆದಿದೆ. ಇದು ಖಾಸಗಿ ವಲಯದಲ್ಲಿರುವ ಮಾಧ್ಯಮವಾಗಿದೆ. ಭಾರತದಲ್ಲಿ ಈಗ ಚಿಕ್ಕ ಪಟ್ಟಣಗಳಿಂದ ಹಿಡಿದು ಎಲ್ಲಾ ನಗರಗಳಲ್ಲಿಯೂ ಕೊರಿಯರ್ ಅಸ್ತಿತ್ವದಲ್ಲಿದೆ. ಈ ಸೇವೆಯನ್ನು ಒದಗಿಸುತ್ತಿರುವ ಖಾಸಗಿ ಸಂಸ್ಥೆಯವರು ವಾಹನಗಳ ಅಥವಾ ಸ್ವಂತ ಸಾಧನಗಳ ಮೂಲಕ ಅತಿ ಶೀಘ್ರವಾಗಿ ಬಹಳ ದೂರದ ಪ್ರದೇಶಗಳಿಗೂ ಸಹ ಪತ್ರಗಳನ್ನು, ಲಕೋಟೆಗಳನ್ನು ಮತ್ತು ದಾಖಲೆಗಳನ್ನು ರವಾನಿಸುತ್ತಾರೆ. ಅಂಚೆಗೆ ತಗಲುವ ವೆಚ್ಚಕ್ಕಿಂತ ಸುಮಾರು ಎರಡು ಪಟ್ಟು ವೆಚ್ಚವು ಇದಕ್ಕೆ ತಗಲುತ್ತದೆ.

ಜ್ಞಾನದ ವಿವಿಧ ಶಾಖೆಗಳಿಗೆ ಸಂಬಂಧಿಸಿದ ಮಾಹಿತಿಯನ್ನು ಈಗ 'ಮಾಹಿತಿ ಜಾಲ'ವು ಒದಗಿಸುತ್ತಿದೆ. ಪಟ್ಟಣಗಳಲ್ಲಿ ಮಾತ್ರವಲ್ಲದೆ ಗ್ರಾಮೀಣ ಪ್ರದೇಶಗಳಲ್ಲಿಯೂ ಮಾಹಿತಿ ಜಾಲದ ಸೇವೆಗಳು ವಿಸ್ತರಿಸುತ್ತಿವೆ.

ದೂರವಾಣಿಯಲ್ಲಿಯೂ ಸಹ ಈಗ 'ಸಂಚಾರಿ ದೂರವಾಣಿ'ಗಳ ಬಳಕೆ ಹೆಚ್ಚಾಗುತ್ತಿದೆ. ಈ ಮಾಧ್ಯಮವು ಬಹಳ ಶೀಘ್ರವಾಗಿ ಬೆಳೆಯುತ್ತಿದೆ. ತುಂಬಾ ಚಿಕ್ಕ ಸಾಧನವಾಗಿರುವ ಸಂಚಾರಿ ದೂರವಾಣಿಯನ್ನು ವ್ಯಕ್ತಿಗಳು ಯಾವಾಗಲೂ ತಮ್ಮ ಬಳಿ ಇಟ್ಟುಕೊಂಡಿರ ಬಹುದು.

ಆಧುನಿಕ ಯುಗದ 'ಸಂಪರ್ಕದ ಯುಗ' ಎಂದು ಹೇಳಿದರೆ ತಪ್ಪಾಗಲಾರದು. ಭಾರತದಂತಹ ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿಯೂ ಸಹ ಹೊಸ ಸಂಪರ್ಕ ಮಾಧ್ಯಮಗಳು ಶೀಘ್ರಗತಿಯಲ್ಲಿ ಬೆಳೆಯುತ್ತಿವೆ.

## ೬.೩. ಹಣಕಾಸು ವಲಯ

### ಹಣದ ಮಾರುಕಟ್ಟೆಯ ಅರ್ಥ

ಸರಕುಗಳನ್ನು ಮಾರಲು ಹಾಗೂ ಕೊಳ್ಳಲು ಮಾರುಕಟ್ಟೆ ಇದ್ದಂತೆ, ಹಣವನ್ನು ಮಾರಲು ಮತ್ತು ಕೊಳ್ಳಲು ಮಾರುಕಟ್ಟೆ ಇದೆ. ಇಂತಹ ಮಾರುಕಟ್ಟೆಗೆ ಹಣದ ಮಾರುಕಟ್ಟೆ ಅಥವಾ ಹಣದ ಪೇಟೆ ಎಂದು ಹೆಸರು. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ಅಲ್ಪಾವಧಿಯ ಉದ್ದೇಶಗಳಿಗೆ ಹಣವನ್ನು ಸಾಲ ನೀಡುವ ಮತ್ತು ಸಾಲ ತೆಗೆದುಕೊಳ್ಳುವ ಪೇಟೆಗೆ ಹಣದ ಮಾರುಕಟ್ಟೆ ಎಂದು ಕರೆಯಲಾಗುತ್ತದೆ. ಬೇರೆ ರೀತಿಯಲ್ಲಿ ಹೇಳುವುದಾದರೆ, ಅಲ್ಪಾವಧಿಯ ಸಾಲಿಗರು ಮತ್ತು ಸಾಲಿಗಾರರು ಸಂಧಿಸುವ ಸ್ಥಳವೇ ಹಣದ ಮಾರುಕಟ್ಟೆ, ಹಣದ ಮಾರುಕಟ್ಟೆಯಲ್ಲಿ ಶಾಸನಬದ್ಧವಾದ ನಗದು ಹಣವನ್ನು ಸಾಲವಾಗಿ ಕೊಡಲಾಗುವುದಿಲ್ಲ ಮತ್ತು ತೆಗೆದುಕೊಳ್ಳಲಾಗುವುದಿಲ್ಲ. ಆದರೆ ಪ್ರತಿರೂಪ ಹಣವಾದ ವ್ಯಾಪಾರದ ಹುಂಡಿಗಳು, ವಾಗ್ದಾನ ಪತ್ರಗಳು ಮತ್ತು ಸರಕಾರದ ಸಾಲಪತ್ರಗಳ ಮೂಲಕ ಬಡ್ಡಿಯ ಆಧಾರದ ಮೇಲೆ ಸಾಲದ ವ್ಯವಹಾರ ನಡೆಯುತ್ತದೆ.

### ಕರೆ ಹಣ

ಸಾರ್ವಜನಿಕರು ಬ್ಯಾಂಕಿನಲ್ಲಿ ಠೇವಣಿ ಹಣವನ್ನು ಇಟ್ಟಿರುತ್ತಾರೆ. ಮತ್ತು ಯಾವುದೇ ಒಂದು ಬ್ಯಾಂಕು ಕೇಂದ್ರ ಬ್ಯಾಂಕಿನಿಂದ ಸಾಲವನ್ನು ಪಡೆಯಬಹುದು. ಇವು ಬ್ಯಾಂಕಿನಲ್ಲಿರುವ ಹಣಕಾಸಿನ ಸಂಪನ್ಮೂಲಗಳಾಗಿರುತ್ತವೆ.

ಯಾವುದೇ ಒಂದು ಬ್ಯಾಂಕು ತನ್ನಲ್ಲಿರುವ ಹಣದಲ್ಲಿ ಸ್ವಲ್ಪ ಪ್ರಮಾಣದ ಹಣವನ್ನು ಅತ್ಯಲ್ಪ ಕಾಲಾವಧಿಗೆ ಬೇರೆ ಬ್ಯಾಂಕುಗಳಿಗೆ ಮತ್ತು ವ್ಯಾಪಾರದ ದಲ್ಲಾಳಿಗಳಿಗೆ ಸಾಲವಾಗಿ ನೀಡುತ್ತದೆ. ಈ ಸಾಲದ ಮೇಲೆ ಅತ್ಯಲ್ಪ ಕಡಿಮೆ ದರದ ಬಡ್ಡಿ, ಅಂದರೆ ಸುಮಾರು

ಶೇಕಡ ೧೮ರಷ್ಟಿರುತ್ತದೆ. ಬ್ಯಾಂಕು ಕರೆದ ಕೂಡಲೇ, ಅಂದರೆ ಮುನ್ಸೂಚನೆ ಕೊಟ್ಟ ಕೂಡಲೇ ಈ ಹಣವನ್ನು ಮರುಪಾವತಿ ಮಾಡಬೇಕಾಗಿರುತ್ತದೆ. ಈ ಸಾಲಗಳನ್ನು ಹಿಂದಿರಿಗಿಸಲು ಒಂದು ದಿವಸ, ಮೂರು ದಿವಸಗಳು ಅಥವಾ ಒಂದು ವಾರದ ಮೊದಲೇ ಸೂಚನೆ ನೀಡಲಾಗಿರುತ್ತದೆ. ಕರೆದ ಕೂಡಲೇ ಅಥವಾ ಮುನ್ಸೂಚನೆ ನೀಡಿದ ಕೂಡಲೇ ಈ ಸಾಲವನ್ನು ಮರುಪಾವತಿ ಮಾಡಬೇಕಾಗಿರುವುದರಿಂದ ಇದಕ್ಕೆ 'ಕರೆ ಹಣ' ಎಂದು ಹೆಸರು ಬಂದಿದೆ.

ಆ ಪ್ರಕಾರ, **ಹಣದ ಮಾರುಕಟ್ಟೆಯು** ಹಣವನ್ನು ಸಾಲವಾಗಿ ಕೊಡುವ ಮತ್ತು ಸಾಲವಾಗಿ ತೆಗೆದುಕೊಳ್ಳುವ ಮಾರುಕಟ್ಟೆಯಾಗಿದೆ.

ಕರೆ ಹಣದ ಮಾರುಕಟ್ಟೆ ಎಂದರೆ ಬಹಳ ಅಲ್ಪಾವಧಿಗೆ ಒಂದು ಬ್ಯಾಂಕಿನ ಮತ್ತು ಇತರ ಬ್ಯಾಂಕುಗಳ ಅಥವಾ ವಾರದ ದಲ್ಲಾಳಿಗಳ ನಡುವೆ ಸಾಲವನ್ನು ಕೊಡುವ ಮತ್ತು ತೆಗೆದುಕೊಳ್ಳುವ ಮಾರುಕಟ್ಟೆಯಾಗಿದೆ.

**ಬಂಡವಾಳ ಮಾರುಕಟ್ಟೆ (Capital Market)**

ದೀರ್ಘಾವಧಿಗೆ ಸಾಲಗಳನ್ನು ನೀಡುವ ಮತ್ತು ತೆಗೆದುಕೊಳ್ಳುವ ಸ್ಥಳಕ್ಕೆ ಬಂಡವಾಳ ಮಾರುಕಟ್ಟೆ ಎಂದು ಹೆಸರು.

ಬಂಡವಾಳ ಮಾರುಕಟ್ಟೆಯಲ್ಲಿ ಎರಡು ವಿಧಗಳಿವೆ. ಅವುಗಳು ಯಾವುವೆಂದರೆ :

೧. ಪ್ರಾಥಮಿಕ ಬಂಡವಾಳ ಮಾರುಕಟ್ಟೆ

೨. ದ್ವಿತೀಯ ಬಂಡವಾಳ ಮಾರುಕಟ್ಟೆ

**೧. ಪ್ರಾಥಮಿಕ ಬಂಡವಾಳ ಮಾರುಕಟ್ಟೆ:** ಬಂಡವಾಳ ಮಾರುಕಟ್ಟೆಯಲ್ಲಿ ಸಾಲವನ್ನು ಎತ್ತಲು ಯಾವುದೇ ಒಂದು ಸಂಸ್ಥೆಯು ಷೇರು ಪತ್ರಗಳು, ಸಾಲಪತ್ರಗಳು ಮೊದಲಾದ ವಿನಿಯೋಜಕಗಳನ್ನು ಹೊರಡಿಸಿ ಮಾರಾಟಮಾಡಬಹುದು. ಇಂತಹವುಗಳನ್ನು ಖರೀದಿಸಿ ಸಾರ್ವಜನಿಕ ಸಂಸ್ಥೆಗಳು ಸಾಲವನ್ನು ನೀಡುತ್ತವೆ. ಈ ಆಧಾರದಲ್ಲಿ ಪ್ರಥಮತಃ ಒಂದು ಸಾರಿ ಸಾಲವನ್ನು ಕೊಡುವ ಮಾರುಕಟ್ಟೆಯನ್ನು ಪ್ರಾಥಮಿಕ ಬಂಡವಾಳ ಮಾರುಕಟ್ಟೆ ಎಂದು ಕರೆಯಲಾಗುತ್ತದೆ.

**೨. ದ್ವಿತೀಯ ಬಂಡವಾಳ ಮಾರುಕಟ್ಟೆ:** ಷೇರು ಪತ್ರಗಳು, ಸಾಲಪತ್ರಗಳು ಮುಂತಾದ ವಿನಿಯೋಜಕಗಳನ್ನು ಖರೀದಿಸಿ ಸಾಲವನ್ನು ನೀಡಿದ ಸಾರ್ವಜನಿಕ ಸಂಸ್ಥೆಗಳಿಗೆ ಆ ವಿನಿಯೋಜಕಗಳು ಪಕ್ವವಾಗುವ ಮೊದಲೇ ಹಣದ ಅವಶ್ಯಕತೆ ಇದ್ದರೆ ಆ ವಿನಿಯೋಜಕ ಗಳನ್ನು ಬ್ಯಾಕುಗಳಲ್ಲಿ ಅಥವಾ ಬೇರೆ ಮೂಲಗಳಲ್ಲಿ ಆಧಾರವಾಗಿಟ್ಟು ಸಾಲವನ್ನು ಪಡೆಯಬಹುದು. ಹೀಗೆ ವಿನಿಯೋಜಕರ ಆಧಾರದಲ್ಲಿ ಸಾಲವನ್ನು ಎತ್ತುವ ವ್ಯವಸ್ಥೆಯನ್ನು ದ್ವಿತೀಯ ಬಂಡವಾಳ ಮಾರುಕಟ್ಟೆ ಎಂದು ಕರೆಯಲಾಗುತ್ತದೆ. ಸಾಮಾನ್ಯವಾಗಿ ಗೃಹ ನಿರ್ಮಾಣ ಸಾಲಗಳಲ್ಲಿ ಇಂತಹ ಮಾರುಕಟ್ಟೆ ವ್ಯವಸ್ಥೆಯನ್ನು ಕಾಣಬಹುದು.

**ವಾಣಿಜ್ಯ ಬ್ಯಾಂಕುಗಳು**

ಪಾಶ್ಚಿಮಾತ್ಯ ದೇಶಗಳ ಮಾದರಿಯಲ್ಲಿ ಭಾರತದಲ್ಲಿ ವಾಣಿಜ್ಯ ಬ್ಯಾಂಕುಗಳ ಬೆಳವಣಿಗೆಯು ತೀರಾ ಇತ್ತೀಚಿನದಾಗಿದೆ. ವಾಣಿಜ್ಯ ಬ್ಯಾಂಕುಗಳಲ್ಲಿ ಎರಡು ವಿಧಗಳಿವೆ. ಅವುಗಳೆಂದರೆ

೧. ಭಾರತೀಯ ವಾಣಿಜ್ಯ ಬ್ಯಾಂಕುಗಳು ಮತ್ತು

೨. ವಿದೇಶೀ ವಾಣಿಜ್ಯ ಬ್ಯಾಂಕುಗಳು

**೧. ಭಾರತೀಯ ವಾಣಿಜ್ಯ ಬ್ಯಾಂಕುಗಳು :** ಇವನ್ನು 'ಕೂಡು ಬಂಡವಾಳು ಬ್ಯಾಂಕುಗಳು' ಎಂದು ಕರೆಯಲಾಗುತ್ತದೆ.

**೨. ವಿದೇಶೀ ವಾಣಿಜ್ಯ ಬ್ಯಾಂಕುಗಳು :** ಇವುಗಳಿಗೆ 'ವಿನಿಮಯ ಬ್ಯಾಂಕುಗಳು' ಎಂದು ಹೆಸರು. ಭಾರತೀಯ ವಾಣಿಜ್ಯ ಬ್ಯಾಂಕುಗಳು ಸ್ವದೇಶೀ ವಾಣಿಜ್ಯ, ವ್ಯಾಪಾರ, ಉದ್ಯಮ ಮತ್ತು ಕೃಷಿಗೆ ಸಾಲ ನೀಡುತ್ತವೆ. ವಿನಿಮಯ ಬ್ಯಾಂಕುಗಳು ಭಾರತದ ಬಾಹ್ಯ ವಾಣಿಜ್ಯ ಮತ್ತು ವ್ಯಾಪಾರಕ್ಕೆ ಹಣಕಾಸವನ್ನು ಒದಗಿಸುತ್ತವೆ.

ಭಾರತದಲ್ಲಿ ಮೊದಲನೆಯ ವಾಣಿಜ್ಯ ಬ್ಯಾಂಕು ೧೭೭೦ರಲ್ಲಿ ಕಲ್ಕತ್ತಾದಲ್ಲಿ ಸ್ಥಾಪನೆಯಾಯಿತು. ಅದರ ಹೆಸರು "ಹಿಂದುಸ್ತಾನ್ ಬ್ಯಾಂಕ್" ಎಂಬುದಾಗಿತ್ತು. ಆದರೆ ಈ ಬ್ಯಾಂಕು ತನ್ನ ಕಾರ್ಯಕಲಾಪಗಳಲ್ಲಿ ಯಶಸ್ವಿಯಾಗಲಿಲ್ಲ. ನಂತರ ಸರ್ಕಾರದ ಹಣಕಾಸಿನ ಸಹಭಾಗಿತ್ವದೊಡನೆ ೧೮೦೬ರಲ್ಲಿ "ದಿ ಬ್ಯಾಂಕ್ ಆಫ್ ಬೆಂಗಾಲ್", ೧೮೪೦ರಲ್ಲಿ "ದಿ ಬ್ಯಾಂಕ್ ಆಫ್ ಬಾಂಬೆ" ಮತ್ತು ೧೮೪೩ರಲ್ಲಿ "ದಿ ಬ್ಯಾಂಕ್ ಆಫ್ ಮದ್ರಾಸ್" ಎಂಬ ಮೂರು ಪ್ರಾದೇಶಿಕ ಬ್ಯಾಂಕುಗಳು ಸ್ಥಾಪನೆಯಾದವು. ಇವು ಆಯಾ ಪ್ರದೇಶಗಳಲ್ಲಿ ಹಣವನ್ನು ಚಲಾವಣೆಗೆ ತರುವ ಅಧಿಕಾರವನ್ನು ಸಹ ಹೊಂದಿದ್ದವು. ಒಂದು ಪರಿಶುದ್ಧವಾದ ಭಾರತೀಯ ಬ್ಯಾಂಕು ೧೮೮೧ರಲ್ಲಿ ಜನ್ಮ ತಾಳಿಯತು. ಇದೇ "ಔಧ್ ವಾಣಿಜ್ಯ ಬ್ಯಾಂಕು".

ನಂತರದ ವರ್ಷಗಳಲ್ಲಿ ಅನೇಕ ವಾಣಿಜ್ಯ ಬ್ಯಾಂಕುಗಳು ಸ್ಥಾಪನೆಯಾಗತೊಡಗಿದವು. ೧೮೯೪ರಲ್ಲಿ ಪಂಜಾಬ್ ನ್ಯಾಷನಲ್ ಬ್ಯಾಂಕ್ ಮತ್ತು ೧೯೦೧ರಲ್ಲಿ ಪೀಪಲ್ಸ್ ಬ್ಯಾಂಕ್ ಆಫ್ ಇಂಡಿಯಾ ಸ್ಥಾಪನೆಯಾದವು. ೧೯೦೫ರ ಸ್ವದೇಶೀ ಚಳುವಳಿಯು ಬ್ಯಾಂಕುಗಳ ಉದಯಕ್ಕೆ ವಿಶೇಷ ಉತ್ತೇಜನ ದೊರಕಿಸಿಕೊಟ್ಟಿತು. ೧೯೦೬ರಲ್ಲಿ ಕೆನರಾ ಬ್ಯಾಂಕು ಮತ್ತು ಬ್ಯಾಂಕ್ ಆಫ್ ಇಂಡಿಯಾ, ೧೯೦೭ರಲ್ಲಿ ಇಂಡಿಯನ್ ಬ್ಯಾಂಕು, ೧೯೦೮ರಲ್ಲಿ ಬ್ಯಾಂಕ್ ಆಫ್ ಬರೋಡಾ ಮತ್ತು ೧೯೧೧ರಲ್ಲಿ ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯಾ ಜನ್ಮ ತಳೆದವು.

ಭಾರತದ ವಾಣಿಜ್ಯ ಬ್ಯಾಂಕುಗಳನ್ನು "ಅನೂಸೂಚಿತ ಬ್ಯಾಂಕುಗಳು" ಮತ್ತು "ಅನುಸೂಚಿತವಲ್ಲದ ಬ್ಯಾಂಕುಗಳು" ಎಂದು ವಿಂಗಡಿಸಲಾಗಿದೆ. ವಾಣಿಜ್ಯ ಬ್ಯಾಂಕುಗಳು ರಿಸರ್ವ್ ಬ್ಯಾಂಕಿನಲ್ಲಿ ಸ್ವಲ್ಪ ನಿಧಿಯನ್ನು ಕಾಯ್ದಿರಿಸಲಾಗಿದೆ. ಒಟ್ಟು ಪಾವತಿಯಾದ

ಬಂಡವಾಳ ಮತ್ತು ಕಾಯ್ದಿರಿಸಿದ ನಿಧಿಯು ರೂ. ೫ ಲಕ್ಷಕ್ಕೆ ಮಿಕ್ಕಿದ ಬ್ಯಾಂಕುಗಳನ್ನು ಅನುಸೂಚಿತವಲ್ಲದ ಬ್ಯಾಂಕುಗಳೆಂದು ಕರೆಯಲಾಗುತ್ತದೆ. ರಿಸರ್ವ್ ಬ್ಯಾಂಕಿನ ಪಟ್ಟಿಯಲ್ಲಿ ಇಂತಹ ಬ್ಯಾಂಕುಗಳ ಹೆಸರು ನಮೂದಿಸಲ್ಪಟ್ಟಿರುತ್ತದೆ. ಅನುಸೂಚಿತ ಬ್ಯಾಂಕುಗಳು ತಮ್ಮ ಹಣಕಾಸಿನ ವ್ಯವಹಾರಕ್ಕೆ ಸಂಬಂಧಿಸಿದಂತೆ ರಿಸರ್ವ್ ಬ್ಯಾಂಕಿನ ಜೊತೆ ಒಳ್ಳೆಯ ಸವಲತ್ತನ್ನು ಪಡೆದಿರುತ್ತವೆ.

ಇದಕ್ಕೆ ವಿರುದ್ಧವಾಗಿ, ಪಾವತಿಯಾದ ಬಂಡವಾಳ ಮತ್ತು ಕಾಯ್ದಿರಿಸಿದ ನಿಧಿಯು ರೂ. ೫ ಲಕ್ಷಕ್ಕಿಂತ ಕಡಿಮೆ ಇರುವ ಬ್ಯಾಂಕುಗಳು ಅನುಸೂಚಿತವಲ್ಲದ ಬ್ಯಾಂಕುಗಳು. ರಿಸರ್ವ್ ಬ್ಯಾಂಕಿನ ಪಟ್ಟಿಯಲ್ಲಿ ಅಥವಾ ಅನುಸೂಚಿಯಲ್ಲಿ ಈ ಬ್ಯಾಂಕುಗಳ ಹೆಸರು ನಮೂದಾಗಿರುವುದಿಲ್ಲ.

ಭಾರತದಲ್ಲಿ ಇಪ್ಪತ್ತು ಪ್ರಮುಖ ವಾಣಿಜ್ಯ ಬ್ಯಾಂಕುಗಳನ್ನು ರಾಷ್ಟ್ರೀಕರಣ ಮಾಡಲಾಗಿದೆ. ಇದರಿಂದ ಸುಮಾರು ಶೇಕಡ ೯೦ರಷ್ಟು ವಾಣಿಜ್ಯ ಬ್ಯಾಂಕುಗಳು ಸಾರ್ವಜನಿಕ ಕ್ಷೇತ್ರದ ವ್ಯಾಪ್ತಿಯಲ್ಲಿವೆ. ಸುಮಾರು ಶೇಕಡ ೧೦ರಷ್ಟು ವಾಣಿಜ್ಯ ಬ್ಯಾಂಕುಗಳು ಖಾಸಗಿ ಕ್ಷೇತ್ರದಲ್ಲಿವೆ. ವಾಣಿಜ್ಯ ಬ್ಯಾಂಕುಗಳು ರಿಸರ್ವ್ ಬ್ಯಾಂಕಿನ ನಿಯಂತ್ರಣ, ನಿರ್ದೇಶನ ಮತ್ತು ಉಸ್ತುವಾರಿಗೆ ಒಳಗಾಗಿವೆ.

ಇದಲ್ಲದೆ ಅನೇಕ ವಿದೇಶೀ ಬ್ಯಾಂಕುಗಳು ಭಾರತದಲ್ಲಿ ಕಾರ್ಯವನ್ನು ನಿರ್ವಹಿಸುತ್ತಿವೆ. ಅವು ಭಾರತೀಯ ವಾಣಿಜ್ಯ ಬ್ಯಾಂಕುಗಳಂತೆಯೇ ನಮ್ಮ ದೇಶವನ್ನು ಕೆಲಸವನ್ನು ಮಾಡುತ್ತಿವೆ.

### ಭಾರತೀಯ ವಾಣಿಜ್ಯ ಬ್ಯಾಂಕೋದ್ಯಮದ ರಚನೆ

ಭಾರತದ ವಾಣಿಜ್ಯ ಬ್ಯಾಂಕೋದ್ಯಮ ವ್ಯವಸ್ಥೆಯು ಭಾರತದ ರಿರ್ವ್ ಬ್ಯಾಂಕಿನ ನಿಯಂತ್ರಣಕ್ಕೆ ಒಳಪಟ್ಟಿದೆ. ಭಾರತದಲ್ಲಿ ರಾಷ್ಟ್ರೀಕೃತ ವಾಣಿಜ್ಯ ಬ್ಯಾಂಕುಗಳಿವೆ ಮತ್ತು ಖಾಸಗಿ ವಾಣಿಜ್ಯ ಬ್ಯಾಂಕುಗಳಿವೆ. ಅಲ್ಲದೆ ಸಾರ್ವಜನಿಕ ವಲಯದಲ್ಲಿ ಭಾರತದ ಸ್ಟೇಟ್ ಬ್ಯಾಂಕ್ ಮತ್ತು ಅದರ ಏಳು ಅಂಗ ಬ್ಯಾಂಕುಗಳಿವೆ. ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಸ್ಟೇಟ್ ಬ್ಯಾಂಕ್ ಆಫ್ ಹೈದರಾಬಾದ್ ಮುಂತಾದವು ಆ ಬ್ಯಾಂಕುಗಳಾಗಿವೆ. ಇದಲ್ಲದೆ ಭಾರತದಲ್ಲಿ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳೂ ಸಹ ಅಸ್ತಿತ್ವದಲ್ಲಿವೆ.

ಭಾರತದ ವಾಣಿಜ್ಯ ಬ್ಯಾಂಕೋದ್ಯಮ ವ್ಯವಸ್ಥೆ




**ವಾಣಿಜ್ಯ ಬ್ಯಾಂಕುಗಳ ಕಾರ್ಯಗಳು**

ಭಾರತದಲ್ಲಿ ವಾಣಿಜ್ಯ ಬ್ಯಾಂಕುಗಳು ಠೇವಣಿ ಸಂಗ್ರಹಣೆ ಮತ್ತು ಸಾಲ ಪೂರೈಕೆಯ ಸಾಂಪ್ರದಾಯಿಕ ಕಾರ್ಯಗಳ ಜೊತೆಗೆ ಅನೇಕ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳುತ್ತಿವೆ. ವಾಣಿಜ್ಯ ಬ್ಯಾಂಕುಗಳು ನಿರ್ವಹಿಸುವ ಕಾರ್ಯಗಳು ಈ ಕೆಳಗಿನಂತಿವೆ.

**೧. ಠೇವಣಿಗಳ ಸ್ವೀಕಾರ :** ವಾಣಿಜ್ಯ ಬ್ಯಾಂಕುಗಳು ಸಾರ್ವಜನಿಕರಿಂದ ಠೇವಣಿಗಳನ್ನು ಸ್ವೀಕರಿಸುತ್ತವೆ. ಆ ಮೂಲಕ ಜನರ ಉಳಿತಾಯಗಳನ್ನು ಪರಿಣಾಮಕಾರಿಯಾಗಿ ಸಂಗ್ರಹಿಸುವ ಕಾರ್ಯವನ್ನು ಬ್ಯಾಂಕುಗಳು ನಿರ್ವಹಿಸುತ್ತವೆ. ವಾಣಿಜ್ಯ ಬ್ಯಾಂಕುಗಳು ಮೂರು ರೀತಿಯ ಠೇವಣಿಗಳನ್ನು ಸ್ವೀಕರಿಸುತ್ತವೆ. ಅವು ಯಾವುವೆಂದರೆ ೧. ಚಾಲ್ತಿ ಠೇವಣಿಗಳು, ೨. ಉಳಿತಾಯ ಠೇವಣಿಗಳು ಮತ್ತು ೩. ನಿರ್ದಿಷ್ಟ ಠೇವಣಿಗಳು.

**೧. ಚಾಲ್ತಿ ಠೇವಣಿಗಳು:** ಈ ಠೇವಣಿಗಳನ್ನು ಖಾತೆದಾರರು ಯಾವಾಗಬೇಕಿದ್ದರೂ ಇಡಬಹುದು ಮತ್ತು ಹಿಂದಕ್ಕೆ ಪಡೆಯಬಹುದು. ಈ ಠೇವಣಿಗಳ ಮೇಲೆ ಬ್ಯಾಂಕು ಬಡ್ಡಿ ಕೊಡುವುದಿಲ್ಲ. ದಿನನಿತ್ಯದ ವ್ಯವಹಾರಗಳಿಗೆ ಬಳಸಿಕೊಳ್ಳಲು ಕೈಗಾರಿಕೋದ್ಯಮಿಗಳು ಮತ್ತು ವರ್ತಕರು ಇಂತಹ ಠೇವಣಿಗಳನ್ನು ಇಡುತ್ತಾರೆ.

**೨. ಉಳಿತಾಯ ಠೇವಣಿಗಳು:** ನಿಶ್ಚಿತ ಆದಾಯವಿರುವವರಿಗೆ ಉಳಿತಾಯಗಳನ್ನು ಹೆಚ್ಚಿಸಿಕೊಳ್ಳಲು ಅನುಕೂಲವಾಗುವಂತೆ ಈ ಠೇವಣಿ ಖಾತೆಯನ್ನು ತೆಗೆಯಲಾಗಿದೆ. ಈ ಠೇವಣಿಗಳನ್ನು ವಾರದಲ್ಲಿ ಕೆಲವು ಸಮಯಗಳಲ್ಲಿ ಮಾತ್ರ ಮರಳಿ

ಪಡೆಯಬಹುದಾಗಿರುತ್ತದೆ. ಈ ಠೇವಣಿಗಳ ಮೇಲೆ ಬ್ಯಾಂಕು ಸ್ವಲ್ಪ ಪ್ರಮಾಣದ ಬಡ್ಡಿ ನೀಡುತ್ತದೆ.

೩. **ಮುದ್ದತಿ ಠೇವಣಿಗಳು (ನಿರ್ದಿಷ್ಟ ಠೇವಣಿಗಳು) :** ಈ ಠೇವಣಿಗಳನ್ನು ಒಂದು ನಿರ್ದಿಷ್ಟ ಕಾಲಾವಧಿಯ ನಂತರ ಮಾತ್ರ ವಾಪಸ್ಸು ಪಡೆಯಬಹುದಾಗಿರುತ್ತದೆ. ಮೂರು ತಿಂಗಳುಗಳಿಂದ ಸುಮಾರು ಐದು ಅಥವಾ ಎಂಟು ವರ್ಷಗಳ ದೀರ್ಘಾವಧಿಗೆ ಬ್ಯಾಂಕುಗಳು ಈ ಠೇವಣಿಗಳನ್ನು ಮರುಪಾವತಿ ಮಾಡುವುದರಿಂದ ಇವುಗಳಿಗೆ ವಾಯಿದೆ ಠೇವಣಿಗಳು ಎಂಬ ಹೆಸರೂ ಇದೆ. ಈ ಠೇವಣಿಗಳ ಮೇಲೆ ಬ್ಯಾಂಕುಗಳು ಹೆಚ್ಚಿನ ದರದ ಬಡ್ಡಿ ನೀಡುತ್ತದೆ. ಠೇವಣಿ ಅವಧಿ ಹೆಚ್ಚಿದಂತೆ ಬಡ್ಡಿಯ ದರವೂ ಜಾಸ್ತಿಯಾಗುತ್ತದೆ.

**೨. ಸಾಲ ನೀಡಿಕೆ**

ವಿವಿಧ ಉದ್ದೇಶಗಳಿಗೆ ವಾಣಿಜ್ಯ ಬ್ಯಾಂಕುಗಳು ಸಾಲಗಳು ಮತ್ತು ಮುಂಗಡಗಳ ರೂಪದಲ್ಲಿ ಹಣಕಾಸನ್ನು ಪೂರೈಸುತ್ತವೆ. ವ್ಯವಸಾಯ, ಉದ್ದಿಮೆ, ವಾಣಿಜ್ಯ, ವ್ಯಾಪಾರ, ಸಾರಿಗೆ, ಶಿಕ್ಷಣ ಮೊದಲಾದ ಹತ್ತು ಹಲವು ಚಟುವಟಿಕೆಗಳಿಗೆ ಬ್ಯಾಂಕುಗಳು ಸಾಲವನ್ನು ಒದಗಿಸುತ್ತದೆ. ಈ ಕೆಳಕಂಡ ವಿಧಾನಗಳ ಮೂಲಕ ಅವು ಸಾಲ ನೀಡುತ್ತವೆ.

೧. **ನಗದು ಉದ್ದರಿ (Cash Credit) :** ಭದ್ರತೆಯ ಆಧಾರದ ಮೇಲೆ ವ್ಯಾಪಾರಿಗಳು, ಪ್ರಕಟಣಕಾರರು ಮುಂತಾದ ನರಿಗೆ ಈ ಸಾಲ ಸೌಲಭ್ಯವನ್ನು ನೀಡಲಾಗುತ್ತದೆ. ಸಾಲ ಪಡೆಯುವವನ ಹೆಸರಿನಲ್ಲಿ ನಗದು ಉದ್ದರಿ ಖಾತೆಯನ್ನು ತೆರೆಯಲಾಗುತ್ತದೆ. ನಂತರ ಸಾಲದ ಮೊತ್ತವನ್ನು ಈ ಖಾತೆಗೆ ಜಮಾ ಮಾಡಲಾಗುವುದು. ಸಾಲಗಾರನು ತನಗೆ ಎಷ್ಟು ಬೇಕೋ ಅಷ್ಟು ಮೊತ್ತವನ್ನು ತನ್ನ ಖಾತೆಯಿಂದ ತೆಗೆದುಕೊಳ್ಳುತ್ತಿರಬಹುದು. ಈ ಸಾಲವನ್ನು ಕಂತುಗಳಲ್ಲಿ ತೀರಿಸಬೇಕು.

೨. **ಸಾಲಗಳು ಮತ್ತು ಮುಂಗಡಗಳು:** ವಾಣಿಜ್ಯ ಬ್ಯಾಂಕುಗಳು ದೀರ್ಘಾವಧಿಗೆ ಸಾಲಗಳನ್ನು ಮತ್ತು ಅಲ್ಪಾವಧಿಗೆ ಮುಂಗಡಗಳನ್ನು ನೀಡುತ್ತವೆ. ಸರಿಯಾದ ಭದ್ರತೆಗಳು ಮತ್ತು ಜಾಮೀನಿನ ಮೇಲೆ ಈ ಸಾಲವನ್ನು ಒದಗಿಸಲಾಗುತ್ತದೆ. ನಿಗದಿತ ಅವಧಿಯ ನಂತರ ಪೂರ್ಣ ಮೊತ್ತವನ್ನು ಒಂದೇ ಬಾರಿಗೆ ಮರುಪಾವತಿ ಮಾಡಬೇಕಾಗಿರುತ್ತದೆ.

೩. **ಮೀರೆಲೆತ (ಓವರ್ ಡ್ರಾಫ್ಟ್):** ಬ್ಯಾಂಕು ತನ್ನ ಗಿರಾಕಿಗಳಿಗೆ ತಾತ್ಕಾಲಿಕ ಸಾಲ ಸೌಲಭ್ಯ ಒದಗಿಸುವ ಇನ್ನೊಂದು ವಿಧಾನ ಇದಾಗಿದೆ. ಗಿರಾಕಿಯು ತನ್ನ ಖಾತೆಯಲ್ಲಿ ಹೊಂದಿರುವ ಠೇವಣಿಗಿಂತಲೂ ಹೆಚ್ಚಿನ ಮೊತ್ತವನ್ನು ಬ್ಯಾಂಕು ಆತನಿಗೆ ಸಾಲ ನೀಡಬಹುದು. ಇದಕ್ಕೆ ಮೀರೆಳೆತ ಎಂದು ಹೆಸರು. ವ್ಯವಹಾರದಲ್ಲಿ ಪ್ರಮಾಣಿಕತೆ

ಯನ್ನು ತೋರಿಸಿದ ಮತ್ತು ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿರುವ ಗ್ರಾಹಕರಿಗೆ ಮಾತ್ರ ಈ ಸೌಲಭ್ಯವನ್ನು ಒದಗಿಸಲಾಗುವುದು. ಈ ಸಾಲದ ಮೇಲೆ ಬ್ಯಾಂಕುಗಳು ಬಡ್ಡಿಯನ್ನು ವಸೂಲು ಮಾಡುತ್ತವೆ.

**೪. ಹುಂಡಿಗಳನ್ನು ವಟ್ಟಾಯಿಸುವುದು :** ವ್ಯಾಪಾರದಲ್ಲಿ ಬಳಸುವ ವಿನಿಮಯ ಪತ್ರಗಳಿವೆ ಹುಂಡಿಗಳೆಂದು ಹೆಸರು. ಸರಕುಗಳನ್ನು ಮಾರಾಟ ಮಾಡಿದ ವ್ಯಕ್ತಿಯು ಸರಕುಗಳನ್ನು ಕೊಂಡ ವ್ಯಕ್ತಿಗತಿಯಿಂದ ನಿರ್ದಿಷ್ಟ ಅವಧಿಯೊಳಗೆ ಹಣವನ್ನು ಪಡೆಯುವ ಭರವಸೆಯ ಪತ್ರವೇ ಹುಂಡಿ. ಹುಂಡಿಯ ವಾಯ್ದೆ ಸಾಮಾನ್ಯವಾಗಿ ೯೦ ದಿನಗಳಾಗಿರುತ್ತದೆ. ಅಂದರೆ ೯೦ ದಿನದೊಳಗಾಗಿ ಸರಕುಗಳನ್ನು ಕೊಂಡ ವ್ಯಕ್ತಿಯು ಹಣ ಸಂದಾಯ ಮಾಡಬೇಕು. ವಾಯ್ದೆಯು ಮುಗಿಯುವ ಮೊದಲೇ ಹಣದ ಅವಶ್ಯಕತೆ ಉದ್ಭವಿಸಿದರೆ ಸರಕುಗಳನ್ನು ಮಾರಾಟ ಮಾಡಿದವನು ಹುಂಡಿಯನ್ನು ಬ್ಯಾಂಕಿನಲ್ಲಿ ಇರಿಸಿ ಸಾಲ ಪಡೆಯಬಹುದು. ಹುಂಡಿಯನ್ನು ಭದ್ರತೆಯಾಗಿ ಇಟ್ಟುಕೊಂಡು ವಾಣಿಜ್ಯ ಬ್ಯಾಂಕು ಸಾಲ ನೀಡುವುದಕ್ಕೆ 'ಹುಂಡಿಯನ್ನು ವಟ್ಟಾಯಿಸುವುದು' ಎಂದು ಕರೆಯಲಾಗುತ್ತದೆ. ಇಂತಹ ಸಾಲದ ಮೇಲೆ ವಿಧಿಸುವ ಬಡ್ಡಿಗೆ 'ವಟ್ಟ ದರ' ಎನ್ನಲಾಗುತ್ತದೆ. ಹುಂಡಿಯ ಅವಧಿಯು ಮುಗಿದ ನಂತರ ಸಾಲಗಾರನು ಸಾಲವನ್ನು ಮರುಪಾವತಿ ಮಾಡುತ್ತಾನೆ. ಹುಂಡಿಯನ್ನು ವಟ್ಟಾಯಿಸುವಿಕೆಯು ವಾಣಿಜ್ಯ ಬ್ಯಾಂಕುಗಳು ವ್ಯಾಪಾರಕ್ಕೆ ಸಾಲ ನೀಡುವ ಪ್ರಮುಖ ವಿಧಾನವಾಗಿದೆ.

**೩. ಹಣದ ರವಾನೆ :** ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಹಣವನ್ನು ಸುಲಭವಾಗಿ ರವಾನಿಸುವ ಸೌಲಭ್ಯವನ್ನು ಬ್ಯಾಂಕುಗಳು ಒದಗಿಸುತ್ತವೆ. ಇದಕ್ಕಾಗಿ ಬಳಸುವ ಮುಖ್ಯ ಸಾದನವೆಂದರೆ ಬೇಡಿಕೆಯ ಹುಂಡಿ. ಒಂದು ಬ್ಯಾಂಕಿನ ಶಾಖೆಯು ಅದೇ ಬ್ಯಾಂಕಿನ ಇನ್ನೊಂದು ಶಾಖೆಯು ನಗದಿಗೆ ಪರಿವರ್ತಿಸುವಂತೆ ಮೊತ್ತವನ್ನು ನಮೂದಿಸಿದ ಆದೇಶವೇ ಹುಂಡಿ. ಹುಂಡಿಯನ್ನು ಕೊಳ್ಳುವ ವ್ಯಕ್ತಿಯು ಮೊದಲೇ ಹಣವನ್ನು ಬ್ಯಾಂಕಿಗೆ ಪಾವತಿ ಮಾಡಬೇಕು. ಆ ಮೊತ್ತಕ್ಕೆ ಬ್ಯಾಂಕು ಹುಂಡಿಯನ್ನು ನೀಡುತ್ತದೆ ಮತ್ತು ಸ್ವಲ್ಪ ಸೇವಾ ವೆಚ್ಚವನ್ನು ವಸೂಲು ಮಾಡುತ್ತದೆ. ಹಣ ಸಂದಾಯವಾಗಬೇಕಿರುವ ಬೇರೆ ಊರಿನಲ್ಲಿರುವ ವ್ಯಕ್ತಿಗೆ ಇದನ್ನು ಕಳಿಸಿದರೆ, ಆ ಬ್ಯಾಂಕಿನಲ್ಲಿ ಹುಂಡಿಯನ್ನು ತೋರಿಸಿ ಹಣ ಪಡೆಯುತ್ತಾನೆ.

**೪. ಇತರ ಕಾರ್ಯಗಳು :** ಸಾರ್ವಜನಿಕ ಅನುಕೂಲವಾಗುವಂತೆ ಮತ್ತು ಆರ್ಥಿಕಾಭಿವೃದ್ಧಿಗೆ ಪೂರಕವಾಗುವಂತೆ ವಾಣಿಜ್ಯ ಬ್ಯಾಂಕುಗಳು ಇತರ ಹಲವಾರು ಕಾರ್ಯಗಳನ್ನು ನಿರ್ವಹಿಸುತ್ತವೆ. ಅವುಗಳನ್ನು ಕೆಳಗೆ ನಮೂದಿಸಿದೆ.

೧. ಸಾಲ ಪತ್ರಗಳನ್ನು ಕೊಳ್ಳುವುದು ಮತ್ತು ಮಾರುವುದು.

೨. ಗ್ರಾಹಕರ ಪರವಾಗಿ ಲಾಭಾಂಶಗಳು, ವೇತನಗಳು, ವಿಶ್ರಾಂತಿ ವೇತನಗಳು, ಬಾಡಿಗೆ ಮೊದಲಾದವನ್ನು ಸಂಗ್ರಹಿಸಿ ಪಾವತಿ ಮಾಡುವುದು.

೩. ಆಭರಣಗಳು ಮತ್ತು ಅಮೂಲ್ಯವಾದ ಕಾಗದಪತ್ರಗಳನ್ನು ಭದ್ರವಾಗಿ ಕಾಪಾಡಲು ಬ್ಯಾಂಕುಗಳು ಗ್ರಾಹಕರಿಗೆ ಭದ್ರತಾ ಕಪಾಟುಗಳನ್ನು ಒದಗಿಸುತ್ತವೆ. ಗ್ರಾಹಕರಿಗೆ ಭದ್ರತಾ ಕಪಾಟುಗಳನ್ನು ಒದಗಿಸುತ್ತವೆ. ಕಳ್ಳತನ, ಬೆಂಕಿಯಿಂದ ನಾಶ ಮೊದಲಾದ ಅಪಾಯಗಳಿಂದ ಈ ವಸ್ತುಗಳನ್ನು ರಕ್ಷಿಸಲು ಬ್ಯಾಂಕುಗಳು ಒದಗಿಸುವ ಈ ಸೌಲಭ್ಯ ಬಹಳ ಉಪಕಾರಿಯಾಗಿದೆ.

೪. ಖಾತೆದಾರರ ಪರವಾಗಿ ವಿಮಾ ಕಂತುಗಳನ್ನು ಸಂಗ್ರಹಿಸಿ ವಿಮಾ ನಿಗಮಕ್ಕೆ ಒಪ್ಪಿಸುತ್ತವೆ.

೫. ಪ್ರವಾಸಿಗರಿಗೆ ಅನುಕೂಲವಾಗುವಂತೆ ಬ್ಯಾಂಕುಗಳು ಪ್ರಯಾಣಿಕರ ಚೆಕ್ಕುಗಳನ್ನು ನೀಡುತ್ತವೆ. ಪ್ರವಾಸಿಗನು ಈ ಚೆಕ್ಕನ್ನು ತೋರಿಸಿ ಯಾವುದೇ ಬ್ಯಾಂಕಿನಲ್ಲಾದರೂ ಹಣ ಪಡೆಯಬಹುದು. ದೊಡ್ಡ ಮೊತ್ತದ ನಗದು ಹಣವನ್ನು ತನ್ನ ಬಳಿಯೇ ಇಟ್ಟುಕೊಂಡಿರುವುದರಿಂದ ಒದಗುವ ಕಳ್ಳತನ, ಕಳೆದುಹೋಗುವಿಕೆ ಮೊದಲಾದ ಅಪಾಯಗಳನ್ನು ಪ್ರವಾಸಿಗನು ನಿವಾರಿಸಿಕೊಳ್ಳಲು ಇದು ಸಹಾಯಕವಾಗಿದೆ.

೬. ಗ್ರಾಹಕರಿಗೆ ಹಣಕಾಸಿನ ಸಲಹೆ ನೀಡುತ್ತವೆ.

**ಇತ್ತೀಚಿನ ಬೆಳವಣಿಗೆಗಳು**

೧೯೬೯ರ ರಾಷ್ಟ್ರೀಕರಣದ ನಂತರದ ಅವಧಿಯಲ್ಲಿ ಭಾರತದ ಬ್ಯಾಂಕೋದ್ಯಮ ವ್ಯವಸ್ಥೆಯು ಹಲವು ವಿಧಗಳಲ್ಲಿ ವಿಸ್ತರಣೆಗೊಂಡಿದೆ. ಈ ಬೆಳವಣಿಗೆಯನ್ನು ಕೆಳಗಿನಂತೆ ಅಧ್ಯಯನ ಮಾಡಬಹುದು.

೧. **ಶಾಖೆಗಳ ವಿಸ್ತರಣೆ :** ರಾಷ್ಟ್ರೀಕರಣ ಪೂರ್ವ ಅವಧಿಯಲ್ಲಿ ಬ್ಯಾಂಕುಗಳ ಶಾಖೆ ತೆರೆಯುವಿಕೆಯ ಕಾರ್ಯಕ್ರಮವು ಬಹಳ ಮಂದಗತಿಯಲ್ಲಿತ್ತು. ರಾಷ್ಟ್ರೀಕರಣದ ನಂತರ ಶಾಖೆಗಳ ವಿಸ್ತರಣೆಗೆ ಹೊಸ ಚಾಲನೆ ದೊರೆತಿದೆ. ಜೂನ್ ೧೯೬೯ರಲ್ಲಿ ೮,೨೬೨ ಇದ್ದ ಬ್ಯಾಂಕು ಶಾಖೆಗಳ ಸಂಖ್ಯೆ ಜೂನ್ ೨೦೦೪ರಲ್ಲಿ ಸುಮಾರು ೬೯,೦೦೦ಕ್ಕೆ ಏರಿದೆ. ರಾಷ್ಟ್ರೀಕರಣದ ನಂತರ ಶಾಖೆಗಳ ವಿಸ್ತರಣೆಯ ಕಾರ್ಯವನ್ನು ಗ್ರಾಮೀಣ ಮತ್ತು ಅರೆ ಪಟ್ಟಣ ಪ್ರದೇಶಗಳಲ್ಲಿ ಗಮನಾರ್ಹವಾಗಿ ಕೈಗೊಳ್ಳಲಾಗಿದೆ. ಉದಾಹರಣೆಗೆ, ಜೂನ್ ೧೯೬೯ರಲ್ಲಿ ಗ್ರಾಮೀಣ ಪ್ರದೇಶಗಳಲ್ಲಿ ೧,೮೩೨ ಇದ್ದ ಬ್ಯಾಂಕುಗಳ ಶಾಖೆಗಳು ಜೂನ್ ೨೦೦೪ರಲ್ಲಿ ಸುಮಾರು ೪೨,೦೦೦ಕ್ಕೆ ಹೆಚ್ಚಿವೆ. ೩೪ ವರ್ಷಗಳಲ್ಲಿ ಒಟ್ಟು ಬ್ಯಾಂಕು ಶಾಖೆಗಳಲ್ಲಿ ಗ್ರಾಮೀಣ ಪ್ರದೇಶಗಳ ಪಾಲು ಶೇಕಡ ೨೨.೨ ರಿಂದ ಶೇಕಡ ೬೦ಕ್ಕೆ ಏರಿದೆ.

ಶಾಖೆಗಳ ಗಣನೀಯ ವಿಸ್ತರಣೆಯ ಫಲವಾಗಿ, ಒಂದು ಶಾಖೆಯು ಸೌಕರ್ಯಗಳನ್ನು ಒದಗಿಸುತ್ತಿದ್ದ ಜನಸಂಖ್ಯೆ ಅಗಾಧವಾಗಿ ಇಳಿದಿದೆ. ೧೯೬೯ರಲ್ಲಿ ಪ್ರತಿಯೊಂದು ಶಾಖೆಯು ೬೫,೦೦೦ ಜನರಿಗೆ ಸೇವೆಯನ್ನು ಒದಗಿಸುತ್ತಿತ್ತು. ೨೦೦೪ರಲ್ಲಿ ಇದು ೧೨೦೦೦ ಜನತೆಗೆ ಇಳಿದಿದೆ. ಆದರೆ ದೇಶದ ವಿವಿಧ ಭಾಗಗಳಲ್ಲಿ ಇದು ವಿಭಿನ್ನವಾಗಿದೆ. ಉದಾಹರಣೆಗೆ, ಕರ್ನಾಟಕ, ಗುಜರಾತ್ ಮತ್ತು ಜಮ್ಮು ಕಾಶ್ಮೀರದಲ್ಲಿ ೧೩,೦೦೦ ಹಿಮಾಚಲಪ್ರದೇಶದಲ್ಲಿ

೧೨,೦೦೦, ಹರಿಯಾಣ ಮತ್ತು ತಮಿಳುನಾಡಿನಲ್ಲಿ ೧೬,೦೦೦ ಮತ್ತು ಮಹಾರಾಷ್ಟ್ರದಲ್ಲಿ ೧೭,೦೦೦ ಆಗಿದೆ.

**೨. ಠೇವಣಿ ಸಂಚಯನ :** ಠೇವಣಿ ಸಂಚಯನ ಕಾರ್ಯದಲ್ಲಿ ವಾಣಿಜ್ಯ ಬ್ಯಾಂಕುಗಳಿಂದ ಅಮೋಘ ಕೊಡುಗೆ ದೊರೆತಿದೆ. ರಾಷ್ಟ್ರೀಕರಣದ ಸಮಯದಲ್ಲಿ ಒಟ್ಟು ರೂ. ೪,೬೬೪ ಕೋಟಿ ರೂಪಾಯಿ ಇದ್ದ ಠೇವಣಿ ಸಂಚಯನ ಜೂನ್ ೨೦೦೪ರಲ್ಲಿ ರೂ. ೯,೫೦,೦೦೦ ಕೋಟಿ ಬೆಳೆದಿದೆ. ಗ್ರಾಮೀಣ ಜನತೆಯಲ್ಲಿ ಬ್ಯಾಂಕು ಪದ್ಧತಿಯ ಹವ್ಯಾಸಗಳನ್ನು ಬೆಳೆಸುವ ಹಾಗೂ ಗ್ರಾಮಾಂತರ ಪ್ರದೇಶಗಳ ಉಳಿತಾಯಗಳನ್ನು ಕ್ರೋಢೀಕರಿಸುವ ದಿಸೆಯಲ್ಲಿ ಇತ್ತೀಚಿನ ದಿನಗಳಲ್ಲಿ ಗಮನಾರ್ಹ ಪ್ರಗತಿಯಾಗಿದೆ. ರಾಷ್ಟ್ರೀಕರಣದ ನಂತರ ಇಂದಿನವರೆಗೆ ಠೇವಣಿ ಸಂಚಯನ ಸುಮಾರು ಐವತ್ತು ಪಟ್ಟು ಏರಿದೆ.

**೩. ಸಾಲದ ವಿತರಣೆ :** ಶಾಖೆಗಳು ಮತ್ತು ಠೇವಣಿ ಸಂಚಯದಲ್ಲಿ ಗಣನೀಯ ವಿಸ್ತರಣೆಯಾದಂತೆ ಸಾಲ ನೀಡುವಿಕೆಯಲ್ಲಿಯೂ ಮಹತ್ತರ ಬೆಳವಣಿಗೆಯಾಗಿದೆ. ಜುಲೈ ೧೯೬೯ರಲ್ಲಿ ವಾಣಿಜ್ಯ ಬ್ಯಾಂಕುಗಳು ನೀಡುತ್ತಿದ್ದ ಒಟ್ಟು ಸಾಲ ರೂ. ೩,೫೯೯ ಕೋಟಿ ಆಗಿತ್ತು. ಜೂನ್ ೨೦೦೪ರಲ್ಲಿ ಇದು ರೂ. ೫,೨೦,೦೦೦ ಕೋಟಿ ಆಗಿದ್ದಿತು. ಇದರಲ್ಲಿ ಆದ್ಯತಾ ಕ್ಷೇತಗಳ ಪಾಲು ರೂ. ೧,೨೦,೦೦೦ ಕೋಟಿ ಅಂದರೆ ಶೇಕಡ ೪೬ ಭಾಗವಾಗಿತ್ತು. ಕೃಷಿ ಕ್ಷೇತ್ರ ಒಂದರ ಪಾಲು ರೂ. ೨೫,೦೦೦ ಆಗಿದ್ದಿತು. ಒಟ್ಟು ಸಾಲದಲ್ಲಿ ರೂ. ೨೯,೦೦೦ ಮೊತ್ತವನ್ನು ದೊಡ್ಡ ಮತ್ತು ಮಾಧ್ಯಮ ಪ್ರಮಾಣದ ಕೈಗಾರಿಕೆಗಳಿಗೂ, ರೂ. ೧೮,೦೦೦ ಕೋಟಿ ಮೊತ್ತವನ್ನು ಸಣ್ಣ ಪ್ರಮಾಣದ ಕೈಗಾರಿಕೆಗಳಿಗೂ ನೀಡಲಾಗಿತ್ತು. ಬ್ಯಾಂಕುಗಳ ರಾಷ್ಟ್ರೀಕರಣದ ನಂತರ ಸುಮಾರು ೩೪ ವರ್ಷಗಳ ಅವಧಿಯಲ್ಲಿ ಸಾಲ ನೀಡಿಕೆಯಲ್ಲಿ ಸುಮಾರು ಐವತ್ತು ಪಟ್ಟು ವಿಸ್ತರಣೆಯಾಗಿದೆ.

**೪. ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳು :** ೧೯೭೨ರ ಬ್ಯಾಂಕಿಂಗ್ ಸಮಿತಿಯ ಶಿಫಾರಸಿನ ಮೇರೆಗೆ ಪ್ರಾದೇಶಿಕ ಗ್ರಾಮೀಣ ಬ್ಯಾಂಕುಗಳನ್ನು ಸ್ಥಾಪಿಸುವ ಕಾರ್ಯದಲ್ಲಿ ವಾಣಿಜ್ಯ ಬ್ಯಾಂಕುಗಳು ಮುಂದಾಗಿವೆ. ಈ ಬ್ಯಾಂಕುಗಳು ವಿವಿಧ ವಾಣಿಜ್ಯ ಬ್ಯಾಂಕುಗಳ ಜವಾಬ್ದಾರಿಗೆ ಒಳಪಟ್ಟಿದ್ದು ಗ್ರಾಮಾಂತರ ಪ್ರದೇಶಗಳಲ್ಲಿ ವಿಶೇಷ ಬ್ಯಾಂಕು ಸೌಲಭ್ಯಗಳನ್ನು ಒದಗಿಸುವ ಮತ್ತು ದುರ್ಬಲ ವರ್ಗದವರಿಗೆ ಹಣಕಾಸಿನ ನೆರವು ನೀಡುವ ಧ್ಯೇಯ ಹೊಂದಿದೆ.

**೫. ಅಗ್ರ ಬ್ಯಾಂಕು ಯೋಜನೆ :** ವಾಣಿಜ್ಯ ಬ್ಯಾಂಕುಗಳು ೧೯೬೯ರಲ್ಲಿ 'ಅಗ್ರ ಬ್ಯಾಂಕು ಯೋಜನೆ'ಯನ್ನು ಜಾರಿಗೆ ತಂದಿದೆ. ಈ ಯೋಜನೆ ಪ್ರಕಾರ ದೇಶದ ಎಲ್ಲಾ ಜಿಲ್ಲೆಗಳಲ್ಲಿ ಕೆಲವು ಪ್ರಮುಖ ವಾಣಿಜ್ಯ ಬ್ಯಾಂಕುಗಳು ಶಾಖೆಗಳ ತೆರೆಯುವಿಕೆ, ಠೇವಣಿ ಸಂಚಯನ, ಸಾಲದ ವಿಸ್ತರಣೆ ಮತ್ತಿತರ ಅಂಶಗಳಿಗೆ ಸಂಬಂಧಿಸಿದಂತೆ ಮುಂದಾಳತ್ವ ವಹಿಸಿ ಕೆಲಸ ಮಾಡಬೇಕಾಗಿದೆ. ಆರ್ಥಿಕಾಭಿವೃದ್ಧಿಗೆ ದಾರಿದೀಪವಾಗುವಲ್ಲಿ, ಅದರಲ್ಲಿಯೂ ವಿಶೇಷವಾಗಿ ಗ್ರಾಮಾಂತರ ಪ್ರದೇಶಗಳ ಪರಿವರ್ತನೆಯಲ್ಲಿ ಈ ತರಹದ ಯೋಜನೆಗಳು ಯಶಸ್ವಿಯಾಗಿ ಕೆಲಸ ಮಾಡುತ್ತಿದೆ.

ಪ್ರತಿಯೊಬ್ಬನೂ ಎಂಬುದು ಅದರ ಮಂತ್ರವಾಗಿದೆ. ಒಬ್ಬ ದುರ್ಬಲ ವ್ಯಕ್ತಿಯು, ಶ್ರೀಮಂತರು ಪಡೆಯುವ ಸವಲತ್ತುಗಳು ಮತ್ತು ಅನುಕೂಲತೆಗಳನ್ನು ಪಡೆಯಲು ಸಾಧ್ಯವಾಗುವುದಿಲ್ಲ. ಹಲವಾರು ಜನರು ಒಂದೇ ತತ್ವದ ಆಧಾರದ ಮೇಲೆ ಸಹಭಾಗಿಗಳಾಗಿ ಕಾರ್ಯಮಗ್ನರಾದಾಗ ಅಂತಹ ಅನುಕೂಲತೆಗಳನ್ನು ಸೃಷ್ಟಿಸಿಕೊಳ್ಳುವುದು ಸಾಧ್ಯವಿರುತ್ತದೆ. ಒಗ್ಗಟ್ಟಿನ ಮೂಲಕ ವೈಯಕ್ತಿಕ ಹಾಗೂ ಸಾಮೂಹಿಕ ಅಭಿವೃದ್ಧಿಯನ್ನು ಸಾಧಿಸುವುದೇ ಸಹಕಾರದ ಸಾರ. ಸ್ವಾವಲಂಬನೆಯ ಮುಖಾಂತರ ಪ್ರಬಲವಾದ ರಾಷ್ಟ್ರ ನಿರ್ಮಾಣ ಕಾರ್ಯದಲ್ಲಿ ಸಹಕಾರವು ಒಂದು ರಥವಿದ್ದಂತೆ.

**೧. ಸಹಕಾರದ ವಿಧಗಳು**

ಜರ್ಮನಿ, ಇಂಗ್ಲೆಂಡ್, ಸ್ವೀಡನ್, ನಾರ್ವೆ, ಡೆನ್ಮಾರ್ಕ್ ಮೊದಲಾದ ದೇಶಗಳಲ್ಲಿ ಸಹಕಾರವು ಹತ್ತೊಂಬತ್ತನೆಯ ಶತಮಾನದಲ್ಲಿಯೇ ಬೆಳಕು ಕಂಡಿತು. ಪ್ರತಿಯೊಂದು ದೇಶದಲ್ಲಿಯೂ ಕೃಷಿಕರು, ಕರಕುಶಲ ಕೆಲಸಗಾರರು ಮುಂತಾದ ವರ್ಗಗಳ ಜನರ ಅಗತ್ಯಗಳಿಗೆ ತಕ್ಕಂತೆ ವಿವಿಧ ರೂಪಗಳಲ್ಲಿ ಸಹಕಾರವು ಬೆಳೆಯಿತು. ಪ್ರಾರಂಭದಲ್ಲಿ ಸಾಲವನ್ನು ಒದಗಿಸುವ ಸಹಕಾರ ಸಂಘಗಳು ಅಸ್ತಿತ್ವಕ್ಕೆ ಬಂದವು. ಇವುಗಳನ್ನು ಮೊದಲು ಸಂಗಟಿಸಿದವರು ರೈಫಿಸನ್ ಮತ್ತು ಶುಲ್ಟ್ಜ ಎಂಬ ವ್ಯಕ್ತಿಗಳು. ಇವರು ಜರ್ಮನಿಯವರಾದುದರಿಂದ ಈ ಸಹಕಾರ ಸಂಸ್ಥೆಗಳಿಗೆ ಜರ್ಮನ್ ಮಾದರಿಯ ಸಹಕಾರ ಸಂಘಗಳೆಂದು ಕರೆಯುತ್ತೇವೆ. ಭಾರತದಲ್ಲಿ ಈ ಮಾದರಿಯಲ್ಲಿಯೇ ಬೆಳೆದುಬಂದ ಸಾಲದ ಸಹಕಾರ ಸಂಘಗಳನ್ನು ಕಾಣುತ್ತೇವೆ.

**ಭಾರತದಲ್ಲಿ ಸಹಕಾರ ಸಂಘಗಳ ವಿಧಗಳು**

ಗ್ರಾಮೀಣ ಜನರು ಹಾಗೂ ದುರ್ಬಲ ವರ್ಗಗಳ ಏಳಿಗೆಗಾಗಿ ಶ್ರಮಿಸಲು ಹಲವು ವಿಧಗಳ ಸಹಕಾರ ಸಂಘಗಳ ಅವಶ್ಯಕತೆ ಇದೆ. ಇಂತಹ ಅನೇಕ ರೀತಿಯ ಸಹಕಾರ ಸಂಘಗಳ ಸ್ಥಾಪನೆಗೆ ಸರ್ಕಾರವು ಮೊದಲಿನಿಂದಲೂ ಆಸಕ್ತಿ ವಹಿಸಿದೆ. ಭಾರತದಲ್ಲಿ ಅಭಿವೃದ್ಧಿಯಾಗುತ್ತಿರುವ ಕೆಲವು ಪ್ರಮುಖ ಸಹಕಾರ ಸಂಘಗಳನ್ನು ಇಲ್ಲಿ ಸ್ಥೂಲವಾಗಿ ವಿವರಿಸಿದೆ.

**೧. ಸಾಲದ ಸಹಕಾರ ಸಂಘಗಳು:** ಇವು ಭಾರತದಲ್ಲಿ ಬಹಳ ಹಳೆಯವಾದ ಸಂಘಗಳಾಗಿವೆ. ಅತಿ ಕಡಿಮೆ ಬಡ್ಡಿ ದರದಲ್ಲಿ ಕೃಷಿಗೆ ಸಾಲವನ್ನು ಒದಗಿಸುವುದು ಇವುಗಳ ಉದ್ದೇಶವಾಗಿದೆ. ಈ ಸಂಘಗಳ ಸದಸ್ಯರಾದ ಜನರು ಸಾಗುವಳಿಯ ಸಮಯದಲ್ಲಿ ಸಾಲ ಪಡೆದು ಸುಗ್ಗಿಯ ನಂತರ ಮರುಪಾವತಿ ಮಾಡುತ್ತಾರೆ. ಇತ್ತೀಚಿನ ವರ್ಷಗಳಲ್ಲಿ ಈ ಸಂಘಗಳು ಸಾಲವನ್ನು ಒದಗಿಸುವುದರ ಜೊತೆಗೆ ಗೊಬ್ಬರ, ಬೀಜಗಳು, ಕೃಷಿ ಉಪಕರಣಗಳು ಮೊದಲಾದ ಹೂಡುವಳಿಗಳನ್ನು ಸಹ ಮಾರಾಟ ಮಾಡುತ್ತವೆ.

**೨. ಸಂಸ್ಕರಣ ಮತ್ತು ಮಾರುಕಟ್ಟೆ ಸಹಕಾರ ಸಂಘಗಳು:** ವ್ಯವಸಾಯೋತ್ಪನ್ನಗಳನ್ನು ಸಂಗ್ರಹಿಸಿ, ಅದನ್ನು ಕೆಡದಂತೆ ಶೇಖರಿಸಿ, ಮಾರಾಟ ಮಾಡುವುದು ಈ ಸಂಘಗಳ ಪಾಲಿನ

ಕರ್ತವ್ಯವಾಗಿದೆ. ಈ ಸಂಘಗಳು ಕೃಷಿಕರ ಉತ್ಪನ್ನಗಳಿಗೆ ನ್ಯಾಯವಾದ ಬೆಲೆಯನ್ನು ಒದಗಿಸುತ್ತವೆ. ಇದರಿಂದ ದಲ್ಲಾಳಿಗಳ ಹಾವಳಿ ಮತ್ತು ಮಾರುಕಟ್ಟೆಯಲ್ಲಿ ನಡೆಯುವ ಮೋಸಗಳಿಂದ ರೈತರಿಗೆ ವಿಮುಕ್ತರಾಗಲು ಸಾಧ್ಯವಾಗುತ್ತದೆ.

೩. **ಬೇಸಾಯ ಸಹಕಾರ ಸಂಘಗಳು:** ಅನೇಕ ಹಿಡುವಳಿದಾರರಿಗೆ ಸೇರಿರುವ ಹಿಡುವಳಿಗಳನ್ನು ಒಂದುಗೂಡಿಸಿ, ಎಲ್ಲರೂ ಸಾಮೂಹಿಕವಾಗಿ ಸಾಗುವಳಿ ಮಾಡಿ, ಬಂದ ಉತ್ಪನ್ನವನ್ನು ಹಿಡುವಳಿಯ ಗಾತ್ರಕ್ಕೆ ಅನುಗುಣವಾಗಿ ಹಂಚಿಕೊಳ್ಳುವಂತೆ ಮಾಡುವುದು ಈ ಸಂಘಗಳ ಕಾರ್ಯವಾಗಿದೆ. ಅತಿ ಚಿಕ್ಕ ಹಿಡುವಳಿಗಳು ಅನಾರ್ಥಿಕವಾಗಿರುವುದರಿಂದ ಅವುಗಳಲ್ಲಿ ಸಹಕಾರಿ ಬೇಸಾಯ ಪದ್ಧತಿಯ ಅವಶ್ಯಕತೆ ಹೆಚ್ಚು ಇದೆ. ಭಾರತದಲ್ಲಿ ಸಹಕಾರಿ ಬೇಸಾಯ ಪದ್ಧತಿಗೆ ಮೊದಲಿನಿಂದಲೂ ಮಹತ್ವ ದೊರೆಯಲಿಲ್ಲ. ಹಾಗಾಗಿ ಈ ಸಹಕಾರಿ ಸಂಘಗಳಿಗೆ ಪ್ರಾಧಾನ್ಯತೆ ಇಲ್ಲವಾಗಿದೆ.

೪. **ಬಳಕೆದಾರರ ಸಹಕಾರ ಸಂಘಗಳು:** ನಿಯಂತ್ರಿತ ಬೆಲೆಯಲ್ಲಿ ಅನುಭೋಗಿ ವಸ್ತುಗಳನ್ನು ವಿತರಣೆ ಮಾಡುವುದು ಈ ಸಹಕಾರ ಸಂಘಗಳ ಕರ್ತವ್ಯವಾಗಿದೆ. ಪಡಿತರ ಪದ್ಧತಿಯ ಮೇಲೆ ಇವು ಅಗತ್ಯ ವಸ್ತುಗಳನ್ನು ಮಾರುತ್ತವೆ. ಈ ಸಂಘಗಳು ವಿಧಿಸುವ ಬೆಲೆಗಳು ಮುಕ್ತ ಮಾರುಕಟ್ಟೆಯ ಬೆಲೆಗಳಿಗಿಂತ ತುಂಬಾ ಕಡಿಮೆ ಇರುತ್ತವೆ.

೫. **ವಸತಿ ಸಹಕಾರ ಸಂಘಗಳು:** ವಸತಿ ನಿರ್ಮಾಣಕ್ಕೆ ಅವಶ್ಯಕವಾದ ನಿವೇಶನಗಳನ್ನು ಪಡೆಯುವಿಕೆಗೆ ಸಹಾಯ ಮಾಡುವುದು ಮತ್ತು ಸಾಮಗ್ರಿಗಳನ್ನು ಸುಲಭ ಬೆಲೆಯಲ್ಲಿ ಒದಗಿಸುವುದು ಈ ಸಂಘಗಳ ಕಾರ್ಯವಾಗಿದೆ.

೬. **ಕೈಗಾರಿಕಾ ಸಹಕಾರ ಸಂಘಗಳು:** ಕೈಗಾರಿಕಾ ಕಾರ್ಮಿಕರಿಂದ ಸ್ಥಾಪಿಸಲ್ಪಟ್ಟ ಸಹಕಾರ ಸಂಘಗಳೇ ಕೈಗಾರಿಕಾ ಸಹಕಾರ ಸಂಘಗಳು. ಸಣ್ಣ ಪ್ರಮಾಣದ ಮತ್ತು ಗುಡಿ ಕೈಗಾರಿಕೆಗಳನ್ನು ಅಭಿವೃದ್ಧಿಪಡಿಸುವುದು ಇವುಗಳ ಗುರಿಯಾಗಿರುತ್ತದೆ. ಮಾಲೀಕರ ಶೋಷಣೆಯಿಂದ ಕಾರ್ಮಿಕರ ವಿಮುಕ್ತಿ ದೊರಕಿಸಲು ಈ ಸಂಘಗಳು ಶ್ರಮಿಸುತ್ತವೆ.

೭. **ಸೇವಾ ಸಹಕಾರ ಸಂಘಗಳು:** ಇವು ಗ್ರಾಮೀಣ ಮಟ್ಟದಲ್ಲಿ ಸರ್ವತೋಮುಖ ಅಭಿವೃದ್ಧಿ ಸಾಧನೆಗೆ ಅಗತ್ಯವಿರುವ ಎಲ್ಲಾ ವಸ್ತುಗಳನ್ನು ಪೂರೈಸುವ ಜವಾಬ್ದಾರಿ ಹೊತ್ತಿರುವ ಸಂಘಗಳಾಗಿವೆ. ಸಾಮಾನ್ಯವಾಗಿ ಪ್ರತಿ ಹಳ್ಳಿಗೆ ಒಂದಂರಂತೆ ಅಥವಾ ಪ್ರತಿ ಗ್ರಾಮ ಸಮುದಾಯಕ್ಕೆ ಒಂದರಂತೆ ಈ ಸಹಕಾರ ಸಂಘಗಳಿವೆ. ಸಾಲದ ಜೊತೆಗೆ ಕೃಷಿ ಹೂಡುವಳಿಗಳು ಉಪಕರಣಗಳು, ಬಟ್ಟೆ, ಬಳಕೆದಾರರ ಸರಕುಗಳು ಮೊದಲಾದ ಸಹಸ್ರಾರು ವಸ್ತುಗಳನ್ನು ಇವು ಕಡಿಮೆ ಬೆಲೆಯಲ್ಲಿ ಪೂರೈಸುತ್ತವೆ.

ಒಟ್ಟಿನಲ್ಲಿ ಸಾಲವನ್ನು ನೀಡುವ ಮತ್ತು ಇತರ ರೀತಿಯ ಸೇವೆಗಳನ್ನು ಒದಗಿಸುವ ಸಹಕಾರ ಸಂಘಗಳನ್ನು ಕಾಣುತ್ತೇವೆ. ಭಾರತದಲ್ಲಿ ಸಾಲದ ಸಹಕಾರ ಸಂಘಗಳು ಅತ್ಯಂತ ಪ್ರಮುಖವಾಗಿವೆ. ಸಹಕಾರ ಚಳುವಳಿ ಎಂದ ಕೂಡಲೇ ನೆನಪಾಗುವುದೇ ಸಾಲದ ಸಹಕಾರ

ಉದ್ದೇಶಗಳ ಸಹಕಾರ ಸಂಸ್ಥೆಗಳು ಸಹ ನಿರೀಕ್ಷಿತ ಮಟ್ಟದಲ್ಲಿ ಅಭಿವೃದ್ಧಿಯಾಗಿಲ್ಲ.

**೪. ಉತ್ಪಾದಕ ಉದ್ದೇಶಗಳಿಗೆ ಮಾತ್ರ ಸಾಲದ ಪೂರೈಕೆ:** ಸಹಕಾರ ಸಂಘಗಳು ಉತ್ಪಾದಕ ಉದ್ದೇಶಗಳಿಗಾಗಿ ಮಾತ್ರ ಸಾಲವನ್ನು ಪೂರೈಕೆ ಮಾಡುತ್ತಿವೆ. ಆದರೆ ಕೃಷಿಕರು ಇತರ ಹಲವಾರು ಉದ್ದೇಶಗಳಿಗೆ ಸಾಲವನ್ನು ಬಯಸುತ್ತಾರೆ. ಸಹಕಾರ ಸಂಘಗಳು ಇಂತಹ ಸಾಲವನ್ನು ಒದಗಿಸುವುದರಿಂದ ಕೃಷಿಕರು ಹಣದ ಲೇವಾದೇವಿಗಾರರನ್ನು ಆಶ್ರಯಿಸ ಬೇಕಾಗಿದೆ. ಈ ಪರಿಣಾಮವಾಗಿ ಸಹಕಾರ ಸಂಘಗಳು ಪ್ರಭಾವಯುತವಾಗಿ ಬೆಳೆಯಲು ಸಾಧ್ಯವಾಗಿಲ್ಲ.

**೫. ಹಣದ ಲೇವಾದೇವಿಗಾರರಿಂದ ಸ್ಪರ್ಧೆ:** ಹಣದ ಲೇವಾದೇವಿಗಾರರಿಂದ ಪ್ರಬಲವಾದ ಸ್ಪರ್ಧೆಯನ್ನು ಎದುರಿಸಲು ಸಹಕಾರ ಸಂಘಗಳು ಅಶಕ್ತವಾಗಿವೆ. ಬದಲಾದ ಸನ್ನಿವೇಶಗಳಿಗೆ ಅನುಗುಣವಾಗಿ ಹಣದ ಲೇವೇದಾವಿಗಾರರು ಮತ್ತು ವ್ಯಾಪಾರಿಗಳು ಸಾಲನೀಡಿಕೆಯಲ್ಲಿ ತೊಡಗಿದ್ದಾರೆ. ಸಹಕಾರ ಸಂಘಗಳು ಹಣಕಾಸಿನ ನಿರ್ಬಂಧವನ್ನು ಅನುಭವಿಸುತ್ತಿರುವುದ ರಿಂದ ಇವರ ಸ್ಪರ್ಧೆಯನ್ನು ಎದುರಿಸಲಾರದೆ ತಮ್ಮ ಕಾರ್ಯದಲ್ಲಿ ವಿಫಲಗೊಂಡಿವೆ.

**೬. ರಾಜಕೀಯ ಹಸ್ತಕ್ಷೇಪ:** ಸಹಕಾರ ಸಂಘಗಳಲ್ಲಿ ರಾಜಕೀಯ ಹಸ್ತಕ್ಷೇಪ ವ್ಯಾಪಕವಾಗಿದೆ. ಶ್ರೀಮಂತ ಜಮೀನ್ದಾರರು, ರಾಜಕಾರಣಿಗಳು ಮತ್ತು ಪ್ರಭಾವೀ ವ್ಯಕ್ತಿಗಳು, ಇವುಗಳ ಆಡಳಿತದಲ್ಲಿ ಕೈವಾಡ ಹೊಂದಿರುತ್ತಾರೆ. ಅವರ ಸಂಬಂಧಿಕರು, ಅನುಯಾಯಿಗಳು ಮತ್ತು ಸ್ನೇಹಿತರಿಗೆ ಮಾತ್ರ ಸಾಲ ಒದಗುವುದರಿಂದ ಇತರ ಎಷ್ಟೋ ಮಂದಿ ದುರ್ಬಲ ವ್ಯಕ್ತಿಗಳಿಗೆ ಅನ್ಯಾಯವಾಗುತ್ತದೆ. ಅಲ್ಲದೆ ಈ ರೀತಿ ಹಸ್ತಕ್ಷೇಪ ನಡೆಸುವ ವ್ಯಕ್ತಿಗಳು ತಮ್ಮ ಹಿಂಬಾಲಕರು ಸಾಲವನ್ನು ಮರುಪಾವತಿ ಮಾಡದಿದ್ದರೂ ಅವರನ್ನು ರಕ್ಷಿಸುತ್ತಾರೆ. ಪರಿಣಾಮವಾಗಿ ಸಾಲದ ಬಾಕಿಯು ಬೆಳೆದು ಅನೇಕ ಸಹಕಾರ ಸಂಘಗಳು ದಿವಾಳಿ ಯಾಗುತ್ತವೆ.

**೭. ದೋಷಪೂರ್ಣ ಆಡಳಿತ:** ದೋಷಪೂರ್ಣ ಆಡಳಿತ ಮತ್ತು ಎಲ್ಲಾ ಹಂತ ಗಳಲ್ಲಿಯೂ ಭ್ರಷ್ಟಾಚಾರ ನಮ್ಮ ಸಹಕಾರ ಚಳುವಳಿಯ ಮತ್ತೊಂದು ನ್ಯೂನತೆಯಾಗಿದೆ.

**೮. ಸಾಲದ ಬಾಕಿದಾರಿಕೆ:** ಸಾಲದ ಮಿತಿಮೀರಿದ ಬಾಕಿದಾರಿಕೆಯು ಮತ್ತೊಂದು ಪ್ರಮುಖ ದೌರ್ಬಲ್ಯವಾಗಿದೆ. ಪಡೆದ ಸಾಲಗಳನ್ನು ಪ್ರಾಪ್ತ ಸಮಯದಲ್ಲಿ ಹಿಂದಿರುಗಿಸ ದಿದ್ದಾಗ ಹೊಸ ಸಾಲಗಳನ್ನು ನೀಡಲು ಮತ್ತು ಸಾಲದ ವ್ಯವಸ್ಥೆಯನ್ನು ಮುಂದುವರಿಸಿ ಕೊಂಡು ಹೋಗಲು ಸಹಕಾರ ಸಂಘಗಳಿಗೆ ಅವಕಾಶವೇ ದೊರೆಯುವುದಿಲ್ಲ. ಆಗ ಅವು ವ್ಯವಹಾರ ಸತ್ವನ್ನು ಕಳೆದುಕೊಳ್ಳುತ್ತವೆ ಮತ್ತು ದಿವಾಳಿಯಾಗುತ್ತವೆ.

## ಭಾರತದ ರಿಸರ್ವ್ ಬ್ಯಾಂಕು

ರಿಸರ್ವ್ ಬ್ಯಾಂಕು ಭಾರತದ ಕೇಂದ್ರ ಬ್ಯಾಂಕಾಗಿದೆ. ಇದು ೧, ಏಪ್ರಿಲ್ ೧೯೩೫ರಲ್ಲಿ ಖಾಸಗಿ ಷೇರುದಾರರ ಬ್ಯಾಂಕಾಗಿ ಸ್ಥಾಪನೆಗೊಂಡಿತು. ಇದರ ಷೇರು ಬಂಡವಾಳ ೫ ಕೋಟಿ

ರೂಪಾಯಿ ಆಗಿದ್ದಿತು. ಸರ್ಕಾರವು ೩,೩೩,೦೦೦ ರೂಪಾಯಿ ನಾಮಮಾತ್ರ ಮೌಲ್ಯದ ಷೇರುಗಳನ್ನು ಹೊಂದಿತ್ತು. ಆದರೆ ಸ್ವಾತಂತ್ರ್ಯನಂತರ ಭಾರತ ಸರ್ಕಾರ ಕಾನೂನಿನ ಮೂಲಕ ರಿಸರ್ವ್ ಬ್ಯಾಂಕನ್ನು ಜನವರಿ ೧,೯೪೯ರಲ್ಲಿ ರಾಷ್ಟ್ರೀಕರಣ ಮಾಡಲಾಯಿತು.

ಭಾರತದ ರಿಸರ್ವ್ ಬ್ಯಾಂಕಿನ ಆಡಳಿತ ಮತ್ತು ಮೇಲ್ವಿಚಾರಣೆಯನ್ನು ನೋಡಿಕೊಳ್ಳಲು ೨೦ ಸದಸ್ಯರನ್ನೊಳಗೊಂಡ ನಿರ್ದೇಶಕರ ಮಂಡಳಿ ಇದೆ. ಇದಕ್ಕೆ "ನಿರ್ದೇಶಕರ ಕೇಂದ್ರ ಮಂಡಳಿ" (Central Board of Directors) ಎಂದು ಹೆಸರು. ಈ ಇಪ್ಪತ್ತು ಮಂದಿ ಸದಸ್ಯರಲ್ಲಿ ಒಬ್ಬ ಕಾರ್ಯಾಧ್ಯಕ್ಷ (Governor) ಮತ್ತು ನಾಲ್ಕು ಮಂದಿ ಉಪ ಕಾರ್ಯಾಧ್ಯಕ್ಷರು (Depuity Governors)ಗಳಿರುತ್ತಾರೆ. ಉಳಿದ ೧೫ ಮಂದಿ ನಿರ್ದೇಶಕರಲ್ಲಿ ಒಬ್ಬರು ಹಣಕಾಸಿನ ಇಲಾಖೆಯ ಅಧಿಕಾರಿ, ವಿವಿಧ ಕ್ಷೇತ್ರಗಳಿಂದ ಆಯ್ದಂತೆ ಸರ್ಕಾರವು ನಾಮಕರಣ ಮಾಡಿದ ೧೦ ಜನರು, ಮತ್ತು ಸ್ಥಳೀಯ ಮಂಡಳಿಗಳ ಪ್ರತಿನಿಧಿಗಳಾಗಿ ೪ ಜನರಿರುತ್ತಾರೆ. ಕಾರ್ಯಾಧ್ಯಕ್ಷರು ಮತ್ತು ಉಪಾಧ್ಯಕ್ಷರುಗಳು ೫ ವರ್ಷಗಳ ಅವಧಿಗೆ ಮತ್ತು ನಿರ್ದೇಶಕರುಗಳು ೪ ವರ್ಷಗಳ ಅವಧಿಗೆ ನೇಮಕ ಗೊಂಡಿರುತ್ತಾರೆ. ನಿರ್ದೇಶಕರ ಮಂಡಳಿಯು ಸಾಮಾನ್ಯವಾಗಿ ಎರಡು ತಿಂಗಳಿಗೊಮ್ಮೆ ಸಭೆ ಸೇರಿ ಆಡಳಿತ ವ್ಯವಹಾರಗಳ ಬಗೆಗೆ ನಿರ್ಣಯಗಳನ್ನು ಕೈಗೊಳ್ಳುತ್ತದೆ.

ದೆಹಲಿ, ಮುಂಬಯಿ, ಕಲ್ಕತ್ತಾ ಮತ್ತು ಮದ್ರಾಸಿನಲ್ಲಿ ರಿಸರ್ವ್ ಬ್ಯಾಂಕಿನ ಸ್ಥಳೀಯ ಮಂಡಳಿಗಳಿವೆ. ಈ ಮಂಡಳಿಗಳು ದೇಶದ ನಾಲ್ಕು ಪ್ರದೇಶಗಳನ್ನು ಪ್ರತಿನಿಧಿಸುತ್ತವೆ. ಪ್ರತಿಯೊಂದು ಸ್ಥಳೀಯ ಮಂಡಳಿಯಲ್ಲಿ ೫ ಸದಸ್ಯರಿರುತ್ತಾರೆ. ಇವರನ್ನು ಕೇಂದ್ರ ಸರ್ಕಾರವು ೪ ವರ್ಷಗಳ ಅವಧಿಗೆ ನೇಮಿಸುತ್ತದೆ.

**ಕಛೇರಿಗಳು**

ರಿಜರ್ವ್ ಬ್ಯಾಂಕಿನ ಕೇಂದ್ರ ಕಛೇರಿಯು ಬಂಬಾಯಿಯಲ್ಲಿದೆ. ಅಲ್ಲದೆ ಬೊಂಬಾಯಿ, ನವದೆಹಲಿ, ಕಲ್ಕತ್ತಾ, ಮದ್ರಾಸ್, ಕಾನ್ಪುರ, ಬೆಂಗಳೂರು, ಅಹ್ಮದಾಬಾದ್, ನಾಗಪುರ, ಹೈದರಾಬಾದ್ ಮತ್ತು ಪಾಟ್ನಾದಲ್ಲಿ ಇದರ ಪ್ರಾದೇಶಿಕ ಕಛೇರಿ(Regional Offices)ಗಳಿವೆ.

**ಇಲಾಖೆಗಳು**

ರಿಜರ್ವ್ ಬ್ಯಾಂಕಿನ ಕೇಂದ್ರ ಕಛೇರಿಯು ಬಂಬಾಯಿಯಲ್ಲಿದೆ. ಅಲ್ಲದೆ ಬೊಂಬಾಯಿ, ನವದೆಹಲಿ, ಕಲ್ಕತ್ತಾ, ಮದ್ರಾಸ್, ಕಾನ್ಪುರ, ಬೆಂಗಳೂರು, ಅಹ್ಮದಾಬಾದ್, ನಾಗಪುರ, ಹೈದರಾಬಾದ್ ಮತ್ತು ಪಾಟ್ನಾದಲ್ಲಿ ಇದರ ಪ್ರಾದೇಶಿಕ ಕಛೇರಿ..ಗಳಿವೆ.

**ಇಲಾಖೆಗಳು**

ರಿಜರ್ವ್ ಬ್ಯಾಂಕಿನ ಕಛೇರಿಯು ಈ ಕೆಳಕಂಡ ಇಲಾಖೆಗಳನ್ನು ಹೊಂದಿದೆ

೧. ನೋಟು ಹೊರಡಿಸುವ ಇಲಾಖೆ

೨. ಮುಖ್ಯ ಲೆಕ್ಕಾಧಿಕಾರಿಯ ಇಲಾಖೆ

೩. ಪರೀಕ್ಷಣಾ ಇಲಾಖೆ (ತನಿಖಾ ಇಲಾಖೆ)

೪. ಸಚಿವಾಲಯ (Secratariat)

೫. ಕಾನೂನು ಇಲಾಖೆ

೬. ಸಂಶೋಧನೆ ಮತ್ತು ಅಂಕಿ-ಅಂಶಗಳ ಇಲಾಖೆ

೭. ವಿನಿಮಯ ನಿಯಂತ್ರಣ ಇಲಾಖೆ

೮. ಬ್ಯಾಂಕ್ಯೋದ್ಯಮ ವ್ಯವಹಾರಗಳ ಇಲಾಖೆ

೯. ಬ್ಯಾಂಕೋದ್ಯಮ ಅಭಿವೃದ್ಧಿ ಇಲಾಖೆ

೧೦. ಕೈಗಾರಿಕಾ ಹಣಕಾಸು ಇಲಾಖೆ

೧೧. ಕೃಷಿ ಸಾಲ ಇಲಾಖೆ

೧೨. ಬ್ಯಾಂಕೇತರ ಸಂಸ್ಥೆಗಳ ಇಲಾಖೆ

**ಇಲಾಖಾ ಕಛೇರಿಗಳು**

ರಿಜರ್ವ್ ಬ್ಯಾಂಕಿನ ವಿವಿಧ ಇಲಾಖೆಗಳ ಕಾರ್ಯಕಲಾಪಗಳನ್ನು ನೋಡಿಕೊಳ್ಳಲು ದೇಶದ ವಿಭಿನ್ನ ಸ್ಥಳಗಳಲ್ಲಿ ಇಲಾಖಾ ಕಛೇರಿಗಳಿವೆ. ಬ್ಯಾಂಕೋದ್ಯಮ ಅಭಿವೃದ್ಧಿ ಮತ್ತು ವಿಸ್ತರಣೆ, ಗ್ರಾಮೀಣ ಸಾಲ, ತನಿಖೆ ಮತ್ತು ಬ್ಯಾಂಕೋದ್ಯಮ ನಿಯಂತ್ರಣ, ಸರಕಾರಕ್ಕೆ ಸಲೆ ನೀಡಿಕೆ ಮುಂತಾದ ಇಲಾಖೆಗಳಿಗೆ ಸಂಬಂಧಿಸಿದ ಕಾರ್ಯಗಳನ್ನು ಬೊಂಬಾಯಿ ಯಲ್ಲಿರುವ ಕೇಂದ್ರ ಕಛೇರಿಯೇ ನಿರ್ವಹಿಸುತ್ತದೆ. ನೋಟುಗಳನ್ನು ಹೊರಡಿಸುವ ಇಲಾಖೆಯು ನವದೆಹಲಿ, ಬೊಂಬಾಯಿ, ಕಲ್ಕತ್ತಾ, ಮದ್ರಾಸು, ಬೆಂಗಳೂರು, ಕಾನ್ಪುರ, ಹೈದರಾಬಾದ್, ನಾಗಪುರ ಮತ್ತು ಪಾಟ್ನಾದಲ್ಲಿ ಕಛೇರಿಗಳಲ್ಲಿ ಹೊಂದಿದೆ. ಕೃಷಿ ಸಾಲ ಮತ್ತು ವಿನಿಮಯ ನಿಯಂತ್ರಣ ಇಲಾಖೆಗಳ ಕಛೇರಿಗಳು ನವದೆಹಲಿ, ಕಲ್ಕತ್ತಾ ಮತ್ತು ಮದ್ರಾಸಿನಲ್ಲಿವೆ. ಬ್ಯಾಂಕೇತರ ಸಂಸ್ಥೆಗಳ ಇಲಾಖೆಯು ಕಲ್ಕತ್ತಾದಲ್ಲಿದೆ.

**ಭಾರತದ ರಿಜರ್ವ್ ಬ್ಯಾಂಕಿನ ಕಾರ್ಯಗಳು**

ರಿಜರ್ವ್ ಬ್ಯಾಂಕು ಬೇರೆ ಯಾವುದೇ ಕೇಂದ್ರ ಬ್ಯಾಂಕಿನಂತೆ ತನ್ನ ಸಾಂಪ್ರದಾಯಿಕ ಪ್ರಾಥಮಿಕ ಕಾರ್ಯಗಳ ಜೊತೆಯಲ್ಲಿ ಭಾರತದ ಆರ್ಥಿಕಾಭಿವೃದ್ಧಿಯ ಕೋರಿಕೆಗಳಿಗೆ ಅನುಗುಣವಾಗಿ ಅಭಿವೃದ್ಧಿ ಕಾರ್ಯಗಳನ್ನು ನಿರ್ವಹಿಸುತ್ತಿದೆ.

**೧. ನೋಟು ಹೊರಡಿಸುವುದು**

ನೋಟುಗಳನ್ನು ಹೊರಡಿಸಿ ಚಲಾವಣೆಗೆ ತರುವುದು ರಿಜರ್ವ್ ಬ್ಯಾಂಕಿನ ಮೂಲಭೂತ ಕಾರ್ಯವಾಗಿದೆ. ಇದು ರಿಜರ್ವ್ ಬ್ಯಾಂಕಿನ ಏಕಸ್ವಾಮ್ಯ ಅಧಿಕಾರ ..ವಾಗಿದೆ. ಅಂದರೆ ದೇಶದಲ್ಲಿ ಬೇರೆ ಯಾವುದೇ ಬ್ಯಾಂಕಿಗೆ ನೋಟು ಹೊರಡಿಸುವ ಅಧಿಕಾರವಿಲ್ಲ. ಭಾರತದ ರಿಜರ್ವ್ ಬ್ಯಾಂಕಿನ ಕಾಯಿದೆಯ ೨೨ನೇ ಪರಿಚ್ಛೇದದ ಪ್ರಕಾರ ರಿಜರ್ವ್ ಬ್ಯಾಂಕು ನೋಟು ಹೊರಡಿಸುವ ಏಕಸ್ವಾಮ್ಯಾಧಿಕಾರವನ್ನು ಪಡೆದಿದೆ. ಇದಕ್ಕಾಗಿ ರಿಜರ್ವ್ ಬ್ಯಾಂಕಿನಲ್ಲಿ 'ಹೊರಡಿಸುವ ಇಲಾಖೆ' (Issue Department) ಎಂಬ ಪ್ರತ್ಯೇಕ ಇಲಾಖೆಯೇ ಇದೆ.

ರಿಜರ್ವ್ ಬ್ಯಾಂಕು ಎರಡು ರೂಪಾಯಿ ಮತ್ತು ಅದಕ್ಕೆ ಮೇಲ್ಪಟ್ಟ ವಿವಿಧ ಮೌಲ್ಯದ ಕಾಗದದ ನೋಟುಗಳನ್ನು ಮುದ್ರಿಸಿ ಚಲಾವಣೆಗೆ ಬಿಡುಗಡೆ ಮಾಡುತ್ತಿದೆ. ದೇಶದಲ್ಲಿ ಸಾಕ್ಷರತೆಯ ಪ್ರಮಾಣ ಬಹಳ ಕಡಿಮೆ ಇರುವುದರಿಂದ ವಿಭಿನ್ನ ಮೌಲ್ಯಗಳ ನೋಟುಗಳನ್ನು ಜನರು ಗುರುತಿಸಲು ಸುಲಭವಾಗುವಂತೆ ಅವುಗಳ ಬಣ್ಣ ಮತ್ತು ವಿನ್ಯಾಸದ ಆಯ್ಕೆಯಲ್ಲಿ ರಿಜರ್ವ್ ಬ್ಯಾಂಕು ವಿಶೇಷ ಎಚ್ಚರಿಕೆ ವಹಿಸುತ್ತದೆ.

೧೯೫೬ನೇ ಇಸವಿಯ ನಂತರ ರಿಜರ್ವ್ ಬ್ಯಾಂಕು 'ಕನಿಷ್ಠ ನಿಧಿ ಪದ್ಧತಿ'ಯ ಪ್ರಕಾರ ನೋಟುಗಳನ್ನು ಹೊರಡಿಸುತ್ತಿದೆ. ಇದಕ್ಕೆ ಮೊದಲು ಪ್ರಮಾಣಾನುಗುಣ ನಿಧಿ ಪದ್ಧತಿಯ ಪ್ರಕಾರ ನೋಟುಗಳನ್ನು ಹೊರಡಿಸಲಾಗುತ್ತಿತ್ತು. ಕನಿಷ್ಠ ನಿಧಿ ಪದ್ಧತಿಯ ಮೇರೆಗೆ ಕೇಂದ್ರ ಬ್ಯಾಂಕು ಒಂದು ಕನಿಷ್ಠ ಪ್ರಮಾಣದ ಲೋಹದ ನಿಧಿಯನ್ನು ಭದ್ರತೆಯಾಗಿ ಇಟ್ಟುಕೊಂಡು ಎಷ್ಟು ಮೊತ್ತದ ಹಣವನ್ನಾದರೂ ಚಲಾವಣೆಗೆ ಬಿಡುಗಡೆ ಮಾಡಬಹುದು. ಪ್ರಸ್ತುತದಲ್ಲಿ ರಿಜರ್ವ್ ಬ್ಯಾಂಕು ರೂ. ೨೦೦ ಕೋಟಿ ಮೌಲ್ಯದ ನಿಧಿಯನ್ನು ಸದಾ ತನ್ನ ಬಳಿ ಭದ್ರತೆಯಾಗಿ ಇಟ್ಟುಕೊಂಡು ನೋಟುಗಳನ್ನು ಹೊರಡಿಸುತ್ತಿದೆ. ಇದರಲ್ಲಿ ರೂ. ೧೧೫ ಕೋಟಿ ಚಿನ್ನದ ರೂಪದಲ್ಲಿಯೂ, ರೂ. ೮೫ ಕೋಟಿ ವಿದೇಶಿ ವಿನಿಮಯದ ರೂಪದಲ್ಲಿಯೂ ಇದೆ.

**೨. ಸರ್ಕಾರದ ಬ್ಯಾಂಕರು**

ಸರಕಾರದ ಬ್ಯಾಕರನಾಗಿ, ಪ್ರತಿನಿಧಿಯಾಗಿ ಮತ್ತು ಸಲಹೆಗಾರನಾಗಿ ರಿಸರ್ವ್ ಬ್ಯಾಂಕು ಕಾರ್ಯ ನಿರ್ವಹಿಸುತ್ತದೆ. ಸರಕಾರದ ಬ್ಯಾಂಕರನಾಗಿ ಅದು ನಿರ್ವಹಿಸುವ ಕಾರ್ಯಗಳನ್ನು ಈ ಕೆಳಗಿನಂತೆ ವಿವರಿಸಬಹುದು.

ರಿಜರ್ವ್ ಬ್ಯಾಂಕು ಕೇಂದ್ರ ಸರಕಾರದ ಬ್ಯಾಂಕರನಾಗಿ ಮತ್ತು ಜಮ್ಮು ಕಾಶ್ಮೀರದ ಹೊರತಾಗಿ ಇತರ ಎಲ್ಲ ರಾಜ್ಯ ಸರಕಾರಗಳ ಬ್ಯಾಂಕರನಾಗಿ ಕಾರ್ಯ ಮಾಡುತ್ತದೆ.

೧. ಕೇಂದ್ರ ಮತ್ತು ರಾಜ್ಯ ಸರಕಾರಗಳ ನಗದು ಶಿಲ್ಕುಗಳನ್ನು ಇಟ್ಟುಕೊಳ್ಳುತ್ತದೆ.
೨. ಸರಕಾರದ ಸೂಚನೆಗೆ ಅನುಗುಣವಾಗಿ ಹಣವನ್ನು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ವರ್ಗಾಯಿಸುತ್ತದೆ.
೩. ಸರಕಾರದ ಪರವಾಗಿ ಹಣವನ್ನು ವಸೂಲಿ ಮಾಡುತ್ತದೆ. ಮತ್ತು ಪಾವತಿ ಮಾಡುತ್ತದೆ.
೪. ಸರಕಾರದ ಸೂಚನೆಯಂತೆ ವಿವಿಧ ಸ್ಥಳಗಳಲ್ಲಿ ಹಣದ ಪೆಠಾರಿಗಳನ್ನು ಇಟ್ಟುಕೊಂಡು ಸರಕಾರದ ವ್ಯವಹಾರಕ್ಕೆ ಬೇಕಾದ ನೋಟುಗಳನ್ನು ಮತ್ತು ನಾಣ್ಯಗಳನ್ನು ಒದಗಿಸುತ್ತದೆ.
೫. ಸರಕಾರಕ್ಕೆ ೯೦ ದಿನಗಳ ಅವಧಿಗೆ ಕೈಗಡ ಮತ್ತು ಮುಂಗಡಗಳನ್ನು ಕೊಡುತ್ತದೆ.

೬.　ಕೇಂದ್ರ ಮತ್ತು ರಾಜ್ಯ ಸರಕಾರಗಳಿಗೆ ಹಾಗೂ ಸ್ಥಳೀಯ ಪ್ರಾಧಿಕಾರಿಗಳಿಗೆ ದೀರ್ಘಾವಧಿಯ ಸಾಲಗಳನ್ನು ನೀಡುತ್ತದೆ.

**೩. ಬ್ಯಾಂಕರುಗಳ ಬ್ಯಾಂಕು**

ದೇಶದ ಅತ್ಯುನ್ನತ ಹಣಕಾಸು ಸಂಸ್ಥೆಯಾಗಿರುವ ರಿಸರ್ವ್ ಬ್ಯಾಂಕು ಸ್ವಾಭಾವಿಕವಾಗಿ ಇತರ ಬ್ಯಾಂಕುಗಳ ಅಭಿವೃದ್ಧಿ, ನಿಯಂತ್ರಣ ಮತ್ತು ಮೇಲ್ವಿಚಾರಣೆಯ ಹೊಣೆಯನ್ನು ಹೊತ್ತಿದೆ. ಅದು ಇತರ ಬ್ಯಾಂಕುಗಳಿಗೆ ಬ್ಯಾಂಕಾಗಿ ಕೆಲಸ ನಿರ್ವಹಿಸುತ್ತದೆ.

**೪. ಅಂತಿಮ ಋಣದಾತ**

ಬ್ಯಾಂಕೋದ್ಯಮದ ಅಭಿವೃದ್ಧಿ ಮತ್ತು ನಿಯಂತ್ರಣದ ಜವಾಬ್ದಾರಿಯನ್ನು ಹೊತ್ತಿರುವ ರಿಜರ್ವ್ ಬ್ಯಾಂಕು ಸಹಜವಾಗಿ ವಾಣಿಜ್ಯ ಬ್ಯಾಕುಗಳಿಗೆ ಸಾಲವನ್ನು ಒದಗಿಸುವ ಕಾರ್ಯವನ್ನು ನಿರ್ವಹಿಸಬೇಕಾಗಿದೆ. ವಾಣಿಜ್ಯ ಬ್ಯಾಂಕುಗಳಿಗೆ ತಮ್ಮ ವ್ಯವಹಾರಗಳಿಗಾಗಿ, ಅಂದರೆ ಆರ್ಥಿಕ ಚಟುವಟಿಕೆಗಳಿಗಾಗಿ ಸಾಲ ನೀಡಲು, ಹಣದ ಅವಶ್ಯಕತೆ ಇರುತ್ತದೆ. ವಾಣಿಜ್ಯ ಬ್ಯಾಂಕುಗಳು ಹಣದ ಮಾರುಕಟ್ಟೆಯಲ್ಲಿ ಸಂಪನ್ಮೂಲಗಳನ್ನು ಎತ್ತುತ್ತವೆ. ಆದರೆ ಕೆಲವು ವೇಳೆ ಸಾಕಷ್ಟು ಸಂಪನ್ಮೂಲಗಳು ದೊರೆಯದಿದ್ದರೆ ಅವು ಕೊನೆಯ ಆಸರೆಯಾಗಿ ರಿಜರ್ವ್ ಬ್ಯಾಂಕನ್ನು ಅವಲಂಬಿಸುತ್ತವೆ. ಅಂದರೆ ತುರ್ತು ಅಗತ್ಯಗಳನ್ನು ಪೂರೈಸಲು, ಕಠಿಣ ಸಮಯಗಳಲ್ಲಿ ಮತ್ತು ಬೇರೆಲ್ಲಿಯೂ ಹಣಕಾಸು ದೊರೆಯದಿದ್ದಾಗ ರಿಜರ್ವ್ ಬ್ಯಾಂಕು ವಾಣಿಜ್ಯ ಬ್ಯಾಂಕುಗಳ ನೆರವಿಗೆ ಧಾವಿಸುತ್ತದೆ. ಆದ್ದರಿಂದ ಇದನ್ನು **ಅಂತಿಮ ಋಣದಾತ** ಎಂದು ಕರೆಯಲಾಗುತ್ತದೆ.

**೫. ಉದ್ಧರಿತ ನಿಯಂತ್ರಣ**

ಯಾವುದೇ ಕೇಂದ್ರ ಬ್ಯಾಂಕಿನ ಅತಿ ಮುಖ್ಯ ಕಾರ್ಯವಾಗಿದೆ. ಅಂತೆಯೇ ರಿಜರ್ವ್ ಬ್ಯಾಂಕು ಪ್ರಾಶಸ್ತ್ಯದ ಮೇಲೆ ಈ ಕಾರ್ಯವನ್ನೂ ಕೈಗೊಳ್ಳುತ್ತಿದೆ. ವಾಣಿಜ್ಯ ಬ್ಯಾಂಕುಗಳು ಹೆಚ್ಚು ಸಾಲ ನೀಡಿಕೆಯ ಮೂಲಕ ಹಣದುಬ್ಬರವನ್ನು ಪ್ರಚೋದಿಸುವ ಹಾಗೂ ಸಾಲ ನೀಡಿಕೆಯನ್ನು ತಗ್ಗಿಸುವ ಮೂಲಕ ಕುಗ್ಗು ಪ್ರಸರಣಕ್ಕೆ ಕೊಡುಗೆ ಅದಮ್ಯ ಶಕ್ತಿ ಪಡೆದಿವೆ. ಆರ್ಥಿಕತೆಯಲ್ಲಿ ಹಣದುಬ್ಬರವನ್ನು ತಡೆಗಟ್ಟಲು ಮತ್ತು ಸಮತೋಲನವನ್ನು ಕಾಯ್ದುಕೊಳ್ಳಲು ವಾಣಿಜ್ಯ ಬ್ಯಾಂಕುಗಳ ಸಾಲ ಸೃಷ್ಟಿಯ ಸಾಮರ್ಥ್ಯದ ಮೇಲೆ ರಿಸರ್ವ್ ಬ್ಯಾಂಕು ನಿಯಂತ್ರಣಗಳನ್ನು ವಿಧಿಸುತ್ತದೆ. ಇದೇ ಉದ್ದರಿ ನಿಯಂತ್ರಣ. ಪರಿಣಾಮಾತ್ಮಕ ಮತ್ತು ಗುಣಾತ್ಮಕ ವಿಧಾನಗಳ ಮೂಲಕ ರಿಸರ್ವ್ ಬ್ಯಾಂಕು ಉದ್ಧರಿ ನಿಯಂತ್ರಣವನ್ನು ಕೈಗೊಳ್ಳುತ್ತದೆ.

**೬. ವಿದೇಶೀ ವಿನಿಮಯದ ಸುಪರ್ದುಗಾರ**

ರಿಸರ್ವ್ ಬ್ಯಾಂಕು ಭಾರತದ ವಿದೇಶಿ ವಿನಿಮಯವನ್ನು ಸುಪರ್ದಿನಲ್ಲಿಟ್ಟುಕೊಳ್ಳುವ ಕಾರ್ಯವನ್ನು ನಿರ್ವಹಿಸುತ್ತದೆ. ವಿದೇಶಿ ವಿನಿಮಯ ಚಿನ್ನ ಮತ್ತು ವಿದೇಶಿ ಹಣದ

ರೂಪದಲ್ಲಿರುತ್ತದೆ. ಭಾರತದ ಸರ್ಕಾರಕ್ಕೆ ಸೇರಬೇಕಾದ ಈ ನಿಧಿಯನ್ನು ರಿಸರ್ವ್ ಬ್ಯಾಂಕು ಪಾಲನೆ ಮಾಡುತ್ತದೆ.

ಅಲ್ಲದೆ ರೂಪಾಯಿಯ ಬಾಹ್ಯ ಮೌಲ್ಯವನ್ನು ಕಾಪಾಡುವುದು ರಿಸರ್ವ್ ಬ್ಯಾಂಕಿನ ಕಾರ್ಯವಾಗಿದೆ. ಸರಕಾರವೂ ನಿಗದಿಪಡಿಸಿದ ದರದಲ್ಲಿ ವಿದೇಶಿ ವಿನಿಮಯವಯದ ನಿಯಂತ್ರಣದ ಅಧಿಕಾರವನ್ನು ಚಲಾಯಿಸುತ್ತದೆ.

ವಿದೇಶಿ ವಿನಿಮಯ ದರದ ಸ್ಥಿರತೆಯನ್ನು ಕಾಪಾಡುವುದು ರಿಸರ್ವ್ ಬ್ಯಾಂಕಿನ ಕಾರ್ಯವಾಗಿದೆ. ಸರಕಾರವು ನಿಗದಿಪಡಿಸಿದ ದರದಲ್ಲಿ ವಿದೇಶಿ ವಿನಿಯವನ್ನು ಕೊಳ್ಳುವ ಮತ್ತು ಮಾರಾಟ ಕೆಲಸವನ್ನು ಅದು ಮಾಡುತ್ತದೆ.

**೭. ತೀರುವೆ ಮನೆ**

ಇದು ರಿಸರ್ವ್ ಬ್ಯಾಂಕಿನ ಒಂದು ವಿಶಿಷ್ಟ ಕಾರ್ಯವಾಗಿರುತ್ತದೆ. ವಾಣಿಜ್ಯ ಬ್ಯಾಂಕುಗಳು ತಮ್ಮ ದಿನನಿತ್ಯದ ವ್ಯವಹಾರಗಳಲ್ಲಿ ಬೇರೆ ಬ್ಯಾಂಕಗಳಿಗೆ ನೀಡಬೇಕಾದ ಮತ್ತು ಬೇರೆ ಬ್ಯಾಂಕುಗಳಿಂದ ತೆಗೆದುಕೊಳ್ಳಬೇಕಾದ ಹಣಗಳ ತೀರುವೆ ಕಾರ್ಯವನ್ನು ಇದು ಮಾಡುತ್ತದೆ. ವಾಣಿಜ್ಯ ಬ್ಯಾಂಕುಗಳು ರಿಸರ್ವ್ ಬ್ಯಾಂಕಿನಲ್ಲಿ ತಮ್ಮ ಖಾತೆಯನ್ನು ಹೊಂದಿರುತ್ತದೆ. ಸದಸ್ಯ ಬ್ಯಾಂಕುಗಳು ಇತರೇ ಬ್ಯಾಂಕುಗಳಿಂದ ತಮಗೆ ಬರಬೇಕಾಗಿರುವ ಮತ್ತು ಇತರೆ ಬ್ಯಾಂಕುಗಳಿಗೆ ತಾವು ಕೊಡಬೇಕಾಗಿರುವ ಹಣವನ್ನು ರಿಜರ್ವ್ ಬ್ಯಾಂಕಿನ ಪುಸ್ತಕದಲ್ಲಿ ಹೊಂದಾಣಿಕೆ ಮಾಡಿಕೊಳ್ಳುತ್ತದೆ. ಉದಾಹರಣೆಗೆ ಸಿಂಡಿಕೇಟ್ ಬ್ಯಾಂಕು ಕೆನರಾ ಬ್ಯಾಂಕಿನ ಮೇಲೆ ರೂ.೨೦೦೦ ಮೊತ್ತದ ಚೆಕ್ಕನ್ನು ಹೊಂದಿದೆ ಮತ್ತು ಕೆನರಾ ಬ್ಯಾಂಕು ಸಿಂಡಿಕೇಟ್ ಬ್ಯಾಂಕಿನ ಮೇಲೆ ರೂ.೧೦೦೦ ಮೊತ್ತದ ಚೆಕ್ಕನ್ನು ಹೊಂದಿದೆ ಎಂದು ಭಾವಿಸೋಣ. ಅಂದರೆ ಕೆನರಾ ಬ್ಯಾಂಕ್ ಸಿಂಡಿಕೇಟ್ ಬ್ಯಾಂಕಿಗೆ ರೂ.೨೦೦೦ ಕೊಡಬೇಕಾಗಿದೆ, ಮತ್ತು ಸಿಂಡಿಕೇಟ್ ಬ್ಯಾಂಕು ಕೆನರಾ ಬ್ಯಾಂಕಿಗೆ ರೂ.೧೦೦೦ ಕೊಡಬೇಕಾಗಿದೆ ಎಂದಭಾ. ಈಗ ಎರಡೂ ಬ್ಯಾಂಕುಗಳು ತಮ್ಮ ನಡುವೆ ಮೊತ್ತವನ್ನು ಹೊಂದಾಣಿಕೆ ಮಾಡಿಕೊಳ್ಳುವ ಮಾರ್ಗವಾಗಿ ಕೆನರಾ ಬ್ಯಾಂಕು ರೂ.೧೦೦೦ ಮೊತ್ತದ ಚೆಕ್ಕನ್ನು ಸಿಂಡಿಕೇಟ್ ಬ್ಯಾಂಕಿನ ಹೆಸರಿಗೆ ಬರೆದು ರಿಜರ್ವ್ ಬ್ಯಾಂಕಿಗೆ ಸಲ್ಲಿಸುತ್ತದೆ. ಈಗ ರಿಜರ್ವ್ ಬ್ಯಾಂಕು ತನ್ನ ಬಳಿ ಇರುವ ಸಿಂಡಿಕೇಟ್ ಬ್ಯಾಂಕಿನ ಖಾತೆಗೆ ರೂ.೧೦೦೦ ಜಮಾ ತೆಗೆದುಕೊಳ್ಳುತ್ತದೆ, ಮತ್ತು ಕೆನರಾ ಬ್ಯಾಂಕಿನ ಖಾತೆಗೆ ರೂ.೧೦೦೦ ಖರ್ಚು ಹಾಕುತ್ತದೆ. ಈ ಪರಿಣಾಮವಾಗಿ ಕೆನರಾ ಬ್ಯಾಂಕಿನಿಂದ ಸಿಂಡಿಕೇಟ್ ಬ್ಯಾಂಕಿಗೆ ರೂ.೧೦೦೦ ವರ್ಗಾವಣೆಯಾದಂತಾಗಿ ಅವುಗಳ ನಡುವಿನ ಲೆಕ್ಕ ಹೊಂದಾಣಿಕೆಯಾಗುತ್ತದೆ. ಹಾಗ ಕೊಡುವಿಕೆಯ ಮತ್ತು ತೆಗೆದುಕೊಳ್ಳುವಿಕೆ ತೀರುವಳಿಯಾಗುತ್ತದೆ.

**ಹಣಸಂಬಂಧಿ ನೀತಿ**

ದೇಶದಲ್ಲಿ ಚಲಾವಣೆಯಲ್ಲಿರುವ ಹಣದ ಪ್ರಮಾಣವನ್ನು ನಿಗಧಿಗೊಳಿಸುವ ಮತ್ತು

ಕಾಯ್ದುಕೊಳ್ಳುವ ನೀತಿಗೆ ಹಣಸಂಬಂಧಿ ನೀತಿ ಎಂದು ಕರೆಯುತ್ತದೆ. ಚಲಾವಣೆಯಲ್ಲಿರುವ ಹಣದ ಪ್ರಮಾಣ ಹೆಚ್ಚಿದಾಗ ಹಣದುಬ್ಬರ ಮತ್ತು ಹಣದ ಪ್ರಮಾಣ ಕುಗ್ಗಿದಾಗ ಮುಗ್ಗಟ್ಟು ಸಂಭವಿಸುತ್ತದೆ. ಈ ಪ್ರಕಾರ ಹಣದ ಪ್ರಮಾಣದಲ್ಲಿ ಏರಿಳಿತವಾದಾಗ ಆರ್ಥಿಕ ಚಟುವಟಿಕೆಗಳಲ್ಲಿಯೂ ಏರಿಳಿತ ಉಂಟಾಗುತ್ತದೆ. ದೇಶದ ಹಣಸಂಬಂಧಿ ಹಾಗೂ ಬ್ಯಾಂಕು ವ್ಯವಸ್ಥೆಯ ಪರಮಾಧಿಕಾರಿಯಾದ ಕೇಂದ್ರ ಬ್ಯಾಂಕು ದೇಶದಲ್ಲಿ ಚಲಾವಣೆಯಲ್ಲಿರುವ ನೋಟುಗಳ ಪ್ರಮಾಣವನ್ನು ಸುಲಭವಾಗಿ ನಿಯಂತ್ರಿಸಬಹುದಾಗಿದೆ. ಏಕೆಂದರೆ ಅವುಗಳನ್ನು ಮುದ್ರಿಸಿ ಚಲಾವಣೆಗೆ ತರುವ ಅಧಿಕಾರವನ್ನು ಅದೊಂದೆ ಹೊಂದಿದೆ. ಆದರೆ ಚಲಾವಣೆಯಲ್ಲಿರುವ ಕರೆನ್ಸಿ ನೋಟುಗಳಗಿಂತಲೂ ಮಹತ್ವವಾದದ್ದು ಬ್ಯಾಂಕುಗಳು ಸೃಷ್ಟಿಸುವ ಸಾಲ. ಹಣದುಬ್ಬರದ ನಿಯಂತ್ರಣದ ದಿಸೆಯಲ್ಲಿ ವಾಣಿಜ್ಯ ಬ್ಯಾಂಕುಗಳ ಸಾಲ ಸೃಷ್ಟಿಯನ್ನು ನಿಯಂತ್ರಿಸುವುದು ಅತಿ ಮುಖ್ಯವಾಗಿದೆ. ದೇಶದ ಸಮಗ್ರ ಬ್ಯಾಂಕೋದಮ್ಯ ವ್ಯವಸ್ಥೆಯ ಮೇಲಿನ ಸರ್ವೋಚ್ಚ ಅಧಿಕಾರವನ್ನು ಕೇಂದ್ರ ಬ್ಯಾಂಕು ಹೊಂದಿರುವುದರಿಂದ ಅದು ವಾಣಿಜ್ಯ ಬ್ಯಾಂಕುಗಳ ಪತ್ತು ನಿರ್ಮಾಣವನ್ನು ಸಹ ನಿಯಂತ್ರಿಸಬಹುದಾಗಿದೆ. ಈ ಪ್ರಕಾರ ಅನೇಕ ಉದ್ದೇಶಗಳನ್ನು ಪೂರೈಸಿಕೊಳ್ಳಲು ಹಾಗೂ ಆರ್ಥಿಕತೆಯಲ್ಲಿ ಸ್ಥಿಮಿತತೆಯನ್ನು ಕಾಪಾಡಿಕೊಳ್ಳಲು ಕೇಂದ್ರ ಬ್ಯಾಂಕು ದೇಶದಲ್ಲಿ ಚಲಾವಣೆಯಲ್ಲಿರುವ ಕರೆನ್ಸಿ ನೋಟುಗಳ ಮತ್ತು ವಾಣಿಜ್ಯ ಬ್ಯಾಂಕುಗಳ ಸಾಲ ಸೃಷ್ಟಿಯ ಪ್ರಮಾಣವನ್ನು ನಿಯಂತ್ರಿಸಬೇಕಾಗುತ್ತದೆ. ಬದಲಾಗಿ ಆರ್ಥಿಕ ಚಟುವಟಿಕೆಗಳ ವಿಸ್ತರಣೆಗೆ ಹಣದ ಕೊರತೆ ಇದ್ದಾಗ ಕೇಂದ್ರ ಬ್ಯಾಂಕು ಕರೆನ್ಸಿ ನೋಟುಗಳ ಪೂರೈಕೆಯನ್ನು ಹೆಚ್ಚಿಸಬೇಕು ಹಾಗೂ ವಾಣಿಜ್ಯ ಬ್ಯಾಂಕುಗಳು ಅಧಿಕ ಪ್ರಮಾಣದ ಸಾಲವನ್ನು ಸೃಷ್ಟಿಸುವಂತೆ ಅವಕಾಶ ಮಡಿಕೊಡಬೇಕು. ಈ ದಿಶೆಯಲ್ಲಿ ಕೇಂದ್ರ ಬ್ಯಾಂಕು ಅನುಸರಿಸುವ ನೀತಿಗೆ ಕೇಂದ್ರ ಬ್ಯಾಂಕಿನ ನೀತಿ ಅಥವಾ ಹಣಸಂಬಂಧಿ ನೀತಿ ಎಂದು ಕರೆಯಲಾಗುತ್ತದೆ. ಬೇರೆ ರೀತಿಯಲ್ಲಿ ಹೇಳುವುದಾದರೆ, ಚಲಾವಣೆಯಲ್ಲಿರುವ ಹಣದ ನಿಯಂತ್ರಣ ಮತ್ತು ಹಣಸಂಬಂಧಿ ವ್ಯವಸ್ಥೆಯ ನಿರ್ವಹಣೆಗೆ ಕೇಂದ್ರ ಬ್ಯಾಂಕು ರೂಪಿಸಿ ಜಾರಿಗೆ ತರುವ ನೀತಿಗೆ ಹಣಸಂಬಂಧಿ ನೀತಿ ಎಂದು ಹೆಸರು.

ಆ ಮೇರೆಗೆ, ಹಣಸಂಬಂಧಿ ನೀತಿಯು ಕೇಂದ್ರ ಬ್ಯಾಂಕು ಮುದ್ರಿತ ಚಲಾವಣೆಗೆ ತರುವ ಹಣದ ಗಾತ್ರ, ವಾಣಿಜ್ಯ ಬ್ಯಾಂಕುಗಳ ಸಾಲ ಸೃಷ್ಟಿಯ ಪ್ರಮಾಣ ಮತ್ತು ಬಡ್ಡಿ ದರ ಈ ಅಂಶಗಳಿಗೆ ವ್ಯಾಪಿಸಿರುತ್ತದೆ.

### ಹಣಸಂಬಂಧಿ ನೀತಿಯ ವಿಧಗಳು

ಹಣಸಂಬಂಧಿ ನೀತಿಯಲ್ಲಿ ಪ್ರಮುಖವಾಗಿ ಎರಡು ವಿಧಗಳಿವೆ. ಅವುಗಳೆಂದರೆ

೧. ಅಗ್ಗದ (ಸೋವಿ) ಹಣಸಂಬಂಧಿ ನೀತಿ (Cheep Money Policy) ಮತ್ತು ೨. ದುಬಾರಿ ಹಣಸಂಬಂಧಿ ನೀತಿ. ಈ ನೀತಿಗಳ ಬಗ್ಗೆ ಇಲ್ಲಿ ಅರಿತುಕೊಳ್ಳುವುದು ಅಗತ್ಯವಿದೆ. ಅಗ್ಗ ಮತ್ತು ದುಬಾರಿ ಎಂಬ ಪದಗಳು ಸಾಲದ ಬಡ್ಡಿ ದರಕ್ಕೆ ಸಂಬಂಧಿಸಿದವುಗಳಾಗಿವೆ.

ಕಡಿಮೆ ಬಡ್ಡಿ ದರದಲ್ಲಿ ಸಾಲ ಒದಗಿಸುವ ನೀತಿಯ "ಅಗ್ಗದ ಹಣ ಸಂಬಂಧಿ ನೀತಿ" ಎನ್ನುವರು. ಇದಕ್ಕೆ ವಿರುದ್ಧವಾಗಿ, ಹೆಚ್ಚಿನ ಬಡ್ಡಿ ದರದಲ್ಲಿ ಸಾಲ ಒದಗಿಸುವ ನೀತಿಗೆ "ದುಬಾರಿ (ತುಟ್ಟಿ) ಹಣಸಂಬಂಧಿ ನೀತಿ" ಎನ್ನುವರು. ಕೇಂದ್ರ ಬ್ಯಾಂಕು ದೇಶದಲ್ಲಿರವ ಪರಿಸ್ಥಿತಿಗೆ ಅನುಗುಣವಾಗಿ ಅಗ್ಗದ ಇಲ್ಲವೆ ತುಟ್ಟಿ (ದುಬಾರಿ) ಹಣಸಂಬಂಧಿ ನೀತಿಯನ್ನು ಅನುಸರಿಸುತ್ತದೆ.

ಕೇಂದ್ರ ಬ್ಯಾಂಕು, ದೇಶದಲ್ಲಿ ಹಣದುಬ್ಬರವುಂಟಾಗಿ ಬೆಲೆಗಳು ತ್ವರಿತವಾಗಿ ಹೆಚ್ಚಾಗುತ್ತಿರುವಾಗ, ಮಿತಿಮೀರಿದ ಗಾತ್ರದಲ್ಲಿ ಬಂಡವಾಳ ಹೂಡುವಿಕೆಯನ್ನು ಕೈಗೊಳ್ಳುತ್ತಿರುವಾಗ, ವಾಣಿಜ್ಯ ಬ್ಯಾಂಕುಗಳು ಅತ್ಯಂತ ಹೆಚ್ಚು ಪ್ರಮಾಣದಲ್ಲಿ ಸಾಲವನ್ನು ಕೊಡುತ್ತಿರುವಾಗ, ವಿದೇಶಿ ವ್ಯಾಪಾರದಲ್ಲಿ, ಪಾವತಿ ಶಿಲ್ಕಿನಲ್ಲಿ ಪ್ರತಿಕೂಲವಾದಾಗ ಮತ್ತು ಬೃಹತ್ ಪ್ರಮಾಣದಲ್ಲಿ ಸಟ್ಟಾ ವ್ಯಾಪಾರಗಳು ನಡೆಯುತ್ತಿರುವಾಗ ದುಬಾರಿ ಹಣಸಂಬಂಧಿ ನೀತಿಯನ್ನು ಅದು ಅನುಸರಿಸುವುದು. ಇದರಿಂದಾಗಿ ಬೆಲೆಗಳನ್ನು ನಿಯಂತ್ರಿಸಲು, ಏರಿಕೆಯನ್ನು ತಡೆಗಟ್ಟಲು ಸಾಧ್ಯವಾಗುವುದು. ಬಡ್ಡಿಯ ದರಗಳು ಹೆಚ್ಚಾಗುವುದರಿಂದ ಬಂಡವಾಳ ಹೂಡಿಕೆ ಕಡಿಮೆಯಾಗುವುದು. ವಾಣಿಜ್ಯ ಬ್ಯಾಂಕುಗಳ ಸಾಲ ನೀಡಿಕೆ ಗಾತ್ರವೂ ತಗ್ಗುವುದು. ಸಟ್ಟಾ ವ್ಯಾಪಾರಗಳು ಇಳಿಮುಖಗೊಳ್ಳುತ್ತವೆ, ಬೆಲೆಗಳು ಕಡಿಮೆಯಾಗ ತೊಡಗುತ್ತವೆ.

ಅಂದರೆ ಬೆಲೆಗಳು ಹೆಚ್ಚುತ್ತಿರುವಾಗ ಕೇಂದ್ರ ಬ್ಯಾಂಕು ದುಬಾರಿ ಹಣಸಂಬಂಧಿ ನೀತಿಯನ್ನು ಅನುಸರಿಸುತ್ತದೆ. ಅಂದರೆ ಅಧಿಕ ಬಡ್ಡಿಯ ದರದಲ್ಲಿ ಬ್ಯಾಂಕುಗಳು ಸಾಲವನ್ನು ನೀಡುವಂತೆ ಮಾಡಿದಾಗ ಸಾಲವು ದುಬಾರಿಯಾಗುವುದರಿಂದ ಅದನ್ನು ತೆಗೆದುಕೊಳ್ಳುವ ಪ್ರಮಾಣ ಕಡಿಮೆಯಾಗುತ್ತದೆ.

### ಸಗಟು ಬೆಲೆ ಸೂಚ್ಯಂಕ

ಸಗಟು ಬೆಲೆಗಳು ಎಂದರೆ ಎಲ್ಲಾ ಸರಕುಗಳ ಬೆಲೆಗಳು ಎಂದರ್ಥ. ಸಗಟು ಬೆಲೆಗಳ ಸೂಚ್ಯಕದ ಮೂಲಕ ಬೆಲೆ ಏರಿಕೆಯನ್ನು ಅಳತೆ ಮಾಡಲಾಗುತ್ತದೆ. ಸಗಟು ಬೆಲೆಗಳನ್ನು ಕಂಡುಹಿಡಿಯುವಾಗ ದಿನನಿತ್ಯದ ಬಳಕೆಯಲ್ಲಿ ಅತ್ಯಂತ ಪ್ರಮುಖವಾದ ಕೆಲವು ವಸ್ತುಗಳನ್ನು ತೆಗೆದುಕೊಳ್ಳಲಾಗುತ್ತದೆ. ಅವುಗಳ ಬೆಲೆಗಳಲ್ಲಿ ಆಗುವ ಬದಲಾವಣೆಗಳು ಜನಜೀವನದ ಮೇಲೆ ಪರಿಣಾಮ ಬೀರುತ್ತವೆ ಮತ್ತು ಇತರ ವಸ್ತುಗಳ ಬೆಲೆಗಳೂ ಸಹ ಈ ವಸ್ತುಗಳ ಬೆಲೆಯನ್ನು ಪ್ರತಿನಿಧಿಸುತ್ತವೆ. ಪ್ರತಿ ವಾರದ ಆಧಾರದಲ್ಲಿ ಸಗಟು ಬೆಲೆಗಳನ್ನು ಕಂಡು ಹಿಡಿಯಲಾಗುತ್ತದೆ. ಸಗಟು ಬೆಲೆ ಸೂಚ್ಯಂಕವು ಹೆಚ್ಚಾಗುತ್ತಿದ್ದರೆ ಬೆಲೆಗಳು ಏರಿವೆ ಎಂದರ್ಥ.

### ಸಗದು ಮೀಸಲು ಅನುಪಾತದ ಬದಲಾವಣೆ

ರೂಢಿಬದ್ಧವಾಗಿ ಮತ್ತು ಕಾನೂನಿಗೆ ಅನುಗಣವಾಗಿ ವಾಣಿಜ್ಯ ಬ್ಯಾಂಕುಗಳು ತಮ್ಮ ಬಳಿ ಇರುವ ಠೇವಣಿಗಳ ಒಟ್ಟು ಮೊತ್ತದ ಒಂದು ನಿರ್ದಿಷ್ಟ ಪ್ರಮಾಣವನ್ನು ಕೇಂದ್ರ

ಬ್ಯಾಂಕಿನಲ್ಲಿ ಇಡಬೇಕಾಗಿದೆ. ಇದನ್ನು ಕಾಯ್ದಿಟ್ಟ ಹಣ ಅಥವಾ ನಗದು ಮೀಸಲು ಎಂದು ಕರೆಯಲಾಗುತ್ತದೆ. ಮೊದಲು ಅಮೇರಿಕಾದಲ್ಲಿ ಬಳಕೆಗೆ ಬಂದ ಈ ಪದ್ಧಿಯನ್ನು ನಂತರ ಇತರ ದೇಶಗಳೂ ಅನುಸರಿಸಲು ಪ್ರಾರಂಭಿಸಿದವು. ನಗದು ನಿಧಿಯನ್ನು ಕಾಯ್ದಿಗಿಸುವಿಕೆಗೆ ಮೂರು ಉದ್ದೇಶಗಳಿವೆ.

೧. ವಾಣಿಜ್ಯ ಬ್ಯಾಂಕುಗಳ ಖಾತೆಯಲ್ಲಿ ಸಾಕಷ್ಟು ದ್ರವತ್ವ ಇರುವಂತೆ ಮಾಡಲು,

೨. ಕೇಂದ್ರ ಬ್ಯಾಂಕಿನ ಸ್ಥಳೀಯ ವ್ಯವಹಾರಗಳಿಗೆ ಠೇವಣಿಗಳನ್ನು ಒದಗಿಸಲು, ಮತ್ತು

೩. ವಾಣಿಜ್ಯ ಬ್ಯಾಂಕುಗಳ ಸಾಲ ವಿಸ್ತರಣೆಯನ್ನು ಪ್ರಭಾವಿಸಲು ಮತ್ತು ನಿಯಂತ್ರಿಸಲು

ಕೇಂದ್ರ ಬ್ಯಾಂಕು ಸಾರ್ವಜನಿಕ ಠೇವಣಿಗಳ ರಕ್ಷಕನಾಗಿರುವುದರಿಂದ ವಾಣಿಜ್ಯ ಬ್ಯಾಂಕುಗಳು ತಮ್ಮ ಬಳಿ ಇರುವ ಠೇವಣಿಗಳ ಮೊತ್ತದ ಒಂದು ಕನಿಷ್ಠ ಪ್ರಮಾಣವನ್ನು ತನ್ನಲ್ಲಿ ಇರಿಸಬೇಕೆಂದು ಅದು ನಿಯಮವನ್ನು ರೂಪಿಸುತ್ತದೆ. ವಾಣಿಜ್ಯ ಬ್ಯಾಂಕುಗಳು ಕೇಂದ್ರ ಬ್ಯಾಂಕಿನ ನಿಯಂತ್ರಿಣದಲ್ಲಿರುವುದರಿಂದ ಅವು ಈ ನಿಯಮಕ್ಕೆ ಒಳಪಡಲೇ ಬೇಕಾಗುತ್ತದೆ. ಈ ನಗದು ಮೀಸಲು ಅನುಪಾತವನ್ನು ಬದಲಾಯಿಸುವ ಮೂಲಕ ಕೇಂದ್ರ ಬ್ಯಾಂಕು ವಾಣಿಜ್ಯ ಬ್ಯಾಂಕುಗಳ ಸಾಲ ನೀಡಿಕೆಯ ಅಂದರೆ ಪತ್ತು ನಿರ್ಮಾಣದ ಸಾಮರ್ಥ್ಯ ವನ್ನು ಹೆಚ್ಚಿಸಲು ಮತ್ತು ಕುಗ್ಗಿಸುವ ಶಕ್ತಿ ಪಡೆದಿದೆ. ಹಣದುಬ್ಬರ ಮತ್ತು ಬೆಲೆ ಏರಿಕೆಯ ಸಮಯದಲ್ಲಿ ಕೇಂದ್ರ ಕಾಯ್ದಿಟ್ಟ ಹಣದ ಪ್ರಮಾಣವನ್ನು ಹೆಚ್ಚಿಸುತ್ತದೆ. ಈ ಪರಿಣಾಮವಾಗಿ ವಾಣಿಜ್ಯ ಬ್ಯಾಂಕುಗಳು ಕೇಂದ್ರ ಬ್ಯಾಂಕಿನಲ್ಲಿ ಅಧಿಕ ಪ್ರಮಾಣದ ಹಣವನ್ನು ಕಾಯ್ದಿರಿಸ ಬೇಕಾಗುತ್ತದೆ. ಇದರಿಂದಾಗಿ ವಾಣಿಜ್ಯ ಬ್ಯಾಂಕುಗಳ ಸಂಪನ್ಮೂಲಗಳು ಕಡಿಮೆಯಾಗಿ ಅವುಗಳ ಸಾಲ ನೀಡಿಕೆಯ ಗಾತ್ರ ಕುಗ್ಗುತ್ತದೆ. ತದ್ವಿರುದ್ಧವಾಗಿ ಮುಗ್ಗಟ್ಟಿನ ಸಂದರ್ಭದಲ್ಲಿ ಕಾಯ್ದಿಟ್ಟ ಹಣಧ ಪ್ರಮಾಣವನ್ನು ತಗ್ಗಿಸಲಾಗುತ್ತದೆ. ಈ ಕಾರಣದಿಂದ ವಾಣಿಜ್ಯ ಬ್ಯಾಂಕುಗಳಿಗೆ ಹೆಚ್ಚು ಸಂಪನ್ಮೂಲಗಳು ದೊರೆತು ಅವುಗಳ ಸಾಲ ನೀಡಿಕೆಯ ಗಾತ್ರದ ವಿಸ್ತರಣೆಯಾಗುತ್ತದೆ; ಉದ್ಯಮ ಚಟುವಟಿಕೆಗಳು ಉತ್ತೇಜನಗೊಳ್ಳುತ್ತವೆ ಮತ್ತು ಉದ್ಯೋಗ ಆದಾಯ, ಬೆಲೆಗಳು ಏರುತ್ತವೆ.

### ಪರಿನಿಯತ ದ್ರವತ್ವ ಅನುಪಾತ

ಠೇವಣಿದಾರರು ಕೇಳಿದ ಕೂಡಲೇ ಹಣವನ್ನು ಹಿಂದಿರುಗಿಸಲು ಸಾಧ್ಯವಾಗುವಂತೆ ವಾಣಿಜ್ಯ ಬ್ಯಾಂಕುಗಳು ತಮ್ಮ ಬಳಿ ಸದಾ ಸಾಕಷ್ಟು ದ್ರವತೆಯನ್ನು ನಗದು ಹಣ ಇಟ್ಟು ಕೊಳ್ಳುವುದು ಅತ್ಯಾವಶ್ಯಕವಾಗಿದೆ. ವಾಣಿಜ್ಯ ಬ್ಯಾಂಕುಗಳು ತಮ್ಮ ಠೇವಣಿಗಳಲ್ಲಿ ಒಂದು ನಿರ್ದಿಷ್ಟ ಪ್ರಮಣವನ್ನು ನಿರೂಪಿಸಿರುತ್ತದೆ. ಇದನ್ನು 'ಪರಿನಿಯತ ದ್ರವತ್ವ ಅನುಪಾತ' ಎಂದು ಕರೆಯಲಾಗುತ್ತದೆ. ಇದು ಉದ್ಧರಿ ನಿಯಂತ್ರಣದ ಒಂದು ಪ್ರಮುಖ ಅಸ್ತ್ರವಾಗಿದೆ. ರಿಜರ್ವ್ ಬ್ಯಾಂಕು ಪರಿನಿಯತ ದ್ರವತ್ವ ಅನುಪಾತವನ್ನು ಹೆಚ್ಚಿಸಿ ಆಜ್ಞೆ ಹೊರಡಿಸಿದಾಗ ವಾಣಿಜ್ಯ ಬ್ಯಾಂಕುಗಳು ತಮ್ಮ ಬಳಿ ಅಧಿಕ ಪ್ರಮಾಣದ ನಗದು ಹಣವನ್ನು ಇಟ್ಟುಕೊಳ್ಳ ಬೇಕಾಗುವುದರಿಂದ ಸಾಲ ನೀಡಿಕೆಗೆ ಲಭ್ಯವಿರುವ ಸಂಪನ್ಮಲಗಳು ಕಡಿಮೆಯಾಗುತ್ತದೆ.

ಇದರಿಂದ ಉದ್ಧರಿ ನಿಯಂತ್ರಣ ಸಾದನೆಯಾಗುತ್ತದೆ. ತದ್ವಿರುದ್ಧವಾಗಿ ಪರಿನಿಯತ ದ್ರವತ್ವ ಅನುಪಾತವನ್ನು ಇಳಿಸಿದಾಗ ಬ್ಯಾಂಕುಗಳ ಬಳಿ ಸಾಲ ನೀಡಿಕೆಗೆ ಅಧಿಕ ಪ್ರಮಾಣದ ನಿದಿಗಳು ಉಳಿಯುವುದರಿಂದ ಉದ್ಧರಿ ಸೃಷ್ಟಿ ವಿಸ್ತರಣೆಗೊಳ್ಳುತ್ತದೆ. ಭಾರತದಲ್ಲಿ ಪ್ರಸ್ತುತದಲ್ಲಿ. ಪರಿನಿಯತ ದ್ರವತ್ವ ಅನುಪಾತವು ಶೇಕಡ ೨೫ ಆಗಿದೆ.

ಅಂದರೆ ವಾಣಿಜ್ಯ ಬ್ಯಾಂಕುಗಳು ತಮ್ಮ ಒಟ್ಟು ಸಂಪನ್ಮೂಲಗಳಲ್ಲಿ ಶೇಕಡ ೨೫ರಷ್ಟು ಮೊಬಲಗನ್ನು ಕಡ್ಡಾಯವಾಗಿ ತಮ್ಮ ಬಳಿ ಕಾಯ್ದಿರಿಸಿಕೊಳ್ಳಬೇಕಾಗಿರುತ್ತದೆ. ಉಳಿದ ಮೊಬಲಗನ್ನು ಮಾತ್ರ ಅವು ಸಾಲ ನೀಡಿಕೆಗೆ ಬಳಸಿಕೊಳ್ಳಬಹುದಾಗಿರುತ್ತದೆ. ಹಣದುಬ್ಬರದ ಸಂದರ್ಭಗಳಲ್ಲಿ ಪರಿನಿಯತ ದ್ರವತ್ವ ಅನುಪಾತವನ್ನು ಕೇಂದ್ರ ಬ್ಯಾಂಕು ಹೆಚ್ಚಿಸುವ ರೂಢಿ ಇದೆ. ಏಕೆಂದರೆ ಅಧಿಕ ಪರಿನಿಯತ ದ್ರವತ್ವ ಅನುಪಾತವನ್ನು ಬ್ಯಾಂಕು ಹೊಂದಿರಬೇಕೆಂದಾದರೆ ಸಾಲ ನೀಡಿಕೆಗೆ ಕಡಿಮೆ ಮೊಬಲಗು ಉಳಿಯುತ್ತದೆ. ಇದರಿಂದ ಸಾಲದ ಸೃಷ್ಟಿ ಇಳಿಮುಖಗೊಂಡು ಬೆಲೆ ನಿಯಂತ್ರಣಕ್ಕೆ ನಾಂದಿಯಾಗುತ್ತದೆ.

ಇದಕ್ಕೆ ವಿರದ್ಧವಾಗಿ, ಕುಗ್ಗು ಪ್ರಸರಣದ ಸಂದರ್ಭದಲ್ಲಿ ಆರ್ಥಿಕ ಚಟುವಟಿಕೆಗಳಿಗೆ ಪ್ರಚೋದನೆ ನೀಡಲು ಪರಿನಿಯತ ದ್ರವತ್ವ ಅನುಪಾತವನ್ನು ತಗ್ಗಿಸಲಾಗುತ್ತದೆ. ಈ ಕ್ರಮದ ಪರಿಣಾಮವಾಗಿ ಬ್ಯಾಂಕುಗಳ ಬಳಿ ಸಾಲ ನೀಡಿಕೆಗೆ ಹೆಚ್ಚಿನ ಹಣವು ಲಭ್ಯವಾಗುವುದರಿಂದ ಆರ್ಥಿಕ ಚಟುವಟಿಕೆಗಳು ಮೇಲ್ಮುಖವಾಗಿ ಪ್ರಚೋದನೆಗೊಳ್ಳುತ್ತದೆ. ಹಾಗೂ ಕುಗ್ಗು ಪ್ರಸರಣವು ಮಾಯವಾಗುತ್ತದೆ. ಹೀಗೆ ಪರಿನಿಯತ ದ್ರವತ್ವ ಅನುಪಾತವು ಹಣಕಾಸಿನ ನೀತಿಯ ಒಂದು ಪ್ರಮುಖ ಅಂಗವಾಗಿ ಕೆಲಸ ಮಾಡುತ್ತದೆ.

## ೬.೪. ಇಂಧನ

ವಿದ್ಯುಚ್ಛಕ್ತಿ ಅಥವಾ ಇಂಧನವು ಆರ್ಥಿಕಾಭಿವೃದ್ಧಿಗೆ ಅತ್ಯಾಗತ್ಯವಾದ ಅಂಶವಾಗಿದೆ. ಕೈಗಾರೀಕರಣವು ಮೂಲಭೂತವಾಗಿ ಇಂಧನವನ್ನು ಅವಲಂಬಿಸಿದೆ. ಕೃಷಿ ಮತ್ತು ಕೈಗಾಕಾ ಉತ್ಪಾದನೆಯಲ್ಲಿ ಮಾತ್ರವಲ್ಲದೆ ಸಾರಿಗೆ ಮುಂತಾದ ಮೂಲಭೂತ ಸೌಲಭ್ಯಗಳ ಪೂರೈಕೆಗೆ ಇಂಧನವು ಪ್ರಮುಖ ಸಾಧನವಾಗಿದೆ. ಕೈಗಾರಿಕಾ ಉತ್ಪಾದನೆಯ ಹೆಚ್ಚಳ ಮತ್ತು ಜೀವನಮಟ್ಟದ ಸುಧಾರಣೆಗೆ ಎಲ್ಲಾ ರಾಷ್ಟ್ರಗಳೂ ಅಧಿಕ ಪ್ರಮಾಣದಲ್ಲಿ ಇಂಧನವನ್ನು ಉತ್ಪಾದಿಸಲು ಪ್ರಯತ್ನಿಸುತ್ತಿವೆ. ಕೃಷಿಯಲ್ಲಿ ಯಂತ್ರಗಳ ಬಳಕೆಯು ಹೆಚ್ಚುತ್ತಿರುವ ಈ ದಿವಸಗಳಲ್ಲಿ ಆ ಕ್ಷೇತ್ರದಲ್ಲಿಯೂ ಸಹ ಇಂಧನದ ಮಹತ್ವ ಹೆಚ್ಚಾಗಿದೆ. ಆಧುನಿಕ ಯುಗದಲ್ಲಿ 'ಇಂಧನ ಯುಗ' ಎಂದು ಕರೆಯಲಾಗುತ್ತಿದೆ.

**ಇಂಧನದ ಮೂಲಗಳು**

ಇಂಧನದಲ್ಲಿ ಎರಡು ಪ್ರಮುಖ ಮೂಲಗಳಿವೆ. ಅವುಗಳೆಂದರೆ ಯಾವುವೆಂದರೆ

೧. ಸಾಂಪ್ರದಾಯಿಕ ಮೂಲಗಳು.

೨. ಅಸಂಪ್ರದಾಯಿಕ ಮೂಲಗಳು.

ಅ. ಸಾಂಪ್ರದಾಯಿಕ ಮೂಲಗಳು

ಸಾಂಪ್ರದಾಯಿಕ ಇಂಧನ ಮೂಲಗಳು ಎಂದರೆ ಮೊದಲಿನಿಂದಲೂ ಬಳಕೆಯಲ್ಲಿರುವ ಮೂಲಗಳು ಎಂದರ್ಥ.

೧. ಕಲ್ಲಿದ್ದಲು: ಕಲ್ಲಿದ್ದಲು ವಾಣಿಜ್ಯ ಇಂದನದ ಮೂಲವಾಗಿದೆ. ಕಾರ್ಖಾನೆಗಳಲ್ಲಿ ಯಂತ್ರಗಳನ್ನು ನಡೆಸಲು, ಇಂಧನವನ್ನು ತಯಾರಿಸಲು, ಗೃಹೋಪಯೋಗಿ ಉರುವಲಿಗೆ ಮತ್ತು ರೈಲು ಹಾಗೂ ಹಡಗು ಸಾಗಣೆಗೆ ಶಕ್ತಿಯನ್ನು ಒದಗಿಸಲು ಕಲ್ಲಿದ್ದಲು ಉಪಯೋಗಕಾರಿಯಾಗಿದೆ. ಆದ್ದರಿಂದ ಇದನ್ನು 'ಕಪ್ಪು ವಜ್ರ' ಎಂಬ ಹೆಸರಿನಿಂದಲೂ ಕರೆಯಲಾಗುತ್ತದೆ.

ಏಕೆಂದರೆ ಇದು ಇಂಧನದ ಪ್ರಮುಖ ಮೂಲವಾಗಿದ್ದು, ಅಭಿವೃದ್ಧಿ ಸಾದನೆಯಲ್ಲಿ ಮಹತ್ವಪೂರ್ಣವಾದ ಪಾತ್ರವನ್ನು ವಹಿಸುತ್ತದೆ.

ಭಾರತದಲ್ಲಿ ಕಲ್ಲಿದ್ದಲಿನ ನಿಕ್ಷೇಪಗಳು ಸುಮಾರು ೧,೩೦,೦೦೦ ದಶಲಕ್ಷ ಟನ್ನುಗಳೆಂದು ಅಂದಾಜಿಸಲಾಗಿದೆ. ೧೯೫೩-೫೪ರಲ್ಲಿ ಇದರ ಉತ್ಪಾದನೆ ೨೪೬ ದಶಲಕ್ಷ ಟನ್ನುಗಳಷ್ಟಾಗಿದ್ದಿತು. ಬಿಹಾರ, ಪಶ್ಚಿಮ ಬಂಗಾಳ, ಮಧ್ಯಪ್ರದೇಶ ಮತ್ತು ಒರಿಸ್ಸಾ ರಾಜ್ಯಗಳಲ್ಲಿ ಕಲ್ಲಿದ್ದಲಿನ ನಿಕ್ಷೇಪಗಳು ಹೆಚ್ಚಾಗಿವೆ. ಲಿಗ್ನೈಟ್ ಎಂಬ ಕೆಳದರ್ಜೆಯ ಕಲ್ಲಿದ್ದಲು ಅಸ್ಸಾಂ, ರಾಜಸ್ತಾನ, ಪಂಜಬ್ ಮತ್ತು ತಮಿಳುನಾಡಿನಲ್ಲಿ ದೊರೆಯುತ್ತದೆ. ೧೯೭೨ರಲ್ಲಿ ಭಾರತ ಸರ್ಕಾರವು ಕಲ್ಲಿದ್ದಲಿನ ಗಣಿಗಳನ್ನು ರಾಷ್ಟ್ರೀಕರಿಸಿತು. ಈಗ ಅದು ಸರ್ಕಾರಿ ಕ್ಷೇತ್ರದಲ್ಲಿರುವ ಉದ್ಯಮವಾಗಿದೆ. ಕಲ್ಲಿದ್ದಲಿನ ಗಣಿಗಳಲ್ಲಿ ಕೆಲಸ ಮಾಡುವವರಿಗೆ ಇಂದಿಗೂ ಸರಿಯಾದ ಸುರಕ್ಷತೆ ಇಲ್ಲವಾಗಿದೆ. ಇತ್ತೀಚಿನ ದಿನಗಳಲ್ಲಿ ವೈಜ್ಞಾನಿಕ ವಿಧಾನದಲ್ಲಿ ಕಲ್ಲಿದ್ದಲನ್ನು ಹೊರ ತೆಗೆಯಲು ಪ್ರಯತ್ನಗಳನ್ನು ಮಾಡಲಾಗುತ್ತಿದೆ.

ಕಲ್ಲಿದ್ದಲಿನ ಉತ್ಪಾದನೆಯು ೧೯೬೬-೬೭ರಲ್ಲಿ ೩೦೮ ದಶಲಕ್ಷ ಟನ್ನುಗಳಾಯಿತು. ಇದು ೨೦೦೦-೦೧ರಲ್ಲಿ ೩೩೩ ದಶಲಕ್ಷ ಟನ್ನುಗಳಿಗೆ ಏರಿತು. ಕಲ್ಲಿದ್ದಲು ಗಣಿಗಾರಿಕೆಯಲ್ಲಿ ಯಾಂತ್ರೀಕರಣದಿಂದ ಈ ಪ್ರಗತಿ ಸಾಧ್ಯವಾಗಿದೆ.

ಭಾರತದಲ್ಲಿ ಉತ್ಪಾದನೆಯಾಗುವ ಕಲ್ಲಿದ್ದಿನಲ್ಲಿ ಅನಗತ್ಯ ಕೊಳಕಿನ ಪ್ರಮಾಣ ಸಾಧಾರಣವಾಗಿ ಹೆಚ್ಚಾಗಿರುತ್ತದೆ. ಇದರಿಂದ ಇದನ್ನು ನೀರಿನಲ್ಲಿ ತೊಳೆದು ಶುದ್ಧಗೊಳಿಸುವುದೂ ಕಷ್ಟ. ನಿಯಂತ್ರಿತ ಪರಿಸ್ಥಿತಿಯಲ್ಲಿ ಕಲ್ಲಿದ್ದಲನ್ನು ಪುಡಿ ಮಾಡಿ ಹಲವಾರು ಬಾರಿ ತೊಳೆಯುವ ಮೂಲಕ ಗುಣಮಟ್ಟ ಸುಧಾರಣೆಗೆ ಪ್ರಯತ್ನಿಸಲಾಗುತ್ತಿದೆ.

ರಾಷ್ಟ್ರದಲ್ಲಿ ಪ್ರಸ್ತುತ ಶುದ್ಧೀಕರಣಕ್ಕೆ ಕಲ್ಲಿದ್ದು ತೊಳೆಯುವ ೨೧ ಘಟಕಗಳು ಅಸ್ತಿತ್ವದಲ್ಲಿವೆ. ಅವುಗಳು ವರ್ಷದಲ್ಲಿ ಒಟ್ಟು ೩೬೭ ಲಕ್ಷ ಟನ್ ಕಲ್ಲಿದ್ದಲನ್ನು ತೊಳೆದು ಶುದ್ಧೀಕರಿಸುತ್ತವೆ. ಎಂಟನೆ ಪಂಚವಾರ್ಷಿಕ ಯೋಜನೆಯ ಅಂತ್ಯದೊಳಗೆ ಇನ್ನೂ ಕೆಲವು ಕಲ್ಲಿದ್ದಲು ತೊಳೆಯುವ ಘಟಕಗಳನ್ನು ಸ್ಥಾಪಿಸಲು ಉದ್ದೇಶಿಸಲಾಯಿತು.

ರಾಷ್ಟ್ರದಲ್ಲಿನ ೬೧ ಕಲ್ಲಿದ್ದಲು ಗಣಿ ಪ್ರದೇಶಗಳಲ್ಲಿ ಗಣಿಗಾರಿಕೆಯನ್ನು ೨೧೦೦ ಮೀಟರ್ ಆಳದವರೆಗೆ ಕೈಗೊಳ್ಳಲು ಸಾಧ್ಯವಿದೆಯೆಂದು ಭಾರತೀಯ ಭೂ ಸರ್ವೇಕ್ಷಣಾ ಇಲಾಖೆ ಅಂದಾಜು ಮಾಡಿದೆ.

**೨. ಪೆಟ್ರೋಲಿಯಂ:** ಪೆಟ್ರೋಲಿಯಂ ಒಂದು ಖನಿಜ ತೈಲವಾಗಿದೆ. ಇದು ಕಲ್ಲಿದ್ದಲಿನಂತೆ ಅತಿ ಪ್ರಮುಖವಾದ ಶಕ್ತಿಯ ಸಾಧನವಾಗಿದೆ. ಪೆಟ್ರೋಲಿಯಂ ಕಚ್ಚಾ ತೈಲದಿಂದ ಪೆಟ್ರೋಲ್, ಸೀಮೆಎಣ್ಣೆ, ಕೀಲೆಣ್ಣೆ, ನ್ಯಾಫ್ತಾ ಮತ್ತು ರಾಸಾಯನಿಕ ವಸ್ತುಗಳನ್ನು ಉತ್ಪಾದಿಸಲಾಗುತ್ತದೆ. ವಾಹನಗಳು, ರೈಲುಗಳು, ಹಡಗುಗಳು ಮತ್ತು ವಿಮಾನಗಳ ಸಾಗಮೆಗೆ ಹಾಗೂ ಕಾರ್ಖಾನೆಗಳಲ್ಲಿ ಯಂತ್ರಗಳ ಚಾಲನೆಗೆ ಪೆಟ್ರೋಲ್ ಇಂಧನವಾಗಿ ಕೆಲಸ ಮಾಡುತ್ತದೆ. ಗೊಬ್ಬರದ ಉತ್ಪಾದನೆಗೆ ನ್ಯಾಫ್ತಾ ಉಪಯುಕ್ತವಾಗಿದೆ. ಅಡಿಗೆಗೆ ಮತ್ತು ದೀಪಕ್ಕೆ ಸೀಮೆಎಣ್ಣೆಯನ್ನು ಬಳಸಲಾಗುತ್ತದೆ. ಪೆಟ್ರೋಲಿಯಂ ಎಲ್ಲಾ ಕಾರ್ಯ ಚಟುವಟಿಕೆಗಳಲ್ಲಿಯೂ ಮಹತ್ವ ಪಡೆದಿರುವುದರಿಂದ ಅದಕ್ಕೆ 'ದ್ರವರೂಪದ ಚಿನ್ನ' ಎಂಬ ಬಿದುರು ಕೊಡಲಾಗಿದೆ. ಪೆಟ್ರೋಲಿಯಂ ಉಪಯೋಗವೂ ಜಾಸ್ತಿ ಇದೆ, ಅದರ ಬೆಲೆಯೂ ದುಬಾರಿಯಾಗಿದೆ. ಕಡುಬಡತನದಲ್ಲಿದ್ದ ಮಧ್ಯಪ್ರಾಚ್ಯದ ದೇಶಗಳು ಇತ್ತೀಚಿನ ವರ್ಷಗಳಲ್ಲಿ ಕಚ್ಚಾ ತೈಲವನ್ನು ಅತಿಯಾಗಿ ಉತ್ಪಾದಿಸಿ ರಫ್ತು ಮಾಡುವ ಮೂಲಕ ಶೀಘ್ರವಾಗಿ ಶ್ರೀಮಂತ ವಾದವು. ಪ್ರತಿಯೊಂದು ಉತ್ಪಾದನಾ ವಿಧಾನದಲ್ಲಿಯೂ ಕಚ್ಚಾ ತೈಲವನ್ನು ಅತಿಯಾಗಿ ಉತ್ಪಾದಿಸಿ ರಫ್ತು ಮಾಡುವ ಮೂಲಕ ಶೀಘ್ರವಾಗಿ ಶ್ರೀಮಂತವಾದವು. ಪ್ರತಿಯೊಂದು ಉತ್ಪಾದನ ವಿಧಾನದಲ್ಲಿಯೂ ಕಚ್ಚಾ ತೈಲವು ಪ್ರಾಶಸ್ತ್ಯ ಪಡೆದಿರುವುದರಿಂದ ಆಧುನಿಕ ಯುಗವನ್ನು 'ತೈಲ ಯುಗ' ಎಂದೇ ಸಂಭೋಗಿಸಲಾಗುತ್ತದೆ.

ಅಸ್ಸಾಂ ರಾಜ್ಯದ ದಿಗ್ಬೋಯ್, ಬಾಂಬೇ ಹೈ, ಉತ್ತರ ಪ್ರದೇಶ ಮತ್ತು ಪಶ್ಚಿಮ ಬಂಗಾಳದ ಕೆಲವು ಪ್ರದೇಶಗಳು, ತಮಿಳುನಾಡಿನ ಕ್ಯಾಂಬೇ, ಬರೋಡ, ಪಂಜಾಬ್ ರಾಜ್ಯದ ಜ್ವಾಲಾಮುಖಿ ಹಾಗೂ ಕಾಶ್ಮೀರ ಮತ್ತು ಪಂಜಾಬ್ ನಡುವಿನ ಕಾಂಗ್ರೋ ಕೊಳ್ಳದಲ್ಲಿ ಪೆಟ್ರೋಲಿಯಂ ಹೆಚ್ಚಾಗಿ ದೊರೆಯುತ್ತದೆ. ೧೯೫೬ರಲ್ಲಿ ಭಾರತ ಸರ್ಕಾರವು ತೈಲ ಮತ್ತು ನೈಸರ್ಗಿಕ ಅನಿಲ ಆಯೋಗವನ್ನು ಸ್ಥಾಪಿಸುವ ಮೂಲಕ ಕಚ್ಚಾ ತೈಲವನ್ನು ಪತ್ತೆ ಹಚ್ಚುವಿಕೆ ಮತ್ತು ಎಣ್ಣೆ ಬಾವಿಗಳನ್ನು ತೋಡುವಿಕೆಯ ಕಾರ್ಯಕ್ಕೆ ಪ್ರಾಶಸ್ತ್ಯ ನೀಡಿದೆ.

ಪೆಟ್ರೋಲಿಯಂ ಕಚ್ಚಾ ತೈಲವನ್ನು ಶುದ್ಧೀಕರಿಸಿ ಇತರ ಉತ್ಪನ್ನಗಳನ್ನು ಪಡೆಯ ಬೇಕಾಗುತ್ತದೆ. ದೇಶದಲ್ಲಿ ಈಗ ಹತ್ತು ತೈಲ ಶುದ್ಧೀಕರಣ ಸ್ಥಾವರಗಳಿವೆ. ಅವುಗಳೆಂದರೆ : ಗೌಹಾತಿ, ನೂನ್‌ಮತಿ ಮತ್ತು ದಿಗ್ಬೋಯ್ (ಅಸ್ಸಾಂ), ಬರೌನಿ (ಬಿಹಾರ), ಮಥುರಾ (ಉತ್ತರಪ್ರದೇಶ), ಹಾಲ್ಡಿಯ (ಪಶ್ಚಿಮ ಬಂಗಾಳ), ಕೊಯಾಲಿ (ಗುಜರಾತ್), ಕೊಚ್ಚಿನ್ (ಕೇರಳ), ಟ್ರಾಂಬೆ (ಮುಂಬಯಿ) ಮತ್ತು ಚೆನ್ನೈ (ತಮಿಳುನಾಡು).

ಭಾರತದಲ್ಲಿರುವ ಕಚ್ಚಾ ತೈಲದ ನಿಕ್ಷೇಪಗಳು ೧೭೫ ದಶಲಕ್ಷ ಟನ್ನುಗಳೆಂದು ಅಂದಾಜು ಮಾಡಲಾಗಿದೆ. ಪ್ರಸ್ತುತದಲ್ಲಿ ಇದರ ಉತ್ಪಾದನೆ ಸುಮಾರು ೩೨ ದಶಲಕ್ಷ ಟನ್ನುಗಳಾಗಿದೆ.

ಆದರೆ ಒಟ್ಟು ಕಚ್ಚಾ ತೈಲದ ವಾರ್ಷಿಕ ಅವಶ್ಯಕತೆ ಸುಮಾರು ೧೦೦ ದಶಲಕ್ಷ ಟನ್ನುಗಳಾಗಿದೆ. ಒಟ್ಟು ಬೇಡಿಕೆ ಮತ್ತು ಸ್ವದೇಶೀ ಉತ್ಪನ್ನದ ನಡುವಣ ಅಂತರವನ್ನು ತುಂಬಲು ೭೮ ದಶಲಕ್ಷ ಟನ್ನುಗಳಷ್ಟು ಪೆಟ್ರೋಲಿಯಂ ಅನ್ನು ಆಮದು ಮಾಡಿಕೊಳ್ಳಲಾಗುತ್ತಿದೆ.

೩. **ಜಲ ವಿದ್ಯುಚ್ಛಕ್ತಿ:** ಜಲ ಶಕ್ತಿಯಿಂದ ಉತ್ಪಾದಿಸುವ ವಿದ್ಯುತ್ತಿಗೆ ಜಲ ವಿದ್ಯುಚ್ಛಕ್ತಿ ಎಂದು ಹೆಸರು. ಜಲಪಾತದಲ್ಲಿ ಎತ್ತರದಿಂದ ದುಮುಕುವ ನೀರಿಗೆ ವಿದ್ಯುಜ್ಜನಕ ಯಂತ್ರಗಳನ್ನು ಅಳವಡಿಸುವ ಮೂಲಕ ಇದನ್ನು ಉತ್ಪಾದಿಸಲಾಗುತ್ತಿದೆ. ಜಲಪಾತವು ನೈಸರ್ಗಿಕವಾಗಿದ್ದರೆ ನದಿಗಳು ಕೊಳ್ಳದ ಮೂಲಕ ಹರಿಯುವಾಗಿ ಅವುಗಳ ಅಡ್ಡಲಾಗಿ ಆಣೆಕಟ್ಟುಗಳನ್ನು ನಿರ್ಮಿಸುವ ಮೂಲಕವೂ ಜಲಪಾತವನ್ನು ಸೃಷ್ಟಿಸಲಾಗುತ್ತದೆ.

೧೯೦೨ರಲ್ಲಿ ಕರ್ನಾಟಕದಲ್ಲಿ ಶಿವಸಮುದ್ರದ ಬಳಿ ಕಾವೇರಿ ನದಿಯ ನೀರನ್ನು ಬಳಸಿಕೊಂಡು ಪ್ರಥಮ ಬಾರಿಗೆ ಜಲವಿದ್ಯುಚ್ಛಕ್ತಿಯನ್ನು ಉತ್ಪಾದಿಸಲು ಪ್ರಾರಂಭಿಸಲಾಯಿತು. ಈಗ ಸಾಮಾನ್ಯವಾಗಿ ಎಲ್ಲಾ ಬೃಹತ್ ನೀರಾವರಿ ಯೋಜನೆಗಳಲ್ಲಿಯೂ ಜಲ ವಿದ್ಯುಚ್ಛಕ್ತಿಯನ್ನು ಉತ್ಪಾದಿಸಲಾಗುತ್ತಿದೆ. ಹಿರಾಕುಡ್, ಭಾಕ್ರಾನಂಗಲ್, ನಾಗಾರ್ಜುನ ಸಾಗರ, ದಾಮೋದರ ಕಣಿವೆ, ರಿಹಾಂದ್, ಕೋಸಿ, ಫರಕ್ಕಾ ಮೊದಲಾದವು ಪ್ರಮುಖ ಜಲ ವಿದ್ಯುಚ್ಛಕ್ತಿಯನ್ನು ಉತ್ಪಾದಿಸಲಾಗಿದೆ. ಇದು ಉತ್ಪಾದನೆಯಾದ ಒಟ್ಟು ವಿದ್ಯುಚ್ಛಕ್ತಿಯ ಸುಮಾರು ಶೇಕಡ ೪೦ರಷ್ಟಾಗಿದೆ.

ಜಲ ವಿದ್ಯುಚ್ಛಕ್ತಿಯು ಅತ್ಯಂತ ಅನುಕೂಲಕರವಾದ ಇಂದನದ ರೂಪವಾಗಿದೆ. ಆದ್ದರಿಂದ ಇಂಧನದ ಇತರ ಮೂಲಗಳಿಂದ ಇದಕ್ಕೆ ಬೇಡಿಕೆಯು ಅಗಾಧವಾಗಿ ಬೆಳೆಯುತ್ತದೆ. ಕೃಷಿ ಮತ್ತು ಕೈಗಾರಿಕೆ ಈ ಎರಡು ಕ್ಷೇತ್ರಗಳಲ್ಲಿಯೂ ಜಲ ವಿದ್ಯುಚ್ಛಕ್ತಿಯ ಉತ್ಪಾದನೆಗೆ ವಿಶೇಷ ಪ್ರಾಶಸ್ತ್ಯ ಕೊಡಲಾಗಿದೆ. ಇನ್ನೂ ಅನೇಕ ನದಿಗಳಿಗೆ ಅಡ್ಡಲಾಗಿ ಆಣೆಕಟ್ಟುಗಳನ್ನು ನಿರ್ಮಿಸುವ ಮೂಲಕ ವಿದ್ಯುದುತ್ಪಾದನೆಯನ್ನು ಹೆಚ್ಚಿಸಲು ಯಥೇಚ್ಛವಾದ ಅವಕಾಶಗಳಿವೆ.

೪. **ಉಷ್ಣವಾಹಕ ವಿದ್ಯುಚ್ಛಕ್ತಿ:** ಉಷ್ಣವಾಹಕ ಇಂಧನವು ಭಾರತದಲ್ಲಿ ವಿದ್ಯುಚ್ಛಕ್ತಿಯ ಅತಿ ದೊಡ್ಡ ಮೂಲವಾಗಿದೆ. ಕಲ್ಲಿದ್ದಲನ್ನು ಅನಿಲ ಯಂತ್ರಗಳಲ್ಲಿ ಬಳಸಿದಾಗ ಹೊರಬರುವ ಹವೆಯಿಂದ ಈ ವಿದ್ಯುಚ್ಛಕ್ತಿಯನ್ನು ಉತ್ಪಾದಿಸಲಾಗುತ್ತಿದೆ. ಅಂದರೆ ಕಲ್ಲಿದ್ದಲು ಉಷ್ಣವಾಹಕ ವಿದ್ಯುಚ್ಛಕ್ತಿಯ ಮೂಲವಾಗಿರುತ್ತದೆ.

ಭಾರತದಲ್ಲಿ ಉಷ್ಣವಾಹಕ ವಿದ್ಯುಚ್ಛಕ್ತಿಯ ಉತ್ಪಾದನೆ ಸುಮಾರು ೨೭ ದಶಲಕ್ಷ ಮೆಗಾವ್ಯಾಟ್‌ಗಳಾಗಿದ್ದು ಇದು ಒಟ್ಟು ವಿದ್ಯುತ್ ಉತ್ಪಾದನೆಯ ಶೇಕಡ ೫೭ರಷ್ಟಾಗಿದೆ. ವಾಣಿಜ್ಯ ಇಂಧನದ ಪ್ರಮುಖ ಮೂಲವಾಗಿ ಕಲ್ಲಿದ್ದಲು ಮುಂದುವರೆಯುವ ರೀತಿಯಲ್ಲಿ ದೇಶದ ವಾಣಿಜ್ಯ ನೀತಿಯು ರೂಪಿತವಾಗಿದೆ. ಈ ಇಂಧನದ ಉತ್ಪಾದನೆಗೆ ಪ್ರಾಶಸ್ತ್ಯ ನೀಡುವ ದಿಸೆಯಲ್ಲಿ ಭಾರತ ಸರ್ಕಾರವು ರಾಷ್ಟ್ರೀಯ ಉಷ್ಣವಾಹಕ ವಿದ್ಯುಚ್ಛಕ್ತಿ ನಿಗಮವನ್ನು ಸ್ಥಾಪಿಸಿದೆ.

ನೈವೇಲಿ, ದುರ್ಗಾಪುರ, ಬೊಕಾರೋ, ಸಾತ್ಪುರ ಮತ್ತು ಗುಜರಾತಿನ ಧುವಾರಣ್ ಉಷ್ಣವಾಹಕ ವಿದ್ಯುಚ್ಛಕ್ತಿಯನ್ನು ಉತ್ಪಾದಿಸುವ ಪ್ರಮುಖ ಕೇಂದ್ರಗಳಾಗಿವೆ. ಇದಕ್ಕೆ ಅಗತ್ಯವಾಗಿರುವ ಕಚ್ಚಾವಸ್ತುವಾದ ಕಲ್ಲಿದ್ದಲಿನ ನಿಕ್ಷೇಪಗಳು ಹೇರಳವಾಗಿರುವುದರಿಂದ ಈ ಮೂಲದಿಂದ ಶಕ್ತಿಯ ಉತ್ಪಾದನೆಯನ್ನು ಇನ್ನೂ ವಿಸ್ತರಿಸಲು ಅವಕಾಶಗಳಿವೆ. ಆದರೆ ಅನೇಕ ವೇಳೆಗಳಲ್ಲಿ ಸಾರಿಗೆ ಸೌಕರ್ಯಗಳ ಕೊರತೆಯಿಂದ ಕಲ್ಲಿದ್ದಲನ್ನು ವಿದ್ಯುಚ್ಛಕ್ತಿಯ ಸ್ಥಾವರಗಳಿಗೆ ಸಾಗಿಸುವುದು ದೊಡ್ಡ ಸಮಸ್ಯೆಯಾಗಿದೆ.

ಭಾರತದ ಖನಿಜ ನಿಕ್ಷೇಪಗಳು ಮುಖ್ಯವಾಗಿ ಪಶ್ಚಿಮ ಪ್ರದೇಶ, ದಕ್ಷಿಣ ಬಿಹಾರ, ಒರಿಸ್ಸಾ, ಮಧ್ಯಪ್ರದೇಶದ ಈಶಾನ್ಯ ಮತ್ತು ಕೇಂದ್ರಭಾಗ, ಮಹಾರಾಷ್ಟ್ರದ ಪೂರ್ವದ ತುದಿ ಮತ್ತು ಆಂಧ್ರಪ್ರದೇಶದ ಉತ್ತರ ಭಾಗದ ತುತ್ತತುದಿಯಲ್ಲಿ ಕೇಂದ್ರೀಕೃತವಾಗಿದೆ. ಭಾರತದಲ್ಲಿ ಸುಮಾರು ೧,೨೩,೦೦೦ ದಶಲಕ್ಷ ಟನ್ನುಗಳ ಕಲ್ಲಿದ್ದಲು ನಿಕ್ಷೇಪಗಳಿವೆ ಎಂದು ಅಂದಾಜು ಮಾಡಲಾಗಿದೆ. ೧೯೫೦-೫೧ರಲ್ಲಿ ೩೩.೯ ದಶಲಕ್ಷ ಟನ್ನುಗಳಷ್ಟಿದ್ದ ಕಲ್ಲಿದ್ದಲಿನ ಉತ್ಪಾದನೆ ೨೦೦೦-೦೧ರಲ್ಲಿ ೩೩೩ ದಶಲಕ್ಷ ಟನ್ನುಗಳಿಗೆ ಏರಿದೆ. ದೇಶದಲ್ಲಿ ಸ್ವಲ್ಪ ಪ್ರಮಾಣದ ಕಂದು ಕಲ್ಲಿದ್ದಲು ಮತ್ತು ಭೂ ಪದರದ ಹಾರುಗರಿ ಕಲ್ಲಿದ್ದಲು ನಿಕ್ಷೇಪಗಳು ಸಹ ಇವೆ. ಕಂದು ಕಲ್ಲಿದ್ದಲಿನ ನಿಕ್ಷೇಪಗಳು ಸುಮಾರು ೨,೧೦೦ ದಶಲಕ್ಷ ಟನ್ನುಗಳು ಹಾಗೂ ಭೂ ಪದರದ ಹಾರುಗರಿ ಕಲ್ಲಿದ್ದಲಿನ ನಿಕ್ಷೇಪಗಳು ಸುಮಾರು ೯೦೦ ದಶಲಕ್ಷ ಟನ್ನುಗಳು ಇರುವುದಾಗಿ ಅಂದಾಜು ಮಾಡಲಾಗಿದೆ.

**೫. ಅಣು ವಿದ್ಯುಚ್ಛಕ್ತಿ:** ಪರಮಾಣುಗಳನ್ನು ಬೆಸೆಯುವುದರ ಮೂಲಕ ಈ ಇಂಧನವನ್ನು ಉತ್ಪಾದಿಸಲಾಗುತ್ತಿದೆ. ಇದಕ್ಕೆ ಬೇಕಾಗಿರುವ ಪ್ರಮುಖ ಪರಮಾಣುಗಳೆಂದರೆ ಯುರೇನಿಯಮ್ ಮತ್ತು ಥೋರಿಯಮ್. ಕಲ್ಲಿದ್ದಲಿನಿಂದ ಪಡೆಯುವ ಶಕ್ತಿಗಿಂತ ಎಷ್ಟೋ ಪಾಲು ಹೆಚ್ಚು ಶಕ್ತಿಯನ್ನು ಈ ಪರಮಾಣುಗಳಿಂದ ಪಡೆಯಬಹುದಾಗಿದೆ. ಉದಾಹರಣೆಗೆ ೧೧,೦೦೦ ಟನ್ನು ಕಲ್ಲಿದ್ದಲಿನಿಂದ ಉತ್ಪಾದನೆಯಾಗುವಷ್ಟು ವಿದ್ಯುತ್ತನ್ನು ಒಂದು ಟನ್ನು ಯುರೋನಿಯಮ್‌ನಿಂದ ಉತ್ಪಾದಿಸಲು ಸಾಧ್ಯವಾಗುತ್ತದೆ. ಬಿಹಾರ, ಆಂಧ್ರಪ್ರದೇಶ, ರಾಜಸ್ತಾನ, ಕರ್ನಾಟಕ ಮತ್ತು ಕೇರಳ ರಾಜ್ಯಗಳಲ್ಲಿ ಯುರೇನಿಮ್ ಹೆಚ್ಚಾಗಿ ದೊರೆಯುತ್ತದೆ. ಥೋರಿಯಮ್ ಸಿಗುವ ಮುಖ್ಯ ಪ್ರದೇಶಗಳೆಂದರೆ ಬಿಹಾರ, ಆಂಧ್ರಪ್ರದೇಶ, ರಾಜಸ್ತಾನ ಮತ್ತು ತಮಿಳುನಾಡು.

ಮುಂಬಯಿ ಹತ್ತಿರದ ತಾರಾಪುರದಲ್ಲಿ ೧೯೬೯ರಲ್ಲಿ ೪೨೦ ಮೆಗಾವ್ಯಾಟ್ ಪ್ರತಿಷ್ಠಾಪಿತ ಸಾಮರ್ಥ್ಯದ ಅಣು ವಿದ್ಯುಚ್ಛಕ್ತಿ ಸ್ಥಾವರದ ಸ್ಥಾಪನೆಯೊಂದಿಗೆ ಭಾರತದ ಅಣು ವಿದ್ಯುಚ್ಛಕ್ತಿಯ ಉತ್ಪಾದನೆ ಪ್ರಾರಂಭಗೊಂಡಿತು. ನಂತರ ಉತ್ತರ ಪ್ರದೇಶದ ನರೋರ, ರಾಜಸ್ತಾನದ ರಾಣಾ ಪ್ರತಾಪಸಾಗರ, ಗುಜರಾತಿನ ಸೂರತ್ ಮತ್ತು ತಮಿಳುಡಿನ ಕಲ್ಪಕಮ್‌ನಲ್ಲಿ ಇದರ ಸ್ಥಾವರಗಳನ್ನು ಸ್ಥಾಪಿಸಲಾಗಿದೆ. ಇತ್ತೀಚೆಗೆ ಕರ್ನಾಟಕದ ಕಾರವಾರ ಜಿಲ್ಲೆಯ ಕೈಗಾ ಎಂಬಲ್ಲಿ ಅಣು ವಿದ್ಯುತ್ ಸ್ಥಾವರವನ್ನು ನಿರ್ಮಿಸಿ ಉದ್ಘಾಟಿಸಲಾಯಿತು

(೨೦೦೦ದ ಏಪ್ರಿಲ್). ಅಣುಶಕ್ತಿ ವಾರ್ಷಿಕ ಉತ್ಪಾದನೆ ಸುಮಾರು ೨.೫ ದಶಲಕ್ಷ ಮೆಗಾವ್ಯಾಟ್‌ಗಳ ಪ್ರಮಾಣವಾಗಿದೆ. ೧೯೪೮ರಷ್ಟು ಹಿಂದೆಯೇ ಭಾರತವು ಅಣುಶಕ್ತಿ ಆಯೋಗವನ್ನು ರಚಿಸಿದೆ.

ಭಾರತದಲ್ಲಿ ಸುಮಾರು ೫೨,೦೦೦ ಟನ್ನುಗಳಷ್ಟು ಯುರೇನಿಯಮ್ ಮತ್ತು ಸುಮಾರು ೩,೨೦,೦೦೦ ಟನ್ನುಗಳಷ್ಟು ಥೋರಿಯಮ್ ನಿಕ್ಷೇಪಗಳಿವೆ. ಆರ್ಥಿಕಾಭಿವೃದ್ಧಿಗಾಗಿ ಈ ಮೂಲದ ಇಂಧನವನ್ನು ಬಳಸಿಕೊಳ್ಳಲು ನಿರಂತರ ಸಂಶೋಧನೆ ಮತ್ತು ಅಭಿವೃದ್ಧಿ ಪ್ರಯತ್ನಗಳು ನಡೆಯುತ್ತಿವೆ.

**ಬಿ. ಅಸಾಂಪ್ರದಾಯಿಕ ಮೂಲಗಳು**

ಅಸಾಂಪ್ರದಾಯಿಕ ಇಂಧನ ಮೂಲಗಳು ಎಂದರೆ ಇತ್ತೀಚಿನ ದಿವಸಗಳಲ್ಲಿ ಕಂಡು ಹಿಡಿಯಲಾಗಿರುವ ಮತ್ತು ಬಳಕೆಗೆ ಬಂದಿರುವ ಮೂಲಗಳು ಎಂದರ್ಥ.

**೧. ಸೌರಶಕ್ತಿ:** ಭೂಮಿಗೆ ಧಾವಿಸುವ ಸೂರ್ಯನ ಕಿರಣಗಳ ಶಾಖವನ್ನು ಸಂಗ್ರಹಿಸಿ ಉತ್ಪಾದಿಸುವ ಶಕ್ತಿಗೆ ಸೌರಶಕ್ತಿ ಎಂದು ಹೆಸರು. ಸೌರಶಕ್ತಿಯನ್ನು ನೇರವಾಗಿ ಉಷ್ಣವಾಹಕ ಇಂಧನವಾಗಿ ಬಳಸಿಕೊಳ್ಳಬಹುದು ಅಥವಾ ವಿದ್ಯುಚ್ಛಕ್ತಿಯಾಗಿ ಪರಿವರ್ತಿಸಬಹುದು. ಸೌರಶಕ್ತಿಯ ತಾಪವನ್ನು 'ಸಂಗ್ರಾಹಕ' (Collector) ಎಂಬ ಉಪಕರಣದ ಸಹಾಯದಿಂದ ಸಂಗ್ರಹಿಸಲಾಗುತ್ತದೆ.

ಉಷ್ಣಹವಾಗುಣದ ದೇಶವಾದ ಭಾರತದಲ್ಲಿ ವರ್ಷದಲ್ಲಿ ಸುಮಾರು ಮುನ್ನೂರು ದಿವಸಗಳಲ್ಲಿ ಸೂರ್ಯನ ಕಿರಣಗಳಿಂದ ಸಾಕಷ್ಟು ಶಾಖ ದೊರೆಯುತ್ತದೆ. ಭಾರತಕ್ಕೆ ಲಭ್ಯವಾಗುವ ಸೌರಶಕ್ತಿಯು ಸುಮಾರು ೮,೦೦೦ ಕಿಲೋವ್ಯಾಟ್‌ಗಳು ಎಂದು ಅಂದಾಜು ಮಾಡಲಾಗಿದೆ. ಈ ಮೂಲವನ್ನು ಪೂರ್ಣವಾಗಿ ಉಪಯೋಗಿಸಿಕೊಂಡರೆ ನಮಗೆ ಅವಶ್ಯಕತೆ ಇರುವಷ್ಟಕ್ಕಿಂತಲೂ ಹೆಚ್ಚಿನ ವಿದ್ಯುಚ್ಛಕ್ತಿಯನ್ನು ಉತ್ಪಾದಿಸಲು ಸಾಧ್ಯವಿದೆ ಎಂದು ಅಂದಾಜು ಮಾಡಲಾಗಿದೆ. ಇದರ ಬಗೆಗೆ ಗಮನವಾದ ಸಂಶೋಧನೆಗಳನ್ನು ನಡೆಸಲಾಗುತ್ತದೆ. ವಿವಿಧ ಬಳಕೆಗಳ ವಿಭಿನ್ನ ಮಟ್ಟಗಳ ಉಷ್ಣದ ಕೋರಿಕೆಗೆ ಅನುಗುಣವಾಗಿ ಸೌರಶಕ್ತಿಯನ್ನು ಸಂಗ್ರಹಿಸಲು ವಿವಿಧ ವಿಧಗಳ ಸಂಗ್ರಾಹಕಗಳನ್ನು ಕಂಡುಹಿಡಿಯಲಾಗಿದೆ.

**೨. ಪವನ ಶಕ್ತಿ:** ಗಾಳಿಯು ರಭಸವಾಗಿ ಬೀಸುವ ಪ್ರದೇಶಗಳಲ್ಲಿ ಪವನ ಚಕ್ರಗಳನ್ನು ಒಡ್ಡುವ ಮೂಲಕ ಶಕ್ತಿಯನ್ನು ಉತ್ಪಾದಿಸಬಹುದು. ಈ ಶಕ್ತಿಯನ್ನು ನೀರೆತ್ತುವುದಕ್ಕೆ, ಧಾನ್ಯ ಹಾಗೂ ಕಬ್ಬು ಅರೆಯುವ ಮತ್ತು ಮರಗಳನ್ನು ಕತ್ತರಿಸುವ ಯಂತ್ರಗಳನ್ನು ನಡೆಸಲು, ಉಪ್ಪು ತಯಾರಿಕೆಯ ಕೆಲಸಗಳಲ್ಲಿ ಉಪ್ಪು ನೀರನ್ನು ಎತ್ತಲು ಮತ್ತು ಸಣ್ಣ ಪ್ರಮಾಣದಲ್ಲಿ ವಿದ್ಯುಚ್ಛಕ್ತಿಯನ್ನು ಉತ್ಪಾದಿಸಲು ಉಪಯೋಗಿಸಬಹುದು. ಭಾರತದಲ್ಲಿ ಪವನ ಶಕ್ತಿಯ ಬಳಕೆಗೆ ಪ್ರಸ್ತುತದಲ್ಲಿ ಸಂಶೋಧನ ಮತ್ತು ಅಭಿವೃದ್ಧಿ ಪ್ರಯತ್ನಗಳನ್ನು ಕೈಗೊಳ್ಳಲಾಗುತ್ತಿದೆ. ಆದರೆ ಗಾಳಿಯ ವೇಗಗಳು ಅತಿ ಕಡಿಮೆ ಇರುವುದರಿಂದ ಹಾಗೂ ಏಕಪ್ರಕಾರವಾಗಿಲ್ಲ

ದಿರುವುದರಿಂದ ಗಣನೀಯ ಪ್ರಮಾಣದಲ್ಲಿ ಪವನ ಶಕ್ತಿಯನ್ನು ಉತ್ಪಾದಿಸಲು ಸಾಧ್ಯವಾಗದೆಂದು ಕಂಡುಬಂದಿರುತ್ತದೆ. ಆದಾಗ್ಯೂ ಕರಾವಳಿ ಪ್ರದೇಶಗಳಲ್ಲಿ ಮತ್ತು ಗುಡ್ಡಗಳಲ್ಲಿ ನೀರೆತ್ತಲು ಮತ್ತು ವಿದ್ಯುಚ್ಛಕ್ತಿಯನ್ನು ಉತ್ಪಾದಿಸಲು ಪವನ ಶಕ್ತಿಯನ್ನು ಬಳಸಿಕೊಳ್ಳಲು ಹೇರಳ ಅವಕಾಶಗಳಿವೆ. ಸೂಕ್ತವಾದ ಆಕಾರ ಮತ್ತು ರಚನೆಯ ಪವನ ಯಂತ್ರಗಳ ಅಭಿವೃದ್ಧಿಗೂ ಸಹ ಸಂಶೋಧನೆ ಜರುಗುತ್ತಿದೆ.

೩. **ಜೈವಿಕ ಅನಿಲ:** ಅನಿಲ ಯಂತ್ರಕ್ಕೆ ಸಗಣಿ (ತೊಪ್ಪೆ)ಯನ್ನು ಹುದುಗೆಬ್ಬಿಸುವ ಮೂಲಕ ಜೈವಿಕ ಅನಿಲವನ್ನು ಉತ್ಪಾದಿಸಲಾಗುತ್ತದೆ. ಮುಖ್ಯವಾಗಿ ಗೃಹಕೃತ್ಯದ ಬಳಕೆಗೆ ಮತ್ತು ದೀಪಗಳಿಗೆ ಈ ಅನಿಲವನ್ನು ಉಪಯೋಗಿಸಲಾಗುತ್ತದೆ. ಬಹಳ ಮಿತವ್ಯಯದಲ್ಲಿ ಈ ಅನಿಲವನ್ನು ಉತ್ಪಾದಿಸಬಹುದಾಗಿರುವುದರಿಂದ ದನಸಹಾಯ ನೀಡುವ ಮುಖಾಂತರ ಮತ್ತು ಇಡೀ ಹಳ್ಳಿಗೆ ಸಾಕಾಗುವಂತೆ ದೊಡ್ಡ ಪ್ರಮಾಣದ ಘಟಕಗಳನ್ನು ನಿರ್ಮಿಸಲು ಪ್ರೋತ್ಸಾಹಿಸುವ ಮೂಲಕ ಸರ್ಕಾರವು ಅದರ ಅಭಿವೃದದಿಗೆ ಗಮನ ನೀಡುತ್ತಿದೆ. ಗ್ರಾಮೀಣ ಪ್ರದೇಶಗಳಲ್ಲಿ ಜೈವಿಕ ಅನಿಲ ಯೋಜನೆಯನ್ನು ಜನಪ್ರಿಯಗೊಳಿಸಲು ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿಯು ಶ್ರಮಿಸುತ್ತಿದೆ.

ಪ್ರಸ್ತುತದಲ್ಲಿ ವೈಯಕ್ತಿಕ ಕುಟುಂಬಗಳ ಬೇಡಿಕೆಯ ಈಡೇರಿಕೆಗೆ ಅನುಗುಣವಾಗಿರುವಂತೆ ಚಿಕ್ಕ ಪರಮಾಣದ ಜೈವಿಕ ಅನಿಲ ಘಟಕಗಳನ್ನು ಸ್ಥಾಪಿಸುವ ಕಾರ್ಯಕ್ರಮವನ್ನು ವ್ಯಾಪಕವಾಗಿ ಅನುಷ್ಠಾನಕ್ಕೆ ತರಲಾಗಿದೆ. ಇತ್ತೀಚಿನ ವರ್ಷಗಳಲ್ಲಿ ದೀನ ಬಂಧು ಎಂಬ ಮಿತವ್ಯಯಕಾರಿಯಾದ ಜೈವಿಕ ಅನಿಲ ಮಾದರಿಯನ್ನು ಹೆಚ್ಚು ಪ್ರಚಾರಪಡಿಸಲಾಗಿದೆ. ಇದರ ನಿರ್ಮಾಣಕ್ಕೆ ಸುಮಾರು ಶೇಕಡ ೮೦ರಷ್ಟು ಹಣವನ್ನು ಸಹಾಯಧನದ ರೂಪದಲ್ಲಿಯೇ ಕೊಡಲಾಗುವುದು. ಈ ಮಾದರಿಯು ಈಗ ಹೆಚ್ಚು ಜನಪ್ರಿಯವಾಗುತ್ತಿದೆ.

## ೬.೫. ಯೋಜನಾ ಕಾರ್ಯಗಳು ಮತ್ತು ಅಭ್ಯಾಸನಗಳು

೬.೫.೧ ಕಾರ್ಯನಿರ್ವಹಿಸುತ್ತಿರುವ ಒಂದು ಟೆಲಿಸಂಪರ್ಕ ಕೇಂದ್ರಕ್ಕೆ ಕಛೇರಿ ಕೊರಿಯರ್ ಸಂಸ್ಥೆ, ದೂರವಾಣಿ ವಿನಿಮಯ ಕೇಂದ್ರ, ಮಾಹಿತಿ ಜಾಲ ಕೇಂದ್ರ ಬೇಟಿ ನೀಡುವುದು.

೬.೫.೨ ಸ್ಥಳೀಯ ಪ್ರದೇಶದಲ್ಲಿ ಕೃಷಿ, ಕೈಗಾರಿಕೆ ಮತ್ತು ಸೇವಾ ವಲಯಗಳಲ್ಲಿ ವಿದ್ಯುಚ್ಛಕ್ತಿ ಬಳಕೆಗಳ ಬಗ್ಗೆ ಒಂದು ಅಧ್ಯಯನ ವರದಿಯನ್ನು ತಯಾರಿಸುವುದು.

೬.೫.೩ ವಾಣಿಜ್ಯ ಬ್ಯಾಂಕುಗಳ ಕಾರ್ಯವಿಧಾನದ ಬಗ್ಗೆ ಜ್ಞಾನವನ್ನು ಪಡೆದುಕೊಳ್ಳಲು ವಿದ್ಯಾರ್ಥಿಗಳ ಉಪನ್ಯಾಸಕರ ಮತ್ತು ಬ್ಯಾಂಕ್ ಅಧಿಕಾರಿಗಳ ನಡುವೆ ಒಂದು ಪರಸ್ಪರ ಸ್ಪಂದನದ ಅಧಿವೇಶನವನ್ನು ಏರ್ಪಡಿಸುವುದು ಮತ್ತು ಒಂದು ಪರಿಯೋಜನಾ ವರದಿಯನ್ನು ತಯಾರಿಸುವುದು.

೬.೫.೪ ಭಾರತದಲ್ಲಿ ರೈಲ್ವೇ ವಲಯಗಳ, ಬಂದರುಗಳ ಮತ್ತು ಹೊಸ ರಸ್ತೆ ಯೋಜನೆಗಳ ನಕ್ಷೆಯನ್ನು ತಯಾರಿಸುವುದು.

## ಮಾದರಿ ಪ್ರಶ್ನೆಗಳು

### ಭಾಗ - ಎ

**ಪ್ರತಿಯೊಂದನ್ನೂ ಒಂದು ವಾಕ್ಯದಲ್ಲಿ ಉತ್ತರಿಸಿ.**

೧. ಮೂಲ ಸೌಲಭ್ಯಗಳು ಎಂದರೇನು?

೨. ರಾಜ್ಯ ಹೆದ್ದಾರಿಗಳು ಎಂದರೇನು?

೩. ಭಾರತೀಯ ರೈಲ್ವೆಯ ಈಶಾನ್ಯ ವಿಭಾಗದ ಮುಖ್ಯ ಕಛೇರಿಯ ಸ್ಥಳ ಎಲ್ಲಿದೆ?

೪. ಆಂತರಿಕ ಜಲಸಾರಿಗೆ ಎಂದರೇನು?

೫. ಕರೆಹಣದ ಅರ್ಥ ಕೊಡಿ.

### ಭಾಗ - ಬಿ

**ಪ್ರತಿಯೊಂದನ್ನೂ ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ**

೬. ಭಾರತದಲ್ಲಿ ರಸ್ತೆಗಳ ವರ್ಗೀಕರಣವನ್ನು ತಿಳಿಸಿ.

೭. ರಸ್ತೆಗಳ ಮತ್ತು ಸೇತುವೆಗಳ ನಿರ್ಮಾಣದಲ್ಲಿ ಖಾಸಗಿ ಮತ್ತು ಸಾರ್ವಜನಿಕ ವಲಯಗಳ ಸಹಭಾಗಿತ್ವವನ್ನು ಕುರಿತು ಬರೆಯಿರಿ.

೮. ಬಂದರುಗಳ ಅಭಿವೃದ್ಧಿಯಲ್ಲಿ ಖಾಸಗಿ ಮತ್ತು ಸಾರ್ವಜನಿಕ ವಲಯಗಳ ಸಹಭಾಗಿತ್ವವನ್ನು ಕುರಿತು ಬರೆಯಿರಿ.

೯. ಆರ್ಥಿಕಾಭಿವೃದ್ಧಿಯಲಿ ಸಂಪರ್ಕದ ಪಾತ್ರವನ್ನು ವಿವರಿಸಿ.

೧೦. ಆರ್ಥಿಕಾಭಿವೃದ್ಧಿಯಲ್ಲಿ ಸಂಪರ್ಕದ ಪಾತ್ರವನ್ನು ವಿವಧಿಸಿ.

೧೧. ಹಣದ ಮಾರುಕಟ್ಟೆ ಎಂದರೇನು? ಅದು ಕರೆಹಣದ ಮಾರುಕಟ್ಟೆಯಿಂದ ಹೇಗೆ ಭಿನ್ನವಾಗಿದೆ

೧೧. ವಾಣಿಜ್ಯ ಬ್ಯಾಂಕುಗಳು ಸ್ವೀಕರಿಸುವ ಠೇವಣಿಗಳ ವಿಧಗಳನ್ನು ವಿವರಿಸಿ.

೧೨. ಸಹಕಾರದ ತತ್ವವನ್ನು ವಿವರಿಸಿ.

೧೩. ಕಾಯ್ದಿಟ್ಟ ಹಣದ ಪ್ರಮಾಣದ ಬದಲಾವಣೆಯನ್ನು ಕುರಿತು ಬರೆಯಿರಿ.

### ಭಾಗ - ಸಿ

**ಪ್ರತಿಯೊಂದನ್ನೂ ೧೫ ವಾಕ್ಯಗಳಲ್ಲಿ ಉತ್ತರಿಸಿ.**

೧೪. ಸಾರಿಗೆಯ ಪ್ರಾಮುಖ್ಯತೆಯನ್ನು ವಿವರಿಸಿ.

೧೫. ಸಂಪರ್ಕ ವ್ಯವಸ್ಥೆಯ ರಚನೆಯನ್ನು ವರ್ಣಿಸಿ.

೧೬. ವಾಣಿಜ್ಯ ಬ್ಯಾಂಕುಗಳ ಇತ್ತೀಚಿನ ಸಾಧನೆಗಳನ್ನು ವಿವರಿಸಿ.

೧೭. ನರಸಿಂಹನ್ ಸಮಿತಿಯ ಶಿಫಾರಸ್ಸುಗಳನ್ನು ವಿವರಿಸಿ.

೧೮. ಹಣಸಂಬಂಧಿ ನೀತಿ ಎಂದರೇನು? ಅದರ ವಿಧಗಳನ್ನು ವಿವರಿಸಿ.

## ಭಾಗ - ಡಿ

**ಪ್ರತಿಯೊಂದನ್ನೂ ೪೦ ವಾಕ್ಯಗಳಲ್ಲಿ ಉತ್ತರಿಸಿ**

೧೯. ಭಾರತದಲ್ಲಿ ರೈಲುಸಾರಿಗೆಯ ಮಹತ್ವವನ್ನು ವಿವರಿಸಿ.

೨೦. ವಾಣಿಜ್ಯ ಬ್ಯಾಂಕುಗಳ ಕಾರ್ಯಗಳನ್ನು ವಿವರಿಸಿ.

೨೧. ಸಹಕಾರ ಚಳುವಳಿಯ ಸಾಧನೆಗಳು ಮತ್ತು ದೌರ್ಬಲ್ಯಗಳನ್ನು ಚರ್ಚಿಸಿ.

೨೨. ಭಾರತದ ರಿಸರ್ವ್ ಬ್ಯಾಂಕಿನ ಕಾರ್ಯಗಳನ್ನು ವಿವರಿಸಿ.

ರಫ್ತು, ಆಮದು ಮತ್ತು ವ್ಯಾಪಾರದ ಶಿಲ್ಕು : ಕೋಟಿ ರೂ.ಗಳಲ್ಲಿ

| ವರ್ಷ | ರಫ್ತು | ಶೇಕಡ ಬೆಳವಣಿಗೆ | ಆಮದು | ಶೇಕಡ ಬೆಳವಣಿಗೆ | ವ್ಯಾಪಾರಶಿಲ್ಕು |
|---|---|---|---|---|---|
| ೧೯೮೦-೮೧ | ೬೭೧೧ | (೪.೬) | ೧೨೫೪೯ | (೩೭.೩) | -೫೮೩೮ |
| ೧೯೯೦-೯೧ | ೩೨,೫೫೩ | (೧೭.೭) | ೪೩,೧೯೮ | (೨೨.೩) | -೧೦,೬೪೫ |
| ೧೯೯೧-೯೨ | ೪೪,೦೪೧ | (೩೫.೩) | ೪೭,೮೫೧ | (೧೦.೮) | -೩,೮೧೦ |
| ೧೯೯೨-೯೩ | ೫೩,೬೮೮ | (೨೧.೯) | ೬೩,೩೭೫ | (೩೨.೪) | -೯,೬೮೭ |
| ೧೯೯೩-೯೪ | ೬೯,೭೫೧ | (೨೯.೯) | ೭೩,೧೦೧ | (೧೫.೩) | -೩,೩೫೦ |
| ೧೯೯೪-೯೫ | ೮೨,೬೭೪ | (೧೮.೫) | ೮೯,೯೭೧ | (೨೩.೧) | -೭,೨೯೭ |
| ೧೯೯೫-೯೬ | ೧,೦೬,೩೫೩ | (೨೮.೬) | ೧೨೨,೬೭೮ | (೩೬.೪) | -೧೬,೩೨೫ |
| ೧೯೯೬-೯೭ | ೧,೧೮,೮೧೭ | (೧೧.೭) | ೧,೩೮,೯೨೦ | (೧೩.೨) | -೨೦,೧೦೩ |
| ೧೯೯೭-೯೮ | ೧೩೦,೧೦ | (೯.೫) | ೧,೫೪,೧೭೬ | (೧೧.೦) | -೨೪,೦೭೬ |
| ೧೯೯೮-೯೯ | ೧,೩೯,೭೫೨ | (೭.೪) | ೧,೭೮,೩೩೨ | (೧೫.೭) | -೩೮,೫೮೦ |
| ೧೯೯೯-೦೦ | ೧,೫೯,೫೬೧ | (೧೪.೨) | ೨,೧೫,೨೩೬ | (೨೦.೭) | -೫೫,೬೭೫ |
| ೨೦೦೦-೦೧ | ೨,೩೦,೫೭೧ | (೨೭.೬) | ೨,೩೦,೮೭೩ | (೭.೩) | -೨೭,೩೦೨ |
| ೨೦೦೧-೦೨ | ೨,೦೯,೦೧೮ | (-೨.೭) | ೨,೪೫,೨೦೦ | (೬.೨) | -೩೬,೧೮೨ |
| ೨೦೦೨-೦೩ | ೨,೫೫,೧೩೭ | (೨೨.೧) | ೨,೯೭,೨೦೬ | (೨೧.೨) | -೪೨,೦೬೯ |
| ೨೦೦೩-೦೪ | ೨,೯೩,೩೬೭ | (೧೫.೦) | ೩,೫೯,೧೦೮ | (೨೦.೮) | -೬೫,೭೪೧ |
| ೨೦೦೪-೦೫ | ೩,೬೦,೦೦೦ | (೨೦) | ೪,೫೨,೭೦೦ | (೨೮) | -೯೨,೭೦೦ |

ಮೂಲ : ರಿಪೋರ್ಟ್ ಆನ್ ಕರೆನ್ಸಿ ಅಂಡ್ ಫೈನಾನ್ಸ್. ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ ದಿ ಎಕಾನಮಿಕ್ ಸರ್ವೆ (ವಿವಿಧ ವರ್ಷದ ಪ್ರಕಟಣೆಗಳು) ಭಾರತ ಸರ್ಕಾರ.

## ಪಂಚವಾರ್ಷಿಕ ಯೋಜನೆ ಮತ್ತು ರಫ್ತು

ಸಾಮಾನ್ಯವಾಗಿ ೧೯೪೯ ರಿಂದ ಇಲ್ಲಯವರೆವಿಗೂ ಪ್ರತಿವರ್ಷ ರಫ್ತು ಮೌಲ್ಯ ಹಿಂದಿನ ವರ್ಷಕ್ಕಿಂತ ಜಾಸ್ತಿಯಾಗುತ್ತಾ ಬಂದಿದೆ. ಆದರೆ ೫೨-೫೩, ೫೩-೫೪, ೫೬-೫೭, ೫೭-೫೮, ೮೫-೬೬ ಈ ವರ್ಷಗಳಲ್ಲಿ ಮಾತ್ರ ರಫ್ತು ಜಾಸ್ತಿಯಾಗಲಿಲ್ಲ. ರಫ್ತು ದಿಕ್ಕಿನಲ್ಲಿ ಬದಲಾವಣೆ ಇಲ್ಲದಿದ್ದುದರಿಂದ ಮತ್ತು ರಫ್ತು ಉತ್ತೇಜನ ಕ್ರಮಗಳು ಸಾಕಷ್ಟು ಪರಿಣಾಮಕಾರಿಯಾಗಿಲ್ಲದಿಕ್ಕದರಿಂದ ರಫ್ತು ಪ್ರಮಾಣ ಈ ವರ್ಷಗಳಲ್ಲಿ ಹಿಂದಿನ ವರ್ಷಕ್ಕಿಂತ ಕಡಿಮೆಯಾಯಿತು. ಮೂರನೇ ಯೋಜನೆಯ ಕೊನೆಯ ವರ್ಷದ ವೇಳೆಗೆ ವಿದೇಶಿ ವಿನಿಮಯ ಕೊರತೆ ತೀವ್ರ ರೂಪ ತಾಳಿದ್ದಿತು. ಇದರಿಂದಾಗಿ ಅಂತರರಾಷ್ಟ್ರೀಯ ಹಣಕಾಸಿನ ಸಂಸ್ಥೆಗಳಿಂದ ಸಾಲ ತೆಗೆದುಕೊಂಡುದ್ದೇ ಅಲ್ಲದೆ, ಜೂನ್ ೬ರಲ್ಲಿ ರೂಪಾಯಿ ಅನ್ನು ೩೬.೫ರಷ್ಟು ಅಪಮೌಲ್ಯ ಮಾಡಿಕೊಳ್ಳಲಾಯಿತು.

ನಮ್ಮ ರಾಷ್ಟ್ರ ಆಹಾರದ ಕೊರತೆಯನ್ನು ಎದುರಿಸಲು ಹೆಚ್ಚಿನ ಪ್ರಮಾಣದಲ್ಲಿ ಆಹಾರ ಧಾನ್ಯಗಳನ್ನು ಆಮದು ಮಾಡಿಕೊಳ್ಳಬೇಕಾಯಿತು. ಈ ಪರಿಸ್ಥಿತಿ ಮೊದಲನೆಯ ಯೋಜನೆಯಲ್ಲಿಯೂ ಮುಂದುವರೆಯಿತು. ರಾಷ್ಟ್ರವು ಹಣದುಬ್ಬರದ ಪರಿಸ್ಥಿತಿಯನ್ನು ಎದುರಿಸಬೇಕಾದುದರಿಂದ ರಫ್ತು ಕಡಿಮೆಯಾಯಿತು. ೧೯೪೮ರಲ್ಲಿ ಜಾರಿಗೆ ತಂದು ವಿಸ್ತರಿಸಿರುವ ಸಾಮಾನ್ಯ ಪರವಾನೆ ಕಾರ್ಯನೀತಿಯಿಂದ ಆಮದು ಪ್ರಮಾಣ ಜಾಸ್ತಿಯಾದುದರಿಂದ ಮೇ ೧೯೪೯ರಲ್ಲಿ ಈ ವ್ಯವಸ್ಥೆಯನ್ನು ರದ್ದುಗೊಳಿಸಬೇಕಾಯಿತು. ಸೆಪ್ಟೆಂಬರ್ ೧೯೪೯ರಲ್ಲಿ ರೂ. ಅಪಮೌಲ್ಯದಿಂದ ಮತ್ತು ಕೊರಿಯಾ ಯುದ್ಧದ ಪರಿಣಾಮ ನಮ್ಮ ರಾಷ್ಟ್ರದ ರಫ್ತು ೧೯೪೯ ರಿಂದ ೫೧ರ ವರೆಗೆ ತಾತ್ಕಾಲಿಕವಾಗಿ ಜಾಸ್ತಿಯಾಯಿತು. ಮೊದಲನೆ ಯೋಜನೆ ಪ್ರಾರಂಭವಾದ ಮೇಲೆ ರಫ್ತಿಗೆ ಉತ್ತೇಜನವನ್ನು ಕೊಡುವುದರ ಬದಲು, ಆ ಸರಕುಗಳನ್ನು ಸ್ವದೇಶಿ ಮಾರುಕಟ್ಟೆಯ ಅವಶ್ಯಕತೆಯನ್ನು ಪೂರೈಸಲು ಉಪಯೋಗಿಸಿಕೊಳ್ಳಲಾಯಿತು. ಅನೇಕ ಅವಶ್ಯಕ ಸರಕುಗಳ ರಫ್ತನ್ನು ನಿರ್ಬಂಧಿಸಲಾಯಿತು. ಉದಾ: ಹತ್ತಿ ಬಟ್ಟೆ, ಹತ್ತಿ, ಎಣ್ಣೆ ಬೀಜ, ಸೆಣಬು ಇತ್ಯಾದಿ.

ಮೊದಲನೆ ಪಂಚವಾರ್ಷಿಕ ಯೋಜನೆಯಲ್ಲಿ ವಿದೇಶಿ ವ್ಯಾಪಾರ ಕ್ಷೇತ್ರದಲ್ಲಿ ಕೊರತೆಯನ್ನು ನಿವಾರಣೆ ಮಾಡುವ ಗುರಿಯನ್ನು ನಿಗಧಿಮಾಡಲಾಯಿತು. ಅನಾವಶ್ಯಕ ಆಮದನ್ನು ತಪ್ಪಿಸಿ, ರಫ್ತಿಗೆ ಉತ್ತೇಜನವನ್ನು ಕೊಡಲಾಯಿತು. ಮೊದಲನೆ ಯೋಜನೆ ಅವಧಿಯಲ್ಲಿ ಸರಾಸರಿ ರಫ್ತು ೬೦೫ ಕೋಟಿ ಮತ್ತು ಸರಾಸರಿ ಆಮದು ಇತರ ಕೋಟಿಗಳ ಸರಾಸರಿ ಕೊರತೆ ಕೇವಲ ೧೩೦ ಕೋಟಿ ರೂ.ಗಳಾಗಿದ್ದಿತು. ಆಹಾರದ ಉತ್ಪಾದನೆ ಜಾಸ್ತಿಯಾಗಿ, ಆಹಾರಧಾನ್ಯದ ಆಮದು ಕಡಿಮೆಯಾಗಿ ಕೊರತೆಯ ಪ್ರಮಾಣ ಕಡಿಮೆಯಾಯಿತು. ಬಂಡವಾಳ ಸರಕುಗಳ ಮತ್ತು ಕೈಗಾರಿಕಾ ಸರಕುಗಳ ಆಮದಿಗಾಗಿ ಹೆಚ್ಚು ವೆಚ್ಚವಾಗಲಿಲ್ಲ. ವಿದೇಶಿ ವ್ಯಾಪಾರ ಶಿಲ್ಕಿನ ಕೊರತೆಯನ್ನು ಇಂಗ್ಲೆಂಡ್‌ನಲ್ಲಿ ನಾವು ಗಳಿಸಿ ಇಟ್ಟುಕೊಂಡಿದ್ದ ಸ್ಟರ್ಲಿಂಗ್‌ನ್ನು ಉಪಯೋಗಿಸಲಾಯಿತು.

ಎರಡನೇ ಪಂಚವಾರ್ಷಿಕ ಯೋಜನೆಯು ದೊಡ್ಡ ಕೈಗಾರಿಕೆಗಳಿಗೆ ಆದ್ಯತೆಯನ್ನು ನೀಡಿತು. ದೊಡ್ಡ ಉಕ್ಕಿನ ಕಾರ್ಖಾನೆಗಳ ಸ್ಥಾಪನೆ, ರೈಲು ಸಾರಿಗೆಯ ಮಾರ್ಪಾಡು, ಹಳೇಯ ಕೈಗಾರಿಕೆಗಳ ನವೀಕರಣ, ಆಹಾರದ ಕೊರತೆ ಉಂಟಾಗಿ (ಅದರ ಆಮದು ಜಾಸ್ತಿಯಾಗಿ) ಆಮದು ವೆಚ್ಚ ಜಾಸ್ತಿಯಾಗಿ ರಫ್ತಿನ ಮೌಲ್ಯ ಕಡಿಮೆಯಾಗಿ ವ್ಯಾಪಾರದ ಶಿಲ್ಕಿನಲ್ಲಿ ದೊಡ್ಡ ಕೊರತೆ ಉದ್ಭವಿಸಿತು. ೨ನೇ ಯೋಜನೆ ಅವಧಿಯಲ್ಲಿ ರಫ್ತು ಪ್ರಮಾಣ ಸರಾಸರಿ ೬೦೬ ಕೋಟಿ ರೂ.ಗಳಾಗಿದ್ದು, ಆಮದು ಸರಾಸರಿ ೯೭೩ ಕೋಟಿ ರೂ.ಗಳಾಗಿದ್ದು, ಸರಾಸರಿ ವ್ಯಾಪಾರ ಶಿಲ್ಕಿನ ಕೊರತೆ ೩೬೭ ಕೋಟಿ ರೂ.ಗಳಾಯಿತು. ವಿದೇಶಿ ವಿನಿಮಯದ ಕೊರತೆ ಎರಡನೇ ಯೋಜನೆಯಲ್ಲಿ ತೀವ್ರವಾಯಿತು. ಈ ಕಾರಣದಿಂದ ಬಿಗಿಯಾದ ಆಮದು ನಿರ್ಬಂಧಗಳನ್ನು ೧೯೫೭ರಿಂದ ಜಾರಿಗೆ ತಲಾಯಿತು. ೧೯೬೧ರ ವೇಳೆಗೆ ಬ್ರಿಟನ್ ನಲ್ಲಿದ್ದ ಕಾಯ್ದಿರಿಸಲಾದ ಸ್ಟಲಿಂಗ್ರ್ ಹಣದ ಪ್ರಮಾಣ ೩೦೩ ಕೋಟಿಗಳಿಗೆ ಇಳಿದಿದ್ದಿತು.

ವ್ಯಾಪಾರ ಶಿಲ್ಕು ಕೊರತೆ ೧೧,೩೫೨ ಕೋಟಿಗಳಾಯಿತು. ಆದರೆ ಈ ಯೋಜನೆಯ ಕೊನೆ ವರ್ಷ ೧೯೯೬-೯೭ರಲ್ಲಿ ರಫ್ತು ಬೆಳವಣಿಗೆ (೧೧.೭೧) ಮತ್ತು ಆಮದು ಬೆಳವಣಿಗೆ (೧೩.೨೭) ಎರಡೂ ಕಡಿಮೆ ದರದಲ್ಲಿದಿತು. ಇದೇ ಪರಿಸ್ಥಿತಿ ೯ನೇ ಯೋಜನೆಯ ೨ ವರ್ಷಗಳಲ್ಲಿ (೧೯೯೭-೯೯) ಮುಂದುವರೆಯಿತು.

೯ನೇ ಪಂಚವಾರ್ಷಿಕ ಯೋಜನೆಯಲ್ಲಿ (೧೯೯೭-೨೦೦೨) ಸರಾಸರಿ ವಾರ್ಷಿಕ ರಫ್ತು ಮೌಲ್ಯ ೧,೬೮,೪೦೧ ಕೋಟಿಯಾಗಿತ್ತು ಮತ್ತು ಆಮದಿನ ಸರಾಸರಿ ವಾರ್ಷಿಕ ಮೌಲ್ಯ ೨,೦೪,೭೬೪ ಕೋಟಿ ರೂ.ಗಳಾಗಿದ್ದಿತು. ಸರಾಸರಿ ವಾರ್ಷಿಕ ವ್ಯಾಪಾರ ಶಿಲ್ಕಿನಲ್ಲಿ ಕೊರತೆ ೧೩,೩೬೩ ಕೋಟಿಯಾಗಿತ್ತು. ೧೯೯೭-೯೮ರ ಆಗ್ನೇಯ ಏಷ್ಯ ರಾಷ್ಟ್ರಗಳ ನಾಣ್ಯದ ಬಿಕ್ಕಟ್ಟು ಜಪಾನಿನ ಆರ್ಥಿಕ ಹಿಂಜರಿತ, ರಷ್ಯಾ ದೇಶದ ಆರ್ಥಿಕ ಮುಗ್ಗಟ್ಟು ಇವುಗಳಿಂದ ವಿಶ್ವ ಉತ್ಪಾದನೆ ಶೇ.೩ರಷ್ಟು ಕಡಿಮೆಯಾಗಿ ನಮ್ಮ ದೇಶದ ವಿದೇಶಿ ವ್ಯಾಪಾರದ ಬೆಳವಣಿಗೆಯ ಪ್ರಮಾಣವೂ ಕಡಿಮೆಯಾಯಿತು. ೧೯೯೬ ರಿಂದ ೯೮ರ ವರೆಗೂ ರಫ್ತು ಬೆಳವಣಿಗೆ ಕುಂಠಿತವಾಯಿತು. ಮುಂದುವರೆದ ರಾಷ್ಟ್ರಗಳು ನೈರ್ಮಲ್ಯ ಹಾಗೂ ತಾಂತ್ರಿಕ ಮಟ್ಟ ಕಾಪಾಡುವ ಹೊಸ ರಕ್ಷಣಾನೀತಿಯನ್ನು ಅನುಸರಿಸಿದ್ದರಿಂದ ನಮ್ಮ ರಫ್ತು ಪ್ರಮಾಣ ಕಡಿಮೆಯಾಯಿತು.

ಹತ್ತನೆ ಪಂಚವಾರ್ಷಿಕ ಯೋಜನೆ (೨೦೦೨-೨೦೦೦೩)ಯ ಮೊದಲ ೨ ವರ್ಷಗಳಲ್ಲಿ ರಫ್ತು ಮೌಲ್ಯ ಕ್ರಮವಾಗಿ ೨,೫೫,೧೩೭ ಕೋಟಿ ಮತ್ತು ೨,೯೩,೬೩೭ ಕೋಟಿಗಳಾಗಿ ಶೇ.೨೨ ಮತ್ತು ಶೇ.೧೫ರ ಗತಿಯಿಲ್ಲಿ ಬೆಳೆಯಿತು. ಅದೇ ಎರಡು ವರ್ಷಗಳಲ್ಲಿ ಆಮದು ೨,೯೭,೨೦೬ ಕೋಟಿ ಮತ್ತು ೩,೫೯,೧೦೮ ಕೋಟಿಗಳಾಗಿದ್ದು, ಶೇ.೨೧.೨ ಮತ್ತು ಶೇ.೨೦.೮ರ ಗತಿಯಲ್ಲಿ ಬೆಳೆಯಿತು. ೨೦೦೨-೦೩ರಲ್ಲಿ ವ್ಯಾಪಾರ ಶಿಲ್ಕಿನ ಕೊರತೆ ೪೨೦೬೯ ಕೋಟಿಗಳಾಗಿದ್ದು ೨೦೦೩-೦೪ರಲ್ಲಿ ೬೫೭೪೧ ಕೋಟಿಯಾಗಿದ್ದಿತು. ೨೦೦೪-೦೫ರಲ್ಲಿ ರಫ್ತು ೩,೬೦,೦೦೦ ಕೋಟಿಯಾಗಿತ್ತು ಮತ್ತು ಆಮದು ೪,೫೨,೭೦೦ ಕೋಟಿಗಳಾಗಿತ್ತು. ವಾರ್ಷಿಕ ಕೊರತೆ ೯೨,೭೦೦ ಕೋಟಿ ರೂ.ಗಳಾಗಿದ್ದಿತು. ೨೦೦೪-೦೫ರಲ್ಲಿ ರಫ್ತು ಮೌಲ್ಯ ಶೇ. ೨೪.೪ರಷ್ಟು ಬೆಳೆಯಿತು ಮತ್ತು ಆಮದು ಶೇ.೩೫.೬ ಬೆಳೆಯಿತು.

ವಿಶ್ವ ರಫ್ತು ವ್ಯಾಪಾರ ೨೦೦೩ರಲ್ಲಿ ೪.೫ರಷ್ಟು ಬೆಳೆದು ವಿಶ್ವದಲ್ಲಿ ಬೇಡಿಕೆ ಜಾಸ್ತಿಯಾಗಿ ನಮ್ಮ ರಫ್ತು ಜಾಸ್ತಿಯಾಯಿತು. ಏಷ್ಯಾ ರಾಷ್ಟ್ರಗಳಲ್ಲಿ ಆಮದು ಬೇಡಿಕೆ ಜಾಸ್ತಿಯಾಗಿದೆ. ವ್ಯಾಪಾರ ನೀತಿ ಸುಧಾರಣೆಗಳು, ಉದಾರೀಕರಣ, ಮುಕ್ತ ಮಾರುಕಟ್ಟೆ, ಮುಂತಾದ ಕ್ರಮಗಳು ರಫ್ತಿಗೆ ಉತ್ತೇಜನ ಕೊಟ್ಟಿವೆ.

ಅಂತರ ರಾಷ್ಟ್ರೀಯ ಮಾರುಕಟ್ಟೆಯಲ್ಲಿ ಪೆಟ್ರೋಲ್ ಬೆಲೆ ಜಾಸ್ತಿಯಾಗಿ ಆಮದು ವೆಚ್ಚ ಜಾಸ್ತಿ ಆಯಿತು. ಇದರ ಜೊತೆಗೆ ಪೆಟ್ರೋಲ್ ಅಲ್ಲದ ಸರಕುಗಳ ಆಮದಿನ ವೆಚ್ಚವೂ ಜಾಸ್ತಿಯಾಯಿತು.

೧೯೮೦ರ ದಶಕ ಮತ್ತು ೯೦ರ ದಶಕದಲ್ಲಿ ವಿದೇಶೀ ವ್ಯಾಪಾರದ ಬೆಳವಣಿಗೆಯ ವೇಗ

ವಾರ್ಷಿಕ ಶೇಕಡ ರಫ್ತು ಆಮದು ಬೆಳವಣಿಗೆ (ಅಮೆರಿಕಾ ಡಾಲರ್ ಮೌಲ್ಯದಲ್ಲಿ)

| ವರ್ಷ | ರಫ್ತು | ಆಮದು |
|---|---|---|
| ೧೯೮೦-೮೧ರಿಂದ ೧೯೮೯-೯೦ರವರೆಗೆ | ೮.೧ | ೭.೨ |
| ೧೯೯೦-೯೧ ರಿಂದ ೧೯೯೯-೦೦ರವರೆಗೆ | ೮.೬ | ೯.೬ |
| ೨೦೦೦-೦೧ | ೨೧.೦ | ೧.೭ |
| ೨೦೦೧-೦೨ | -೧.೬ | ೧.೭ |
| ೨೦೦೨-೦೩ | ೨೦.೩ | ೧೯.೪ |
| ೨೦೦೩-೦೪ | ೨೧.೧ | ೨೭.೩ |
| ೨೦೦೪-೦೫ | ೨೪.೪ | ೩೫.೬ |

ಮೂಲ : ದಿ ಎಕನಾಮಿಕ್ ಸರ್ವೆ: ಭಾರತ ಸರ್ಕಾರದ ವಿವಿಧ ವರ್ಷದ ಪ್ರಕಟಣೆ

**ಪತ್ರಿಕೆ ವರದಿ**

೧೯೭೦ರ ದಶಕದವರೆಗೂ ಇಂಡಿಯಾ ದೇಶದಲ್ಲಿ ನಿರ್ಬಂಧಿತ ಆಮದು ನಿಯಂತ್ರಣ ವ್ಯವಸ್ಥೆ ಜಾರಿಯಲ್ಲಿದ್ದಿತು. ಇಂತಹ ಸನ್ನಿವೇಶದಲ್ಲಿದ್ದ ಅದಕ್ಷ ಹಾಗೂ ಹೆಚ್ಚು ವೆಚ್ಚದ ಕೈಗಾರಿಕಾ ಸ್ವರೂಪ, ರಫ್ತು ಬೆಳವಣಿಗೆಗೆ ಪ್ರೋತ್ಸಾಹದಾಯಕವಾಗಿರಲಿಲ್ಲ. ೧೯೭೦ರ ದಶಕದ ಕೊನೆಯ ಭಾಗದಲ್ಲಿ ಕೆಲವು ಆಯ್ದ ಕ್ಷೇತ್ರಗಳಲ್ಲಿ ಉದಾರ ಆಮದು ನೀತಿ ಜಾರಿಗೆ ಬಂದಿತು. ೮೦ರ ದಶಕದಲ್ಲಿ ನಮ್ಮ ಕೈಗಾರಿಕೆಗಳಿಗೆ ಸ್ವದೇಶದಲ್ಲಿ ದೊರಕದ ಕಚ್ಚಾ ಪದಾರ್ಥ ಮತ್ತು ಬಂಡವಾಳ ಸರಕುಗಳನ್ನು ಆಮದು ಮಾಡಿಕೊಳ್ಳಲು ಅವಕಾಶ ನೀಡಲಾಯಿತು. ಕೆಲವು ನಿರ್ಬಂಧಿತ ಆಮದು ಸರಕುಗಳನ್ನು ಮುಕ್ತ ಸಾಮಾನ್ಯ ಪರವಾನೆ ಪಟ್ಟಿಗೆ ಸೇರಿಸಿ, ಸ್ವದೇಶಿ ಕೈಗಾರಿಕೆಗಳನ್ನು ವಿದೇಶಿ ಪೈಪೋಟಿಗೆ ತೆರೆದಿಡಲಾಯಿತು. ಈ ಎಲ್ಲಾ ಕ್ರಮಗಳ ಉದ್ದೇಶ ಸ್ವದೇಶಿ ಕೈಗಾರಿಕೆಗಳು ಉತ್ಪಾದನಾ ವೆಚ್ಚವನ್ನು ಕಡಿಮೆಮಾಡಿ ಅಂತರ ರಾಷ್ಟ್ರೀಯ ಪೈಪೋಟಿಯನ್ನು ಎದುರಿಸುವ ಸಾಮರ್ಥ್ಯವನ್ನು ಪಡೆಯುವುದೇ ಆಗಿದ್ದಿತು. ಆದರೆ ಸರ್ವೆ ಸಾಮಾನ್ಯವಾಗಿ ಸುಂಕಗಳು ಇನ್ನೂ ಜಾಸ್ತಿ ಇದ್ದು ಆರ್ಥಿಕ ಬೆಳವಣಿಗೆಗೆ ಅವಶ್ಯಕವಾದ ಸರಕುಗಳನ್ನು ಆಮದು ಮಾಡಿಕೊಳ್ಳಲು ಅಡಚಣೆಗಳಿದ್ದವು.

೮೦ರ ದಶಕದಲ್ಲಿ ರಫ್ತು ಬೆಳವಣಿಗೆ ಶೇ. ೮.೧೧ ಮತ್ತು ಆಮದು ಬೆಳವಣಿಗೆ ಶೇ. ೭.೨ ಆಗಿದ್ದಿತು. ಜುಲೈ ೧೯೯೧ ರಿಂದ ಪ್ರಾರಂಭವಾದ ಉದಾರೀಕರಣ ಆರ್ಥಿಕ ನೀತಿಯಿಂದಾಗಿ ಆಮದು ಸುಂಕಗಳನ್ನು, ಪರಿಮಾಣಾತ್ಮಕ ನಿರ್ಬಂಧಗಳನ್ನು, ವ್ಯಾಪಾರದ ಮತ್ತಿತರ ಅಡಚಣೆಗಳನ್ನು ಕಡಿಮೆ ಮಾಡಿಕೊಂಡು ಅಂತರರಾಷ್ಟ್ರೀಯ ಪರಿಸ್ಥಿತಿಗೆ

ಹೊಂದಿಕೊಳ್ಳತೊಡಗಿದವು. ೧೯೯೧ರಲ್ಲಿ ಇಂಡಿಯಾ ವಿಧಿಸುತ್ತಿದ್ದ ಅತಿ ಹೆಚ್ಚಿನ ಆಮದು ಸುಂಕದ ದರ ೩೫.೫ ಆಗಿದ್ದಿತು. ಆದರೆ ೧೯೯೮-೯೯ರ ವೇಳೆಗೆ ಈ ಸುಂಕದ ದರ ಶೇ. ೪೫ಗೆ ಕಡಿಮೆಯಾಗಿದ್ದಿತು. ಸುಂಕೇತರ ನಿರ್ಬಂಧಗಳೂ ಕಡಿಮೆ ಆದವು. ಆಮದು ನಿರ್ಬಂಧ ಪಟ್ಟಿಯಲ್ಲಿನ ಅನೇಕ ಸರಕುಗಳು ಮುಕ್ತ ಸಾಮಾನ್ಯ ಪರವಾನೆ ಪಟ್ಟಿಗೆ ವರ್ಗಾಯಿಸಲ್ಪಟ್ಟವು. ವಿಶ್ವವ್ಯಾಪಾರ ಸಂಸ್ಥೆಗೆ ಪರಿಮಾಣಾತ್ಮಕ ನಿರ್ಬಂಧಗಳನ್ನು ಕಡಿಮೆಮಾಡಿಕೊಳ್ಳುವ ಆಶ್ವಾಸನೆಯನ್ನು ಕೊಡಲಾಗಿದೆ.

ಆಮದು ಬದಲಿ ಸರಕುಗಳ ಉತ್ಪಾದನೆಗೆ ಪ್ರೋತ್ಸಾಹ ಕೊಡುವುದನ್ನು ಬಿಟ್ಟು ರಫ್ತು ಉತ್ತೇಜನ ಕ್ರಮಗಳಿಗೆ ಪ್ರಾಮುಖ್ಯತೆಯನ್ನು ಕೊಡಲಾಗಿದೆ. ಸಂಪ್ರದಾಯವಲ್ಲದ ಸರಕುಗಳಿಗೂ ರಫ್ತು ಉತ್ತೇಜನವನ್ನು ಕೊಡಲಾಗಿದೆ. ಈ ಕ್ರಮಗಳಿಂದಾಗಿ ೯೦ರ ದಶಕದಲ್ಲಿ ರಫ್ತು ಶೇ. ೮.೬ ರ ವೇಗದಲ್ಲಿ ಮತ್ತು ಆಮದು ಶೇ. ೯.೬ರ ವೇಗದಲ್ಲಿ ಬೆಳೆಯಿತು. ವಿದೇಶಿ ವ್ಯಾಪಾರ ನೀತಿಯ ಸುಧಾರಣೆಗಳಿಂದ ನಮ್ಮ ಸರಕುಗಳು ವಿದೇಶದಲ್ಲಿ ಸ್ಪರ್ಧಿಸುವ ಸಾಮರ್ಥ್ಯ ಜಾಸ್ತಿಯಾಗಿದೆ ಮತ್ತು ಉತ್ಪಾದನಾಂಗಗಳ ಹಂಚುವಿಕೆಯಲ್ಲಿ ದಕ್ಷತೆ ಜಾಸ್ತಿಯಾಗಿದೆ. ವಿದೇಶಿ ತಾಂತ್ರಿಕ ಜ್ಞಾನ ಬಳಕೆ, ವಿದೇಶೀ ಉತ್ಪಾದಕ ಜೊತೆ ಪಾಲುಗಾರಿಕೆ, ವೈವಿಧ್ಯ ಗುಣದ ಸರಕುಗಳ ಉತ್ಪಾದನೆ ಇವುಗಳೆಲ್ಲವೂ ಜಾಸ್ತಿಯಾಗಿದೆ. ಇದರಿಂದ ನಮ್ಮ ಕೈಗಾರಿಕೆಗಳ ಉತ್ಪಾದನೆಯೂ ಜಾಸ್ತಿಯಾಗಿದೆ ಎಂದು ಹೇಳಲಾಗಿದೆ. ಒಟ್ಟಿನಲ್ಲಿ ಮುಕ್ತ ವ್ಯಾಪಾರ ನೀತಿ, ರಫ್ತು ಮತ್ತು ಆರ್ಥಿಕ ಬೆಳವಣಿಗೆಗೆ ಸಾಗಿದೆ ಎಂದು ಹೇಳಬಹುದು.

೨೦೦೧-೦೨ರಲ್ಲಿ ರಫ್ತು ಬೆಳೆಯುವ ವೇಗ ಶೇ. ೧.೬ರಷ್ಟು ಕಡಿಮೆಯಾಯಿತು. ಇದಕ್ಕೆ ಸ್ವದೇಶದಲ್ಲಿ ಅಡಚಣೆಗಳೇ ಕಾರಣವಾಗಿವೆ. ಉದಾ: ಮೂಲಭೂತ ಸೌಕರ್ಯಗಳ ಕೊರತೆ, ಸಣ್ಣ ಕೈಗಾರಿಕೆಗಳಿಗೆ ಕೊಟ್ಟಿದ್ದ ರಕ್ಷಣೆ, ಕಟ್ಟು ನಿಟ್ಟಿನ ಕಾರ್ಮಿಕ ಕಾನೂನುಗಳು, ಸ್ವದೇಶಿ ಕೈಗಾರಿಕೆಗಳಲ್ಲಿ ವಿದೇಶೀ ಬಂಡವಾಳದ ಕೊರತೆ ಮತ್ತು ಸ್ವದೇಶಿ ಕೈಗಾರಿಕೆಗಳ ವಿಧಾನ ಬೆಳವಣಿಗೆ.

೨೦೦೧-೦೨ರಲ್ಲಿ ಡಾಲರ್ ಮೌಲ್ಯದಲ್ಲಿ ಆಮದೂ ಕೂಡ ಹಿಂದಿನ ವರ್ಷಕ್ಕಿಂತ ಶೇ. ೧.೭ರಷ್ಟು ಕಡಿಮೆ ಇದ್ದಿತು. ಅಂತರ ರಾಷ್ಟ್ರೀಯ ಕಚ್ಚಾ ತೈಲದ ಬೆಲೆ ಕಡಿಮೆಯಾಗಿ ಇದಕ್ಕಾಗಿ ತಗುಲುವ ಆಮದು ವೆಚ್ಚ ೧೦.೫ ರಷ್ಟು ಕಡಿಮೆಯಾಯಿತು. ಈ ವರ್ಷದಲ್ಲಿ ಚಿನ್ನ ಮತ್ತು ಬೆಳ್ಳಿಯ ಆಮದೂ ಕೂಡ ಕಡಿಮೆಯಾಯಿತು. ಈ ವರ್ಷ ಬಿಟ್ಟರೆ ಪ್ರತಿ ವರ್ಷವೂ ರಫ್ತು ಮತ್ತು ಆಮದು ಹುರುಪಿನಿಂದ ಬೆಳೆಯುವುದನ್ನು ಕಾಣುತ್ತೇವೆ. ಇದಕ್ಕೆ ರಫ್ತಾಗುವ ಪ್ರಮಾಣದ ಬೆಳವಣಿಗೆಯೂ ಕಾರಣವಾಗಿದೆ.

### ಸಮಗ್ರ ರಾಷ್ಟ್ರೀಯ ಉತ್ಪನ್ನದ ಶೇಕಡ ರಫ್ತು ಆಮದು

| | ೧೯೯೦ ೯೧ | ೧೯೯೮ ೯೯ | ೧೯೯೯ ೦೦ | ೨೦೦೦ ೦೧ | ೨೦೦೧ ೦೨ | ೨೦೦೨ ೦೩ | ೨೦೦೩ ೦೪ |
|---|---|---|---|---|---|---|---|
| ರಫ್ತು | ೫.೮ | ೮.೩ | ೮.೪ | ೯.೯ | ೯.೪ | ೧೦.೬ | ೧೦.೮ |
| ಆಮದು | ೮.೮ | ೧೧.೫ | ೧೨.೪ | ೧೨.೭ | ೧೧.೮ | ೧೨.೭ | ೧೩.೩ |

೨೦೦೪-೦೯ರ ಹೊಸ ವಿದೇಶಿ ವ್ಯಾಪಾರ ನೀತಿ, ಪ್ರತಿ ವರ್ಷ ರಫ್ತು ಶೇ.೨೦ರಷ್ಟು ಬೆಳೆಯುವ ಗುರಿ ಹೊಂದಿದೆ. ೨೦೦೯ರ ವೇಳೆಗೆ ವಿಶ್ವ ರಫ್ತು ವ್ಯಾಪಾರದಲ್ಲಿ ಇಂಡಿಯಾದೇಶದ ಪಾಲು ಶೇ.೧.೫ ಆಗಿ, ಈಗಿರುವುದಕ್ಕಿಂತ ಎರಡು ರಷ್ಟು ಜಾಸ್ತಿಯಾಗುವ ನಿರೀಕ್ಷೆ ಇದೆ.

ವಿಶ್ವ ಆರ್ಥಿಕ ಬೆಳವಣಿಗೆಯಿಂದಾಗಿ ಬೇಡಿಕೆ ಜಾಸ್ತಿಯಾಗಿ ರಫ್ತು ಬೆಳೆಯುತ್ತಿದೆ. ಸ್ವದೇಶಿ ಕೈಗಾರಿಕೆಗಳು ಸಾಕಷ್ಟು ಪ್ರಬಲವಾಗಿ ಬೆಳೆದಿವೆ. ರಫ್ತು ಉತ್ತೇಜನ ಕ್ರಮಗಳು, ರಫ್ತು ದಿಕ್ಕಿನ ಬದಲಾವಣೆ, ನಮ್ಮ ಕೈಗಾರಿಕೆಗಳ ಸ್ಪರ್ಧಾತ್ಮಕ ಶಕ್ತಿ ಬೆಳವಣಿಗೆ, ಈ ಎಲ್ಲಾ ಅಂಶಗಳು ನಮ್ಮ ರಫ್ತು ಮೌಲ್ಯ ಜಾಸ್ತಿಯಾಗಲು ಕಾರಣವಾಗಿದೆ. ಚಾಲ್ತಿ ವರ್ಷದಲ್ಲಿ, ಪ್ರಪಂಚದ ಸರಕುಗಳ ರಫ್ತು ವ್ಯಾಪಾರದಲ್ಲಿ ಇಂಡಿಯಾ ದೇಶವು ೩೧ನೇ ಸ್ಥಾನವನ್ನು ಆಮದು ಮಾಡಿಕೊಳ್ಳುವುದರಲ್ಲಿ ೨೪ನೇ ಸ್ಥಾನವನ್ನು ಪಡೆದುಕೊಂಡಿದೆ.

೨೦೦೩-೦೪ರಲ್ಲಿ ಆಮದು ಮೌಲ್ಯ, ರಫ್ತು ಮೌಲ್ಯಕ್ಕಿಂತ ಜಾಸ್ತಿಯಾಗಿದೆ. ಇದಕ್ಕೆ ಅನೇಕ ಕಾರಣಗಳಿವೆ. ಕಡಿಮೆಯಾಗುತ್ತಿರುವ ಸುಂಕಗಳು, ಅಗ್ಗದ ಡಾಲರ್, ಪುನಶ್ಚೇತನ ಗೊಂಡ ನಮ್ಮ ಆರ್ಥಿಕ ವ್ಯವಸ್ಥೆ, ಏರುತ್ತಿರುವ ಕಚ್ಚಾ ತೈಲದ ಬೆಲೆ, ಇತರ ಸರಕುಗಳನ್ನು ಆಮದು ಮಾಡಿಕೊಳ್ಳುವ ಸಾಮರ್ಥ್ಯದ ಬೆಳವಣಿಗೆ, ಚಿನ್ನ ಮತ್ತು ಬೆಳ್ಳಿ ಆಮದಿನ ಹೆಚ್ಚಳ ಇವುಗಳೇ ಆಗಿವೆ. ಸರಕುಗಳ ಆಮದು ರಫ್ತಿಗಿಂತ ಜಾಸ್ತಿ ಇರುವುದರಿಂದ ವ್ಯಾಪಾರದ ಶಿಲ್ಕಿನಲ್ಲಿ ಯಾವಾಗಲೂ ಕೊರತೆ ಕಂಡುಬರುತ್ತಾ ಇದೆ. ಆದರೆ ಇತ್ತೀಚಿನ ವರ್ಷಗಳಲ್ಲಿ ಸೇವೆಗಳ ರಫ್ತು ಜಾಸ್ತಿಯಾಗಿ ಚಾಲ್ತಿ ಪಾವತಿ ಶಿಲ್ಕಿನಲ್ಲಿ ಅನುಕೂಲಕರ ಪರಿಸ್ಥಿತಿ ಕಾಣುತ್ತಿದ್ದೇವೆ.

೧೯೮೦ರ ದರದಲ್ಲಿ ಸಮಗ್ರ ರಾಷ್ಟ್ರೀಯ ಉತ್ಪನ್ನದ ಶೇ.೪.೬, ರಫ್ತು ಮೌಲ್ಯವಾಗಿದ್ದಿತು ಮತ್ತು ಆಮದು ಶೇ.೭.೨ ಆಗಿದ್ದಿತು. ೯೦ರ ದಶಕದಲ್ಲಿ ಸಮಗ್ರ ರಾಷ್ಟ್ರೀಯ ಉತ್ಪನ್ನದ ಶೇ. ೭.೮ ಮತ್ತು ಆಮದು ಶೇ. ೯.೩ ಆಗಿದ್ದಿತು. ೨೦೦೩-೦೪ರಲ್ಲಿ ಮತ್ತು ರಫ್ತು ಮೌಲ್ಯ ಸಮಗ್ರ ರಾಷ್ಟ್ರೀಯ ಉತ್ಪಾದನೆ ಮೌಲ್ಯದ ಶೇ.೧೦.೮ ಮತ್ತು ಆಮದು ಶೇ.೧೩.೩ ಆಗಿದ್ದಿತು.

### ವ್ಯಾಪಾರ ಶಿಲ್ಕಿನ ಕೊರತೆಗೆ ಕಾರಣಗಳು

ಅಂತರ ರಾಷ್ಟ್ರೀಯ ವ್ಯಾಪಾರ ಬೆಳೆಯ ತೊಡಗಿದ ಮೇಲೆ ರಾಷ್ಟ್ರಗಳ ಪರಸ್ಪರ ಅವಲಂಬನೆ ಜಾಸ್ತಿಯಾಗಿದೆ. ಕೈಗಾರಿಕಾ ಕ್ರಾಂತಿಯಾದ ಮೇಲೆ ಸಾಗಣೆ ಕ್ಷೇತ್ರದಲ್ಲಿ ಮತ್ತು ಕೈಗಾರಿಕಾ ಕ್ಷೇತ್ರದಲ್ಲಿ ಮಹತ್ತರ ಬದಲಾವಣೆಗಳಾಗಿ ರಾಷ್ಟ್ರಗಳ ನಡುವೆ ವ್ಯಾಪಾರ ಜಾಸ್ತಿಯಾಯಿತು. ಪ್ರತಿದಿನ ನಾವು ಬಳಸುವ ಅನೇಕ ಸಾಮಗ್ರಿಗಳು ವಿದೇಶದಲ್ಲಿ ಉತ್ಪಾದನೆಯಾಗಿ ನಮ್ಮ ದೇಶಕ್ಕೆ ಆಮದು ಆಗುತ್ತವೆ. ಉದಾ. ನಾವು ತೊಡುವ ಪಾದರಕ್ಷೆ, ಬರೆಯುವ ಲೇಖನಿ, ಟೆಲಿವಿಷನ್, ಚಾಕೋಲೇಟ್, ಕಾರುಗಳು, ಬ್ಲೇಡು, ಟೂತ್‌ಪೇಸ್ಟ್, ಸಾಬೂನು ಇತ್ಯಾದಿ. ಯಾವ ರಾಷ್ಟ್ರವೂ ಈಗ ಸ್ವಪರಿಪೂರ್ಣವಾಗಿರುವದಿಲ್ಲ. ಶ್ರೀಮಂತ ರಾಷ್ಟ್ರಗಳು, ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳು, ದೊಡ್ಡ ರಾಷ್ಟ್ರಗಳು, ಸಣ್ಣ ರಾಷ್ಟ್ರಗಳು ಎಲ್ಲವೂ ಅಂತರಾಷ್ಟ್ರೀಯ ವ್ಯಾಪಾರದಲ್ಲಿ ಭಾಗವಹಿಸಿ ಇದರಿಂದ ಅನುಕೂಲಗಳನ್ನು ಪಡೆಯುತ್ತವೆ. ಉತ್ಪಾದನಾ ಮಟ್ಟದಲ್ಲಿ ಇರುವ ವ್ಯತ್ಯಾಸದ ಆಧಾರದ ಮೇಲೆ ವಿದೇಶ ವ್ಯಾಪಾರ ಜರುಗುತ್ತದೆ. ಉತ್ಪಾದಕಾ ವೆಚ್ಚ ವ್ಯತ್ಯಾಸವಾಗುವುದಕ್ಕೆ ಒಂದು ರಾಷ್ಟ್ರದಲ್ಲಿ ದೊರೆಯುವ ಉತ್ಪಾದನಾ ಅಂಗಗಳ ಲಭ್ಯತೆಯೇ ಕಾರಣವಾಗಿದೆ. ಹೇರಳವಾಗಿ ದೊರುಯವ ಉತ್ಪಾದನಾಂಗಗಳನ್ನು ಉಪಯೋಗಿಸಿ ಕಡಿಮೆ ವೆಚ್ಚದಲ್ಲಿ ಸರಕುಗಳನ್ನು ತಯಾರಿಸಿ ಅವುಗಳನ್ನು ಕಡಿಮೆ ಬೆಲೆಯಲ್ಲಿ ವಿದೇಶದಲ್ಲಿ ಮಾರಾಟಮಾಡಲು ಸಾಧ್ಯವಾಗುತ್ತದೆ. ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳಲ್ಲಿ ಕೆಲವೇ ಉತ್ಪಾದನಾಂಗಗಳು ಹೇರಳವಾಗಿದ್ದರೂ, ಅವುಗಳ ಉತ್ಪಾದಕತೆ ಜಾಸ್ತಿಯಾಗುತ್ತದೆ. ಹೊಸ ಯಂತ್ರಗಳ ಬಳಕೆ, ಹೊಸ ಮಾದರಿ ಉತ್ಪಾದನಾ ವ್ಯವಸ್ಥೆ, ಉದ್ಯಮ ಸಾಹಸಿಗಳ ಇರುವಿಕೆ, ಬಂಡವಾಳ ಇವುಗಳೆಲ್ಲಾ ಇದ್ದು ದೊಡ್ಡ ಪ್ರಮಾಣದಲ್ಲಿ ಮತ್ತು ಕಡಿಮೆ ವೆಚ್ಚದಲ್ಲಿ ಉತ್ಪಾದನೆ ಕೈಗೊಂಡು ವಿದೇಶಿಗಳಿಗೆ ರಫ್ತು ಮಾಡುತ್ತವೆ.

ನಮ್ಮ ರಾಷ್ಟ್ರ ಅಭಿವೃದ್ಧಿ ಹೊಂದುತ್ತಿರುವ ಘಟ್ಟದಲ್ಲಿದೆ. ಕೈಗಾರಿಕಾ ಕ್ರಾಂತಿಯ ಫಲವನ್ನು ಕೇವಲ ಕಳೆದ ಶತಮಾನದಿಂದ ಅನುಭವಿಸತೊಡಗಿದ್ದೇವೆ. ಶ್ರಮಗಾರರ ಸಂಖ್ಯೆ ಜಾಸ್ತಿ ಇದ್ದರೂ ಇವರನ್ನು ಸರಿಯಾಗಿ ಉಪಯೋಗಿಸಿ ಉತ್ಪಾದನೆ ಹೆಚ್ಚಿಸಲು ಸಾಧ್ಯವಾಗಿಲ್ಲ, ಕೈಗಾರಿಕಾ ಕ್ಷೇತ್ರದಲ್ಲಿ ಅಭಿವೃದ್ಧಿ ಸಾಧಿಸುತ್ತಿದ್ದರೂ ವಿದೇಶಿಯೊಡನೆ ಪೈಪೋಟಿ ಮಾಡುವ ಸಾಮಾರ್ಥ್ಯ ಇನ್ನೂ ಬೆಳಸಿಕೊಳ್ಳಬೇಕಾಗಿದೆ. ಉತ್ಪಾದನಾ ದಕ್ಷತೆ ಇನ್ನೂ ನಾವು ಸಾಧಿಸ ಬೇಕಾಗಿದೆ. ವಿಶ್ವ ವ್ಯಾಪಾರ ಸಂಸ್ಥೆಯು ೧೯೯೫ರಲ್ಲಿ ಸ್ಥಾಪನೆಯಾದರೂ, ಮುಂದುವರೆದ ರಾಷ್ಟ್ರಗಳು ಅನುಸರಿಸುತ್ತಿರುವ ರಕ್ಷಣಾ ನೀತಿಯಿಂದ ನಾವು ಹೆಚ್ಚಿಗೆ ರಫ್ತು ಮಾಡಲು ಸಾಧ್ಯವಾಗುತ್ತಿಲ್ಲ. ರಫ್ತು ಮಾಡಲು ನಮ್ಮ ಅವಶ್ಯಕತೆಗಿಂತ ಜಾಸ್ತಿ ಉತ್ಪಾದನೆ ಮಾಡಬೇಕು. ವಿದೇಶಿ ವಿನಿಮಯ ದರದ ಸ್ಥಿರತೆಯೂ ಅಂತರ ರಾಷ್ಟ್ರೀಯ ವ್ಯಾಪಾರಕ್ಕೆ ಅಗತ್ಯವಾಗಿದೆ. ದೇಶದ ಒಳಗೆ ಮೂಲಭೂತ ಸೌಕರ್ಯಗಳು (ಬ್ಯಾಂಕುಸೇವೆ, ಸಾರಿಗೆ) ಜಾಸ್ತಿಯಾದರೆ ಉತ್ಪಾದನೆ ಜಾಸ್ತಿಯಾಗಿ ರಫ್ತು ಜಾಸ್ತಿಮಾಡಬಹುದು.

ಸ್ವಾತಂತ್ರ್ಯ ಬಂದಮೇಲೆ ರಫ್ತು ಹೆಚ್ಚಿಸಲು ಅನೇಕ ಉತ್ತೇಜನ ಕ್ರಮಗಳನ್ನು ಸರ್ಕಾರ ಕೈಗೊಂಡಿದೆ. ರಫ್ತು ಉತ್ತೇಜನ ಮಂಡಲಿ, ವ್ಯಾಪಾರದ ಸಮಿತಿ, ಸರ್ಕಾರ ವ್ಯಾಪಾರಸಂಸ್ಥೆ, ರಫ್ತು ಉತ್ತೇಜನ ಬಂಡವಾಳ ಸರಕು ವ್ಯವಸ್ಥೆ, ಕೃಷಿ ರಫ್ತು ವಲಯ, ಉದಾರ ಉದ್ಧರಿ ಸೌಕರ್ಯ, ರಫ್ತುದಾರರಿಗೆ ನಗದು ಹಣ ಪ್ರೋತ್ಸಾಹ, ರಫ್ತುದಾರರಿಗೆ ತೆರಿಗೆ ವಿನಾಯಿತಿ, ವಿಶೇಷ ಆರ್ಥಿಕ ವಲಯಗಳು, ಆಮದು ನಿರ್ಬಂಧಗಳು, ಸಾಫ್ಟ್‌ವೇರ್ ಟೆಕ್ನಾಲಜಿ ಪಾರ್ಕ್, ಬೈಯೋ ಟೆಕ್ನಾಲಜಿ ಪಾರ್ಕ್, ರಫ್ತು ಉತ್ತೇಜನ ವಲಯ ಇದೇ ಆಮೇಲೆ ಮುಕ್ತ ವ್ಯಾಪಾರ ವಲಯ - ಇವುಗಳನ್ನೆಲ್ಲಾ ಸ್ಥಾಪಿಸಿ ರಫ್ತಿಗೆ ಪ್ರೋತ್ಸಾಹಗೊಡಲಾಗಿದೆ.

ಸರ್ಕಾರ ಇಂತಹ ಕ್ರಮಗಳ್ನು ಕೈಗೊಂಡು ರಫ್ತಿಗೆ ಪ್ರೋತ್ಸಾಹವನ್ನು ಕೊಡುತ್ತಾ ಬಂದಿದೆ. ಆದರೆ ಆಮದು ಮೌಲ್ಯ ರಫ್ತು ಮೌಲ್ಯಕ್ಕಿಂತ ಜಾಸ್ತಿಯಾಗಿ ಪ್ರತಿವರ್ಷವೂ ವ್ಯಾಪಾರ ಶಿಲ್ಕಿನಲ್ಲಿ ಕೊರತೆ ಕಂಡುಬರುತ್ತಿದೆ. ೧೯೯೧ರಿಂದ ಉದಾರೀಕರಣ ನೀತಿಯನ್ನು ಅನುಸರಿಸುತ್ತಿರುವುದರಿಂದ ನಾವು ಅಂತರಾಷ್ಟ್ರೀಯ ಮಾರುಕಟ್ಟೆಯಲ್ಲಿ ಸ್ಪರ್ಧೆಗಳನ್ನು ಎದುರಿಸುವ ಸಾಮರ್ಥ್ಯವನ್ನು ಬಳಸಿಕೊಳ್ಳಬೇಕಾಗಿದೆ.

### ವಿದೇಶೀ ವ್ಯಾಪಾರದಲ್ಲಿ ಸೇವೆಗಳ ಪಾತ್ರ

೨೦೦೦ ಮತ್ತು ೨೦೦೩ರ ವರಿಗೆ ವಿಶ್ವ ವ್ಯಾಪಾರದಲ್ಲಿ ವಾಣಿಜ್ಯ ಸೇವೆಗಳ ವ್ಯಾಪಾರ (೭%) ಸರಕುಗಳ ವ್ಯಾಪಾರಕ್ಕಿಂತ (೫%) ಹೆಚ್ಚಿನ ವೇಗದಲ್ಲಿ ಬೆಳೆಯಿತು. ನಮ್ಮ ದೇಶದ ಒಟ್ಟು ರಫ್ತಿನ ಮೌಲ್ಯದಲ್ಲಿ ಶೇ.೩೧ರಷ್ಟು ಸೇವೆಗಳ ವ್ಯಾಪಾರವನ್ನು ಒಳಗೊಂಡಿದೆ. ನಮ್ಮ ಒಟ್ಟು ಸ್ವದೇಶಿ ಉತ್ಪಾದನೆಯಲ್ಲಿ ಸೇವೆಗಳ ಭಾಗ ಶೇ.೫೧ ಆಗಿದೆ. (GDP) ಮತ್ತು Software telecom ಸೇವೆಗಳ ರಫ್ತು ಇತ್ತೀಚಿನ ವರ್ಷಗಳಲ್ಲಿ ಜಾಸ್ತಿಯಾಗಿದೆ. ೧೯೯೭-೯೮ರಲ್ಲಿ ಸೇವೆಗಳ ವ್ಯಾಪಾರದಿಂದ ಬಂದ ನಿವ್ವಳ ಆದಾಯ ರೂ.೩೬,೯೨೨ ಕೋಟಿಗಳಾಗಿದ್ದಿತು. ೨೦೦೩-೦೪ರಲ್ಲಿ ಇದರ ಮೊತ್ತ ರೂ.೧,೧೯,೨೦೭ ಕೋಟಿಗಳಾಗಿದ್ದಿತು.

### ರಫ್ತು ಸರಕುಗಳ ಸಂಯೋಜನೆ

ಸ್ವಾತಂತ್ರ್ಯಪೂರ್ವದಲ್ಲಿ ನಾವು ಕಚ್ಚಾ ಪದಾರ್ಥಗಳನ್ನು ಮಾತ್ರ ಆಹಾರ ಪದಾರ್ಥಗಳನ್ನು ಹೆಚ್ಚಿನ ಪ್ರಮಾಣದಲ್ಲಿ ರಫ್ತು ಮಾಡುತ್ತಿದ್ದೆವು. (ಒಟ್ಟು ರಫ್ತಿನ ಶೇ. ೪೫) ರಫ್ತಿನಲ್ಲಿ ಕೈಗಾರಿಕಾ ಸರಕುಗಳ ಭಾಗ ಶೇ.೩೦ರಷ್ಟು ಇದ್ದಿತು. ಆದರೆ ಸ್ವಾತಂತ್ರ್ಯ ತಂದಮೇಲೆ, ಪಂಚವಾರ್ಷಿಕ ಯೋಜನೆಗಳನ್ನು ರೂಪಿಸಿ ಅಭಿವೃದ್ಧಿ ಕಾರ್ಯ ಕ್ರಮಗಳನ್ನು ಅನುಷ್ಠಾನಕ್ಕೆ ಬಂದಮೇಲೆ ರಫ್ತು ಸರಕುಗಳ ಸಂಯೋಜದಲ್ಲಿ ಗಣನೀಯ ಬದಲಾವಣೆಗಳಾಗಿವೆ. ಕ್ರಮೇಣವಾಗಿ ಕೈಗಾರಿಕಾ ಉತ್ಪಾದನೆಗಳ ರಫ್ತು ಭಾಗ ಜಾಸ್ತಿಯಾಗಿ ಕಚ್ಚಾ ಪದಾರ್ಥ ಮತ್ತು ಆಹಾರಧಾನ್ಯಗಳ ರಫ್ತು ಕಡಿಮೆಯಾಗುತ್ತಾ ಬಂದಿದೆ.

| ರಫ್ತು ಮಾಡಿದ ಸರಕುಗಳು | ರಫ್ತಿನಲ್ಲಿ ಶೇಕಡ ಭಾಗ ೨೦೦೨-೨೦೦೩ | ೨೦೦೩-೦೪ | April-Oct ೨೦೦೪-೦೫ |
|---|---|---|---|
| I. ಪ್ರಾಥಮಿಕ ಸರಕುಗಳು | ೧೬.೬ | ೧೫.೫ | ೧೪.೨ |
| ೧. ಕೃಷಿ ಕ್ಷೇತ್ರದ ಸರಕುಗಳು | ೧೨.೮ | ೧೧.೮ | ೧೧.೦ |
| ೨. ಗಣಿ ಉತ್ಪಾದನೆಗಳು | ೩.೮ | ೩.೭ | ೩.೨ |
| II. ಕೈಗಾರಿಕಾ ಕ್ಷೇತ್ರದ ಸರಕುಗಳು | ೭೬.೬ | ೭೬.೦ | ೭೭.೪ |
| ೧. ಹತ್ತಿ ಬಟ್ಟೆ | ೨೧.೦ | ೧೯.೦ | ೧೯.೦ |
| ೨. ರತ್ನ ಮತ್ತು ಒಡವೆ | ೧೭.೨ | ೧೬.೬ | ೧೮.೫ |
| ೩. ಯಂತ್ರಶಿಲ್ಪ ಸರಕುಗಳು | ೧೭.೨ | ೧೯.೪ | ೧೯.೦ |
| ೪. ರಾಸಾಯನಿಕ ಸರಕುಗಳು | ೧೪.೨ | ೧೪.೮ | ೧೪.೬ |
| ೫. ಚರ್ಮದ ಸರಕುಗಳು | ೩.೫ | ೩.೪ | ೩.೫ |
| III. ಕಚ್ಚಾ ಪೆಟ್ರೋಲಿಯಂ | ೪.೯ | ೫.೬ | ೫.೯ |
| ೧. ಸರಕುಗಳು | | | |
| IV. ಇತರೆ | ೧.೯ | ೨.೯ | ೨.೬ |

ಮೂಲ : ಆರ್ಥಿಕ ಸಮೀಕ್ಷೆ ೨೦೦೪-೦೫

ರಫ್ತು ಸರಕುಗಳ ಸಂಯೋಜನ ನಮ್ಮ ಆರ್ಥಿಕ ಬೆಳವಣಿಗೆಯನ್ನು ಸೂಚಿಸುತ್ತದೆ. ಪ್ರಾಥಮಿಕ ಸರಕುಗಳ ಒಟ್ಟು ರಫ್ತಿನಲ್ಲಿ ಕೇವಲ ಶೇ. ೧೫ ಆಗಿದ್ದು, ಕೈಗಾರಿಕಾ ಸರಕುಗಳ ಭಾಗ ಶೇ.೭೬ಕ್ಕೆ ಜಾಸ್ತಿಯಾಗಿರುವುದು ಕಂಡುಬರುತ್ತದೆ.

### ರಫ್ತು ಸೇರಿದ ಮುಖ್ಯವಾದ ದೇಶಗಳು ಮತ್ತು ವಿಶ್ವದ ಭಾಗಗಳು

೧೯೪೭ಕ್ಕು ಮುಂಚೆ ನಮ್ಮ ವಿದೇಶಿ ವ್ಯಾಪಾರ ಹೆಚ್ಚಿನ ಪ್ರಮಾಣದಲ್ಲಿ ಬ್ರಿಟನ್ ದೇಶದೊಡನೆ ಸಾಗುತ್ತಿತ್ತು ಒಟ್ಟು ರಫ್ತಿನ ಶೇ.೩೪ ಬ್ರಿಟನ್‌ಗೆ ಮತ್ತು ನಮ್ಮ ಒಟ್ಟು ಆಮದಿನ ಶೇ.೩೧ರಷ್ಟು ಬ್ರಿಟನ್‌ನಿಂದ ಆಗುತ್ತಿತ್ತು. ಆದರೆ ಸ್ವಾತಂತ್ರ್ಯ ಬಂದ ಮೇಲೆ ನಮ್ಮ ವಿದೇಶಿ ವ್ಯಾಪಾರ ಪ್ರಪಂಚದ ಅನೇಕ ದೇಶಗಳೊಡನೆ ಜರುಗುತ್ತಾ ಬಂದಿದೆ. ನಮ್ಮ ರಫ್ತು ಈಗ ಹೆಚ್ಚಿನ ಪ್ರಮಾಣದಲ್ಲಿ ಅಮೆರಿಕಾಕ್ಕೆ ಹೋಗುತ್ತಿದೆ. ಈ ಕೆಳಗಿನ ಪಟ್ಟಿ ವಿವಿಧ ದೇಶಗಳೊಡನೆ ನಮ್ಮ ವಿದೇಶಿ ವ್ಯಾಪಾರ ಹೇಗೆ ಸಾಗುತ್ತಿದೆ ಎಂಬುದನ್ನು ತಿಳಿಸುತ್ತದೆ.

## ವ್ಯಾಪಾರದ ದಿಕ್ಕು (ಕೋಟಿ ರೂ.ಗಳಲ್ಲಿ)

| ಪ್ರದೇಶ | ರಫ್ತು ಶೇ. | ಆಮದು ಶೇ. | ರಫ್ತು ಶೇ. | ಆಮದು ಶೇ. | ರಫ್ತು ಶೇ. | ಆಮದು ಶೇ. |
|---|---|---|---|---|---|---|
| ಓ.ಈ.ಸಿ.ಡಿ. | ೧೭೪೨೮ (೫೩.೫) | ೨೩,೩೧೦ (೫೪.೦) | ೧,೦೭,೨೩೮ (೫೨.೭) | ೯೨,೦೯೨ (೩೯.೯) | ೧,೩೬,೧೫೧ (೪೬.೪) | ೧,೩೫,೮೮೯ (೩೭.೮) |
| ಯುರೋಪಿಯನ್ ಒಕ್ಕೂಟ | ೮೯೫೧ (೨೭.೫) | ೧೨,೬೮೦ (೨೯.೪) | ೪೬,೧೨೦ (೨೨.೭) | ೪೫.೬೬೩ (೧೯.೮) | ೬೧,೮೧೬ (೨೧.೧) | ೬೨,೨೪೮ (೧೭.೩) |
| ಬ್ರಿಟನ್ | ೨೧೨೮ (೬.೫) | ೨೮೯೪ (೬.೭) | ೧೦,೫೦೨ (೫.೨) | ೧೪,೪೭೨ (೬.೩) | ೧೩೮೯೨ (೪.೭) | ೧೪,೮೬೨ (೪.೧) |
| ಯು.ಎಸ್.ಎ. | ೪೭೯೭ (೧೪.೭) | ೫೨೪೫ (೧.೧) | ೪೨,೫೧೦ (೨೦.೯) | ೧೩,೭೭೪ (೬.೦) | ೫೨೭೯೮ (೧೮.೦) | ೨೩,೧೩೬ (೬.೪) |
| ಜಪಾನ್ | ೩೦೩೯ (೯೩) | ೩೨೪೫ (೭.೫) | ೮,೧೯೮ (೪.೦) | ೮೪೧೬ (೩.೬) | ೭೮೫೪ (೨.೭) | ೧೨,೨೫೮ (೩.೪) |
| ಓ.ಪಿ.ಈ.ಸಿ. | ೧೮೩೧ (೫.೬) | ೭೦೪೧ (೧೬.೩) | ೨೨,೨೨೩ (೧೦.೯) | ೧೨೩೮೫ (೫.೪) | ೪೩,೯೭೧ (೧೫.೦) | ೨೫,೯೦೫ (೭.೨) |
| ಪೂರ್ವ ಯುರೋಪ್ | ೫೮೧೯ (೧೭.೯) | ೩೩೭೭ (೭.೮) | ೪೯೬೪ (೨.೪) | ೨೯೬೮ (೧.೩) | ೫೧೩೬ (೧.೮) | ೫೬೭೩ (೧.೬) |
| ಹಿಂದುಳಿದಿರುವ ರಾಷ್ಟ್ರಗಳು | ೫೪_೫ (೧೬.೮) | ೭೯೬೫ (೧೮.೪) | ೫೪,೨೮೨ (೨೬.೭) | ೪೦,೩೪೭ (೧೭.೫) | ೯೫,೬೭೪ (೩೨.೬) | ೭೨,೦೩೭ (೨೦.೧) |
| ಇತರೆ | ೮೦೧೦ (_.೨) | ೧೫೦೫ (೩.೫) | ೧೪,೮೬೪ (೭.೩) | ೮೩,೦೮೦ (೩೬.೦) | ೧೨,೪೩೫ (೪.೨) | ೧,೧೯,೬೦೪ (೩೩.೩) |
| ಒಟ್ಟು | ೩೨,೫೫೩ | ೪೩,೧೯೮ | ೨೦,೩೫೭೧ | ೨,೩೦,೮೭೩ | ೨,೯೩,೩೬೭ | ೩,೫೯,೧೦೮ |

ಮೂಲ: ಆರ್ಥಿಕ ಸಮೀಕ್ಷೆ, ೨೦೦೫

OECD: Organization for economic co-operation and development

OPEC: Organization of petrolium exporting countries.

೨೦೦೩-೦೪ರಲ್ಲಿ ಅಭಿವೃದ್ಧಿ ಹೊಂದಿರುವ ಒಈಸಿಡಿ ರಾಷ್ಟ್ರಗಳಿಗೆ ನಮ್ಮ ರಫ್ತಿನ ಶೇ.೪೬.೪ ಭಾಗ ತಲುಪಿದೆ. ಹಾಗೆಯೇ ನಮ್ಮ ಆಮದಿನ ಶೇ.೩೭.೮ ಭಾಗ ಆ ರಾಷ್ಟ್ರಗಳಿಂದ ಬಂದಿದೆ. ಪ್ರತ್ಯೇಕ ರಾಷ್ಟ್ರಗಳನ್ನು ತೆಗೆದುಕೊಂಡರೆ ನಮ್ಮ ವ್ಯಾಪಾರ ಅಮೇರಿಕಾದೊಡನೆ ಹೆಚ್ಚಿನ ಪ್ರಮಾಣದಲ್ಲಿ ಜರುಗುತ್ತಿದೆ. ೨೦೦೩-೦೪ರಲ್ಲಿ ಅಭಿವೃದ್ಧಿ ಶೀಲ ರಾಷ್ಟ್ರಗಳಿಗೆ ನಮ್ಮ ರಫ್ತಿನ ಶೇ. ೩೨.೬ರಷ್ಟು ಭಾಗ ತಲುಪಿದೆ. ನಮ್ಮ ಆಮದಿನ ಶೇ.೨೦ ಭಾಗ ಈ ರಾಷ್ಟ್ರಗಳಿಂದ ಬಂದಿದೆ. ಕೆಳಗೆ ಹಲವು ವರ್ಷಗಳಿಂದ ನಮ್ಮ ವ್ಯಾಪಾರ ಅಭಿವೃದ್ಧಿ ಶೀಲ ರಾಷ್ಟ್ರಗಳೊಡನೆ ಜಾಸ್ತಿಯಾಗುತ್ತದೆ.

## ಶ್ರೀಮಂತ ಮತ್ತು ಅಭಿವೃದ್ಧಿಶೀಲ ರಾಷ್ಟ್ರಗಳ ನಡುವೆ ದೊಡ್ಡ ಪ್ರಮಾಣದ ವ್ಯಾಪಾರಕ್ಕೆ ಕಾರಣಗಳು

ಈ ಮೇಲೆ ತಿಳಿಸಿದ ಪರಿಸ್ಥಿತಿಗೆ ರಿಕಾರ್ಡೋರವರ ಸಾಪೇಕ್ಷ ಅನುಕೂಲ ಸಿದ್ಧಾಂತವೇ (Principles of Political economy and Taxation 1817) ಕಾರಣವಾಗಿದೆ. ಒಂದು ರಾಷ್ಟ್ರ ಇನ್ನೊಂದು ರಾಷ್ಟ್ರಗಳೊಡನೆ ಹೋಲಿಸಿದಾಗ ಎರಡು ಬಗೆಯ ಸರಕುಗಳನ್ನು ಉತ್ಪಾದಿಸಲು ಅನಾನುಕೂಲತೆಯನ್ನು ಪಡೆದಿದ್ದರೂ, ವಿದೇಶೀ ವ್ಯಾಪಾರದಲ್ಲಿ ಭಾಗವಹಿಸಿ ಪ್ರಯೋಜನ ಪಡೆಯಬಹುದು. ಈ ರಾಷ್ಟ್ರ ಯಾವ ಸರಕನ್ನು ಉತ್ಪಾದಿಸಲು ಕರಗುವ ನಿರಪೇಕ್ಷ ವೆಚ್ಚದ ಅನಾನುಕೂಲತೆ ಕಡಿಮೆ ಇದೆಯೋ ಅದನ್ನು ಉತ್ಪಾದಿಸಿ ರಫ್ತು ಮಾಡುವುದು ಮತ್ತು ಹೆಚ್ಚು ವೆಚ್ಚ ತಗಲುವ ಸರಕನ್ನು ವಿದೇಶದಿಂದ ಆಮದು ಮಾಡಿಕೊಳ್ಳುವುದು. ರಿಕಾರ್ಡೋರವರ ಸಾಪೇಕ್ಷ ವೆಚ್ಚವನ್ನು ಶ್ರಮದ ಮೂಲಕ ಅಳೆದರು. ಜೆ.ಎಸ್. ಮಿಲ್‌ರವರು ಸರಕುಗಳ ಉತ್ಪಾದನಾ ವೆಚ್ಚದ ಜೊತೆಗೆ ಪರಸ್ಪರ ಬೇಡಿಕೆ (Reciprocal demand) ಅಂತರರಾಷ್ಟ್ರೀಯ ವ್ಯಾಪಾರವನ್ನು ನಿರ್ಧರಿಸುತ್ತದೆ ಎಂದು ತಿಳಿಸಿದರು. ಮತ್ತು ಹಣದ ಮೂಲಕ ವೆಚ್ಚವನ್ನು ಅಳೆದರು. ೧೯೩೬ರಲ್ಲಿ ಹೆಬರ್ಲ್‌ರ್ (The theory of International trade) ವೆಚ್ಚವೆಂದರೆ ಸದವಕಾಶ ವೆಚ್ಚವೆಂದು ತಿಳಿಸಿದರು. ಪ್ರೊಫೆಸರ್ ಮಾರ್ಷಲ್ ಮತ್ತು ಎಡ್ಜವರ್ತ್‌ರವರು ಕೊಡುಗೆ ರೇಖೆ ಮೂಲಕ ಅಂತರಾಷ್ಟ್ರೀಯ ವ್ಯಾಪಾರವನ್ನು ವಿವರಿಸಿದರು. ೧೯೧೯ರಲ್ಲಿ ಸ್ವೀಡನ್‌ನ ಹೆಕ್ಸಚರ್‌ರವರು ಅಂತರಾಷ್ಟ್ರೀಯ ವ್ಯಾಪಾರದ ಬಗ್ಗೆ ಹೊಸ ತಿರುವನ್ನು ಕೊಟ್ಟರೂ ಅದನ್ನು ಯಾರು ಗಮನಿಸಲಿಲ್ಲ. ೧೯೩೩ರಲ್ಲಿ ಅವರ ಶಿಷ್ಯ ಬರ್ಟಿಲ್ ಓಹ್ಲಿನ್ ದೈವದತ್ತ ಸಂಪನ್ಮೂಲ ಸಿದ್ಧಾಂತ ಹೆಕ್ಸ್‌ಚ್‌ರವರ ಸಿದ್ಧಾಂತವನ್ನು ಆಧರಿಸಿದೆವೆಂಬುದನ್ನು ಪ್ರತಿಪಾದಿಸಿದರು. ಸಿದ್ಧಾಂತವು ೨ ರಾಷ್ಟ್ರಗಳ ಸಾಪೇಕ್ಷ ವೆಚ್ಚದಲ್ಲಿ ವ್ಯತ್ಯಾಸ ಉಂಟಾಗಲು ಪ್ರತಿ ರಾಷ್ಟ್ರದಲ್ಲಿರುವ ಉತ್ಪಾನದಾಂಗಗಳೇ ಕಾರಣ ಎಂದು ತಿಳಿಸಿದರು. ಮೇಲೆ ತಿಳಿಸಿದ ಎಲ್ಲಾ ಸಿದ್ಧಾಂತಗಳು ಬೇರೆ ಕೈಗಾರಿಕಾ ಸರಕುಗಳ ನಡುವೆ ಹೇಗೆ ಅಂತರಾಷ್ಟ್ರೀಯ ವ್ಯಾಪಾರ ಸಂಭವಿಸುತ್ತದೆ ಎಂಬುದನ್ನು ತಿಳಿಸುತ್ತವೆ. ಆದರೆ ಆಧುನಿಕ ಅಂತರಾಷ್ಟ್ರೀಯ ಸಿದ್ಧಾಂತ ಒಂದೇ ಕೈಗಾರಿಕಾ ಸರಕುಗಳು ಒಂದೇ ಕಾಲದಲ್ಲಿ ರಫ್ತು ಮತ್ತು ಆಮದು ಆಗುವುದನ್ನು

ವಿವರಿಸುತ್ತದೆ. ಇದನ್ನು ಒಂದೇ ಕೈಗಾರಿಕೆಯ ವೈವಿಧ್ಯತೆ ಹೊಂದಿರುವ ಸರಕುಗಳ ವ್ಯಾಪಾರ ಎಂದು ಕರೆಯುತ್ತಾರೆ.

ಈ ಹೊಸ ಸಿದ್ಧಾಂತವನ್ನು ಈ. ಹೆಲ್ಪ್‌ಮನ್ ಪಿ.ಆರ್. ಕ್ರುನ್‌ಮನ್, ಕೆ.ಲ್ಯಾಂಕಾಸ್ಟರ್ ಪ್ರತಿಪಾದಿಸಿದರು. ಈ ಪರ್ಯಾಯ ಸಿದ್ಧಾಂತವೂ ಕೂಡ ರಿಕಾರ್ಡೋರವರ ಸಾಪೇಕ್ಷ ಅನುಕೂಲ ಸಿದ್ಧಾಂತದ ತಳಹದಿಯ ಮೇಲೆ ರಚಿಸಲ್ಪಟ್ಟಿದೆ. ಬಹುಜನರ ಸ್ವಾಮ್ಯ ಇರುವಾದ ಒಂದೇ ಸರಕನ್ನು ಅನೇಕರು ಉತ್ಪಾದಿಸಿ ಅದರಲ್ಲಿ ವಿಭಿನ್ನತೆಯನ್ನು ತೋರಿಸುತ್ತಾರೆ. ಉದಾಹರಣೆಗೆ ಕಾರು ಒಂದೇ ಕೈಗಾರಿಕೆಯ ಸರಕಾಗಿದ್ದರೂ ಅದರಲ್ಲಿ ಉತ್ಪಾದಕರು ಭಿನ್ನತೆಯನ್ನು ಮೂಡಿಸುತ್ತಾರೆ. ಹೀಗಾಗಿ ಅಮೆರಿಕಾದಲ್ಲಿ ಉತ್ಪಾದನೆಯಾಗುವ ಫೋರ್ಡ್ ಕಾರು ಜರ್ಮನಿಯಲ್ಲಿ ಮಾರಾಟ ಮಾಡಲಾಗುತ್ತದೆ. ಮತ್ತು ಜರ್ಮನಿಯಲ್ಲಿ ಉತ್ಪಾದನೆ ಯಾಗುವ ಬೆಜ್ ಕಾರು ಅಮೆರಿಕಾ ಮಾರುಕಟ್ಟೆಯಲ್ಲಿ ಮಾರಾಟವಾಗುತ್ತದೆ. ಇಂತಹ ಒಂದೇ ಕೈಗಾರಿಕೆಯ ಭಿನ್ನತೆ ಹೊಂದಿರುವ ಸರಕುಗಳ ವ್ಯಾಪಾರ ಅಭಿವೃದ್ಧಿ ಹೊಂದಿರುವ ದೇಶಗಳ ನಡುವೆ ದೊಡ್ಡ ಪ್ರಮಾಣದಲ್ಲಿ ಜರಗುತ್ತದೆ. ಆದರೆ ಅಭಿವೃದ್ಧಿಶೀಲ ರಾಷ್ಟ್ರಗಳು ವ್ಯಾಪಾರವನ್ನು ದೊಡ್ಡ ಪ್ರಮಾಣದಲ್ಲಿ ಅಭಿವೃದ್ಧಿ ಹೊಂದಿರುವ ರಾಷ್ಟ್ರಗಳೊಡನೆ ಮಾಡುತ್ತವೆ. (ಬೇರೆ ಕೈಗಾರಿಕಾ ಸರಕುಗಳ ವ್ಯಾಪಾರ.)

**ಆಮದು**

ಭಾರತವು ೧೯೪೭ಕ್ಕೂ ಮುಂಚೆ ಬ್ರಿಟಿಷರ ವಸಾಹತು ದೇಶವಾಗಿದ್ದಾಗ, ಕಚ್ಚಾ ಪದಾರ್ಥಗಳನ್ನು ಮತ್ತು ಆಹಾರ ಧಾನ್ಯಗಳನ್ನು ರಫ್ತುಮಾಡಿ ಆ ದೇಶದಿಂದ ಹೆಚ್ಚಿನ ಪ್ರಮಾಣದಲ್ಲಿ ಕೈಗಾರಿಕಾ ಸರಕುಗಳನ್ನು ಆಮದು ಮಾಡಿಕೊಳ್ಳುತ್ತಿದ್ದೆವು. ಯಂತ್ರಗಳಿಂದ ತಯಾರಾದ ಸರಕುಗಳೊಡನೆ ನಮ್ಮ ಗೃಹ ಕೈಗಾರಿಕೆಗಳಲ್ಲಿ ತಯಾರಾಗುತ್ತಿದ್ದ ಸರಕುಗಳು ಪೈಪೋಟಿಯನ್ನು ಎದುರಿಸುಲಾಗದೆ ಅವು ಕ್ರಮೇಣವಾಗಿ ನಶಿಸತೊಡಗಿದವು. ನಾವು ಬ್ರಿಟಿಷರಿಗೆ ಪ್ರತಿವರ್ಷವು ಕೊಡಬೇಕಾಗಿದ ಗೃಹ ವೆಚ್ಚಕ್ಕಾಗಿ ಅಧಿಕ ಪ್ರಮಾಣದಲ್ಲಿ ರಫ್ತು ಮಾಡಬೇಕಾಗಿದ್ದಿತು. ಆದುದರಿಂದ ೧೯೪೭ಕ್ಕೂ ಮುಂಚೆ ನಮ್ಮ ವಿದೇಶೀ ವ್ಯಾಪಾರ ಶಿಲ್ಕಿನಲ್ಲಿ ಪ್ರತಿ ವರ್ಷವೂ ಹೆಚ್ಚಳವಿದ್ದಿತು.

ಸ್ವಾತಂತ್ರ್ಯ ಬಂದ ಮೇಲೆ ವಿದೇಶಿ ವ್ಯಾಪಾರದ ಮಾದರಿಯಲ್ಲಿ ಅನೇಕ ಬದಲಾವಣೆ ಗಳಾದವು. ೧೯೪೭ ರಿಂದ ೫೧ರ ವರೆಗೆ ನಮ್ಮ ದೇಶದ ಆಮದು ಮೌಲ್ಯ ರಫ್ತು ಮೌಲ್ಯಕ್ಕಿಂತ ಜಾಸ್ತಿಯಾಗಿತ್ತು. ಯುದ್ಧ ಕಾಲದಲ್ಲಿ ಅನೇಕ ನಿರ್ಬಂಧಗಳಿದ್ದು ಅದು ಮುಗಿದ ಮೇಲೆ ಇವುಗಳು ಸಡಿಲಗೊಂಡಾಗ ತಡೆ ಹಿಡಿದಿದ್ದ ಬೇಡಿಕೆಯು ಜಾಸ್ತಿಯಾಗಿ ಆಮದಿನ ಪ್ರಮಾಣ ಜಾಸ್ತಿಯಾಗತೊಡಗಿತು.

ಭಾರತವು ವಿಭಜನೆಯ ಸಮಸ್ಯೆಯನ್ನು ಎದುರಿಸಬೇಕಾಯಿತು ಮತ್ತು ಆಹಾರ ಧಾನ್ಯ, ಮತ್ತು ಇತರ ಕಚ್ಚಾ ಪದಾರ್ಥಗಳನ್ನು (ಸೆಣಬು, ಹತ್ತಿ) ಆಮದು ಮಾಡಿಕೊಳ್ಳಬೇಕಾಯಿತು.

ಅನೇಕ ಕೈಗಾರಿಕಾ ಮತ್ತು ನೀರಾವರಿ ಮತ್ತು ವಿದ್ಯುಚ್ಛಕ್ತಿ ಯೋಜನೆಗಳನ್ನು ಕೈಗೊಂಡಿದುದರಿಂದ ಹೆಚ್ಚಿನ ಪ್ರಮಾಣದಲ್ಲಿ ಆಮದು ಮಾಡಿಕೊಳ್ಳಬೇಕಾಯಿತು. ಪಂಚವಾರ್ಷಿಕ ಯೋಜನೆ ಕಾರ್ಯಗತ ಮಾಡಲು ಪ್ರಾರಂಭಸಿದ ಮೇಲೆ, ಆಮದು ಮತ್ತು ಗಫ್ತು ಎರಡೂ ಜಾಸ್ತಿಯಾಗತೊಡಗಿತು. ಆದರೆ ಇದರ ಹೆಚ್ಚಾಗತೊಡಗಿ ಸಾಮಾನ್ಯವಾಗಿ ಪಂಚವಾರ್ಷಿಕ ಯೋಜನೆ ಪ್ರಾರಂಭವಾದ ಮೇಲೆ ಇಂದಿನವರೆಗೂ ವ್ಯಾಪಾರ ಶಿಲ್ಕಿನಲ್ಲಿ ಕೊರತೆಯನ್ನು ಕಾಣುತ್ತವೆ.

### ಪಂಚವಾರ್ಷಿಕ ಯೋಜನೆ ಮತ್ತು ಆಮದು

ಮೊದಲನೆ ಪಂಚವಾರ್ಷಿಕ ಯೋಜನೆಯಲ್ಲಿ ಸರಾಸರಿ ವಾರ್ಷಿಕ ಆಮದು ೭೩೫.೨ ಕೋಟಿ ರೂ.ಗಳಾಗಿದ್ದಿತು. ವ್ಯಾಪಾರಶಿಲ್ಕಿನಲ್ಲಿ ಸರಾಸರಿ ವಾರ್ಷಿಕ ಕೊರತೆ ೧೨೯.೮ ಕೋಟಿ ರೂ.ಗಳಾಗಿದ್ದಿತು. ಕೈಗಾರಿಕೆಗಳಿಗೆ ಬೇಕಾದ ಯಂತ್ರೋಪಕರಣಗಳಿಗೆ ಆಮದುನಿಂದಾಗಿ ಮತ್ತು ರಪ್ತು ಪ್ರಮಾಣದಲ್ಲಿ ಜಾಸ್ತಿ ಬೆಳವಣಿಗೆ ಇಲ್ಲದುದರಿಂದ ವ್ಯಾಪಾರಶಿಲ್ಕಿನಲ್ಲಿ ಕೊರತೆ ಉಂಟಾಯಿತು.೩ನೇ ಯೋಜನೆಯ ಪ್ರಾರಂಭದಲ್ಲಿ ಆಮದು ೮೪೧ ಕೋಟಿ ರೂ.ಗಳಾಗಿದ್ದು ಕೊನೆಯ ವರ್ಷದಲ್ಲಿ ೧೧೨೨ ಕೋಟಿಗಳಾಗಿದ್ದಿತು. ಸರಾಸರಿ ವಾರ್ಷಿಕ ಆಮದು ೯೭೩ ಕೋಟಿ ರೂ.ಗಳಾಗಿದ್ದು, ಸರಾಸರಿ ವಾರ್ಷಿಕ ವ್ಯಾಪಾರಶಿಲ್ಕಿನಲ್ಲಿ ಕೊರತೆ ೩೬೭ ಕೋಟಿ ರೂ.ಗಳಾಗಿದ್ದಿತು. ಎರಡನೆಯ ಯೋಜನೆಯ ಕಾಲದಲ್ಲಿ ಮುಂಗಾರು ಮಳೆಯ ಕೊರತೆಯಿಂದ ಆಹಾರಧಾನ್ಯಗಳ ಆಮದು ಜಾಸ್ತಿಮಾಡಬೇಕಾಯಿತು. ರಫ್ತು ಗಣನೀಯವಾಗಿ ಹೆಚ್ಚಲಿಲ್ಲ ಮತ್ತು ವಿದೇಶಿ ವಿನಿಮಯದ ಕೊರತೆ ಸಮಸ್ಯೆಯನ್ನು ಎದುರಿಸಬೇಕಾಯಿತು. ಆಗ ಸರ್ಕಾರ ಆಮದುಗಳ ಮೇಲೆ ನಿರ್ಬಂಧ, ರಫ್ತುಗಳಿಗೆ ಉತ್ತೇಜನ ಕ್ರಮಗಳನ್ನು ಕೈಗೊಂಡಿತು. ವಿದೇಶೀ ವಿನಿಮಯ ಗಳಿಕೆಯ ಮೇಲೂ ನಿಯಂತ್ರಣಗಳನ್ನು ವಿಧಿಸಲಾಯಿತು. ಈ ವಿದೇಶೀ ವಿನಿಮಯದ ಕೊರತೆಯ ಸಮಸ್ಯೆ ೫೦ರ ದಶಕದಿಂದ ೬೦ರ ದಶಕದವರೆಗೂ ಮುಂದುವರೆಯಿತು. ಸರ್ಕಾರ I.M.F.ನಿಂದ ಮತ್ತು ಪರದೇಶಗಳಿಂದ ಸಾಲವನ್ನು ಮಾಡಿ ಕೊರತೆಯ ಸಮಸ್ಯೆಯನ್ನು ಬಗೆಹರಿಸಿಕೊಳ್ಳಲು ಪ್ರಯತ್ನಿಸಿತು.

ಮೂರನೇ ಯೋಜನೆಯ ಅವಧಿಯಲ್ಲಿ ಆಹಾರಧಾನ್ಯದ ಕೊರತೆ ಜಾಸ್ತಿಯಾಯಿತು. ಇದಲ್ಲದೆ ಚೈನದೊಡನೆ ಮತ್ತು ಪಾಕಿಸ್ತಾನದೊಡನೆ ಯುದ್ಧಮಾಡಬೇಕಾಗಿ, ರಫ್ತು ಕಡಿಮೆಯಾಗಿ ಆಮದು ಜಾಸ್ತಿಯಾಯಿತು. ಕೈಗಾರಿಕೀಕರಣದ ಕಾರ್ಯಕ್ರಮಕ್ಕಾಗಿಯೂ ಬಂಡವಾಳ ಸರಕುಗಳ ಆಮದು ಜಾಸ್ತಿಯಾಯಿತು. ಮೂರನೇ ಯೋಜನೆ ಅವಧಿಯಲ್ಲಿ ಸರಾಸರಿ ವಾರ್ಷಿಕ ಆಮದು ೧೨೪೦ ಕೋಟಿ ರೂ.ಗಳಾಗಿ, ವ್ಯಾಪಾರದ ಶಿಲ್ಕಿನಲ್ಲಿ ಸರಾಸರಿ ವಾರ್ಷಿಕ ೪೮೭ ಕೋಟಿ ರೂ.ಗಳ ಕೊರತೆ ಉಂಟಾಯಿತು.

೧೯೬೬ ರಿಂದ ೬೯ರ ವರೆಗೆ ವಾರ್ಷಿಕ ಯೋಜನೆಗಳನ್ನು ಕೈಗೊಳ್ಳಲಾಯಿತು. ೧೯೬೭-೬೮, ಮತ್ತು ೬೮-೬೯ರಲ್ಲಿ ಆಮದು ಪ್ರಮಾಣ ಕಡಿಮೆ ಯಾಯಿತು ಮತ್ತು ೬೬ ರಿಂದ

೬೯ರವರೆಗೆ ರಫ್ತು ಪ್ರಮಾಣ ಪ್ರತಿವರ್ಷವೂ ಜಾಸ್ತಿಯಾಯಿತು. ಇದಕ್ಕೆ ಮುಖ್ಯ ಕಾರಣ ಜೂನ್ ೧೯೬೬ರಲ್ಲಿ ರೂಪಾಯಿಯನ್ನು ಶೇ. ೩೬.೫ರಷ್ಟು ಅಪಮೌಲ್ಯ ಮಾಡಿಕೊಂಡುದದೇ ಆಗಿದೆ. ಅಪಮೌಲ್ಯ ಮಾಡಿಕೊಂಡಾಗ ವಿನಿಮಯ ದರ ಜಾಸ್ತಿಯಾಗಿ ಆಮದು ಮಾಡಿಕೊಳ್ಳುವ ಸರಕುಗಳ ಬೆಲೆ ಜಾಸ್ತಿಯಾಗಿರುತ್ತದೆ. ಮತ್ತು ರಫ್ತು ಮಾಡುವ ಸರಕುಗಳ ಬೆಲೆ ಕಡಿಮೆಯಾಗುತ್ತದೆ. ಇದರಿಂದ ಆಮದು ಕಡಿಮೆಯಾಗಿ, ರಫ್ತು ಜಾಸ್ತಿಯಾಗಿ ವ್ಯಾಪಾರಶಿಲ್ಕಿನಲ್ಲಿ, ಹೆಚ್ಚಳ ಬರುತ್ತದೆ. ೧೯೬೮-೬೯ರಲ್ಲಿ ಉತ್ತಮ ಮಳೆ ಮತ್ತು ಬೆಳೆಯಾಗಿ ಆಹಾರಧಾನ್ಯದ ಆಮದು ಕಡಿಮೆಯಾಯಿತು. ಆದರೆ ಇನ್ನಿತರ ಆಮದು ಸರಕುಗಳಿಗೆ ನಮ್ಮ ಬೇಡಿಕೆಯ ಸ್ಥಿತಿಸ್ಥಾಪಕತ್ವ ಕಡಿಮೆ ಇದ್ದುದರಿಂದ ಅವುಗಳ ಆಮದು ಅಷ್ಟೇನು ಕಡಿಮೆಯಾದರೂ ಅಪಮೌಲ್ಯದಿಂದ ನಿರೀಕ್ಷಿಸಿದಷ್ಟು ಪ್ರಮಾಣದಲ್ಲಿ ವ್ಯಾಪಾರಶಿಲ್ಕು ಉತ್ತಮವಾಗಲಿಲ್ಲ. ೧೯೬೬-೬೯ರ ವರೆಗೆ ಸರಾಸರಿ ಆಮದು ೧೯೨೫ ಕೋಟಿ ರೂ. ಮತ್ತು ಸರಾಸರಿ ರಫ್ತು ೧೨೩೮ ಕೋಟಿ ರೂ. ಮತ್ತು ವ್ಯಾಪಾರಶಿಲ್ಕಿನಲ್ಲಿ ಸರಾಸರಿ ೬೮೯ ಕೋಟಿಗಳಾಗಿತ್ತು.

೪ನೇ ಪಂಚವಾರ್ಷಿಕ ಯೋಜನೆ (೧೯೬೯-೭೪) ಅವಧಿಯಲ್ಲಿ ರಫ್ತು ಪ್ರಮಾಣ ಗಣನೀಯವಾಗಿ ಜಾಸ್ತಿಯಾಯಿತು. ಆಮದು ಪ್ರಮಾಣ ಜಾಸ್ತಿಯಾದರೂ ವ್ಯಾಪಾರ ಶಿಲ್ಕಿನ ಕೊರತೆ ಕಡಿಮೆಯಾಯಿತು. ಈ ಅವಧಿಯಲ್ಲಿ ವಾರ್ಷಿಕ ಸರಾಸರಿ ಆಮದು ೧೯೭೨ ಕೋಟಿರೂ.ಗಳಾಗಿದ್ದು, ವಾರ್ಷಿಕ ಸರಾಸರಿ ವ್ಯಾಪಾರ ಶಿಲ್ಕಿನ ಕೊರತೆ ಕೇವಲ ೧೬೨ ಕೋಟಿ ರೂ.ಗಳಾಗಿದ್ದಿತು. ೧೯೭೨-೭೩ರಲ್ಲಿ ಪ್ರಥಮವಾಗಿ ೧೯೪೯ ರಿಂದೀಚೆಗೆ ವ್ಯಾಪಾರಶಿಲ್ಕಿನಲ್ಲಿ ೧೦೪ ಕೋಟಿ ರೂ.ಗಳ ಹೆಚ್ಚಳವನ್ನು ಕಾಣಲಾಯಿತು. ಅದರ ವ್ಯಾಪಾರಶಿಲ್ಕಿನಲ್ಲಿ ಕಂಡು ಬಂದ ಅನುಕೂಲ ಕೇವಲ ಒಂದು ವರ್ಷಕ್ಕೆ ಸೀಮಿತವಾಗಿ, ಆಮೇಲೆ ಪುನಃ ಕೊರತೆ ಮುಂದುವರೆಯಿತು. ೧೯೭೩ರಲ್ಲಿ ತೈಲ ಉತ್ಪಾದನಾ ರಾಷ್ಟ್ರಗಳು ಒಂದು ಒಕ್ಕೂಟವನ್ನು ಮಾಡಿಕೊಂಡು ತೈಲ ಉತ್ಪಾದನೆಯನ್ನು ಕಡಿಮೆ ಮಾಡಿ, ಅದರ ಬೆಲೆಯನ್ನು ಜಾಸ್ತಿ ಮಾಡತೊಡಗಿದರು. ಸುಮಾರು ನಮ್ಮ ಅವಶ್ಯಕತೆಯ ೧/೩ ಭಾಗದಷ್ಟು ತೈಲವನ್ನ ಆಮದು ಮಾಡಿಕೊಳ್ಳಬೇಕಾಗಿರುವುದರಿಂದ ಪ್ರತಿವರ್ಷವೂ ತೈಲ ಆಮದಿನ ವೆಚ್ಚ ಜಾಸ್ತಿಯಾಗುತ್ತಲೇ ಬಂದಿದೆ ಮತ್ತು ವ್ಯಾಪಾರ ಶಿಲ್ಕಿನಲ್ಲಿ ಸತತವಾಗಿ ಕೊರತೆಯನ್ನು ಎದುರಿಸುತ್ತಿದ್ದೇವೆ.

ಐದನೇ ಪಂಚವಾರ್ಷಿಕ ಯೋಜನೆ ಅವಧಿಯಲ್ಲಿ (೧೯೭೪-೭೯) ಸರಾಸರಿ ವಾರ್ಷಿಕ ಆಮದು ೫೫೩೭ ಕೋಟಿಗಳಾಗಿ, ಸರಾಸರಿ ವಾರ್ಷಿಕ ವ್ಯಾಪಾರಶಿಲ್ಕು ಕೊರತೆ ೮೧೦ ಕೋಟಿ ರೂ.ಗಳಾಯಿತು. ೧೯೭೬-೭೭ರಲ್ಲಿ ಎರಡನೆಯ ಸಲ ವ್ಯಾಪಾರಶಿಲ್ಕಿನಲ್ಲಿ ೬೮ ಕೊಟಿ ರೂ.ಗಳ ಹೆಚ್ಚಳ ಕಂಡುಬಂದಿತು. ಸಾಂಪ್ರದಾಯಿಕ ಸರಕುಗಳ ರಫ್ತಿನ ಹೆಚ್ಚಳದಿಂದ ವ್ಯಾಪಾರಶಿಲ್ಕಿನಲ್ಲಿ ಈ ಅಲ್ಪ ಪ್ರಮಾಣದ ಹೆಚ್ಚಳ ಕಂಡುಬಂದಿತು.

೬ನೇ ಯೋಜನೆ ಅವಧಿಯಲ್ಲಿ ೧೯೮೦-೮೫ ಸರಾಸರಿ ವಾರ್ಷಿಕ ಆಮದು ಮೌಲ್ಯ ೧೪೬-೮೩ ಕೋಟಿ ರೂ.ಗಳಾಗಿ, ಸರಾಸರಿ ವಾರ್ಷಿಕ ವ್ಯಾಪಾರ ಶಿಲ್ಕು ಕೊರತೆ ೫೭೧೬

ಕೋಟಿಗಳಾಯಿತು. ೧೯೭೬-೭೭ರಲ್ಲಿ ಎರಡನೆಯ ಸಲ ವ್ಯಾಪಾರ ಶಿಲ್ಕಿನಲ್ಲಿ ೬೮ ಕೋಟಿ ರೂ.ಗಳ ಹೆಚ್ಚಳವಾಯಿತು. ಸಾಂಪ್ರದಾಯಕ ಸರಕುಗಳ ರಫ್ತಿನ ಹೆಚ್ಚಳದಿಂದ ವ್ಯಾಪಾರಶಿಲ್ಕಿನಲ್ಲಿ ಈ ಅಲ್ಪಪ್ರಮಾಣದ ಹೆಚ್ಚಳ ಕಂಡುಬಂದಿತು.

೬ನೇಯ ಯೋಜನೆ ಅವಧಿಯಲ್ಲಿ (೧೯೮೦-೮೫) ಸರಾಸರಿ ವಾರ್ಷಿಕ ಆಮದು ಮೌಲ್ಯ ೧೪೬೮೩ ಕೋಟಿಗಳಾಗಿ, ಸರಾಸರಿ ವಾರ್ಷಿಕ ವ್ಯಾಪಾರಿ ಶಿಲ್ಕು ಕೊರತೆ ೫೭೧೬ ಕೋಟಿ ಗಳಾಯಿತು. ಈ ಕೊರತೆಯನ್ನು ತುಂಬಲು ೧೯೮೧ರಲ್ಲಿ I.M.F.ನಿಂದ ಸಾಲವನ್ನು ತೆಗೆದುಕೊಳ್ಳಲಾಯಿತು.

೭ನೇ ಯೋಜನೆ ಅವಧಿಯಲ್ಲಿ ಸ್ವಲ್ಪ ಮಟ್ಟಿಗೆ ಆಮದು ನಿರ್ಬಂಧಗಳನ್ನು ಸಡಿಲಿಸಲಾಗಿ, ಆಮದಿನ ಪ್ರಮಾಣ ಜಾಸ್ತಿಯಾಗಿ ವ್ಯಾಪಾರಶಿಲ್ಕಿನ ಕೊರತೆಯೂ ಜಾಸ್ತಿಯಾಯಿತು. ಅಭಿವೃದ್ಧಿ ಹೊಂದುತ್ತಿರುವ ಆರ್ಥಿಕ ವ್ಯವಸ್ಥೆಯಲ್ಲಿ ಬೇಡಿಕೆ ಜಾಸ್ತಿಯಾಗಿ ಸಾಮಾನ್ಯವಾಗಿ ಆಮದು ಜಾಸ್ತಿಯಾಗುತ್ತದೆ. ಇಂತಹ ಪರಿಸ್ಥಿತಿಯನ್ನು ನಾವು ಎಲ್ಲಾ ಪಂಚವಾರ್ಷಿಕ ಯೋಜನೆಗಳನ್ನು ಕಾರ್ಯಗತ ಮಾಡುವಾಗ ಕಾಣುತ್ತೇವೆ.

೭ನೇ ಯೋಜನೆಯ ಕಾಲದಲ್ಲಿ (೧೯೮೫-೯೦) ಸರಾಸರಿ ವಾರ್ಷಿಕ ಆಮದು ೨೫,೧೧೨ ಕೋಟಿ ರೂ.ಗಳಾಗಿದ್ದಿತು ವ್ಯಾಪಾರ ಶಿಲ್ಕಿನ ಸರಾಸರಿ ವಾರ್ಷಿಕ ಕೊರತೆ ೭೭೩೦ ಕೋಟಿ ರೂ.ಗಳಾಗಿದ್ದಿತು. ಈ ಪರಿಸ್ಥಿತಿಯಲ್ಲಿ ವಿಶ್ವ ಬ್ಯಾಂಕು ಮತ್ತು I.M.F. ನಿಂದ ದೊಡ್ಡ ಮೊತ್ತದ ಸಾಲವನ್ನು ಪಡೆಯುವುದು ಅನಿವಾರ್ಯವಾಯಿತು. ಆಮದುಗಳ ಮೇಲೆ ಸರ್ಕಾರ ನಿರ್ಬಂಧಗಳನ್ನು ಜಾರಿಗೆ ತಂದಿತು.

ಪದೇ ಪದೇ ಸರ್ಕಾರಗಳ ಬದಲಾವಣೆಯಿಂದಾಗಿ ೧೯೯೦ರಲ್ಲಿ ಪ್ರಾರಂಭವಾಗಬೇಕಾಗಿದ್ದ ೮ನೇ ಪಂಚವಾರ್ಷಿಕ ಯೋಜನೆ, ೧೯೯೨ರಲ್ಲಿ ಪ್ರಾರಂಭವಾಯಿತು. ಕಾಂಗ್ರೇಸ್ ಪಕ್ಷದ ನರಸಿಂಹರಾವ್‌ರವರ ನೇತೃತ್ವದಲ್ಲಿ ಸರ್ಕಾರ ಅನೇಕ ಆರ್ಥಿಕ ಸುಧಾರಣೆಗಳನ್ನು ಜಾರಿಗೆ ತಂದು ಖಾಸಗೀಕರಣ, ಉದಾರೀಕರಣ ಮತ್ತು ಜಾಗತೀಕರಣ ವ್ಯವಸ್ಥೆಗೆ ಪ್ರೋತ್ಸಾಹ ಕೊಟ್ಟಿತು. ಆಗಿನಿಂದಲೂ ಈ ಸುಧಾರಣೆಗಳು ಮುಂದುವರೆಯುತ್ತಲೇ ಬಂದಿವೆ. ಈ ಸುಧಾರಣೆಗಳು ಪ್ರಾರಂಭವಾದ ಮೇಲೆ ರಫ್ತು ಮತ್ತು ಆಮದು ಎರಡೂ ಜಾಸ್ತಿಯಾಗುತ್ತಾ ಬಂದಿವೆ. ೮ನೇ ಯೋಜನೆ ಅವಧಿಯಲ್ಲಿ ಸರಾಸರಿ ಆಮದು ೯೭,೬೮೯ ಕೋಟಿ ರೂ.ಗಳಾಗಿದ್ದು, ವಾರ್ಷಿಕ ವ್ಯಾಪಾರಶಿಲ್ಕಿನ ಕೊರತೆ ೧೧,೩೫೨ ಕೋಟಿ ರೂ.ಗಳಾಗಿದ್ದಿತು.

೯ನೇ ಯೋಜನೆಯಲ್ಲಿ ೧೯೯೭-೨೦೦೨ ವಿಶ್ವ ವ್ಯಾಪಾರದಲ್ಲಿ ಅನೇಕ ಬದಲಾವಣೆ ಗಳನ್ನು ಕಾಣುತ್ತೇವೆ. ೧೯೯೪ರಲ್ಲಿ ಆದರೊಡನೆ ಒಪ್ಪಂದ ಮಾಡಿಕೊಂಡು ಆಮದು ನಿರ್ಬಂಧಗಳನ್ನು ಕ್ರಮೇಣವಾಗಿ ಕಡಿಮೆ ಮಾಡಿಕೊಳ್ಳಬೇಕಾಗಿದೆ. ಈಗ ಅನಿರ್ಬಂಧಿತ ವಿಶ್ವ ವ್ಯಾಪಾರ ನಡೆಯುತ್ತಿದೆ. ಇದರಿಂದ ಅನುಕೂಲ ಮತ್ತು ಅನಾನುಕೂಲಗಳೆರಡನ್ನು ಎದುರಿಸುತ್ತಿದ್ದೇವೆ. ವಿದೇಶೀಯರು ಅನೇಕ ಕ್ಷೇತ್ರಗಳಲ್ಲಿ ಬಂಡವಾಳವನ್ನು ಹೂಡಿ ಉದ್ಯಮವನ್ನು ಪ್ರಾರಂಭಿಸಲು ಅವಕಾಶವಿದೆ ಬ್ಯಾಂಕ್ ಕ್ಷೇತ್ರ, ವಿಮಾ ಕ್ಷೇತ್ರ, ಸಂಪರ್ಕ

ಕ್ಷೇತ್ರಗಳಲ್ಲೆಲ್ಲಾ ವಿದೇಶೀ ಬಂಡವಾಳವನ್ನು ಹೂಡಲು ಅವಕಾಶವನ್ನು ಕಲ್ಪಿಸಲಾಗಿದೆ. ಈ ಉದಾರೀಕರಣ ನೀತಿಯಿಂದ ವಿದೇಶೀ ಬಂಡವಾಳ ನಮ್ಮ ದೇಶಕ್ಕೆ ಹೆಚ್ಚಿನ ಪ್ರಮಾಣ ದಲ್ಲಿ ಬರುತ್ತಿದೆ. ಈ ಬಂಡವಾಳವನ್ನು ಈಗಾಗಲೇ ಸ್ಥಾಪಿತವಾಗಿರುವ ಉದ್ಯಮಗಳ ಷೇರುಗಳನ್ನು ಕೊಳ್ಳಲು ಮತ್ತು ಹೊಸ ಉದ್ಯಮಗಳ ಸ್ಥಾಪನೆಗಾಗಿ ತೊಡಗಿಸಿಕೊಳ್ಳಲು ಅವಕಾಶ ಕಲ್ಪಿಸಲಾಗಿದೆ. ಈ ಕಾರಣದಿಂದಾಗಿ ವಿದೇಶೀ ವಿನಿಮಯದ ಗಳಿಕೆ ಪ್ರತಿ ವರ್ಷವೂ ಜಾಸ್ತಿಯಾಗುತ್ತಲೇ ಬಂದಿದೆ ವಿದೇಶೀ ವಿನಿಮಯದ ಕೊರತೆ ಹಳೆಯ ಕತೆಯಾಗಿದೆ. ವಿದೇಶೀ ವಿನಿಮಯ ಬಳಕೆ ಮೇಲಿರುವ ನಿಯಂತ್ರಣಗಳೂ ಕಡಿಮೆಯಾಗುತ್ತಾ ಬಂದಿವೆ. ೧೯೯೭ರಲ್ಲಿ ಅನೇಕ ದಕ್ಷಿಣ ಆಗ್ನೇಯ ರಾಷ್ಟ್ರಗಳಲ್ಲಿ ಹಣಕಾಸಿನ ಮುಗ್ಗಟ್ಟು-ತಲೆಗೇರಿ ಇದು ವಿಶ್ವ ವ್ಯಾಪಾರದ ಪ್ರಮಾಣ ಕುಗ್ಗುವಂತೆ ಮಾಡಿತು. ೧೯೯೮ರಲ್ಲಿ ರಷ್ಯಾ ದೇಶದಲ್ಲಿ ಆರ್ಥಿಕ ಮುಗ್ಗಟ್ಟು ಕಂಡುಬಂದಿತು. ವಿಶ್ವದ ಉತ್ಪಾದನೆ ಶೇ.೨ರಷ್ಟು ಕಡಿಮೆಯಾಯಿತು. ಈ ಪರಿಸ್ಥಿತಿಯಲ್ಲಿ ಅನೇಕ ಅಭಿವೃದ್ಧಿ ಹೊಂದಿದ ದೇಶಗಳು ಪರೋಕ್ಷವಾದ ವಾಣಿಜ್ಯ ರಕ್ಷಣಾ ನೀತಿಯನ್ನು ಅನುಸರಿಸತೊಡಗಿದರು. ಉದಾ ಸರಕುಗಳ ತಾಂತ್ರಿಕ ಮಟ್ಟ ಉತ್ತಮ ವಾಗಿರಬೇಕೆಂಬ ಷರತ್ತು; ಉತ್ತಮ ಪರಿಸರದಲ್ಲಿ ಉತ್ಪಾದನೆ ಮಾಡಬೇಕೆಂಬ ಷರತ್ತು; ಮಕ್ಕಳನ್ನು ಕಾರ್ಮಿಕರಾಗಿ ನೇಮಿಸಿಕೊಳ್ಳಬಾರದು; ಹೆಂಗಸರಿಗೆ ಸೂಕ್ತವೇತನ ಮತ್ತು ಎಲ್ಲಾ ರೀತಿಯ ಸೌಕರ್ಯಗಳನ್ನು ಒದಗಿಸಬೇಕು ಮುಂತಾದ ನಿರ್ಬಂಧಗಳನ್ನು ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳ ಮೇಲೆ ವಿಧಿಸಲಾಯಿತು. ವಾಸ್ತವವಾಗಿ ಈ ವಿಷಯಗಳು ವ್ಯಾಪಾರಕ್ಕೆ ಸಂಬಂಧಪಟ್ಟಿಲ್ಲ. ಈ ಅಂಶಗಳು ಅಂತರ ರಾಷ್ಟ್ರೀಯ ಕಾರ್ಮಿಕ ಸಂಘಟನೆಯ ವ್ಯಾಪ್ತಿಗೆ ಬರುತ್ತದೆ. ಈ ನಿರ್ಬಂಧಗಳಿಂದ ನಮ್ಮಿಂದ ರಫ್ತಾಗುವ ಕೆಲವು ಸರಕುಗಳಿಗೆ ಅಡಚಣೆ ಉಂಟಾಯಿತು. ಉದಾ: ಹತ್ತಿ ಬಟ್ಟೆ, ಹೂ ಬೇಸಾಯ, ಅಣಬೆ, ಕ್ರೀಡಾ ಸಾಮಗ್ರಿಗಳು, ಚರ್ಮದ ಸರಕುಗಳು ಇತ್ಯಾದಿ. ಈ ಅಡಚಣೆಗಳನ್ನು ಸುಕೇತರ ಅಡಣಚಣೆಗಳೆಂದು ಕರೆಯಲಾಗಿದೆ.

೯ನೇ ಪಂಚವಾರ್ಷಿಕ ಯೋಜನೆ ಅವಧಿಯಲ್ಲಿ ಸರಾಸರಿ ವಾರ್ಷಿಕ ಆಮದು ೨,೦೪,೭೬೩ ಕೋಟಿ ರೂ.ಗಳಾಗಿತ್ತು ಮತ್ತು ವ್ಯಾಪಾರ ಶಿಲ್ಕಿನಲ್ಲಿ ಸರಾಸರಿ ವಾರ್ಷಿಕ ಕೊರತೆ ೩೬,೩೬೩ ಕೋಟಿ ರೂ.ಗಳಾಗಿತ್ತು. ಈ ಯೋಜನೆಯ ಅವಧಿಯಲ್ಲಿ ರಫ್ತು ಮತ್ತು ಆಮದು ಎರಡೂ ಜಾಸ್ತಿಯಾದವು.

ಹತ್ತನೆ ಪಂಚವಾರ್ಷಿಕ ಯೋಜನೆಯ ಮೊದಲ ಮೂರು ವರ್ಷಗಳಲ್ಲಿ ವಾರ್ಷಿಕ ಸರಾಸರಿ ಆಮದು ೩,೯೯,೬೭೧ ಕೋಟಿ ರೂ.ಗಳಾಗಿದ್ದಿತು ಮತ್ತು ಸರಾಸರಿ ರಫ್ತು ೩೦೨೮೩೪ ಕೋಟಿ ರೂ.ಗಳಾಗಿತ್ತು ಮತ್ತು ಸರಾಸರಿ ವಾರ್ಷಿಕ ಕೊರತೆ ೬೬,೮೩೭ ಕೋಟಿ ರೂ.ಗಳಾಗಿತ್ತು. ಆದರೆ ೨೦೦೧-೦೨ ರಿಂದ ೨೦೦೫ರ ವರೆಗೂ ಸೇವೆಗಳ ಲೆಕ್ಕದಲ್ಲಿ ಹೆಚ್ಚಳ ವಿರುವುದರಿಂದ ವ್ಯಾಪಾರಶಿಲ್ಕಿನಲ್ಲಿ ಕೊರತೆ ಇದ್ದರೂ, ಚಾಲ್ತಿ ವ್ಯಾಪಾರ ಶಿಲ್ಕಿನಲ್ಲಿ ಹೆಚ್ಚಳನ್ನು ಅನುಕೂಲಕರವಾದ ಪಾವತಿ ಶಿಲ್ಕು ಇರುವುದು ಸ್ವಾಗತಕರ ಸಂಗತಿಯಾಗಿದೆ.

## ಆಮದು ಸ್ವರೂಪ

| | ೭೦-೭೧ | ೮೦-೮೧ | ೯೦-೯೧ | ೯೯-೨೦೦೦ |
|---|---|---|---|---|
| ಎ. ಬಹು ಭಾಗದ ಆಮದುಗಳು | ೮೨೫<br>(೫೦.೫) | ೮೭೩೯<br>(೬೯.೬) | ೧೯೪೬೪<br>(೪೫.೧) | ೮೫,೧೩೨<br>(೩೯.೬) |
| ಇವುಗಳಲ್ಲಿ | | | | |
| ೧. ಪೆಟ್ರೋಲ್ ಮತ್ತು ಪೆಟ್ರೋಲಿಯಂ ಸರಕುಗಳು | ೧೩೭<br>(೮.೪) | ೫೨೬೭<br>(೪೨.೦) | ೧೦೮೧೬<br>(೨೫) | ೫೬೪೪೯<br>(೨೫) |
| ಬ. ಬಹುಭಾಗ ಅನುಭೋಗ ಸರಕುಗಳು | | | | |
| ೧. ಆಹಾರ ಧಾನ್ಯಗಳು ಮತ್ತು ದ್ವಿದಳಧಾನ್ಯಗಳು | ೨೧೩ | ೧೦೦ | ೬೭೩ | ೧೩೧೬ |
| ೨. ಆಹಾರಕ್ಕೆ ಬಳಸುವ ಎಣ್ಣೆ | ೩೯ | ೭೦೪ | ೩೨೬ | ೮೦೪೬ |
| ಕ. ಇತರ ಅನುಭೋಗ ಸರಕುಗಳು ಇದರಲ್ಲಿ | ೩೬೨ | ೨೫೭೧ | ೭೬೫೦ | ೨೦,೦೧೦ |
| ೧. ರಾಸಾಯನಿಕ ಗೊಬ್ಬರ | ೧೦೦ | ೮೧೮ | ೧೭೬೬ | ೬೦೬೩ |
| ೨. ನಾನ್ ಫೆರಸ್ ಮೆಟಲ್ಸ್ | ೧೧೯ | ೪೭೭ | ೧೧೦೨ | ೨೩೭೦ |
| ೩. ಕಾಗದ | ೩೫ | ೧೮೭ | ೪೫೬ | ೧೯೩೮ |
| ೪. ಅದಿರುಗಳು | ೧೧ | ೧೧೬ | ೧೫೨೮ | ೩೭೮೯ |
| ೫. ಕಬ್ಬಿಣ ಮತ್ತು ಉಕ್ಕು | ೧೯೭ | ೮೫೨ | ೨೧೧೩ | ೪೧೨೪ |
| ಅ. ಬಹುಭಾಗ ವಲ್ಲದ ಆಮದುಗಳು ಇದರಲ್ಲಿ | ೮೦೯ | ೩೮೧೦ | ೨೩೭೨೯ | ೧,೩೦,೧೦೫ |
| ಬಂಡವಾಳದ ಸರಕುಗಳು | ೪೦೪ | ೧೯೧೦ | ೧೦೪೭೧ | ೩೯,೮೫೦ |
| ೧. ಯಂತ್ರೋಪಕರಣಗಳು | ೨೫೮ | ೧೦೮೯ | ೩೭೬೮ | ೧೧,೮೯೫ |
| ೨. ವಿದ್ಯುಚ್ಛಕ್ತಿ ಮತ್ತು ಪರಮಾಣು ವಿದ್ಯುತ್ ಸರಂಜಾಮು | ೭೦ | ೨೬೦ | ೧೭೦೨ | ೧೪,೦೧೫ |
| ೩. ಸಾರಿಗೆ ಸಾಮಾನು ಸರಕುಗಳು | ೬೬ | ೪೭೨ | ೧೬೭೦ | ೪,೯೨೫ |
| ೪. ಯೋಜನೆ ಸರಕುಗಳು | ... | ... | ೨೫೫೬ | ೪,೨೭೩ |

| | | | | |
|---|---|---|---|---|
| ಬ. ರಫ್ತಿಗೆ ಸಂಬಂಧ ಪಟ್ಟ ಸರಕು | ೧೯೩ | ೧೧೫೮ | ೬೬೦೩ | ೩೯೫೦೮ |
| ೧. ಮುತ್ತು ಮತ್ತು ಅಮೂಲ್ಯ ಶಿಲೆ | ೨೫ | ೪೧೭ | ೩೭೩೮ | ೨೩೫೫೬ |
| ೨. ರಾಸಾಯನಿಕ ಸರಕುಗಳು | ೧೩೧ | ೬೭೩ | ೨೨೮೯ | ೧೨೪೨೦ |
| ೩. ಹತ್ತಿ ನೂಲು | ೮ | ೫೯ | ೪೪೩ | ೨೩೩೩ |
| ೪. ಗೋಡಂಬಿ | ೨೯ | ೯ | ೧೩೪ | ೧೧೯೮ |
| ೫. ಇತರೆ | ೨೧೨ | ೭೪೨ | ೬೬೬೫ | ೫೧,೭೪೭ |
| ಒಟ್ಟು | ೧೬೩೪ | ೧೨೫೪೯ | ೪೩,೧೯೩ | ೨,೧೫,೨೩೬ |

ಸುಮಾರು ಶೇ. ೨೫ ಆಮದು ವೆಚ್ಚ ತೈಲ ಮತ್ತು ತೈಲ ಸಂಬಂಧ ಪಟ್ಟ ಸರಕುಗಳ ಆಮದುವಿನಿಂದ ಉಂಟಾಗುತ್ತದೆ. ಆಹಾರದ ವಿಚಾರದಲ್ಲಿ ಈಗ ನಾವು ಪೂರ್ಣ ಸ್ಥಿತಿಯಲ್ಲಿರುವುದರಿಂದ ಇದನ್ನು ಆಮದು ಮಾಡಿಕೊಳ್ಳುವ ಅವಶ್ಯಕತೆ ಇಲ್ಲ. ಆದರೆ ಆಹಾರ ತಯಾರಿಕೆಯಲ್ಲಿ ಬಳಸುವ ಎಣ್ಣೆಯನ್ನು ಈಗಿಲೂ ಅಧಿಕ ಪ್ರಮಾಣದಲ್ಲಿ ಆಮದು ಮಾಡಿಕೊಳ್ಳುತ್ತಿದ್ದೇವೆ. ರಾಸಾಯನಿಕ ಗೊಬ್ಬರದ ಆಮದು ಈಗಿಲೂ ಜಾಸ್ತಿ ಇದೆ. ಇದರ ಬಳಕೆಯಿಂದ ತಾತ್ಕಾಲಿಕವಾಗಿ ಹೆಚ್ಚು ಇಳುವರಿ ಬರುತ್ತಿದೆಯಾದರೂ, ದೀರ್ಘಕಾಲದಲ್ಲಿ ಮಣ್ಣಿನ ಫಲವತ್ತು ಕಡಿಮೆಯಾಗುವುದರಿಂದ ಇದರ ಬಳಕೆಯ ಬಗ್ಗೆ ಎಚ್ಚರ ವಹಿಸ ಬೇಕಾಗಿದೆ. ಬಂಡವಾಳ ಸರಕುಗಳ ಆಮದು ಒಟ್ಟು ಆಮದಿನ ಶೇ.೧೮ರಷ್ಟಿದೆ. ಇವುಗಳನ್ನು ಯಂತ್ರೋಪಕರಣಗಳು, ವಿದ್ಯುಚ್ಛಕ್ತಿ ಮತ್ತು ಪರಮಾಣು ವಿದ್ಯುತ್ ಸರಕುಗಳು ಆಮದು ಗಣನೀಯವಾಗಿದೆ. ಸಾರಿಗೆ ಸಾಮಾನು ಸರಂಜಾಮಿ ಆಮದು ವೆಚ್ಚ ಜಾಸ್ತಿ ಇದೆ. ರಫ್ತು ಮಾಡುವ ಸಲುವಾಗಿ ಆಮದು ಮಾಡಿಕೊಳ್ಳುವ ಸರಕುಗಳ ಪ್ರಮಾಣವೂ ಒಟ್ಟು ಆಮದಿನ ಶೇ.೧೮ರಷ್ಟಿದೆ. ಇದರಲ್ಲಿ ಪ್ರಮುಖವಾಗಿ ಆಮದು ಮಾಡಿಕೊಳ್ಳುವ ಸರಕೆಂದರೆ ಮುತ್ತು ಮತ್ತು ಅಮೂಲ್ಯಶಿಲೆ ಆಗಿದೆ.

**ಭಾರತ ಆಮದು ಮಾಡಿಕೊಳ್ಳುವ ಸರಕುಗಳ ಪ್ರಮುಖ ವ್ಯಾಪಾರಿ ಪಾಲುದಾರರು**

| ರಾಷ್ಟ್ರ | ೧೯೯೪ | ೧೯೯೫ | ೧೯೯೬ | ೧೯೯೭ | ೧೯೯೮ | ೧೯೯೯ | ೨೦೦೦ | ೨೦೦೧ |
|---|---|---|---|---|---|---|---|---|
| U.S.A. | ೬೮೯ | ೭೭೦.೯ | ೮೨೨.೦ | ೮೯೯.೦ | ೯೪೪ | ೧೦೫೯ | ೧೨೫೯ | ೧೧೭೯ |
| ಜಪಾನ್ | ೨೭೫.೨ | ೩೫೩.೯ | ೩೪೯.೨ | ೩೩೮.೮ | ೨೮೦ | ೩೧೧ | ೩೮೦ | ೩೪೯ |
| ಬ್ರಿಟನ್ | ೨೨೬.೨ | ೨೬೫.೩ | ೨೮೭.೪ | ೩೦೬.೬ | ೩೧೪ | ೩೧೮ | ೩೩೪ | ೩೨೧ |
| ಜರ್ಮನಿ | ೩೮೫.೪ | ೪೬೪.೩ | ೪೫೮.೮ | ೪೪೫.೬ | ೪೭೨ | ೪೭೩ | ೪೯೮ | ೪೮೬ |
| ಕೈಗಾರಿಕಾ ರಾಷ್ಟ್ರಗಳು | ೨೯೦೪.೪ | ೩೪೩೪ | ೩೫೫೪ | ೩೬೩೦ | ೩೭೨೭ | ೩೯೨೩ | ೪೩೩೫ | ೪೧೪೯ |
| ಅಭಿವೃದ್ಧಿ ಶೀಲ ರಾಷ್ಟ್ರಗಳು | ೧೪೨೦.೬ | ೧೭೩೨.೫ | ೧೮೫೮.೮ | ೧೯೬೩.೫ | ೧೮೧೮ | ೧೮೪೮ | ೨೧೯೪ | ೨೧೭೬ |
| ಪ್ರಪಂಚ | ೪೩೨೫ | ೫೧೬೬.೫ | ೫೪೧೩ | ೫೫೯೩.೭ | ೫೫೪೫ | ೫೭೭೭ | ೬೫೨೪ | ೬೩೨೪ |

ಮೂಲ: ಆರ್ಥಿಕ ಸಮೀಕ್ಷೆ, ಭಾರತ ಸರ್ಕಾರ ೧೯೯೯-೨೦೦೦ ಮತ್ತು ೨೦೦೨-೦೩

ಈ ಮೇಲಿನ ಪಟ್ಟಿ, ನಮ್ಮ ರಾಷ್ಟ್ರ ಯಾವ ರಾಷ್ಟ್ರಗಳಿಂದ ಎಷ್ಟು ಆಮದು ಮಾಡಿಕೊಳ್ಳುತ್ತದೆ ಎಂಬುದನ್ನು ತಿಳಿಸುತ್ತದೆ. ನಾವು ಅಭಿವೃದ್ಧಿ ಹೊಂದಿದ ರಾಷ್ಟ್ರಗಳಿಂದ ಆಮದು ಮಾಡಿಕೊಳ್ಳುವ ಪ್ರಮಾಣ ಜಾಸ್ತಿ ಕಂಡುಬರುತ್ತದೆ. ಇದರಲ್ಲೂ ನಾವು ಹೆಚ್ಚಿನ ಪ್ರಮಾಣದ ಆಮದು ಮಾಡಿಕೊಳ್ಳವುದು ಕಂಡುಬರುತ್ತದೆ. ಅಂದರೆ ನಮ್ಮ ವಿದೇಶೀ ವ್ಯಾಪಾರ ವಿಭಿನ್ನ ಆರ್ಥಿಕ ವ್ಯವಸ್ಥೆಗಳ ನಡುವೆ ನಡೆಯುವುದು ಕಂಡುಬರುತ್ತದೆ. ಇದನ್ನು ಕೈಗಾರಿಕೇತರ ಸರಕುಗಳ ವ್ಯಾಪಾರ ಎಂದು ಕರೆಯಲಾಗಿದೆ.

## ೭.೨. ಪಾವತಿ ಶಿಲ್ಕು

ಒಂದು ರಾಷ್ಟ್ರದ ಆರ್ಥಿಕ ಪರಿಸ್ಥಿತಿಯನ್ನು ಸೂಚಿಸುವ ಅಂಶಗಳಲ್ಲಿ ಪಾವತಿ ಶಿಲ್ಕು ಒಂದು. ಅನುಕೂಲಕರ ಪಾವತಿಶಿಲ್ಕು ಇದ್ದರೆ, ಆ ರಾಷ್ಟ್ರ ರಫ್ತು ಮಾಡುವ ಸರಕು ಮತ್ತು ಸೇವೆಗಳ ಒಟ್ಟು ಮೌಲ್ಯ, ಆಮದಿನ ಮೌಲ್ಯಕ್ಕಿಂತ ಜಾಸ್ತಿ ಇರುತ್ತದೆ. ಅನುಕೂಲಕರ ಪಾವತಿಶಿಲ್ಕು ಇರುವಾಗ ರಾಷ್ಟ್ರದ ಉತ್ಪಾದನೆ, ಉದ್ಯೋಗ, ಆದಾಯ, ಜೀವನ ಮಟ್ಟ ಎಲ್ಲವೂ ಉತ್ತಮ ಸ್ಥಿತಿಯಲ್ಲಿರುತ್ತದೆ.

### ವ್ಯಾಪಾರಶಿಲ್ಕು ಮತ್ತು ಪಾವತಿ ಶಿಲ್ಕು

ವ್ಯಾಪಾರ ಶಿಲ್ಕು ಮತ್ತು ಪಾವತಿಶಿಲ್ಕು ಇವುಗಳಿಗೆ ವ್ಯತ್ಯಾಸವಿದೆ. ಗೋಚರ ಸರಕುಗಳ ಆಮದು ಮತ್ತು ರಫ್ತು ಮೌಲ್ಯವನ್ನು ಒಳಗೊಂಡಿರುವ ಲೆಕ್ಕಕ್ಕೆ ವ್ಯಾಪಾರ ಶಿಲ್ಕು ಎಂದು ಕರೆಯುತ್ತೇವೆ. ಪಾವತಿ ಶಿಲ್ಕು ಇನ್ನೂ ವಿಶಾಲವಾದ ಅರ್ಥವನ್ನು ಹೊಂದಿದೆ. ಗೋಚರ ಸರಕುಗಳ ಮತ್ತು ಅಗೋಚರ ಸೇವೆಗಳ ರಫ್ತು ಮತ್ತು ಆಮದು ಮೌಲ್ಯವನ್ನು

ಒಳಗೊಂಡಿರುವ ಲೆಕ್ಕಕ್ಕೆ ಪಾವತಿ ಶಿಲ್ಕು ಎಂದು ಕರೆಯುತ್ತೇವೆ. ವ್ಯಾಪಾರ ಶಿಲ್ಕಿನಲ್ಲಿ ಅಸಮಾನತೆ ಇದ್ದರೂ, ಪಾವತಿ ಶಿಲ್ಕು ಲೆಕ್ಕದಲ್ಲಿ ಒಂದು ರಾಷ್ಟ್ರ ಲೆಕ್ಕದ ದೃಷ್ಟಿಯಿಂದ ಯಾವಾಗಲೂ ಸಮಾನತೆಯನ್ನು ಹೊಂದಿರುತ್ತದೆ. ಉದಾ. ಅಭಿವೃದ್ಧಿ ಶೀಲ ರಾಷ್ಟ್ರಗಳಲ್ಲಿ ಸಾಮಾನ್ಯವಾಗಿ ವ್ಯಾಪಾರ ಶಿಲ್ಕಿನಲ್ಲಿ ಅಸಮಾನತೆ ಇರುತ್ತದೆ. ಏಕೆಂದರೆ ನಾವು ರಫ್ತು ಮಾಡುವ ಸರಕುಗಳ ಮೌಲ್ಯ ಕಡಿಮೆ ಇದ್ದು ಆಮದು ಮಾಡುವ ಸರಕುಗಳ ಮೌಲ್ಯ ಜಾಸ್ತಿ ಇರುತ್ತದೆ. ಆದರೆ ನಾವು ರಫ್ತು ಮಾಡುವ ಅಗೋಚರ ಸೇವೆಗಳ ಮೌಲ್ಯ ಆಮದು ಮಾಡಿಕೊಳ್ಳುವ ಸೇವೆಗಳ ಮೌಲ್ಯಕ್ಕಿಂತ ಅಧಿಕವಾಗಿದೆ. ಈ ಹೆಚ್ಚಳ ವ್ಯಾಪಾರ ಶಿಲ್ಕಿನಲ್ಲಿ ಇರುವ ಕೊರತೆಯನ್ನು ನಿವಾರಣೆ ಮಾಡಿದೆ. ಪಾವತಿ ಶಿಲ್ಕಿನಲ್ಲಿ ಹೆಚ್ಚಳವನ್ನು ಕಳೆದ ಮೂರು ವರ್ಷಗಳಿಂದ ಕಾಣುತ್ತಿದ್ದೇವೆ.

### ಚಾಲ್ತಿ ಲೆಕ್ಕದ ಪಾವತಿ ಶಿಲ್ಕು

ಪಾವತಿ ಶಿಲ್ಕಿನಲ್ಲಿ ಎರಡು ಭಾಗಗಳಿವೆ ಒಂದು ಚಾಲ್ತಿ ಲೆಕ್ಕದ ಪಾವತಿ ಶಿಲ್ಕು ಮತ್ತೊಂದು ಬಂಡವಾಳ ಲೆಕ್ಕದ ಪಾವತಿ ಶಿಲ್ಕು ಚಾಲ್ತಿ ಲೆಕ್ಕದ ಪಾವತಿ ಶಿಲ್ಕಿನಲ್ಲಿ ಆಮದು ಮತ್ತು ರಫ್ತುವಿನ ಜೊತೆಗೆ ಅಗೋಚರ ಸೇವೆಗಳ ಮೌಲ್ಯವೂ ಸೇರಿರುತ್ತದೆ. ಇವುಗಳು ಯಾವುವೆಂದರೆ ಸರಕು ಮತ್ತು ಪ್ರಯಾಣಿಕರನ್ನು ಹೊರದೇಶಗಳಿಗೆ ಸಾಗಿಸುವ ಜಹಜುಗಳ ಸೇವೆ, ವಿಮಾ ಸಂಸ್ಥೆಗಳು ವಿದೇಶಿಯರಿಗೆ ಸಲ್ಲಿಸುವ ಸೇವೆ, ವಿದೇಶಿ ಪ್ರವಾಸಿಗರು ನಮ್ಮ ದೇಶದಲ್ಲಿ ಮಾಡುವ ವೆಚ್ಚ, ವಿದೇಶದಲ್ಲಿ ನಮ್ಮ ಬಂಡವಾಳ ಹೂಡುವುದರಿಂದ ಬರುವ ಆದಾಯ, ದೇಶದಿಂದ ನಾವು ಸ್ವೀಕರಿಸುವ ಉಡುಗೊರೆಗಳು, ವಿದೇಶದಲ್ಲಿ ಗಳಿಸಿದ ಹಣವನ್ನು ಸ್ವದೇಶಕ್ಕೆ ಪಾವತಿ ಮಾಡಿ ವರ್ಗಾಯಿಸುವುದು, ಒಂದು ರಾಷ್ಟ್ರ ಇನ್ನೊಂದು ರಾಷ್ಟ್ರದಲ್ಲಿ ಸ್ಥಾಪಿಸಿರುವ ರಾಯಭಾರಿ ಕಛೇರಿ ವೆಚ್ಚ, ವಿದೇಶಿ ಚಿತ್ರಗಳಿಗೆ ಕೊಡುವ ಸ್ವಾಮ್ಯಪಾಲು ಇತ್ಯಾದಿ ಅಂಶಗಳು ಇರುತ್ತವೆ. ಈ ಮೇಲೆ ತಿಳಿಸಿದ ಅಗೋಚರ ಸೇವೆಗಳನ್ನು ಸಲ್ಲಿಸಿದಾಗ ನಾವು ಆದಾಯವನ್ನು ಗಳಿಸುತ್ತೇವೆ. ವಿದೇಶಿ ಸೇವೆಗಳನ್ನು ನಾವು ಉಪಯೋಗಿಸಿ ಕೊಂಡಾಗ ವೆಚ್ಚವನ್ನು ಮಾಡುತ್ತೇವೆ. ಸರಕು ಮತ್ತು ಸೇವೆಗಳ ರಫ್ತು ಜಾಸ್ತಿ ಇದ್ದರೆ, ಆಗ ಚಾಲ್ತಿ ಪಾವತಿ ಶಿಲ್ಕಿನಲ್ಲಿ ಅನುಕೂಲಕರ ಪರಿಸ್ಥಿತಿ ಇರುತ್ತದೆ. ಒಂದು ವೇಳೆ ಸರಕು ಮತ್ತು ಸೇವೆಗಳ ಆಮದು ಜಾಸ್ತಿಯಿದ್ದರೆ, ಚಾಲ್ತಿ ಲೆಕ್ಕದ ಪಾವತಿ ಶಿಲ್ಕುವಿನಲ್ಲಿ ಅನಾನುಕೂಲ ಪರಿಸ್ಥಿತಿ ಇರುತ್ತದೆ. ಚಾಲ್ತಿ ಪಾವತಿ ಶಿಲ್ಕು ಗೋಚರ ಸರಕುಗಳು ಮತ್ತು ಅಗೋಚರ ಸೇವೆಗಳು ಇವುಗಳನ್ನು ರಫ್ತು ಮತ್ತು ಆಮದು ಮಾಡಿಕೊಂಡು ಕೆಲವು ವೇಳೆ ಅನುಕೂಲ ಪರಿಸ್ಥಿತಿಯಲ್ಲೂ, ಇನ್ನು ಕೆಲವು ವೇಳೆ ಅನಾನುಕೂಲ ಪರಿಸ್ಥಿತಿಯಲ್ಲೂ ಇರುತ್ತದೆ.

### ಬಂಡವಾಳ ಲೆಕ್ಕದ ಪಾವತಿ ಶಿಲ್ಕು

ಈ ಲೆಕ್ಕದಲ್ಲಿ ಚಾಲ್ತಿಪಾವತಿ ಶಿಲ್ಕು ಲೆಕ್ಕದಲ್ಲಿ ಕಂಡುಬರುವ ಕೊರತೆ ಅಥವಾ ಹೆಚ್ಚಳವನ್ನು ಸರಿತೂಗಿಸುವ ಅಂಶಗಳು ಇರುತ್ತವೆ. ಬಂಡವಾಳ ಲೆಕ್ಕದಲ್ಲಿರುವ ವಿವಿಧ

ಅಂಶಗಳೆಂದರೆ. ಹೊರದೇಶದಿಂದ ನಮ್ಮ ದೇಶಕ್ಕೆ ಬರುವ ಬಂಡವಾಳ ಅಥವಾ ವಿದೇಶಕ್ಕೆ ಹೋಗುವ ಬಂಡವಾಳ; ಸರ್ಕಾರಿ ಮತ್ತು ಖಾಸಗಿ ವಲಯಗಳಿಗೆ ವಿದೇಶದಿಂದ ಬರುವ ಸಹಾಯಧನ ವಿದೇಶದ ಹಣದ ಮಾರುಕಟ್ಟೆಯಲ್ಲಿ ತೆಗೆದುಕೊಳ್ಳುವ ವಾಣಿಜ್ಯ ಸಾಲಗಳು ಸಾಲಕ್ಕಾಗಿ ಕೊಡುವ ಬಡ್ಡಿ; ವಿದೇಶಗಳಲ್ಲಿ ಬ್ಯಾಂಕುಗಳು ಗಳಿಸುವ ಆದಾಯ ಮತ್ತು ವೆಚ್ಚ ಅನಿವಾಸಿ ಭಾರತೀಯರು ನಮ್ಮ ದೇಶದ ಬ್ಯಾಂಕಿನಲ್ಲಿ ಇಟ್ಟಿರುವ ಹಣ. ಈ ಮೇಲೆ ತಿಳಿಸಿದ ಅಂಶಗಳಲ್ಲಿ ನಾವು ಆದಾಯವನ್ನು ಪಡೆಯಬಹುದು ಮತ್ತು ವೆಚ್ಚವನ್ನೂ ಮಾಡಬಹುದು ಬಂಡವಾಳ ಲೆಕ್ಕದಲ್ಲಿ ವಿದೇಶಿ ವಿನಿಮಯದ ಪ್ರಮಾಣ ಜಾಸ್ತಿ ಅಥವಾ ಕಡಿಮೆಯಾಗಬಹುದು. ಒಟ್ಟಿನಲ್ಲಿ ಬಂಡವಾಳ ಲೆಕ್ಕದ ಪಾವತಿ ಶಿಲ್ಕು ರಾಷ್ಟ್ರಕ್ಕೆ ಆಗುವ ಆಸ್ತಿಯ ವರ್ಗಾವಣೆ ಅಂದರೆ ಆಸ್ತಿಯ ಒಡೆತನ ಮತ್ತು ಆಸ್ತಿಯ ಸಾಲವನ್ನು ತಿಳಿಸುತ್ತದೆ.

ಚಾಲ್ತಿ ಮತ್ತು ಬಂಡವಾಳ ಲೆಕ್ಕಕದ ಪಾವತಿ ಶಿಲ್ಕು ಯಾವಾಗಲೂ ಸಮನಾಗಿರಬೇಕು. ಒಂದುವೇಳೆ ಚಾಲ್ತಿ ಲೆಕ್ಕದಲ್ಲಿ ಕೊರತೆ ಇದ್ದರೆ ಅದನ್ನು ಬಂಡವಾಳ ಲೆಕ್ಕಕದಲ್ಲಿ ಸರಿಪಡಿಸಿ ಕೊಳ್ಳಲಾಗುತ್ತದೆ. ಚಾಲ್ತಿ ಲೆಕ್ಕದ ಸರಕು ಮತ್ತು ಸೇವೆಗಳ ಆಮದು ಮೌಲ್ಯ, ರಫ್ತು ಮೌಲ್ಯಕ್ಕಿಂತ ಜಾಸ್ತಿ ಇದ್ದರೆ, ಈ ಕೊರತೆಯನ್ನು ತುಂಬಲು, ಖಾಸಗಿ ವಲಯ, ಸರ್ಕಾರ ವಲಯ ಅಥವಾ ಅಂತರಾಷ್ಟ್ರೀಯ ಸಂಸ್ಥೆಗಳಿಂದ ಸಾಲವನ್ನು ಪಡೆಯಬಹುದು. ಅಥವಾ ಆಗಲೇ ಶೇಖರಿಸಿ ಇಟ್ಟಿರುವ ವಿದೇಶಿ ವಿನಿಮಯವನ್ನು ಉಪಯೋಗಿಸಿ ಸರಿಪಡಿಸಿ ಕೊಳ್ಳಬಹುದು. ಅಥವಾ ಪಾವತಿ ಶಿಲ್ಕಿನ ಕೊರತೆಯನ್ನು ತುಂಬಲು ದೇಶದಲ್ಲಿ ಶೇಖರಿಸಿರುವ ಚಿನ್ನವನ್ನು ರಫ್ತು ಮಾಡಬಹುದು.

ವಿದೇಶದಿಂದ ನಮ್ಮ ದೇಶಕ್ಕೆ ಬಂಡವಾಳ ಅಧಿಕವಾಗಿ ಬಂದಷ್ಟೂ ವಿದೇಶಿ ವಿನಿಮಯದ ಪ್ರಮಾಣ ಜಾಸ್ತಿಯಾಗುತ್ತದೆ ಮತ್ತು ಪಾವತಿ ಶಿಲ್ಕಿನ ಕೊರತೆಯನ್ನು ಸರಿಪಡಿಸಬಹುದು. ವಿದೇಶಕ್ಕೆ ಬಂಡವಾಳ ಚಲಿಸಿದರೆ ವಿದೇಶಿ ವಿನಿಮಯದ ಪ್ರಮಾಣ ಕಡಿಮೆಯಾಗುತ್ತದೆ. ಚಾಲ್ತಿ ಪಾವತಿ ಶಿಲ್ಕು ವರ್ತಮಾನ ಕಾಲದಲ್ಲಿ ರಫ್ತು ಮಾಡುವ ಮತ್ತು ಆಮದು ಮಾಡಿಕೊಳ್ಳುವ ಸರಕು ಮತ್ತು ಸೇವೆಗಳ ಮೌಲ್ಯವನ್ನು ತಿಳಿಸುತ್ತದೆ. ಈ ಲೆಕ್ಕದಲ್ಲಿ ಕಂಡುಬರುವ ನಿವ್ವಳ ಆದಾಯ ಹೆಚ್ಚಳ ಅಥವಾ ಕೊರತೆ, ರಾಷ್ಟ್ರದ ತಲಾವರಮಾನದ ಮೇಲೆ ನೇರವಾಗಿ ಪ್ರಭಾವವನ್ನು ಬೀರುತ್ತದೆ. ಆದರೆ ಬಂಡವಾಳ ಲೆಕ್ಕದ ಪಾವತಿ ಶಿಲ್ಕಿನಲ್ಲಿ ಆಗುವ ಬದಲಾವಣೆಗಳು ನೇರವಾಗಿ ಆದಾಯದ ಮೇಲೆ ಪ್ರಭಾವವನ್ನು ಬೀರುವುದಿಲ್ಲ. ಅದು ಒಂದು ರಾಷ್ಟ್ರ ಹೊಂದಿರುವ ಆಸ್ತಿಯ ಪ್ರಮಾಣದ ಮೇಲೆ ಪರಿಣಾಮವನ್ನುಂಟು ಮಾಡುತ್ತದೆ.

### ಚಾಲ್ತಿ ಲೆಕ್ಕದ ಪಾವತಿ ಶಿಲ್ಕಿನ ಕೊರತೆಗೆ ಕಾರಣಗಳು

ಒಂದು ರಾಷ್ಟ್ರ ಅಭಿವೃದ್ಧಿ ಸಾಧಿಸಲು ಕೈಗಾರಿಕರಣ ಕಾರ್ಯಕ್ರಮ ಕೈಗೊಂಡಾಗ ಅಧಿಕ ಪ್ರಮಾಣದಲ್ಲಿ ಬಂಡವಾಳ ಸರಕುಗಳನ್ನು ಆಮದು ಮಾಡಿಕೊಳ್ಳಬೇಕಾಗುತ್ತದೆ. ಆದರೆ

ಇಂತಹ ರಾಷ್ಟ್ರಗಳ ಪ್ರಮುಖ ಉದ್ಯೋಗ ಕೃಷಿಯಾಗಿದ್ದು, ಅವರು ಕೃಷಿ ಸಂಬಂಧ ಸರಕುಗಳನ್ನು ರಫ್ತು ಮಾಡುತ್ತವೆ.ಕೃಷಿ ಸರಕುಗಳಿಗೆ ಬೇಡಿಕೆ ಕಡಿಮೆ ಸ್ಥಿತಿಸ್ಥಾಪಕತ್ವ ಗುಣವನ್ನು ಹೊಂದಿದ್ದು, ರಫ್ತು ಜಾಸ್ತಿ ಪರಮಾಣದಲ್ಲಿ ಮಾಡಲು ಸಾಧ್ಯವಾಗುವುದಿಲ್ಲ. ಅಭಿವೃದ್ಧಿಶೀಲ ರಾಷ್ಟ್ರಗಳು ಉತ್ಪಾದಿಸುವ ಕೈಗಾರಿಕಾ ಸರಕುಗಳು ಅಂತರ ರಾಷ್ಟ್ರೀಯ ಮಾರುಕಟ್ಟೆಯಲ್ಲಿ ಪೈಪೋಟಿಯನ್ನು ಎದುರಿಸುವ ಸಾಮರ್ಥ್ಯವನ್ನು ಪ್ರಾರಂಭದಲ್ಲಿ ಹೊಂದಿರುವುದಿಲ್ಲ.

ನಾವು ಸ್ವಾತಂತ್ರ್ಯಗಳಿಸಿದ ಮೇಲೆ ಪಂಚವಾರ್ಷಿಕ ಯೋಜನೆ ಪ್ರಾರಂಭಿಸಿ ಅನೇಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಕಾರ್ಯಗತಮಾಡಿದುದರಿಂದ, ಬಂಡವಾಳ ಸರಕುಗಳ ಆಮದು ಜಾಸ್ತಿಯಾಗಲು, ರಾಷ್ಟ್ರದಲ್ಲಿಯೇ ದೊಡ್ಡ ಮಾರುಕಟ್ಟೆ ಇದ್ದುದರಿಂದ ರಫ್ತು ಪ್ರಮಾಣ ಜಾಸ್ತಿಯಾಗಲಿಲ್ಲ. ಐದನೆ ಪಂಚವಾರ್ಷಿಕ ಯೋಜನೆ (೧೯೭೪-೭೯)ಯ ಅವಧಿಯನ್ನು ಬಿಟ್ಟು ಇತರ ಎಲ್ಲಾ ವರ್ಷಗಳಲ್ಲಿ ಚಾಲ್ತಿ ಲೆಕ್ಕಕದ ಪಾವತಿ ಶಿಲ್ಕಿನಲ್ಲಿ ಕೊರತೆಯನ್ನು ಎದುರಿಸಬೇಕಾಯಿತು. ಸುಮಾರು ೨ ದಶಕಗಳ ನಂತರ ೨೦೦೧-೦೨ರಲ್ಲಿ ಚಾಲ್ತಿ ಲೆಕ್ಕದ ಪಾವತಿ ಶಿಲ್ಕಿನಲ್ಲಿ ಹೆಚ್ಚಳ ಕಂಡುಬಂದಿತು. ಇದೇ ಪರಿಸ್ಥಿತಿ ೨೦೦೨-೦೩, ೨೦೦೩-೦೪ರಲ್ಲೂ ಮುಂದುವರೆಯಿತು.

**ಪಾವತಿ ಶಿಲ್ಕು ಕೊರತೆಯನ್ನು ನಿವಾರಿಸಲು ತೆಗೆದುಕೊಳ್ಳುವ ಕ್ರಮಗಳು**

ಕೊರತೆ ಎದುರಿಸುವ ರಾಷ್ಟ್ರಗಳು ಇದನ್ನು ಸರಿಪಡಿಸಲು ಅನೇಕ ಕ್ರಮಗಳನ್ನು ಕೈಗೊಳ್ಳುತ್ತವೆ. ಯಾವುವೆಂದರೆ

೧. ಬೆಲೆ ಕುಗ್ಗಿಸುವುದು ಅಂದರೆ ಹಣದ ಚಲಾವಣೆ ಕಡಿಮೆ ಮಾಡುವುದು.
೨. ವಿದೇಶಿ ವಿನಿಮಯಕೊಳ್ಳುವ ಶಕ್ತಿಯ ಕುಗ್ಗುವಿಕೆ.
೩. ಅಪಮೌಲ್ಯ.
೪. ವಿದೇಶಿ ವಿನಿಮಯ ನಿಯಂತ್ರಣ

ಹಣದ ಚಲಾವಣೆ ಕಡಿಮೆ ಮಾಡಿ ಬೆಲೆ ತಗ್ಗಿಸುವುದಕ್ಕೆ ಕೇಂದ್ರ ಬ್ಯಾಂಕು ಬಡ್ಡಿಯ ದರವನ್ನು ಜಾಸ್ತಿ ಮಾಡುತ್ತದೆ. ಇದರಿಂದ ವಾಣಿಜ್ಯ ಬ್ಯಾಂಕುಗಳು ಸೃಷ್ಟಿಸುವ ಉದ್ದರಿ ಹಣದ ಪ್ರಮಾಣ ಕಡಿಮೆಯಾಗುತ್ತದೆ. ಬಂಡವಾಳದ ಹೂಡಿಕೆ ಕಡಿಮೆಯಾಗಿ, ಉತ್ಪಾದನೆ, ಉದ್ಯೋಗ, ಆದಾಯ, ಬೇಡಿಕೆ ಬೆಲೆ ಇವುಗಳೆಲ್ಲಾ ಕಡಿಮೆಯಾಗಿ ವಿದೇಶದಿಂದ ಆಮದು ಕಡಿಮೆಯಾಗುತ್ತದೆ. ಬೆಲೆ ಕಡಿಮೆಯಾಗುವುದರಿಂದ ರಫ್ತು ಜಾಸ್ತಿಯಾಗುತ್ತದೆ ಈ ಕ್ರಮದ ಜೊತೆಗೆ ಕೇಂದ್ರ ಬ್ಯಾಂಕು ಸರ್ಕಾರ ವಾಗ್ದಾನ ಪತ್ರಗಳನ್ನು ಮಾರಾಟ ಮಾಡಿ ಚಲಾವಣೆ ಯಲ್ಲಿರುವ ಹಣದ ಪ್ರಮಾಣವನ್ನು ಕಡಿಮೆಮಾಡುತ್ತದೆ. ಬೆಲೆ ಕಡಿಮೆಯಾದರೆ ನಿರ್ದಿಷ್ಟ ಆದಾಯ ಪಡೆಯುವವರಿಗೆ ಅನುಕೂಲವಾಗಿ, ವ್ಯಾಪಾರಗಳಿಗೆ, ಉದ್ಯಮಗಳಿಗೆ, ಬೇಸಾಯ ಗಾರರಿಗೆ ಕಾರ್ಮಿಕರಿಗೆ, ಅನಾನುಕೂಲ ಉಂಟಾಗುತ್ತದೆ. ಆದರೆ ಉತ್ಪಾದನೆ ಉದ್ಯೋಗ ಕಡಿಮೆಯಾದರೆ ಕಾರ್ಮಿಕರು ಇದನ್ನು ವಿರೋಧಿಸುತ್ತಾರೆ. ಸರ್ಕಾರಕ್ಕೆ ತೆರಿಗೆಗಳಿಂದ ಬರುವ ಆದಾಯವೂ ಕಡಿಮೆಯಾಗುತ್ತದೆ. ಆದರೆ ಆರ್ಥಿಕ ವ್ಯವಸ್ಥೆಯಲ್ಲಿ ಅಷ್ಟು ಸುಲಭವಾಗಿ

ಉತ್ಪಾದನೆ, ಉದ್ಯೋಗ, ಆದಾಯ, ಬೇಡಿಕೆ, ಆಮದು, ರಫ್ತು ಇವುಗಳು ನಿರೀಕ್ಷಿಸಿದ ರೀತಿಯಲ್ಲಿ ಬದಲಾವಣೆಯಾಗುವುದಿಲ್ಲ ಇವುಗಳೆಲ್ಲಾ ಬಿರುಸಾದ ಗುಣವನ್ನು ಹೊಂದಿರುತ್ತವೆ. ಸ್ಥಿರ ವಿನಿಮಯ ದರವಿರುವ ವ್ಯವಸ್ಥೆಯಲ್ಲಿ ಮತ್ತು ಸುವರ್ಣನಾಣ್ಯ ಪ್ರಮಿತಿ ಇದ್ದಾಗ ಈ ಕ್ರಮವನ್ನು ಕೈಗೊಂಡು ಸ್ವಲ್ಪ ಮಟ್ಟಿನ ಯಶಸ್ಸನ್ನು ಗಳಿಸುವ ಸಾಧ್ಯತೆ ಇದ್ದಿತು.

### ವಿದೇಶಿ ವಿನಿಮಯ ಕೊಳ್ಳುವ ಶಕ್ತಿಯ ಕುಗ್ಗುವಿಕೆ

ವಿದೇಶಿ ವಿನಿಮಯಕ್ಕೆ ಇರುವ ಬೇಡಿಕೆ ಮತ್ತು ನೀಡಿಕೆಯ ಆಧಾರದ ಮೇಲೆ ವಿನಿಮಯದರ ನಿರ್ಧಾರವಾದರೆ, ಪಾವತಿ ಶಿಲ್ಕಿನಲ್ಲಿ ಕೊರತೆ ಉಂಟಾದಾಗ, ವಿದೇಶಿ ವಿನಿಮಯ ದರ ಹೆಚ್ಚು ಅಂದರೆ ನಮ್ಮ ಹಣ ವಿದೇಶಿ ಹಣವನ್ನು ಕೊಳ್ಳುವ ಶಕ್ತಿ ತನ್ನಷ್ಟಕ್ಕೆ ತಾನೆ ಕಡಿಮೆಯಾಗುತ್ತದೆ. ನಮ್ಮ ಸರಕುಗಳ ಬೆಲೆ ವಿದೇಶಿಯರಿಗೆ ಕಡಿಮೆಯಾಗಿ ಅವರು ಆಮದು ಜಾಸ್ತಿ ಮಾಡಿಕೊಳ್ಳುತ್ತಾರೆ. ವಿದೇಶಿ ಸರಕುಗಳು ದುಬಾರಿಯಾಗಿ ನಾವು ಆಮದು ಕಡಿಮೆ ಮಾಡುವುದರಿಂದ ಪಾವತಿ ಶಿಲ್ಕಿನ ಕೊರತೆ ಕಡಿಮೆಯಾಗುತ್ತದೆ. ಇದರ ಯಶಸ್ಸು ನಮ್ಮ ಸರಕುಗಳಿಗೆ ವಿದೇಶದಲ್ಲಿರುವ ಬೇಡಿಕೆಯು ಸ್ಥಿತಿಸ್ಥಾಪಕತ್ವ ಗುಣವನ್ನು ಅವಲಂಬಿಸಿರುತ್ತದೆ. ಒಂದು ರಾಷ್ಟ್ರ ಸ್ಥಿರ ವಿನಿಮಯ ದರ ವ್ಯವಸ್ಥೆ ಇಟ್ಟುಕೊಂಡಿದ್ದರೆ. ತನ್ನಷ್ಟಕ್ಕೆ ತಾನೇ ಸ್ವಾಭಾವಿಕವಾಗಿ ವಿನಿಮಯ ದರ ಜಾಸ್ತಿ ಅಥಾವ ಕಡಿಮೆಯಾಗಲು ಸಾಧ್ಯವಾಗುವುದಿಲ್ಲ.

### ಹಣದ ಅಪಮೌಲ್ಯ

ಚಿನ್ನದೊಡನೆ ಅಥವಾ ವಿದೇಶಿ ಹಣದೊಡನೆ ಒಂದು ದೇಶದ ಹಣದ ಕೊಳ್ಳುವ ಶಕ್ತಿಯನ್ನು ಉದ್ದೇಶ ಪೂರ್ವಕವಾಗಿ ಕಡಿಮೆ ಮಾಡಿಕೊಂಡರೆ ಅದನ್ನು ಅಪಮೌಲ್ಯ ಎಂದು ಕರೆಯುತ್ತಾರೆ. ಅಪಮೌಲ್ಯ ಮಾಡಿಕೊಂಡ ಹಣದ ಬಾಹ್ಯಕೊಳ್ಳುವ ಶಕ್ತಿ ಕಡಿಮೆಯಾಗುತ್ತದೆ. ಅಪಮೌಲ್ಯ ಮಾಡಿಕೊಂಡ ರಾಷ್ಟ್ರದ ಸರಕುಗಳ ಬೆಲೆ ವಿದೇಶಿಯರಿಗೆ ಕಡಿಮೆಯಾಗಿ ರಫ್ತು ಜಾಸ್ತಿಯಾಗಿ, ಆಮದು ಕಡಿಮೆಯಾಗುತ್ತದೆ. ವಿನಿಮಯ ದರದ ಸ್ವಾಭಾವಿಕ ಕುಗ್ಗುವಿಕೆ (Depreciation) ಮತ್ತು ಅಪಮೌಲ್ಯದ ಪರಿಣಾಮಗಳು ಒಂದೇ ಆಗಿವೆ. ಆದರೆ ಅಪಮೌಲ್ಯ ಮಾಡಿದಾಗ, ಪಾವತಿ ಶಿಲ್ಕು ಕೊರತೆಯನ್ನು ಒಂದು ರಾಷ್ಟ್ರ ಇನ್ನೊಂದು ರಾಷ್ಟ್ರಕ್ಕೆ ವರ್ಗಾಯಿಸಿದಂತೆ ಆಗುತ್ತದೆ. ಇಂತಹ ನೀತಿಯನ್ನು 'ನಿಮ್ಮ ನೆರೆಹೊರೆಯವನು ಭಿಕ್ಷುಕ' (Begger thy neighbour) ಎಂದು ಕರೆಯುತ್ತಾರೆ. ಬೇಡಿಕೆಯ ಸ್ಥಿತಿಸ್ಥಾಪಕತ್ವದ ಆಧಾರದ ಮೇಲೆ ಅಪಮೌಲ್ಯದ ಪರಿಣಾಮ ಅವಲಂಬಿಸಿದೆ. ಅಪಮೌಲ್ಯ ಮಾಡಿಕೊಂಡ ಮೇಲೆ ಬೆಲೆಗಳು ಜಾಸ್ತಿ ಆದರೆ ಯಾವ ಅನುಕೂಲವೂ ದೊರೆಯುವುದಿಲ್ಲ. ಹಾಗೆಯೇ ಬೇರೆ ರಾಷ್ಟ್ರಗಳೂ ಅಪಮೌಲ್ಯದ ಆಟವನ್ನು ಆಡಿದರೆ ಯಾವ ರಾಷ್ಟ್ರಕ್ಕೂ ಇದರ ಅನುಕೂಲಗಳು ದೊರಕುವುದಿಲ್ಲ. ನಮ್ಮ ಸೇರಿದಂತೆ ಅನೇಕ ರಾಷ್ಟ್ರಗಳು ಅಪಮೌಲ್ಯ ಕ್ರಮವನ್ನು ವಿವಿಧ ಕಾಲದಲ್ಲಿ ತೆಗೆದುಕೊಂಡು ಮಿಶ್ರ ಪ್ರತಿಫಲಗಳನ್ನು ಪಡೆದಿವೆ.

## ವಿದೇಶಿ ವಿನಿಮಯ ನಿಯಂತ್ರಣ

ಪಾವತಿ ಶಿಲ್ಕಿನಲ್ಲಿ ಕೊರತೆಯುಂಟಾದಾಗ, ವಿದೇಶಿ ವಿನಿಮಯ ಕೊರತೆ ಉಂಟಾಗಿ, ಬಂಡವಾಳವು ವಿದೇಶಕ್ಕೆ ಹರಿಯುವ ಸಂದರ್ಭದಲ್ಲಿ ವಿದೇಶಿ ವಿನಿಮಯ ನಿಯಂತ್ರಣ ಕ್ರಮಗಳನ್ನು ಸರ್ಕಾರ ಕೈಗೊಳ್ಳುತ್ತದೆ. ಈ ರೀತಿಯ ನಿಯಂತ್ರಣದ ಮೂಲಕ ಸ್ವದೇಶಿ ಹಣದ ವಿನಿಮಯ ಮೌಲ್ಯವನ್ನು ಕಡಿಮೆ ಮಾಡಿಕೊಂಡು ಅಂದರೆ ವಿನಿಮಯ ದರ ಜಾಸ್ತಿ ಮಾಡಿ ರಫ್ತನ್ನು ಜಾಸ್ತಿಮಾಡಬಹುದು ಮತ್ತು ಆಮದನ್ನು ಕಡಿಮೆಮಾಡಬಹುದು. ವಿದೇಶಿ ವಿನಿಮಯ ಬೇಕಾದವರು ಮತ್ತು ಗಳಿಸಿದವರು ಕೇಂದ್ರ ಬ್ಯಾಂಕಿನ ಮೂಲಕವೇ ವಿನಿಮಯ ವ್ಯವಹಾರವನ್ನು ನಡೆಸಬೇಕು ಎಂಬ ನಿರ್ಬಂಧ ಹಾಕಲಾಗುತ್ತದೆ. ಕೆಲವು ವೇಳೆ ಸರ್ಕಾರ ವಿದೇಶಿಯರಿಗೆ ಕೊಡಬೇಕಾದ ಹಣವನ್ನು 'ತಡೆ ಹಿಡಿದ' ಲೆಕ್ಕದಲ್ಲಿಟ್ಟು ಬೇಕೆಂದಾಗ ಮಾತ್ರ ಒಪ್ಪಂದದ ಮೂಲಕ ಬಿಡುಗಡೆ ಮಾಡಬಹುದು. ಈ ಕ್ರಮಗಳನ್ನು ನೇರ ನಿಯಂತ್ರಣವೆಂದು ಕರೆಯುತ್ತೇವೆ.

ಕೊರತೆ ಹೊಂದಿರುವ ರಾಷ್ಟ್ರಗಳು ವಿದೇಶಿ ವಿನಿಮಯ ಬಳಕೆಯ ಮೇಲೆ ಅನೇಕ ನಿರ್ಬಂಧಗಳನ್ನು ವಿಧಿಸುತ್ತವೆ. ನಮ್ಮ ದೇಶದಲ್ಲಿ ವಿದೇಶಿ ವಿನಿಯಮ ನಿಯಂತ್ರಣ ಮಸೂದೆ ಮತ್ತು ವಿದೇಶಿ ವಿನಿಮಯ ನಿರ್ವಹಣೆ ಮಸೂದೆ ಜಾರಿಗೆ ಬಂದು ವಿದೇಶಿ ವಿನಿಯಮ ವ್ಯಪಹಾರವನ್ನು ನಿಯಂತ್ರಿಸಲಾಗಿತ್ತು. ಆದರೆ ಈಗ ವಿದೇಶಿ ವಿನಿಮಯದ ಪರಿಸ್ಥಿತಿ ಉತ್ತಮವಾಗಿರುವುದರಿಂದ ನಿರ್ಬಂಧಗಳನ್ನು ಸಡಿಲ ಮಾಡಲಾಗಿದೆ. ಪರೋಕ್ಷವಾಗಿಯೂ ಸರ್ಕಾರ ವಿದೇಶಿ ವಿನಿಮಯ ವ್ಯವಹಾರವನ್ನು ನಿಯಂತ್ರಿಸಬಹುದು.

ಉದಾ: ವಿದೇಶಿ ಸರಕುಗಳ ಆಮದನ್ನು ತಡೆಗಟ್ಟಲು ಅವುಗಳ ಮೇಲೆ ಅತಿಯಾದ ಸುಂಕವನ್ನು ವಿಧಿಸಬಹುದು. ಅಥವಾ ಆಮದು ಮಾಡಿಕೊಳ್ಳುವ ಸರಕುಗಳ ಪ್ರಮಾಣ ಎಷ್ಟು ಎಂಬುದನ್ನು ನಿಗಧಿಮಾಡಬಹುದು. ೧೯೩೦ರ ವಿಶ್ವ ಆರ್ಥಿಕ ಮುಗ್ಗಟ್ಟಿನ ಪರಿಸ್ಥಿತಿಯಲ್ಲಿ ಮತ್ತು ೨ನೇ ಮಹಾಯುದ್ಧದ ನಂತರ ಅನೇಕ ರಾಷ್ಟ್ರಗಳು ವಿವಿಧ ರೀತಿಯ ವಿನಿಮಯ ನಿಯಂತ್ರಣಗಳನ್ನು ಜಾರಿಗೆ ತಂದವು. ಈ ಕ್ರಮಗಳಿಂದ ಅಂತರಾಷ್ಟ್ರೀಯ ವ್ಯಾಪಾರದ ಮೇಲೆ ಅಡಚಣೆ ಉಂಟಾಯಿತು. ಈ ಅಡಚಣೆಗಳನ್ನು ನಿವಾರಿಸಲು ೧೯೪೮ರಲ್ಲಿ G.A.T.T. ವ್ಯವಸ್ಥೆ ಜಾರಿಗೆ ಬಂದಿತು. ಇದರ ಜಾಗದಲ್ಲಿ ೧೯೯೫ರಲ್ಲಿ ವಿಶ್ವ ವ್ಯಾಪಾರಸಂಸ್ಥೆ ಅಸ್ತಿತ್ವಕ್ಕೆ ಬಂದಿತು. ಈ ಹೊಸ ವ್ಯವಸ್ಥೆಯಲ್ಲಿ ಅಂತರಾಷ್ಟ್ರೀಯ ವ್ಯಾಪಾರಗಳ ಮೇಲಿದ್ದ ಅನೇಕ ರೀತಿಯ ನಿರ್ಬಂಧಗಳು ಕ್ರಮೇಣವಾಗಿ ಕಡಿಮೆಯಾಗುತ್ತಿವೆ. ಆದರೆ ಅವುಗಳನ್ನು ಸಂಪೂರ್ಣವಾಗಿ ತೊಡೆದು ಹಾಕಲು ಸಾಧ್ಯವಾಗಿಲ್ಲ.

## ಕೂಡಿಟ್ಟಿರುವ ವಿದೇಶಿ ವಿನಿಮಯ

ಸರಕು ಅಥವಾ ಸೇವೆಗಳನ್ನು ರಫ್ತುಮಾಡಿದಾಗ ವಿದೇಶಿಯರು ಸರ್ವರಿಗೂ ಸ್ವೀಕೃತ ವಾಗುವಂತ ಕೊಡುವ ಹಣವೆ ವಿದೇಶಿ ವಿನಿಮಯ. ಈ ವಿದೇಶಿ ವಿನಿಮಯ ಸಹಾಯದಿಂದ

ನಾವು ಪ್ರಪಂಚದ ಯಾವ ಭಾಗದಿಂದಲಾದರೂ ಆಮದು ಮಾಡಿಕೊಂಡು ಸರಕು ಮತ್ತು ಸೇವೆಗಳಿಗೆ ಹಣ ಪಾವತಿ ಮಾಡಬಹುದು. ಸರ್ವರಿಗೂ ಸ್ವೀಕೃತವಾಗುವ ಹಣವನ್ನು Hard Currency ಎಂದು ಕರೆಯಲಾಗಿದೆ. ಅಂದರೆ ಈ ವಿದೇಶಿ ವಿನಿಮಯವನ್ನು ಗಳಿಸುವುದು ಕಷ್ಟವಾಗಿರುತ್ತದೆ. ಉದಾ: ಅಮೆರಿಕನ್ ಡಾಲರ್, ಯುರೋಪಿಯನ್ ಯೂನಿಯನ್ ಯೂರೋ, ಜಪಾನ್ ದೇಶದ ಯನ್ ಇವುಗಳನ್ನು Hard Currency ಎಂದು ಕರೆಯುತ್ತಾರೆ. ಈ ಹಣವನ್ನು ಪ್ರಪಂಚದಲ್ಲಿರುವ ರಾಷ್ಟ್ರಗಳೆಲ್ಲವೂ ಅಂತರರಾಷ್ಟ್ರೀಯ ವ್ಯಾಪಾರ ವ್ಯವಹಾರದಲ್ಲಿ ಅಂಗೀಕರಿಸುತ್ತವೆ. ಇನ್ನು ಕೆಲವು ದೇಶಗಳ ಹಣವನ್ನು ಗಳಿಸುವುದು ಕಷ್ಟ ಸಾಧ್ಯವಲ್ಲ. ಅಂತಹ ಹಣವನ್ನು Soft Currency ಎಂದು ಕರೆಯುತ್ತಾರೆ. ಸಾಮಾನ್ಯವಾಗಿ ಅಭಿವೃದ್ಧಿ ಹೊಂದುತ್ತಿರುವ ರಾಷ್ಟ್ರಗಳ ಹಣ ಈ ಗುಂಪಿಗೆ ಸೇರಿದೆ. ಆಮದು ಮಾಡಿಕೊಂಡ ರಾಷ್ಟ್ರ ಚಿನ್ನದ ರೂಪದಲ್ಲೂ ಹಣ ಪಾವತಿಮಾಬಹುದು. ಆದರೆ ಈಗ ರಾಷ್ಟ್ರಗಳು ಚಿನ್ನವನ್ನು ಕೇವಲ ಅನಿವಾರ್ಯ ಪರಿಸ್ಥಿತಿಯಲ್ಲಿ ಮಾತ್ರ ಉಪಯೋಗಿಸುತ್ತವೆ. ಸ್ವಾತಂತ್ರ್ಯ ಬಂದ ಮೇಲೆ ಒಂದು ಸಲ ವಿದೇಶಿ ಸಾಲವನ್ನು ತೀರಿಸಲು ನಾವು ಚಿನ್ನವನ್ನು ಅಡವಿಡಬೇಕಾಯಿತು. ಸ್ವಾತಂತ್ರ್ಯಪೂರ್ವದಲ್ಲಿ ಅಂದರೆ ೧೯೩೦-೩೯ರ ವರೆಗೆ ನಮ್ಮ ಪಾವತಿ ಶಿಲ್ಕಿನಲ್ಲಿ ಕೊರತೆ ಕಂಡುಬಂದು ಆಗ ಹೆಚ್ಚಿನ ವ್ಯಾಪಾರ ಬ್ರಿಟನ್‌ನೊಡನೆ ಇದ್ದಿತು ದೊಡ್ಡ ಪ್ರಮಾಣದಲ್ಲಿ ಚಿನ್ನವನ್ನು ಬ್ರಿಟನ್ನಿಗೆ ರಫ್ತು ಮಾಡಲಾಯಿತು. ಇದನ್ನು ೧೯೩೦ರ ದಶಕದ ಚಿನ್ನದ ಪಲಾಯನ ಎಂದು ಕರೆಯಲಾಗಿದೆ. ಎರಡನೇ ಮಹಾಯುದ್ಧ ಪ್ರಾರಂಭವಾದ ಮೇಲೆ ನಮ್ಮ ದೇಶದಿಂದ ಬ್ರಿಟನ್ನಿಗೆ ರಫ್ತು ಜಾಸ್ತಿಯಾಗಿ ನಾವು ಸ್ಟರ್ಲಿಂಗ್ ಹಣವನ್ನು ಅಪಾರವಾಗಿ ಗಳಿಸಿದೆವು. ೧೯೩೯ ರಿಂದ ೧೯೪೬ರ ವರೆಗೆ ಇಂಡಿಯಾ ದೇಶ ೧೪೩೦ ಕೋಟಿ ರೂ.ಗಳ ಸ್ಟರ್ಲಿಂಗ್ ಪೌಂಡು ಹಣವನ್ನು ಗಳಿಸಿ ಅದು ಬ್ರಿಟನ್‌ನಲ್ಲಿ ನಾವು ಕೂಡಿಟ್ಟಿರುವ ವಿದೇಶಿ ವಿನಿಮಯದ ನಿಧಿಯಾಯಿತು. ಈ ಕೂಡಿಟ್ಟ ವಿದೇಶಿ ವಿನಿಮಯ ಹಣವನ್ನು ಪಂಚವಾರ್ಷಿಕ ಯೋಜನೆ ಪ್ರಾರಂಭವಾದ ಮೇಲೆ ಅನೇಕ ರೀತಿಯ ಬಂಡವಾಳ ಸರಕುಗಳನ್ನು ಆಮದು ಮಾಡಿಕೊಳ್ಳಲು ಉಪಯೋಗಿಸಲಾಯಿತು.

ವಿದೇಶಿ ವಿನಿಮಯ ಮುಖ್ಯವಾಗಿ ಮೂರು ಕಾರ್ಯಗಳನ್ನು ನಿರ್ವಹಿಸುತ್ತದೆ. ಮೊದಲನೆಯದಾಗಿ ಇದನ್ನು ರಿಸರ್ವ್‌ಬ್ಯಾಂಕ್ ಆಫ್ ಇಂಡಿಯಾ ನೋಟುಗಳನ್ನು ಚಲಾವಣೆಗೆ ತರಲು ಆಧಾರವಾಗಿ ಇಟ್ಟುಕೊಂಡಿದೆ. ೧೯೫೬ರ ಕಾನೂನಿನ ಪ್ರಕಾರ, ನೋಟುಗಳಿಗೆ ಆಧಾರವಾಗಿ ಕನಿಷ್ಟ ೮೫ ಕೋಟಿ ವಿದೇಶಿ ವಿನಿಮಯವನ್ನು ಮತ್ತು ೧೧೫ ಕೋಟಿರೂ ಮೌಲ್ಯದ ಚಿನ್ನವನ್ನು ಕೇಂದ್ರದ ಬ್ಯಾಂಕು ಹೊಂದಿರಬೇಕು ಎಂಬ ನಿಯಮವಿದೆ ಉಳಿದ ನೋಟುಗಳಿಗೆ ಆಧಾರವಾಗಿ ಸರ್ಕಾರದ ವಾಗ್ದಾನ ಪತ್ರಗಳು ಇರುತ್ತವೆ. ವಿದೇಶಿ ವಿನಿಮಯ ನಿರ್ವಹಿಸುವ ಎರಡನೇ ಕಾರ್ಯವೆಂದರೆ ಇದನ್ನು ವಿದೇಶದಿಂದ ಆಮದು ಮಾಡಿಕೊಳ್ಳುವ ಸರಕುಗಳಿಗೆ ಪಾವತಿ ಮಾಡಲು ಉಪಯೋಗಿಸಲಾಗುತ್ತದೆ. ಮೂರನೆ ಕಾರ್ಯವೆಂದರೆ ರೂಪಾಯಿ ವಿನಿಮಯ ಮೌಲ್ಯದ ಸ್ಥಿರತೆಯನ್ನು ಕಾಪಾಡಲು, ರಿಸರ್ವ್

ಬ್ಯಾಂಕು ವಿದೇಶಿ ಹಣದ ಮಾರುಕಟ್ಟೆಯಲ್ಲಿ ಕೆಲವು ವೇಳೆ ವಿದೇಶಿ ವಿನಿಮಯ ಕೊಳ್ಳುತ್ತದೆ. ವಿದೇಶಿ ಹಣಕ್ಕೆ ಬೇಡಿಕೆ ಜಾಸ್ತಿಮಾಡಿ ಅದರ ವಿನಿಮಯ ಮೌಲ್ಯವನ್ನು ಜಾಸ್ತಿ ಮಾಡುತ್ತದೆ. ಮತ್ತೆ ಕೆಲವು ವೇಳೆ ವಿದೇಶಿ ವಿನಿಮಯವನ್ನು ಸ್ವದೇಶ ಹಣಕ್ಕೆ ಮಾರುತ್ತದೆ. (ಆಗ ಸ್ವದೇಶ ಹಣಕ್ಕೆ ಬೇಡಿಕೆ ವಿನಿಮಯ ಜಾಸ್ತಿಯಾಗಿ ಅದರ ಮೌಲ್ಯ ಜಾಸ್ತಿಯಾಗುತ್ತದೆ ಮತ್ತು ಸ್ವದೇಶಿ ಹಣದ ವಿನಿಮಯ ದರ ಕಡಿಮೆಯಾಗುತ್ತದೆ.)

ಈಗ ಜಾರಿಯಲ್ಲಿರುವ ತೇಲುವ ವಿನಿಮಯ ದರ ಪದ್ಧತಿಯಲ್ಲಿ, ರೂಪಾಯಿ ಬಾಹ್ಯ ವಿನಿಮಯದಲ್ಲಿ ಉಂಟಾಗುವ ಏರುಪೇರುಗಳನ್ನು ತಪ್ಪಿಸಲು ಉಪಯೋಗಿಸಲಾಗುತ್ತದೆ. ಉದಾ ಈಗ ವಿದೇಶದಿಂದ ನಮ್ಮ ದೇಶಕ್ಕೆ ಬರುತ್ತಿರುವ ವಿದೇಶಿ ಬಂಡವಾಳದ ಪ್ರಮಾಣ ಜಾಸ್ತಿ ಇದ್ದು ಇದನ್ನು ರೂಪಾಯಿಗೆ ಪರಿವರ್ತಿಸಬೇಕಾಗಿರುವುದರಿಂದ ನಮ್ಮ ರೂ.ಗೆ ಬೇಡಿಕೆ ಜಾಸ್ತಿಯಾಗಿ ರೂ. ವಿನಿಮಯ ದರ ಕಡಿಮೆಯಾಗಿ, ರೂ.ನ ವಿನಿಮಯ ಮೌಲ್ಯ ಜಾಸ್ತಿಯಾಗುತ್ತದೆ. ೨೦೦೪ರಲ್ಲಿ ಸರಾಸರಿ ದರ ೧ ಡಾಲರ್ ೪೬.೨೩ರೂ.ಗಳಿಗೆ ಸಮನಾಗಿದ್ದು ಈಗ ೧ ಡಾಲರ್‌ನ್ನು ಕೊಳ್ಳಲು ೪೩.೬೩ ರೂ. ಮಾತ್ರ ಸಾಕಾಗಿದೆ. (ಏಪ್ರಿಲ್ ೨೦೦೫) ರಿಸರ್ವ್ ಬ್ಯಾಂಕು ವಿನಿಮಯ ಮಾರುಕಟ್ಟೆಯಲ್ಲಿ ಮಧ್ಯ ಪ್ರವೇಶಿಸಿ ಡಾಲರನ್ನು ಕೊಟ್ಟು ರೂ. ವಿನಿಮಯ ಮೌಲ್ಯ ಜಾಸ್ತಿಯಾದರೆ ನಮ್ಮ ರಫ್ತು ಕಡಿಮೆಯಾಗುತ್ತದೆ. ಮತ್ತು ರಫ್ತು ಮಾಡುವವರ ಆದಾಯ ಕಡಿಮೆಯಾಗುತ್ತದೆ. (ಡಾಲರ್‌ನ್ನು ರೂ.ಗೆ ಪರಿವರ್ತಿಸಿದಾಗ ದೊರಕುವ ರೂ.ಗಳು ಕಡಿಮೆಯಾಗುತ್ತದೆ.)

ನಮ್ಮ ದೇಶದಲ್ಲಿರುವ ಕಾನೂನಿನ ಪ್ರಕಾರ ವಿದೇಶಿ ವಿನಿಮಯ ಹಣದ ಪ್ರಮಾಣ ಕನಿಷ್ಟ ೬ ತಿಂಗಳ ಆಮದು ಮಾಡಿಕೊಳ್ಳುವ ಸರಕು ಮತ್ತು ಸೇವೆಗಳನ್ನುಕೊಳ್ಳುವ ಶಕ್ತಿಯನ್ನು ಹೊಂದಿರಬೇಕು. ಆದರೆ ಈಗ ನಮ್ಮಲ್ಲಿರುವ ವಿದೇಶಿ ವಿನಿಮಯದ ಪ್ರಮಾಣ ಸುಮಾರು ೧೬ ತಿಂಗಳ ಆಮದು ವೆಚ್ಚವನ್ನು ಭರಿಸುವ ಸಾಮರ್ಥ್ಯ ಹೊಂದಿದೆ. ೨೦೦೪-೦೫ರಲ್ಲಿ ನಮ್ಮ ಒಟ್ಟು ಆಮದಿನ ಮೌಲ್ಯ $ ೧೦೬.೫ ಬಿಲಿಯನ್ ಆಗಿದ್ದಿತು. ಮೇ ತಿಂಗಳು ೧೫ ರಂದು ನಮ್ಮ ವಿದೇಶಿ ವಿನಿಮಯದ ಪ್ರಮಾಣ $ ೧೪೧.೪೭೫ ಬಿಲಿಯನ್ನು ಆಗಿದ್ದರು.

ಬಂಡವಾಳ ಲೆಕ್ಕ ಪರಿವರ್ತನೆ ಮಂಡಳಿಯ ವರದಿ ವಿದೇಶಿ ವಿನಿಮಯ ಕಾಲ್ದರಿಸಿದ ಪ್ರಮಾಣದ ಸಾಕಾಗುವಿಕೆ ಬಗ್ಗೆ ಈ ಸಲಹೆಗಳನ್ನು ಕೊಟ್ಟಿದೆ.

೧. ೬ ತಿಂಗಳ ಆಮದು ವೆಚ್ಚವನ್ನು ಭರಿಸುವಷ್ಟು ವಿದೇಶಿ ವಿನಿಮಯದ ರಕ್ಷಣೆ ಇರಬೇಕು.

೨. ಕೊನೆಯ ಪಕ್ಷ ೩ ತಿಂಗಳ ಆಮದು ವೆಚ್ಚ ಭರಿಸುವ ಮೊತ್ತ ಪ್ರತಿ ವರ್ಷ ವಿದೇಶಿ ಸಾಲದ ಮೇಲೆ ಬಡ್ಡಿ ಕಟ್ಟಲು ಬೇಕಾಗುವ ವಿದೇಶಿ ವಿನಿಮಯ ಇರಬೇಕು.

೩. ನಮ್ಮ ಅಲ್ಪಾವಧಿಯ ವಿದೇಶಿ ಸಾಲ ಮತ್ತು ವಿದೇಶಿಯರು ನಮ್ಮ ಷೇರುಗಳು ಮತ್ತು ವಾಗ್ದಾನ ಪತ್ರಗಳನ್ನು ಕೊಂಡಿರುವುದರ ಒಟ್ಟು ಮೌಲ್ಯ ನಮ್ಮಲ್ಲಿರುವ ವಿದೇಶಿ ವಿನಿಮಯ ಕಾಯ್ದಿರಿಸಿದ ಹಣದ ಶೇ.೬೦ಕ್ಕಿಂತ ಜಾಸ್ತಿ ಇರಬಾರದು.

೪. ನಮ್ಮ ದೇಶದಲ್ಲಿ ಚಲಾವಣೆಯಲ್ಲಿರುವ ನೋಟುಗಳಿಗೆ ಆಧಾರವಾಗಿ ಕನಿಷ್ಟ ಶೇ.೪೦ರಷ್ಟು ಭಾಗದ ನಿವ್ವಳ ವಿದೇಶಿ ವಿನಿಮಯದ ಆಸ್ತಿ ಇರಬೇಕು. ಈ ಮೇಲೆ ತಿಳಿಸಿದ ೪ ಷರತ್ತುಗಳನ್ನು ಪೂರೈಸುವಷ್ಟು ವಿದೇಶಿ ವಿನಿಮಯ ನಮ್ಮಲ್ಲಿ ಈಗ ಇದೆ.

**ಕಾಯ್ದಿರಿಸಲಾದ ವಿದೇಶಿ ವಿನಿಮಯ (ಅಮೆರಿಕಾದ ಬಿಲಿಯನ್ ಡಾಲರ್‌ಗಳಲ್ಲಿ)**

| | |
|---|---|
| ೧೯೫೦-೫೧ | ೧.೯ |
| ೬೪-೬೫ | ೦.೨೪ |
| ೭೯-೮೦ | ೬.೩ |
| ೯೦-೯೧ | ೨.೨ |
| ೯೧-೯೨ | ೫.೬ |
| ೯೨-೯೩ | ೬.೪ |
| ೯೩-೯೪ | ೧೫.೦ |
| ೯೪-೯೫ | ೨೦.೮ |
| ೯೫-೯೬ | ೧೭.೦ |
| ೯೬-೯೭ | ೨೨.೩ |
| ೯೭-೯೮ | ೨೫.೯ |
| ೯೮-೯೯ | ೨೯.೫ |
| ೯೯-೨೦೦೦ | ೩೫.೦ |
| ೨೦೦೦-೦೧ | ೩೯.೫ |
| ೨೦೦೧-೦೨ | ೫೧.೦ |
| ೨೦೦೨-೦೩ | ೭೧.೮ |
| ೨೦೦೩-೦೪ | ೧೦೭.೪ |
| ಮೇ ೨೦೦೫ | ೧೪೧.೪ |

೧೯೯೧ರಲ್ಲಿ ಆರ್ಥಿಕ ಸುಧಾರಣೆಗಳನ್ನು ಜಾರಿಗೆ ತಂದು ಉದಾರೀಕರಣದ ನೀತಿಯನ್ನು ಅನುಸರಿಸತೊಡಗಿದ ಮೇಲೆ, ವಿದೇಶೀ ಬಂಡವಾಳದ ಆಗಮನ ಜಾಸ್ತಿಯಾಗಿ ವಿದೇಶಿ ವಿನಿಮಯದ ಪ್ರಮಾಣವೂ ಜಾಸ್ತಿಯಾಗುತ್ತಾ ಬಂದಿದೆ. ೧೯೯೧ರ ವರೆಗೂ ನಾವು ವಿದೇಶ ವಿನಿಮಯದ ಕೊರತೆಯನ್ನು ಎದುರಿಸುತ್ತಿದ್ದೆವು. ಆದರೆ ಈಗ ಇದರ ಪ್ರಮಾಣ ಜಾಸ್ತಿಯಾಗುತ್ತಾ ಬರುತ್ತಿದೆ. ಆದರೆ ಈ ವಿದೇಶಿ ವಿನಿಮಯವನ್ನು ಸರಕುಗಳ ರಫ್ತು ಪ್ರಮಾಣ ಜಾಸ್ತಿ ಮಾಡಿ ಗಳಿಸುತ್ತಿಲ್ಲ. ವಿದೇಶಿ ವಿನಿಮಯ ಜಾಸ್ತಿಯಾಗುವುದಕ್ಕೆ ಎರಡು ಕಾರಣಗಳಿವೆ. ಮೊದಲೆಯದು ಚಾಲ್ತಿ ಲೆಕ್ಕದ ಪಾವತಿ ಶಿಲ್ಕಿನಲ್ಲಿ ಅಗೋಚರ ಸೇವೆಗಳ ರಫ್ತು ಜಾಸ್ತಿ

ಇದ್ದು ಹೆಚ್ಚಿನ ವಿದೇಶಿ ಹಣವನ್ನು ಗಳಿಸಲು ಸಾಧ್ಯವಾಗಿದೆ. ಸೇವೆಗಳಲ್ಲಿ ಸಾಫ್ಟ್‌ವೇರ್ ರಫ್ತಿನಿಂದ ಬಂದಿರುವ ಪ್ರಮಾಣವೇ ಜಾಸ್ತಿ ಇದೆ. ೧೯೯೫-೯೬ರಲ್ಲಿ ಸಾಫ್ಟ್‌ವೇರ್ ಸೇವೆಯ ರಫ್ತು ಒಟ್ಟು ಸೇವೆಗಳ ರಫ್ತಿನ ಶೇ.೧೦.೨ರಷ್ಟು ಇದ್ದಿತು. ಆದರೆ ೨೦೦೩-೦೪ರಲ್ಲಿ ಒಟ್ಟು ಸೇವೆಯ ರಫ್ತಿನ ಶೇ.೪೮.೯ ಭಾಗ ಸಾಫ್ಟ್‌ವೇರ್ ಸೇವೆಯ ರಫ್ತಿನಿಂದ ಬರುತ್ತಿದೆ. ಅಗೋಚರ ಸೇವೆಗಳ ರಫ್ತಿನಿಂದ ಬಂದ ನಿವ್ವಳ ಆದಾಯ ೨೦೦೩-೦೪ರಲ್ಲಿ ೨೬೦೧೫ ಮಿಲಿಯನ್ ಡಾಲರ್ ಆಗಿದ್ದಿತು. ಎರಡನೆಯ ಕಾರಣವೇನೆಂದರೆ, ವಿದೇಶದಿಂದ ನಮ್ಮ ದೇಶಕ್ಕೆ ಲಾಭವನ್ನು ಹುಡುಕಿಕೊಂಡು ಬರುವ ಬಂಡವಾಳದ ಪ್ರಮಾಣ ಜಾಸ್ತಿಯಾಗಿದೆ. ೧೯೯೦ ೯೧ರಲ್ಲಿ ಇದರ ಪ್ರಮಾಣ ಕೇವಲ $ ೧೦೩ ಆಗಿದ್ದಾಗ, ೨೦೦೩-೦೪ರಲ್ಲಿ ಇದು $ ೧೪,೭೭೬ ಆಗಿದ್ದಿತು. ಆದರೆ ಹೊಸ ಕ್ಷೇತ್ರದಲ್ಲಿ ಹೂಡುವ ಬಂಡವಾಳ ಪ್ರಮಾಣಕ್ಕಿಂತ, ಹಾಲಿ ಇರುವ ಉದ್ಯಮಗಳನ್ನು ಕೊಳ್ಳಲು ವಿದೇಶಿಯರು ಹೂಡುತ್ತಿರುವ ಬಂಡವಾಳವೇ ಜಾಸ್ತಿಯಾಗಿ, ಉತ್ಪಾದನೆ ಮತ್ತು ಉದ್ಯೋಗ ಸೃಷ್ಟಿಗೆ ನಿರೀಕ್ಷಿಸಿದಷ್ಟು ಅನುಕೂಲ ದೊರಕಿಲ್ಲ.

೧೯೯೦ಕ್ಕೂ ಮುಂಚೆ ಸರ್ಕಾರದ ನೀತಿ ಯಾವ ಬಗೆಯಲ್ಲಾದರೂ ಹೆಚ್ಚಿನ ವಿದೇಶಿ ವಿನಿಮಯವನ್ನು ಗಳಿಸುವುದೇ ಆಗಿದ್ದಿತು. ಈಗ ವಿದೇಶಿ ನಿಯಮವನ್ನು ಕೇಂದ್ರ ಬ್ಯಾಂಕು, ವಿದೇಶಿ ಹಣದ ಮಾರುಕಟ್ಟೆಯಲ್ಲಿ ರೂ.ಗಳನ್ನು ಕೊಟ್ಟು ಕೊಳ್ಳುತ್ತದೆ. ಇದರ ಉದ್ದೇಶ ರೂ.ವಿದೇಶಿ ವಿನಿಮಯ ಮೌಲ್ಯ ಜಾಸ್ತಿ ಆಗದಂತೆ ಸ್ಥಿರತೆಯನ್ನು ಕಾಪಾಡುವುದೇ ಆಗಿದೆ. ನಮ್ಮ ರೂ. ಹಣವನ್ನು ಸಾಲವಾಗಿ ತೆಗೆದುಕೊಳ್ಳಲು ೫.೫ರಷ್ಟು ಬಡ್ಡಿಯನ್ನು ಕೊಟ್ಟು, ವಿದೇಶಿ ವಿನಿಮಯವನ್ನು ಕೊಳ್ಳಲಾಗುತ್ತದೆ. ಆದರೆ ವಿದೇಶಿ ವಿನಿಮಯವನ್ನು ಬಂಡವಾಳವನ್ನಾಗಿ ಹೂಡಿದರೆ ದೊರಕುವುದು ಕೇವಲ ಶೇ.೪.೫ ಆದಾಯ ಆಗಿದೆ. ಆದುದರಿಂದ ಹೆಚ್ಚಿನ ಪ್ರಮಾಣ ವಿದೇಶಿ ಹಣವನ್ನು ಹೊಂದಿರುವುದಕ್ಕೆ ತಗಲುವ ವೆಚ್ಚ ಜಾಸ್ತಿಯಾಗುತ್ತದೆ. ೨೦೦೫-೦೬ರ ಆಯವ್ಯಯ ಪಟ್ಟಿಯಲ್ಲಿ, ಹಣಕಾಸಿನ ಸಚಿವರು ಈ ವಿದೇಶಿ ವಿನಿಮಯ ಬಳಸಿಕೊಂಡು ದೇಶದ ಒಳಗೆ ಮೂಲಭೂತ ಸೌಕರ್ಯಗಳನ್ನು ಒದಗಿಸಬೇಕೆಂದು ಪ್ರಕಟಿಸಿದ್ದಾರೆ. ವಿದೇಶಿಯರು ತಮ್ಮ ಬಂಡವಾಳವನ್ನು ಇದ್ದಕ್ಕಿದ್ದಹಾಗೆ ವಾಪಸ್ ತೆಗೆದುಕೊಳ್ಳಲು ಪ್ರಾರಂಭಿಸಿದರೆ ಆಗ ನಮಗೆ ತೊಂದರೆ ಉಂಟಾಗುತ್ತದೆ. ಆದುದರಿಂದ ವಿದೇಶಿ ವಿನಿಮಯದ ಬಳಕೆಯ ಬಗ್ಗೆ ಎಚ್ಚರಿಕೆ ವಹಿಸಬೇಕಾಗಿದೆ.

ವಿದೇಶಿ ವಿನಿಮಯದ ಪ್ರಮಾಣ ಜಾಸ್ತಿಯಾಗಿರುವುದಕ್ಕೆ ಇರುವ ಇನ್ನೊಂದು ಕಾರಣವೆಂದರೆ ಭಾರತೀಯರು ವಿದೇಶದಿಂದ ನಮ್ಮಲ್ಲಿಗೆ ಕಳುಹಿಸುವ ಹಣದ ಪ್ರಮಾಣ ಜಾಸ್ತಿಯಾಗುತ್ತಿರುವುದೇ ಆಗಿದೆ. ಈ ಲೆಕ್ಕ ಅಗೋಚರ ಸೇವೆಯಲ್ಲಿಯೇ ಸೇರಿಕೊಂಡಿದೆ. ಖಾಸಗಿ ವಲಯದಲ್ಲಿ ವಿದೇಶದಿಂದ ನಮ್ಮ ದೇಶಕ್ಕೆ ಬಂದ ಹಣ ೧೯೯೦-೯೧ರಲ್ಲಿ $ ೨,೦೬೯ ಆಗಿದ್ದಿತು. ೨೦೦೩-೦೪ರಲ್ಲಿ ಇದರ ಪ್ರಮಾಣ $ ೨,೦೬,೮೩೩ ಆಗಿದ್ದಿತು. ದೊಡ್ಡ ಪ್ರಮಾಣದಲ್ಲಿ ವಿದೇಶಿ ವಿನಿಮಯ ಇದ್ದರೂ, ಬಂಡವಾಳ ಲೆಕ್ಕದ ಪಾವತಿ

ಶಿಲ್ಕುನಲ್ಲಿ ನಿರ್ಬಂಧ ವಿಲ್ಲದೆ ವಿದೇಶಿ ಹಣ ಮತ್ತು ನಮ್ಮ ಹಣವನ್ನು ಪರಿವರ್ತಿಸಲು ಸರ್ಕಾರ ಇನ್ನೂ ಅವಕಾಶ ಕೊಟ್ಟಿಲ್ಲ.

### ಭಾರತದ ಇಂದಿನ ಪಾವತಿ ಶಿಲ್ಕಿನ ಪರಿಸ್ಥಿತಿ

ಇಂದಿನ ಪಾವತಿ ಶಿಲ್ಕಿನ ಪರಿಸ್ಥಿತಿಯನ್ನು ತಿಳಿಯಲು ಸಂಕ್ಷಿಪ್ತವಾಗಿ ಮೊದಲನೆ ಪಂಚವಾರ್ಷಿಕ ಯೋಜನೆ ಪ್ರಾರಂಭವಾದಾಗಿನಿಂದ ಇದ್ದ ಪರಿಸ್ಥತಿಯನ್ನು ತಿಳಿದುಕೊಳ್ಳ ಬಹುದು. ಮೊದಲನೆ ಯೋಜನೆ ಅವಧಿಯಲ್ಲಿ ಸೇವೆಗಳ ರಫ್ತಿನಿಂದ ದೊರಕಿದ ನಿವ್ವಳ ಆದಾಯ ಜಾಸ್ತಿ ಇದ್ದುದರಿಂದ ಪಾವತಿ ಶಿಲ್ಕು ಅಷ್ಟೇನು ಅನಾನುಕೂಲವಾಗಿರಲಿಲ್ಲ, ಅಲ್ಪ ಪ್ರಮಾಣದ ಕೊರತೆ ಮಾತ್ರ ಇದ್ದಿತು. ಎರಡನೆ, ಮೂರನೆ ಯೋಜನೆಗಳು ವಾರ್ಷಿಕ ಯೋಜನೆಗಳ ಅವಧಿಯಲ್ಲಿ ಪಾವತಿ ಶಿಲ್ಕಿನಲ್ಲಿ ದೊಡ್ಡ ಕೊರತೆಯನ್ನು ಕಾಣುತ್ತೇವೆ. ಆದರೆ ೪ನೆ ಯೋಜನೆಯ ಅವಧಿಯಲ್ಲಿ ಪಾವತಿಶಿಲ್ಕು ತಕ್ಕಮಟ್ಟಿಗೆ ಉತ್ತಮವಾಗಿದ್ದಿತು. ೫ನೇ ಪಂಚವಾರ್ಷಿಕ ಯೋಜನೆಯ ಅವಧಿಯಲ್ಲಿ ಪಾವತಿಶಿಲ್ಕು ಅನುಕೂಲಕರವಾಗಿದ್ದಿತು. ಗಣನೀಯ ಮೊತ್ತದ ಹೆಚ್ಚಳವನ್ನು (೩೦೮೨ ಕೋಟಿ ರೂ.) ಈ ಅವಧಿಯಲ್ಲಿ ಕಾಣುತ್ತೇವೆ. ಆದರೆ ೧೯೮೦ ರಿಂದೀಚೆಗೆ ಪಾವತಿ ಶಿಲ್ಕು ಕೊರತೆ ತೀವ್ರ ಸಮಸ್ಯೆಯಾಗಿ ತಲೆದೋರಿತು. ೬ನೇ ಯೋಜನೆಯ ಕೊರತೆ ೧೧,೩೮೪ ಕೋಟಿ ರೂ.ಗಳಾದರೆ, ಏಳನೇ ಯೋಜನೆಯಲ್ಲಿ ಕೊರತೆ ೪೧,೦೪೭ ಕೋಟಿಗಳಾಗಿದ್ದಿತು. ೧೯೯೦-೯೧ರಲ್ಲಿ ಕೊರತೆ ೧೭,೩೬೯ ಕೋಟಿ ರೂ.ಗಳಾಗಿತ್ತು. ೧೯೯೧-೯೨ರಲ್ಲಿ ಈ ಕೊರತೆ ೨೨೩೭ ಕೋಟಿ ರೂ.ಗಳಾಗಿದ್ದಿತು. ೮ನೇ ಯೋಜನೆ ಅವಧಿಯಲ್ಲಿ ೧೯೯೨-೯೭ ಒಟ್ಟು ಪಾವತಿಶಿಲ್ಕಿನ ಕೊರತೆ ೬೨,೯೧೪ ಕೋಟಿಗಳಾಗಿತ್ತು.

೧೯೯೭-೯೮ ರಿಂದ ೨೦೦೦-೦೧ರ ವರೆಗೂ ಅಂದರೆ ೯ನೇ ಯೋಜನೆಯ ಮೊದಲು ೪ ವರ್ಷಗಳಲ್ಲಿ ಒಟ್ಟು ಪಾವತಿಶಿಲ್ಕು ಕೊರತೆ ೬೯,೬೦೧ ಕೋಟಿಗಳಾಗಿದ್ದಿತು. ಆದರೆ ಪ್ರಥಮವಾಗಿ ೧೯೭೯ರ ನಂತರ ೨೦೦೧-೦೨ರಲ್ಲಿ ಚಾಲ್ತಿ ಪಾವತಿ ಶಿಲ್ಕು ಲೆಕ್ಕದಲ್ಲಿ ೧೬,೪೨೬ ಕೋಟಿ ರೂ.ಗಳ ಹೆಚ್ಚಳ ಕಂಡುಬಂದಿತು. ೨೦೦೨-೦೩ರಲ್ಲಿ ಪಾವತಿ ಶಿಲ್ಕಿನಲ್ಲಿ ಕಂಡುಬಂದ ಹೆಚ್ಚಳ ೩೦,೬೬೦ ಕೋಟಿ ರೂ.ಗಳಾಗಿದ್ದಿತು. ೨೦೦೩-೦೪ರಲ್ಲಿ ಈ ಹೆಚ್ಚಳ ೪೭,೯೫೨ ಕೋಟಿಗಾಲಗಿದ್ದಿತು.

ಚಾಲ್ತಿ ಲೆಕ್ಕದ ಪಾವತಿ ಶಿಲ್ಕಿನಲ್ಲಿ ಕಂಡುಬರುವ ಕೊರತೆಗೆ ಮುಖ್ಯ ಕಾರಣವೆಂದರೆ ಸರಕುಗಳ ಆಮದು ಜಾಸ್ತಿಯಾಗಿ, ರಫ್ತು ಪ್ರಮಾಣ ಕಡಿಮೆ ಆಗಿರುವುದೇ ಆಗಿದೆ. ಅದರಲ್ಲೂ ಮುಖ್ಯವಾಗಿ ಪೆಟ್ರೋಲ್ ಮತ್ತು ಪೆಟ್ರೋಲಿಯಂ ಸರಕುಗಳ ಆಮದು ವೆಚ್ಚ ಪ್ರತಿ ವರ್ಷವು OPEC ಸಂಘ ಪ್ರತಿವರ್ಷ ತೈಲ ಉತ್ಪಾದನೆಯನ್ನು ಕಡಿಮೆ ಮಾಡಿ ತೈಲ ಬೆಲೆಯನ್ನು ಜಾಸ್ತಿಮಾಡುತ್ತಿರುವುದೇ ಇದಕ್ಕೆ ಕಾರಣವಾಗಿದೆ.

### ಪಾವತಿ ಶಿಲ್ಕು (ಕೋಟಿ ರೂ.ಗಳಲ್ಲಿ)

| | ೯೦-೯೧ | ೯೮-೯೯ | ೨೦೦೩-೦೪ |
|---|---|---|---|
| ೧. ಆಮದು | ೫೦,೦೮೬ | ೧,೯೯,೯೧೪ | ೩,೬೮,೧೦೨ |
| ೨. ರಫ್ತು | ೩೩,೧೫೩ | ೧,೪೪,೪೩೬ | ೨,೯೬,೭೬೭ |
| ೩. ವ್ಯಾಪಾರ ಶಿಲ್ಕು | -೧೬,೯೩೩ | -೫೫,೪೭೮ | -೭೧,೩೩೫ |
| ೪. ಅಗೋಚರ ಸೇವೆ | -೪೩೩ | ೩೮,೬೮೯ | ೧,೧೯,೨೮೭ |
| ೫. ಚಾಲ್ತಿ ಲೆಕ್ಕ (ನಿವ್ವಳ) | -೧೭,೩೬೬ | -೧೬,೭೮೯ | ೪೭,೯೫೨ |
| ೬. ಬಂಡವಾಳ ಲೆಕ್ಕ | | | |
| ಅ. ವಿದೇಶಿ ಬಂಡವಾಳ ಹೂಡಿಕೆ (ನಿವ್ವಳ) | ೧೮೨ | ೯೭೩೭ | ೬೭,೫೯೨ |
| ಆ. ಸಾಲಗಳು (ನಿವ್ವಳ) | ೯,೯೩೦ | ೧೮,೮೬೪ | ೧೫,೨೭೯ |
| ಇ. ಬ್ಯಾಂಕ್ ಸೇವೆ (ನಿವ್ವಳ) | ೧,೨೨೪ | ೩,೧೨೯ | ೨೮೬೫೬ |
| ಈ. ರೂಪಾಯಿ ಸಾಲದ ಬಡ್ಡಿ | -೨೧೪೦ | ೩೩೦೮ | -೧೭೫೬ |
| ಉ. ಇತರೆ ಬಂಡವಾಳ | ೩೪೬೪ | ೭೪೬೦ | ೧೨,೮೪೬ |
| ಊ. ತಪ್ಪುಗಳು | ೨೩೫ | -೮೪೮ | ೧೪೬೩ |
| ೭. ಒಟ್ಟು ಬಂಡವಾಳ ಲೆಕ್ಕ (ಆ-ಊ) | ೧೨,೮೯೫ | ೩೫,೦೩೪ | ೯೬,೦೪೨ |
| ೮. ಸಮಗ್ರ ಪಾವತಿ ಶಿಲ್ಕು (೫-೭) | -೪೪೭೧ | ೧೮,೨೪೫ | ೧,೪೩,೯೯೪ |

ಈ ಮೇಲೆ ತಿಳಿಸಿದ ಪಾವತಿ ಶಿಲ್ಕು ಲೆಕ್ಕದಲ್ಲಿ ೯೦ರ ದಶಕದ ಪ್ರಾರಂಭದಲ್ಲಿ ಸಮಗ್ರ ಪಾವತಿ ಶಿಲ್ಕುವಿನಲ್ಲಿ ಕೊರತೆ ಕಂಡುಬಂದರೂ, ೯೮-೯೯, ೦೩-೦೪ರಲ್ಲಿ ಚಾಲ್ತಿ ಲೆಕ್ಕದ ಶಿಲ್ಕು ಮತ್ತು ಬಂಡವಾಳ ಲೆಕ್ಕದ ಶಿಲ್ಕು ಇವರೆಡರಲ್ಲೂ ಹೆಚ್ಚುವರಿಯ ಪ್ರಗತಿಯನ್ನು ಕಾಣುತ್ತೇವೆ. ಸಮಗ್ರ ಪಾವತಿ ಶಿಲ್ಕುವಿನಲ್ಲಿ ಕಂಡುಬಂದ ಹೆಚ್ಚುವರಿಯ ಕಾರಣದಿಂದ, ಅಂತಾರಾಷ್ಟ್ರೀಯ ಹಣಕಾಸಿನ ಸಂಸ್ಥೆಗೆ ಕೊಡಬೇಕಾಗಿದ್ದ ಸಾಲವನ್ನೆಲ್ಲಾ ಸೇರಿಸಿ, ವಿದೇಶಿ ವಿನಿಮಯ ಮಾಡಲು ಹಣದ ಪ್ರಮಾಣ ಜಾಸ್ತಿಯಾಗುತ್ತಾ ಬಂದಿದೆ. ಆದರೆ ಚಾಲ್ತಿ ಶಿಲ್ಕು ಲೆಕ್ಕದ ಸರಕುಗಳ ಆಮದು ಪ್ರಮಾಣ, ಪ್ರತಿ ವರ್ಷವೂ ರಫ್ತಿನ ಪ್ರಮಾಣಕ್ಕಿಂತ ಜಾಸ್ತಿಯಾಗಿಯೇ ಉಳಿದಿದೆ. ಸೇವೆಗಳು ಮತ್ತು ಬಂಡವಾಳ ಲೆಕ್ಕದಲ್ಲಿ ಆಧಿಕ್ಯವಿದ್ದು, ಸಮಗ್ರ ಪಾವತಿ ಶಿಲ್ಕುವಿನಲ್ಲಿ ಹೆಚ್ಚುವರಿ ಕಂಡುಬರುತ್ತದೆ.

೨೦೦೩-೦೪ರ ಸಾಲಿನಲ್ಲಿ ವ್ಯಾಪಾರ ಶಿಲ್ಕು ಕೊರತೆ ರೂ.೭೧,೩೩೫ ಕೋಟಿ ರೂ. ಆಗಿದ್ದಿತು. (೨೦೦೨-೦೩ರಲ್ಲಿ ರೂ.೫೧,೬೬೭ ಕೋಟಿ) ಅಗೋಚರ ಸೇವೆಗಳ ವ್ಯಾಪಾರ ದಿಂದ ದೊರಕುವ ನಿವ್ವಳ ಆದಾಯ ರೂ.೧,೧೯,೨೮೭ ಕೋಟಿ ರೂ.ಆಗಿದ್ದಿತು. ಸರಕುಗಳ ವ್ಯಾಪಾರದಲ್ಲಿ ಕೊರತೆ ಇದ್ದರೂ, ಸೇವೆಗಳ ವ್ಯಾಪಾರದಲ್ಲಿ ಹೆಚ್ಚಳವಿದ್ದುದರಿಂದ ಚಾಲ್ತಿ ಲೆಕ್ಕ ಪಾವತಿ ಶಿಲ್ಕಿನಲ್ಲಿ ರೂ.೪೭,೯೫೨ ಕೋಟಿ ಹೆಚ್ಚಳ ಕಂಡುಬಂದಿತು. ೨೦೦೩-೦೪ರ ಬಂಡವಾಳ ಲೆಕ್ಕದ ಪಾವತಿ ಶಿಲ್ಕಿನಲ್ಲೂ ಹೆಚ್ಚಳ ರೂ.೯೬,೦೪೨ ಕೋಟಿ ಇದ್ದಿತು. ಚಾಲ್ತಿ ಲೆಕ್ಕ ಮತ್ತು ಬಂಡವಾಳ ಲೆಕ್ಕ ಪಾವತಿ ಶಿಲ್ಕಿನಿಂದ ಒಟ್ಟು ರೂ.೧,೪೩,೯೯೪ ಕೋಟಿ ಹೆಚ್ಚಳ ಇದ್ದಿತು.

ಇದನ್ನು ಸಮಗ್ರ ಪಾವತಿ ಶಿಲ್ಕಿನ ಲೆಕ್ಕದಲ್ಲಿ ಕಾಯ್ದಿರಸಲಾದ ವಿದೇಶಿ ವಿನಿಮಯ ಹೆಚ್ಚಳ ಎಂದು ತೋರಿಸಲಾಗಿದೆ. ಎರಡು ಲೆಕ್ಕದಲ್ಲೂ ಹೆಚ್ಚಳವಿದ್ದಾಗ ವಿದೇಶಿ ವಿನಿಮಯದ ಪ್ರಮಾಣ ಅಷ್ಟೇ ಪ್ರಮಾಣದಲ್ಲಿ ಜಾಸ್ತಿಯಾಗುತ್ತದೆ. ಬಂಡವಾಳಲೆಕ್ಕದ ಪಾವತಿ ಶಿಲ್ಕಿನಲ್ಲಿ ಹೆಚ್ಚಳ ಕಂಡುಬಂದಿರುವುದಕ್ಕೆ ಮುಖ್ಯ ಕಾರಣ ವಿದೇಶದಿಂದ ನಮ್ಮ ದೇಶಕ್ಕೆ ಬರುತ್ತಿರುವ ದೊಡ್ಡ ಪ್ರಮಾಣದ ಬಂಡವಾಳವೇ ಆಗಿದೆ. ೧೯೯೦-೯೧ರಲ್ಲಿ ವಿದೇಶಿ ಬಂಡವಾಳ ಆಗಮನದ ನಿವ್ವಳ ಮೊತ್ತ ಕೇವಲ ೧೮೦ ಕೋಟಿ ಆಗಿದ್ದಿತು. ೨೦೦೩-೦೪ ರಲ್ಲಿ ಈ ಮೊತ್ತ ರೂ.೬೭,೯೫೨ ಕೋಟಿ ಆಗಿದ್ದಿತು. ವಿದೇಶಿ ಬಂಡವಾಳದ ಆಗಮನದಿಂದಾಗಿ ಮತ್ತು ಅನಿವಾಸಿ ಭಾತೀಯರು ಹೊರದೇಶಗಳಿಂದ ಕಳುಸುವ ಹಣದಿಂದಾಗಿ ವಿದೇಶಿ ವಿನಿಮಯ ಕಾಯ್ದಿರಿಸಲಾದ ನಿಧಿಯ ಪ್ರಮಾಣ ಜಾಸ್ತಿಯಾಗುತ್ತಲೇ ಬಂದಿದೆ. ಇದರ ಪ್ರಮಾಣ ಮೇ ತಿಂಗಳು ೨೦೦೫ರಲ್ಲಿ ೧೪೧.೪ ಬಿಲಿಯನ್ ಆಗಿದ್ದಿತು. ೯೦ರ ದಶಕದ ಆರ್ಥಿಕ ಸುಧಾರಣೆಗಳಿಂದ, ಉದಾರೀಕರಣ ನೀತಿ ಜಾರಿಗೆ ಬಂದು ವಿದೇಶಿ ಬಂಡವಾಳದ ಆಗಮನ ಜಾಸ್ತಿಯಾಗಿದೆ ಮತ್ತು ನಮ್ಮ ರಾಷ್ಟ್ರದಿಂದ ರಫ್ತಾಗುವ ಸೇವೆಗಳು ಅದರಲ್ಲಿ ಸಾಫ್ಟ್‌ವೇರ್ ಸೇವೆಗಳು ಅಧಿಕವಾಗಿ, ಪಾವತಿ ಶಿಲ್ಕಿನಲ್ಲಿ ಅನುಕೂಲಕರ ಪರಿಸ್ಥಿತಿ ಕಂಡುಬರುತ್ತಿದೆ.

## ೭.೩. ವ್ಯಾಪಾರ ವಲಯ ಸುಧಾರಣೆಗಳು

ಪ್ರಸ್ತುತ ರಫ್ತು ಮತ್ತು ಆಮದು ಕಾರ್ಯ ನೀತಿಯ ಉದ್ದೇಶಗಳು ರಫ್ತು ಉತ್ತೇಜನ ಮತ್ತು ಆಮದು ಉದಾರೀಕರಣ ಕ್ರಮಗಳು - ಪರಿಮಾಣಾತ್ಮಕ ನಿರ್ಬಂಧಗಳ ವಜಾ.

### ಮೊದಲ ವರ್ಷಗಳ ವಿದೇಶೀ ವ್ಯಾಪಾರ ಕಾರ್ಯನೀತಿ

ಇಂದಿನ ರಫ್ತು ಆಮದು ಕಾರ್ಯ ನೀತಿಯನ್ನು ತಿಳಿಯುವುದಕ್ಕೆ ಮುಂಚೆ ಸ್ವಾತಂತ್ರ್ಯ ಬಂದ ತರುವಾಯ ಜಾರಿಗೆ ತಂದ ವಿದೇಶೀ ವ್ಯಾಪಾರ ಕಾರ್ಯ ನೀತಿಯ ಸಂಕ್ಷಿಪ್ತ ಪರಿಚಯ ಅಗತ್ಯ. ಸ್ವಾತಂತ್ರ್ಯ ಗಳಿಸಿದ ನಂತರ ನಮ್ಮ ರಾಷ್ಟ್ರ ನಿರಂತರವಾಗಿ ಪಾವತಿ ಶಿಲ್ಕು ಕೊರತೆ

ಯನ್ನು ಎದುರಿಸುತ್ತಾ ಬಂದಿದೆ. ಇದಕ್ಕೆ ಮುಖ್ಯ ಕಾರಣ ಸರಕುಗಳ ರಫ್ತು ಕಡಿಮೆಯಾಗಿ ಆಮದು ಜಾಸ್ತಿಯಾದುದೇ ಆಗಿದೆ. ಈ ಕಾರಣದಿಂದ ಸರ್ಕಾರ ನಂತರ ಪ್ರಾರಂಭದಿಂದಲೂ ರಫ್ತಿಗೆ ಉತ್ತೇಜನ ಮತ್ತು ಆಮದು ನಿರ್ಬಂಧ ಕಾರ್ಯನೀತಿಯನ್ನು ಅನುಸರಿಸುತ್ತಾ ಬಂದಿತು. ರಾಷ್ಟ್ರದ ರಕ್ಷಣೆಯ ನಂತರ ಎರಡನೇ ಪ್ರಮುಖ ವಿಷಯ ರಫ್ತು ಪ್ರಮಾಣವನ್ನು ಜಾಸ್ತಿ ಮಾಡುವುದೇ ಸರ್ಕಾರದ ಗುರಿಯಾಗಿದ್ದಿತು. ರಫ್ತು ಬಲವಂತದಿಂದ ಜಾಸ್ತಿ ಮಾಡಿ ಸ್ವಾವಲಂಬನೆಯನ್ನು ಸಾಧಿಸುವುದು, ವಿದೇಶಿ ಸಹಾಯ ಅವಲಂಬನೆಯನ್ನು ತಪ್ಪಿಸುವುದು, ವಿದೇಶಿ ವಿನಿಮಯದ ಕೊರತೆಯನ್ನು ನಿವಾರಣೆ ಮಾಡುವುದು, ಈ ಉದ್ದೇಶಗಳನ್ನು ಸರ್ಕಾರ ಹೊಂದಿದೆ. ರಫ್ತು ಜಾಸ್ತಿ ಮಡುವುದೇ ಅಲ್ಲದೆ ರಫ್ತು ಮಾಡುವ ಸರಕುಗಳಲ್ಲಿ ವೈವಿಧ್ಯತೆಯನ್ನು ಸಾಧಿಸುವ ಉದ್ದೇಶವನ್ನು ಸರ್ಕಾರ ಹೊಂದಿದೆ. ಮುಂಚೆ ನಾವು ಕೇವಲ ಕೆಲವು ವಿಧವಾದ ಸಾಂಪ್ರದಾಯಿಕ ಸರಕುಗಳನ್ನು ಮಾತ್ರ ರಫ್ತು ಮಾಡುತ್ತಿದ್ದೇವು. ಉದಾ: ಕೃಷಿ ಉತ್ಪನ್ನ, ಕಚ್ಚಾ ಪದಾರ್ಥಗಳು, ಸಾಂಬಾರ ಪದಾರ್ಥಗಳು, ಹತ್ತಿ ಬಟ್ಟೆ ಇತ್ಯಾದಿ ಕ್ರಮೇಣವಾಗಿ ವೈವಿಧ್ಯತೆಯನ್ನು ಸಾಧಿಸಿ ಕೈಗಾರಿಕಾ ಸರಕುಗಳು, ಸಾರಿಗೆ ಸಲಕರಣೆಗಳು, ಯಂತ್ರೋಪಕರಣಗಳು, ಅನುಭೋಗಿ ಸರಕುಗಳು, ಎಲೆಕ್ಟ್ರಾನಿಕ್ ಸರಕುಗಳು ಮತ್ತು ಇತ್ತೀಚಿನ ವರ್ಷಗಳಲ್ಲಿ ಸಾಫ್ಟ್‌ವೇರ್‌ಗೆ ಸಂಬಂಧಪಟ್ಟ ಸರಕುಗಳನ್ನು ತಯಾರಿಸಿ ರಫ್ತಿನ ಪ್ರಮಾಣವನ್ನು ಜಾಸ್ತಿ ಮಾಡುತ್ತಾ ಬರಲಾಗಿದೆ. ಅಂತರಾಷ್ಟ್ರೀಯ ಮಾರುಕಟ್ಟೆಯಲ್ಲಿ ಪೈಪೋಟಿಯನ್ನು ಎದುರಿಸಬೇಕಾದರೆ ದಕ್ಷತೆ ಮತ್ತು ಉತ್ಪಾದಕತೆ ಜಾಸ್ತಿಯಾಗಬೇಕು ಮತ್ತು ಉತ್ಪಾದನಾ ವೆಚ್ಚ ಕಡಿಮೆಯಾಗಬೇಕು. ಇದಕ್ಕೆ ಬೇಕಾದ ಔದ್ಯೋಗಿಕ ವಿಜ್ಞಾನ ಬೆಳೆಯುವುದಕ್ಕೆ ಪ್ರೋತ್ಸಾಹ ಕೊಡುತ್ತಾ ಬಂದಿದೆ.

### ಆಮದು ಬದಲೀ ಸರಕುಗಳು

ಸ್ವಾವಲಬಂನೆ ಮತ್ತು ವಿದೇಶಿ ವಿನಿಮಯ ಬಳಕೆ ಉಳಿಸಲು ಆಮದು ಮಾಡಿಕೊಳ್ಳುವಂತ ಸರಕುಗಳನ್ನು ರಾಷ್ಟ್ರದ ಒಳಗೇ ಉತ್ಪಾದಿಸುವ ಕಾರ್ಯಕ್ರಮವನ್ನು ಸುಮಾರು ೩ ದಶಕಗಳ ಕಾಲ ಅನುಸರಿಸಿ ಅನೇಕ ವಿಧವಾದ ಕೈಗಾರಿಕೆಗಳನ್ನು ಸ್ಥಾಪಿಸಿ ಅವುಗಳಿಗೆ ವಿದೇಶಿ ಪೈಪೋಟಿಯಿಂದ ರಕ್ಷಣೆಯನ್ನು ಕೊಡಲಾಯಿತು. ಈ ನೀತಿಯಲ್ಲಿ ಅನುಭೋಗಿ ಸರಕುಗಳು ಹಾಗೂ ಬಂಡವಾಳ ಸರಕುಗಳುಗಳನ್ನು ಉತ್ಪಾದಿಸತೊಡಗಿದರು. ಆದರೆ ಪ್ರಾರಂಭದಲ್ಲಿ ಸಂಶೋಧನೆ ಮತ್ತು ಅಭಿವೃದ್ಧಿಗೆ ಗಮನಕೊಡದೇ ಸುಮಾರು ವರ್ಷಗಳ ಕಾಲ ರಕ್ಷಣೆ ನೀತಿ ಅನುಸರಿಸಿದ್ದರಿಂದ ಇದಕ್ಕೆ ತಗುಲಿದ ವೆಚ್ಚ ಜಾಸ್ತಿಯಾಗಿ ಸ್ವದೇಶಿ ಕೈಗಾರಿಕೆಗಳು ಅಭಿವೃದ್ಧಿಯನ್ನು ಸಾಧಿಸಲು ಸಾಧ್ಯವಾಗಲಿಲ್ಲ. ರಕ್ಷಣಾ ನೀತಿ ಅನೇಕ ಟೀಕೆಗಳಿಗೆ ಒಳಗಾಗಿ, ೮೦ರ ದಶಕದ ಪ್ರಾರಂಭದಲ್ಲಿ ಇದಕ್ಕೆ ಪ್ರಾಮುಖ್ಯತೆಯನ್ನು ಕಡಿಮೆ ಮಾಡಿ, ರಫ್ತು ಉತ್ತೇಜನ ಕ್ರಮಗಳಿಗೆ ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಡಲಾಯಿತು. ೧೯೮೦ರ ಟಾಂಡನ್ ಸಮಿತಿ ರಫ್ತು ಉತ್ತೇಜನ ಕ್ರಮಗಳ ಬಗ್ಗೆ ಅನೇಕ ಸೂಚನೆಗಳನ್ನು

ನೀಡಿತು. ಇದರ ಜೊತೆಗೆ ಆಮದು ನಿರ್ಬಂಧಗಳನ್ನು ಸ್ವಲ್ಪಮಟ್ಟಿಗೆ ಸಡಿಲಗೊಳಿಸಲಾಯಿತು. ರಫ್ತು ಮಾಡುವ ಕೈಗಾರಿಕೆಗಳಿಗೆ ಬೇಕಾಗುವ ಸಾಮಗ್ರಿಗಳನ್ನು ಆಮದು ಮಾಡಿಕೊಳ್ಳಲು ಅವಕಾಶ ಕಲ್ಪಿಸಲಾಯಿತು.

### ೧೯೮೦ರ ವಿದೇಶೀ ವ್ಯಾಪಾರ ಕಾರ್ಯನೀತಿ

ರಫ್ತು ಸರಕುಗಳನ್ನು ಉತ್ಪಾದಿಸುವ ಕೈಗಾರಿಕಾ ಘಟಕಗಳಿಗೆ ಅನೇಕ ರೀತಿಯಲ್ಲಿ ಉತ್ತೇಜನ ಕೊಡಲಾಯಿತು. ರಫ್ತು ಮಾಡಿದವರಿಗೆ ನಗದು ಹಣ ಪರಿಹಾರ ಕೊಡ ಲಾಗುತ್ತಿತ್ತು. ತೆರಿಗೆಯಲ್ಲಿ ಅನೇಕ ರೀತಿಯ ಪರಿಹಾರಗಳನ್ನು ಕೊಡಲಾಯಿತು. ರಫ್ತುಮಾಡಿದ ಘಟಕಗಳು ಗಳಿಸಿದ ವಿದೇಶಿ ವಿನಿಮಯದಲ್ಲಿ ಕೆಲವು ರೀತಿಯ ಸರಕುಗಳನ್ನು ಆಮದು ಮಾಡಿಕೊಳ್ಳಲು ಅವಕಾಶ ಕೊಡಲಾಯಿತು. ಬಂಡವಾಳ ಸರಕುಗಳ ಆಮದು ಮೇಲೆ ತೆರಿಗೆ ವಿನಾಯಿತಿ ಕೊಡಲಾಯಿತು. ಬ್ಯಾಂಕುಗಳು ಇಂತಹ ಘಟಕಗಳಿಗೆ ಸಾಲವನ್ನು ಕೊಡುತ್ತಿತ್ತು. ಅನೇಕ ವ್ಯಾಪಾರ ಸಂಸ್ಥೆಗಳನ್ನು ಸ್ಥಾಪಿಸಿ, ಆಡಳಿತದಲ್ಲಿ ಸುಧಾರಣೆ ತಂದು ರಫ್ತಿಗೆ ಉತ್ತೇಜನ ಕೊಡಲಾಯಿತು. ಕಾಫಿ, ಟೀ, ರಬ್ಬರ್, ಜುಂಗು, ಏಲಕ್ಕಿ, ರೇಷ್ಮೆ ಈ ಸರಕುಗಳ ಉತ್ಪಾದನೆ, ಅಭಿವೃದ್ಧಿ ಮತ್ತು ರಫ್ತು ಜಾಸ್ತಿಮಾಡಲು ಪ್ರತ್ಯೇಕ ಮಂಡಳಿಗಳನ್ನು ರಚಿಸಲಾಯಿತು. ಅನೇಕ ಸರಕುಗಳಿಗೆ ರಫ್ತು ಸಂಸ್ಥೆಗಳನ್ನು ಸ್ಥಾಪಿಸಲಾಯಿತು. ಅನೇಕ ದೇಶಗಳೊಡನೆ ದ್ವಿಪಕ್ಷೀಯ ಒಪ್ಪಂದಗಳನ್ನು ಮಾಡಿಕೊಂಡು ರಫ್ತಿಗೆ ಉತ್ತೇಜನ ಕೊಡಲಾಯಿತು. ೧೯೮೫ರಲ್ಲಿ ವಿ.ಪಿ.ಸಿಂಗ್ ರವರು ೩ ವರ್ಷಗಳ ರಫ್ತು ಆಮದು ನೀತಿಯನ್ನು ಜಾರಿಗೆ ಕಂಡು ಆಮದುಗಳ ಮೇಲೆ ನಿರ್ಬಂಧ ಕಡಿಮೆ ಮಾಡಿದರು.

### ೧೯೯೦ರ ವಿದೇಶೀ ವ್ಯಾಪಾರ ನೀತಿ

೧೯೯೦ರಲ್ಲಿ ೩ ವರ್ಷಗಳ ವಾಣಿಜ್ಯನೀತಿಯಲ್ಲಿ ತೆರೆದ ಸಾಮಾನ್ಯ ಪರವಾನೆ ಪಟ್ಟಿಯಲ್ಲಿ ಆಮದು ಮಾಡಿಕೊಳ್ಳುವ ಬಂಡವಾಳ ಸರಕುಗಳ ಸಂಖ್ಯೆಯನ್ನು ೧೨೬೧ ರಿಂದ ೧೩೪೩ಕ್ಕೆ ಏರಿಸಲಾಯಿತು ಮತ್ತು ಆಮದುಗಳ ಬಗ್ಗೆ ಉದಾರ ನೀತಿಯನ್ನು ಅನುಸರಿಸಲಾಯಿತು. ಕೆಲವು ರೀತಿಯ ಸರಕುಗಳ ಆಮದನ್ನು ಸರ್ಕಾರ ನಿಯೋಗದ ಮೂಲಕ ಮಾಡತೊಡಗಿದರು. ಈ ನೀತಿಯಿಂದ ಸ್ವಲ್ಪಮಟ್ಟಿಗೆ ಸ್ವದೇಶಿ ಕೈಗಾರಿಕೆಗಳಿಗೆ ಮತ್ತು ಸಣ್ಣ ಕೈಗಾರಿಕೆಗಳಿಗೆ ಅನಾನುಕೂಲವಾಯಿತು. ವಿದೇಶಿ ತಂತ್ರಜ್ಞಾನವನ್ನು ಆಮದು ಮಾಡಿಕೊಂಡು ಸರಕುಗಳ ಉತ್ಪಾದನೆಯನ್ನು ಕೈಗೊಂಡಾಗ ಸ್ವಲ್ಪಮಟ್ಟಿಗೆ ಪರಾವಲಂಬನೆ ಕಂಡುಬರುತ್ತಿದೆ.

### ೧೯೯೧ರ ಆರ್ಥಿಕ ಸುಧಾರಣೆಗಳು

ಜುಲೈ ೧೯೯೧ ರಿಂದ ಆರ್ಥಿಕ ಸುಧಾರಣೆಗಳನ್ನು ಜಾರಿಗೆ ತಂದು ವಿದೇಶಿ ವ್ಯಾಪಾರ ಕ್ಷೇತ್ರದಲ್ಲಿ ಉದಾರೀಕರಣ ಕಾರ್ಯನೀತಿಯನ್ನು ಅನುಸರಿಸಲಾಗುತ್ತಿದೆ. ೮೦ ರಿಂದ ದಶಕದ ಮಧ್ಯಭಾಗದಲ್ಲಿ ವಿದೇಶೀ ವ್ಯಾಪಾರದ ಮೇಲಿದ್ದ ನಿರ್ಬಂಧಗಳನ್ನು ಕಡಿಮೆ ಮಾಡುವ

ಕೆಲವು ಕ್ರಮಗಳನ್ನು ತೆಗೆದುಕೊಳ್ಳಲಾಯಿತು. ೯೦ರ ದಶಕದಲ್ಲಿ ಇದು ರಭಸದಿಂದ ಕಾರ್ಯಾಚರಣೆಗೆ ಬಂದಿತು. ೧೯೯೧-೯೨ ರಲ್ಲಿ ನಮ್ಮ ದೇಶದ ಪಾವತಿ ಶಿಲ್ಕು ಕೊರತೆಯನ್ನು ಎದುರಿಸಿತು. ಇದಕ್ಕಾಗಿ ಆಮದುಗಳ ಮೇಲೆ ಕೆಲವು ನಿರ್ಬಂಧಗಳನ್ನು ಹಾಕಲಾಯಿತು. ಜುಲೈ ೯೧ರಲ್ಲಿ ರೂ. ವಿನಿಮಯ ಮೌಲ್ಯವನ್ನು ಕಡಿಮೆ ಮಾಡಲಾಯಿತು. ಆದರೆ ೯೨-೯೩ರ ನಂತರ ವಿದೇಶಿ ವ್ಯಾಪಾರ ಉತ್ತಮವಾಗ ತೊಡಗಿತು. ತರುವಾಯದ ವರ್ಷಗಳಲ್ಲಿ ಆಮದು ಮತ್ತು ರಫ್ತುಗಳ ಮೇಲೆ ನಿರ್ಬಂಧಗಳು ಸಡಿಲವಾಗತೊಡಗಿದವು. ೧೯೯೧ರಲ್ಲಿ ಅತ್ಯಧಿಕ ಆಮದು ಸುಂಕ ಶೇ. ೩೫.೫ ಆಗಿದ್ದಿತು ಮತ್ತು ೯೮-೯೯ರಲ್ಲಿ ಇದು ಶೇ. ೪೫ಗೆ ಇಳಿಯಿತು ಸುಂಕ ಮತ್ತು ಸುಂಕೇತರ ನಿರ್ಬಂಧಗಳೂ ಕೂಡ ಕಡಿಮೆ ಯಾವುದು. ವಿದೇಶಿ ಬಂಡವಾಳದ ಚಲನೆಯ ಮೇಲೂ ನಿರ್ಬಂಧಗಳು ಕಡಿಮೆಯಾಗ ತೊಡಗಿದವು. ಉದಾರೀಕರಣ ಕಾರ್ಯನೀತಿ ಜಾರಿಗೆ ಬಂದ ಮೇಲೆ ರಫ್ತು ಮತ್ತು ಆಮದು ಗಳೆರಡೂ ಹೆಚ್ಚಿನ ವೇಗದಲ್ಲಿ ಬೆಳೆಯತೊಡಗಿದವು. ವಿದೇಶಿ ವಿನಿಮಯದ ಗಳಿಕೆ ಜಾಸ್ತಿಯಾಗ ತೊಡಗಿತು. ಇದಕ್ಕೆ ಕಾರಣವೆಂದರೆ ಸೇವೆಗಳ ರಫ್ತು ಜಾಸ್ತಿಯಾಗುವಿಕೆ ಮತ್ತು ವಿದೇಶಿ ಬಂಡವಾಳದ ಆಗಮನವು ಆಗಿದೆ.

## ೧೯೯೯ರ ವಿದೇಶಿ ವ್ಯಾಪಾರ ಕಾರ್ಯ ನೀತಿ

೧೯೯೯ರಲ್ಲಿ ರಾಮಕೃಷ್ಣ ಹೆಗಡೆಯವರು ಹೊಸ ವಾಣಿಜ್ಯ ನೀತಿಯನ್ನು ಜಾರಿಗೆ ತಂದರು ನಿರ್ಬಂಧ ರಹಿತ ಆಮದು ಪಟ್ಟಿಗೆ ೮೯೪ ಸರಕುಗಳನ್ನು ಸೇರಿಸಿ ಆಮದು ಉದೀರಕರಣ ನೀತಿ ಪ್ರಾರಂಭವಾಯಿತು. ಇದುವರೆಗೂ ಇದ್ದ ರಫ್ತು ಬೆಳವಣಿಗೆ ವಲಯಗಳನ್ನು ನಿರ್ಬಂಧರಹಿತ ವ್ಯಾಪಾರ ವಲಯಗಳಾಗಿ ಪರಿವರ್ತಿಸಲಾಯಿತು. ಈ ವಲಯದಲ್ಲಿ ರಫ್ತು ಮಾಡುವ ಘಟಕಗಳು ಅನೇಕ ರೀತಿಯ ಉತ್ತೇಜನ ಮತ್ತು ತೆರಿಗೆ ವಿನಾಯಿತಿಯನ್ನು ಪಡೆಯುತ್ತಿವೆ. ೨೦೦೦ ಮಾರ್ಚ್‌ನಲ್ಲಿ ವಿಶೇಷ ಆರ್ಥಿಕ ವಲಯಗಳನ್ನು ಸ್ಥಾಪಿಸಲಾಯಿತು. ಈ ವಲಯದಲ್ಲಿ ಯಾವ ಕೈಗಾರಿಕೆಗಳಿಗೆ ಸರಬರಾಜು ಮಾಡುವ ಎಲ್ಲಾ ಸರಕುಗಳನ್ನು ರಫ್ತು ಮಾಡಿದ ಸರಕುಗಳೆಂದು ಪರಿಗಣಿಸಲಾಯಿತು. ಈ ವಲಯದಲ್ಲಿರುವ ಘಟಕಗಳು ವಿದೇಶದಿಂದ ಬಂಡವಾಳ ಸರಕು ಮತ್ತು ಕಚ್ಚಾ ಪದಾರ್ಥಗಳನ್ನು ಸುಂಕವಿಲ್ಲದೆ ಆಮದು ಮಾಡಿಕೊಳ್ಳಬಹುದು. ಈ ವಿಶೇಷ ಆರ್ಥಿಕ ವಲಯದಲ್ಲಿರುವ ಕೈಗಾರಿಕೆಗಳೆಲ್ಲಾ ರಫ್ತು ಮಾಡಬೇಕು ಮತ್ತು ಅನೇಕ ವಿನಾಯಿತಿ ಸೌಲಭ್ಯಗಳನ್ನು ಪಡೆಯುತ್ತವೆ. ೨೦೦೦ ವಾಣಿಜ್ಯ ನೀತಿ ೭೧೪ ಸರಕುಗಳ ಮೇಲಿದ್ದ ಪರಿಮಾಣಾತ್ಮಕ ನಿರ್ಬಂಧಗಳನ್ನು ತೆಗೆದುಹಾಕಿ ಅವುಗಳನ್ನು ತೆರೆದ ಸಾಮಾನ್ಯ ಪರವಾನೆ ಪಟ್ಟಿಗೆ ಸೇರಿಸಿ ಆಮದು ಮಾಡುವ ಅವಕಾಶವನ್ನು ಕಲ್ಪಿಸಲಾಯಿತು.

೨೦೦೧-೦೨ರ ವಾಣಿಜ್ಯ ನೀತಿಯಲ್ಲಿ ವಿಶ್ವ ವ್ಯಾಪಾರ ಸಂಸ್ಥೆಯ ಸದಸ್ಯತ್ವದ ಷರತ್ತುಗಳನ್ನು ಪೂರೈಸಲು, ಉಳಿದದ್ದ ೭೧೫ ಸರಕುಗಳ ಮೇಲೆ ಇದ್ದ ಪರಿಮಾಣಾತ್ಮಕ

ನಿರ್ಬಂಧಗಳನ್ನು ತೆಗೆದು ಹಾಕಲಾಯಿತು. ಆಹಾರ ಪದಾರ್ಥಗಳು, ಉಪಯೋಗಿಸಿದ್ದ ಕಾರುಗಳು, ಹತ್ತಿ ಬಟ್ಟೆ ಇತ್ಯಾದಿ ಸರಕುಗಳನ್ನು ಆಮದು ಮಾಡಿಕೊಳ್ಳಲು ಅವಕಾಶ ಕಲ್ಪಿಸಲಾಯಿತು. ಪರಿಮಣಾತ್ಮಕ ನಿರ್ಬಂಧಗಳನ್ನು ತೆಗೆದುದರಿಂದ ವಿದೇಶಿ ಸಗಕುಗಳ ಪೈಪೋಟಿ ಜಾಸ್ತಿಯಾಗಿದೆ. ರಫ್ತು ಉತ್ತೇಜನ ಕೊಡಲು ಸರ್ಕಾರ ಸಂಶೋಧನೆ ಮತ್ತು ಅಭಿವೃದ್ಧಿಗಾಗಿ ಹಣವನ್ನು ಒದಗಿಸದೇ ಅನೇಕ ರೀತಿಯ ಅನುಭೋಗಿ ಸರಕುಗಳನ್ನು ಈಗ ವಿದೇಶದಿಂದ ಆಮದುಮಾಡಿಕೊಳ್ಳಲಾಗುತ್ತದೆ. ಈ ಉದಾರೀಕರಣದ ನೀತಿಯಿಂದ ಅನುಭೋಗಿ ಸರಕುಗಳ ಆಮದು ಜಾಸ್ತಿಯಾಗಿ ಈ ವಿದೇಶಿ ಸರಕುಗಳು ನಮ್ಮ ಗೃಹಗಳ ಅಡುಗೆ ಮನೆ, ಸ್ನಾನದ ಮನೆ, ದಿವಾನ ಕಾನೆಗೆ ಆಕ್ರಮಣ ನಡೆಸಿ ಸ್ವದೇಶಿ ಸರಕುಗಳನ್ನು ಅಲ್ಲಿಂದ ಹೋಡಿಸಿವೆ. ಇದರಿಂದ ಅನೇಕ ಸಣ್ಣ ಕೈಗಾರಿಕೆಗಳು ವಿದೇಶಿ ಪೈಪೋಟಿಯನ್ನು ಎದುರಿಸಲಾರದೆ ಮುಚ್ಚಬೇಕಾದ ಪರಿಸ್ಥಿತಿಯನ್ನು ಎದುರಿಸುತ್ತಿವೆ.

ಮುಂಚೆ ಸರ್ಕಾರದ ಸೂತ್ರ, ಭಾರತೀಯನಾಗಿರು, ಭಾರತೀಯ ಸರಕುಗಳನ್ನು ಕೊಳ್ಳು ಅನ್ನುವುದೇ ಆಗಿದ್ದಿತು. ಆದರೆ ಈಗ ಈ ಮಂತ್ರ ಭಾರತೀಯನಾಗಿರು, ವಿದೇಶಿ ಸರಕುಗಳನ್ನು ಕೊಳ್ಳು ಅನ್ನುವುದೇ ಆಗಿದೆ. ಅಂದರೆ ಉದಾರೀಕರಣ ನೀತಿ ಮಿಶ್ರ ಪ್ರತಿ ಫಲವನ್ನು ತಂದಿದೆ.

## ೨೦೦೦ರ ವಿದೇಶಿ ವ್ಯಾಪಾರ ಕಾರ್ಯ ನೀತಿ

೨೦೦೨ರಲ್ಲಿ ೫ ವರ್ಷಗಳ ವಾಣಿಜ್ಯ ನೀತಿಯನ್ನು ಅಂದಿನ ವಾಣಿಜ್ಯ ಮಂತ್ರಿ ಮುರುಸಲಿ ಮಾರನ್ ಪ್ರಕಟಿಸಿದರು. ಕೃಷಿ ಉತ್ಪಾದನೆ, ಸಣ್ಣ ಕೈಗಾರಿಕಾ ಸರಕುಗಳು, ಎಲೆಕ್ಟ್ರಾನಿಕ್ ಸರಕುಗಳು, ಬಟ್ಟೆ, ಒಡವೆ ಇವುಗಳ ರಫ್ತು ಜಾಸ್ತಿಮಾಡಲು ಅನೇಕ ಸರಕುಗಳನ್ನು ಒದಗಿಸಲಾಯಿತು. ರಫ್ತಿನ ಮೇಲೆ ವಿಧಿಸಿದ್ದ ಎಲ್ಲಾ ಪರಿಮಾಣಾತ್ಮಕ ನಿರ್ಬಂಧಗಳನ್ನು (ಕೆಲವು ಸೂಕ್ಷ್ಮ ಸರಕುಗಳನ್ನು ಬಿಟ್ಟು) ತೆಗೆದು ಹಾಕಲಾಯಿತು.

ವಿಶೇಷ ಆರ್ಥಿಕ ವಲಯಗಳಲ್ಲಿ ಭಾರತೀಯ ಬ್ಯಾಂಕುಗಳು ದೂರದಡದ ಬ್ಯಾಂಕಿಂಗ್ ಘಟಕಗಳನ್ನು ಸ್ಥಾಪಿಸಲು ಅವಕಾಶ ಕಲ್ಪಿಸಲಾಯಿತು. ಇವುಗಳು ವಾಸ್ತವವಾಗಿ ಭಾರತೀಯ ಬ್ಯಾಂಕುಗಳ ವಿದೇಶಿ ಶಾಖೆಗಳಂತೆ ಮಾಡುತ್ತವೆ. ಈ ಬ್ಯಾಂಕುಗಳಿಗೆ ಕ್ಯಾಷ್ ರಿಸರ್ವ್ ರೇಷಿಯೊ ಸ್ಟ್ಯಾಚುಟರಿಲಿಕ್ವಿಡಿಟಿ ರೇಷಿಯೊ ಚುಟುಕಿ ರಿಕ್ವಿಡಿಟಿ ರೇಷಯಾ ಇವುಗಳು ಅನ್ವಯವಾಗುವುದಿಲ್ಲ. ಇವುಗಳು ಅಂತರಾಷ್ಟ್ರೀಯ ದರದಲ್ಲಿ ಸಾಲಗಳನ್ನು ಕೊಡಬಹುದು. ಈರುಳ್ಳಿ ಮತ್ತು ಸೆಣಬನ್ನು ಬಿಟ್ಟು ಇತರ ಎಲ್ಲಾ ಕೃಷಿ ಉತ್ಪಾನ್ನಗಳ ಮೇಲಿದ್ದ ರಫ್ತು ಪರಿಮಾಣಾತ್ಮಕ ನಿರ್ಬಂಧಗಳನ್ನು ತೆಗೆದು ಹಾಕಲಾಯಿತು. ಹಣ್ಣು, ತರಕಾರಿ, ಹೂವು, ಕೋಳಿ ಮತ್ತು ಹಾಲನ್ನು ರಫ್ತು ಮಾಡಲು ಸಾಗಣೆ ವೆಚ್ಚದ ಮೇಲೆ ಸಹಾಯ ಧನವನ್ನು ಕೊಡಲಾಯಿತು.

ಗೃಹ ಮತ್ತು ಕುಶಲ ಕೈಗಾರಿಕೆಗಳ ಸರಕುಗಳ ರಫ್ತಿಗೆ ಅನೇಕ ರೀತಿಯ ಪ್ರೋತ್ಸಾಹವನ್ನು ಕೊಡಲಾಗಿದೆ. ಇದಕ್ಕಾಗಿ ೫ ಕೋಟಿಗಳನ್ನು ಮೀಸಲಾಗಿಡಲಾಗಿದೆ. ಈ ಸರಕುಗಳ

ರಫ್ತುದಾರರು 'ರಫ್ತು ಮನೆಗಳ' ಅಂತಸ್ತನ್ನು ಪಡೆದು ಕೆಲವು ಅನುಕೂಲಗಳನ್ನು ಪಡೆಯುತ್ತವೆ. ಚರ್ಮದ ಉತ್ಪಾದನೆಗೆ ಬೇಕಾಗುವ ಸರಕುಗಳನ್ನು ಆಮದು ಮಾಡಿಕೊಂಡಾಗ ಅವುಗಳ ಮೇಲೆ ಆಮದು ಸುಂಕ ರಿಯಾಯಿತಿ ಕೊಡಲಾಗಿದೆ. ಬಟ್ಟೆ, ರತ್ನ ಮತ್ತು ಒಡವೆ ಇವುಗಳ ರಫ್ತಿಗೆ ಉತ್ತೇಜನ ಕೊಡಲಾಗಿದೆ. ತೆರಿಗೆ ರಿಯಾಯಿತಿ, ಕಾರ್ಯ ವಿಧಾನಗಳ ಸರಳೀಕರಣ ಮುಂತಾದ ಸೌಕರ್ಯಗಳನ್ನು ಒದಗಿಸಲಾಗಿದೆ. ರಫ್ತು ಮನೆಗಳ ಅಂತಸ್ತು ಪಡೆಯುವವರು ತಾವು ಗಳಿಸಿದ ವಿದೇಶಿ ವಿನಿಮಯವನ್ನು ತಾವೇ ಬಳಸಿಕೊಳ್ಳಬಹುದು. ರಫ್ತು ಸರಕುಗಳಿಗೆ ತಗುಲುವ ಇಂದನ ವೆಚ್ಚವನ್ನು ಕೊಡಲಾಗುತ್ತದೆ.

ಈ ಏಪ್ರಿಲ್ ೨೦೦೨ ರಿಂದ ಆಫ್ರಿಕಾ ಖಂಡದ ರಾಷ್ಟ್ರಗಳಿಗೆ ರಫ್ತು ಹೆಚ್ಚಿಸುವ ಕಾರ್ಯಕ್ರಮ ರೂಪಿಸಲಾಗಿದೆ. ಅದೇ ರೀತಿ ೧೯೯೭ ರಿಂದ ಲ್ಯಾಟಿನ್ ಅಮೆರಿಕಾ ದೇಶಗಳೊಡನೆ ಹೆಚ್ಚಿನ ವ್ಯಾಪಾರ ಮಾಡುವುದಕ್ಕೆ ಗಮನ ಕೊಡಲಾಯಿತು. ಯು.ಎಸ್.ಎಸ್.ಆರ್. ಇಂದ ಬೇರ್ಪಡೆಯಾಗಿ ಸ್ವತಂತ್ರವಾಗಿರುವ ರಾಷ್ಟ್ರಗಳೊಡನೆಯೂ ವ್ಯಾಪಾರ ಅಭಿವೃದ್ಧಿ ಸಾಧಿಸುವ ಉದ್ದೇಶವಿದೆ. ೨೦೦೨ರ ವಾಣಿಜ್ಯ ನೀತಿ ರಫ್ತಿಗೆ ಉತ್ತೇಜನ, ಆಮದು ನಿರ್ಬಂಧ ಸಡಿಲಿಕೆ, ವಿಶೇಷ ಆರ್ಥಿಕ ವಲಯಗಳ ಸ್ಥಾಪನೆ ಈ ಕ್ರಮಗಳ ಮೂಲಕ ೧೧ನೇ ಯೋಜನೆ ಅವಧಿಯಲ್ಲಿ ರಫ್ತು ಶೇ. ೧೧.೯ ರಷ್ಟು ಬೆಳೆಯುವ ಸಾಧ್ಯತೆಯನ್ನು ನಿರೀಕ್ಷಿಸಿದೆ. ಆದರೆ ವಾಸ್ತವವಾಗಿ ಈ ಗುರಿಯನ್ನು ಮೀರಿ ರಫ್ತು ಬೆಳವಣಿಗೆಯಾಗಿದೆ.

೨೦೦೨-೦೩ರಲ್ಲಿ ರಫ್ತು ಬೆಳವಣಿಗೆ ಶೇ. ೨೦.೩; ೨೦೦೩-೦೪ರಲ್ಲಿ ಶೇ. ೨೦.೩ ಆಗಿದ್ದು ೨೦೦೪-೦೫ರಲ್ಲಿ ಶೇ. ೨೪.೪ ಬೆಳವಣಿಗೆಯನ್ನು ಸಾಧಿಸಿ ರಫ್ತು ಬೆಳವಣಿಗೆಯಲ್ಲಿ ದಾಖಲೆಮಾಡಲಾಗಿದೆ. ಉದಾರೀಕರಣ ನೀತಿ ಅನುಸರಿಸಲು ಪ್ರಾರಂಭಿಸಿದ ಮೇಲೆ ನಮ್ಮ ಕೈಗಾರಿಕೆಗಳು ಸ್ಪರ್ಧಾತ್ಮಕ ರೀತಿಯಲ್ಲಿ ಬೆಳೆಯತೊಡಗಿವೆ. ಆದರೆ ಈ ರಫ್ತು ಹೆಚ್ಚಳ ಸೇವೆಗಳ ಕ್ಷೇತ್ರದಲ್ಲಿ ಜಾಸ್ತಿಯಾಗಿದೆ. ಏಪ್ರಿಲ್, ೨೦೦೩ರಲ್ಲಿ ಅರುಣ್ ಜೇಟ್ಲಿಯವರು ಹೊಸ ರಫ್ತು ಆಮದು ನೀತಿಯನ್ನು ಪ್ರಕಟಿಸಿ ಸೇವೆಗಳ ಮತ್ತು ಕೃಷಿ ಉತ್ಪನ್ನಗಳ ರಫ್ತಿಗೆ ವಿಶೇಷ ಗಮನವನ್ನು ಕೊಟ್ಟರು. ಈ ರೀತಿಯಲ್ಲಿ ಸರಕುಗಳ ಮೇಲಿನ ಪರಿಮಾಣಾತ್ಮಕ ಆಮದು ನಿರ್ಬಂಧಗಳನ್ನು ತೆಗೆದು ಹಾಕಲಾಯಿತು.

**ಹೊಸ ವಿದೇಶಿ ವ್ಯಾಪಾರ ನೀತಿ : ೨೦೦೪-೦೯**

ಮನಮೋಹನ್‌ಸಿಂಗ್‌ರವರ ನೇತೃತ್ವದಲ್ಲಿ ಕೇಂದ್ರದಲ್ಲಿ ಸಮ್ಮಿಶ್ರ ಸರ್ಕಾರ ರಚನೆಯಾದ ಮೇಲೆ, ೨೦೦೪ರಲ್ಲಿ ವಾಣಿಜ್ಯ ಸಚಿವ ಕಮಲ್‌ನಾಥ್‌ರವರು ೫ ವರ್ಷ ಅವಧಿಯ ಹೊಸ ವಾಣಿಜ್ಯ ನೀತಿಯನ್ನು ಪ್ರಕಟಿಸಿದರು. ಈ ನೀತಿ ಭಾರತದ ವಿದೇಶಿ ವ್ಯಾಪಾರ ಕ್ಷೇತ್ರದಲ್ಲಿ ಸರ್ವತೋಮುಖ ಬೆಳವಣಿಗೆಯನ್ನು ಸಾಧಿಸುವ ಉದ್ದೇಶ ಹೊಂದಿದೆ.

ಮೊದಲನೆಯ ಉದ್ದೇಶ, ವಿಶ್ವ ವ್ಯಾಪಾರದಲ್ಲಿ ಭಾರತದ ಪಾಲನ್ನು ೨೦೦೯ರ ವೇಳೆಗೆ ೨ ಪಟ್ಟು ಜಾಸ್ತಿ ಮಾಡುವುದೇ ಆಗಿದೆ (ಈಗ ರಫ್ತಿನಲ್ಲಿ ನಮ್ಮ ಪಾಲು ವಿಶ್ವರಫ್ತಿನ ೦.೮ ಆಗಿದೆ).

ಎರಡನೆಯ ಉದ್ದೇಶ ವಿದೇಶಿ ವ್ಯಾಪಾರ ನೀತಿಯನ್ನು ಸಾಧನವಾಗಿಟ್ಟುಕೊಂಡು ಆರ್ಥಿಕ ಬೆಳವಣಿಗೆಯನ್ನು ಸಾಧಿಸಿ ಉದ್ಯೋಗದ ಅವಕಾಶವನ್ನು ಹೆಚ್ಚಿಸುವುದೇ ಆಗಿದೆ. ಇದನ್ನು ಸಾಧಿಸಲು ಎಲ್ಲ ರೀತಿಯ ನಿರ್ಬಂಧಗಳನ್ನು ಸಡಿಲಿಸಿ, ಆಡಳಿತ ರೀತಿಯನ್ನು ಸರಳೀಕರಿಸಿ, ರಫ್ತುಗಾಗಿ ಉಪಯೋಗಿಸುವ ಸರಕುಗಳ ಮೇಲೆ ದೇಶದ ಒಳಕೆ ವಿಧಿಸುವ ತೆರಿಗೆಗಳನ್ನು ಕಡಿಮೆ ಮಾಡುವ ಉದ್ದೇಶ ಹೊಂದಿದೆ.

ಭಾರತವನ್ನು ವ್ಯಾಪಾರ, ಸೇವೆ ಮತ್ತು ಕೈಗಾರಿಕಾ ಉತ್ಪಾದನಾ ಚಟುವಟಿಕೆಗಳಲ್ಲಿ ವಿಶ್ವದ ಒಂದು ಕೇಂದ್ರಬಿಂದುವನ್ನು ಮಾಡುವ ಉದ್ದೇಶವಿದೆ. ತಾಂತ್ರಿಕ ಜ್ಞಾನದ ಬೆಳವಣಿಗೆ ಮತ್ತು ಮೂಲಭೂತ ಸೌಕರ್ಯಗಳನ್ನು ಉತ್ತಮ ಪಡಿಸುವ ಉದ್ದೇಶ ಹೊಂದಿದೆ. ದೇಶದ ಒಳಗಿರುವ ಕೈಗಾರಿಕೆಗಳಿಗೆ ತೊಂದರೆಯಾಗದ ರೀತಿಯಲ್ಲಿ ವ್ಯಾಪಾರ ಒಪ್ಪಂದಗಳನ್ನು ಮಾಡಿಕೊಳ್ಳುವ ಗುರಿಯನ್ನಿಟ್ಟುಕೊಂಡಿದೆ. ವ್ಯಾಪಾರ ಅಭಿವೃದ್ಧಿಗಾಗಿ ಸ್ಥಾಪಿಸಲ್ಪಟ್ಟಿರುವ ಸಮಿತಿಗಳನ್ನು ಪುನಶ್ಚೇತನಗೊಳಿಸುವುದು ಒಂದು ಗುರಿಯಾಗಿದೆ. ನಮ್ಮ ದೇಶದ ರಾಯಭಾರಿಗಳು ವಿದೇಶಿ ವ್ಯಾಪಾರ ಅಭಿವೃದ್ಧಿ ಸಾಧಿಸುವುದರಲ್ಲಿ ಮುಖ್ಯ ಪಾತ್ರ ವಹಿಸಬೇಕೆಂದು ತಿಳಿಸಲಾಗಿದೆ.

ಈ ಉದ್ದೇಶಗಳನ್ನು ಸಾಧಿಸಲು ಕೆಲವು ವಿಷಯಗಳನ್ನು ಗುರುತಿಸಿ ಅವುಗಳಿಗೆ ಪ್ರೋತ್ಸಾಹ ಕೊಡಲಾಗುತ್ತಿದೆ. ಬೇಸಾಯ, ಕೈಮಗ್ಗ, ಕುಶಲ ಕೈಗಾರಿಕೆಗಳು, ಚರ್ಮ, ಒಡವೆ ತಯಾರಿಕೆ ಈ ಕ್ಷೇತ್ರಗಳಲ್ಲಿ ಉತ್ತಮ ಫಲಗಳನ್ನು ನಿರೀಕ್ಷಿಸಲಾಗಿದೆ. ಈ ಉದ್ದೇಶ ಸಾಧನೆಗಾಗಿ ಕೆಲವು ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿದೆ. ವಿಶೇಷ ಕೃಷಿ ಉಫಾಜ್ ಯೋಜನೆಯಲ್ಲಿ (Special Agricultural Produce Scheme) ಹಣ್ಣು, ತರಕಾರಿ, ಹೂವು, ಮುಖ್ಯ ಅರಣ್ಯ ಉತ್ಪಾದನೆಗಳು ಇವುಗಳಿಗೆ ಸಾಲಸೌಲಭ್ಯ ಒದಗಿಸಿ ರಫ್ತಿಗೆ ಪ್ರೋತ್ಸಾಹ ಕೊಡಲಾಗಿದೆ. ಕೃಷಿ ರಫ್ತು ವಲಯ ಸ್ಥಾಪಿಸಿ ಕೃಷಿ ಉದ್ಯಮಕ್ಕೆ ಬೇಕಾಗುವ ಆಮದು ಮತ್ತು ಈ ಕ್ಷೇತ್ರದ ಸರಕುಗಳ ರಫ್ತಿಗೆ ಪ್ರೋತ್ಸಾಹವನ್ನು ಕೊಟ್ಟಿದೆ.

ಕೃಷಿ ಉತ್ಪನ್ನ ರಫ್ತಿನ ಉತ್ತೇಜನಕ್ಕೆ 'ಗುರಿ ಹೆಚ್ಚಳ' ಯೋಜನೆಯನ್ನು ಸ್ಥಾಪಿಸಿದೆ. ನಿಗಧಿ ಮಾಡಿದ ಪ್ರಮಾಣಕ್ಕಿಂತ ಹೆಚ್ಚು ರಫ್ತು ಮಾಡಿದರೆ ಅವರಿಗೆ ಸುಲಭ ದರದಲ್ಲಿ ಸಾಲಸೌಲಭ್ಯ ದೊರಕುತ್ತದೆ. 'ಭಾರತದಿಂದ ಸೇವೆ ಸಲ್ಲಿಸುವಿಕೆ' ಯೋಜನೆಯಲ್ಲಿ ಸೇವೆಗಳ ರಫ್ತಿಗೆ ಉತ್ತೇಜನ ಕೊಡಲಾಗಿದೆ. ಸಾಫ್ಟ್‌ವೇರ್ ಟೆಕ್ನಾಲಜಿ ಪಾರ್ಕ್, ಬೈಯೋ ಟೆಕ್ನಾಲಜಿ ಪಾರ್ಕ್‌ಗಳನ್ನು ಸ್ಥಾಪಿಸಿ ಈ ಸರಕುಗಳ ರಫ್ತಿಗೆ ಉತ್ತೇಜನ ಕೊಡಲಾಗಿದೆ. ಸಣ್ಣ ಪ್ರಮಾಣದಲ್ಲಿ ರಫ್ತು ಮಾಡುವವರನ್ನು ಗುರುತಿಸಿ ಅವರಿಗೆ ಸ್ಟಾರ್ ಎಕ್ಸ್‌ಪೋರ್ಟ್ ಹೌಸ್ ಅಂತಸ್ತನ್ನು ಕೊಟ್ಟಿದೆ. ಇಂತಹ ರಫ್ತುದಾರರು ಬ್ಯಾಂಕುಗಳಿಂದ ಯಾವ ಗ್ಯಾರಂಟಿಯೂ ಇಲ್ಲದೆ ಸಾಲವನ್ನು ಪಡೆಯಬಹುದು. ರಫ್ತು ಉತ್ತೇಜನ ಸಮಿತಿಯ '(Export Promotion Council) ಶಿಫಾರಸ್ಸಿನ ಮೇಲೆ ಅರ್ಹ ರಫ್ತುದಾರರಿಗೆ ವ್ಯಾಪಾರ ಸಂಬಂಧ ಬರುವ ವಿವಾದಗಳಿಗೆ ಕಾನೂನು ವೆಚ್ಚವನ್ನು ಭರಿಸುವ ಯೋಜನೆ ಜಾರಿಗೆ ಬಂದಿದೆ.

ಈ ರೀತಿ ೨೦೦೪ರ ವಿದೇಶಿ ವ್ಯಾಪಾರ ನೀತಿ ೫ ವರ್ಷಗಳ ಅವಧಿಯಲ್ಲಿ ನಮ್ಮ ವಿದೇಶಿ ವ್ಯಾಪಾರದ ಪ್ರಮಾಣವನ್ನು ದ್ವಿಗುಣಗೊಳಿಸಿ, ಆರ್ಥಿಕ ಬೆಳವಣಿಗೆ ಮತ್ತು ಉದ್ಯೋಗ ಅವಕಾಶಗಳನ್ನು ಹೆಚ್ಚಿಸುವ ಉದ್ದೇಶಗಳನ್ನು ಹೊಂದಿದೆ. ಈ ಉದ್ದೇಶಗಳನ್ನು ಸಾಧಿಸಲು ಸರ್ಕಾರ ಅನೇಕ ಕ್ರಮಗಳನ್ನು ಕೈಗೊಂಡಿದೆ.

## ೭.೪. ವಿಶ್ವ ವ್ಯಾಪಾರ ಸಂಸ್ಥೆ

ಉದ್ದೇಶಗಳು ಮತ್ತು ಸದಸ್ಯತ್ವ-ಬಹುಪಕ್ಷೀಯ ವ್ಯಾಪಾರ ಒಪ್ಪಂದಗಳ ರಚನೆ-GATT; GATS; TRIPS; TRIMS; ವಿಶ್ವ ವ್ಯಾಪಾರ ಸಂಸ್ಥೆ ಮತ್ತು ಇಂಡಿಯಾ

**ವ್ಯಾಪಾರ ಮತ್ತು ಸುಂಕದ ಬಗ್ಗೆ ಸಾಮಾನ್ಯ ಒಪ್ಪಂದ: GATT: ೧೯೪೮**

**ಪರಿಚಯ:** ಅಂತಾರಾಷ್ಟ್ರೀಯ ವ್ಯಾಪಾರ ದೀರ್ಘ ಕಾಲದಿಂದಲೂ ಸಾಗುತ್ತಾ ಬಂದಿದೆ. ೧೫ನೇ ಶತಮಾನದ ಮಧ್ಯ ಭಾಗದಲ್ಲಿ ಯುರೋಪಿನಲ್ಲಿ ವಾಣಿಜ್ಯ ಪಂಥವೆಂಬ ತತ್ವ ಬೆಳೆದು ಆರ್ಥಿಕವಾಗಿ ಪ್ರಬಲವಾದ ರಾಷ್ಟ್ರ ಸ್ಥಾಪಿಸಲು ಮತ್ತು ರಾಜಪ್ರಭುತ್ವಕ್ಕೆ ಬೆಂಬಲ ಕೊಡಲು ರಫ್ತಿಗೆ ಉತ್ತೇಜನ ಕೊಟ್ಟು ಆಮದನ್ನು ನಿರ್ಬಂಧಿಸುವ ಅನೇಕ ಕ್ರಮಗಳನ್ನು ಕೈಗೊಳ್ಳಲಾಯಿತು. ಆದರೆ ೧೮ನೇ ಶತಮಾನದ ಕೊನೆಯಲ್ಲಿ ಆಡಮ್ ಸ್ಮಿತ್‌ರು ತಮ್ಮ ಗ್ರಂಥ 'ರಾಷ್ಟ್ರಗಳ ಸಂಪತ್ತು' ಎಂಬುದರಲ್ಲಿ ವಾಣಿಜ್ಯ ಪಂಥದ ತತ್ವವನ್ನು ಟೀಕಿಸಿ, ಮುಕ್ತಿ ವ್ಯಾಪಾರದ ಅನುಕೂಲಗಳನ್ನು ಪ್ರತಿಪಾದಿಸಿದರು. ೧೮ನೇ ಶತಮಾನದ ಕೊನೆಯಲ್ಲಿ ವಾಣಿಜ್ಯ ಪಂಥ ಕ್ರಮೇಣವಾಗಿ ಪ್ರಾಮುಖ್ಯತೆಯನ್ನು ಕಳೆದುಕೊಂಡು ಮುಕ್ತ ವ್ಯಾಪಾರ ಬೆಳೆಯತೊಡಗಿತು. ಆದರೆ ವಾಣಿಜ್ಯ ಪಂಥದ ರಕ್ಷಣಾ ನೀತಿ ಸಂಪೂರ್ಣವಾಗಿ ನಶಿಸಲಿಲ್ಲ. ೨೧ನೇ ಶತಮಾನದ ಪ್ರಾರಂಭದಲ್ಲಿ ಅನೇಕ ರಾಷ್ಟ್ರಗಳು ಪುನಃ ರಕ್ಷಣಾ ನೀತಿಯನ್ನು ಅನುಸರಿಸಿತೊಡಗಿದವು.

ನಮ್ಮ ದೇಶದಲ್ಲೂ ನಮ್ಮನ್ನು ಆಳುತ್ತಿದ್ದ ಬ್ರಿಟಿಷ್‌ರು ಇಷ್ಟವಿಲ್ಲದಿದ್ದರೂ ಅನಿವಾರ್ಯವಾಗಿ ಕೆಲವು ಕೈಗಾರಿಕಾಗಳಿಗೆ ಕ್ಲಿಷ್ಟವಾದ ಷರತ್ತುಗಳನ್ನು ಹಾಕಿ ರಕ್ಷಣೆಯನ್ನು ಕೊಟ್ಟರು (ಉದಾ. ೧೯೨೬ರಲ್ಲಿ ಹತ್ತಿ ಗಿರಣಿಗೆ ೧೯೩೨ರಲ್ಲಿ ಸಕ್ಕರೆ ಕಾರ್ಖಾನೆಗೆ) ಇಷ್ಟಾದರೂ ಎರಡನೇ ಮಹಾಯುದ್ಧ ಪ್ರಾರಂಭವಾಗುವವರೆಗೂ ವಿದೇಶಿ ವ್ಯಾಪಾರದ ಮೇಲೆ ಅಷ್ಟೇನು ನಿರ್ಬಂಧಗಳಿರಲಿಲ್ಲ. ಆದರೆ ಯುದ್ಧ ಮುಗಿದ ತರುವಾಯ ಅನೇಕ ರಾಷ್ಟ್ರಗಳು ವಿವಿಧ ರೀತಿಯ ನಿರ್ಬಂಧಗಳನ್ನು ವಿಧಿಸಿ ಅಂತರರಾಷ್ಟ್ರೀಯ ವ್ಯಾಪಾರಕ್ಕೆ ಅನೇಕ ಆಚರಣೆಗಳನ್ನು ತಂದವು. ಈ ನಿರ್ಬಂಧಗಳನ್ನು ತೆಗೆದುಹಾಕಿ ವಿಶ್ವ ವ್ಯಾಪಾರ ಬೆಳೆಯಲು ಪ್ರೋತ್ಸಾಹ ಕೊಡುವ ಸಲುವಾಗಿ ೩೦ನೇ ಅಕ್ಟೋಬರ್ ೧೯೪೭ರಲ್ಲಿ ೨೩ ದೇಶಗಳು ಜನಿವಾದಲ್ಲಿ ಒಪ್ಪಂದ ಮಾಡಿಕೊಂಡು, ಇದನ್ನು ವ್ಯಾಪಾರ ಮತ್ತು ಸುಂಕದ ಬಗ್ಗೆಯ ಸಾಮಾನ್ಯ ಒಪ್ಪಂದಯೆಂದು ಕರೆಯಲಾಯಿತು. ೧ನೇ ಜನವರಿ ೧೯೪೮ರಿಂದ ಈ ಒಪ್ಪಂದ ಕಾರ್ಯಾಚರಣೆಗೆ ಬಂದಿತು. ಪ್ರಾರಂಭದಲ್ಲಿಯೇ ನಮ್ಮ ದೇಶ ಈ ಒಪ್ಪಂದಕ್ಕೆ ಸಹಿ ಮಾಡಿತು. ಕ್ರಮೇಣವಾಗಿ ೯೮ ರಾಷ್ಟ್ರಗಳು ಈ ಒಪ್ಪಂದಕ್ಕೆ ಸಹಿ ಮಾಡಿದವು.

ಸದಸ್ಯ ರಾಷ್ಟ್ರಗಳು ಆಗಿಂದಾಗ್ಗೆ ಸಭೆ ನಡೆಸಿ ಅಂತರರಾಷ್ಟ್ರೀಯ ವ್ಯಾಪಾರದ ವೃದ್ಧಿಗೆ ತೆಗೆದುಕೊಳ್ಳಬೇಕಾದ ಕ್ರಮಗಳನ್ನು ಸೂಚಿಸುತ್ತಿದ್ದವು. ಮುಕ್ತ ಅಂತರರಾಷ್ಟ್ರೀಯ ವ್ಯಾಪಾರವನ್ನು ಸಾಧಿಸುವುದೇ ಇದರ ಮುಖ್ಯ ಗುರಿಯಾಗಿತ್ತು. ಒಪ್ಪಂದಕ್ಕೆ ಸಹಿ ಹಾಕಿದ ರಾಷ್ಟ್ರಗಳು ವಿಶೇಷ ಸೌಲಭ್ಯಗಳ ನೀತಿಯನ್ನು ಅನುಸರಿಸಬೇಕಿತ್ತು. ಒಂದು ಸದಸ್ಯ ರಾಷ್ಟ್ರಕ್ಕೆ ಕಡಿಮೆ ಆಮದು ಸುಂಕ ವಿಧಿಸಿದರೆ ಇದೇ ಮೊತ್ತದ ಸುಂಕವನ್ನು ಬೇರೆ ಎಲ್ಲಾ ಸದಸ್ಯರುಗಳಿಗೂ ವಿಧಿಸಬೇಕೆಂಬ ನಿಯಮವಿದ್ದಿತು. ಅಂದರೆ ಅಂತರರಾಷ್ಟ್ರೀಯ ವ್ಯಾಪಾರವನ್ನು ತಾರತಮ್ಯವಿಲ್ಲದೆ ಕೈಗೊಳ್ಳಬೇಕು. ಇತರ ಸದಸ್ಯ ರಾಷ್ಟ್ರಗಳೊಡನೆ ಸಮಾಲೋಚನೆ ನಡೆಸಿ ಸುಂಕ ಮತ್ತು ಸುಂಕೇತರ ಅಡಚಣೆಗಳನ್ನು ಕಡಿಮೆ ಮಾಡಬೇಕು. ಆದರೆ ಕೆಲವು ಸಂದರ್ಭಗಳಲ್ಲಿ ಸದಸ್ಯ ರಾಷ್ಟ್ರ ರಕ್ಷಣಾ ನೀತಿಯನ್ನು ಅನುಸರಿಸಲು ಅವಕಾಶವಿದ್ದಿತು. ಪರಿಮಾಣಾತ್ಮಕ ನಿರ್ಬಂಧಗಳನ್ನು ಕ್ರಮೇಣ ಕಡಿಮೆ ಮಾಡುವುದು ಮತ್ತು ಅಂತರರಾಷ್ಟ್ರೀಯ ವ್ಯಾಪಾರಕ್ಕೆ ಸಂಬಂಧಿಸಿದ ವಿವಾದಗಳನ್ನು ಬಗೆಹರಿಸುವುದು ಇದರ ಒಂದು ಕೆಲಸವಾಗಿದ್ದಿತು. ಆದರೆ ಈ ವ್ಯವಸ್ಥೆಯಲ್ಲಿ ಕಾನೂನುಬದ್ಧವಾಗಿ, ತೆಗೆದುಕೊಂಡ ತೀರ್ಮಾನವನ್ನು ಜಾರಿಗೆ ತರಲು ಅವಕಾಶವಿರಲಿಲ್ಲ. ವ್ಯಾಪಾರ ಒಪ್ಪಂದಕ್ಕೆ ಸಹಿ ಹಾಕಿದ ರಾಷ್ಟ್ರಗಳು ಕ್ರಮೇಣವಾಗಿ ಎಲ್ಲಾ ರೀತಿಯ ಸುಂಕಗಳನ್ನು ಕಡಿಮೆ ಮಾಡುವ ಬಗ್ಗೆ ೮ ಸುತ್ತಿನ ಸಂಧಾನಗಳನ್ನು ನಡೆಸಿದವು. ಇವು ಯಾವುವೆಂದರೆ

೧. ೧೯೪೭ರಲ್ಲಿ ಜಿನಿವಾದಲ್ಲಿ ಮೊದಲನೆ ಸುತ್ತಿನ ಸಂಧಾನ

೨. ೧೯೪೯ರಲ್ಲಿ ಅನ್ಸಿ (Annecy-France)ಯಲ್ಲಿ ಎರಡನೇ ಸುತ್ತಿನ ಸಂಧಾನ.

೩. ೧೯೫೦-೫೧ರಲ್ಲಿ ಟರ್ಕ್ವೇಯಲ್ಲಿ ನಡೆದ ೩ನೇ ಸುತ್ತಿನ ಸಂಧಾನ.

೪. ೧೯೫೫-೫೬ರಲ್ಲಿ ೪ನೇ ಸುತ್ತಿನ ಸಂಧಾನ ಜಿನಿವಾದಲ್ಲಿ.

೫. ೧೯೫೪-೬೨ರವರೆಗೆ ೫ನೇ ಸುತ್ತಿನ ಮಾತುಕತೆಗಳು, ಡಿಲ್ಲಾನ ಜಿನಿವಾದಲ್ಲಿ.

೬. ೧೯೬೩-೬೭ರವರಗೆ ೬ನೇ ಸುತ್ತಿನ ಸಂಧಾನಗಳು ಜಿನಿವಾದಲ್ಲಿ ಇದನ್ನು ಕೆನ್ನಡಿ ಸುತ್ತಿನ ಸಂಧಾನಗಳು ಎಂದು ಕರೆಯಲಾಗಿದೆ.

೭. ೧೯೭೩-೭೯ರ ವರೆಗೆ ಟೋಕಿಯಾ ಜಪಾನ್‌ನಲ್ಲಿ ೭ನೆ ಸುತ್ತಿನ ಸಂಧಾನಗಳು.

೮. ೧೯೮೬-೯೪ರವರೆಗೆ ಎಂಟನೆ ಸುತ್ತಿನ ಸಂಧಾನ ಪಂಟಾಡೆಲ್ ಎಸ್ತಾ (Punta Delesta in Urgncy) ದಲ್ಲಿ ದೀರ್ಘಕಾಲ ನಡೆದು ಇದನ್ನು ಉರುಗ್ವೆ ಸುತ್ತಿನ ಸಂಧಾನಗಳು ಎಂದು ಕರೆಯಲಾಗಿದೆ. ಉರುಗ್ವೆ ಸಂಧಾನ ದೀರ್ಘಕಾಲ ನಡೆದ ಫಲವಾಗಿ ಏಪ್ರಿಲ್ ೧೫, ೧೯೯೪ರಲ್ಲಿ ೧೨೪ ಸದಸ್ಯ ರಾಷ್ಟ್ರಗಳು ಮಾರ್‌ಕಾಶ್ (Marrakash in Morocco) ಎಂಬಲ್ಲಿ ಒಪ್ಪಂದಕ್ಕೆ ಸಹಿ ಹಾಕಿದ ತರುವಾಯ ೧ ಜನವರಿ ೧೯೯೫ರಲ್ಲಿ ವಿಶ್ವ ವ್ಯಾಪಾರ ಸಂಸ್ಥೆ ಸ್ಥಾಪಿತವಾಯಿತು.

GATT ಸಂಸ್ಥೆಯಾಗಿರಲಿಲ್ಲ ಮತ್ತು ಇದರ ಒಪ್ಪಂದದ ತೀರ್ಮಾನಗಳನ್ನು ಕಡ್ಡಾಯವಾಗಿ ಜಾರಿಗೆ ತರುವ ಅಧಿಕಾರವಿರಲಿಲ್ಲ. ಆದರೆ ವಿಶ್ವ ವ್ಯಾಪಾರ ಸಂಸ್ಥೆ ಎಲ್ಲಾ

ಸದಸ್ಯ ರಾಷ್ಟ್ರಗಳ ಮಾನ್ಯತೆಯನ್ನು ಪಡೆದಿದೆ. ಇದು ಜಾರಿಗೊಳಿಸುವ ಎಲ್ಲಾ ನಿಯಮಗಳನ್ನು ಎಲ್ಲಾ ಸದಸ್ಯ ರಾಷ್ಟ್ರಗಳು ಕಡ್ಡಾಯವಾಗಿ ಅಂಗೀಕರಿಸಲೇಬೇಕು. GATTನ ನಿಯಮಗಳು ಕೇವಲ ಸರಕುಗಳ ವ್ಯಾಪಾರಕ್ಕೆ ಅನ್ವಯಿಸುತ್ತಿತ್ತು. ಆದರೆ ವಿಶ್ವ ವ್ಯಾಪಾಗ ಸಂಸ್ಥೆ ಎಲ್ಲಾ
ಸದಸ್ಯ ರಾಷ್ಟ್ರಗಳ ಮಾನ್ಯತೆಯನ್ನು ಪಡೆದಿದೆ. ಇದು ಜಾರಿಗೊಳಿಸುವ ಎಲ್ಲಾ ನಿಯಮಗಳನ್ನು ಎಲ್ಲಾ ಸದಸ್ಯ ರಾಷ್ಟ್ರಗಳು ಕಡ್ಡಾಯವಾಗಿ ಅಂಗೀಕರಿಸಲೇಬೇಕು. GATTಯ ನಿಯಮಗಳು ಕೇವಲ ಸರಕುಗಳ ವ್ಯಾಪಾರಕ್ಕೆ ಅನ್ವಯಿಸುತ್ತಿತ್ತು. ಆದರೆ ವಿಶ್ವ ವ್ಯಾಪಾರ ಸಂಸ್ಥೆಯ ನಿಯಮಗಳು ಸರಕು, ಸೇವೆ, ಬಂಡವಾಳ ಹೂಡಿಕೆ ಮತ್ತು ಬೌದ್ಧಿಕ ಆಸ್ತಿ ಹಕ್ಕುಗಳ ಬಗ್ಗೆಗೂ ಅನ್ವಯವಾಗುತ್ತದೆ. GATT ರಕ್ಷಣಾ ನೀತಿಯನ್ನು ತಡೆಗಟ್ಟಲು ಸಾಧ್ಯವಾಗಲಿಲ್ಲ. ಆದರೂ GATT ಅವಧಿಯಲ್ಲಿ ಕಡಿಮೆ ಮಾಡಿದರ ಅಥವಾ ದರ ಹೆಚ್ಚದಂತೆ ನೋಡಿಕೊಳ್ಳಲಾದ ಸುಂಕಗಳ ಸಂಖ್ಯೆ ೬೦,೦೦೦ವಾಗಿದ್ದಿತು. ಈ ಒಪ್ಪಂದಗಳು ಸುಮಾರು ಶೇ. ೮೦ರಷ್ಟು ವಿಶ್ವ ವ್ಯಾಪಾರಕ್ಕೆ ಅನ್ವಯವಾಗುತ್ತಿತ್ತು.

**ವಿಶ್ವ ವ್ಯಾಪಾರ ಸಂಸ್ಥೆ: ೧೯೯೫**

**ಉದ್ದೇಶಗಳು ಮತ್ತು ಕಾರ್ಯಾಚರಣೆ**

೧. ಸುಂಕಗಳನ್ನು ಕಡಿಮೆ ಮಾಡಿ ಅಂತರರಾಷ್ಟ್ರೀಯ ವ್ಯಾಪಾರಕ್ಕೆ ಉತ್ತೇಜನ ಕೊಡುವುದರ ಮೂಲಕ, ಉತ್ಪಾದನಾಂಗಗಳನ್ನು ದಕ್ಷತೆಯಿಂದ ಉಪಯೋಗಿಸಿ, ಉತ್ಪಾದನೆ, ಉದ್ಯೋಗ, ಆದಾಯ ಮತ್ತು ವಿಶ್ವದ ಜನರ ಜೀವನ ಮಟ್ಟವನ್ನು ಹೆಚ್ಚಿಸುವುದು.

೨. ಪರಿಸರವನ್ನು ರಕ್ಷಿಸಿ ಆರ್ಥಿಕ ಅಭಿವೃದ್ಧಿಯನ್ನು ಸಾಧಿಸುವುದು.

೩. ವಿಶ್ವ ವ್ಯಾಪಾರದಲ್ಲಿ ಅಭಿವೃದ್ಧಿಶೀಲ ರಾಷ್ಟ್ರಗಳ ಮತ್ತು ತೀರ ಹಿಂದುಳಿದಿರುವ ರಾಷ್ಟ್ರಗಳ ಪಾಲನ್ನು ಹೆಚ್ಚಿಸುವುದು.

೪. ಅಂತರರಾಷ್ಟ್ರೀಯ ವ್ಯಾಪಾರದಲ್ಲಿ ತಾರತಮ್ಯ ನೀತಿಯನ್ನು ಬಿಟ್ಟು ಎಲ್ಲಾ ದೇಶಗಳಿಗೂ ಒಂದೇ ರೀತಿಯ ಸೌಲಭ್ಯಗಳನ್ನು ಒದಗಿಸುವುದು.

೫. ಬಹುಪಕ್ಷೀಯ ವ್ಯಾಪಾರವನ್ನು ವೃದ್ಧಿಸುವುದು.

ಎಲ್ಲಾ ರಾಷ್ಟ್ರಗಳ ಪ್ರತಿನಿಧಿಗಳು ೨ ವರ್ಷಕ್ಕೊಮ್ಮೆ ಮಿನಸ್ಟೀರಿಯಲ್ ಸಮ್ಮೇಳನದಲ್ಲಿ ಭಾಗವಹಿಸಿ ವಿಶ್ವ ವ್ಯಾಪಾರ ಸಂಸ್ಥೆಯ ಉದ್ದೇಶಗಳನ್ನು ಸಾಧಿಸಲು ಕಾರ್ಯಗತ ಮಾಡಬೇಕಾದ ಕ್ರಮಗಳ ಬಗ್ಗೆ ಚರ್ಚೆ ನಡೆಸುತ್ತದೆ. ಎಲ್ಲಾ ರಾಷ್ಟ್ರಗಳ ಪ್ರತಿನಿಧಿಗಳನ್ನೊಳಗೊಂಡ ಸಾಮಾನ್ಯ ಮಂತ್ರಿಮಂಡಲ ಸಚಿವರುಗಳ ಸಮ್ಮೇಳನದ ನಿರ್ಧಾರಗಳನ್ನು ಕಾರ್ಯಗತ ಮಾಡುವ ಜವಾಬ್ದಾರಿಯನ್ನು ಹೊಂದಿದೆ. ಸರಕುಗಳ ವ್ಯಾಪಾರಕ್ಕೆ, ಸೇವೆಗಳ ವ್ಯಾಪಾರಕ್ಕೆ, ಬೌದ್ಧಿಕ ಆಸ್ತಿ ಹಕ್ಕಿನ ವ್ಯಾಪಾರಕ್ಕೆ ಪ್ರತ್ಯೇಕ ಸಲಹಾ ಸಮಿತಿಗಳು ಇವೆ. ಇದರ ಕಛೇರಿಯು ಜಿನಿವಾದಲ್ಲಿದೆ. ಇದರ ಡೈರೆಕ್ಟರ್ ಜನರಲ್ ಥಾಯಲ್ಯಾಂಡ್‌ನ ಸುಪಾಚಾಯಿ, ಫಾನಿಚ್

ಪಕಡಿ ಆಗಿದ್ದಾರೆ. ಇಲ್ಲಿಯವರೆಗೆ ಈ ವಿಶ್ವ ಸಂಸ್ಥೆಯಲ್ಲಿ ೧೪೮ ಸದಸ್ಯ ರಾಷ್ಟ್ರಗಳಿವೆ. ವ್ಯಾಪಾರ ವಾದಗಳನ್ನು ಬಗೆಹರಿಸಲು ವಿವಾದ ಬಗೆಹರಿಸಲು ಸಂಘವಿದೆ. (Dispute Settlement Body) ಪಾವತಿ ಶಿಲ್ಕಿಗೆ ಸಂಬಂಧಪಟ್ಟಂತೆ ಪ್ರತ್ಯೇಕವಾದ ಸಮಿತಿ ಇದೆ. ಆಯವ್ಯಯವನ್ನು ಸಿದ್ಧಪಡಿಸುವ ಸಮಿತಿ ಇದೆ. ಮುಂಚೆ ಸಚಿವರುಗಳ ಸಮ್ಮೇಳನವನ್ನು ಬಹುಮತ ಸದಸ್ಯರ ಬೆಂಬಲದ ಮೇಲೆ ತೀರ್ಮಾನಗಳನ್ನು ಮಾಡಲಾಗು ತ್ತಿತ್ತು. ಆದರೆ ಈಗ ಎಲ್ಲರ ಒಮ್ಮತದಿಂದ (Consenses) ತೀರ್ಮಾನವಾಗುತ್ತದೆ. ಈ ನಿರ್ಧಾರ ಹಿಂದುಳಿದ ರಾಷ್ಟ್ರಗಳಿಗೆ ಅನುಕೂಲವಾಗಿದೆ. (ದೋಹೆ ಸಮ್ಮೇಳನದ ತೀರ್ಮಾನ ೨೦೦೧ರಲ್ಲಿ.)

**ವಿಶ್ವ ವ್ಯಾಪಾರ ಸಂಸ್ಥೆಯ ಒಪ್ಪಂದದ ಮುಖ್ಯಾಂಶಗಳು**

ಉರುಗ್ವೆ ಸುತ್ತಿನ ಸಂಧಾನದ ಫಲವಾಗಿ ಮುಖ್ಯವಾಗಿ ೪ ವಿಧವಾದ ಒಪ್ಪಂದಗಳನ್ನು ಮಾಡಿಕೊಳ್ಳಲಾಯಿತು.

೧. ಸರಕುಗಳ ವ್ಯಾಪಾರದ ಬಗ್ಗೆ ಬಹುಪಕ್ಷೀಯ ಒಪ್ಪಂದಗಳು.

೨. ಸೇವೆಗಳ ಬಗ್ಗೆ ಬಹುಪಕ್ತೀಯ ವ್ಯಾಪಾರ ಒಪ್ಪಂದಗಳು.
ವ್ಯಾಪಾರ ಮತ್ತು ಸುಂಕಗಳ ಬಗ್ಗೆ ಸಾಮಾನ್ಯ ಒಪ್ಪಂದ

೩. ಬೌದ್ಧಿಕ ಆಸ್ತಿ ಹಕ್ಕುಗಳ ವ್ಯಾಪಾರದ ಬಗ್ಗೆ ಒಪ್ಪಂದಗಳು

೪. ವ್ಯಾಪಾರ ಸಂಬಂಧಿ ಬೌದ್ಧಿಕ ಆಸ್ತಿ ಹಕ್ಕು (ಟ್ರಿಪ್ಸ್)

ಸರಕುಗಳ ವ್ಯಾಪಾರದ ಬಗ್ಗೆ ೧೯೯೪ರಲ್ಲಿ ಮೊರಕೇಶ್‌ನಲ್ಲಿ ಮಾಡಿಕೊಂಡ ಒಪ್ಪಂದ ಗಳು ಜಾರಿಗೆ ಬಂದಿವೆ. ಸರ್ಕಾರದ ವ್ಯಾಪಾರ ಸಂಸ್ಥೆಗಳ ಚಟುವಟಿಕೆಗಳಲ್ಲಿ ಪಾರದರ್ಶಕತ್ವ ಇರಬೇಕು. ಸರ್ಕಾರ ಯಾವುದಾದರೂ ಸರಕುಗಳನ್ನು ಕೊಳ್ಳುವಾಗ ವಿಶ್ವದ ಮಾರುಕಟ್ಟೆ ಯಿಂದ, ದನದ ದರಖಾಸ್ತನ್ನು (Tender) ಕರೆಯಬೇಕು. ಅಂದರೆ ಸರ್ಕಾರಕ್ಕೆ ಸ್ವದೇಶಿಯರಿಗೆ ಸಹಾಯ ಮಾಡಲು ಸಾಧ್ಯವಿಲ್ಲ. ಸ್ಪರ್ಧಾತ್ಮಕ ಮಾರುಕಟ್ಟೆಯಲ್ಲಿ ಕಡಿಮೆ ಬೆಲೆಯಲ್ಲಿ ಮಾರಾಟ ಮಾಡುವವರಿಂದ ಸರಕುಗಳನ್ನು ಕೊಳ್ಳಬೇಕು.

ಪ್ರತಿ ರಾಷ್ಟ್ರವೂ ಕೆಲವು ಬಂಧಿತ ಸರಕುಗಳ ಮೇಲೆ ಒಂದು ನಿರ್ಧಿಷ್ಟ ಪ್ರಮಾಣಕ್ಕಿಂತ ಜಾಸ್ತಿ ಸುಂಕವನ್ನು ವಿಧಿಸುವಂತಿಲ್ಲ. ಉದಾ. ಹಿಂದುಳಿದಿರುವ ರಾಷ್ಟ್ರಗಳಲ್ಲಿ ಶೇ. ೬೦ ಸರಕುಗಳು ಬಂಧಿತ ವರ್ಗಕ್ಕೆ ಸೇರಿವೆ. ಮುಂದುವರೆದ ರಾಷ್ಟ್ರಗಳಲ್ಲಿ ಶೇ. ೯೦ರಷ್ಟು ಸರಕುಗಳು ಬಂಧಿತ ವರ್ಗಕ್ಕೆ ಸೇರಿವೆ. ಹಿಂದುಳಿದಿರುವ ರಾಷ್ಟ್ರಗಳು ಉಳಿದ ಶೇ. ೪೦ ಸರಕುಗಳ ಮೇಲೆ ಸುಂಕ ವಿಧಿಸಲು ನಿರ್ಬಂಧವಿರುವುದಿಲ್ಲ. ಮುಂದುವರೆದ ರಾಷ್ಟ್ರಗಳು ಶೇ. ೧೦ ಸರಕುಗಳ ಮೇಲೆ ನಿರ್ಬಂಧರಹಿತ ಸುಂಕ ವಿಧಿಸಬಹುದು. ದೋಹ ಸುತ್ತಿನ ಮಿನಿಸ್ಟೀರಿಯಲ್ ಸಮ್ಮೇಳನದಲ್ಲಿ ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಬಂಧಿತ ಸರಕುಗಳ ಪ್ರಮಾಣವನ್ನು ಜಾಸ್ತಿ ಮಾಡಬೇಕೆಂದು ಶ್ರೀಮಂತ ರಾಷ್ಟ್ರಗಳು ಒತ್ತಡ ಮಾಡಿದವು.

ಪಾವತಿ ಶಿಲ್ಕಿನ ಕೊರತೆಯನ್ನು ನಿವಾರಣೆ ಮಾಡಲು ಸದಸ್ಯ ರಾಷ್ಟ್ರಗಳು ಆಮದುಗಳ ಮೇಲೆ ಪರಿಮಾಣತ್ಮಕ ನಿರ್ಬಂಧಗಳನ್ನು ವಿಧಿಸುವಂತಿಲ್ಲ. ಅನಿವಾರ್ಯ ಸಂದರ್ಭದಲ್ಲಿ ವಿಶ್ವ ವ್ಯಾಪಾರ ಸಂಸ್ಥೆಯ ಅನುಮತಿ ಪಡೆದು ನಿರ್ಬಂಧ ವಿಧಿಸಬಹುದು.

ವಿಶ್ವ ವ್ಯಾಪಾರ ಸಂಸ್ಥೆ ಸುಂಕ ಒಕ್ಕೂಟದ ಕಾರ್ಯಾಚರಣೆಯನ್ನು ವಿಮರ್ಶಾತ್ಮಕವಾಗಿ ಪರಿಶೀಲಿಸಿ ಇತರ ರಾಷ್ಟ್ರಗಳ ಮೇಲೆ ಇದರ ಪರಿಣಾಮ ಏನೆಂದು ತಿಳಿದು ಸೂಕ್ತ ಕ್ರಮ ಕೈಗೊಳ್ಳಲು ಶಿಫಾರಸ್ಸು ಮಾಡುತ್ತದೆ. (ವ್ಯಾಪಾರ ಒಕ್ಕೂಟದ ಸದಸ್ಯ ರಾಷ್ಟ್ರಗಳ ನಡುವೆ ವ್ಯಾಪಾರದ ಮೇಲೆ ಯಾವ ಸುಂಕವೂ ಇರುವುದಿಲ್ಲ. ಆದರೆ ಸದಸ್ಯರಲ್ಲಿನ ರಾಷ್ಟ್ರಗಳ ಮೇಲೆ ಯಾವ ಸುಂಕವೂ ಇರುವುದಿಲ್ಲ. ಆದರೆ ಸದಸ್ಯರಲ್ಲಿ ರಾಷ್ಟ್ರಗಳ ಮೇಲೆ ಒಂದೇ ಪ್ರಮಾಣದ ಸುಂಕಗಳನ್ನು ವಿಧಿಸುತ್ತವೆ).

ಸದಸ್ಯ ರಾಷ್ಟ್ರಗಳು ಸ್ವದೇಶದಲ್ಲಿ ಕೃಷಿ ಸರಕುಗಳಿಗೆ ಕೊಡುವ ಸಹಾಯಧನ, ಬೆಂಬಲ ಬೆಲೆ, ಇವುಗಳನ್ನು ಅವಲೋಕನ ಮಾಡುವ ಅಧಿಕಾರ ವಿಶ್ವವ್ಯಾಪಾರ ಸಂಸ್ಥೆಗೆ ಇದೆ, ಜಾಸ್ತಿ ರಕ್ಷಣೆ ಕೊಟ್ಟಿದ್ದರೆ ಅದನ್ನು ತೆಗೆದು ಹಾಕಲು ಸದಸ್ಯ ರಾಷ್ಟ್ರಗಳಿಗೆ ನಿರ್ದೇಶನ ಕೊಡಬಹುದು. ಕೃತಕ ಗೊಬ್ಬರಗಳಿಗೆ, ವಿದ್ಯುಚ್ಛಕ್ತಿ ಸರಬರಾಜಿಗೆ ಕೊಡುವ ಸಹಾಯ ಧನವನ್ನು ಕಡಿಮೆಮಾಡಲು ಸೂಚನೆ ನೀಡುವ ಅಧಿಕಾರ ವಿಶ್ವ ವ್ಯಾಪಾರ ಸಂಸ್ಥೆಗೆ ಇದೆ ಈ ಷರತ್ತು ಅಭಿವೃದ್ಧಿಶೀಲರಾಷ್ಟ್ರಗಳಿಗೆ ಅನಾನುಕೂಲ ಉಂಟುಮಾಡಿದೆ.

ಒಪ್ಪಂದಕ್ಕೆ ಸಹಿ ಹಾಕಿದ ಎಲ್ಲಾ ರಾಷ್ಟ್ರಗಳಿಗೆ ಒಂದೇ ದರದ ಸುಂಕ ವಿಶೇಷ ಸೌಲಭ್ಯ ನೀತಿಯನ್ನು ಅನುಸರಿಸಬೇಕು. ಯಾವುದಾದರೂ ಒಂದು ರಾಷ್ಟ್ರಕ್ಕೆ ಕಡಿಮೆ ಸುಂಕವನ್ನು ವಿಧಿಸಿದರೆ ಅದೇ ದರದ ಸುಂಕವನ್ನು ಇತರ ರಾಷ್ಟ್ರಗಳಿಗೂ ವಿಧಿಸಬೇಕು. ಅಂದರೆ ರಾಷ್ಟ್ರಗಳ ನಡುವೆ ತಾರತಮ್ಯ ನೀತಿ ಇರಬಾರದು. ಆದರೆ ಕೆಲವು ರಾಷ್ಟ್ರಗಳಿಗೆ ಈ ನಿಯಮ ೧೦ ವರ್ಷಗಳವರೆಗೂ ಅನ್ವಯಿಸುವುದಿಲ್ಲ. ಈ ಅವಧಿ ಈಗಾಗಲೇ ಮುಗಿದಿದೆ.

ಬಹುರಾಷ್ಟ್ರ ಜವಳಿ ಒಪ್ಪಂದವನ್ನು ಶ್ರೀಮಂತರಾಷ್ಟ್ರಗಳು ಹಿಂದುಳಿದಿರುವ ರಾಷ್ಟ್ರಗಳೊಡನೆ ಮಾಡಿಕೊಂಡು ತಮ್ಮ ದೇಶಕ್ಕೆ ರಫ್ತಾಗುವ ಒಟ್ಟಿಗೆ ಪರಿಮಾಣಾತ್ಮಕ ನಿರ್ಬಂಧ ವಿಧಿಸಿದ್ದಾರೆ. ಪರಿಮಾಣಾತ್ಮಕ ನಿರ್ಬಂಧವನ್ನು ೧೦ ವರ್ಷಗಳ ಒಳಗೆ ತೆಗೆಯಬೇಕು. ಈಗ ನಿರ್ಬಂಧಗಳನ್ನು ತೆಗೆದು ಹಾಕಿರುವುದರಿಂದ ಹಿಂದುಳಿದ ರಾಷ್ಟ್ರಗಳಿಗೆ (ಇಂಡಿಯಾ, ಚೈನಾ ಒಳಗೊಂಡು) ತಮ್ಮ ಬಟ್ಟೆಯನ್ನು ಮುಂದುವರೆದ ರಾಷ್ಟ್ರಗಳಲ್ಲಿ ಮಾರಾಟಮಾಡಲು ಸಾಧ್ಯವಾಗಿದೆ.

ವ್ಯಾಪಾರದಲ್ಲಿ ತೊಡಗಿರುವ ಸರಕುಗಳ ಗುಣಮಟ್ಟ ಮತ್ತು ಈ ಸರಕುಗಳು ಆರೋಗ್ಯದ ಮೇಲೆ ಉಂಟುಮಾಡುವ ಪರಿಣಾಮಗಳನ್ನು ಇಂತಹ ತಾಂತ್ರಿಕ ವಿಷಯುಗಳನ್ನು ಪರಿಶೀಲಿಸುವ ಅಧಿಕಾರ ವಿಶ್ವ ವ್ಯಾಪಾರ ಸಂಸ್ಥೆಗೆ ಇದೆ.

ವಿದೇಶಿಯರು ಕಡಿಮೆ ಬೆಲೆಯಲ್ಲಿ ತಮ್ಮ ಸರಕುಗಳನ್ನು ಮಾರಾಟ ಮಾಡತೊಡಗಿದರೆ ಅದನ್ನು ತಪ್ಪಿಸಲು ವಿಶ್ವ ವ್ಯಾಪಾರ ಸಂಸ್ಥೆ ಕ್ರಮಗಳನ್ನು ಕೈಗೊಳ್ಳಬಹುದು.

ಕೃಷಿ ಸರಕುಗಳಿಗೆ ಕೊಡುವ ಸಮಗ್ರ ಸಹಾಯದ ಮೊತ್ತ ರಾಷ್ಟ್ರದ ಒಳಗೆ ಉತ್ಪಾದನೆಯಾಗುವ ಕೃಷಿ ಸರಕುಗಳ ಮೌಲ್ಯದ ಶೇ.೧೦ಕ್ಕಿಂತ ಜಾಸ್ತಿ ಇರಬಾರದು.

### ವ್ಯಾಪಾರ ಮತ್ತು ಸೇವೆಗಳ ವ್ಯಾಪಾರಕ್ಕೆ ಸಂಬಂಧಿಸಿದ ಸಾಮಾನ್ಯ ಒಪ್ಪಂದ

ಅಂತರಾಷ್ಟ್ರೀಯ ವ್ಯಾಪಾರದಲ್ಲಿ ಈಗ ಸೇವೆಗಳ, ಬೌದ್ಧಿಕ ಆಸ್ತಿ ಹಕ್ಕುಗಳ ಮತ್ತು ಕೃಷಿ ಉತ್ಪನ್ನಗಳ ವ್ಯಾಪಾರವೂ ಸೇರಿದೆ. ಸೇವೆಗಳ ವ್ಯಾಪಾರದ ಬಗ್ಗೆ ಸಾಮಾನ್ಯ ಒಪ್ಪಂದ ಮಾಡಿಕೊಳ್ಳಲಾಗಿದೆ. ಸೇವೆಗಳಲ್ಲಿ ಬ್ಯಾಂಕು, ವಿಮಾಸಂಸ್ಥೆ, ಜಹಜುಗಳು, ದೂರವಾಣಿ ಸಂಪರ್ಕ, ವೈದ್ಯಕೀಯ, ವಿದ್ಯಾಭ್ಯಾಸ, ಪತ್ರಿಕೋದ್ಯಮ ಈ ಎಲ್ಲಾ ಸೇವೆಗಳೂ ಸೇರಿವೆ. ಸ್ವದೇಶದಲ್ಲಿ ಸಲ್ಲಿಸುವ ಸೇವೆಗಳಿಗೆ ದೊರಕುವ ಸೌಲಭ್ಯ ವಿದೇಶಿಯರೂ ಸಲ್ಲಿಸುವ ಸೇವೆಗಳಿಗೂ ದೊರಕಬೇಕು. ಅಂದರೆ ಯಾವ ನಿರ್ಬಂಧಗಳೂ ಇಲ್ಲದೆ ಸೇವೆಗಳ ವ್ಯಾಪಾರ ಅಂತರಾಷ್ಟ್ರೀಯ ಮಟ್ಟದಲ್ಲಿ ನಡೆಯಬೇಕು. ಆದರೆ ಕೆಲವು ರಾಷ್ಟ್ರಗಳಿಗೆ ೧೦ ವರ್ಷಗಳ ವರೆಗೆ ಈ ಷರತ್ತಿನಿಂದ ವಿನಾಯಿತಿಯನ್ನು ಕೊಡಬಹುದು. ಆದರೆ ಶ್ರೀಮಂತ ರಾಷ್ಟ್ರಗಳು ಸಾಮಾನ್ಯ ಶ್ರೀಮಂತಗಾರರು ಆದೇಶಗಳಿಗೆ ಹೋಗಿ ಸೇವೆ ಸಲ್ಲಿಸಲು ಅವಕಾಶವಿಲ್ಲ. ಕೇವಲ ವಿದ್ಯಾರ್ಹತೆ ಮತ್ತು ಯಾವುದಾದರೂ ಕ್ಷೇತ್ರದಲ್ಲಿ ವಿಶೇಷ ಪ್ರಾವೀಣ್ಯತೆ ಇರುವವರು ಮಾತ್ರ ಶ್ರೀಮಂತ ರಾಷ್ಟ್ರಗಳಲ್ಲಿ ಸೇವೆ ಸಲ್ಲಿಸಬಹುದು. ಅಮೆರಿಕಾ ದೇಶ ಸೇವೆಯ ವ್ಯಾಪಾರದ ಮೇಲೆ ಪರಿಮಾಣಾತ್ಮಕ ನಿರ್ಬಂಧ ಹಾಕಿದೆ. ಆದೇಶ ಒಂದು ವರ್ಷಕ್ಕೆ ಕೇವಲ ೬೫,೦೦೦ ಮಂದಿ ವಿಶೇಷ ವಿದ್ಯಾರ್ಹತೆ ಮತ್ತು ಪ್ರಾವೀಣ್ಯತೆ ಇರುವವರಿಗೆ ಮಾತ್ರ ಪ್ರಪಂಚದ ವಿವಿಧ ಭಾಗಗಳಿಂದ ಬಂದು ಸೇವೆ ಸಲ್ಲಿಸಬಹುದೆಂದು ನಿರ್ಬಂಧ ಹಾಕಿದೆ. ಹೀಗೆ ಸೇವೆಗಳ ವ್ಯಾಪಾರದಲ್ಲಿ ನಿಜವಾಗಲೂ ಮುಕ್ತ ಮಾರುಕಟ್ಟೆ ಇಲ್ಲದಂತಾಗಿದೆ. ಹಣಕಾಸಿನ ಕ್ಷೇತ್ರದಲ್ಲಿ ವಿದೇಶಿಯರು ಬಂಡವಾಳವನ್ನು ತೊಡಗಿಸಿ ಯಾವ ಉದ್ಯಮ ವನ್ನಾದರೂ ಕೈಗೊಳ್ಳಬಹುದು. ಸೇವೆಯ ಒಪ್ಪಂದದ ಪ್ರಕಾರ ವಿಮಾನಗಳ ರಿಪೇರಿ, ವಿಮಾನಯಾನ ಸೇವೆಯನ್ನು ಮಾರಾಟಮಾಡಬಹುದು. ಈ ರೀತಿಯ ಒಪ್ಪಂದದಿಂದ ಸೇವೆಯ ಕ್ಷೇತ್ರದಲ್ಲಿ ಹಿಂದುಳಿದ ರಾಷ್ಟ್ರಗಳು, ಶ್ರೀಮಂತ ರಾಷ್ಟ್ರಗಳ ಪೈಪೋಟಿಯನ್ನು ಎದುರಿಸಲು ಕಷ್ಟವಾಗಿದೆ.

### ಬೌದ್ಧಿಕ ಆಸ್ತಿಯ ಹಕ್ಕುಗಳಿಗೆ ಸಂಬಂಧಪಟ್ಟ ವ್ಯಾಪಾರ (ಟ್ರಿಪ್ಸ್)

ವಿಶ್ವ ವ್ಯಾಪಾರ ಸಂಸ್ಥೆಯ ಅತಿ ಮುಖ್ಯ ವಿಷಯವೆಂದರೆ ಸದಸ್ಯ ರಾಷ್ಟ್ರಗಳಿಗೆ ಸ್ವಾಮ್ಯ ಪಡೆದು ಆಸ್ತಿಯ ಹಕ್ಕುಗಳನ್ನು ರಕ್ಷಿಸಿಕೊಳ್ಳಲು ವಿಶ್ವ ವ್ಯಾಪಾರ ಒಪ್ಪಂದದಲ್ಲಿ ಅವಕಾಶ ಮಾಡಿದೆ. ಈ ಒಪ್ಪಂದದಲ್ಲಿರುವ ಷರತ್ತುಗಳು ಮುಂದುವರಿದ ರಾಷ್ಟ್ರಗಳಿಗೆ ಅನುಕೂಲಕರ ವಾಗಿಯೂ ಮತ್ತು ಹಿಂದುಳಿದ ರಾಷ್ಟ್ರಗಳಿಗೆ ಅನಾನುಕೂಲವಾಗಿಯೂ ಇರುವುದರಿಂದ ಇದರ ಬಗ್ಗೆ ಈ ಎರಡೂ ಗುಂಪಿನ ರಾಷ್ಟ್ರಗಳ ನಡುವೆ ೨೦೦೩ರಲ್ಲಿ ಕ್ಯಾನ್‌ಕೂನ್‌ನಲ್ಲಿ (ಮೆಕ್ಸಿಕೋ) ನಡೆದ ಸಚಿವ ಸಮ್ಮೇಳನದಲ್ಲಿ ಭಿನ್ನಾಬಿಪ್ರಾಯ ಉಂಟಾಗಿ ಏನನ್ನೂ ಸಾಧಿಸಲು ಸಾಧ್ಯವಾಗದೇ ಕೊನೆಗೊಂಡಿತು.

**ರಕ್ಷಣೆಗೆ ಒಳಗಾಗುವ ಬೌದ್ಧಿಕ ಆಸ್ತಿಯ ಹಕ್ಕುಗಳು ಯಾವುವೆಂದರೆ**

೧. ಎಲ್ಲಾ ತಾಂತ್ರಿಕ ಕ್ಷೇತ್ರದಲ್ಲೂ ಹೊಸ ಕಲ್ಪನೆಯನ್ನು (ಆವಿಷ್ಕಾರ) ಮಾಡಲು ಸಂಪೂರ್ಣ ಸ್ವಾಮ್ಯ.
೨. ಗ್ರಂಥ ಸ್ವಾಮ್ಯ ಮತ್ತು ಇತರ ರೀತಿಯ ಸ್ವಾಮ್ಯ
೩. ವ್ಯಾಪಾರ ಸ್ವಾಮ್ಯ ಮುದ್ರೆ
೪. ಭೌಗೋಳಿಕವಾಗಿ ಸೂಚನೆ ಕೊಡುವುದು.
೫. ಕೈಗಾರಿಕಾ ನಕ್ಷೆಗಳು.
೬. ವ್ಯಾಪಾರದ ರಹಸ್ಯಗಳು.
೭. ಸಸ್ಯ ಸಂತಾನ ವೃದ್ಧಿ ತಜ್ಞರ ಸ್ವಾಮ್ಯ.

**೧. ಎಲ್ಲಾ ತಾಂತ್ರಿಕ ಕ್ಷೇತ್ರದಲ್ಲೂ ಹೊಸ ಕಲ್ಪನೆಯನ್ನು (ಆವಿಷ್ಕಾರ) ಮಾಡಲು ಸಂಪೂರ್ಣ ಸ್ವಾಮ್ಯ**

ಈ ರೀತಿಯ ಸ್ವಾಮ್ಯ ಸಿದ್ಧವಸ್ತುಗಳ ಬಗ್ಗೆಯಾಗಿರಬಹುದು ಅಥವಾ ಸರಕನ್ನು ಉತ್ಪಾದಿಸುವ ಕಾರ್ಯ ವಿಧಾನದ ಬಗ್ಗೆಯಾಗಿರಬಹುದು. ಉದಾ: ಸ್ವಾಮ್ಯ ಸಿದ್ಧವಸ್ತು ಆಗಿ ಒಂದು ಹೆಸರಿನ ಔಷಧಿಯಾಗಿರಬಹುದು. ಅಥವಾ ಸ್ವಾಮ್ಯ ಈ ಔಷಧಿಯನ್ನು ತಯಾರಿಸಲು ಬಳಸುವ ಕಾರ್ಯ ವಿಧಾನ ಆಗಿರಬಹುದು. ಆದರೆ ಮಾನವನ, ಸಸ್ಯಗಳ ಮತ್ತು ಪ್ರಾಣಿಗಳ ಜೀವ ಸಂರಕ್ಷಣೆ ಸಂಬಂಧಪಟ್ಟ ಆವಿಷ್ಕಾರಗಳ ಬಗ್ಗೆ ಸಂಪೂರ್ಣ ಸ್ವಾಮ್ಯ ಪಡೆಯಲು ಸಾಧ್ಯವಿಲ್ಲ. ಈ ಸ್ವಾಮ್ಯದ ಅವಧಿ ೨೦ ವರ್ಷಗಳು. ಶ್ರೀಮಂತ ರಾಷ್ಟ್ರಗಳು ಹೊಸ ಔಷಧಿಗಳನ್ನು ಕಂಡು ಹಿಡಿದು ಅವುಗಳ ಸ್ವಾಮ್ಯವನ್ನು ಪಡೆದು ಅತಿ ಹೆಚ್ಚಿನ ಬೆಲೆಯಲ್ಲಿ ಮಾರಾಟಮಾಡುವುದರಿಂದ ಅಭಿವೃದ್ಧಿಶೀಲರಾಷ್ಟ್ರಗಳಿಗೆ ಇದರಿಂದ ಬಹಳ ತೊಂದರೆಯಾಗಿದೆ. ಮುಂಚೆ ಜೆನರಿಕ್ ಆಮದುಮಾಡಿಕೊಂಡು ನಮ್ಮ ದೇಶದಲ್ಲಿ ಔಷಧಿಯನ್ನು ತಯಾರಿಸಿ ಸ್ವಲ್ಪ ಹೆಸರು ಬದಲಾಯಿಸಿ ಕಡಿಮೆ ಬೆಲೆಗೆ ಮಾರಾಟ ಮಾಡುತ್ತಿದ್ದವು. ಆದರೆ ಈಗ ಅದು ಸಾಧ್ಯವಿಲ್ಲ. ಆದರೆ ಒಂದು ವಿನಾಯಿತಿ ಇದೆ. ಅದೇನೆಂದರೆ ಮಾದಕ ಕಾಯಿಲೆಗಳಿಗೆ ಉಪಯೋಗಿಸುವ ಔಷಧವನ್ನು ಸ್ವಾಮ್ಯ ಪಡೆದಿರುವ ಸಂಸ್ಥೆಗಳಿಂದ ಪರವಾನೆ ಅನುಮತಿ ಪಡೆದು ಕೆಲವು ಅಭಿವೃದ್ಧಿಶೀಲರಾಷ್ಟ್ರಗಳು ಮಾತ್ರ ಉತ್ಪಾದಿಸಬಹುದು ಎಂದು ಕ್ಯಾನ್‌ಕೂನ್ ಸಮ್ಮೇಳನದಲ್ಲಿ ಶ್ರೀಮಂತ ರಾಷ್ಟ್ರಗಳು ಇಷ್ಟವಿಲ್ಲದಿದ್ದರೂ ಒತ್ತಾಯಕ್ಕೆ ಮಣಿದು ಒಪ್ಪಿಗೆ ನೀಡಿದ್ದಾರೆ. ಇಲ್ಲು ಅನೇಕ ಷರತ್ತುಗಳನ್ನು ಹಾಕಿದ್ದಾರೆ. ಆ ಷರತ್ತುಗಳನ್ನು ಪೂರೈಸಿದರೆ ಔಷಧಿ ತಯಾರಿಸುವ ವೆಚ್ಚ ಜಾಸ್ತಿಯಾಗುತ್ತದೆ.

**೨. ಗ್ರಂಥ ಸ್ವಾಮ್ಯ ಮತ್ತು ಇತರ ರೀತಿಯ ಸ್ವಾಮ್ಯ**

ಗ್ರಂಥ ಸ್ವಾಮ್ಯ ಮೊದಲೇ ಇದ್ದಿತು. ಇತರ ರೀತಿಯ ಸ್ವಾಮ್ಯದಲ್ಲಿ ಕಲೋಪಾಸಕರ

ಪ್ರದರ್ಶನ, ಯಂತ್ರ ರಚಿಸಿದ ಧ್ವನಿ ಲೇಖನ, ಕಂಪ್ಯೂಟರ್ ಕಾರ್ಯಕ್ರಮಗಳು, ಚಲನಚಿತ್ರ, ಟೆಲಿವಿಷನ್ ಪ್ರಸರಣದ ಸಂಸ್ಥೆಗಳು ಒಳಗೊಂಡಿವೆ.

**೩. ವ್ಯಾಪಾರ ಸ್ವಾಮ್ಯ ಮುದ್ರೆ**

ಒಂದು ಸರಕು ಅಥವಾ ಸೇವೆ ಬೇರೆಯವುಗಳಿಂದ ಭಿನ್ನವಾಗಿದೆ ಎಂಬುದನ್ನು ತೋರಿಸಲು ಉಪಯೋಗಿಸುವ ವ್ಯಾಪಾರದ ಗುರುತನ್ನು ಸ್ವಾಮ್ಯವಾಗಿ ಪಡೆಯಬಹುದು. ಇದು ಕೆಲವು ಅಕ್ಷರಗಳಾಗಿರಬಹುದು, ಚಿಹ್ನೆಯಾಗಿರಬಹುದು, ಬಣ್ಣಗಳ ಕೂಟವಾಗಿರಬಹುದು. ಅವುಗಳನ್ನು ರಿಜಿಸ್ಟರ್ ಮಾಡಿಕೊಂಡು ೭ ವರ್ಷಗಳ ಸ್ವಾಮ್ಯವನ್ನು ಹೊಂದಿರಬಹುದು.

**೪. ಭೌಗೋಳಿಕವಾಗಿ ಸೂಚನೆ ಕೊಡುವುದು**

ಕೆಲವು ಸರಕುಗಳ ಉತ್ಪಾದನೆ ಅಥವಾ ದೊರಕುವಿಕೆ ಒಂದು ನಿರ್ದಿಷ್ಟ ಪ್ರದೇಶಕ್ಕೆ ಮಾತ್ರ ಸೀಮಿತವಾಗಿರುತ್ತದೆ. ಅಂತಹ ಸರಕುಗಳಿಗೆ ಭೌಗೋಳಿಕ ಆಧಾರದ ಮೇಲೆ ಸ್ವಾಮ್ಯವನ್ನು ಪಡೆಯಬಹುದು. ಉದಾ: ಡಾರ್ಜಿಲಿಂಗ್ ಟಿ, ಇಂಡಿಯಾ ದೇಶದ ಬಾಸುಮತಿ ಅಕ್ಕಿ ಇವುಗಳಿಗೆ ಸ್ವಾಮ್ಯವನ್ನು ಪಡೆದುಕೊಂಡಿದೆ, ಬೇರೆಯವರು ಬೆಳೆಯನ್ನು ಬೇರೆ ದೇಶಗಳಲ್ಲಿ ಬೆಳೆದು ಮಾರಾಟ ಮಾಡುವಂತಿಲ್ಲ, ಫ್ರೆಂಚ್ ಶ್ಯಾಂಪೇನ್‌ನನ್ನು ಮೈಸೂರಿನಲ್ಲಿ ಉತ್ಪಾದಿಸಿ ಮೈಸೂರು ಶ್ಯಾಂಪೈನ್ ಎಂದು ಕರೆಯುವಂತಿಲ್ಲ. ಅಮೆರಿಕಾದಲ್ಲಿ ಅಮೆರಿಕಾ ದೇಶದ ಬಾಸುಮತಿ ಅಕ್ಕಿ ಎಂದು ಮಾರುವಂತಿಲ್ಲ. ಬಾಸುಮತಿ ಅಕ್ಕಿ ಇಂಡಿಯಾ ಅಥವಾ ಪಾಕಿಸ್ತಾನದ ಹೆಸರನ್ನು ಮಾತ್ರ ಹೊಂದಿರಬಹುದು. ನಮ್ಮ ದೇಶದ ಅನೇಕ ಆಯುರ್ವೇದ ಗಿಡಮೂಲಿಕೆಗಳಿಗೆ ನಾವು ಸ್ವಾಮ್ಯವನ್ನು ರಿಜಿಸ್ಟರ್ ಮಾಡಿಸಿಕೊಂಡಿಲ್ಲ. ವಿದೇಶಿಯರು ಇದರ ಅನುಕೂಲವನ್ನು ಪಡೆದು ತಾವು ಸ್ವಾಮ್ಯ ಪಡೆಯಲು ಪ್ರಯತ್ನಿಸುತ್ತಿದ್ದಾರೆ. ನಮ್ಮ ದೇಶದಲ್ಲಿ ಭೌಗೋಳಿಕ ಸೂಚನೆಯ ಕಾನೂನು ಸೆಪ್ಟೆಂಬರ್ ೧೫, ೨೦೦೩ ರಿಂದ ಜಾರಿಗೆ ಬಂದಿದೆ. ಸುಮಾರು ೧೦ ಸರಕುಗಳು ಇಂತಹ ಸ್ವಾಮ್ಯವನ್ನು ನೊಂದಾಣಿಸಿಕೊಂಡಿವೆ. ಉದಾ. ಮೈಸೂರು ಸಿಲ್ಕು, ಒಸಾರ ಸ್ಯಾರಿ, ಡಾರ್ಜಿಲಿಂಗ್ ಟಿ, ಗೋವಾ ಫೆನ್ನಿ ಇತ್ಯಾದಿ. ಈ ರೀತಿ ನೋಂದಣಿ ಮಾಡಿಕೊಂಡ ಸರಕುಗಳನ್ನು ಬೇರೆಯವರು ಉತ್ಪಾದಿಸಿ ಈ ಹೆಸರನ್ನು ಉಪಯೋಗಿಸುವಂತಿಲ್ಲ.

**೫. ಕೈಗಾರಿಕಾ ನಕ್ಷೆಗಳು**

ಉತ್ಪಾದಕರು ಕೆಲವು ಸೌಂದರ್ಯೋಪಾಸನೆಯ ಕೈಗಾರಿಕಾ ಸರಕುಗಳ ನಕ್ಷೆಯನ್ನು ತಯಾರಿಸಿ ಅದಕ್ಕೆ ಸ್ವಾಮ್ಯವನ್ನು ೧೦ ವರ್ಷಗಳ ಕಾಲ ಪಡೆಯಬಹುದು. ಈ ಮಾದರಿಯ ನಕ್ಷೆಯನ್ನು ವ್ಯಾಪಾರ ಕ್ಷೇತ್ರದಲ್ಲಿ ಬೇರೆ ಯಾರೂ ಉಪಯೋಗಿಸುವಂತಿಲ್ಲ.

**೬. ಬಹಿರಂಗ ಪಡಿಸಿದ ವ್ಯಾಪಾರದ ರಹಸ್ಯಗಳು**

ಕೆಲವು ರೀತಿಯ ರಹಸ್ಯಗಳಿಗೆ ವಾಣಿಜ್ಯ ಕ್ಷೇತ್ರದಲ್ಲಿ ಮೌಲ್ಯ ಇರುತ್ತದೆ. ರಹಸ್ಯಗಳ ಸ್ವಾಮ್ಯವನ್ನು ಪಡೆಯಬಹುದು.

## ೭. ಸಸ್ಯ ಸಂತಾನ ವೃದ್ಧಿ ತಜ್ಞರ ಸ್ವಾಮ್ಯ

ಹೊಸ ತಳಿಗಳನ್ನು ವೃದ್ಧಿಮಾಡಿ, ಬೀಜವನ್ನು ಮಾರಾಟಮಾಡುವ ಸ್ವಾಮ್ಯ ಪಡೆಯಬಹುದು. ಈ ಬೀಜದಿಂದ ಪುನಃ ಬಿತ್ತನೆ ಬೀಜನೆಯನ್ನು ತೆಗೆಯಲು ಸಾಧ್ಯ ವಿಲ್ಲದೇ ರೈತರು ಪುನಃ ಪುನಃ ಬೀಜವನ್ನು ಸ್ವಾಮ್ಯ ಹೊಂದಿರುವ ಬಹುರಾಷ್ಟ್ರೀಯ ಸಂಸ್ಥೆಗಳಿಂದ ಕೊಳ್ಳಬೇಕಾಗುತ್ತದೆ. ಇದು ಕೃಷಿ ಪ್ರಧಾನ ಅಭಿವೃದ್ಧಿ ರಾಷ್ಟ್ರಗಳಿಗೆ ತೀರಾ ಅನಾನುಕೂಲ ಉಂಟುಮಾಡಿದೆ.

## ೮. ಬಂಡವಾಳ ಹೂಡಿಕೆ ಸಂಬಂಧಪಟ್ಟ ವ್ಯಾಪಾರ ಒಪ್ಪಂದಗಳು

ಈ ವ್ಯಾಪಾರ ಒಪ್ಪಂದದ ಪ್ರಕಾರ ವಿದೇಶಿ ಬಂಡವಾಳ ಹೂಡಿಕೆದಾರರು ಸ್ಥಳೀಯ ಮಾರುಕಟ್ಟೆಯಲ್ಲಿ ಉತ್ಪಾದನೆಗೆ ಅವಶ್ಯಕವಿರುವ ಸರಕುಗಳನ್ನು ಕೊಳ್ಳುವ ನಿರ್ಬಂಧವಿಲ್ಲ. ಮತ್ತು ಉತ್ಪಾದನೆ ಕೈಗೊಳ್ಳಲು ಆಮದು ಮಾಡಿಕೊಳ್ಳುವ ಸರಕುಗಳು ಪ್ರಮಾಣದಷ್ಟೇ ರಫ್ತುಮಾಡಬೇಕೆಂಬ ನಿಯಮವಿಲ್ಲ. ಉತ್ಪಾದನೆಯ ಮೇಲೆ ಮತ್ತು ಲಾಭಗಳಿಕೆ ಮತ್ತು ಲಾಭ ಹಂಚಿಕೆಯ ಮೇಲೆ ಸ್ವದೇಶಿ ಬಂಡವಾಳಕ್ಕೂ ಮತ್ತು ವಿದೇಶೀ ಬಂಡವಾಳಕ್ಕೂ ಯಾವ ತಾರತಮ್ಯವೂ ಇರುವುದಿಲ್ಲ. ಆದರೆ ಮೊದಲ ೫ ವರ್ಷಗಳ ವರೆಗೆ (೧೯೯೯) ಈ ಷರತ್ತನ್ನು ಅನುಸರಿಸದೇ ಇರುವುದಕ್ಕೆ ಅವಕಾಶ ಮಾಡಿಕೊಳ್ಳಲಾಗಿತ್ತು. ಆದರೆ ಸಿಯಾಟ್ಲ್ ಮತ್ತು ಕ್ಯಾನ್‌ಕನ್‌ನಲ್ಲಿ ನಡೆದ ಮಿನಿಸ್ಟೀರಿಯರ್ ಸಮ್ಮೇಳನದಲ್ಲಿ ಈ ಷರತ್ತಿನ ಅವಧಿ ಯನ್ನು ವಿಸ್ತರಿಸುವ ಬಗ್ಗೆ ಯಾವ ತೀರ್ಮಾನವನ್ನು ಕೈಗೊಳ್ಳಲಿಲ್ಲ. ವಿದೇಶಿಯರು ಯಾವ ಕ್ಷೇತ್ರದಲ್ಲಾದರೂ ಬಂಡವಾಳವನ್ನು ಹೂಡಿ ಲಾಭಗಳಿಸಿ ತಮ್ಮ ದೇಶಕ್ಕೆ ಅದನ್ನು ತೆಗೆದುಕೊಂಡು ಹೋಗಬಹುದು. ಅಭಿವೃದ್ಧಿ ಶೀಲ ರಾಷ್ಟ್ರಗಳು ವಿದೇಶಿ ಪೈಪೋಟಿಯನ್ನು ಎದುರಿಸಲು ಸಾಧ್ಯವಿಲ್ಲದಿರುವುದರಿಂದ ಇದು ಈ ರಾಷ್ಟ್ರಗಳಿಗೆ ಬಹಳ ಅನಾನುಕೂಲ ವುಂಟುಮಾಡುತ್ತದೆ.

## ವ್ಯಾಜ್ಯ ಬಗೆಹರಿಸುವ ಸಂಸ್ಥೆ

ಅಂತರಾಷ್ಟ್ರೀಯ ವ್ಯಾಪಾರದಲ್ಲಿ ಉಂಟಾಗುವ ವಿವಾದಗಳನ್ನು ಬಗೆಹರಿಸಲು ವಿವಾದ ಬಗೆಹರಿಸುವ ಸಂಸ್ಥೆಯನ್ನು ಸ್ಥಾಪಿಸಲಾಗಿದೆ. ಮಾಡಲು ವಿವಾದ ಗಳಿರುವ ರಾಷ್ಟ್ರಗಳ ಪರ್ಯಾಲೋಚನೆ ಮಾಡಬೇಕು (Consulation). ಆಮೇಲೆ ರಾಷ್ಟ್ರಗಳು ರಾಜಿ ಮಾಡಿ ಕೊಳ್ಳಲು ಅವಕಾಶವಿದೆ (Conciliation). ಇದಾದಮೇಲೆ ಮೂರನೆಯ ಪಕ್ಷದ ಮಧ್ಯಸ್ತಿಕೆ ಮೂಲಕ ಬಗೆಹರಿಸಿಕೊಳ್ಳಬಹುದು. ಇದು ಸಾಧ್ಯವಿಲ್ಲದಿದ್ದರೆ ದೂರು ಕಳಿಸಿರುವ ರಾಷ್ಟ್ರ ವಿವಾದ ಇತ್ಯರ್ಥಕ್ಕೆ ೩ ತಜ್ಞರ ಸಮಿತಿಯ ತೀರ್ಮಾನವನ್ನು ಒಪ್ಪದಿದ್ದರೆ ಆಗ ೭ ಸದಸ್ಯರ ಉನ್ನತ ಮಟ್ಟದ ಸಮಿತಿ ತೀರ್ಮಾನವಾಗಿ ಎಲ್ಲರೂ ಅಂಗೀಕರಿಸಬೇಕಾಗುತ್ತದೆ. ಈಗಾಗಲೇ ಅನೇಕ ರಾಷ್ಟ್ರಗಳು ವಿವಾದಗಳಲ್ಲಿ ಒಳಗಾಗಿ ಈ ಸಂಸ್ಥೆಯಿಂದ ಪರಿಹಾರವನ್ನು ಪಡೆದಿವೆ. ಈ ಸಮಿತಿ ನಿಷ್ಪಕ್ಷಪಾತದಿಂದ ಕೆಲಸ ಮಾಡುತ್ತದೆ ಎಂಬ ಭರವಸೆ ಇಲ್ಲ. ಈ ಸಂಸ್ಥೆಗಳ

ಸದಸ್ಯರುಗಳ ನೇಮಕ ಬಹುಮಟ್ಟಿಗೆ ಶ್ರೀಮಂತ ರಾಷ್ಟ್ರಗಳು ನಿರ್ಧರಿಸುವುದರಿಂದ ನ್ಯಾಯ ದೊರಕುತ್ತದೆ ಎಂಬುದು ಖಚಿತವಿಲ್ಲ.

### ವಿಶ್ವ ವ್ಯಾಪಾರ ಸಂಸ್ಥೆ ಮತ್ತು ಸಚಿವರುಗಳ ಸಮ್ಮೇಳನ

ಊನೇ ಉರುಗ್ವೆ ಸುತ್ತಿನ ಸಂಧಾನಗಳು ಏಪ್ರಿಲ್ ೧೯೯೪ರಲ್ಲಿ ಮುಕ್ತಾಯಗೊಂಡಾಗ, ಮೊರಕೇಶ್‌ನಲ್ಲಿ ಮಾಡಿದ ೧೨೩ ರಾಷ್ಟ್ರಗಳಲ್ಲಿ ಇಂಡಿಯಾ ದೇಶವೂ ಒಂದಾಗಿದ್ದಿತು. ನಾವು ಎಲ್ಲಾ ಒಪ್ಪಂದಗಳಿಗೂ ಸಹಿಮಾಡಿದೆವು. ಬಹುಶಃ ಆಗ ವಿಶ್ವ ವ್ಯಾಪಾರ ಸಂಸ್ಥೆ ಸಿದ್ಧಪಡಿಸಿದ್ದ ನಿಯಮಗಳು ಅಭಿವೃದ್ಧಿಶೀಲ ರಾಷ್ಟ್ರಗಳ ಮೇಲೆ ಬೀರುವ ಪರಿಣಾಮಗಳನ್ನು ಸರಿಯಾಗಿ ಯಾರೂ ಅರ್ಥಮಾಡಿಕೊಂಡಿರಲಿಲ್ಲ. ಮುಕ್ತ ವ್ಯಾಪಾರದ ಹೆಸರಿನಲ್ಲಿ ಮಾಡಿಕೊಂಡ ಒಪ್ಪಂದಗಳು ಹಿಂದುಳಿದಿರುವ ರಾಷ್ಟ್ರಗಳ ಪ್ರಗತಿಗೆ ಅಡಚಣೆ ಉಂಟು ಮಾಡುತ್ತಿವೆ. ಇವುಗಳ ಅಪಾಯವನ್ನು ತಿಳಿದುಕೊಂಡಮೇಲೆ ಅಭಿವೃದ್ಧಿಶೀಲ ರಾಷ್ಟ್ರಗಳು, ಪ್ರತಿ ೨ ವರ್ಷಕ್ಕೊಮ್ಮೆ ನಡೆಯುವ ಸಚಿವರ ಸಮ್ಮೇಳನದಲ್ಲಿ ವಿರೋಧಿಸುತ್ತಾ ಬಂದಿದೆ. ಅಭಿವೃದ್ಧಿಶೀಲ ರಾಷ್ಟ್ರಗಳು ತಮ್ಮದೇ ಆದ ಒಂದು ಪ್ರಬಲವಾದ ಒಕ್ಕೂಟ ವನ್ನು ಮಾಡಿಕೊಂಡು ಆದಷ್ಟು ರಿಯಾಯಿತಿಗಳನ್ನು ಪಡೆಯಲು ಪ್ರಯತ್ನಿಸುತ್ತಿವೆ. ಇದರ ಜೊತೆಗೆ ಪ್ರಪಂಚದಲ್ಲಿರುವ ನಾನಾ ಸರ್ಕಾರೇತರ ಸಾಮಾಜಿಕ ಸಂಸ್ಥೆಗಳು ವಿಶ್ವ ವ್ಯಾಪಾರ ಸಂಸ್ಥೆಯ ಕಾರ್ಯಚರಣೆಗೆ ವಿರೋಧ ವ್ಯಕ್ತಪಡಿಸುತ್ತಿವೆ.

೧೯೯೫ ರಿಂದ ೨೦೦೩ರ ವರೆಗೆ ವಿಶ್ವ ವ್ಯಾಪಾರ ಸಂಸ್ಥೆ ೫ ಬಾರಿ ಸಚಿವರುಗಳ ಸಮ್ಮೇಳನವನ್ನು ನಡೆಸಿದೆ.

ಮೊದಲನೆಯ ಸಮ್ಮೇಳನ ಸಿಂಗಪೂರಿನ ಸನ್‌ಟಿಕ್ ನಗರದಲ್ಲಿ ಡಿಸೆಂಬರ್ ೧೯೯೬ರಲ್ಲಿ ನಡೆಯಿತು.

ಎರಡನೆಯ ಸಮ್ಮೇಳನ ಜಿನಿವಾದಲ್ಲಿ (ಸ್ವಿಜರ್‌ಲ್ಯಾಂಡ್) ಮೇ ೧೯೯೮ರಲ್ಲಿ ನಡೆಯಿತು.

ಮೂರನೇ ಸಮ್ಮೇಳನ ವಾಷಿಂಗ್‌ಟನ್‌ನ ಸಿಯಾಟ್ಲ್ ನಗರದಲ್ಲಿ ೧೯೯೯ರ ನವೆಂಬರ್ ೩೦ ರಿಂದ ಡಿಸೆಂಬರ್ ೩ರ ವರೆಗೆ ನಡೆಯಿತು.

ನಾಲ್ಕನೆಯ ಸಮ್ಮೇಳನ ಖಟಾರ್‌ನ ದೋಹ ನಗರದಲ್ಲಿ ನವೆಂಬರ್ ೯ ರಿಂದ ೧೪ರ ವರೆಗೆ ನಡೆಯಿತು.

ಐದನೆಯ ಸಮ್ಮೇಳನ ಮೆಕ್ಸಿಕೋದ ಕ್ಯಾನ್‌ಕನ್ ಎಂಬಲ್ಲಿ ೨೦೦೩ ಸೆಪ್ಟೆಂಬರ್ ೧೦ ರಿಂದ ೧೪ರ ವರೆಗೆ ನಡೆಯಿತು.

ಸಿಂಗಾಪೂರ್‌ನಲ್ಲಿ ನಡೆದ ಮೊದಲನೆಯ ಸಮ್ಮೇಳನದಲ್ಲಿ ಕೆಲವು ವಿಷಯಗಳ ಬಗ್ಗೆ ಆರಂಭಿಸಿದ ಅಧ್ಯಯನಗಳು ಈಗಲೂ ದೊಡ್ಡ ಸಮಸ್ಯೆಗಳಾಗಿ ಉಳಿದು ಅವುಗಳನ್ನು ಅಭಿವೃದ್ಧಿಶೀಲರಾಷ್ಟ್ರಗಳು ಕ್ಯಾನ್‌ಕನ್‌ನಲ್ಲಿ ನಡೆದ ೫ನೇ ಸಮ್ಮೇಳನದಲ್ಲಿ ಪ್ರಬಲವಾಗಿ ವಿರೋಧಿಸಿದರು. ಇವುಗಳನ್ನು ಸಿಂಗಾಪೂರ್ ವಿವಾದಾಂಶಗಳು ಎಂದು ಕರೆಯಲಾಗಿದೆ.

ಅವುಗಳೆಂದರೆ ೧. ಬಹುಪಕ್ಷೀಯ ಬಂಡವಾಳ ಹೂಡಿಕೆಯ ಬಗ್ಗೆ ಒಪ್ಪಂದಗಳು, ೨. ಪೈಪೋಟಿಯ ಕಾರ್ಯನೀತಿ, ೩. ಸರ್ಕಾರ ಕೊಳ್ಳುವ ಸರಕುಗಳ ಬಗ್ಗೆ ಪಾರದರ್ಶಕತ್ವ, ೪. ವ್ಯಾಪಾರಕ್ಕಿರುವ ಅಡ್ಡಿಗಳನ್ನು ತೆಗೆಯುವುದು.

ಈ ಮೇಲೆ ತಿಳಿಸಿದ ಎಲ್ಲಾ ಒಪ್ಪಂದಗಳು ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಅನಾನುಕೂಲ ವಾಗಿದೆ. ಇದರಿಂದಾಗಿ ೧೫ ಹಿಂದುಳಿದ ರಾಷ್ಟ್ರಗಳ ಗುಂಪು ೨೧ ಇಂಡಿಯಾ ಮತ್ತು ಬ್ರೆಜಿಲ್ ನಾಯಕತ್ವದಲ್ಲಿ ಈ ಒಪ್ಪಂದಗಳನ್ನು ವಿರೋಧಿಸಿ ಕ್ಯಾನ್‌ಕನ್ ಸಮ್ಮೇಳನ ಏನನ್ನೂ ಸಾಧಿಸಲು ಸಾಧ್ಯವಾಗಲಿಲ್ಲ.

ಜಿನಿವಾದಲ್ಲಿ ನಡೆದ ೨ನೇ ಸಮ್ಮೇಳನ ಎಲೆಕ್ಟ್ರಾನಿಕ್ ವಾಣಿಜ್ಯ ವ್ಯವಹಾರವನ್ನು ವಿಶ್ವವ್ಯಾಪಾರ ಸಂಸ್ಥೆಯ ವ್ಯಾಪ್ತಿಗೆ ಸೇರಿಸಿತು.

ಸಿಯಾಟ್ಲ್‌ದಲ್ಲಿ ನಡೆದ ಮೂರನೇ ಸಮ್ಮೇಳನಕ್ಕೆ ಸರ್ಕಾರೇತರ ಸಾಮಾಜಿಕ ಸಂಸ್ಥೆಗಳು ಬೀದಿಗಿಳಿದು ದೊಡ್ಡ ಗಲಾಟೆ ಮಾಡಿದುದರಿಂದ ಯಾವ ನಿರ್ಧಾರವನ್ನೂ ಕೈಗೊಳ್ಳಲು ಸಾಧ್ಯವಾಗಲಿಲ್ಲ.

ದೋಹದಲ್ಲಿ ನಡೆದ ೪ನೇ ಸಮ್ಮೇಳನದಲ್ಲೂ ಸಿಂಗಾಪೂರ್ ವಾದಗ್ರಸ್ತ ವಿಷಯಗಳನ್ನು ಕೈಬಿಡಬೇಕೆಂದು ಇಂಡಿಯಾ ಮತ್ತು ಇತರ ಅಭಿವೃದ್ಧಿಶೀಲ ರಾಷ್ಟ್ರಗಳು ಆಗ್ರಹಿಸಿದವು. ಹಿಂದುಳಿದ ರಾಷ್ಟ್ರಗಳಿಗೆ ವಿಶೇಷ ಸೌಲಭ್ಯಗಳನ್ನು ಒದಗಿಸಿ ಅಭಿವೃದ್ಧಿ ಸಾಧಿಸಲು ಪ್ರೋತ್ಸಾಹಿಸಬೇಕೆಂದು ಒತ್ತಾಯ ಮಾಡಲಾಯಿತು. ಕಾರ್ಮಿಕರ ದರ್ಜೆ ನಿರ್ಣಯ ಅಂತರ ರಾಷ್ಟ್ರೀಯ ಕಾರ್ಮಿಕರ ಸಂಸ್ಥೆಗೆ ಸೇರಿದುದೆಂದು ತಿಳಿಸಲಾಯಿತು. ಈಗ ವಿಶ್ವ ವ್ಯಾಪಾರ ಸಂಸ್ಥೆ ಕಾರ್ಮಿಕರಿಗೆ ಕೊಡುವ ವೇತನ ಕಡಿಮೆ ಇರಬಾರದು, ಮಕ್ಕಳನ್ನು ಕೆಲಸಕ್ಕೆ ನೇಮಕ ಮಾಡಬಾರದು ಇತ್ಯಾದಿ ನಿಯಮಗಳನ್ನು ಅನುಸರಿಸಬೇಕೆಂದು ಒತ್ತಾಯ ಮಾಡುತ್ತಿದೆ. ಅಭಿವೃದ್ಧಿಶೀಲ ರಾಷ್ಟ್ರಗಳು ಕಡಿಮೆ ವೇತನ ಕೊಟ್ಟು ಕಡಿಮೆ ಬೆಲೆಗೆ ಸರಕುಗಳನ್ನು ಶ್ರೀಮಂತ ರಾಷ್ಟ್ರಗಳಲ್ಲಿ ಮಾರಾಟ ತಡೆಗಟ್ಟಲು ಈ ರೀತಿ ವಿಶ್ವ ವ್ಯಾಪಾರ ಸಂಸ್ಥೆ ತನ್ನ ಮಿತಿಗೆ ಮೀರಿದ ವಿಷಯಗಳಲ್ಲಿ ತಲೆಹಾಕುತ್ತಿದೆ. ದೋಹದಲ್ಲಿ ತೆಗೆದುಕೊಂಡ ಒಂದು ಮುಖ್ಯ ನಿರ್ಣಯ ವೆಂದರೆ, ಯಾವ ವಿಷಯದಲ್ಲೂ ತೀರ್ಮಾನ ಕೈಗೊಳ್ಳಬೇಕಾದರೆ, ಬಹುಮತದ ಬದಲು ಎಲ್ಲರ ಸಹಮತ ಆಗಿರಬೇಕೆಂಬುದೆ ಆಗಿದೆ. ಅಭಿವೃದ್ಧಿಶೀಲರಾಷ್ಟ್ರಗಳಿಂದ ಸಾಮಾನ್ಯ ಕಾರ್ಮಿಕರು ಶ್ರೀಮಂತ ರಾಷ್ಟ್ರಗಳಿಗೆ ವಲಸೆ ಹೋಗಲು ಅವಕಾಶವಿರಬೇಕೆಂದು ಒತ್ತಾಯ ಮಾಡಲಾಯಿತು.

ಕ್ಯಾನ್‌ಕನ್‌ನಲ್ಲಿ ನಡೆದ ೫ನೇ ಸಮ್ಮೇಳನದ ಒಂದು ಮುಖ್ಯ ಬೆಳವಣಿಗೆಯೆಂದರೆ ಅಭಿವೃದ್ಧಿಶೀಲ ರಾಷ್ಟ್ರಗಳು ತಮ್ಮ ಐಕ್ಯತೆಯ ಪ್ರದರ್ಶನಮಾಡಿದುದು. ೨೧ರ ಕೂಟವನ್ನು ಸ್ಥಾಪಿಸಿ, ಸಿಂಗಾಪೂರ್ ವಾದಗ್ರಸ್ತ ವಿಷಯಗಳು, ಟ್ರಿಪ್ಸ್ (Trips), ಟ್ರಿಮ್ಸ್ (Trims) ಮತ್ತು ಶ್ರೀಮಂತ ರಾಷ್ಟ್ರಗಳು ಕೃಷಿ ಸರಕುಗಳಿಗೆ ಕೊಡುತ್ತಿರುವ ಸಹಾಯಧನ (Subsidy) ಇವುಗಳನ್ನೆಲ್ಲಾ ಪ್ರಬಲವಾಗಿ ವಿರೋಧಿಸಿದರು. ಶ್ರೀಮಂತ ರಾಷ್ಟ್ರಗಳ ಗುಂಪು ಪ್ರತಿ ವರ್ಷ

ತಮ್ಮ ಕೃಷಿ ಬೆಳವಣಿಗೆಗೆ ೩೬೫ ಬಿಲಿಯನ್ ಅನ್ನು ವೆಚ್ಚಮಾಡುತ್ತಿವೆ. ಈ ಮೊತ್ತ ($ ೩೬೫) ಬಿಲಿಯನ್ ಶ್ರೀಮಂತ ರಾಷ್ಟ್ರಗಳು, ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ವಾರ್ಷಿಕವಾಗಿ ಅಭಿವೃದ್ಧಿಗಾಗಿ ಕೊಡುವ ಸಹಾಯದ ಮೊತ್ತಕ್ಕಿಂತ ೬ ರಷ್ಟು ಪ್ರಮಾಣದಲ್ಲಿ ಜಾಸ್ತಿ ಇದೆ. ಆದರೆ ಅಭಿವೃದ್ಧಿಶೀಲ ರಾಷ್ಟ್ರಗಳ ಮೇಲೆ ಒತ್ತಡ ತಂದು ಅವುಗಳ ರೈತರಿಗೆ ಕೊಡವ ಸಹಾಯ ಧನವನ್ನು ನಿಲ್ಲಿಸಬೇಕೆಂದು ಹೇಳುತ್ತಿರುವುದು ತೀರ ಅಸಮಂಜಸವಾಗಿದೆ. ಈ ಕಾರಣವನ್ನು ಕೊಟ್ಟು ಅಭಿವೃದ್ಧಿಶೀಲ ರಾಷ್ಟ್ರಗಳು ತಮ್ಮಲ್ಲಿರುವ ಸಹಾಯ ಧನ ಪದ್ಧತಿ ಕೂಡಲೆ ತೆಗೆದುಹಾಕಲು ಸಾಧ್ಯವಿಲ್ಲ ಎಂದು ಪ್ರತಿಭಟಿಸಿದರು.

ಇಂಡಿಯಾ ದೇಶದಲ್ಲಿ ೬೫೦ ದಶಲಕ್ಷ ಮಂದಿ ಬೇಸಾಯವನ್ನು ಅವಲಂಬಿಸಿರುವುದ ರಿಂದ ಅವರಿಗೆ ಸಹಾಯಧನದ ಅವಶ್ಯಕತೆ ಇದೆ ಎಂದು ಅಂದಿನ ವಾಣಿಜ್ಯ ಸಚಿವ ಅರುಣ್ ಜೇಟ್ಲಿಯವರು ವಾದಿಸಿದರು. ವಾಸ್ತವವಾಗಿ ನಾವು ರಫ್ತುಮಾಡುವ ಕೃಷಿ ಸರಕುಗಳು ಒಟ್ಟು ರಫ್ತಿನ ಸುಮಾರು ೧/೮ ಭಾಗ (೧೨%) ಆಗಿರುವುದರಿಂದ, ಶ್ರೀಮಂತ ರಾಷ್ಟ್ರಗಳಲ್ಲಿ ರೈತರಿಗೆ ಸಹಾಯಧನ ಕೊಡುವುದರಿಂದ ನಮಗೇನೂ ಜಾಸ್ತಿ ಅನಾನುಕೂಲವಿಲ್ಲ. ನಾವು ಕ್ಯಾನ್‌ಕನ್ ಸಮ್ಮೇಳನದಲ್ಲಿ ಟ್ರಿಪ್ಸ್ ಮತ್ತು ಟ್ರೀಮ್ಸ್‌ಗೆ ಸಂಬಂಧಪಟ್ಟಂತೆ ಹೆಚ್ಚು ರಿಯಾಯಿತಿಗಾಗಿ ಹೋರಾಟ ನಡೆಸಿದ್ದರೆ ಅದು ಹೆಚ್ಚು ಅರ್ಥಪೂರ್ಣವಾಗಿರುತ್ತಿತ್ತು. ಇತ್ತೀಚಿನ ವರ್ಷಗಳಲ್ಲಿ ನಮ್ಮ ರಫ್ತು ಅಭಿವೃದ್ಧಿಶೀಲ ರಾಷ್ಟ್ರಗಳಿಗೆ (ಆಫ್ರಿಕಾ, ಏಷ್ಯಾ, ಲ್ಯಾಟಿನ್, ಅಮೆರಿಕಾ) ಜಾಸ್ತಿಯಾಗುತ್ತಿರುವುದರಿಂದ ಸುಂಕಗಳನ್ನು ಕಡಿಮೆ ಮಾಡಿದರೆ ನಮಗೆ ಅನನುಕೂಲ ವಾಗುತ್ತದೆ.

## ವಿಶ್ವ ವ್ಯಾಪಾರ ಸಂಸ್ಥೆ ಮತ್ತು ಇಂಡಿಯಾ

GATT ಮತ್ತು WTO ಸ್ಥಾಪನೆಯಾದಾಗಿನಿಂದಲೂ ಇಂಡಿಯಾ ದೇಶ ಇವುಗಳ ಸಂಸ್ಥಾಪಕ ಸದಸ್ಯನಾಗಿ ಮುಂದುವರೆದಿದೆ. ವಿಶ್ವ ವ್ಯಾಪಾರ ಸಂಸ್ಥೆಯ ಅನೇಕ ಒಪ್ಪಂದಗಳು ನಮ್ಮ ಕೈಗಾರಿಕೆ, ಬೇಸಾಯ, ಸೇವಾ ಕ್ಷೇತ್ರಗಳಿಗೆ ಅನಾನುಕೂಲಕರವಾಗಿದೆ. ಟ್ರಿಪ್ಸ್‌ನಿಂದಾಗಿ ನಮ್ಮ ದೇಶದಲ್ಲಿ ಈಗ ಲಭ್ಯವಾಗುತ್ತಿರುವ ಔಷಧಿಗಳ ಬೆಲೆ ಅನಿವಾರ್ಯವಾಗಿ ಜಾಸ್ತಿ ಆಗುತ್ತದೆ. ಏಕೆಂದರೆ ವಿದೇಶಿ ಉತ್ಪಾದಕರು ಸಿದ್ದ ಸರಕು ಮತ್ತು ಉತ್ಪಾದನಾ ವಿಧಾನ ಎರಡರ ಮೇಲೂ ಸ್ವಾಮ್ಯವನ್ನು ಪಡೆಯುವುದರಿಂದ ಅಲ್ಲಿಂದ ಆಮದು ಮಾಡಿಕೊಂಡ ಎಲ್ಲಾ ಔಷಧಿಗಳ ಬೆಲೆ ಜಾಸ್ತಿಯಾಗುತ್ತದೆ. ಅಭಿವೃದ್ಧಿ ಹೊಂದಿದ ರಾಷ್ಟ್ರಗಳು ಸಂಶೋಧನೆ ಮತ್ತು ಅಭಿವೃದ್ಧಿ(Research and Devlopment)ಗಾಗಿ ಅಪಾರ ಹಣವನ್ನು ವೆಚ್ಚಮಾಡಿ ಹೊಸ ಔಷಧಿಗಳನ್ನು ತಯಾರು ಮಾಡಿದಾಗ ಸ್ವಾಭಾವಿಕವಾಗಿ ಅವುಗಳ ಬೆಲೆ ಜಾಸ್ತಿ ಯಾಗಿರುತ್ತದೆ. ಅಭಿವೃದ್ಧಿಶೀಲ ರಾಷ್ಟ್ರಗಳು ಉತ್ಪಾದಿಸಿದ ಔಷಧಿಗಳನ್ನು ಅನುಕರಣೆ ಮಾಡಿ ಇಂಡಿಯಾ ದೇಶ ಕಡಿಮೆ ವೆಚ್ಚದಲ್ಲಿ ಉತ್ಪಾದನೆ ಮಾಡಬಲ್ಲದೇ ಹೊರತು, ತಾನೇ ಸಂಶೋಧನೆ ಮಾಡಿ ಹೊಸ ಔಷಧಿಗಳನ್ನು ತಯಾರು ಮಾಡುವ ಸಾಮರ್ಥ್ಯವನ್ನು

ಹೊಂದಿಲ್ಲ. ಆದುದರಿಂದ ಇನ್ನು ಮೇಲೆ ಔಷಧಿಗಳ ಬೆಲೆ ಸಾಮಾನ್ಯ ವರ್ಗಕ್ಕೆ ನಿಲುಕಿದಷ್ಟು ಪ್ರಮಾಣದಲ್ಲಿ ಜಾಸ್ತಿಯಾಗುವ ಸಂಭವವಿದೆ. ಆದರೆ ಆವಿಷ್ಕಾರದ ಸ್ವಾಮ್ಯ ಪಡೆದಿರುವುದರಿಂದ ಪರವಾನೆಯನ್ನು ಪಡೆದು ಅಭಿವೃದ್ಧಿಶೀಲ ರಾಷ್ಟ್ರಗಳು ಜೀವ ಸಂರಕ್ಷಣೆಗೆ ಬೇಕಾಗುವ ಔಷಧಿಗಳನ್ನು ತಯಾರಿಸಬಹುದಾಗಿದೆ. ಆದರೆ ಈ ಔಷದಿಗಳ ಬಣ್ಣ, ಗಾತ್ರ ಮತ್ತು ಅದನ್ನು ಗುಂಪುಗೂಡಿಸುವುದು (Packing) ಇವುಗಳಲ್ಲಿ ಕೆಲವು ನಿಯಮಗಳನ್ನು ಅನುಸರಿಸಬೇಕಾಗುವುದರಿಂದ ಒಟ್ಟು ಉತ್ಪಾದನಾ ವೆಚ್ಚ ಜಾಸ್ತಿಯಾಗುವ ಸಂಭವವಿದೆ.

ಆವಿಷ್ಕಾರ ಮಾಡಿದ ಕೃಷಿ ಸರಕುಗಳ ಮೇಲೂ ಸ್ವಾಮ್ಯ ಪಡೆಯುವುದರಿಂದ ನಮಗೆ ಅನಾನುಕೂಲವಾಗುತ್ತಿದೆ. ಸಸ್ಯ ಸಂತಾನ ವೃದ್ಧಿ ತಜ್ಞರ ಸ್ವಾಮ್ಯದಿಂದ ಹೊಸ ತಳಿಗಳನ್ನು ಹೆಚ್ಚು ಬೆಲೆಗೆ ಮಾರಾಟಮಾಡಬಹುದು. ಒಂದೇ ಸಲ ಉಪಯೋಗಿಸುವಂತ ಬೀಜಗಳನ್ನು ತಯಾರುಮಾಡಿ ನಮ್ಮ ರೈತರು ಪುನಃ ಪುನಃ ಪ್ರತಿ ವರ್ಷ ಬಹು ರಾಷ್ಟ್ರೀಯ ಸಂಸ್ಥೆಗಳಿಂದ ಹೆಚ್ಚು ಬೆಲೆ ಕೊಟ್ಟು ಕೊಳ್ಳಬೇಕಾದ ಪರಿಸ್ಥಿತಿ ಉಂಟಾಗಿದೆ.

ನಮ್ಮಲ್ಲಿ ಸ್ವಾಭಾವಿಕವಾಗಿ ದೊರೆಯುವ ಅನೇಕ ಸರಕುಗಳ ಮೇಲೆ ನಾವು ಆವಿಷ್ಕಾರದ ಸ್ವಾಮ್ಯ(Patent right)ವನ್ನು ಹೊಂದಿಲ್ಲ. ಈ ಕೊರತೆಯನ್ನು ದುರುಪಯೋಗ ಮಾಡಿಕೊಂಡು ವಿದೇಶಿಯರು ನಮ್ಮ ಸರಕುಗಳ ಮೇಲೆ ಸ್ವಾಮ್ಯ ಸಾಧಿಸಲು ಹೊರಟಿದ್ದಾರೆ.

ಉದಾ: ಅಮೆರಿಕಾ ದೇಶದವರು ನಮ್ಮಲ್ಲಿ ಬೆಳೆಯುವ ಅರಿಸಿನದ ಮೇಲೆ ಸ್ವಾಮ್ಯ ಪಡೆದಿದ್ದರು. ಇದನ್ನು ನಮ್ಮ ದೇಶದ ವಿವಾದ ಬಗೆಹರಿಸುವ ಸಂಸ್ಥೆಗೆ ತಿಳಿಸಿ ಅಮೆರಿಕಾ ದೇಶದವರು ಹೊಂದಿದ್ದ ಸ್ವಾಮ್ಯವನ್ನು ತೆಗೆದು ಹಾಕಲಾಯಿತು. ಅದೇ ರೀತಿ ಬೇವನ್ನು ಕ್ರಿಮಿನಾಶಕವಾಗಿ ಅಮೆರಿಕಾ ಸ್ವಾಮ್ಯ ಪಡೆಯಿತು. ಅದನ್ನು ಕೂಡ ನಾವು ವಿರೋಧಿಸಿ ಸ್ವಾಮ್ಯವನ್ನು ತೆಗೆಯಲಾಯಿತು. ನಮ್ಮ ಬಾಸುಮತಿ ಅಕ್ಕಿಯನ್ನು ಕಸ್‌ಮತಿ ಮತ್ತು ಟೆಕ್ಸ ಮತಿ ಎಂಬ ಹೆಸರಿನಲ್ಲಿ ಅಮೆರಿಕಾ ಸ್ವಾಮ್ಯ ಪಡೆದುಕೊಂಡಿತ್ತು. ಇದನ್ನು ಭೌಗೋಳಿಕ ಸೂಚನೆ ಕೊಡುವ ಷರತ್ತಿನ ಆಧಾರದ ಮೇಲೆ ವಿರೋಧಿಸಿ ಈ ಸ್ವಾಮ್ಯವನ್ನು ತೆಗೆಸಿ ಹಾಕಲಾಯಿತು. ಟ್ರಿಮ್ಸ್ ವ್ಯವಸ್ಥೆಯಲ್ಲಿ ನಮ್ಮ ದೇಶದ ವಿವಿಧ ಕ್ಷೇತ್ರಗಳಲ್ಲಿ (ಬ್ಯಾಂಕು, ಇನ್ಶೂರೆನ್ಸ್, ದೂರವಾಣಿ ಇತ್ಯಾದಿ) ವಿದೇಶಿಯರು ಬಂಡವಾಳವನ್ನು ಹೂಡಿ ನಮ್ಮ ದೇಶದ ಸಂಸ್ಥೆಗಳೊಡನೆ ಪೈಪೋಟಿ ಉಂಟಾಗಿದೆ. ಅನೇಕ ಕ್ಷೇತ್ರಗಳಲ್ಲಿ ನೀವು ವಿದೇಶಿ ಪೈಪೋಟಿಯನ್ನು ಎದುರಿಸುವ ಸಾಮರ್ಥ್ಯ ಹೊಂದಿಲ್ಲ. ಇದರಿಂದ ನಮ್ಮ ಕೈಗಾರಿಕೆಗಳು ಅದರಲ್ಲೂ ಸಣ್ಣ ಕೈಗಾರಿಕೆಗಳು ನಶಿಸಿ ಹೋಗುವಂತಾಗಿದೆ.

ನಮ್ಮ ದೇಶದಲ್ಲಿ ರೈತರಿಗೆ ಅವರು ಬೆಳೆಯುವ ಸರಕುಗಳಿಗೆ ಬೆಂಬಲ ಬೆಲೆ ಕೊಡುವುದನ್ನು ಮತ್ತು ರೈತರ ಗೊಬ್ಬರಗಳಿಗೆ ಕೊಡುವ ಸಹಾಯಧನವನ್ನು ವಿಶ್ವ ವ್ಯಾಪಾರ ಸಂಸ್ಥೆ ವಿರೋದಿಸುತ್ತದೆ. ಇದಲ್ಲ ಸಾಮಾಜಿಕ ಮತ್ತು ಪರಿಸರದ ಷರತ್ತುಗಳನ್ನು ಹೇರಿ ನಮ್ಮ ಸರಕುಗಳು ವಿದೇಶಕ್ಕೆ ರಫ್ತಾಗುವ ಪ್ರಮಾಣ ಕಡಿಮೆಯಾಗುತ್ತದೆ. ಕನಿಷ್ಟ ವೇತನ ಕೊಡುವ ನಾವು ಉತ್ಪಾದನೆ ಕೈಗೊಳ್ಳುತ್ತೇವೆ ಎಂದು ನಮ್ಮ ದೇಶದಿಂದ ಮಾಡಿಕೊಳ್ಳುವ

ಆಮದನ್ನು ತಡೆಗಟ್ಟುತ್ತಿದ್ದಾರೆ. ಆದರೆ ಈ ವಿಷಯಗಳು ಅಂತರ ರಾಷ್ಟ್ರೀಯ ಶ್ರಮದ ಸಂಸ್ಥೆಗೆ ಸೇರಿದೆಯೇ ಹೊರತು ವಿಶ್ವ ವ್ಯಾಪಾರ ಸಂಸ್ಥೆಗಲ್ಲ. ಈಗ ನಮ್ಮ ವಾಣಿಜ್ಯ ನೀತಿಯನ್ನು ನಮ್ಮ ಅವಶ್ಯಕತೆಗೆ ಅನುಗುಣವಾಗಿ ರೂಪಿಸಿಕೊಳ್ಳಲು ಅವಕಾಶವಿಲ್ಲ. ಇದು ನಮ್ಮ ದೇಶದ ಸಾರ್ವಭೌಮತ್ವ ಕಡಿಮೆ ಮಾಡಿದಂತಾಗಿದೆ. ವಿಶ್ವ ವ್ಯಾಪಾರ ಸಂಸ್ಥೆಯ ಕಾಯಿದೆಗಳು ಶ್ರೀಮಂತ ರಾಷ್ಟ್ರಗಳು ಇನ್ನೂ ಶ್ರೀಮಂತರಾಗುವುದಕ್ಕೆ ಅನುಕೂಲವಾಗಿದೆ. ಇದುವರೆವಿಗೂ ಶ್ರೀಮಂತ ರಾಷ್ಟ್ರಗಳು ಸಣ್ಣ ಹಿಂದುಳಿದ ರಾಷ್ಟ್ರಗಳಿಗೆ ಅನೇಕ ಆಮಿಶಗಳನ್ನು ತೋರಿಸಿ ಅವರ ಬೆಂಬಲ ಪಡೆದು ಅವರು ಹೇಳಿದಂತೆ ಬೇರೆ ಸದಸ್ಯರುಗಳು ಕೇಳಬೇಕಾಗಿದ್ದಿತು. ಆದುದರಿಂದಲೇ ವಿಶ್ವ ವ್ಯಾಪಾರ ಸಂಸ್ಥೆಯನ್ನು ಶ್ರೀಮಂತ ರಾಷ್ಟ್ರಗಳ ಸಂಘ ಎಂದು ಟೀಕಿಸಲಾಗಿದೆ. ಆದರೆ ಈಗ ಹಿಂದುಳಿದ ರಾಷ್ಟ್ರಗಳಲ್ಲಿ ಐಕ್ಯತೆ ಜಾಸ್ತಿಯಾಗಿ ವಿಶ್ವ ವ್ಯಾಪಾರ ಸಂಸ್ಥೆಯಲ್ಲಿ ಅಡಕವಾಗಿರುವ ಅನನುಕೂಲ ಷರತ್ತುಗಳನ್ನು ವಿರೋಧಿಸುತ್ತಿದ್ದಾರೆ. ಇದಕ್ಕಾಗಿ ಅವರದೇ ಒಂದು ಒಕ್ಕೂಟವನ್ನು ಮಾಡಿಕೊಂಡಿದ್ದಾರೆ. ನಮ್ಮ ದೇಶ ಇದರಲ್ಲಿ ಮುಂದಾಳತ್ವವನ್ನು ವಹಿಸಿ ಹಿಂದುಳಿದ ರಾಷ್ಟ್ರಗಳ ಹಿತಾಸಕ್ತಿಯನ್ನು ಕಾಪಾಡಲು ಹೋರಾಟ ನಡೆಸುತ್ತಿದೆ. ಈ ಐಕ್ಯತೆ ಕುಸಿಯದಂತೆ ಮುಂದುವರೆಯುವುದೇ ಎಂಬುದನ್ನು ಕಾದು ನೋಡಬೇಕಾಗಿದೆ. ಶ್ರೀಮಂತ ರಾಷ್ಟ್ರಗಳು ಏಕ ಪಕ್ಷವಾಗಿ ತೀರ್ಮಾನ ಮಾಡಿ ಅದನ್ನು ಬೇರೆ ರಾಷ್ಟ್ರಗಳ ಮೇಲೆ ಒತ್ತಾಯ ಪೂರಕವಾಗಿ ಜಾರಿಗೆ ತರುವ ಸನ್ನಿವೇಶವನ್ನೂ ತಳ್ಳಿಹಾಕುವಂತಿಲ್ಲ.

### ಆಕರ ಗ್ರಂಥಗಳು

Ruddar Datt: Indian Economy, New Delhi, 2003

K.P.M. Sundaram: NewDelhi, 2003

Alak Ghosh: Indian Economy, Calcutta, 1969

T.N. Hajela: Hitery of Economic Thought Agra, 1987

M.L. Jhingan: Money Banking, International Trade and Public Finance, Delhi, 2002

Economic Surrvey: Government of Indian and Taxmann Issues of Various Years

Report on Currency and Finance: Reserve Bank of Indian of various years.

Monthly Review of the Indian Economy: May 2005, Economic International Service Centre for monitoring Indian Economy Pvt ltd (CMIE) Bombay

Economic Perspectives: Electronic Journal Public Affairs office U.S. Embessy, NewDelhi, March 2003

## ೭.೫. ಸಾರಾಂಶ

### ರಫ್ತು ಮತ್ತು ಆಮದು

ವಿದೇಶಗಳೊಡನೆ ನಡೆಯುವ ಸರಕು ಮತ್ತು ಸೇವೆಗಳ ಮಾರಾಟ ಮತ್ತು ಕೊಳ್ಳುವಿಕೆಯನ್ನು ವಿದೇಶಿ ವ್ಯಾಪಾರ ಎಂದು ಕರೆಯಲಾಗಿದೆ. ನಾವು ಬ್ರಿಟಿಷರ ಆಳ್ವಿಕೆಗೆ ಒಳಪಟ್ಟಿದ್ದಾಗ ಕಚ್ಚಾ ಪದಾರ್ಥ ಮತ್ತು ಕೃಷಿ ಸರಕುಗಳನ್ನು ಆ ದೇಶಕ್ಕೆ ರಫ್ತು ಮಾಡಿ ಅಲ್ಲಿಂದ ಕೈಗಾರಿಕಾ ಸರಕುಗಳನ್ನು, ಅನುಭೋಗಿ ಸರಕುಗಳನ್ನು ಆಮದು ಮಾಡಿಕೊಳ್ಳುತ್ತಿದ್ದೆವು. ನಮ್ಮ ಹೆಚ್ಚಿನ ವ್ಯಾಪಾರ ಬ್ರಿಟನ್ನಿನೊಡನೆ ನಡೆಯುತ್ತಿತ್ತು. ಸ್ವಾತಂತ್ರ್ಯ ಬಂದ ಮೇಲೆ ನಮ್ಮ ವಿದೇಶಿ ವ್ಯಾಪಾರದಲ್ಲಿ ಅನೇಕ ಬದಲಾವಣೆಗಳಾದವು. ಪಂಚವಾರ್ಷಿಕ ಯೋಜನೆಗಳನ್ನು ಕಾರ್ಯಗತ ಮಾಡಲು ಹೆಚ್ಚಿನ ಪ್ರಮಾಣದ ಬಂಡವಾಳ ಸರಕುಗಳನ್ನು ಆಮದು ಮಾಡಿಕೊಳ್ಳಬೇಕಾಯಿತು. ಅನೇಕ ವರ್ಷಗಳು ಆಹಾರ ಪದಾರ್ಥಗಳನ್ನು ಆಮದು ಮಾಡಿಕೊಳ್ಳಬೇಕಾಯಿತು. ಒಂದು ಮುಖ್ಯ ವಿಷಯವೆಂದರೆ ಅಭಿವೃದ್ಧಿ ಸಾಧಿಸಲು ಹೊರಟಿದ್ದ ನಮ್ಮ ದೇಶ ಆಮದು ಪ್ರಮಾಣ ಮತ್ತು ರಫ್ತು ಪ್ರಮಾಣ ಎರಡೂ ಜಾಸ್ತಿಯಾಗತೊಡಗಿದವು. ಆದರೆ ರಫ್ತಿಗಿಂತ ಆಮದೇ ಜಾಸ್ತಿಯಾಗಿದ್ದುದರಿಂದ ಪಾವತಿ ಶಿಲ್ಕುವಿನಲ್ಲಿ ಸರ್ವೇಸಾಮಾನ್ಯವಾಗಿ ಪ್ರತಿ ವರ್ಷವೂ ಕೊರತೆ ಕಂಡುಬರುತ್ತಿತ್ತು. ಈ ಕೊರತೆಯನ್ನು ನಿವಾರಿಸಲು ಸರ್ಕಾರ ಅನೇಕ ಕಾರ್ಯಕ್ರಮಗಳನ್ನು ತೆಗೆದುಕೊಂಡಿತು. ೧೯೬೬ರಲ್ಲಿ ರೂ.ಅನ್ನು ೩೬.೫ ರಷ್ಟು ಅಪಮೌಲ್ಯ ಮಾಡಿಕೊಳ್ಳಲಾಯಿತು. ಅನೇಕ ರಫ್ತು ಉತ್ತೇಜನ ಮತ್ತು ಆಮದುಗಳ ಮೇಲೆ ನಿರ್ಬಂಧ ಕ್ರಮಗಳನ್ನು ಕೈಗೊಳ್ಳಲಾಯಿತು. ಬಹಳ ವರ್ಷಗಳ ಕಾಲ ನಮ್ಮ ಕೈಗಾರಿಕೆಗಳಿಗೆ ರಕ್ಷಣೆ ಕೊಡಲಾಯಿತು ಮತ್ತು ಕೃಷಿ ವಲಯದಲ್ಲಿ ಸಹಾಯಧನ, ಬೆಂಬಲ ಬೆಲೆಗಳನ್ನು ಕೊಟ್ಟು ವಿದೇಶಿ ಪೈಪೋಟಿಯನ್ನು ತಪ್ಪಿಸಲಾಯಿತು. ೧೯೯೦-೯೧ರಲ್ಲಿ ರಫ್ತು ಮೌಲ್ಯ ೩೨,೫೫೩ ಕೋಟಿ ಆಗಿದ್ದಿತು. ೨೦೦೩ -೦೪ರಲ್ಲಿ ರಫ್ತು ಮೌಲ್ಯ ರೂ.೨,೯೩,೩೬೭ ಕೋಟಿ ಆಗಿದ್ದಿತು.

೧೯೯೧-೯೨ ರಿಂದ ಅನೇಕ ಆರ್ಥಿಕ ಸುಧಾರಣೆಗಳನ್ನು ಜಾರಿಗೆ ತರಲಾಯಿತು. ಜಾಗತೀಕರಣದ ಅಂಗವಾಗಿ ಖಾಸಗೀಕರಣ ಮತ್ತು ಮುಕ್ತ ಮಾರುಕಟ್ಟೆಯ ವ್ಯವಸ್ಥೆ ಕ್ರಮೇಣವಾಗಿ ಜಾರಿಗೆ ಬಂದಿತು. ೧೯೯೫ರಲ್ಲಿ ವಿಶ್ವ ವ್ಯಾಪಾರ ಸಂಸ್ಥೆಯ ಸದಸ್ಯ ರಾಷ್ಟ್ರವಾಗಿ ಮಾಡಿಕೊಂಡ ಒಪ್ಪಂದ ಮೇರೆಗೆ, ವಿದೇಶಿ ವ್ಯಾಪಾರದ ಮೇಲಿರುವ ನಿರ್ಬಂಧಗಳನ್ನೆಲ್ಲಾ ತೆಗೆದುಹಾಕಿ ವಿದೇಶಿ ಉತ್ಪಾದಕರ ಪೈಪೋಟಿಯನ್ನು ಎದುರಿಸಬೇಕಾಗಿದೆ.

ಇತ್ತೀಚಿನ ವರ್ಷಗಳಲ್ಲಿ ನಾವು ರಫ್ತು ಮಾಡುವ ಸರಕುಗಳ ಸಂಯೋಜನ ಬದಲಾವಣೆಯಾಗಿದೆ. ಈಗ ಕೃಷಿ ಸರುಗಳ ರಫ್ತು ಕಡಿಮೆಯಾಗಿದೆ. ಕೈಗಾರಿಕಾ ಸರಕುಗಳು, ಯಂತ್ರಶಿಲ್ಪಿ ಸರಕುಗಳು ಮತ್ತು ಸೇವೆಗಳು ಜಾಸ್ತಿ ಪ್ರಮಾಣದಲ್ಲಿ ರಫ್ತು ಆಗುತ್ತಿದೆ. ಇಷ್ಟಾದರೂ ವ್ಯಾಪಾರ ಶಿಲ್ಕಿನಲ್ಲಿ ಈಗಲೂ ಕೊರತೆ ಇದೆ. ಆದರೆ ಚಾಲ್ತಿ ಪಾವತಿ ಶಿಲ್ಕಿನ ಲೆಕ್ಕದಲ್ಲಿ ೨೦೦೧-೦೨

ರಿಂದ ಹೆಚ್ಚಳ ಕಂಡುಬರುತ್ತಿದೆ. ೨೦೦೩-೦೪ರಲ್ಲಿ ಪ್ರಾಥಮಿಕ ಸರಕುಗಳ ರಫ್ತು ಮೌಲ್ಯ ಒಟ್ಟು ರಫ್ತು ಮೌಲ್ಯದ ಶೇ.೧೫.೫ ಮತ್ತು ಕೈಗಾರಿಕಾ ಸರಕುಗಳ ಭಾಗ ಶೇ.೧೫.೫ ಮತ್ತು, ಕೈಗಾರಿಕಾ ಸರಕುಗಳ ಭಾಗ ಶೇ.೭೬ ಆಗಿದ್ದಿತು. ೧೯೯೦-೯೧ರಲ್ಲಿ ವಾರ್ಷಿಕ ರಫ್ತು ಬೆಳವಣಿಗೆ ಶೇ.೯ ಆಗಿದ್ದರೆ, ೨೦೦೩-೦೪ರಲ್ಲಿ ಇದು ಶೇ.೨೦.೪ ಮತ್ತು ೨೦೦೪-೦೫ರಲ್ಲಿ ಶೇ.೨೪.೪ ಆಗಿದ್ದಿತು.

ಆಮದುಗಳ ಮೌಲ್ಯವೂ ಜಾಸ್ತಿಯಾಗುತ್ತಾ ಬಂದಿದೆ. ೧೯೯೦-೯೧ರಲ್ಲಿ ವರ್ಷ ಆಮದು ಬೆಳವಣಿಗೆ ಶೇ.೧೪.೪ ಇದ್ದಿತು. ೨೦೦೩-೦೪ರಲ್ಲಿ ಇದು ಶೇ.೨೪.೪ ಆಗಿದ್ದಿತು. ಮತ್ತು ೨೦೦೪-೦೫ರಲ್ಲಿ ಶೇ.೩೫.೬ ಆಗಿದ್ದಿತು. ಅತಿ ಹೆಚ್ಚಿನ ಆಮದು ವೆಚ್ಚ ಪೆಟ್ರೋಲ್ ಮತ್ತು ಪೆಟ್ರೋಲಿಯಂ ಸರಕುಗಳನ್ನು ಆಮದು ಮಾಡಿಕೊಳ್ಳಲು ತಗುಲುತ್ತಿದೆ. ೨೦೦೩-೦೪ರಲ್ಲಿ ಒಟ್ಟು ಆಮದು ಮೌಲ್ಯದ ಶೇ.೨೬.೪ರಷ್ಟು ತೈಲ ಆಮದಿಗಾಗಿ ವೆಚ್ಚವಾಗಿದೆ. ಬಂಡವಾಳ ಸರಕುಗಳ ಆಮದು ಶೇ.೧೩.೩ ಆಗಿದ್ದಿತು. ಇತರ ಪ್ರಮುಖ ಆಮದು ಆಗುವ ಸರಕುಗಳೆಂದರೆ ಚಿನ್ನ, ರತ್ನ ಮತ್ತು ಅಮೂಲ್ಯ ಶಿಲೆಗಳು (ಸ್ವಲ್ಪ ಭಾಗವನ್ನು ಒಡವೆ ಮಾಡಿ ಪುನಃ ರಫ್ತು ಮಾಡಲಾಗುತ್ತದೆ.) ಎಲೆಕ್ಟ್ರಾನಿಕ್ ಸರಕುಗಳು, ರಾಸಾಯನಿಕ ಸರಕುಗಳು, ಖಾದ್ಯ ಎಣ್ಣೆ, ಇತ್ಯಾದಿ.

ನಮ್ಮ ಒಟ್ಟು ವಿದೇಶೀ ವ್ಯಾಪಾರದ ಶೇ.೪೮ ಭಾಗ ೧೧ ದೇಶಗಳೊಡನೆ ಪ್ರಮುಖವಾಗಿ ಮುಂದುವರೆದ ರಾಷ್ಟ್ರಗಳೊಡನೆ ನಡೆಯುತ್ತಿದೆ. ಅವುಗಳು ಅಮೆರಿಕಾ, ಯುರೋಪಿಯನ್, ಯೂನಿಯನ್, ಜಪಾನ್, ಯು.ಎ.ಇ., ಚೈನ, ಹಾಂಗ್‌ಕಾಂಗ್, ಸಿಂಗಾಪೂರ್, ಮಲೇಷಿಯಾಗಳಾಗಿವೆ. ನಮ್ಮ ವ್ಯಾಪಾರ ಏಷ್ಯಾ, ಆಫ್ರಿಕಾ ಮತ್ತು ಲ್ಯಾಟಿನ್, ಅಮೆರಿಕಾಗಳೊಡನೆಯೂ ಜಾಸ್ತಿಯಾಗಿದೆ.

೧೯೯೦-೯೧ರಲ್ಲಿ ಒಟ್ಟು ಆಮದು ಮೌಲ್ಯ ರೂ.೪೩,೧೯೮ ಕೋಟಿ ರೂ.ಗಳಾಗಿತ್ತು. ೨೦೦೪-೦೫ರಲ್ಲಿ ಇದು ರೂ.೪,೪೫,೩೦೦ ಕೋಟಿಯಾಗಿದ್ದಿತು.

### ಪಾವತಿ ಶಿಲ್ಕು

ನಿರ್ದಿಷ್ಟ ಕಾಲದಲ್ಲಿ ಕೇವಲ ಗೋಚರ ಸರಕುಗಳ ಆಮದು ಮತ್ತು ರಫ್ತು ಮೌಲ್ಯವನ್ನು ತಿಳಿಸುವುದಕ್ಕೆ ವ್ಯಾಪಾರ ಶಿಲ್ಕು ಎಂದು ಕರೆಯಲಾಗಿದೆ. ಆದರೆ ಗೋಚರ ಸರಕು ಮತ್ತು ಅಗೋಚರ ಸೇವೆಗಳ ಆಮದು ಮತ್ತು ರಫ್ತು ಮೌಲ್ಯವನ್ನು ತಿಳಿಸುವ ಪಟ್ಟಿಗೆ ಪಾವತಿ ಶಿಲ್ಕು ಎಂದು ಕರೆಯಲಾಗಿದೆ. ಪಾವತಿ ಶಿಲ್ಕುವಿನಲ್ಲಿ ಎರಡು ಭಾಗಗಳಿವೆ.

### ೧. ಚಾಲ್ತಿ ಪಾವತಿ ಶಿಲ್ಕು

ಇದರಲ್ಲಿ ಗೋಚರ ಸರಕುಗಳ ಆಮದು ಮತ್ತು ರಫ್ತು ಅಗೋಚರ ಸೇವೆಗಳಿಗೆ ನಾವು ವಿದೇಶಗಳಿಗೆ ಕೊಡುವ ಹಣ ಮತ್ತು ವಿದೇಶಿಯರು ನಾವು ಸಲ್ಲಿಸುವ ಸೇವೆಗಳಿಗೆ ಕೊಡುವ ಹಣ ಸೇರಿರುತ್ತವೆ. ಸೇವೆಗಳಾವುವೆಂದರೆ ಪ್ರವಾಸೋದ್ಯಮ, ಸಾರಿಗೆ, ವಿಮಾ ಸಂಸ್ಥೆ,

ಬಂಡವಾಳ ಹೂಡಿಕೆಗೆ ಬರುವ ಆದಾಯ, ಕೊಡುಗೆಗಳು, ವಿದೇಶಗಳಿಂದ ನಮ್ಮ ದೇಶಕ್ಕೆ ಖಾಸಗಿ ಮತ್ತು ಸರ್ಕಾರಿ ವಲಯಗಳಲ್ಲಿ ವರ್ಗಾಯಿಸುವ ಹಣ, ರಾಯಭಾರಿ ಕಛೇರಿಗಳಿಗೆ ತಗುಲುವ ವೆಚ್ಚ, ವಿದೇಶಿ ಚಲನ ಚಿತ್ರ ಪ್ರದರ್ಶನದ ಆದಾಯ ಆಗಿವೆ. ಸಾಮಾನ್ಯವಾಗಿ ಒಂದು ದೇಶದ ವಿದೇಶಿ ವ್ಯಾಪಾರದ ಪರಿಸ್ಥಿತಿ ಚಾಲ್ತಿ ಪಾವತಿ ಶಿಲ್ಕು ಪಟ್ಟಿಯಿಂದ ವ್ಯಕ್ತವಾಗುತ್ತದೆ.

**೨. ಪಾವತಿ ಶಿಲ್ಕುವಿನ ೨ನೇ ಭಾಗ ಬಂಡವಾಳ ಶಿಲ್ಕು**

ಇದರಲ್ಲಿ ರಾಷ್ಟ್ರಗಳ ನಡುವೆ ಬಂಡವಾಳ ಒಡೆತನದ ವರ್ಗಾವಣೆ ತಿಳಿಸಲಾಗುತ್ತದೆ. ಇದರಲ್ಲಿ ಅಡಕವಾಗಿರುವ ಅಂಶಗಳೆಂದರೆ ಅ. ವಿದೇಶಿ ಬಂಡವಾಳ ಹೂಡಿಕೆ, ಆ. ಸರ್ಕಾರಿ ಮತ್ತು ಖಾಸಗಿ ವಲಯಗಳಲ್ಲಿ ವಿದೇಶದಿಂದ ಪಡೆಯುವ ಹಣಸಹಾಯ, ಇ. ವಿದೇಶಗಳಲ್ಲಿ ತೆಗೆದುಕೊಳ್ಳುವ ವಾಣಿಜ್ಯ ಸಾಲಗಳು, ಈ. ವಿದೇಶದಲ್ಲಿ ಬ್ಯಾಂಕುಗಳು ಗಳಿಸುವ ಆದಾಯ, ಉ. ವಿದೇಶಿ ಸಾಲಕ್ಕಾಗಿ ಕೊಡುವ ಬಡ್ಡಿ, ಊ. ಶೇಕರಿಸಿರುವ ವಿದೇಶಿ ವಿನಿಮಯದ ಹೆಚ್ಚಳ ಅಥವಾ ಕುಗ್ಗುವಿಕೆ.

ಚಾಲ್ತಿ ಪಾವತಿ ಶಿಲ್ಕಿನಲ್ಲಿ ಕೊರತೆ ಉಂಟಾದರೆ ಅದನ್ನು ಬಂಡವಾಳ ಪಾವತಿ ಶಿಲ್ಕು ಪಟ್ಟಿಯಲ್ಲಿ ಸರಿಪಡಿಸಲಾಗುತ್ತದೆ. ಈ ದೃಷ್ಟಿಯಿಂದ ಚಾಲ್ತಿ ಪಾವತಿ ಶಿಲ್ಕು ಮತ್ತು ಬಂಡವಾಳ ಪಾವತಿ ಶಿಲ್ಕು ಸಮವಾಗಿರುವುದನ್ನು ಸಮಗ್ರ ಪಾವತಿ ಶಿಲ್ಕು (Over all balance of payment) ತೋರಿಸುತ್ತದೆ. ಸಮಗ್ರ ಪಾವತಿ ಶಿಲ್ಕುವಿನಲ್ಲಿ ರಿಸರ್ವ್ ಹಣ ಕಡಿಮೆ ಅಥವಾ ಜಾಸ್ತಿಯಾಗುತ್ತದೆ. ನಿರಂತರವಾಗಿ ಚಾಲ್ತಿ ಪಾವತಿ ಶಿಲ್ಕುವಿನಲ್ಲಿ ಕೊರತೆ ಉಂಟಾದರೆ ಅದನ್ನು ಸರಿಪಡಿಸಲು ಅನೇಕ ಕ್ರಮಗಳನ್ನು ಕೈಗೊಳ್ಳಲಾಗುತ್ತದೆ. ಯಾವುವೆಂದರೆ ಅ. ಬೆಲೆ ಕುಗ್ಗಿಸುವುದು, ಆ. ಅಪಮೌಲ್ಯ, ಇ. ವಿನಿಮಯ ಮೌಲ್ಯ ಕುಗ್ಗುವಿಕೆ, ಈ. ವಿದೇಶಿ ವಿನಿಮಯ ನಿಯಂತ್ರಣ.

**ಕಾಯ್ದಿರಿಸಲಾದ ವಿದೇಶಿ ವಿನಿಮಯ**

ರಫ್ತು ಮಾಡಿದಾಗ ನಮಗೆ ವಿದೇಶಿ ವಿನಿಮಯ ದೊರಕುತ್ತದೆ. ಆದರೆ ವಿಶ್ವದಲ್ಲಿ ಎಲ್ಲರೂ ಸ್ವೀಕರಿಸುವಂತ ವಿದೇಶಿ ವಿನಿಮಯ ಗಳಿಸಲು ಪ್ರತಿಯೊಂದು ರಾಷ್ಟ್ರವು ಇಚ್ಛಿಸುತ್ತದೆ. ಉದಾ: ಡಾಲರ್, ಯನ್, ಯೂರೋ ಇವುಗಳನ್ನು ಅಂತರಾಷ್ಟ್ರೀಯ ಹಣ ಎಂದೂ ಕರೆಯಲಾಗಿದೆ. ಈ ದೇಶಗಳಿಗೆ ರಫ್ತು ಮಾಡಿ ಈ ಹಣವನ್ನು ಗಳಿಸುವುದು ಕಷ್ಟವಾದುದರಿಂದ ಈ ಹಣವನ್ನು ಗಟ್ಟಿಹಣ (Hard Currency) ಎಂದೂ ಕರೆಯುತ್ತಾರೆ. ಈ ವಿದೇಶಿ ವಿನಿಮಯ ಮೂರು ಕಾರ್ಯಗಳನ್ನು ನಿರ್ವಹಿಸುತ್ತದೆ. ದೇಶದ ಒಳಗೆ ಹಣವನ್ನು ಚಲಾವಣೆಗೆ ತರಲು ಆಧಾರವಾಗಿಟ್ಟುಕೊಳ್ಳಲಾಗುತ್ತದೆ. ಎರಡನೆಯದಾಗಿ ಆಮದು ಮಾಡಿಕೊಳ್ಳುವ ಸರಕು ಸೇವೆಗಳಿಗೆ ಪಾವತಿಮಾಡಲು ಉಪಯೋಗಿಸಲಾಗುತ್ತದೆ. ಮೂರನೆಯದಾಗಿ ತೇಲುವ ವಿನಿಮಯ ವ್ಯವಸ್ಥೆಯಲ್ಲಿ ಕೇಂದ್ರ ಬ್ಯಾಂಕು ಸ್ವದೇಶಿ ಹಣದ

ವಿನಿಮಯ ದರ ವನ್ನು ಕಾಪಾಡಲು, ವಿದೇಶಿ ಹಣವನ್ನು ಉಪಯೋಗಿಸಿ ಸ್ವದೇಶಿ ಹಣವನ್ನು ವಿನಿಮಯ ಮಾರುಕಟ್ಟೆಯಲ್ಲಿ ಕೊಳ್ಳುತ್ತದೆ. ಈಗ ಅಂತಹ ಕೆಲಸವನ್ನು ನಮ್ಮ ಕೇಂದ್ರ ಬ್ಯಾಂಕು ಮಾಡಿ ರೂ. ವಿನಿಮಯ ಮೌಲ್ಯ ಏರದಂತೆ ನೋಡಿಕೊಳ್ಳುತ್ತಿದೆ. ಈ ವಿದೇಶಿ ವಿನಿಮಯದ ಪ್ರಮಾಣ ಕನಿಷ್ಟ ೬ ತಿಂಗಳ ಆಮದು ಮೌಲ್ಯಕ್ಕೆ ಸಮನಾಗಿರಬೇಕು ಎಂಬ ನಿಯಮವಿದೆ. ನಮ್ಮ ವಿದೇಶಿ ವಿನಿಮಯದ ಪ್ರಮಾಣ ೧೯೯೦-೯೧ರಲ್ಲಿ ಕೇವಲ ೮೨.೨ ಬಿಲಿಯನ್ ಆಗಿದ್ದಿತು. ಈಗ ೬ನೇ ಮೇ ೨೦೦೫ರಲ್ಲಿ ೧೪೧.೭೫ ಬಿಲಿಯನ್ ಆಗಿದ್ದಿತು.

ಚಾಲ್ತಿ ಪಾವತಿ ಶಿಲ್ಕು ಕೊರತೆ ೧೯೯೦-೯೧ರಲ್ಲಿ ರೂ.೧೭,೩೬೬ ಕೋಟಿಯಾಗಿದ್ದಿತು. ಆದರೆ ೨೦೦೧-೦೨ರಲ್ಲಿ ೨೦೦೨-೦೩ರಲ್ಲಿ ಮತ್ತು ೨೦೦೩-೦೪ರಲ್ಲಿ ಕ್ರಮವಾಗಿ ರೂ.೧೬೪೨೬ ಕೋಟಿ, ರೂ.೩೦,೬೦೦ ಕೋಟಿ ಮಾತ್ರ ರೂ.೪೭,೯೫೨ ಕೋಟಿ ಹೆಚ್ಚಳ ಇದ್ದಿತು. ಸೇವೆಗಳ ರಫ್ತು ಜಾಸ್ತಿಯಾಗಿ ಈ ರೀತಿಯ ಹೆಚ್ಚಳ ಕಾಣುತ್ತಿದೆ. ೨೦೦೩-೦೪ರಲ್ಲಿ ಸೇವೆಗಳಿಂದ ದೊರಕಿದ ನಿವ್ವಳ ಆದಾಯ ರೂ.೪೭,೯೫೨ ಕೋಟಿ ಆಗಿದ್ದಿತು. ಇದರಲ್ಲಿ ಸಾಫ್ಟ್‌ವೇರ್ ಮತ್ತು ಅದರ ಸೇವೆಗಳಿಂದ ಬಂದ ಆದಾಯ ರೂ.೭೪೮೦ ಕೋಟಿ ಗಳಾಗಿದ್ದಿತು.

**ವ್ಯಾಪಾರ ವಲಯದ ಸುಧಾರಣೆಗಳು**

ರಫ್ತು ಉತ್ತೇಜನ ಮತ್ತು ಆಮದು ನಿರ್ಬಂಧಗಳ ಸಡಿಲಿಕೆ ೧೯೯೦-೯೧ ದೀಚೆಗೆ ನಮ್ಮ ವಾಣಿಜ್ಯ ನೀತಿಯಲ್ಲಿ ಬದಲಾವಣೆ ಆಗಿವೆ. ಮೊದಲನೆಯದಾಗಿ ರಫ್ತು ಜಾಸ್ತಿ ಮಾಡಲು ಉತ್ತೇಜನ ಕೊಡಲಾಗಿದೆ. ಎರಡನೆಯದಾಗಿ ಮುಕ್ತ ವ್ಯಾಪಾರವನ್ನು ಪ್ರೋತ್ಸಾಹಿಸಲು ಆಮದುಗಳ ಮೇಲಿದ್ದ ನಿರ್ಬಂಧಗಳನ್ನು ಕಡಿಮೆ ಮಾಡಲಾಗುತ್ತಿದೆ. ರಫ್ತು ಉತ್ತೇಜಿಸಲು ರಫ್ತು ಉತ್ತೇಜನ ವಲಯ ಸ್ಥಾಪಿಸಲಾಗಿದೆ. (Expofit Promotion Zones) ಆಮೇಲೆ ಇದನ್ನು ಮುಕ್ತಿ ವ್ಯಾಪಾರ ವಲಯ (Free Trade Zone) ಎಂದು ಕರೆಯಲಾಯಿತು. ಇಲ್ಲಿ ಸ್ಥಾಪನೆಯಾಗುವ ರಫ್ತು ಗುರಿ ಇಟ್ಟುಕೊಂಡಿರುವ ಘಟಕಗಳಿಗೆ ಅನೇಕ ರೀತಿಯ ಸೌಲಭ್ಯಗಳನ್ನು ಒದಗಿಸಲಾಗುತ್ತಿದೆ. ತೆರಿಗೆ ರಿಯಾಯಿತಿ, ಸಾರಿಗೆಯಲ್ಲಿ ರಿಯಾಯಿತಿ, ಕಚ್ಚಾ ಪದಾರ್ಥಗಳ ಸೌಲಭ್ಯ, ವಿದ್ಯುಚ್ಛಕ್ತಿ ಸೌಲಭ್ಯ ಇತ್ಯಾದಿ. ವಿಶ್ವ ವ್ಯಾಪಾರ ಸಂಸ್ಥೆಯ ಒಪ್ಪಂದವಾದ ಮೇಲೆ ಅನೇಕ ಆಮದು ನಿರ್ಬಂಧಗಳನ್ನು ಕಡಿಮೆಮಾಡಲಾಗಿದೆ. ೨೦೦೧-೦೨ರಲ್ಲಿ ೭೧೫ ಸರಕುಗಳ ಮೇಲಿದ್ದ ನಿರ್ಬಂಧಗಳನ್ನು ತೆಗೆದು ಹಾಕಲಾಯಿತು. ಅನೇಕ ಅನುಭೋಗ ಸರಕುಗಳನ್ನು ಆಮದು ಮಾಡಿಕೊಳ್ಳಲು ಈಗ ಅವಕಾಶವಿದೆ. ಈಗ ವಿಶೇಷ ಆರ್ಥಿಕ ವಲಯ ಸ್ಥಾಪಿಸಲಾಗಿದೆ. ಇಲ್ಲಿರುವ ಘಟಕಗಳಿಗೆ ಅನೇಕ ವಿಧವಾದ ಸೌಲಭ್ಯಗಳನ್ನು ಕೊಟ್ಟು ರಫ್ತುಗೆ ಉತ್ತೇಜನ ಕೊಡಲಾಗಿದೆ.

ಕೃಷಿ ಉತ್ಪನ್ನಗಳ ರಫ್ತು ಮೇಲಿದ್ದ ಎಲ್ಲಾ ಪರಿಮಾಣಾತ್ಮಕ ನಿರ್ಬಂಧಗಳನ್ನು ತೆಗೆಯಲಾಗಿದೆ. (ಈರುಳ್ಳಿ ಮತ್ತು ಸೆಣಬನ್ನು ಬಿಟ್ಟು) ೨೦೦೩ ಕಾರ್ಯನೀತಿಯಲ್ಲಿ ಸೇವೆಗಳ

ಮತ್ತು ಕೃಷಿ ಉತ್ಪನ್ನ ರಫ್ತಿಗೆ ವಿಶೇಷ ಪ್ರೋತ್ಸಾಹ ಕೊಡಲಾಯಿತು. ೨೦೦೪ರಗೆ [illegible] ವರ್ಷಗಳ ವಿದೇಶಿ ವ್ಯಾಪಾರ ನೀತಿಯನ್ನು ಪ್ರಕಟಿಸಲಾಯಿತು. ಈಗ ವಿಶ್ವ ವ್ಯಾಪಾರದಲ್ಲಿ ನಮ್ಮ ಭಾಗ ಶೇ. ೦.೯ ಇರುವುದನ್ನು ೨೦೦೯ರ ವೇಳೆಗೆ ಎರಡರಷ್ಟು ಜಾಸ್ತಿಮಾಡುವ ಗುರಿ ಇದೆ. ತಾಂತ್ರಿಕ ಮತ್ತು ಮೂಲಭೂತ ಸೌಕರ್ಯ ಬೆಳವಣಿಗೆಗೆ ಪ್ರಾಮುಖ್ಯತೆ ಕೊಡಲಾಗಿದೆ.

ವ್ಯಾಪಾರ ಸಂಸ್ಥೆಗಳನ್ನು ಪುನಶ್ಚೇತನಗೊಳಿಸುವ ಗುರಿ ಇದೆ. ವಿಶೇಷ ಕೃಷಿ ಉಪಾಜ್ ಯೋಜನೆಯಲ್ಲಿ ಚರ್ಮ, ಬೇಸಾಯ, ಕೈಮಗ್ಗ, ಕುಶಲ ಕೈಗಾರಿಕೆಗಳಿಂದ ರಫ್ತು ಕ್ಷೇತ್ರದಲ್ಲಿ ಉತ್ತಮ ಫಲಗಳನ್ನು ನಿರೀಕ್ಷಿಸಲಾಗಿದೆ. ಬೇಸಾಯದ ರಫ್ತು ವಲಯವನ್ನು ಸ್ಥಾಪಿಸಿ ದೇಶದಿಂದ ಬೇಸಾಯ ಉಪಕರಣಗಳನ್ನು ಆಮದು ಮಾಡಿಕೊಳ್ಳಲು ಅವಕಾಶ ಕಲ್ಪಿಸಲಾಗಿದೆ.

ನಿಗದಿಗಿಂತ ಹೆಚ್ಚು ರಫ್ತು ಮಾಡಿದರೆ ಅವರುಗಳಿಗೆ ಸುಲಭ ದರದಲ್ಲಿ ಸಾಲಸೌಲಭ್ಯ ಒದಗಿಸಲಾಗುತ್ತಿದೆ. ಸಾಫ್ಟ್‌ವೇರ್ ಟೆಕ್ನಾಲಜಿ ಪಾರ್ಕ್ ಸ್ಥಾಪಿಸಲಾಗಿದೆ. ಬೈಯೋಟೆಕ್ನಾಲಜಿ ಪಾರ್ಕ್‌ನ್ನು ಸ್ಥಾಪಿಸಲಾಗಿದೆ. ಹೀಗೆ ಹೊಸ ವಿದೇಶಿ ವ್ಯಾಪಾರ ನೀತಿ ರಫ್ತುಗೆ ಉತ್ತೇಜನ ಹಾಗೂ ಅವಶ್ಯಕ ಆಮದುಗಳ ಮೇಲೆ ನಿರ್ಬಂಧ ತೆಗೆಯುವ ಕಾರ್ಯಕ್ರಮವನ್ನು ಜಾರಿಗೆ ತಂದಿದೆ.

### ವಿಶ್ವ ವ್ಯಾಪಾರ ಸಂಸ್ಥೆ (W.T.O)

೧೯೪೭ರಲ್ಲಿ ಜಾರಿಗೆ ಬಂದ ಗ್ಯಾಟ್ ಒಪ್ಪಂದ ಪರಿಣಾಮಕಾರಿಯಾಗಿಲ್ಲದ್ದರಿಂದ ೧, ಜನವರಿ, ೧೯೯೫ರಲ್ಲಿ ಅಧಿಕಾರ ಪಡೆದಿರುವ ವಿಶ್ವ ವ್ಯಾಪಾರ ಸಂಸ್ಥೆಯನ್ನು ಸ್ಥಾಪಿಸಲಾಯಿತು. ಈಗ ಇದರಲ್ಲಿ ೧೪೮ ಸದಸ್ಯ ರಾಷ್ಟ್ರಗಳಿವೆ. ಇಂಡಿಯಾದೇಶ ಸಂಸ್ಥಾಪಕ ಸದಸ್ಯರಾಷ್ಟ್ರವಾಗಿದೆ. ಈ ಸಂಸ್ಥೆಯ ಉದ್ದೇಶ ವಿಶ್ವ ವ್ಯಾಪಾರದ ಮೇಲೆ ಇರುವ ಸುಂಕಗಳನ್ನು ಕಡಿಮೆ ಮಾಡುವುದೇ ಆಗಿದೆ. ವಿಶ್ವ ವ್ಯಾಪಾರದಲ್ಲಿ ಅಭಿವೃದ್ಧಿಶೀಲ ರಾಷ್ಟ್ರಗಳ ಪಾಲನ್ನು ಜಾಸ್ತಿಮಾಡುವುದು ಇನ್ನೊಂದು ಉದ್ದೇಶ. ಅಂತರ ರಾಷ್ಟ್ರೀಯ ವ್ಯಾಪಾರಕ್ಕೆ ಸಂಬಂಧಪಟ್ಟಂತೆ ವಿವಾದಗಳು ಉಂಟಾದರೆ ಅವುಗಳನ್ನು ಬಗೆಹರಿಸಲು ವಿವಾದ ಇತ್ಯರ್ಥ ಸಂಸ್ಥೆ ಸ್ಥಾಪಿಸಲಾಗಿದೆ. ಸದಸ್ಯ ರಾಷ್ಟ್ರಗಳು ಅನೇಕ ಒಪ್ಪಂದಗಳನ್ನು ಮಾಡಿಕೊಂಡಿವೆ.

ಮೊದಲನೆಯದಾಗಿ, ಸರಕುಗಳ ವ್ಯಾಪಾರದ ಬಗ್ಗೆ ಒಪ್ಪಂದಗಳನ್ನು ಮಾಡಿಕೊಳ್ಳಲಾಗಿದೆ. ಸರಕುಗಳ ಆಮದು ಮತ್ತು ರಫ್ತು ಇವುಗಳ ಮೇಲೆ ಇರುವ ನಿರ್ಬಂಧಿಗಳನ್ನು ಕಡಿಮೆ ಮಾಡಬೇಕು. ಹಿಂದುಳಿದ ರಾಷ್ಟ್ರಗಳಿಗೆ ಸ್ವಲ್ಪ ಕಾಲ ನಿರ್ಬಂಧ ವಿಧಿಸಲು ಅವಕಾಶವಿದೆ. ಕೃಷಿ ಸರಕುಗಳಿಗೆ ಬೆಂಬಲ ಬೆಲೆ ಮತ್ತು ಸಹಾಯಧನವನ್ನು ನಿಲ್ಲಿಸಬೇಕಾಗುವುದರಿಂದ ಹಿಂದುಳಿದ ರಾಷ್ಟ್ರಗಳಿಗೆ ಅನಾನುಕೂಲ ಉಂಟಾಗುತ್ತದೆ. ಕೈಗಾರಿಕಾ ಸರಕುಗಳನ್ನು ತಯಾರಿಸುವಾಗ ಅನೇಕ ಸಾಮಾಜಿಕ ಷರತ್ತುಗಳನ್ನು ಪಾಲಿಸಬೇಕೆಂದು ವಿಶ್ವ ವ್ಯಾಪಾರ ಸಂಸ್ಥೆಯ ಒಪ್ಪಂದ ತಿಳಿಸುತ್ತದೆ. ಈ ಷರತ್ತಿನ ಆದಾರದ ಮೇಲೆ ಹಿಂದುಳಿದ

ದೇಶಗಳು ಕಡಿಮೆ ವರಮಾನ ಕೊಟ್ಟ ತಯಾರುಮಾಡುವ ಸರಕುಗಳನ್ನು ಆಮದು ಮಾಡಿಕೊಳ್ಳುವುದಿಲ್ಲವೆಂದು ಶ್ರೀಮಂತ ರಾಷ್ಟ್ರಗಳು ತಿಳಿಸುತ್ತವೆ. ಈ ಸಮಸ್ಯೆ ಅಂತಾರಾಷ್ಟ್ರೀಯ ಶ್ರಮ ಸಂಸ್ಥೆಗೆ (ILO) ಸೇರಿದುದಾಗಿದೆ. ಇದು ವಿಶ್ವ ವ್ಯಾಪಾರ ಸಂಸ್ಥೆಯ ಕಾರ್ಯವ್ಯಾಪ್ತಿಗೆ ಒಳಪಡುವುದಿಲ್ಲ.

ಇನ್ನೊಂದು ಪ್ರಮುಖ ಒಪ್ಪಂದವೆಂದರೆ ಸೇವೆಗಳಿಗೆ ಸಂಬಂಧಪಟ್ಟದ್ದು. ಇದನ್ನು ಸೇವೆ ವ್ಯಾಪಾರದ ಸಾಮಾನ್ಯ ಒಪ್ಪಂದ ಎಂದು ಕರೆಯಲಾಗಿದೆ. ಸೇವೆಗಳಲ್ಲಿ ವಿಮಾ ಸಂಸ್ಥೆ, ಬ್ಯಾಂಕು, ದೂರವಾಣಿ, ವೈದ್ಯಕೀಯ, ವಿದ್ಯಾಭ್ಯಾಸ, ಪತ್ರಿಕೋದ್ಯಮ, ಸಾಫ್ಟ್‌ವೇರ್ ತಂತ್ರಜ್ಞಾನ ಸೇವೆ, ಇತ್ಯಾದಿಗಳೆಲ್ಲಾ ಸೇರಿದೆ ಈ ಸೇವೆಗಳೆಲ್ಲಾ ಯಾವ ನಿರ್ಬಂಧವೂ ಇಲ್ಲದೆ ಒಂದು ದೇಶದಿಂದ ಇನ್ನೊಂದು ದೇಶಕ್ಕೆ ಹೋಗಬಹುದು. ಆದರೆ ಸಾಮಾನ್ಯ ಶ್ರಮ ವರ್ಗದವರು ವಲಸೆ ಹೋಗಲು ಅವಕಾಶ ಕೊಡುವುದಿಲ್ಲ, ಇದು ಹಿಂದುಳಿದ ರಾಷ್ಟ್ರಗಳಿಗೆ ತೊಂದರೆಯಾಗುತ್ತದೆ.

ಮೂರನೆಯ ಮುಖ್ಯ ಒಪ್ಪಂದ ಬೌದ್ಧಿಕ ಆಸ್ತಿ ಹಕ್ಕು ವ್ಯಾಪಾರದ ಬಗ್ಗೆ ಆಗಿದೆ. ಇವುಗಳಾವುವೆಂದರೆ ಅ. ಹೊಸ ಆವಿಷ್ಕಾರಗಳ ಸ್ವಾಮ್ಯ (Patent rights), ಆ. ಗ್ರಂಥ ಸ್ವಾಮ್ಯ ಮತ್ತು ಇತರ ಸ್ವಾಮ್ಯಗಳು (Gry rights), ಇ. ಸರಕು ಮುದ್ರೆ ಸ್ವಾಮ್ಯ (Trade mark), ಈ. ಭೌಗೋಳಿಕ ಸೂಚನೆಯ ಸ್ವಾಮ್ಯ (Geographic ......), ಉ. ಸಸ್ಯ ಸಂಸ್ಕಾರಣ ಶಾಸ್ತ್ರಜ್ಞರ ಸ್ವಾಮ್ಯ (Plant breeders rigts), ಊ. ಕೈಗಾರಿಕಾ ನಕ್ಷೆಗಳ ಸ್ವಾಮ್ಯ (Industrial delights).

ಈ ಮೇಲೆ ತಿಳಿಸಿದ ಎಲ್ಲಾ ಕ್ಷೇತ್ರಗಳಲ್ಲೂ ಶ್ರೀಮಂತ ರಾಷ್ಟ್ರಗಳು ಸ್ವಾಮ್ಯ ನೊಂದಣಿ ಮಾಡಿಕೊಂಡಿರುವುದರಿಂದ ಹಿಂದುಳಿದಿರುವ ರಾಷ್ಟ್ರಗಳಿಗೆ ಅನಾನುಕೂಲವಾಗಿದೆ. ಈ ಸ್ವಾಮ್ಯದಿಂದ ಔಷಧಿ ಬೆಲೆಗಳು ಜಾಸ್ತಿಯಾಗಿ ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಅನಾನುಕೂಲ ವಾಗುತ್ತದೆ.

ಇನ್ನೊಂದು ಒಪ್ಪಂದ ಬಂಡವಾಳ ಹೂಡಿಕೆ ವ್ಯಾಪಾರಕ್ಕೆ ಸಂಬಂಧಪಟ್ಟದು (TRIMS) ಈ ಒಪ್ಪಂದದ ಪ್ರಕಾರ ವಿದೇಶಿಯರು ತಮ್ಮ ಬಂಡವಾಳವನ್ನು ಹೂಡಿ ಯಾವ ನಿರ್ಬಂಧವೂ ಇಲ್ಲದೆ ಯಾವ ಉದ್ಯಮವನ್ನಾದರೂ ಸ್ಥಾಪಿಸಬಹುದು ವಿದೇಶಿ ಬಂಡವಾಳದ ಪೈಪೋಟಿಯಿಂದ ನಮ್ಮ ಕೈಗಾರಿಕೆಗಳ ಬೆಳವಣಿಗೆ ಅಡಚಣೆಯಾಗಿದೆ.

### ವಿಶ್ವ ವ್ಯಾಪಾರ ಸಂಸ್ಥೆಯ ಸಚಿವರುಗಳ ಸಮ್ಮೇಳನ

೧೯೯೫ ರಿಂದ ೨೦೦೩ರ ವರೆಗೆ ೫ ಬಾರಿ ಸಚಿವ ಸಮ್ಮೇಳನಗಳು ನಡೆದಿವೆ. ಯಾವುವೆಂದರೆ

೧. ಸಿಂಗಾಪೂರದ ಸನ್‌ಟೆಕ್ ಸಿಟಿ (೧೯೯೬)

೨. ಜಿನಿವಾ (೧೯೯೮)

೩. ವಾಷಿಂಗ್ ಟನ್‌ನ ಸಿಯಾಟ್ಲ್ (೧೯೯೯)
೪. ಖ್ವಿಟಾರ್‌ನ ದೋಹ (೨೦೦೧)
೫. ಮೆಕ್ಸಿಕೋದ ಕ್ಯಾನ್‌ಕನ್ (೨೦೦೩)

ಈ ಎಲ್ಲಾ ಸಚಿವ ಸಮ್ಮೇಳನಗಳಲ್ಲೂ ಅಭಿವೃದ್ಧಿಶೀಲ ರಾಷ್ಟ್ರಗಳ ಬೌದ್ಧಿಕ ಆಸ್ತಿ ಹಕ್ಕು ವ್ಯಾಪಾರದಲ್ಲಿರುವ ನಿಯಮಗಳನ್ನು ವಿರೋಧಿಸಿ ಬದಲಾವಣೆಗೆಗಳನ್ನು ತರಲು ಪ್ರಯತ್ನಿಸುತ್ತಿದ್ದಾರೆ. ಶ್ರೀಮಂತ ರಾಷ್ಟ್ರಗಳು ತಮ್ಮ ಕೃಷಿ ಸರಕುಗಳಿಗೆ ಕೊಡುತ್ತಿರುವ ಸಹಾಯಧನದ ನೀತಿಯನ್ನೂ ವಿರೋಧಿಸುತ್ತಾ ಬಂದಿದ್ದಾರೆ.

## ವಿಶ್ವ ವ್ಯಾಪಾರ ಸಂಸ್ಥೆ ಮತ್ತು ಇಂಡಿಯಾ

ವಿಶ್ವ ವ್ಯಾಪಾರ ಸಂಸ್ಥೆಗೆ ಇಂಡಿಯಾ ದೇಶ ಸಂಸ್ಥಾಪಕ ಸಸ್ಯ ರಾಷ್ಟ್ರವಾಗಿದೆ. ಈ ಮೇಲೆ ಮಾಡಿಕೊಂಡಿರುವ ಅನೇಕ ಒಪ್ಪಂದಗಳು ನಮಗೆ ಅನಾನುಕೂಲ ಉಂಟುಮಾಡಿವೆ. ವಿದೇಶಿ ಬಂಡವಾಳ ಅಧಿಕ ಪ್ರಮಾಣದಲ್ಲಿ ನಮ್ಮ ರಾಷ್ಟ್ರಕ್ಕೆ ಬರುತ್ತಿದೆ. ಬಂಡವಾಳವನ್ನು ಈಗ ಇರುವ ಉದ್ಯಮ ಸಂಸ್ಥೆಗಳನ್ನು ಕೊಳ್ಳಲು ಉಪಯೋಗಿಸಲಾಗುತ್ತಿದೆ. ಆದರೆ ಹೊಸ ಉದ್ಯಮಗಳನ್ನು ಹೆಚ್ಚಾಗಿ ಸ್ಥಾಪಿಸುತ್ತಿಲ್ಲ. ಮುಕ್ತ ವ್ಯಾಪಾರದಿಂದ ಅನೇಕ ದೊಡ್ಡ ಮತ್ತು ಸಣ್ಣ ಕೈಗಾರಿಕೆಗಳು ನಷ್ಟ ಅನುಭವಿಸಬೇಕಾಗಿದೆ. ಅನೇಕ ಸೇವಾ ಕ್ಷೇತ್ರಗಳಲ್ಲಿ ವಿದೇಶಿಯರ ಪೈಪೋಟಿ ಜಾಸ್ತಿಯಾಗಿ ನಮಗೆ ತೊಂದರೆಯಾಗಿದೆ. ನಮ್ಮ ದೇಶದ ವಿದ್ಯಾವಂತರು ಮಾತ್ರ ವಿದೇಶಕ್ಕೆ ವಲಸೆ ಹೋಗಬಹುದು. ಆದರೆ ಸಾಮಾನ್ಯ ಕಾರ್ಮಿಕರಿಗೆ ಈ ಅವಕಾಶವಿಲ್ಲ, ನಾವು ಈ ನೀತಿಯನ್ನು ವಿರೋಧಿಸುತ್ತಿದ್ದೇವೆ. ಈಗ ಸಿದ್ದ ಸರಕು ಮತ್ತು ಉತ್ಪಾದನಾ ವಿಧಾನ ಎರಡರಲ್ಲೂ ವಿದೇಶಿಯರು ಸ್ವಾಮ್ಯ ತೆಗೆದುಕೊಂಡಿರುವುದರಿಂದ ನಮ್ಮ ದೇಶದಲ್ಲಿ ಮತ್ತು ಇತರ ಹಿಂದುಳಿದಿರುವ ರಾಷ್ಟ್ರಗಳಲ್ಲಿ ಔಷಧಿ ಬೆಲೆಗಳು ಜಾಸ್ತಿಯಾಗತೊಡಗಿದೆ. ಅನೇಕ ಇಂಡಿಯಾ ದೇಶದ ಸರಕುಗಳಿಗೆ ವಿದೇಶಿಯರು ಸ್ವಾಮ್ಯ ಪಡೆಯಲು ಪ್ರಯತ್ನಿಸುತ್ತಿದ್ದಾರೆ. ಬಾಸುಮತಿ ಅಕ್ಕಿಯನ್ನು ಟೆಕ್ಸಾಮಿಕ್ ಅಕ್ಕಿ ಎಂದು ಅಮೆರಿಕಾ ತೆಗೆದುಕೊಂಡಿದ್ದ ಸ್ವಾಮ್ಯವನ್ನು ನಾವು ವಿರೋಧಿಸಿ ರದ್ದು ಪಡಿಸಿದ್ದೇವೆ.

ಉತ್ಪಾದನಾ ಕ್ಷೇತ್ರದಲ್ಲಿ ಸಾಮಾಜಿಕ ಷರತ್ತನ್ನು ವಿಧಿಸಿರುವುದು ನಮಗೆ ಅನಾನುಕೂಲ ಮಾಡಿದೆ. ಈಗ ಇಂಡಿಯಾ ದೇಶದ ರತ್ನ ಗಂಬಳಿ ಮಾರಾಟಮಾಡಲು ಅಡಚಣೆಯಾಗಿದೆ. ವಿದೇಶಗಳಿಂದ ಅನೇಕ ವಿಧವಾದ ಅನುಭೋಗಿ ಸರಕುಗಳು ಆಮದು ಆಗಿ, ನಮ್ಮ ಕೈಗಾರಿಕೆಗಳಿಗೆ ತೊಂದರೆಯಾಗಿದೆ. ಜಾಗತೀಕರಣದಿಂದ ನಮ್ಮ ದೇಶಕ್ಕೆ ತೊಂದರೆಗಳಾಗಿವೆ.

## ೭.೬. ಪಾರಿಭಾಷಿಕ ಕೋಶ

| | | |
|---|---|---|
| Export -GDP ratio | : | ರಫ್ತು ಸಮಗ್ರ ರಾಷ್ಟ್ರೀಯ ಉತ್ಪನ್ನದ ಅನುಪಾತ |
| Balance of payment | : | ಪಾವತಿ ಶಿಲ್ಕು |
| Balance of Trade | : | ವ್ಯಾಪಾರದ ಶಿಲ್ಕು |
| Begger thy neighbour | : | ನಿಮ್ಮ ನೆರೆಹೊರೆಯವನು ಭಿಕ್ಷುಕ |
| Cash reserve ratio | : | ಕಾಯ್ದಿರಿಸಿದ ನಗದು ಹಣ ಅನುಪಾತ |
| Current Account of balance of Payments | : | ಚಾಲ್ತಿ ಲೆಕ್ಕದ ಪಾವತಿ ಶಿಲ್ಕು |
| Capital account of balance of payments | : | ಬಂಡವಾಳ ಲೆಕ್ಕದ ಪಾವತಿ ಶಿಲ್ಕು |
| Composition of Trade | : | ವ್ಯಾಪಾರದ ಸಂಯೋಜನೆ |
| Copy right | : | ಗ್ರಂಥ ಸ್ವಾಮ್ಯ (ವ್ಯಾಪಾರ ಚಿಹ್ನೆ) |
| Deflation | : | ಹಣದ ಪ್ರಮಾಣ ಕುಗ್ಗುವಿಕೆ |
| Depreciation | : | ಅಪಮೌಲ್ಯ |
| Depreciastion | : | ಹಣದ ಮೌಲ್ಯ ಕುಗ್ಗುವಿಕೆ |
| Deficit | : | ಕೊರತೆ |
| Exchange Control | : | ವಿದೇಶಿ ವಿನಿಮಯ ನಿಯಂತ್ರಣ |
| Exim Policy | : | ರಫ್ತು ಆಮದು ಕಾರ್ಯನೀತಿ |
| Export Promotion zone | : | ರಫ್ತು ಉತ್ತೇಜನ ವಲಯ |
| Engineering zones | : | ಯಂತ್ರ ಶಿಲ್ಪ ಸರಕುಗಳು |
| Free Trade zone | : | ಮುಕ್ತ ವ್ಯಾಪಾರ ವಲಯ |
| Floating Exchangerate | : | ತೇಲುವ ವಿನಿಮಯ ದರ |
| Foreign trade | : | ವಿದೇಶಿ ವಿನಿಮಯ ದರ |
| Factor Endowment Theory | : | ದೈವ ದತ್ತ ಸಂಪನ್ಮೂಲ ಸಿದ್ಧಾಂತ |
| GATT | : | ವ್ಯಾಪಾರ ಮತ್ತು ಸುಂಕ ಸಂಬಂಧ ಸಾಮಾನ್ಯ ಒಪ್ಪಂದ |
| GATS | : | ಸೇವೆ ವ್ಯಾಪಾರದ ಬಗ್ಗೆ ಸಾಮಾನ್ಯ ಒಪ್ಪಂದ |
| Home Charge | : | ಗೃಹ ವೆಚ್ಚ |

| | | |
|---|---|---|
| Inter Industry Trade | : | ಬೇರೆ ಕೈಗಾರಿಕಾ ಸರಕುಗಳ ವ್ಯಾಪಾರ |
| Intra-industry Trade | : | ಒಂದೇ ಕೈಗಾರಿಕೆಯ ವೈವಿಧ್ಯತೆ ಹೊಂದಿರುವ ಸರಕುಗಳ ವ್ಯಾಪಾರ. |
| Support Substitution | : | ಆಮದು ಬದಲಿ ಸರಕು |
| Made Fariured orietion | : | ಎಲ್ಲಾ ರಾಷ್ಟ್ರಗಳಿಗೂ ಒಂದೇ ದರದ ಸುಂಕ ವಿಶೇಷ ಸೌಲಭ್ಯ |
| Multifibregreement | : | ಬಹುರಾಷ್ಟ್ರ ಜವಳಿ ಒಪ್ಪಂದ |
| Non-tariff | : | ಸುಂಕೇತರ ನಿರ್ಬಂಧ |
| Overall balance of payments | : | ಸಮಗ್ರ ಪಾವತಿ ಶಿಲ್ಕು |
| Open general licence list | : | ತೆರೆದ ಸಾಮಾನ್ಯ ಪರವಾನೆ ಪಟ್ಟಿ |
| Offer Curve | : | ಕೊಡುಗೆ ರೇಖೆ |
| Opennests of foreign trade | : | ವಿದೇಶಿ ವ್ಯಾಪಾರದಲ್ಲಿ ತೆರೆದ ಮಾರುಕಟ್ಟೆ |
| Patent | : | ಸ್ವಾಮ್ಯ ಸನ್ನದು |
| Quota | : | ಪರಿಮಾಣಾತ್ಮಕ ನಿರ್ಬಂಧ |
| Special Economic zones | : | ವಿಶೇಷ ಆರ್ಥಿಕ ವಲಯ |
| Social (change) Clause | : | ಸಾಮಾಜಿಕ ಷರತ್ತು (ವಿದೇಶೀ ವ್ಯಾಪಾರದಲ್ಲಿ) |
| Sterling reserve | : | ಕಾಯ್ದಿರಿಸಲಾದ ಸ್ಟಿರ್ಲಿಂಗ್ ಹಣ |
| Statiotry legislality | : | ಕಾನೂನು ಬದ್ಧ ದ್ರವ್ಯಕೆಯ ಅನುಪಾತ |
| Surplus ratio | : | ಹೆಚ್ಚುಳ |
| Tariff | : | ಸುಂಕ |
| TRIPS | : | ಬೌದ್ಧಿಕ ಸಂಬಂಧ ಬಂಡವಾಳ ಹೂಡಿಕೆ ಕ್ರಮಗಳು |
| TRIMS | : | ವ್ಯಾಪಾರ ಸಂಬಂಧ ಬಂಡವಾಳ ಹೂಡಿಕೆ ಕ್ರಮಗಳು |
| WTO | : | ವಿಶ್ವ ವ್ಯಾಪಾರ ಸಂಸ್ಥೆ. |

## ೭.೭. ಪ್ರಶ್ನೆಗಳು

ಕೆಳಗಿನ ಪ್ರಶ್ನೆಗಳಿಗೆ ಒಂದು ವಾಕ್ಯದಲ್ಲಿ ವಿವರಿಸಿ. ೧ ಅಂಕ

೧. ವಿದೇಶೀ ವ್ಯಾಪಾರವನ್ನು ವಿವರಿಸಿ.

೨. ವ್ಯಾಪಾರ ಶಿಲ್ಕು ಎಂದರೇನು?

೩. ಚಾಲ್ತಿ ಪಾವತಿ ಶಿಲ್ಕುವಿನ ವಿವರಣೆ ಕೊಡಿ.

೪. ಬಂಡವಾಳ ಪಾವತಿ ಶಿಲ್ಕುನಲ್ಲಿರುವ ಅಂಶಗಳಾವುವು?

೫. ಆರ್ಥಿಕ ಸುಧಾರಣೆಯ ಲಕ್ಷಣವನ್ನು ತಿಳಿಸಿ.

೬. ಇತ್ತೀಚಿಗೆ ರಫ್ತು ಬೆಳೆಯುತ್ತಿರುವ ವೇಗ ಎಷ್ಟು?

೭. ಇತ್ತೀಚೆಗೆ ಆಮದು ಬೆಳಯುತ್ತಿರುವ ವೇಗ ಎಷ್ಟು?

೮. ರಫ್ತು ಉತ್ತೇಜನ ಕ್ರಮಗಳಾವುವು?

೯. ಆಮದು ಬದಲೀ ಸರಕು ಯಾವುದು?

೧೦. 'ಗೃಹ ವೆಚ್ಚ'ಕ್ಕೆ ಕಾರಣವೇನು?

೧೧. ಯಾವ ಸರಕಿಗೆ ಅತಿ ಹೆಚ್ಚಿನ ಆಮದು ವೆಚ್ಚ ಆಗುತ್ತದೆ?

೧೨. ಗಟ್ಟಿ ಹಣ ಯಾವುದು?

೧೩. ವಿಶೇಷ ಆರ್ಥಿಕ ವಲಯದ ಕಾರ್ಯ ತಿಳಿಸಿ.

೧೪. ಪರಿಮಾಣಾತ್ಮಕ ನಿರ್ಬಂಧದ ಉದಾಹರಣೆ ಕೊಡಿ.

೧೫. ಉದಾರೀಕರಣ ಎಂದರೇನು?

೧೬. ವಿಶ್ವ ವ್ಯಾಪಾರ ಸಂಸ್ಥೆ ಯಾವಾಗ ಸ್ಥಾಪಿಸಲ್ಪಟ್ಟಿತು?

೧೭. ವಿಶ್ವ ವ್ಯಾಪಾರ ಸಂಸ್ಥೆಯ ಪ್ರಚಲಿತ ಸದಸ್ಯರುಗಳ ಸಂಖ್ಯೆ ಎಷ್ಟು?

೧೮. ರಫ್ತು ಆಮದು ಕಾರ್ಯ ನೀತಿಯ ಲಕ್ಷಣವೇನು?

೧೯. ಪ್ರಚಲಿತ ವಿದೇಶೀ ವಿನಿಮಯ ಪ್ರಮಾಣ ಎಷ್ಟು?

೨೦. ಸೇವೆಗಳ ವ್ಯಾಪಾರದ ಬಗ್ಗೆ ಸಾಮಾನ್ಯ ಒಪ್ಪಂದ ವಿಚಾರ ತಿಳಿಸಿ.

೨೧. ಬೌದ್ಧಿಕ ಆಸ್ತಿ ಹಕ್ಕು ವ್ಯಾಪಾರ ಎಂದರೇನು?

೨೨. ವಿಶ್ವ ವ್ಯಾಪಾರ ಸಂಸ್ಥೆ ಒಪ್ಪಂದ ಯಾವ ರಾಷ್ಟ್ರದಲ್ಲಿ ಮಾಡಲಾಯಿತು.

೨೩. ಎಲ್ಲಾ ರಾಷ್ಟ್ರಗಳಿಗೂ ಒಂದೇ ದರದ ಸುಂಕ ಸೌಲಭ್ಯದ ವಿಚಾರ ತಿಳಿಸಿ.

೨೪. ಬಹುರಾಷ್ಟ್ರ ಜವಳಿ ಒಪ್ಪಂದದ ಬಗ್ಗೆ ಬರೆಯಿರಿ.

೨೫. ವ್ಯಾಪಾರ ಒಕ್ಕೂಟದ ಉದಾಹರಣೆ ಕೊಡಿ.

೨೬. ೫ನೇ ವಿಶ್ವ ವ್ಯಾಪಾರ ಸಂಸ್ಥೆಯ ಸಚಿವ ಸಮ್ಮೇಳನ ಎಲ್ಲಿ ನಡೆಯಿತು.

೨೭. ವ್ಯಾಪಾರ, ಸುಂಕದ ಸಾಮಾನ್ಯ ಒಪ್ಪಂದ ಎಷ್ಟು ಸುತ್ತಿನ ಸಂಧಾನಗಳನ್ನು ನಡೆಸಿತು?

೨೮. ವಾಣಿಜ್ಯ ಪಂಥದ ವಿಷಯವನ್ನು ತಿಳಿಸಿ.

೨೯. ವಿದೇಶೀ ವ್ಯಾಪಾರದಲ್ಲಿ ರಕ್ಷಣೆಯ ಪಾತ್ರವನ್ನು ತಿಳಿಸಿ.

೩೦. ವ್ಯಾಪಾರಕ್ಕೆ ಸಂಬಂಧಪಟ್ಟ ಬಂಡವಾಳ ಹೂಡಿಕೆಯ ಕ್ರಮಗಳು ಎಂದರೇನು?

**ಕೆಳಗಿನ ಪ್ರಶ್ನೆಗಳಿಗೆ ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ. ೨ ಅಂಕಗಳು**

೧. ಅಪಮೌಲ್ಯ ಏಕೆ ಮಾಡಿಕೊಳ್ಳಲಾಗುತ್ತದೆ?

೨. ಬಹು ರಾಷ್ಟ್ರ ಜವಳಿ ಒಪ್ಪಂದದ ಮುಖ್ಯ ಅಂಶಗಳನ್ನು ತಿಳಿಸಿ.

೩. ವ್ಯಾಪಾರದ ಶಿಲ್ಕು ಕೊರತೆಗೂ ಪಾವತಿಶಿಲ್ಕು ಕೊರತೆಗೂ ಇರುವ ವ್ಯತ್ಯಾಸವೇನು?

೪. ಚಾಲ್ತಿ ಪಾವತಿ ಶಿಲ್ಕುನಲ್ಲಿ ಇರುವ ಅಂಶಗಳಾವುವು?

೫. ಬಂಡವಾಳ ಪಾವತಿ ಶಿಲ್ಕುನಲ್ಲಿ ಇರುವ ಅಂಶಗಳಾವುವು?

೬. ವಿಶ್ವ ವ್ಯಾಪಾರ ಸಂಸ್ಥೆಯ ಉದ್ದೇಶಗಳೇನು?

೭. ರಫ್ತು ಉತ್ತೇಜನ ವಲಯದ ಕಾರ್ಯ ತಿಳಿಸಿ.

**ಕೆಳಗಿನ ಪ್ರಶ್ನೆಗಳಿಗೆ ೧೫ ರಿಂದ ೨೦ ವಾಕ್ಯಗಳಲ್ಲಿ. ಉತ್ತರಿಸಿ ೫ ಅಂಕಗಳು**

೧. ಇತ್ತೀಚಿನ ವರ್ಷದ ರಫ್ತು ಮತ್ತು ಆಮದು ನೀತಿಯ ಮುಖ್ಯ ಲಕ್ಷಣಗಳೇನು?

೨. ನಮ್ಮ ದೇಶದಿಂದ ರಫ್ತು ಆಗುವ ಮುಖ್ಯ ಸರಕುಗಳಾವುವು?

೩. ನಮ್ಮ ದೇಶ ಆಮದು ಮಾಡಿಕೊಳ್ಳುವ ಮುಖ್ಯ ಸರಕುಗಳಾವುವು?

೪. ಇತ್ತೀಚಿನ ವರ್ಷದಲ್ಲಿ ನಮ್ಮ ವಿದೇಶಿ ವ್ಯಾಪಾರದ ದಿಕ್ಕು ತಿಳಿಸಿ.

೫. ವಿದೇಶಿ ವಿನಿಮಯದ ಕಾರ್ಯಗಳೇನು?

೬. ಗ್ಯಾಟ್ ಮತ್ತು ಡಬ್ಲ್ಯು.ಟಿ.ಓ. ಇವುಗಳಿಗೆ ಇರುವ ವ್ಯತ್ಯಾಸಗಳೇನು?

೭. ಇಂಡಿಯಾ ದೇಶದ ರಫ್ತು ವ್ಯಾಪಾರದಲ್ಲಿ ಸೇವೆಗಳ ಪಾತ್ರವೇನು?

೮. ವಿಶ್ವ ವ್ಯಾಪಾರ ಸಂಸ್ಥೆಯ ಸಾಮಾಜಿಕ ಷರತ್ತುಗಳಾವುವು?

**ಕೆಳಗಿನ ಪ್ರಶ್ನೆಗಳಿಗೆ ೧೫ ರಿಂದ ೨೦ ವಾಕ್ಯಗಳಲ್ಲಿ ಉತ್ತರಿಸಿ. ೫ ಅಂಕಗಳು**

೧. ಇಂಡಿಯಾ ದೇಶದ ವ್ಯಾಪಾರ ಶಿಲ್ಕಿನಲ್ಲಿ ಯಾವಾಗಲೂ ಕೊರತೆ ಇರುವುದಕ್ಕೆ ಕಾರಣಗಳನ್ನು ತಿಳಿಸಿ.

೨. ಸ್ವಾತಂತ್ರ್ಯ ಪೂರ್ವದಲ್ಲಿ ನಮ್ಮ ದೇಶದ ವ್ಯಾಪಾರ ಶಿಲ್ಕಿನ ಪರಿಸ್ಥಿತಿಯನ್ನು ವಿವರಿಸಿ.

೩. ಪಂಚವಾರ್ಷಿಕ ಯೋಜನೆಗಳ ಅವಧಿಯಲ್ಲಿ ರಫ್ತಿನ ಬೆಳವಣಿಗೆಯನ್ನು ಪರಿಶೀಲಿಸಿ.

೪. ಪಂಚವಾರ್ಷಿಕ ಯೋಜನೆಗಳ ಅವಧಿಯಲ್ಲಿ ಆಮದಿನ ಬೆಳವಣಿಗೆಯನ್ನು ಪರಿಶೀಲಿಸಿ.

೫. ನಿಮ್ಮ ದೇಶದ ಪಾವತಿ ಶಿಲ್ಕಿನಲ್ಲಿ ಸೇವೆಗಳ ಪಾತ್ರವನ್ನು ತಿಳಿಸಿ.

೬. ಸೇವೆಗಳ ವ್ಯಾಪಾರ ಸಾಮಾನ್ಯ ಒಪ್ಪಂದದ ಮುಖ್ಯ ಅಂಶಗಳಾವುವು?

೭. ಸಿಂಗಾಪೂರ್ ವಿವಾದಾಂಶಗಳನ್ನು ವಿವರಿಸಿ.

೮. ಇತ್ತೀಚಿನ ವರ್ಷಗಳಲ್ಲಿ ನಮ್ಮ ದೇಶದ ಬಂಡವಾಳ ಲೆಕ್ಕದ ಪಾವತಿ ಶಿಲ್ಕಿನಲ್ಲಿದ್ದ ಹೆಚ್ಚಳಕ್ಕೆ ಕಾರಣಗಳೇನು?

೯. ಹಿಂದಿನ ವರ್ಷಗಳಲ್ಲಿ ನಮ್ಮ ದೇಶ ಚಾಲ್ತಿ ಲೆಕ್ಕದ ಪಾವತಿ ಶಿಲ್ಕಿನಲ್ಲಿ ಕೊರತೆಯನ್ನು ಹೇಗೆ ಸರಿಪಡಿಸಿತು?

೧೦. ನಮ್ಮ ವಿದೇಶೀ ವ್ಯಾಪಾರ 'ಬೆಳವಣಿಗೆಯ ಯಂತ್ರ'ವೇ ತಿಳಿಸಿ.

**ಕೆಳಗಿನ ಪ್ರಶ್ನೆಗಳಿಗೆ ೪೦ ವಾಕ್ಯಗಳಲ್ಲಿ. ಉತ್ತರಿಸಿ ೧೦ ಅಂಕಗಳು**

೧. ಸ್ವಾತಂತ್ರ್ಯ ಬಂದ ನಂತರ ಅನುಸರಿಸುತ್ತಿರುವ ರಫ್ತು ಮತ್ತು ಆಮದು ಕಾರ್ಯನೀತಿಯನ್ನು ವಿವರಿಸಿ.

೨. ಇತ್ತೀಚಿನ ವರ್ಷಗಳಲ್ಲಿ ರಫ್ತು ಮತ್ತು ಆಮದುಗಳ ಸಂಯೋಜನೆಯಲ್ಲಿ ಮತ್ತು ವ್ಯಾಪಾರ ದಿಕ್ಕಿನಲ್ಲಿ ಆಗಿರುವ ಬದಲಾವಣೆಗಳನ್ನು ತಿಳಿಸಿ.

೩. ೧೯೯೧ ರಿಂದ ನಮ್ಮ ದೇಶದ ಪಾವತಿ ಶಿಲ್ಕುನಲ್ಲಿ ಆಗಿರುವ ಬೆಳವಣಿಗೆಯನ್ನು ವಿವರಿಸಿ.

೪. ಬೌದ್ಧಿಕ ಆಸ್ತಿ ಹಕ್ಕು ವ್ಯಾಪಾರದಲ್ಲಿ ಒಳಗೊಂಡಿರುವ ವಿವಿಧ ಸ್ವಾಮ್ಯಗಳನ್ನು ತಿಳಿಸಿ.

೫. ಸರಕು ಮತ್ತು ಸೇವೆಗಳ ಬಗ್ಗೆ ವಿಶ್ವ ವ್ಯಾಪಾರ ಸಂಸ್ಥೆಯ ಸದಸ್ಯರಾಷ್ಟ್ರಗಳು ಮಾಡಿಕೊಂಡಿರುವ ಒಪ್ಪಂದಗಳ ಬಗ್ಗೆ ವಿವರಣೆ ಕೊಡಿ.

೬. ೯೦ರ ದಶಕದಲ್ಲಿ ಕಂಡು ಬಂದ ರಫ್ತು ಮತ್ತು ಆಮದು ಬೆಳವಣಿಗೆಯನ್ನು ವಿಶ್ಲೇಷಿಸಿ.

೭. ಆರ್ಥಿಕ ಸುಧಾರಣೆಗಳು ಜಾರಿಗೆ ಬಂದ ಮೇಲೆ ನಮ್ಮ ಆಮದಿನ ಮೇಲೆ ಆದ ಪರಿಣಾಮವನ್ನು ತಿಳಿಸಿ.

೮. ವಿದೇಶೀ ವಿನಿಮಯ ನಿರ್ವಹಿಸುವ ಕಾರ್ಯಗಳನ್ನು ತಿಳಿಸಿ ಮತ್ತು ಇತ್ತೀಚಿನ ವರ್ಷಗಳನ್ನು ಇದರ ಪ್ರಮಾಣ ಜಾಸ್ತಿಯಾಗುತ್ತಿರಲು ಕಾರಣಗಳನ್ನು ಕೊಡಿ.

೯. ಹೆಚ್ಚಿನ ಪ್ರಮಾಣದ ನಮ್ಮ ವ್ಯಾಪಾರ ಶ್ರೀಮಂತ ರಾಷ್ಟ್ರಗಳಲ್ಲಿ ನಡೆಯಲು ಕಾರಣಗಳೇನು?

೧೦. ವಿಶ್ವ ವ್ಯಾಪಾರ ಸಂಸ್ಥೆಯ ಸದಸ್ಯತ್ವ ಪಡೆದಿರುವುದರಿಂದ ಆಗಿರುವ ಸಾಧಕ ಮತ್ತು ಬಾಧಕಗಳನ್ನು ವಿವರಿಸಿ.

# ಅಧ್ಯಾಯ ೮

# ಸಾರ್ವಜನಿಕ ಹಣಕಾಸು

## ಪ್ರಸ್ತಾವನೆ

ಸಾರ್ವಜನಿಕ ಹಣಕಾಸು ಸರ್ಕಾರದ ವರಮಾನ ಮತ್ತು ವೆಚ್ಚವನ್ನು ಅಭ್ಯಾಸ ಮಾಡುತ್ತದೆ. ಇದು ರಾಜ್ಯಕೋಶ ನೀತಿ, ಆಯವ್ಯಯ ಪಟ್ಟಿ, ಸಾರ್ವಜನಿಕ ಆದಾಯ, ಸಾರ್ವಜನಿಕ ವೆಚ್ಚ, ಸಾರ್ವಜನಿಕ ಸಾಲ ಹಾಗೂ ಆಯವ್ಯಯ ಕೊರತೆಯನ್ನು ಪ್ರತ್ಯೇಕವಾಗಿ ಅಭ್ಯಾಸ ಮಾಡುತ್ತದೆ. ಭಾರತವು ಸಂಯುಕ್ತ ಸರ್ಕಾರ ವ್ಯವಸ್ಥೆಯನ್ನು ಹೊಂದಿದ್ದು, ಕೇಂದ್ರ ಸರ್ಕಾರ, ರಾಜ್ಯ ಸರ್ಕಾರಗಳು ಹಾಗೂ ಸ್ಥಳೀಯ ಸರ್ಕಾರಗಳು ಬೇರೆ ರಾಜಸ್ವ ಮೂಲಗಳನ್ನು ಹೊಂದಿದೆ. ಈ ಎಲ್ಲಾ ಸರ್ಕಾರಗಳ ವರಮಾನದ ಮೂಲಗಳು, ವೆಚ್ಚಮಾಡುವ ವಿಧಾನ, ಸಾಲದ ಮೂಲಗಳು, ದ್ವಿತೀಯ ಆಡಳಿತ ಮತ್ತು ದ್ವಿತೀಯ ನೀತಿ ಹಾಗೂ ಆಯವ್ಯಯ ಪಟ್ಟಿಯನ್ನು ಸಾರ್ವಜನಿಕ ಹಣಕಾಸಿನಲ್ಲಿ ವಿಶ್ಲೇಷಣೆ ಮಾಡಲಾಗುತ್ತದೆ. ಸಾರ್ವಜನಿಕ ಹಣಕಾಸು ಅರ್ಥವ್ಯವಸ್ಥೆ ಮೇಲೆ ಗಮನಾರ್ಹ ಪರಿಣಾಮವನ್ನು ಬೀರುತ್ತದೆ. ಭಾರತದಲ್ಲಿ ಮಿಶ್ರ ಅರ್ಥ ವ್ಯವಸ್ಥೆ ಸಾರ್ವಜನಿಕ ಹಣಕಾಸಿನ ಪ್ರಾಮುಖ್ಯತೆಯನ್ನು ಹೆಚ್ಚಿಸಿದೆ.

## ಭಾರತದಲ್ಲಿ ವಿತ್ತೀಯ ಸಂಯುಕ್ತತೆ (Indian Fiscal Federalism)

ಭಾರತದಲ್ಲಿ ಸಂಯುಕ್ತ ಕೋಶೀಯ ವ್ಯವಸ್ಥೆಯನ್ನು ನಾನು ಕಾಣಬಹುದು. ಕೇಂದ್ರ ಸರ್ಕಾರ, ರಾಜ್ಯ ಸರ್ಕಾರಗಳು ಹಾಗೂ ಸ್ಥಳೀಯ ಸರ್ಕಾರಗಳ ವರಮಾನ ಮತ್ತು ವೆಚ್ಚದ ವ್ಯವಹಾರಗಳು ಹೆಚ್ಚು ಪ್ರಾಮುಖ್ಯತೆಯನ್ನು ಪಡೆದುಕೊಂಡಿವೆ. ಭಾರತದ ಸಂಯುಕ್ತ ಸಾರ್ವಜನಿಕ ಹಣಕಾಸು ವ್ಯವಸ್ಥೆಯು ೧೯೩೫ರ ಭಾರತ ಸರ್ಕಾರದ ಕಾಯ್ದೆಯಿಂದ ವಿಕಸನಗೊಂಡಿದೆ. ಭಾರತದ ಸಂವಿಧಾನವು ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಕಾರ್ಯ ಹಣಕಾಸು ಅಧಿಕಾರಗಳನ್ನು ಪ್ರತ್ಯೇಕಿಸಿ ತಿಳಿಸಿದೆ. ಕೇಂದ್ರ ಸರ್ಕಾರ ಮತ್ತು ರಾಜ್ಯ ಸರ್ಕಾರಗಳ ನಡುವೆ ಆದಾಯದ ಮೂಲಗಳು ಸರಿಯಾಗಿ ಹಂಚಿಕೆಯಾಗಿರುವುದಿಲ್ಲ. ಕೇಂದ್ರ ಸರ್ಕಾರವು ಹೆಚ್ಚು ವರಮಾನದ ಮೂಲಗಳನ್ನು ಹೊಂದಿರುವುದರಿಂದ ಹಾಗೂ ರಾಜ್ಯಸರ್ಕಾರಗಳ ವೆಚ್ಚ ಹೆಚ್ಚಾಗುತ್ತಿರುವುದರಿಂದ ಭಾರತದಲ್ಲಿ ಲಂಬ ಅಸಮಾನತೆ ವಿತ್ತೀಯ ವ್ಯವಹಾರದಲ್ಲಿ ಕಂಡುಬರುತ್ತಿದೆ. ಈ ಕೋಶೀಯ ಅಸಮಾನತೆಯನ್ನು ಹೋಗಲಾಡಿಸಲು ಕೇಂದ್ರ ಸರ್ಕಾರವು

ಮೂರು ಬಗೆಯಲ್ಲಿ ಹಣಕಾಸು ಸಂಪನ್ಮೂಲದ ವರ್ಗಾವಣೆಗೆ ಅವಕಾಶ ಮಾಡಿಕೊಟ್ಟಿದೆ. ಸಂವಿಧಾನದ ೨೮೦ನೇ ವಿಧಿಯ ಪ್ರಕಾರ ರಾಷ್ಟ್ರಾಧ್ಯಕ್ಷರು ಪ್ರತಿ ಐದು ವರ್ಷಗಳಿಗೊಮ್ಮೆ ತೆರಿಗೆ ಹಂಚಿಕೆ ಮತ್ತು ಸಹಾಯ ಧನಕ್ಕೆ ಶಿಫಾರಸ್ಸು ಮಾಡಲು ಹಣಕಾಸು ಆಯೋಗವನ್ನು ರಚಿಸುವುದಕ್ಕೆ ಅವಕಾಶ ಮಾಡಿಕೊಟ್ಟಿದೆ. ಇದುವರೆಗೆ ಭಾರತದಲ್ಲಿ ಹನ್ನೆರಡು ಹಣಕಾಸಿನ ಆಯೋಗಗಳು ರಚನೆಯಾಗಿವೆ, ರಂಗರಾಜನ್ ೧೨ನೇ ಹಣಕಾಸು ಆಯೋಗದ ಅಧ್ಯಕ್ಷರಾಗಿ ವರದಿಯನ್ನು ಸಲ್ಲಿಸಿರುತ್ತಾರೆ. ಹಾಗೆಯೇ ಯೋಜನಾ ಆಯೋಗದಿಂದ ಸಹ ರಾಜ್ಯ ಸರ್ಕಾರಗಳಿಗೆ ಹಣಕಾಸಿನ ಸಂಪನ್ಮೂಲ ವರ್ಗಾವಣೆಯಾಗುತ್ತದೆ. ಕೇಂದ್ರದ ಹಣಕಾಸು ಸಚಿವಾಲಯ ಮತ್ತು ಇತರೆ ಸಚಿವಾಲಯಗಳಿಂದ ರಾಜ್ಯ ಸರ್ಕಾರಗಳಿಗೆ ಸಂಪನ್ಮೂಲ ವರ್ಗಾವಣೆಯಾಗುವುದಕ್ಕೆ ವಿವೇಚನಾಯುತ ವರ್ಗಾವಣೆಯೆಂದು ಕರೆಯುತ್ತಾರೆ. (Direcretionary Transfers).

## ೮.೧. ಕೋಶೀಯ ನೀತಿ ಮತ್ತು ಮುಂಗಡ ಪತ್ರ

ಸಾರ್ವಜನಿಕ ಹಣಕಾಸಿನಲ್ಲಿ ಕೋಶೀಯ ನೀತಿ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ. ಪೂರ್ಣೋದ್ಯೋಗ ಮತ್ತು ಆರ್ಥಿಕಾಭಿವೃದ್ಧಿ ಸಾಧನೆ ಹಾಗೂ ಅಧಿಕ ಅಸಮಾನತೆಯ ನಿವಾರಣೆಯಲ್ಲಿ ಕೋಶೀಯ ನೀತಿಯನ್ನು ಹೆಚ್ಚು ದಕ್ಷತೆಯಿಂದ ಜಾರಿಗೆ ತರಬೇಕಾಗುತ್ತದೆ. ಸಾಮಾನ್ಯವಾಗಿ ಸರ್ಕಾರವು ತೆರಿಗೆ, ಸಾರ್ವಜನಿಕ ವೆಚ್ಚ, ಸಾಮಾಜಿಕ ಸಾಲ, ಕೊರತೆ ಹಣಕಾಸು ಹಾಗೂ ಮುಂಗಡ ಪತ್ರದ ಬಗ್ಗೆ ಅನುಸರಿಸುವ ನೀತಿಗೆ ಕೋಶೀಯ ನೀತಿ ಎಂದು ಕರೆಯುತ್ತಾರೆ. ಪಾಲ್‌ಸಾಮ್ಯುಯಸನ್‌ರವರ ಪ್ರಕಾರ, ಸಾರ್ವಜನಿಕ ವೆಚ್ಚ ಮತ್ತು ಸರ್ಕಾರದ ತೆರಿಗೆ ನೀತಿಯೇ ಕೋಶಿಯ ನೀತಿಯಾಗಿರುತ್ತದೆ. ಆರ್ಥರ್ ಸ್ಮಿಥೀಸ್ ಪ್ರಕಾರ, ಉದ್ಯೋಗ, ಉತ್ಪನ್ನ ಮತ್ತು ರಾಷ್ಟ್ರೀಯ ವರಮಾನದ ಮೇಲೆ ಕೆಟ್ಟ ಪರಿಣಾಮ ಗಳನ್ನು ತಪ್ಪಿಸಿ ನಿರೀಕ್ಷಿತ ಪರಿಣಾಮಗಳಿಗೆ ಸಂಬಂಧಿಸಿದಂತೆ ಸರ್ಕಾರವು ಅನುಸರಿಸುವ ನೀತಿಯೇ ಕೋಶೀಯ ನೀತಿಯಾಗಿರುತ್ತದೆ. ಕೋಶೀಯ ನೀತಿಯು ಮಹಾ ಆರ್ಥಿತ ಮುಗ್ಗಟ್ಟಿನ ಅವಧಿಯಲ್ಲಿ ಜೆ.ಎಂ.ಕೀನ್ಸರವರಿಂದ ಪ್ರಾಮುಖ್ಯತೆಯನ್ನು ಪಡೆದುಕೊಂಡಿತು. ಸಂಪ್ರದಾಯ ಅರ್ಥಶಾಸ್ತ್ರಜ್ಞರು ಮುಕ್ತ ಅರ್ಥವ್ಯವಸ್ಥೆಯನ್ನು ನೀಡಿ ಕೋಶೀಯ ನೀತಿಯನ್ನು ಕಡೆಗಣಿಸಿದ್ದರು. ಆಧುನಿಕ ಅಥಶಾಸ್ತ್ರಜ್ಞರುಗಳಾದ ಜೆ.ಎಂ.ಕೀನ್ಸ್, ಎ.ಪಿ.ಆರ್ನರ್ ಹಾಗೂ ಗುನ್ನಾರ್ ಮೀರ್ಡಾಲ್‌ರವರು ಕೋಶೀಯ ನೀತಿಗೆ ಹೆಚ್ಚು ಪ್ರಾಮುಖ್ಯತೆಯನ್ನು ನೀಡಿದ್ದಾರೆ.

### ಕೋಶೀಯ ನೀತಿಯ ಧ್ಯೇಯಗಳು

ಕೋಶೀಯ ನೀತಿಯು ಅಭಿವೃಧಿ ಹೊಂದಿದ ಮತ್ತು ಅಭಿವೃದ್ಧಿ ಹೊಂದುತ್ತಿರುವ ಅರ್ಥವ್ಯವಸ್ಥೆಗಳಲ್ಲಿ ಅನೇಕ ಧ್ಯೇಯಗಳನ್ನು ಹೊಂದಿದೆ.

ಮುಂದುವರೆದ ಅರ್ಥ ವ್ಯವಸ್ಥೆಯಲ್ಲಿ ಕೋಶೀಯ ನೀತಿಯ ಧ್ಯೇಯಗಳಾವುವೆಂದರೆ

೧. ಹೊಟೆ ಪ್ರಮಾಣವನ್ನು ಹೆಚ್ಚಿಸಿ ಉತ್ಪಾದನಾ ಹೆಚ್ಚಳವನ್ನು ಸಾಧಿಸುವುದು.
೨. ಪರಿಣಾಮಕಾರಿ ಬೇಡಿಕೆಯಲ್ಲಾಗುವ ವ್ಯತ್ಯಾಸವನ್ನು ನಿರುದ್ಯೋಗದ ದೃಷ್ಟಿಯಿಂದ ತಡೆಗಟ್ಟುವುದು.
೩. ಮಾರುಕಟ್ಟೆಯ ಅಸಮತೋಲನೆಯನ್ನು ನಿವಾರಿಸುವುದು.
೪. ಸರ್ಕಾರದ ಹೂಟೆಗೆ ಸರಿಯಾದ ನಿರ್ದೇಶನವನ್ನು ನೀಡುವುದು.
೫. ಅರ್ಥವ್ಯವಸ್ಥೆಗೆ ಸೂಕ್ತವಾದ ತೆರಿಗೆ ನೀತಿಯನ್ನು ರೂಪಿಸುವುದು.

ಮಸ್‌ಗ್ರೇವ್ ರವರು ಸಂಪನ್ಮೂಲಗಳ ಹಂಚಿಕೆಯಲ್ಲಿ ಹಾಗೂ ವರಮಾನ ಮತ್ತು ಸಂಪತ್ತಿನ ಹಂಚಿಕೆಯಲ್ಲಿ ಹೊಂದಾಣಿಕೆ ಮಾಡುವುದರ ಜೊತೆಗೆ ಆರ್ಥಿಕ ಪರಿಸ್ಥಿತಿಯನ್ನು ಸಾಧಿಸುವುದು ರಾಜ್ಯಕೋಶ ನೀತಿಯ ಪ್ರಮುಖ ಗುರಿಯಾಗಿದೆ ಎಂದು ತಿಳಿಸಿದ್ದಾರೆ. ಭಾರತದಂತಹ ಅಭಿವೃದ್ಧಿ ಹೊಂದುತ್ತಿರುವ ಅರ್ಥವ್ಯವಸ್ಥೆಯಲ್ಲಿ ಕೋಶೀಯ ನೀತಿಯು ಈ ಕೆಳಕಂಡ ಗುರಿಗಳನ್ನು ಹೊಂದಿದೆ.

೧. ಬಂಡವಾಳ ಶೇಖರಣೆಗೆ ಪ್ರೋತ್ಸಾಹ ನೀಡುವುದು.
೨. ನೈಜ ಮತ್ತು ಹಣಕಾಸಿನ ಸಂಪನ್ಮೂಲಗಳನ್ನು ಖಾಸಗಿ ವಲಯಕ್ಕೆ ಧಕ್ಕೆಯಾಗದಂತೆ ಸಾರ್ವಜನಿಕ ವಲಯಕ್ಕೆ ಕ್ರೋಢೀಕರಿಸಿಕೊಡುವುದು.
೩. ನಿರುದ್ಯೋಗವನ್ನು ಹೋಗಲಾಡಿಸುವುದು.
೪. ಆರ್ಥಿಕ ಸ್ಥಿರತೆಯನ್ನು ಸಾಧಿಸುವುದು.
೫. ಬಂಡವಾಳ ಸಂಪನ್ಮೂಲವನ್ನು ಅನುತ್ಪಾದಕ ಚಟುವಟಿಕೆಗಳಿಂದ ಉತ್ಪಾದಕ ಚಟುವಟಿಕೆಗಳಿಗೆ ವರ್ಗಾಯಿಸುವುದು.
೬. ಅತಿ ಪ್ರಸರಣ ಅರ್ಥವ್ಯವಸ್ಥೆ ಮೇಲೆ ದುಷ್ಪರಿಣಾಮ ಉಂಟುಮಾಡದಂತೆ ಮಾಡುವುದು.
೭. ಅರ್ಥ ವ್ಯವಸ್ಥೆಯಲ್ಲಿ ಅಸಮತೋಲನೆಯನ್ನು ನಿವಾರಿಸುವುದು.
೮. ವರಮಾನ ಮತ್ತು ಸಂಪತ್ತಿನ ಹಂಚಿಕೆಯ ಅಸಮಾನತೆ ನಿವಾರಿಸುವುದು.
೯. ರಾಷ್ಟ್ರೀಯ ವರಮಾನ ಮತ್ತು ತಲಾವರಮಾನವನ್ನು ಹೆಚ್ಚಿಸುವುದರ ಮೂಲಕ ಆರ್ಥಿಕಾಭಿವೃದ್ಧಿ ಸಾಧಿಸುವುದು.
೧೦. ಬಡತನದ ವಿಷ ವೃತ್ತವನ್ನು ನಿವಾರಿಸುವುದು.

**ಕೋಶೀಯ ನೀತಿಯ ಪರಿಕರಗಳು** (Tools of Fiscal Policy)

ರಾಜ್ಯಕೋಶ ನೀತಿ ಅನೇಕ ಪರಿಕರಗಳನ್ನು ಒಳಗೊಂಡಿದೆ. ತೆರಿಗೆ ನೀತಿ, ಮುಂಗಡ ಪತ್ರದ ನೀತಿ, ಸಾರ್ವಜನಿಕ ವೆಚ್ಚದ ನೀತಿ, ಸಾರ್ವಜನಿಕ ಸಾಲದ ನೀತಿ ಹಾಗೂ ಕೊರತೆ ಹಣಕಾಸಿನ ನೀತಿ ಇದರ ಪ್ರಮುಖ ಪರಿಕರಗಳಾಗಿವೆ.

### ತೆರಿಗೆ ನೀತಿ

ಸರ್ಕಾರವು ಆರ್ಥಿಕ ಪ್ರಗತಿ ಮತ್ತು ಸ್ಥಿರತೆಯ ದೃಷ್ಟಿಯಿಂದ ತೆರಿಗೆ ನೀತಿಯನ್ನು ರೂಪಿಸುತ್ತದೆ. ಮುಗ್ಗಟ್ಟಿನ ಪರಿಸ್ಥಿತಿಯಲ್ಲಿ ಸಡಿಲ ತೆರಿಗೆ ನೀತಿಯನ್ನು ಅನುಸರಿಸಿ ಆರ್ಥಿಕ ಚಟುವಟಿಕೆಗಳಿಗೆ ಉತ್ತೇಜನವನ್ನು ನೀಡಲಾಗುತ್ತದೆ. ಹಣದುಬ್ಬರದ ಸಂದರ್ಭದಲ್ಲಿ ಕಠಿಣ ತೆರಿಗೆ ನೀತಿಯನ್ನು ಅನುಸರಿಸಲಾಗುತ್ತದೆ.

### ಸಾರ್ವಜನಿಕ ವೆಚ್ಚದ ನೀತಿ

ಸಾರ್ವಜನಿಕ ವೆಚ್ಚ ಕೋಶೀಯ ನೀತಿಯ ಪರಿಕರವಾಗಿದೆ. ದೇಶದಲ್ಲಿ ತೀವ್ರ ಪ್ರಗತಿ ಮತ್ತು ಸ್ಥಿರತೆ ಸಾಧಿಸುವಂತೆ ಸಾರ್ವಜನಿಕ ವೆಚ್ಚವನ್ನು ನಿರ್ವಹಿಸಬಹುದು. ಮುಗ್ಗಟ್ಟಿನ ಪರಿಸ್ಥಿತಿಯಲ್ಲಿ ಸಾಮಾಜಿಕ ವೆಚ್ಚವನ್ನು ಹೆಚ್ಚಿಸಲಾಗುತ್ತದೆ. ಹಣದುಬ್ಬರ ದರ ಪರಿಸ್ಥಿತಿಯಲ್ಲಿ ಸಾರ್ವಜನಿಕ ವೆಚ್ಚವನ್ನು ಕಡಿಮೆಮಾಡಲಾಗುತ್ತದೆ.

### ಸಾರ್ವಜನಿಕ ಸಾಲ

ಸಾರ್ವಜನಿಕ ಸಾಲವು ಕೋಶೀಯ ನೀತಿಯ ಮತ್ತೊಂದು ಪರಿಕರವಾಗಿದೆ. ಸರ್ಕಾರವು ಅಭಿವೃದ್ಧಿಗೆ ತಕ್ಕಂತೆ ಈ ಪರಿಕರವನ್ನು ಬಳಸಬಹುದು. ಸಾರ್ವಜನಿಕ ಸಾಲದ ಮರುಪಾವತಿ ಯಿಂದ ಮುಗ್ಗಟ್ಟು ನಿವಾರಣೆಯಾಗುತ್ತದೆ. ಹಣದುಬ್ಬರದ ಪರಿಸ್ಥಿತಿಯಲ್ಲಿ ಸಾರ್ವಜನಿಕ ಸಾಲ ಪಡೆದುಕೊಳ್ಳುವುದರಿಂದ ಪರಿಸ್ಥಿತಿ ಸುಧಾರಿಸುತ್ತದೆ.

### ಆಯವ್ಯಯ ಪಟ್ಟಿಯ ನೀತಿ

ಸರ್ಕಾರದ ಮುಂಗಡ ಪತ್ರ ಕೋಶೀಯ ನೀತಿಯ ಪ್ರಮುಖವಾದ ಪರಿಕರವಾಗಿದೆ. ಸಂಪ್ರದಾಯ ಅರ್ಥಶಾಸ್ತ್ರಜ್ಞರು ಸಮತೋಲನ ಆಯವ್ಯಯ ಪಟ್ಟಿಯನ್ನು ಸರ್ಕಾರವು ಅನುಸರಿಸಬೇಕೆಂದು ತಿಳಿಸಿದ್ದರು. ಜಿ.ಎಂ.ಸೀನ್ಸ್ ಕೊರತೆ ಆಯವ್ಯಯ ಪಟ್ಟಿಯನ್ನು ಪ್ರತಿಪಾದಿಸಿದ್ದಾರೆ. ಮುಗ್ಗಟ್ಟಿನ ಪರಿಸ್ಥಿತಿಯಲ್ಲಿ ಕೊರತೆ ಆಯವ್ಯಯ ಪಟ್ಟಿಯನ್ನು ಹಾಗೂ ಹಣದುಬ್ಬರದ ಪರಿಸ್ಥಿತಿಯಲ್ಲಿ ಹೆಚ್ಚುವರಿ ಆಯವ್ಯಯ ಪಟ್ಟಿಯನ್ನು ಸಾಮಾನ್ಯವಾಗಿ ಮಂಡಿಸಲಾಗುತ್ತದೆ.

### ಕೊರತೆ ಹಣಕಾಸಿನ ನೀತಿ

ಕೊರತೆ ಹಣಕಾಸು ಕೋಶೀಯ ನೀತಿಯ ಪರಿಕರವಾಗಿದೆ. ಈ ಪರಿಕರವನ್ನು ಮುಗ್ಗಟ್ಟಿನ ನಿವಾರಣೆಗೆ ಜೆ.ಎಂ.ಕೀನ್ಸ್ ಪ್ರತಿಪಾದಿಸಿರುತ್ತಾರೆ. ಸಾರ್ವಿಜನಿಕ ವೆಚ್ಚ ಸಾರ್ವಜನಿಕ ಆದಾಯಕ್ಕಿಂತ ಹೆಚ್ಚಾದಾಗ ಈ ತಂತ್ರವನ್ನು ಬಳಸಿ ಸರ್ಕಾರವು ಸಂಪನ್ಮೂಲವನ್ನು ಪಡೆದುಕೊಳ್ಳಬಹುದು. ಮುಗ್ಗಟ್ಟಿನ ಪರಿಸ್ಥಿತಿಯಲ್ಲಿ ಕೊರತೆ ಹಣಕಾಸಿನ ಪ್ರಮಾಣವನ್ನು ಹೆಚ್ಚಿಸಿ ಸಮಸ್ಯೆಯನ್ನು ನಿವಾರಿಸಬಹುದು. ಹಾಗೆಯೇ ಹಣದುಬ್ಬರದ ಪರಿಸ್ಥಿತಿಯಲ್ಲಿ ಕೊರತೆ ಹಣಕಾಸಿನ ಪ್ರಮಾಣವನ್ನು ಕಡಿಮೆ ಮಾಡಬೇಕಾಗುತ್ತದೆ.

### ಮುಂಗಡ ಪತ್ರ (Budget)

ಸರ್ಕಾರದ ವರಮಾನ ಮತ್ತು ವೆಚ್ಚದ ವಿವರಗಳನ್ನು ಒಂದು ನಿರ್ದಿಷ್ಟ ಅವಧಿಗೆ ತೋರಿಸುವ ಪಟ್ಟಿಗೆ ಮುಂಗಡ ಪತ್ರ ಅಥವಾ ಬಜೆಟ್ ಎಂದು ಕರೆಯುತ್ತಾರೆ. ಸರ್ಕಾರವು ತನ್ನ ಪ್ರಗತಿಪರ ಕಾರ್ಯಕ್ರಮಗಳನ್ನು ಬಜೆಟ್ ಮುಖಾಂತರ ವ್ಯಕ್ತಪಡಿಸುತ್ತದೆ. ಆಯವ್ಯಯ ಪಟ್ಟಿಯನ್ನು ಒಂದು ವರ್ಷದ ಅವಧಿಗೆ ತಯಾರಿಸಲಾಗುತ್ತದೆ. ಇದು ಮುಂಬರುವ ವರ್ಷದಲ್ಲಿ ಸರ್ಕಾರದ ವರಮಾನ ಮತ್ತು ವೆಚ್ಚವನ್ನು ತಿಳಿಸುತ್ತದೆ. ಅಂದರೆ ಆಯ ವ್ಯಯ ಪಟ್ಟಿಯನ್ನು ಹಣಕಾಸಿನ ವರ್ಷಾರಂಭಕ್ಕೆ ಮುನ್ನವೇ ತಯಾರಿಸಲಾಗುತ್ತದೆ. ಈ ಕಾರಣದಿಂದ ಆಯವ್ಯಯ ಪಟ್ಟಿಗೆ ಮುಂಗಡ ಪತ್ರವೆಂದು ಕರೆಯುತ್ತಾರೆ. ಸಾಮಾನ್ಯವಾಗಿ ಮುಂಗಡ ಪತ್ರವನ್ನು ಹಣಕಾಸಿನ ಮಂತ್ರಿ ಸಿದ್ಧಪಡಿಸಿ ಶಾಸಕಾಂಗದ ಅನುಮೋದನೆಗೆ ಮಂಡಿಸುತ್ತಾರೆ. ಶಾಸಕಾಂಗದ ಅನುಮೋದನೆ ನಂತರ ಬಜೆಟ್ ಕಾರ್ಯರೂಪಕ್ಕೆ ಬರುತ್ತದೆ.

ಮುಂಗಡ ಪತ್ರದ ಬಗ್ಗೆ ಅರ್ಥಶಾಸ್ತ್ರಜ್ಞರು ವ್ಯಾಖ್ಯೆಯನ್ನು ನೀಡಿರುತ್ತಾರೆ. W.E. ವಿಲ್ಲೋಬಿರವರ ಪ್ರಕಾರ "ಆಯವ್ಯಯವು ಅಂದಾಜು ಮತ್ತು ಪ್ರಸ್ತಾವನೆಗಳ ವರದಿಯಾಗಿದ್ದು, ಹಣಕಾಸಿನ ಆಡಳಿತದ ಪ್ರಕ್ರಿಯೆ ಮತ್ತು ಸಮನ್ವಯ ಸಾಧನವಾಗಿರುತ್ತದೆ." ಪ್ರೊ. ಬ್ಯಾಸ್ಟಬಲ್‌ರವರ ಪ್ರಕಾರ, "ಆಯವ್ಯಯ ಒಂದು ನಿರ್ದಿಷ್ಟ ಅವಧಿಯ ಹಣಕಾಸಿನ ಏರ್ಪಾಡಾಗಿರುತ್ತದೆ." ಹೀಗೆ ಬಜೆಟ್ ಹಣಕಾಸಿನ ಹೇಳಿಕೆಯಾಗಿದ್ದು ಸರ್ಕಾರದ ಕಾರ್ಯಕ್ರಮ ಮತ್ತು ನೀತಿಗಳ ವಿವರವಾದ ಸಾರ್ವಜನಿಕ ದಾಖಲೆಯಾಗಿದೆ.

ಮುಂಗಡಪತ್ರವು ಆದಾಯ ಮತ್ತು ವೆಚ್ಚದ ವಿವರಗಳನ್ನೊಳಗೊಂಡ ಎರಡು ಭಾಗಗಳನ್ನು ಹೊದಿದೆ. ಆದಾಯದ ಭಾಗದಲ್ಲಿ ತೆರಿಗೆ ಮತ್ತು ತೆರಿಗೇತರ ವರಮಾನದ ಮೂಲಗಳು ಹಾಗೂ ಈ ಮೂಲಗಳಿಂದ ದೊರೆಯುವ ವರಮಾನದ ವಿವರಗಳಿರುತ್ತವೆ. ವೆಚ್ಚದ ವಿಭಾಗದಲ್ಲಿ ಅಭಿವೃದ್ಧಿ ಮತ್ತು ಅಭಿವೃದ್ಧಿಯೇತರ ವೆಚ್ಚದ ವಿವರಗಳಿರುತ್ತವೆ. ಸಾಮಾಜಿಕ ವರಮಾನ ಮತ್ತು ವೆಚ್ಚದ ಅಂತರವನ್ನು ಸರಿದೂಗಿಸಿರುವುದು ವಿವರಗಳನ್ನು ಸಹ ಬಜೆಟ್ ಹೊಂದಿರುತ್ತದೆ.

### ಬಜೆಟ್‌ನ ವಿಧಗಳು (Types of Budget)

ವರಮಾನ ಮತ್ತು ವೆಚ್ಚದ ಆಧಾರದ ಮೇಲೆ ಆಯ ವ್ಯಯ ಪಟ್ಟಿಯನ್ನು ಹೆಚ್ಚುವರಿ ಆಯವ್ಯಯ ಪಟ್ಟಿ, ಸಮತೋಲನ ಆಯವ್ಯಯ ಪಟ್ಟಿ ಮತ್ತು ಕೊರತೆ ಆಯವ್ಯಯ ಪಟ್ಟಿ ಎಂದು ಮೂರು ವಿಧಗಳಾಗಿ ವಿಂಗಡಿಸಬಹುದು.

### ಸಮತೋಲನ ಆಯವ್ಯಯ ಪಟ್ಟಿ (Balanced Budget)

ಸರ್ಕಾರದ ವರಮಾನ ಮತ್ತು ವೆಚ್ಚ ಸಮನಾಗಿರುವಂತಹ ಆಯ ವ್ಯಯಕ್ಕೆ ಸಮತೋಲನ ಬಜೆಟ್ ಎಂದು ಕರೆಯುತ್ತಾರೆ. ಸಂಪ್ರದಾಯ ಅರ್ಥಶಾಸ್ತ್ರಜ್ಞರು ಸಮತೋಲನ ಆಯವ್ಯಯ ಪಟ್ಟಿಯನ್ನು ಪ್ರತಿಪಾದಿಸಿದ್ದರು. ಹಣಕಾಸಿನ ಸುರಕ್ಷತೆ ದೃಷ್ಟಿಯಿಂದ ದೀರ್ಘಾವಧಿಯಲ್ಲಿ ಸಮತೋಲನ ಬಜೆಟ್ ಸಹಾಯಕವಾಗಿರುತ್ತದೆ.

**ಹೆಚ್ಚುವರಿ ಬಜೆಟ್ (Surplus Budget)**

ಸಾರ್ವಜನಿಕ ವೆಚ್ಚಕ್ಕಿಂತ ಸಾರ್ವಜನಿಕ ವರಮಾನ ಹೆಚ್ಚಾಗಿರುವ ಆಯವ್ಯಯ ಪಟ್ಟಿಗೆ ಹೆಚ್ಚುವರಿ ಬಜೆಟ್ ಎಂದು ಕರೆಯುತ್ತಾರೆ. ಸಂಪ್ರದಾಯ ಅರ್ಥಶಾಸ್ತ್ರಜ್ಞರು ಹೆಚ್ಚುವರಿ ಬಜೆಟನ್ನು ಪ್ರತಿಪಾದಿಸಿದ್ದರು. ಹಣದುಬ್ಬರದ ಸಂದರ್ಭದಲ್ಲಿ ಹೆಚ್ಚುವರಿ ಬಜೆಟ್ ಸೂಕ್ತವಾಗಿರುತ್ತದೆ.

**ಕೊರತೆ ಬಜೆಟ್ (Dificit Budget)**

ಸಾರ್ವಜನಿಕ ವರಮಾನಕ್ಕಿಂತ ವೆಚ್ಚ ಹೆಚ್ಚಾಗಿರುವ ಆಯವ್ಯಯ ಪಟ್ಟಿಯನ್ನು ಕೊರತೆಯ ಬಜೆಟ್ ಎಂದು ಕರೆಯುತ್ತಾರೆ. ಆಧುನಿಕ ಅರ್ಥಶಾಸ್ತ್ರಜ್ಞರು ಕೊರತೆಯ ಬಜೆಟನ್ನು ಪ್ರತಿಪಾದಿಸಿದ್ದಾರೆ. ಮುಗ್ಗಟ್ಟಿನ ಪರಿಸ್ಥಿತಿ ನಿವಾರಣೆಗೆ ಜೆ.ಎಂ.ಕೀನ್ಸ್ ಕೊರತೆ ಹಣಕಾಸಿನ ನೀತಿಯನ್ನು ಸಲಹೆ ಮಾಡಿರುತ್ತಾರೆ.

## ೮.೨ ಸಾರ್ವಜನಿಕ ಆದಾಯ

ಭಾರತದಲ್ಲಿ ಸಂಯುಕ್ತ ಕೋಶೀಯ ವ್ಯವಸ್ಥೆ ಜಾರಿಯಲ್ಲಿದ್ದು ಸಂವಿಧಾನದನ್ವಯ ಕೇಂದ್ರ ಸರ್ಕಾರ ಮತ್ತು ರಾಜ್ಯತ ಸರ್ಕಾರಗಳು ಬೇರೆ ಬೇರೆ ವರಮಾನದ ಮೂಲಗಳನ್ನು ಹೊಂದಿವೆ. ಸಾರ್ವಜನಿಕ ಆದಾಯವು ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ವರಮಾನದ ವಿಶ್ಲೇಷಣೆ ಮಾಡುತ್ತದೆ. ಹಣಕಾಸಿನ ಆಯೋಗ ತೆರಿಗೆ ವರಮಾನ ಹಂಚಿಕೆ ಬಗ್ಗೆ ಅಧ್ಯಯನ ನಡೆಸಿ ಸಲಹೆಗಳನ್ನು ನೀಡುತ್ತದೆ.

**ಕೇಂದ್ರ ಸರ್ಕಾರದ ವರಮಾನ ಮೂಲಗಳು**

ಕೇಂದ್ರ ಸರ್ಕಾರದ ಆದಾಯ ಮೂಲಗಳನ್ನು ಎರಡು ಬಗೆಯಾಗಿ ವಿಂಗಡಿಸಬಹುದು. ಕೇಂದ್ರ ಸರ್ಕಾರವು ತೆರಿಗೆ ಮತ್ತು ತೆರಿಗೆಯೇತರ ಮೂಲಗಳಿಂದ ವರಮಾನವನ್ನು ಪಡೆದುಕೊಳ್ಳುತ್ತದೆ. ಕೇಂದ್ರ ಸರ್ಕಾರವು ವರಮಾನ, ಆಸ್ತಿಗಳು ಮತ್ತು ಸರಕುಗಳ ಮೇಲೆ ತೆರಿಗೆಯನ್ನು ವಿಧಿಸಿ ವರಮಾನವನ್ನು ಪಡೆದುಕೊಳ್ಳುತ್ತದೆ. ವೈಯಕ್ತಿಕ ವರಮಾನ ತೆರಿಗೆ ಮತ್ತು ಕಾರ್ಪೋರೇಷನ್ ತೆರಿಗೆ ಕೇಂದ್ರ ಸರ್ಕಾರವು ವರಮಾನದ ಮೇಲೆ ವಿಧಿಸುವ ತೆರಿಗೆಗಳಾಗಿವೆ. ಹಾಗೆಯೇ ಕೇಂದ್ರ ಸರ್ಕಾರವು ಸಂಪತ್ತು ಹಾಗೂ ಕೊಡುಗೆ ಮೇಲೆ ವಿಧಿಸುವ ತೆರಿಗೆ ಆಸ್ತಿಗಳ ಮೇಲೆ ವಿಧಿಸುವ ತೆರಿಗಗಳಾಗಿವೆ. ಕೇಂದ್ರ ಅಬ್ಕಾರಿ ಸುಂಕ, ಮೌಲ್ಯಾವರ್ಧಿತ ತೆರಿಗೆ, ಆಮದು ತೆರಿಗೆ ಹಾಗೂ ರಫ್ತು ತೆರಿಗೆಗಳು ಸರಕುಗಳ ಮೇಲೆ ವಿಧಿಸುವ ತೆರಿಗೆಗಳಾಗಿವೆ. ವೈಯಕ್ತಿಕ ವರಮಾನ ತೆರಿಗೆ ಮತ್ತು ಕೇಂದ್ರ ಅಬ್ಕಾರಿ ಸುಂಕದಿಂದ ಬರುವ ವರಮಾನವನ್ನು ಕೇಂದ್ರ ಸರ್ಕಾರವು ಹಣಕಾಸು ಆಯೋಗದ ಶಿಫಾರಸ್ಸಿನಂತೆ ರಾಜ್ಯ ಸರ್ಕಾರಗಳೊಂದಿಗೆ ಹಂಚಿಕೊಳ್ಳಬೇಕಾಗುತ್ತದೆ.

ಕೇಂದ್ರ ಸರ್ಕಾರವು ತೆರಿಗೆಯೇತರ ಮೂಲಗಳಿಂದ ಪಡೆದುಕೊಳ್ಳುವ ವರಮಾನವನ್ನು ತೆರಿಗೆಯೇತರ ವರಮಾನವೆಂದು ಕರೆಯುತ್ತಾರೆ. ಸಾಮಾಜಿಕ ಮತ್ತು ಆರ್ಥಿಕ ಸೇವೆಗಳಿಗೆ ವಿಧಿಸುವ ಶುಲ್ಕ, ಟಂಕಸಾಲೆಯಲ್ಲಿ ಕರೆನ್ಸಿ ಮುದ್ರಣದಿಂದ ದೊರೆಯುವ ಆದಾಯ, ಸಾಲದ ಮೇಲೆ ದೊರೆಯುವ ಬಡ್ಡಿ, ಸಾರ್ವಜನಿಕ ಉದ್ದಿಮೆಗಳ ಲಾಭ ವಿದೇಶಗಳಿಂದ ದೊರೆಯುವ ದಾನ ಹಾಗೂ ಧನ ಸಹಾಯ ರೂಪದಲ್ಲಿ ಕೇಂದ್ರದ ತೆರಿಗೆಯೇತರ ವರಮಾನವಿರುತ್ತದೆ.

### ರಾಜಸ್ವ ಸ್ವೀಕೃತಿನ

ಸರ್ಕಾರವು ತೆರಿಗೆ ಮತ್ತು ತೆರಿಗೆಯೇತರ ಮೂಲಗಳಿಂದ ಪಡೆದುಕೊಳ್ಳುವ ಒಟ್ಟು ವರಮಾನವನ್ನು ರಾಜಸ್ವ ವರಮಾನವೆಂದು ಕರೆಯುತ್ತಾರೆ. ಭಾರತ ಸರ್ಕಾರದ ರಾಜಸ್ವ ವರಮಾನವು ೧೯೫೧ರಲ್ಲಿ ೪೦೬ ಕೋಟಿ ರೂ.ಗಳಿಂದ ೨೦೦೪-೦೫ರಲ್ಲಿ ಮುಂಗಡ ಪತ್ರದ ಅಂದಾಜಿನ ಪ್ರಕಾರ ೩೮೯೩೨೨ ಕೋಟಿಗಳಿಗೆ ಹೆಚ್ಚಾಗಿದೆ.

### ಬಂಡವಾಳ ಸ್ವೀಕೃತಿ

ಸರ್ಕಾರವು ಅಭಿವೃದ್ಧಿ ಮತ್ತು ಯೋಜನಾ ಕಾರ್ಯಕ್ರಮಗಳನ್ನು ಜಾರಿಗೆ ತರಲು ವಿವಿಧ ಮೂಲಗಳಿಂದ ಹೊಸದಾಗಿ ಪಡೆದುಕೊಳ್ಳುವ ಸಾಲರೂಪದ ವರಮಾನವನ್ನು ಬಂಡವಾಳ ಸ್ವೀಕೃತಿ ಎಂದು ಕರೆಯುತ್ತಾರೆ. ಇದರ ವಿವರಗಳನ್ನು ಬಂಡವಾಳ ಸ್ವೀಕೃತಿ ಲೆಕ್ಕದಲ್ಲಿ ನೀಡಲಾಗಿರುತ್ತದೆ. ಕೇಂದ್ರ ಸರ್ಕಾರದ ಬಂಡವಾಳ ಸ್ವೀಕೃತಿ ೧೯೫೦-೫೧ರಲ್ಲಿ ೨೦೪೬ ಕೋಟಿ ರೂ.ಗಳಿಂದ ೨೦೦೪-೦೫ರ ಮುಂಗಡ ಪತ್ರದ ಅಂದಾಜಿನಲ್ಲಿ ೧,೬೮,೫೦೭ ಕೋಟಿ ರೂ.ಗಳಿಗೆ ಹೆಚ್ಚಾಗಿದೆ. ಕೇಂದ್ರ ಸರ್ಕಾರದ ಒಟ್ಟು ವರಮಾನ ಈ ಅವಧಿಯಲ್ಲಿ ೫೩೩೯ ಕೋಟಿ ರೂ.ಗಳಿಂದ ೪,೭೭,೮೨೯ ಕೋಟಿ ರೂ.ಗಳಿಗೆ ಹೆಚ್ಚಾಗಿದೆ.

ಕೇಂದ್ರ ಸರ್ಕಾರದ ತೆರಿಗೆ ರಾಜಸ್ವದ ಮೂಲಗಳ ವಿಶ್ಲೇಷಣೆಯಿಂದ ರಾಜಸ್ವ ಸ್ವೀಕೃತಿಯ ಪ್ರವೃತ್ತಿಯಲ್ಲಾಗುತ್ತಿರುವ ಬದಲಾವಣೆಯನ್ನು ತಿಳಿದುಕೊಳ್ಳಬಹುದು.

### ವೈಯಕ್ತಿಕ ವರಮಾನ ತೆರಿಗೆ

ವ್ಯಕ್ತಿಯ ಆದಾಯದ ಮೇಲೆ ಕೃಷಿಕರ ವರಮಾನವನ್ನು ಹೊರತುಪಡಿಸಿ ಕೇಂದ್ರ ಸರ್ಕಾರವು ವಿಧಿಸುವ ತೆರಿಗೆಯೇ ವೈಯಕ್ತಿಕ ವರಮಾನ ತೆರಿಗೆಯಾಗಿದೆ. ಇದು ನೇರ ಹಾಗೂ ಪ್ರಗತಿಪರ ತೆರಿಗೆಯಾಗಿದೆ. ತೆರಿಗೆ ವಿನಾಯಿತಿ ಮಟ್ಟವನ್ನು ಒಂದು ಲಕ್ಷರೂಗಳೆಂದು ಗೊತ್ತು ಪಡಿಸಲಾಗಿದೆ. ಈ ವಿನಾಯಿತಿ ಮಟ್ಟವನ್ನು ಉದ್ಯೋಗಸ್ಥ ಮಹಿಳೆಯರು ಮತ್ತು ಹಿರಿಯ ನಾಗರೀಕರಿಗೆ ಸಡಿಲಿಸಲಾಗಿದೆ. ಹಾಗೆಯೇ ಒಂದು ಲಕ್ಷ ರೂ.ಗಳ ವರೆಗೆ ಉಳಿತಾಯ ಮಾಡಿದ ಹಣಕ್ಕೆ ವಿನಾಯಿತಿಯನ್ನು ಕೊಡಲಾಗಿದೆ, ವರಮಾನದ ಮಟ್ಟ ಬದಲಾದಂತೆ ತೆರಿಗೆಯ ದರ ವ್ಯತ್ಯಾಸವಾಗುತ್ತದೆ. ವೈಯಕ್ತಿಕ ವರಮಾನ ತೆರಿಗೆಯಿಂದ ಪಡೆದುಕೊಂಡ ವರಮಾನ ೧೯೫೦-೫೧ರಲ್ಲಿ ೧೧೪ ಕೋಟಿ ರೂ.ಗಳಿಂದ ೨೦೦೪-೦೫ರ ಮುಂಗಡ ಪತ್ರದ ಅಂದಾಜಿನಲ್ಲಿ ೩೫,೫೪೩ ಕೋಟಿ ರೂ.ಗಳಿಗೆ ಹೆಚ್ಚಾಗಿದೆ.

**ಕಾರ್ಪೊರೇಷನ್ ತೆರಿಗೆ**

ಕೇಂದ್ರ ಸರ್ಕಾರವು ಉದ್ಯಮ ಮತ್ತು ಕಂಪೆನಿಗಳು ಗಳಿಸುವ ವರಮಾನದ ಮೇಲೆ ವಿಧಿಸುವ ತೆರಿಗೆಯನ್ನು ಕಾರ್ಪೊರೇಷನ್ ತೆರಿಗೆ ಎಂದು ಕರೆಯುತ್ತಾರೆ. ಇದು ಸಹ ನೇರ ಮತ್ತು ಪ್ರಗತಿಪರ ತೆರಿಗೆಯಾಗಿದೆ. ಕಾರ್ಪೊರೇಷನ್ ತೆರಿಗೆಯಿಂದ ಪಡೆದುಕೊಂಡ ವರಮಾನ ೧೯೫೦-೫೧ರಲ್ಲಿ ೩೬೧ ಕೋಟಿ ರೂ.ಗಳಿಂದ ೨೦೦೪-೦೫ರ ಮುಂಗಡ ಪತ್ರದ ಅಂದಾಜಿನಲ್ಲಿ ೬೩,೬೩೨ ಕೋಟಿರೂ.ಗಳಿಗೆ ಹೆಚ್ಚಾಗಿದೆ.

**ಸಂಪತ್ತಿನ ತೆರಿಗೆ**

ಭಾರತದಲ್ಲಿ ಪ್ರೊ.ಕಾಲ್ಡಾರ್ ಸಮಿತಿಯ ಶಿಫಾರಸ್ಸಿನ ಮೇರೆಗೆ ಸಂಪತ್ತಿನ ತೆರಿಗೆಯನ್ನು ೧೯೫೭ರಲ್ಲಿ ವಿಧಿಸಲಾಯಿತು. ವ್ಯಕ್ತಿಗಳು ಮತ್ತು ಅವಿಭಕ್ತ ಕುಟುಂಬ ಹೊಂದಿರುವ ಸಂಪತ್ತಿನ ಮೇಲೆ ಈ ತೆರಿಗೆಯನ್ನು ವಿಧಿಸಲಾಗುತ್ತದೆ. ಇದು ನೇರ ಮತ್ತು ಪ್ರಗತಿಪರ ತೆರಿಗೆಯಾಗಿದ್ದು ಉದ್ಯಮಗಳಿಗೆ ಸಂಪತ್ತಿನ ತೆರಿಗೆಯಿಂದ ವಿನಾಯಿತಿಯನ್ನು ನೀಡಲಾಗಿದೆ. ಈ ತೆರಿಗೆಯಿಂದ ಕೇಂದ್ರ ಸರ್ಕಾರವು ೨೦೦೧-೦೨ರಲ್ಲಿ ೧೪೫ ಕೋಟಿ ರೂ.ಗಳ ವರಮಾನವನ್ನು ಪಡೆದುಕೊಂಡಿದೆ.

**ವೆಚ್ಚದ ತೆರಿಗೆ**

ವ್ಯಕ್ತಿಗಳ ಅನುಭೋಗ ವೆಚ್ಚದ ಮೇಲೆ ಕೇಂದ್ರ ಸರ್ಕಾರವು ವಿಧಿಸುವ ತೆರಿಗೆಗೆ ವೆಚ್ಚದ ತೆರಿಗೆ ಎಂದು ಕರೆಯುತ್ತಾರೆ. ಇದು ನೇರ ತೆರಿಗೆಯಾಗಿದ್ದು ಕೇಂದ್ರ ಸರ್ಕಾರವು ೨೦೦೧-೦೨ರಲ್ಲಿ ೩೩೦ ಕೋಟಿ ರೂ.ಗಳ ವರಮಾನವನ್ನು ಪಡೆದುಕೊಂಡಿದೆ.

**ದಾನದ ತೆರಿಗೆ**

ಸಂಪತ್ತಿನ ತೆರಿಗೆ ಕಳ್ಳತನವನ್ನು ತಪ್ಪಿಸುವುದಕ್ಕಾಗಿ ದಾನದ ತೆರಿಗೆಯನ್ನು ಭಾರತದಲ್ಲಿ ೧೯೫೮ ರಿಂದ ವ್ಯಕ್ತಿಗಳು, ಅವಿಭಕ್ತ ಕುಟುಂಬ ಮತ್ತು ಉದ್ಯಮಗಳ ಮೇಲೆ ವಿಧಿಸಲಾಗುತ್ತಿದೆ. ಕೊಡುಗೆ ನೀಡುವ ವ್ಯಕ್ತಿ ದಾನದ ತೆರಿಗೆಯನ್ನು ನೀಡಬೇಕಾಗುತ್ತದೆ. ೧೯೯೮ರಲ್ಲಿ ದಾನದ ಕೊಡುಗೆಯನ್ನು ರದ್ಧುಪಡಿಸಲಾಯಿತು.

**ಮರಣಾಂತರ ತೆರಿಗೆ**

ವ್ಯಕ್ತಿಯ ಮರಣದ ನಂತರ ಆಸ್ತಿಗಳನ್ನು ಪಡೆದುಕೊಳ್ಳುವವರು ಕೇಂದ್ರ ಸರ್ಕಾರಕ್ಕೆ ಮರಣಾಂತರ ತೆರಿಗೆಯನ್ನು ಕೊಡಬೇಕಾಗುತ್ತದೆ. ಈ ತೆರಿಗೆಯನ್ನು ೧೯೫೩ರಲ್ಲಿ ಜಾರಿಗೆ ತಂದು ೧೯೮೬ರಲ್ಲಿ ರದ್ದುಪಡಿಸಲಾಗಿದೆ.

**ಬಂಡವಾಳ ಲಾಭದ ಮೇಲಿನ ತೆರಿಗೆ**

ಬಂಡವಾಳ ಆಸ್ತಿಗಳ ಮಾರಾಟದಿಂದ ಗಳಿಸುವ ಲಾಭದ ಮೇಲೆ ಬಂಡವಾಳ ಲಾಭ ತೆರಿಗೆಯನ್ನು ವಿಧಿಸಲಾಗುತ್ತದೆ. ಈ ತೆರಿಗೆಯನ್ನು ಕೇಂದ್ರ ಸರ್ಕಾರವು ೧೯೪೭ರಲ್ಲಿ ಜಾರಿಗೆ

ತಂದು ೧೯೫೦ರಲ್ಲಿ ರದ್ದು ಪಡಿಸಿತ್ತು. ನಂತರ ೧೯೫೬ರಲ್ಲಿ ಬಂಡವಾಳ ಲಾಭದ ತೆರಿಗೆಯನ್ನು ಮತ್ತೆ ಜಾರಿಗೆ ತರಲಾಗಿದೆ.

### ಬಡ್ಡಿಯ ಮೇಲಿನ ತೆರಿಗೆ

ವಾಣಿಜ್ಯ ಬ್ಯಾಂಕುಗಳು ಬಡ್ಡಿರೂಪದಲ್ಲಿ ಗಳಿಸುವ ವರಮಾನದ ಮೇಲೆ ಕೇಂದ್ರ ಸರ್ಕಾರವು ವಿಧಿಸುವ ತೆರಿಗೆಗೆ ಬಡ್ಡಿ ಮೇಲಿನ ತೆರಿಗೆ ಎಂದು ಕರೆಯುತ್ತಾರೆ. ಈ ತೆರಿಗೆಯನ್ನು ೧೯೭೪ರಲ್ಲಿ ಜಾರಿಗೆ ತಂದು ೧೯೮೬ರಲ್ಲಿ ರದ್ದುಪಡಿಸಲಾಗಿತ್ತು. ನಂತರ ಬಡ್ಡಿ ತೆರಿಗೆಯನ್ನು ೧೯೯೧ ರಿಂದ ವಿಧಿಸಲಾಗುತ್ತಿದೆ. ಕೇಂದ್ರ ಸರ್ಕಾರವು ೧೦೦೦ ಕೋಟಿ ರೂ.ಗಳ ವರಮಾನವನ್ನು ೧೯೯೯-೨೦೦೦ ವರ್ಷದಲ್ಲಿ ಪಡೆದುಕೊಂಡಿದೆ.

### ಕೇಂದ್ರ ಅಬ್ಕಾರಿ ಸುಂಕ

ಕೇಂದ್ರ ಸರ್ಕಾರವು ಕೈಗಾರಿಕೆಗಳಲ್ಲಿ ಸರಕುಗಳು ಉತ್ಪಾದನೆಯಾಗುವ ಪ್ರಾರಂಭದ ಹಂತದಲ್ಲಿ ವಿಧಿಸುವ ತೆರಿಗೆಯನ್ನು ಕೇಂದ್ರ ಅಬ್ಕಾರಿ ಸುಂಕವೆಂದು ಕರೆಯುತ್ತಾರೆ. ಇದು ಸರಕುಗಳ ಮೇಲೆ ವಿಧಿಸುವ ಪರೋಕ್ಷ ತೆರಿಗೆಯಾಗಿದೆ. ಮಧ್ಯಪಾನ ಮತ್ತು ಮಾದಕ ವಸ್ತುಗಳನ್ನು ಈ ತೆರಿಗೆಯಿಂದ ಹೊರತುಪಡಿಸಿ ರಾಜ್ಯ ಸರ್ಕಾರಗಳಿಗೆ ಬಿಟ್ಟುಕೊಡಲಾಗಿದೆ. ಮಾದಕ ವಸ್ತುಗಳು ಮತ್ತು ಮಧ್ಯಸಾರದ ಮೇಲೆ ರಾಜ್ಯ ಸರ್ಕಾರಗಳು ವಿಧಿಸುವ ತೆರಿಗೆಗೆ ರಾಜ್ಯ ಅಬ್ಕಾರಿ ಸುಂಕವೆಂದು ಕರೆಯುತ್ತಾರೆ. ಇದರ ವರಮಾನವನ್ನು ಕೇಂದ್ರ ಸರ್ಕಾರವು ರಾಜ್ಯ ಸರ್ಕಾರಗಳ ಜೊತೆಗೆ ಹಣಕಾಸಿನ ಆಯೋಗದ ಶಿಫಾರಸ್ಸಿನಂತೆ ಹಂಚಿಕೊಳ್ಳುತ್ತದೆ. ಕೇಂದ್ರ ಸರ್ಕಾರವು ಅಬ್ಕಾರಿ ಸುಂಕದಿಂದ ಪಡೆದುಕೊಂಡ ವರಮಾನ ೧೯೭೦-೭೧ರಲ್ಲಿ ೧೫೬೯ ಕೋಟಿ ರೂ.ಗಳಷ್ಟಿದ್ದು ೨೦೦೪-೦೫ ಮುಂಗಡ ಪತ್ರ ಅಂದಾಜಿನಲ್ಲಿ ೮೪೫೮೨ ಕೋಟಿ ರೂ.ಗಳಿಗೆ ಹೆಚ್ಚಾಗಿದೆ.

ಆರ್ಥಿಕ ಸುಧಾರಣೆಯನಂತರ ಕೇಂದ್ರ ಅಬ್ಕಾರಿ ಸುಂಕದಲ್ಲಿ ಅನೇಕ ಬದಲಾವಣೆ ಗಳಾಗುತ್ತಿವೆ. ಅಬ್ಕಾರಿ ಸುಂಕ ದರ ಕಡಿಮೆ ಮಾಡುವುದರ ಜೊತೆಗೆ ನಿರ್ದಿಷ್ಟ ಸುಂಕ ವಿಧಿಸುವ ಸರಕುಗಳನ್ನು ಕಡಿಮೆ ಮಾಡಲಾಗಿದೆ. ಉತ್ಪಾದನಾಂಗದ ಮೇಲಿನ ಅಬ್ಕಾರಿ ಸುಂಕಗಳಿಗೆ ಪರಿಹಾರವನ್ನು ಒದಗಿಸಿ ಸಿದ್ಧ ವಸ್ತುಗಳ ಮೇಲೆ ಮಾತ್ರ ಅಬ್ಕಾರಿ ಸುಂಕ ವಿಧಿಸುವ ಪರಿಷ್ಕೃತ ಮೌಲ್ಯವರ್ಧಿತ ಸುಂಕವನ್ನು ಜಾರಿಗೆ ತರಲಾಗಿದೆ. ಇದಕ್ಕೆ Mod Vat ಎಂದು ಕರೆಯುತ್ತಾರೆ. ರಾಜ.ಜೆ.ಚಲ್ಲಯ್ಯ ಸಮಿತಿಯು ಅಬ್ಕಾರಿ ಸುಂಕದಲ್ಲಿ ಮಾರ್ಪಾಡು ಮಾಡಲು ಶಿಫಾರಸ್ಸು ಮಾಡಿದೆ. ಇತ್ತೀಚಿನ ದಿನಗಳಲ್ಲಿ ಮೌಲ್ಯ ವರ್ಧಿತ ತೆರಿಗೆಯನ್ನು (VAT) ರಾಷ್ಟ್ರಾದ್ಯಂತ ಪರಿಣಾಮಕಾರಿಯಾಗಿ ಜಾರಿಗೆ ತರಲು ಪ್ರಯತ್ನ ನಡೆಸಲಾಗುತ್ತಿದೆ.

### ಸೀಮಾ ಸುಂಕ

ಕೇಂದ್ರ ಸರ್ಕಾರವು ವಿದೇಶಿ ವ್ಯಾಪಾರದ ಮೇಲೆ ವಿಧಿಸುವ ತೆರಿಗೆಯನ್ನು ಸೀಮಾ ಸುಂಕವೆಂದು ಕರೆಯುತ್ತಾರೆ. ಸೀಮಾ ಸುಂಕ ಆಮದು ಸುಂಕವಾಗಿರಬಹುದು ಅಥವಾ

ರಫ್ತು ಸುಂಕವಾಗಿರಬಹುದು. ಸೀಮಾ ಸುಂಕ ಸರಕುಗಳ ಮೇಲೆ ವಿಧಿಸುವ ಪರೋಕ್ಷ ತೆರಿಗೆಯಾಗಿದೆ. ಆರ್ಥಿಕ ಸುಧಾರಣೆಯಿಂದ ಸೀಮಾ ಸುಂಕದಲ್ಲಿ ಸಹ ಮಾರ್ಪಾಟುಗಳಾಗಿವೆ. ಸೀಮಾ ಸುಂಕದಿಂದ ಪಡೆದುಕೊಂಡ ವರಮಾನ ೧೯೭೦-೭.೧ರಲ್ಲಿ ೫೨೪ ಕೋಟಿ ರೂ.ಗಳಷ್ಟಿದ್ದು ೨೦೦೪-೦೫ರ ಮುಂಗಡ ಪತ್ರ ಅಂದಾಜಿನಲ್ಲಿ ೩೮೯೬೧ ಕೋಟಿ ರೂ.ಗಳಿಗೆ ಹೆಚ್ಚಾಗಿದೆ.

### ತೆರಿಗೆಯೇತರ ವರಮಾನ

ಕೇಂದ್ರ ಸರ್ಕಾರದ ತೆರಿಗೆಯೇತರ ವರಮಾನದ ಸುಧಾರಣೆಗೆ ಕ್ರಮಗಳನ್ನು ತೆಗೆದುಕೊಳ್ಳಲಾಗುತ್ತಿದೆ. ಸಾರ್ವಜನಿಕ ಉದ್ದಿಮೆಗಳಿಗೆ ಉತ್ತರ ವಾದಿತ್ವವನ್ನು ಹೊರಿಸಲಾಗಿದೆ. ಹಾಗೆಯೇ ಉದ್ದಿಮೆ ಮತ್ತು ಸಂಸ್ಥೆಗಳಿಗೆ ಸ್ವಾಯತ್ತತೆಯನ್ನು ನೀಡಲಾಗುತ್ತಿದೆ. ಕೇಂದ್ರ ಸರ್ಕಾರದ ತೆರಿಗೆಯೇತರ ವರಮಾನ ೧೯೭೦-೭೧ರಲ್ಲಿ ೮೪೨ ಕೋಟಿ ರೂ.ಗಳಷ್ಟಿದ್ದು ೨೦೦೪-೦೫ರ ಮುಂಗಡ ಪತ್ರದ ಅಂದಾಜಿನಲ್ಲಿ ೭೫೪೧೬ ಕೋಟಿ ರೂ.ಗಳಿಗೆ ಹೆಚ್ಚಾಗಿದೆ.

### ರಾಜ್ಯ ಸರ್ಕಾರಗಳ ರಾಜಸ್ವ ಮೂಲಗಳು

ಕೇಂದ್ರ ಸರ್ಕಾರದಂತೆ ರಾಜ್ಯ ಸರ್ಕಾರಗಳು ಸಹ ತೆರಿಗೆ ಮತ್ತು ತೆರಿಗೆಯೇತರ ಮೂಲಗಳಿಂದ ವರಮಾನವನ್ನು ಪಡೆದುಕೊಳ್ಳುತ್ತಿವೆ. ಇದರ ಜೊತಗೆ ರಾಜ್ಯ ಸರ್ಕಾರಗಳು ಕೇಂದ್ರದಿಂದ ತೆರಿಗೆ ಪಾಲು ಹಾಗೂ ಸಹಾಯಧನ ರೂಪದಲ್ಲಿ ಸಹ ವರಮಾನವನ್ನು ಸ್ವೀಕರಿಸುತ್ತವೆ. ಕೃಷಿವರಮಾನ ತೆರಿಗೆ ಹಾಗೂ ವೃತ್ತಿ ತೆರಿಗೆಗಳು ರಾಜ್ಯ ಸರ್ಕಾರ ವರಮಾನದ ಮೇಲೆ ವಿಧಿಸುವ ತೆರಿಗೆಗಳಾಗಿವೆ. ಹಾಗೆಯೇ ಭೂ ಕಂದಾಯ, ಸ್ಟಾಂಪು ತೆರಿಗೆ, ನೊಂದಣಿ ಶುಲ್ಕ, ನಗರ ಆಸ್ತಿ ತೆರಿಗೆ ರಾಜ್ಯ ಸರ್ಕಾರ ಆಸ್ತಿಗಳ ಮೇಲೆ ವಿತರಿಸುವ ತೆರಿಗೆಗಳಾಗಿವೆ. ರಾಜ್ಯ ಅಬ್ಕಾರಿ ಸುಂಕ, ವಾಣಿಜ್ಯ ತೆರಿಗೆ ಮತ್ತು ಮೌಲ್ಯವರ್ಧಿತ ತೆರಿಗೆ ಸರಕುಗಳ ಮೇಲೆ ವಿಧಿಸುವ ತೆರಿಗೆಯಾಗಿದೆ. ಇವುಗಳ ಜೊತೆಗೆ ಮಾರಾಟ ವಾಹನ ತೆರಿಗೆ, ಮನೋರಂಜನೆ ತೆರಿಗೆ ಹಾಗೂ ವಿದ್ಯುಚ್ಛಕ್ತಿ ತೆರಿಗೆಗಳಿಂದ ರಾಜ್ಯಗಳು ವರಮಾನವನ್ನು ಪಡೆದುಕೊಳ್ಳುತ್ತಿದೆ.

ರಾಜ್ಯ ಸರ್ಕಾರಗಳು ತೆರಿಗೆಯೇತರ ವರಮಾನವನ್ನು ಕೇಂದ್ರದ ಸಹಾಯಧನ, ತೆರಿಗೆಯ ಪಾಲು, ಯೋಜನಾ ಆಯೋಗ ನೀಡುವ ಪಾಲು, ರಾಜ್ಯ ಸರ್ಕಾರದ ಉದ್ದಿಮೆಗಳು ಗಳಿಸುವ ಲಾಭ, ಲಾಟರಿ, ಶುಲ್ಕ, ಫೀಜು ಇನ್ನು ಮುಂತಾದ ರೂಪಗಳಲ್ಲಿ ಪಡೆದುಕೊಳ್ಳುತ್ತಿವೆ.

ರಾಜ್ಯ ಸರ್ಕಾರಗಳ ಒಟ್ಟು ವರಮಾನವು ೧೯೭೦-೭೧ರಲ್ಲಿ ೫೦೩೩ ಕೋಟಿ ರೂ.ಗಳಷ್ಟಿದ್ದು ೨೦೦೪-೦೫ರಲ್ಲಿ ೫,೪,೨೯೫ ಕೋಟಿ ರೂ.ಗಳಿಗೆ ಹೆಚ್ಚಾಗಿದೆ. ತೆರಿಗೆ ರೂಪದ ವರಮಾನ ಈ ಅವಧಿಯಲ್ಲಿ ೨೨೮೪ ಕೋಟಿ ರೂ.ಗಳಿಂದ ೨,೬೦,೩೨೬ ಕೋಟಿ ರೂ.ಗಳಿಗೆ ಹೆಚ್ಚಾಗಿದೆ. ತೆರಿಗೆಯೇತರ ವರಮಾನ ೧೯೭೦-೭೧ರಲ್ಲಿ ೧೦೮೭ ಕೋಟಿ ರೂ.ಗಳಿದ್ದು ೨೦೦೪-೦೫ ಮುಂಗಡ ಪತ್ರದ ಅಂದಾಜಿನಲ್ಲಿ ೧,೦೭,೧೦೨ ಕೋಟಿ ರೂ.ಗಳಿಗೆ ಹೆಚ್ಚಾಗಿದೆ.

## ಆಂತರಿಕ ಮತ್ತು ಬಾಹ್ಯ ಸಾಲ

ಕೇಂದ್ರ ಸರ್ಕಾರವು ಸಾಲ ಎತ್ತುವುದರ ಮೂಲಕ ಬಂಡವಾಳ ರೂಪದಲ್ಲಿ ವರಮಾನವನ್ನು ಪಡೆದುಕೊಳ್ಳುತ್ತದೆ. ಆಂತರಿಕ ಮತ್ತು ಬಾಹ್ಯ ಸಾಲವು ರಾಜಸ್ವದ ಮೂಲವಾಗಿದೆ. ಸರ್ಕಾರವು ದೇಶದ ಒಳಗೆ ಪಡೆದುಕೊಳ್ಳುವ ಸಾಲಕ್ಕೆ ಆಂತರಿಕಸಾಲವೆಂದು ಕರೆಯುತ್ತಾರೆ. ವಿದೇಶಿ ಸಂಸ್ಥೆಗಳು, ಸರ್ಕಾರ ಹಾಗೂ ವ್ಯಕ್ತಿಗಳಿಂದ ಪಡೆದುಕೊಳ್ಳುವ ಸಾಲವನ್ನು ಬಾಹ್ಯ ಸಾಲವೆಂದು ಕರೆಯುತ್ತಾರೆ. ಆಂತರಿಕ ಸಾಲವನ್ನು ಸಾಮಾನ್ಯವಾಗಿ ನಿವೃತ್ತಿ ಗೊಳಿಸಬೇಕಾಗಿಲ್ಲ. ಹೊಸ ಸಾಲವನ್ನು ಎತ್ತುವುದರ ಮೂಲಕ ಹಳೆ ಸಾಲವನ್ನು ಮರುಪಾವತಿ ಮಾಡಲಾಗುತ್ತದೆ. ಆದರೆ ವಿದೇಶಿ ಸಾಲವನ್ನು ಹಿಂತಿರುಗಿಸಬೇಕಾಗಿದ್ದು ಸಾಲದ ಮರುಪಾವತಿಯಿಂದ ಸಂನ್ಮೂಲಗಳು ವಿದೇಶಗಳಿಗೆ ವರ್ಗಾವಣೆಯಾಗುತ್ತದೆ. ಇತ್ತೀಚಿನ ದಿನಗಳಲ್ಲಿ ಮುಂಗಡ ಪತ್ರದ ಕೊರತೆ ನಿವಾರಣೆ ದೃಷ್ಟಿಯಿಂದ ಸಾರ್ವಜನಿಕ ಸಾಲ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ.

ಆಂತಿರಕ ಸಾಲದಲ್ಲಿ ಮಾರುಕಟ್ಟೆ ಬಂಡವಾಳ, ಸಾಲಪತ್ರ ಮಾರಾಟ, ವಿಶೇಷ ವಾಹಕ ಬಾಂಡುಗಳು, ರಿಸರ್ವ ಬ್ಯಾಂಕಿನಿಂದ ಪಡೆದಸಾಲ, ಹುಂಡಿ ಮತ್ತು ಭದ್ರತೆಯಿಂದ ಪಡೆದ ಮುಂಗಡ, ಸಣ್ಣ ಉಳಿತಾಯ, ಭವಿಷ್ಯ ನಿಧಿಗಳು, ವಿಮೆ-ವಿಶ್ರಾಂತಿ ವೇತನ ನಿಧಿ, ಅಂಚೆ ಕಛೇರಿ ಠೇವಣಿಗಳು ಸೇರ್ಪಡೆಯಾದ ಅಂಶಗಳಾಗಿರುತ್ತವೆ. ಭಾರತ ಸರ್ಕಾರದ ಆಂತರಿಕ ಸಾಲವು ೧೯೮೦.೮೧ರಲ್ಲಿ ೩೦೮೬೪ ಕೋಟಿ ರೂ.ಗಳಷ್ಟಿದ್ದು ೨೦೦೪-೦೫ರ ಮುಂಗಡ ಪತ್ರದ ಅಂದಾಜಿನಲ್ಲಿ ೧೨,೯೧,೬೨೭ ಕೋಟಿ ರೂ.ಗಳಿಗೆ ಹೆಚ್ಚಾಗಿದೆ.

ಕೇಂದ್ರ ಸರ್ಕಾರವು ಅಂತರ ರಾಷ್ಟ್ರೀಯ ಹಣಕಾಸಿನ ಸಂಸ್ಥೆಗಳಾದ ಹಣಕಾಸು ನಿಧಿ, ವಿಶ್ವ ಬ್ಯಾಂಕು, ಅಭಿವೃದ್ಧಿ ಸಂಘ ಹಾಗೂ ಮಿತ್ರರಾಷ್ಟ್ರಗಳಿಂದ ಬಾಹ್ಯ ಸಾಲವನ್ನು ಪಡೆದುಕೊಂಡು ಅಂದಾಜು ಪತ್ರದ ಕೊರತೆಯನ್ನು ನೀಗಿಸಿಕೊಳ್ಳುತ್ತಿದೆ. ಬಾಹ್ಯ ಸಾಲವು ೧೯೮೦-೮೧ರಲ್ಲಿ ೧,೧೨,೯೮ ಕೋಟಿ ರೂ.ಗಳಷ್ಟಿದ್ದು ೨೦೦೪-೦೫ರ ಮುಂಗಡ ಪತ್ರದ ಅಂದಾಜಿನಲ್ಲಿ ೫೦೮೪ ಕೋಟಿ ರೂ.ಗಳಿಗೆ ಹೆಚ್ಚಾಗಿದೆ.

## ಮೌಲ್ಯವರ್ಧಿತ ತೆರಿಗೆ

ಮೌಲ್ಯ ವರ್ಧಿತ ತೆರಿಗೆಯು ಸರಕುಗಳ ಮೇಲೆ ವಿಧಸುವ ತೆರಿಗೆಯಾಗಿದೆ. ವಿವಿಧ ಹಂತಗಳಲ್ಲಿ ಸರಕಿನ ಮೇಲೆ ವಿಧಿಸಲಾಗುವ ತೆರಿಗೆಯನ್ನು ಮೌಲ್ಯವರ್ಧಿತ ತೆರಿಗೆ ಎಂದು ಕರೆಯುತ್ತಾರೆ. ಇದು ತೆರಿಗೆಯ ವ್ಯವಸ್ಥೆಯಲ್ಲಿ ಒಂದು ಮಹತ್ವದ ಸಂಶೋಧನೆಯಾಗಿದೆ. ಈ ತೆರಿಗೆಯು ಹೆಚ್ಚಿನ ಪ್ರಮಾಣದ ವರಮಾನವನ್ನು ಸಂಗ್ರಹಿಸಲು ನೆರವಾಗುತ್ತದೆಂದು ಭಾವಿಸಲಾಗಿದೆ, ಇತ್ತೀಚಿನ ದಿನಗಳಲ್ಲಿ ಈ ತೆರಿಗೆಯು ಹೆಚ್ಚಿನ ಪ್ರಮಾಣದ ವರಮಾನವನ್ನು ಸಂಗ್ರಹಿಸಲು ನೆರವಾಗುತ್ತದೆಂದು ಭಾವಿಸಲಾಗಿದೆ, ಇತ್ತೀಚಿನ ದಿನಗಳಲ್ಲಿ ಈ ತೆರಿಗೆಯು ಹೆಚ್ಚಿನ ಜನಪ್ರಿಯತೆಯನ್ನು ಪಡೆದಿದೆ, ಸಾಮಾನ್ಯವಾಗಿ ಉತ್ಪಾದನೆ ಮತ್ತು ಹಂಚಿಕೆಯ

ಪ್ರಕ್ರಿಯೆಯಲ್ಲಿ ಸರಕುಗಳಿಗೆ ಸೇರಿಸಲ್ಪಡುವ ಮೌಲ್ಯದ ಮೇಲೆ ಹಂತ ಹಂತವಾಗಿ ವಿಧಿಸುವ ತೆರಿಗೆಯನ್ನು ಮೌಲ್ಯವರ್ಧಿತ ತೆರಿಗೆ ಎಂದು ಕರೆಯಬಹುದು. ಪರೋಕ್ಷ ತೆರಿಗೆ ವಿಚಾರಣಾ ಸಮಿತಿಯ ಪ್ರಕಾರ ೧೯೭೮ರ ರಫ್ತು ಮತ್ತು ಸರ್ಕಾರದ ಸೇವೆಯನ್ನು ಹೊರತುಪಡಿಸಿ ಎಲ್ಲಾ ಸರಕು ಮತ್ತು ಸೇವೆಗಳ ಮೇಲೆ ವಿಧಿಸುವ ತೆರಿಗೆ ಮೌಲ್ಯವರ್ಧಿತ ತೆರಿಗೆಯಾಗಿದೆ. ಈ ತೆರಿಗೆಯನ್ನು ಉತ್ಪಾದನೆ ಹಂತದಿಂದ ಚಿಲ್ಲರೆ ವ್ಯಾಪಾರದ ವರೆಗೆ ಪ್ರತಿ ಹಂತದಲ್ಲಿ ಸರಕು ಮತ್ತು ಸೇವೆಗಳಿಗೆ ಸೇರಲ್ಪಟ್ಟ ಮೌಲ್ಯದ ಮೇಲೆ ವಿಧಿಸಲಾಗುತ್ತದೆ.

ಮೌಲ್ಯವರ್ಧಿತ ತೆರಿಗೆಯನ್ನು ಕೇಂದ್ರ ಸರ್ಕಾರವು ಏಪ್ರಿಲ್ ೧, ೨೦೦೫ ರಿಂದ ಜಾರಿಗೆ ತಂದಿದೆ. ರಾಜ್ಯ ಸರ್ಕಾರಗಳು ಕೇಂದ್ರ ಮೌಲ್ಯವರ್ಧಿತ ತೆರಿಗೆಯನ್ನು ಜಾರಿಗೆ ತರಲು ಅವಕಾಶ ಮಾಡಿಕೊಟ್ಟರೆ ಸಂಪನ್ಮೂಲ ಸಂಗ್ರಹಣೆಗೆ ಮತ್ತು ತೆರಿಗೆಯ ದಕ್ಷ ಆಡಳಿತಕ್ಕೆ ಪರಿಸ್ಥಿತಿ ನಿರ್ಮಾಣವಾಗುತ್ತದೆ. ಈಗ ಮೌಲ್ಯವರ್ಧಿತ ತೆರಿಗೆಯ ಅನುಕೂಲ ಮತ್ತು ಅನಾನುಕೂಲಗಳನ್ನು ಪರಿಶೀಲಿಸೋಣ.

### ಅನುಕೂಲಗಳು

೧. ಮೌಲ್ಯವರ್ಧಿತ ತೆರಿಗೆಯು ತೆರಗೆ ತಪ್ಪಿಸುವಿಕೆಯನ್ನು ಕಡಿಮೆ ಮಾಡುತ್ತದೆ.
೨. ಮೌಲ್ಯವರ್ಧಿತ ತೆರಿಗೆ ರಫ್ತಿನ ಉತ್ತೇಜನ ನೀಡುತ್ತದೆ.
೩. ಇದು ಸರಳವಾದ ಮತ್ತು ಏಕ ಹಂತದಲ್ಲಿ ವಿಧಿಸಬಹುದಾದ ತೆರಿಗೆಯಾಗಿದೆ.
೪. ಈ ತೆರಿಗೆಯು ಉತ್ಪಾದನಾ ಕ್ಷೇತ್ರದಲ್ಲಿ ಹೂಟೆಗೆ ಅವಕಾಶ ಮಾಡಿಕೊಡುತ್ತದೆ.
೫. ಸಂಪನ್ಮೂಲ ಹಂಚಿಕೆಗೆ ಸಂಬಂಧಿಸಿದಂತೆ ಮೌಲ್ಯ ವರ್ಧಿತ ತೆರಿಗೆ ಸಹಾಯಕವಾಗಿದೆ.
೬. ಉತ್ಪಾದನಾ ಕ್ಷೇತ್ರದಲ್ಲಿ ದಕ್ಷತೆ ಹೆಚ್ಚಿಸಲು ಮೌಲ್ಯವರ್ಧಿತ ತೆರಿಗೆ ಸಹಾಯಕವಾಗಿದೆ.
೭. ಮೌಲ್ಯವರ್ಧಿತ ತೆರಿಗೆ ಆಡಳಿತಾತ್ಮಕ ದೃಷ್ಟಿಯಿಂದ ಸಹ ಅನುಕೂಲಕರವಾಗಿರುತ್ತದೆ.
೮. ಮೌಲ್ಯವರ್ಧಿತ ತೆರಿಗೆಯು ಅಡ್ಡ ಲೆಕ್ಕ ಪರಿಶೋಧನೆಯ ಅನುಕೂಲತೆಯನ್ನು ಹೊಂದಿರುತ್ತದೆ.
೯. ಮೌಲ್ಯವರ್ಧಿತ ತೆರಿಗೆ ಇತರೆ ತೆರಿಗೆಗಳಿಗೆ ಒಳ್ಳೆಯ ಪರ್ಯಾಯ ತೆರಿಗೆಯಾಗಿದೆ.

### ಅನಾನುಕೂಲಗಳು

೧. ಮೌಲ್ಯವರ್ಧಿತ ತೆರಿಗೆ ಸಾಮಾಜಿಕ ನ್ಯಾಯ ಮತ್ತು ಸಮಾನತೆ ದೃಷ್ಟಿಯಿಂದ ಪ್ರಾಮುಖ್ಯತೆಯನ್ನು ಪಡೆದುಕೊಂಡಿರುವುದಿಲ್ಲ.
೨. ಈ ತೆರಿಗೆಯಲ್ಲಿ ಆಡಳಿತ ವೆಚ್ಚ ಹೆಚ್ಚಾಗಿದ್ದು ಮಿತವ್ಯಯದ ಅನುಕೂಲತೆ ಕಂಡುಬರುವುದಿಲ್ಲ.
೩. ಸಣ್ಣ ವ್ಯಾಪಾರೋದ್ಯಮಿಗಳಿಗೆ ಇದರ ನೀತಿ ನಿಯಮಗಳನ್ನು ಪಾಲಿಸುವುದು ಕಷ್ಟವಾಗುತ್ತದೆ.

೪. ಆಡಳಿತ ವ್ಯವಸ್ಥೆಯಲ್ಲಿ ದಕ್ಷತೆ ಹೆಚ್ಚಿಸದಿದ್ದರೆ ಮೌಲ್ಯವರ್ಧಿತ ತೆರಿಗೆ, ತೆರಿಗೆ ತಪ್ಪಿಸುವುದಕ್ಕೆ ಅವಕಾಶ ಮಾಡಿಕೊಡುತ್ತದೆ.

೫. ಮೌಲ್ಯವರ್ಧಿತ ತೆರಿಗೆಯು ಹಣದುಬ್ಬರಕ್ಕೆ ಅವಕಾಶ ಮಾಡಿಕೊಡುವ ಸಾಧ್ಯತೆ ಇರುತ್ತದೆ.

೬. ಮೌಲ್ಯವರ್ಧಿತ ತೆರಿಗೆಯಲ್ಲಿ ನಿರೀಕ್ಷಿಸಿದಂತೆ ಹೆಚ್ಚು ವರಮಾನವನ್ನು ಸಂಗ್ರಹಿಸುವುದು ಕಷ್ಟ.

೭. ಮೌಲ್ಯವರ್ಧಿತ ತೆರಿಗೆಯು ಕ್ಲಿಷ್ಟಕರವಾದ ತೆರಿಗೆಯಾಗಿದ್ದು ಇದಕ್ಕೆ ಲೆಕ್ಕ ಪತ್ರಗಳನ್ನಿಡುವುದು ಕಷ್ಟದ ಕೆಲಸವಾಗಿರುತ್ತದೆ.

೮. ಮೌಲ್ಯವರ್ಧಿತ ತೆರಿಗೆ ಭಾರತದಂತಹ ಕೊರತೆ ಅರ್ಥ ವ್ಯವಸ್ಥೆಯಲ್ಲಿ ದಕ್ಷತೆಯನ್ನು ಹೆಚ್ಚಿಸುವುದಿಲ್ಲ.

೯. ಭಾರತದಲ್ಲಿ ಕೇಂದ್ರ ಮೌಲ್ಯವರ್ಧಿತ ತೆರಿಗೆ ಜಾರಿಗೆ ತರಲು ರಾಜ್ಯ ಸರ್ಕಾರಗಳ ಬೆಂಬಲ ಪಡೆಯುವುದು ಕಷ್ಟದ ಕೆಲಸ.

೧೦. ಸೇವಾ ವಲಯದಲ್ಲಿ ಮೌಲ್ಯವರ್ಧಿತ ತೆರಿಗೆ ಪರಿಣಾಮಕಾರಿಯಾಗಿ ಜಾರಿಗೆ ತರುವುದು ಕಷ್ಟ.

## ೮.೩. ಸಾರ್ವಜನಿಕ ವೆಚ್ಚ

ಸರ್ಕಾರವು ಅಭಿವೃದ್ಧಿ ಮತ್ತು ಅಭಿವೃದ್ಧಿಯೇತರ ಚಟುವಟಿಕೆಗಳ ಮೇಲೆ ಮಾಡುವ ವೆಚ್ಚವನ್ನು ಸಾರ್ವಜನಿಕ ವೆಚ್ಚವೆಂದು ಕರೆಯುತ್ತಾರೆ. ಭಾರತ ಸರ್ಕಾರವು ಸಮಾಜವಾದಿ ತತ್ವದ ಆಧಾರದ ಮೇಲೆ ಕಾರ್ಯಕ್ರಮಗಳನ್ನು ರೂಪಿಸಿ ಜಾರಿಗೆ ತರುತ್ತಿರುವುದರಿಂದ ಸಾರ್ವಜನಿಕ ವೆಚ್ಚ ಹೆಚ್ಚಾಗುತ್ತಿದೆ. ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ವೆಚ್ಚವು ನಿರಪೇಕ್ಷವಾಗಿ ಮತ್ತು ಸರ್ಕಾರದ ವೆಚ್ಚವನ್ನು ರಾಜಸ್ವ ವೆಚ್ಚ ಮತ್ತು ಬಂಡವಾಳ ವೆಚ್ಚವೆಂದು ವರ್ಗೀಕರಿಸಬಹುದು.

### ರಾಜಸ್ವ ವೆಚ್ಚ (Revenue Expenditure)

ಸಾಮಾನ್ಯವಾಗಿ ಪ್ರಸಕ್ತ ವರ್ಷದಲ್ಲಿ ತೆರಿಗೆ ಮತ್ತು ತೆರಿಗೆಯೇತರ ಮೂಲಗಳಿಂದ ಬರುವ ವರಮಾನವನ್ನು ಅಭಿವೃದ್ಧಿಯೇತರ ಹಾಗೂ ಯೋಜನೇತರ ಕಾರ್ಯಕ್ರಮಗಳ ಮೇಲೆ ವೆಚ್ಚಮಾಡುವುದಕ್ಕೆ ರಾಜಸ್ವ ವೆಚ್ಚವೆಂದು ಕರೆಯುತ್ತಾರೆ. ರಾಜಸ್ವ ವೆಚ್ಚದಲ್ಲಿ ರಕ್ಷಣಾ ವೆಚ್ಚ, ಆಡಳಿತ ವೆಚ್ಚ, ಬಡ್ಡಿ ಪಾವತಿ, ಸಹಾಯಧನ ನೀಡಿಕೆ, ಅನುದಾನ, ಸಾಮಾಜಿಕ ಹಾಗೂ ಆರ್ಥಿಕ ಸೇವೆಗಳ ಮೇಲೆ ಮಾಡುವ ನಾಗರೀಕ ವೆಚ್ಚಗಳು ಸೇರಿವೆ. ಈ ವೆಚ್ಚವು ಆರ್ಥಿಕಾಭಿವೃದ್ಧಿಗೆ ನೇರವಾಗಿ ಸಹಾಯಕವಾಗದೆ ಸಾಮಾಜಿಕ ಮತ್ತು ಆರ್ಥಿಕ ಸೇವೆಗೆ ತಗಲುವ ವೆಚ್ಚವಾಗಿರುತ್ತದೆ. ಆದ್ದರಿಂದ ರಾಜಸ್ವ ವೆಚ್ಚವು ಸರ್ಕಾರದ ಅಭಿವೃದ್ಧಿಯೇತರ

ಮತ್ತು ಯೋಜನೇತರ ವೆಚ್ಚವಾಗಿರುತ್ತದೆ. ಕೇಂದ್ರ ಸರ್ಕಾರದ ರಾಜಸ್ವ ವೆಚ್ಚವು ೧೯೭೦-೭೧ರಲ್ಲಿ ೩೧೩೦ ಕೋಟಿ ರೂ.ಗಳಷ್ಟಿದ್ದು ೨೦೦೪-೦೫ರ ಮುಂಗಡ ಪತ್ರದ ಅಂದಾಜಿನಲ್ಲಿ ೩,೮೫,೪೯೩ ಕೋಟಿ ರೂ.ಗಳಿಗೆ ಹೆಚ್ಚಾಗಿದೆ.

**ಬಂಡವಾಳ ವೆಚ್ಚ** (Capital Expenditure)

ಸರ್ಕಾರವು ಹೊಸದಾಗಿ ಸಾಲವನ್ನು ಪಡೆದುಕೊಂಡು ಅಭಿವೃದ್ಧಿ ಮತ್ತು ಯೋಜನಾ ಕಾರ್ಯಕ್ರಮಗಳ ಮೇಲೆ ಮಾಡುವ ವೆಚ್ಚವನ್ನು ಬಂಡವಾಳ ವೆಚ್ಚವೆಂದು ಕರೆಯುತ್ತಾರೆ. ಬಂಡವಾಳ ವೆಚ್ಚವನ್ನು ಯೋಜನಾ ವೆಚ್ಚವೆಂದು ಸಹ ಕರೆಯುತ್ತಾರೆ. ಬಂಡವಾಳ ವೆಚ್ಚವನ್ನು ಸಾಮಾನ್ಯವಾಗಿ ಕೃಷಿ, ಕೈಗಾರಿಕೆ, ಸಾರಿಗೆ ಸಂಪರ್ಕ ವ್ಯವಸ್ಥೆ, ನೀರಾವರಿ, ವಿದ್ಯುಚ್ಛಕ್ತಿ ಇನ್ನು ಮುಂತಾದ ವರಮಾನವನ್ನು ಹೆಚ್ಚಿಸುವ ಚಟುವಟಿಕೆಗಳ ಮೇಲೆ ಮಾಡಲಾಗುತ್ತದೆ. ಈ ವೆಚ್ಚದಿಂದ ದೇಶದಲ್ಲಿ ಬಂಡವಾಳ ಸರಕುಗಳು ನಿರ್ಮಾಣವಾಗುವುದರ ಜೊತೆಗೆ ಉತ್ಪಾದನಾ ಸಾಮರ್ಥ್ಯ ಹೆಚ್ಚಾಗಿ ಉದ್ಯೋಗವಕಾಶಗಳು ಸೃಷ್ಟಿಯಾಗುತ್ತದೆ. ಕೇಂದ್ರ ಸರ್ಕಾರದ ಬಂಡವಾಳ ವೆಚ್ಚ ೧೯೭೦-೭೧ರಲ್ಲಿ ೨೪೯೪ ಕೋಟಿ ರೂ.ಗಳಷ್ಟಿದ್ದು ೨೦೦೪-೦೫ರ ಮುಂಗಡ ಪತ್ರದ ಅಂದಾಜಿನಲ್ಲಿ ೬೨೩೩೬ ಕೋಟಿ ರೂ.ಗಳಿಗೆ ಹೆಚ್ಚಾಗಿದೆ.

**ಯೋಜನಾ ವೆಚ್ಚ** (Plan Expenditure)

ಕೇಂದ್ರ ಸರ್ಕಾರದ ಆರ್ಥಿಕ ಯೋಜನೆಯಲ್ಲಿ ಸೇರಿಸಲ್ಪಟ್ಟಿರುವ ಕಾರ್ಯಕ್ರಮಗಳಲ್ಲಿ ಮಾಡುವ ವೆಚ್ಚವನ್ನು ಯೋಜನಾ ವೆಚ್ಚವೆಂದು ಕರೆಯುತ್ತಾರೆ. ಕೃಷಿ, ಗ್ರಾಮೀಣ ಅಭಿವೃದ್ಧಿ, ನೀರಾವರಿ, ಇಂಧನ, ಕೈಗಾರಿಕೆ, ಸಾರಿಗೆ ಸಂಪರ್ಕ ವ್ಯವಸ್ಥೆ, ಆರ್ಥಿಕ ಮತ್ತು ಸಾಮಾಜಿಕ ಸೇವೆಗಳ ಮೇಲೆ ಯೋಜನಾ ವೆಚ್ಚವನ್ನು ಮಾಡಲಾಗುತ್ತದೆ. ಭಾರತ ಸರ್ಕಾರದ ಯೋಜನಾ ವೆಚ್ಚವು ೧೯೮೦-೮೧ರಲ್ಲಿ ೧೩೩೨೭ ಕೋಟಿ ರೂ.ಗಳಾಗಿದ್ದು ೨೦೦೪-೦೫ರ ಮುಂಗಡ ಪತ್ರದ ಅಂದಾಜಿನಲ್ಲಿ ೨,೧೪,೧೦೮ ಕೋಟಿ ರೂ.ಗಳಿಗೆ ಹೆಚ್ಚಾಗಿದೆ.

**ಯೋಜನೇತರ ವೆಚ್ಚ** (Non plan Expenditure)

ಸಾಮಾನ್ಯವಾಗಿ ಕೇಂದ್ರ ಸರ್ಕಾರವು ರಕ್ಷಣೆ, ಬಡ್ಡಿ, ಪಾವತಿ, ಸಹಾಯಧನ, ಆಡಳಿತ, ಆರ್ಥಿಕ ಮತ್ತು ಸಾಮಾಜಿಕ ಸೇವೆಗಳಿಗೆ ಮಾಡುವ ವೆಚ್ಚವನ್ನು ಯೋಜನೇತರ ವೆಚ್ಚವೆಂದು ಕರೆಯಲಾಗುತ್ತದೆ. ಇದನ್ನು ಅಭಿವೃದ್ಧಿಯೇತರ ವೆಚ್ಚವೆಂದು ಸಹ ಕರೆಯಲಾಗುತ್ತದೆ. ಕೇಂದ್ರ ಸರ್ಕಾರದ ಯೋಜನೇತರ ವೆಚ್ಚ ೧೯೮೦-೮೧ರಲ್ಲಿ ೯೮೬೭ ಕೋಟಿ ರೂ.ಗಳಷ್ಟಿದ್ದು ೨೦೦೪-೦೫ರ ಮುಂಗಡ ಪತ್ರ ಅಂದಾಜಿನಲ್ಲಿ ೨,೭೮,೨೧೨ ಕೋಟಿ ರೂ.ಗಳಿಗೆ ಹೆಚ್ಚಾಗಿದೆ. ಈ ಯೋಜನೇತರ ವೆಚ್ಚದ ವಿವರಗಳನ್ನು ವರ್ಗೀಕರಿಸಿ ತಿಳಿದುಕೊಳ್ಳೋಣ.

**ರಕ್ಷಣಾ ವೆಚ್ಚ**

ಕೇಂದ್ರ ಸರ್ಕಾರವು ರಕ್ಷಣಾ ಚಟುವಟಿಕೆಗಳ ಮೇಲೆ ಮಾಡುವ ವೆಚ್ಚವನ್ನು ರಕ್ಷಣಾ

ವೆಚ್ಚವೆಂದು ಕರೆಯುತ್ತಾರೆ. ಕಾಶ್ಮೀರದ ಬಿಕ್ಕಟ್ಟು ರಕ್ಷಣಾ ವೆಚ್ಚ ಹೆಚ್ಚಾಗುವಂತೆ ಮಾಡಿದೆ. ರಕ್ಷಣಾ ವೆಚ್ಚ ೧೯೭೦-೭೧ರಲ್ಲಿ ೩೧೭೦ ಕೋಟಿ ರೂ.ಗಳಷ್ಟಿದ್ದು ೨೦೦೪-೦೫ರ ಮುಂಗಡ ಪತ್ರದ ಅಂದಾಜಿನಲ್ಲಿ ೪೩,೫೧೭ ಕೋಟಿ ರೂ.ಗಳಿಗೆ ಹೆಚ್ಚಾಗಿದೆ.

## ಬಡ್ಡಿ ಪಾವತಿ

ಯೋಜನಾ ಮತ್ತು ಯೋಜನೇತರ ವೆಚ್ಚವನ್ನು ಸರಿದೂಗಿಸಲು ಕೇಂದ್ರ ಸರ್ಕಾರವು ಪಡೆದುಕೊಂಡ ಸಾಲದ ಮೇಲೆ ಬಡ್ಡಿಯನ್ನು ಪಾವತಿಸಬೇಕಾಗಿದೆ. ಈ ರೀತಿಯ ಬಡ್ಡಿ ಪಾವತಿ ವೆಚ್ಚ ೧೯೭೦-೭೧ರಲ್ಲಿ ೬೦೬ ಕೋಟಿ ರೂ.ಗಳಷ್ಟಿದ್ದು ೨೦೦೪-೦೫ರ ಮುಂಗಡ ಪತ್ರದ ಅಂದಾಜಿನಲ್ಲಿ ೧,೨೯,೫೦೦ ಕೋಟಿ ರೂ.ಗಳಿಗೆ ಹೆಚ್ಚಾಗಿದೆ.

## ಸಹಾಯ ಧನಗಳು

ಕೇಂದ್ರ ಸರ್ಕಾರವು ಕೃಷಿ ಉತ್ಪಾದನೆ ಹೆಚ್ಚಿಸಲು ಮತ್ತು ಬಡಜನರ ಹಿತ ರಕ್ಷಣೆ ದೃಷ್ಟಿಯಿಂದ ಆಹಾರ ಸಹಾಯಧನ, ಬಡ್ಡಿ ಸಹಾಯ ಧನ ಹಾಗೂ ರಸಗೊಬ್ಬರ ಸಹಾಯ ಧನವನ್ನು ನೀಡುತ್ತಿದೆ. ಈ ರೀತಿಯ ವೆಚ್ಚವು ೧೯೭೦-೭೧ರಲ್ಲಿ ೯೪ ಕೋಟಿ ರೂ.ಗಳಷ್ಟಿದ್ದು ೨೦೦೪-೦೫ರ ಮುಂಗಡ ಪತ್ರ ಅಂದಾಜಿನಲ್ಲಿ ೪೩,೫೧೬ ಕೋಟಿ ರೂ.ಗಳಿಗೆ ಹೆಚ್ಚಾಗಿದೆ.

## ಆರ್ಥಿಕ ಮತ್ತು ಸಾಮಾಜಿಕ ಸೇವೆಗಳು

ಕೇಂದ್ರ ಸರ್ಕಾರವು ಆರೋಗ್ಯ, ಶಿಕ್ಷಣ ಇನ್ನು ಮುಂತಾದ ಸಾಮಾಜಿಕ ಕಾರ್ಯಕ್ರಮಗಳ ಮೇಲೆ ಮಾಡುವ ವೆಚ್ಚವನ್ನು ಸಾಮಾಜಿಕ ವೆಚ್ಚವೆಂದು ಕರೆಯುತ್ತಾರೆ. ಸಾಮಾಜಿಕ ವೆಚ್ಚವು ೧೯೮೦-೮೧ರಲ್ಲಿ ೧೦೦೮ ಕೋಟಿ ರೂ.ಗಳಷ್ಟಿದ್ದು ೨೦೦೪-೦೫ರ ಆಯವ್ಯಯ ಪಟ್ಟಿಯ ಅಂದಾಜಿನಲ್ಲಿ ೨೫೪೮೫ ಕೋಟಿ ರೂ.ಗಳಿಗೆ ಹೆಚ್ಚಾಗಿದೆ.

ಕೇಂದ್ರ ಸರ್ಕಾರವು ಕೃಷಿ, ಕೈಗಾರಿಕೆ, ಸಾರಿಗೆ ಸಂಪರ್ಕ ವ್ಯವಸ್ಥೆ, ವಿದ್ಯುಚ್ಛಕ್ತಿ ಇನ್ನು ಮುಂತಾದ ಅಭಿವೃದ್ಧಿ ಕಾರ್ಯಕ್ರಮಗಳ ಮೇಲೆ ಮಾಡುವ ವೆಚ್ಚವನ್ನು ಆರ್ಥಿಕ ವೆಚ್ಚವೆಂದು ಕರೆಯುತ್ತಾರೆ. ಭಾರತ ಸರ್ಕಾರದ ಆರ್ಥಿಕ ವೆಚ್ಚವು ೧೯೮೦-೮೧ರಲ್ಲಿ ೫೬೪೪ ಕೋಟಿ ರೂ.ಗಳಷ್ಟಿದ್ದು ೨೦೦೪-೦೫ರ ಮುಂಗಡ ಪತ್ರದ ಅಂದಾಜಿನಲ್ಲಿ ೧,೧೫,೪೫೪ ಕೋಟಿ ರೂ.ಗಳಿಗೆ ಹೆಚ್ಚಾಗಿದೆ.

## ರಾಜ್ಯ ಸರ್ಕಾರಗಳಿಗೆ ನೀಡುವ ಅನುದಾನ

ಕೇಂದ್ರ ಸರ್ಕಾರವು ನಿರ್ದಿಷ್ಟ ಕಾರ್ಯಕ್ರಮಗಳನ್ನು ಜಾರಿಗೆ ತರಲು ಹಾಗೂ ನೈಸರ್ಗಿಕ ವಿಪತ್ತುಗಳನ್ನು ಬಗೆಹರಿಸಿಕೊಳ್ಳಲು ರಾಜ್ಯ ಸರ್ಕಾರಗಳಿಗೆ ಅನುದಾನವನ್ನು ನೀಡುತ್ತದೆ. ಅನುದಾನ ರೂಪದ ವೆಚ್ಚ ೨೦೦೧-೦೨ರ ಆಯವ್ಯಯ ಪಟ್ಟಿಯ ಅಂದಾಜಿನ ಪ್ರಕಾರ ೩೭,೬೪೦ ಕೋಟಿ ರೂ.ಗಳಾಗಿರುತ್ತವೆ. ಅನುದಾನವನ್ನು ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶಗಳಿಗೆ ಹಣಕಾಸು ಆಯೋಗದ ಶಿಫಾರಸ್ಸಿನಂತೆ ನೀಡಲಾಗುತ್ತದೆ.

### ರಾಜ್ಯ ಸರ್ಕಾರಗಳಿಗೆ ವೆಚ್ಚ ಬಾಬುಗಳು

ಕೇಂದ್ರ ಸರ್ಕಾರದಂತೆ ರಾಜ್ಯ ಸರ್ಕಾರಗಳು ಸಹ ರಾಷ್ಟ್ರ ನಿರ್ಮಾಣ ಹಾಗೂ ಕಾನೂನು ಶಿಸ್ತಿನ ಕ್ರಮಕ್ಕೆ ವೆಚ್ಚ ಮಾಡಬೇಕಾಗಿದೆ. ಸುಖರಾಜ್ಯ ನಿರ್ಮಾಣದ ಗುರಿಯಿಂದ ರಾಜ್ಯ ಸರ್ಕಾರಗಳ ವೆಚ್ಚ ಹೆಚ್ಚಾಗುತ್ತಿದೆ. ಸಾಮಾಜಿಕ ಮತ್ತು ಆರ್ಥಿಕ ಕಾರ್ಯಕ್ರಮಗಳ ಮೇಲೆ ರಾಜ್ಯ ಸರ್ಕಾರಗಳು ಹೆಚ್ಚು ವೆಚ್ಚ ಮಾಡಬೇಕಾಗಿದೆ. ರಾಜ್ಯ ಸರ್ಕಾರಗಳ ವೆಚ್ಚವನ್ನು ಕೇಂದ್ರದಂತೆ ಅಭಿವೃದ್ದಿ ವೆಚ್ಚ ಮತ್ತು ಅಭಿವೃದ್ದಿಯೇತರ ವೆಚ್ಚವೆಂದು ವರ್ಗೀಕರಿಸಬಹುದು. ಅಭಿವೃದ್ಧಿ ವೆಚ್ಚವನ್ನು ಸಾಮಾಜಿಕ ಮತ್ತು ಆರ್ಥಿಕ ಸೇವೆಗಳ ಮೇಲೆ ಮಾಡಲಾಗುತ್ತದೆ. ಶಿಕ್ಷಣ, ಕಲೆ ಸುಸಂಸ್ಕೃತಿ, ಸಾರ್ವಜನಿಕ ಆರೋಗ್ಯ ಇನ್ನು ಮುಂತಾದವುಗಳ ಮೇಲೆ ಸಾಮಾಜಿಕ ವೆಚ್ಚವನ್ನು ಮಾಡಲಾಗುತ್ತದೆ. ಹಾಗೆಯೇ ಕೃಷಿ, ಕೈಗಾರಿಕೆ, ಸಾರಿಗೆ ಸಂಪರ್ಕ ವ್ಯವಸ್ಥೆ, ವಿದ್ಯುಚ್ಛಕ್ತಿ ಇನ್ನು ಮುಂತಾದ ಪ್ರಗತಿಪರ ಕಾರ್ಯ ಕ್ರಮಗಳ ಮೇಲೆ ಮಾಡುವ ವೆಚ್ಚವನ್ನು ಆರ್ಥಿಕ ಸೇವಾ ವೆಚ್ಚವೆಂದು ಕರೆಯುತ್ತಾರೆ.

ರಾಜ್ಯ ಸರ್ಕಾರಗಳ ಅಭಿವೃದ್ಧಿ ವೆಚ್ಚ ೧೯೭೦-೭೧ರಲ್ಲಿ ೨೪೨೮ ಕೋಟಿ ರೂ.ಗಳಷ್ಟಿದ್ದು ೨೦೦೪-೦೫ರ ಮುಂಗಡ ಪತ್ರದ ಅಂದಾಜಿನಲ್ಲಿ ೨,೮೦,೮೨೩ ಕೋಟಿ ರೂ.ಗಳಿಗೆ ಹೆಚ್ಚಾಗಿದೆ. ಇದೇ ಅವಧಿಯಲ್ಲಿ ಅಭಿವೃದ್ಧಿಯೇತರ ವೆಚ್ಚ ೧೫೧೮ ಕೋಟಿ ರೂ.ಗಳಿಂದ ೧೧೯೦೬೫ ಕೋಟಿ ರೂ.ಗಳಿಗೆ ಹೆಚ್ಚಾಗಿದೆ. ಆರ್ಥಿಕ ಸೇವೆಗಳ ಮೇಲೆ ಮಾಡುವ ವೆಚ್ಚ ೨೦೦೪-೦೫ ಮುಂಗಡ ಪತ್ರದ ಅಂದಾಜಿನಲ್ಲಿ ೧೩೫೨೪೪ ಕೋಟಿ ರೂ.ಗಳಿಗೆ ನಿಗಧಿತ ವಾಗಿದೆ. ಇದೇ ಅವಧಿಯಲ್ಲಿ ೧೪೫೫೭೯ ಕೋಟಿ ರೂ.ಗಳನ್ನು ಸಾಮಾಜಿಕ ಸೇವೆಗಾಗಿ ವೆಚ್ಚಮಾಡಲು ನಿರ್ಧರಿಸಲಾಗಿದೆ. ರಾಜ್ಯ ಸರ್ಕಾರಗಳ ಒಟ್ಟು ವೆಚ್ಚವು ೧೯೭೦- ೭೧ರಲ್ಲಿ ೫೧೭೪ ಕೋಟಿ ರೂ.ಗಳಷ್ಟಿದ್ದು, ಇದು ೨೦೦೪-೦೫ರ ಮುಂಗಡ ಪತ್ರದ ಅಂದಾಜಿನಲ್ಲಿ ೫,೪೨,೮೨೪ ಕೋಟಿ ರೂ.ಗಳಿಗೆ ಹೆಚ್ಚಾಗಿದೆ.

## ೮.೪. ಸಾರ್ವಜನಿಕ ಸಾಲ

### ಸಾರ್ವಜನಿಕ ಸಾಲವೆಂದರೇನು?

ವ್ಯಕ್ತಿಗಳು ಸಾಲ ಮಾಡಿ ತಮ್ಮ ವೆಚ್ಚವನ್ನು ಭರಿಸುವಂತೆಯೇ ಸರ್ಕಾರವೂ ಸಹ ಸಾಲ ಮಾಡಿ ತನ್ನ ವೆಚ್ಚದ ಒಂದು ಭಾಗವನ್ನು ಭರಿಸುತ್ತದೆ. ವಿವಿಧ ಮೂಲಗಳಿಂದ ತನ್ನ ವೆಚ್ಚದ ಒಂದು ಭಾಗವನ್ನು ಭರಿಸಲು ಸರ್ಕಾರ ಎತ್ತುವ ಸಾಲವೇ ಸಾರ್ವಜನಿಕಸಾಲ. ಇದರಲ್ಲಿ ಎರಡು ವಿಧ ಆಂತರಕ ಸಾಲ ಮತ್ತು ಬಾಹ್ಯ ಸಾಲ. ಸರ್ಕಾರ ದೇಶದ ಒಳಗಿನ ಮೂಲಗಳಿಂದ ಎತ್ತುವ ಸಾಲ ಆಂತರಿಕ ಸಾಲ. ಇದು ಬಹುತೇಕ ವಿವಿಧ ಸಂಸ್ಥೆಗಳು ಸರ್ಕಾರದ ಸಾಲಪತ್ರಗಳನ್ನು ಕೊಳ್ಳುವುದರ ಮೂಲಕ ನೀಡುವ ಸಾಲವಾಗಿದೆ. ಬ್ಯಾಂಕುಗಳು, ವಿಮಾಕಂಪೆನಿಗಳು, ಭವಿಷ್ಯನಿಧಿ ಇವುಗಳ ನಿರ್ದಿಷ್ಟ ಪ್ರಮಾಣದ ಬಂಡವಾಳ ಹೂಡಿಕೆ

ಸರ್ಕಾರದ ಸಾಲಪತ್ರಗಳಲ್ಲಿರಬೇಕೆಂಬ ಕಟ್ಟಳೆಯನ್ನು ಪಾಲಿಸಲು ಹಾಗೂ ನಷ್ಟ ಸಂಭವವಿಲ್ಲದ ಕಡೆ ಹಣ ಹೂಡುವ ಸಲುವಾಗಿ ಈ ಸಂಸ್ಥೆಗಳು ಸರ್ಕಾರಕ್ಕೆ ಸಾಲವನ್ನು ಕೊಡುತ್ತವೆ. ಸಣ್ಣ ಉಳಿತಾಯ ಯೋಜನೆ ಮತ್ತು ಕೆಲವು ಮೀಸಲು ನಿಧಿಗಳು ಮತ್ತು ಠೇವಣಿಗಳೂ ಸಹ ಆಂತರಿಕ ಸಾಲದ ಮೂಲಗಳಾಗಿವೆ. ಸರ್ಕಾರವು ದೇಶದ ಹೊರಗೆ ಎತ್ತುವ ಸಾಲವೇ ಬಾಹ್ಯಸಾಲ. ಹೊರದೇಶಗಳ ಸರ್ಕಾರಗಳಿಂದ ಮತ್ತು ವಿಶ್ವಬ್ಯಾಂಕು, ಏಷ್ಯನ್ ಅಭಿವೃದ್ಧಿ ಬ್ಯಾಂಕ್ ಇಂತಹ ಸಂಸ್ಥೆಗಳಿಂದ ಸರ್ಕಾರ ಸಾಲಪಡೆದಿದೆ.

**ಸಾರ್ವಜನಿಕ ಸಾಲದ ಅಗತ್ಯ**

ಸರ್ಕಾರ ತನ್ನ ವೆಚ್ಚದ ಒಂದು ಭಾಗವನ್ನು ಭರಿಸಲು ಸಾಲವನ್ನು ಅವಲಂಬಿಸುವುದು ಅನಿವಾರ್ಯ. ಏಕೆಂದರೆ ಸರ್ಕಾರದ ವೆಚ್ಚ ಒಂದೇ ಮನೆ ಏರುತ್ತಿದ್ದು, ಈ ವೆಚ್ಚವನ್ನು ತೆರಿಗೆ ಮತ್ತು ತೆರಿಗೆಯೇತರ ಮೂಲಗಳಿಂದ ಬರುವ ಆದಾಯದಿಂದ ಮಾತ್ರ ಭರಿಸಲು ಸಾಧ್ಯವಿಲ್ಲ. ಕೊರತೆಯ ಸಮಸ್ಯೆ ಇರುವುದರಿಂದ ಸಾಲವನ್ನು ಅವಲಂಬಿಸುವುದು ಅನಿವಾರ್ಯ ತೆರಿಗೆ ಸರ್ಕಾರದ ಆದಾಯದ ಮುಖ್ಯವಾದ ಸಾಲವನ್ನು ಅವಲಂಬಿಸುವುದು ಅನಿವಾರ್ಯ ತೆರಿಗೆ ಸರ್ಕಾರದ ಆದಾಯದ ಮುಖ್ಯವಾದ ಮೂಲ ಸರ್ಕಾರದ ವೆಚ್ಚವನ್ನು ಬಹಳ ಮಟ್ಟಿಗೆ, ಅದರಲ್ಲೂ ಪ್ರಸಕ್ತ ಆದಾಯವನ್ನು ತೆರಿಗೆಯಿಂದ ಬರುವ ಆದಾಯದಿಂದ ಭರಿಸ ಬೇಕೆಂಬುದು ಸರ್ವವಿದಿತ. ಆದರೆ ವಾಜ್ಯದ ಪ್ರಮಾಣ ಒಂದು ನಿರ್ದಿಷ್ಟ ವೆಚ್ಚಕ್ಕೆ ಒಳಪಟ್ಟಿಲ್ಲದಿದ್ದರೆ ತೆರಿಗೆಯ ಭಾರ ಅತಿಯಾಗಿ ಆರ್ಥಿಕತೆಯ ಮೇಲೆ ಪ್ರತಿಕೂಲದ ಪರಿಣಾಮ ಬೀರುತ್ತದೆ. ಅಂತೆಯೇ ತೆರಿಗೇತರ ಮೂಲಗಳಿಂದ ಬರುವ ಆದಾಯವೂ ಒಂದು ಮಿತಿಗೊಳಪಟ್ಟಿರುತ್ತದೆ. ಸಾರ್ವಜನಿಕ ಉದ್ದಿಮೆಗಳಲ್ಲಿ ಸರ್ಕಾರ ಹೂಡಿರುವ ಬಂಡವಾಳ ದಿಂದ ದೊರಕುವ ಆದಾಯ ಕೂಡ ಅತ್ಯಲ್ಪ ಹಣ ಸೃಷ್ಟಿಗೆ ಮೊರೆ ಹೋಗುವುದಂತೂ ಅಪಾಯಕಾರಿ. ಅದು ಅತಿಯಾದರೆ ಹಣದುಬ್ಬರದ ಸಮಸ್ಯೆಯಾಗುತ್ತದೆ. ಈ ಕಾರಣ ಗಳಿಂದಾಗಿ ತೆರಿಗೆ ಮತ್ತು ತೆರಿಗೆಯೇತರ ಮೂಲಗಳಷ್ಟೇ ಅಲ್ಲದೆ ಸಾಲದ ರೂಪದಲ್ಲಿಯೂ ಸರ್ಕಾರ ಸಂಪನ್ಮೂಲಗಳನ್ನು ಕ್ರೋಢೀಕರಿಸಬೇಕಾಗುತ್ತದೆ. ಅಷ್ಟೆ ಅಲ್ಲದೆ ಯೋಜಿತ ಅಭಿವೃದ್ಧಿಗಾಗಿ ಸಂಪನ್ಮೂಲಗಳನ್ನು ಕ್ರೋಢೀಕರಿಸುವ ಸಂದರ್ಭದಲ್ಲಿ ಸಾಲವನ್ನು ಅವಲಂಬಿಸುವುದು ಸಮರ್ಥನೀಯ ಅಭಿವೃದ್ಧಿಯಲ್ಲಿ ತೊಡಗಿಸಿದ ಹಣ ಮುಂದೆ ಫಲನೀಡುತ್ತದೆ ಮತ್ತು ಸಾಲವನ್ನು ಮರುಪಾಲತಿಗೆ ಅದು ನೆರವಾಗುತ್ತದೆ. ತೆರಿಗೆ ಆದಾಯದಿಂದಲೇ ಅಭಿವೃದ್ಧಿ ಯೋಜನೆಯ ಪೂರ್ಣ ಹೊರೆಯನ್ನು ಇಂದಿನ ತಲೆಮಾರು ಹೊತ್ತಂತಾಗುತ್ತದೆ. ಅದೇ ಕಾಲವಾದರೆ ಫಲವನ್ನನುಭವಿಸುವ ಮುಂದಿನ ತಲೆಮಾರಿಗೂ ಹೊರೆ ಹಂಚಿಕೆಯಾಗುತ್ತದೆ. ಸಂಪನ್ಮೂಲವನ್ನು ಮುಂದಿನ ತಲೆಮಾರಿಗೂ ಹೊರೆ ಹಂಚಿಕೆಯಾಗುತ್ತದೆ. ಸಂಪನ್ಮೂಲವನ್ನು ಕ್ರೋಢೀಕರಿಸುವ ಸೃಷ್ಟಿಯಿಂದಷ್ಟೇ ಅಲ್ಲದೆ ಇತರ ಕಾರಣಗಳಿಗಾಗಿಯೂ ಸಾಲವನ್ನವಲಂಬಿಸುವುದಕ್ಕೆ ಸಮರ್ಥನೆ ಇದೆ. ಸರ್ಕಾರ ಸಾಲ

ಎತ್ತುವುದು ಹಣದ ಪೇಟೆ ಮತ್ತು ಬಂಡವಾಳಪೇಟೆ ಬೆಳೆಯುವುದಕ್ಕೆ ನೆರವಾಗುತ್ತದೆ. ಹಣಸಂಬಂಧಿ ನೀತಿ ಸಬಲಗೊಳ್ಳಲೂ ಸಹಾಯಕವಾಗುತ್ತದೆ. ಸರ್ಕಾರದ ಸಾಲ ಪತ್ರಗಳ ವಹಿವಾಟು ಹೆಚ್ಚಿದಷ್ಟೂ ಹಣಸಂಬಂಧಿನೀತಿಯ ಪ್ರಮುಖ ಸಾಧನವಾದ ತೆರೆದ ಪೇಟೆ ಕಾರ್ಯಾಚರಣೆ ಪರಿಣಾಮಕಾರಿಯಾಗುತ್ತದೆ.

ಸರ್ಕಾರ ಸಾಲವನ್ನವಲಂಬಿಸುವುದಕ್ಕೆ ಸಮರ್ಥನೆ ಇರುವುದಾದರೂ ಅದು ಒಂದು ಮಿತಿಗೆ ಒಳಪಟ್ಟಿರುವುದು ಅತ್ಯಂತ ಅಗತ್ಯ ತೆರಿಗೆ ಮತ್ತು ಸಾಲಗಳ ನಡುವೆ ಆಯ್ಕೆ ಮಾಡಿಕೊಳ್ಳಬೇಕಾದರೆ ಸರ್ಕಾರ ಸಾಲಕ್ಕೆ ಒಲವು ತೋರಿಸಬಹುದು. ತೆರಿಗೆಯನ್ನು ಹೆಚ್ಚಿಸಿದರೆ ತಕ್ಷಣವೇ ಜನರ ಮೇಲೆ ಹೊರೆ ಬೀಳುತ್ತದೆ. ಸಾಲವನ್ನವಲಂಬಿಸಿದರೆ ತಕ್ಷಣದ ಹೊರೆ ಕಡಿಮೆಯಾದರೂ ಮುಂದಿನ ಹೊರೆ ಜಾಸ್ತಿಯಾಗುತ್ತದೆ. ಅಷ್ಟೆ ಅಲ್ಲದೆ ಅತಿಯಾದ ಸಾಲದ ಬೆಳವಣಿಗೆ ಹಲವಾರು ಕ್ಲಿಷ್ಟ ಸಮಸ್ಯೆಗಳಿಗೆ ದಾರಿ ಮಾಡುತ್ತದೆ. ಆದ್ದರಿಂದ ಸಾಲದ ಬೆಳವಣಿಗೆ ಹೇಗೆ ಆಗಿದೆ ಎಂಬುದನ್ನು ಪರಿಶೀಲಿಸುವುದು ಅಗತ್ಯ.

### ಆಂತರಿಕ ಸಾಲದ ಬೆಳವಣಿಗೆ

ಒಟ್ಟು ಆಂತರಿಕ ಸಾರ್ವಜನಿಕ ಸಾಲವನ್ನು ಆಂತರಿಕ ಹೊಣೆಗಾರಿಕೆಗಳು ಎಂದು ಕರೆಯಲಾಗಿದೆ. ಆಂತರಿಕ ಹೊಣೆಗಾರಿಕೆಗಳನ್ನು ಎರಡು ಗುಂಪುಗಳಾಗಿ ವಿಂಗಡಿಸಲಾಗಿದೆ. ಮೊದಲನೆಯದು ಆಂತರಿಕ ಸಾಲ. ಮಾರುಕಟ್ಟೆಸಾಲ ಮತ್ತು ಇತರೆ ಸಾಲಗಳೆಂಬ ಎರಡು ಅಂಗಭಾಗಗಳನ್ನು ಇದು ಒಳಗೊಂಡಿದೆ. ಎರಡನೆಯದು ಸಣ್ಣ ಉಳಿತಾಯ ಯೋಜನೆಗಳು, ಭವಿಷ್ಯದ ನಿಧಿಗಳು, ಕೆಲವು ಮೀಸಲು ನಿಧಿಗಳು ಮತ್ತು ಠೇವಣಿಗಳನ್ನು ಒಳಗೊಂಡಿರುವ ಇತರ ಆಂತರಿಕ ಹೊಣೆಗಾರಿಕೆಗಳು ಕೋಷ್ಟಕ ೧ರಲ್ಲಿ ತೋರಿಸಿರುವಂತೆ ವರ್ಷದಿಂದ ವರ್ಷಕ್ಕೆ ಕೇಂದ್ರ ಸರ್ಕಾರದ ಆಂತರಿಕ ಹೊಣೆಗಾರಿಕೆಗಳು ಬೆಳೆಯುತ್ತಾ ಹೋಗಿವೆ.

**ಕೋಷ್ಟಕ ೧**

**ಕೇಂದ್ರ ಸರ್ಕಾರದ ಬಾಕಿ ನಿಂತಿರುವ ಆಂತರಿಕ ಹೊಣೆಗಾರಿಕೆಗಳ ಬೆಳವಣಿಗೆ**

| | ೧೯೮೦-೮೧ | ೧೯೯೦-೯೧ | ೨೦೦೦-೦೧ | ೨೦೦೩-೦೪ |
|---|---|---|---|---|
| ಆಂತರಿಕ ಸಾಲ | ೩೦,೮೬೪ | ೧೫೪೦೦೪ | ೮೦೩೬೯೮ | ೧೧೩೪೦೨೦ |
| ಇತರ ಹೊಣೆಗಾರಿಕೆಗಳು | ೧೭೫೮೭ | ೧೨೯೦೨೯ | ೨೯೮೮೯೯ | ೫೪೩೦೭೨ |
| | ೪೮೪೫೧ | ೨೮೩೦೩೩ | ೧೧೦೨೫೯೬ | ೧೬೭೭೦೯೨ |

ಮೂಲ: ರಿಸರ್ವ್‌ಬ್ಯಾಂಕ್ ಆಫ್ ಇಂಡಿಯಾ, ಹ್ಯಾಂಡ್‌ಬುಕ್ ಆಫ್ ಸ್ಟ್ಯಾಟಿಸ್ಟಿಕ್ಸ್ ಆನ್ ಇಂಡಿಯನ್ ಇಕಾನಮಿ, ೨೦೦೩-೦೪

೧೯೮೦-೮೧ರಲ್ಲಿ ಕೇಂದ್ರ ಸರ್ಕಾರದ ಆಂತರಿಕ ಸಾಲ ರೂ.೩೦,೮೬೪ ಕೋಟಿ ಇದ್ದದು ೨೦೦೩-೦೪ರಲ್ಲಿ ರೂ.೧೧,೩೪,೦೨೦ ಕೋಟಿಗೆ ಏರಿತು. ಇತರ ಹೊಣೆಗಾರಿಕೆಗಳು

ರೂ.೧೭,೫೮೭ ಕೋಟಿಯಿಂದ ಅದೇ ಅವಧಿಯಲ್ಲಿ ರೂ.೫,೪೩,೦೭೨ ಕೋಟಿಗೆ ಏರಿದವು. ಬಾಕಿ ನಿಂತಿರುವ ಒಟ್ಟು ಆಂತರಿಕ ಹೊಣೆಗಾರಿಕೆಗಳು ರೂ.೪೮,೪೫೧ ಕೋಟಿಯಿಂದ ರೂ.೧೬,೭೭,೯೭೨ ಕೋಟಿಗೆ ಏರಿದವು. ಅತ್ಯಂತ ಹೆಚ್ಚಿನ ಬೆಳವಣಿಗೆ ಆದುದು ೧೯೮೦-೮೧ ಮತ್ತು ೧೯೯೦-೯೧ರ ಅವಧಿಯಲ್ಲಿ ಎಂಬುದು ಗಮನಿಸಬೇಕಾದ ಅಂಶ. ಈ ಅವಧಿಯಲ್ಲಿ ಕೇಂದ್ರ ಸರ್ಕಾರದ ಬಾಕಿ ನಿಂತಿರುವ ಆಂತರಿಕ ಹೊಣೆಗಾರಿಕೆಗಳ ಹೆಚ್ಚಳ ಐದು ಪಟ್ಟಿಗಿಂತಲೂ ಹೆಚ್ಚಾಗಿದ್ದಿತು. ೧೯೯೦-೯೧ರ ವೇಳೆಗೆ ತಲೆದೋರಿದ ಆರ್ಥಿಕ ಬಿಕ್ಕಟ್ಟಿಗೆ ಇದು ಬಹಳ ಮಟ್ಟಿಗೆ ಕಾರಣವಾಯಿತು. ಮುಂದಿನ ದಶಕದಲ್ಲಿ ಅಂದರೆ ೧೯೯೦-೯೧ ಮತ್ತು ೨೦೦೦-೦೧ರ ಅವಧಿಯಲ್ಲಿ ಕೇಂದ್ರ ಸರ್ಕಾರದ ಬಾಕಿ ನಿಂತಿರುವ ಆಂತರಿಕ ಹೊಣೆಗಾರಿಕೆಗಳ ಹೆಚ್ಚಳ ಸುಮಾರು ನಾಲ್ಕು ಪಟ್ಟಾಗಿತ್ತು.

ಕೇಂದ್ರ ಸರ್ಕಾರದ ಬಾಕಿ ನಿಂತಿರುವ ಆಂತರಿಕ ಹೊಣೆಗಾರಿಕೆಗಳ ಗಾತ್ರದ ಸ್ಪಷ್ಟ ಕಲ್ಪನೆ ಪಡೆಯಬೇಕಾದರೆ ಅದನ್ನು ಜಿ.ಡಿ.ಪಿ. (ಗ್ರಾಸ್‌ಡೊಮೆಸ್ಟಿಕ್ ಪ್ರಾಡಕ್ಟ್) ಅಂದರೆ ಒಟ್ಟು ದೇಶೀಯ ಉತ್ಪನ್ನಯೊಡನೆ ಹೋಲಿಸಿ ನೋಡಬೇಕು. ಆಂತರಿಕ ಹೊಣೆಗಾರಿಕೆಗಳು ೧೯೯೦-೯೧ರಲ್ಲಿ ಜಿ.ಡಿ.ಪಿ.ಯ ಶೇ.೪೯.೮ ಇದ್ದದ್ದು ೨೦೦೩-೦೪ರಲ್ಲಿ ಶೇ.೬೦.೮ಕ್ಕೆ ಏರಿತು. ಸಾಲದ ಹೊರೆ ದೊಡ್ಡ ಪ್ರಮಾಣದ್ದೆಂದೇ ಇದರಿಂದ ವ್ಯಕ್ತವಾಗುತ್ತದೆ.

## ಕೇಂದ್ರ ಸರ್ಕಾರದ ಬಾಹ್ಯಸಾಲ

ಕೇಂದ್ರ ಸರ್ಕಾರದ ಬಾಹ್ಯಸಾಲದ ಬೆಳವಣಿಗೆಯನ್ನು ಕೋಷ್ಟಕ ೨ರಲ್ಲಿ ನೋಡಬಹುದು.

**ಕೋಷ್ಟಕ ೨**

**ಕೇಂದ್ರ ಸರ್ಕಾರದ ಬಾಹ್ಯಸಾಲ ಕೋಟಿ ರೂ.ಗಳಲ್ಲಿ**

| | |
|---|---|
| ೧೯೫೦-೫೧ | ೩೨ |
| ೧೯೮೦-೮೧ | ೧೧,೨೯೮ |
| ೧೯೯೦-೯೧ | ೩೧,೫೨೫ |
| ೨೦೦೦-೦೧ | ೬೫,೯೪೫ |
| ೨೦೦೩-೦೪ | ೪೭,೪೦೭ |

ಮೂಲ: ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾದ ವಿವಿಧ ದಾಖಲೆಗಳು

ಕೇಂದ್ರ ಸರ್ಕಾರದ ಬಾಹ್ಯ ಸಾಲ ಅಂದರೆ ಬೇರೆ ದೇಶಗಳ ಸರ್ಕಾರಗಳಿಂದ ಮತ್ತು ಅಂತಾರಾಷ್ಟ್ರೀಯ ಹಣಕಾಸು ಸಂಸ್ಥೆಗಳಿಂದ ಪಡೆದಿರುವ ಸಾಲ ೧೯೫೦-೫೧ರಲ್ಲಿ ಸಂಪನ್ಮೂಲ ಕ್ರೋಢೀಕರಿಸುವ ಸಲುವಾಗಿ ಬಾಹ್ಯಸಾಲವನ್ನು ಬಹಳಮಟ್ಟಿಗೆ ಅವಲಂಬಿಸಿದುದರಿಂದ ಇದು ಏರುತ್ತಾ ಹೋಯಿತು. ೧೯೮೦-೮೧ರಲ್ಲಿ ಬಾಹ್ಯಸಾಲು ರೂ.೧೧,೨೯೮ ಕೋಟಿ ಆಗಿದ್ದು ಇದು ಜಿ.ಡಿ.ಪಿ.ಯ ಶೇ.೮.೩೧ರಷ್ಟಾಗಿತ್ತು. ಆನಂತರವೂ ಇದು

ಬೆಳೆಯುತ್ತಾ ಹೋಗಿ ೧೯೯೦-೯೧ರಲ್ಲಿ ರೂ.೩೧,೫೨೫ ಕೋಟಿ, ೨೦೦೦-೦೧ರಲ್ಲಿ ರೂ.೬೫,೯೪೫ ಕೋಟಿ ಆಗಿತ್ತು. ೨೦೦೩-೦೪ರಲ್ಲಿ ಇದು ೪೭,೪೦೭ ಕೋಟಿಗೆ ಇಳಿಯಿತು. ೧೯೯೦- ೯೧ರಲ್ಲಿ ಜಿ.ಡಿ.ಪಿ.ಯ ಶೇ.೧.೭ಕ್ಕೆ ಇಳಿಯಿತು. ಅನಂತರ ಸರ್ಕಾರ ಸಾಲವನ್ನು ಅವಲಂಬಿಸುವುದು ಕಡಿಮೆಯಾಗಿ, ವಿದೇಶಿ ಸಂಪನ್ಮೂಲಗಳು ಹೆಚ್ಚಿನ ಪ್ರಮಾಣದಲ್ಲಿ ಖಾಸಗಿ ಬಂಡವಾಳದ ರೂಪದಲ್ಲಿ ಬರುತ್ತಿರುವುದರಿಂದ ಕೇಂದ್ರ ಸರ್ಕಾರದ ಬಾಹ್ಯ ಸಾಲದ ಪ್ರಮಾಣ ಇಳಿಮುಖವಾಗುತ್ತಿದೆ. ೧೯೯೧ರಲ್ಲಿ ಸರ್ಕಾರದ ಸಾಲ ಮತ್ತು ಸರ್ಕಾರೇತರ ಸಾಲ ೬೦:೪೦ರ ಅನುಪಾತದಲ್ಲಿದ್ದುದು ೨೦೦೪ರಲ್ಲಿ ೪೦:೬೦ರ ಅನುಪಾತಕ್ಕೆ ಬದಲಾಗಿರುವುದು ಸರ್ಕಾರದ ಬಾಹ್ಯ ಸಾಲ ಇಳಿಯುತ್ತಿರುವುದನ್ನು ಸೂಚಿಸುತ್ತದೆ.

**ಕೋಷ್ಟಕ ೩**

**ಕೇಂದ್ರ ಸರ್ಕಾರದ ಒಟ್ಟು ಹೊಣೆಗಾರಿಕೆಗಳು**

| ಕೇಂದ್ರ ಸರ್ಕಾರದ ಒಟ್ಟು ಹೊಣೆಗಾರಿಕೆಗಳು (ಕೋಟಿ ರೂ.ಗಳಲ್ಲಿ) | |
|---|---|
| ೧೯೮೦-೮೧ | ೫೯,೭೪೯ |
| ೧೯೯೦-೯೧ | ೩,೧೪,೫೫೮ |
| ೨೦೦೦-೦೧ | ೧೧,೬೮,೫೪೧ |
| ೨೦೦೩-೦೪ | ೧೭,೨೪,೪೯೯ |

ಮೂಲ: ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ, ಹ್ಯಾಂಡ್ ಬುಕ್ ಆಫ್ ಸ್ಟ್ಯಾಟಿಸ್ಟಿಕ್ಸ್ ಆನ್ ಇಂಡಿಯನ್ ಇಕಾನಮಿ ೨೦೦೩-೦೪

ಕೋಷ್ಟಕ ೩ರಲ್ಲಿ ತೋರಿಸುವಂತೆ, ಆಂತರಿಕ ಮತ್ತು ಬಾಹ್ಯ ಹೊಣೆಗಾರಿಕೆಗಳೆರಡೂ ಸೇರಿದಂತೆ ಕೇಂದ್ರ ಸರ್ಕಾರದ ಒಟ್ಟು ಹೊಣೆಗಾರಿಕೆಗಳು ೧೯೮೦-೮೧ರಲ್ಲಿ ರೂ.೫೯,೭೪೯ ಕೋಟಿ ಇದ್ದುದು ೨೦೦೩-೦೪ರಲ್ಲಿ ರೂ.೧೭,೨೪,೪೯೯ ಕೋಟಿಗೆ ಏರಿತು. ೧೯೯೦-೯೧ರಲ್ಲಿ ಇದು ಜಿ.ಡಿ.ಪಿ.ಯ ಶೇ.೫೫.೩ ಇದ್ದದ್ದು ೨೦೦೩-೦೪ರಲ್ಲಿ ಶೇ.೬೨.೫ಕ್ಕೆ ಏರಿತು.

### ರಾಜ್ಯ ಸರ್ಕಾರಗಳ ಸಾಲ

ರಾಜ್ಯ ಸರ್ಕಾರಗಳೂ ಸಹ ತಮ್ಮ ವೆಚ್ಚವನ್ನು ಭರಿಸುವುದಕ್ಕಾಗಿ ಬಹಳಮಟ್ಟಿಗೆ ಸಾಲವನ್ನು ಅವಲಂಬಿಸಿವೆ. ಮಾರುಕಟ್ಟೆ ಸಾಲ, ಪರಿಹಾರ ಮತ್ತಿತರ ಬಾಂಡ್‌ಗಳು, ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾದ ಮಾರ್ಗೋಪಾಯ ಮುಂಗಡಗಳು, ಬ್ಯಾಂಕು ಮತ್ತಿತರ ಸಂಸ್ಥೆಗಳ ಸಾಲ, ರಾಷ್ಟ್ರೀಯ ಸಣ್ಣ ಉಳಿತಾಯ ನಿಧಿಯ ಸಾಲ, ಕೇಂದ್ರ ಸರ್ಕಾರದಿಂದ ತೆಗೆದುಕೊಳ್ಳುವ ಸಾಲ, ರಾಜ್ಯ ಭವಿಷ್ಯ ನಿಧಿಗಳು, ವಿಮೆ ಮತ್ತು ನಿವೃತ್ತಿ ವೇತನ ನಿಧಿ, ನ್ಯಾಸ ಮತ್ತು ಪುರವೆಚ್ಚ ಇವುಗಳೆಲ್ಲವನ್ನೂ ರಾಜ್ಯ ಸರ್ಕಾರದ ಒಟ್ಟು ಹೊಣೆಗಾರಿಕೆಗಳು ಒಳಗೊಂಡಿವೆ. ಕೋಷ್ಟಕ ೪ರಲ್ಲಿ ತೋರಿಸಿರುವಂತೆ ರಾಜ್ಯ ಸರ್ಕಾರಗಳ ಹೊಣೆಗಾರಿಕೆಗಳು ಏರುತ್ತಾ ಹೋಗಿವೆ.

### ಕೋಷ್ಟಕ ೪

### ರಾಜ್ಯ ಸರ್ಕಾರಗಳ ಬಾಕಿ ನಿಂತಿರುವ ಹೊಣೆಗಾರಿಕೆಗಳು (ಕೋಟಿ ರೂ.ಗಳಲ್ಲಿ)

| | | |
|---|---|---|
| ೧೯೮೦-೮೧ | ೨೩,೯೫೯ | ೧೬,೯೮೦ |
| ೧೯೯೦-೯೧ | ೧,೧೦,೨೮೯ | ೧೯,೨೧೧ |
| ೨೦೦೦-೦೧ | ೪,೯೮,೦೯೨ | ೨,೨೪,೫೯೦ |
| ೨೦೦೩-೦೪ | ೮,೦೫,೬೬೭ | ೨,೧೨,೫೨೧ |

ಮೂಲ: ರಿಸರ್ವ್ ಬ್ಯಾಂಕ್ ಆಫ್ ಇಂಡಿಯ, ಹ್ಯಾಂಡ್ ಬುಕ್ ಆಫ್ ಸ್ಟ್ಯಾಟಿಸ್ಟಿಕ್ಸ್ ಆನ್ ಇಂಡಿಯನ್ ಇಕಾನಮಿ, ೨೦೦೩-೦೪.

ರಾಜ್ಯ ಸರ್ಕಾರಗಳ ಒಟ್ಟು ಹೊಣೆಗಾರಿಕೆಗಳು ೧೯೮೦-೮೧ರಲ್ಲಿ ರೂ.೨೩,೯೫೯ ಕೋಟಿ ಇದ್ದುದು ೨೦೦೩-೦೪ರಲ್ಲಿ ರೂ.೮,೦೫,೬೬೭ ಕೋಟಿಗೆ ಏರಿತು. ಇದರಲ್ಲಿ ಕೇಂದ್ರ ಸರ್ಕಾರದಿಂದ ಪಡೆಯುವ ಸಾಲದ ಪ್ರಮಾಣ ಗಣನೀಯವಾಗಿದೆ. ಕೇಂದ್ರ ಸರ್ಕಾರದ ಸಾಲದ ಪಾಲು ೧೯೮೦-೮೧ರಲ್ಲಿ ರೂ.೧೬,೯೮೦ ಕೋಟಿ ಇದ್ದುದು ೨೦೦೩-೦೪ರಲ್ಲಿ ರೂ.೨,೧೨,೫೨೧ ಕೋಟಿಗೆ ಏರಿತು. ೧೯೯೪-೯೫ರಲ್ಲಿ ರಾಜ್ಯ ಸರ್ಕಾರಗಳ ಬಾಕಿನಿಂತಿರುವ ಒಟ್ಟು ಹೊಣೆಗಾರಿಕೆಗಳು ಜಿ.ಡಿ.ಪಿ. ಶೇ.೧೮.೨ ಇದ್ದುದು ೨೦೦೪-೦೫ರಲ್ಲಿ ಶೇ.೨೯.೨ಕ್ಕೆ ಏರಿತು. ರಾಜ್ಯ ಸರ್ಕಾರಗಳ ಸಾಲದ ಗಾತ್ರವೆಷ್ಟೆಂಬುದು ಇದರಿಂದ ವ್ಯಕ್ತವಾಗುತ್ತದೆ.

ಭಾರತದ ಒಟ್ಟು ಸಾರ್ವಜನಿಕ ಸಾಲದ ಗಾತ್ರವನ್ನು ತಿಳಿಯಬೇಕಾದರೆ ಕೇಂದ್ರದ ಮತ್ತು ರಾಜ್ಯಗಳ ಸಾಲದ ಒಟ್ಟು ಮೊತ್ತವನ್ನು ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ. ಹನ್ನೆರಡನೇ ಹಣಕಾಸು ಆಯೋಗದ ವರದಿ ತಿಳಿಸುವಂತೆ, ಭಾರತದ ಒಟ್ಟು ಸಾರ್ವಜನಿಕ ಸಾಲ ೨೦೦೨-೦೩ರಲ್ಲಿ ಜಿ.ಡಿ.ಪಿ.ಯ ಶೇ.೭೬ ಆಗಿತ್ತು. ಇಷ್ಟೊಂದು ಆಗಾಧ ಪ್ರಮಾಣದಲ್ಲಿ ಸಾರ್ವಜನಿಕ ಸಾಲ ಬೆಳೆಯುವುದಕ್ಕೆ ಕಾರಣವಾದ ಅಂಶಗಳನ್ನು ಮತ್ತು ಇಂತಹ ಬೆಳವಣಿಗೆಯಿಂದ ಉಂಟಾಗುವ ಪರಿಣಾಮಗಳನ್ನು ಅರಿಯುವುದು ಅಗತ್ಯ.

## ಸಾರ್ವಜನಿಕ ಸಾಲ ಬೆಳೆಯುವುದಕ್ಕೆ ಕಾರಣಗಳು

ಭಾರತದಲ್ಲಿ ಸಾರ್ವಜನಿಕ ಸಾಲ ಅಗಾಧವಾಗಿ ಬೆಳೆಯಲು ಕೆಲವು ಪ್ರಮುಖ ಕಾರಣಗಳಿವೆ. ಮೊದಲನೆಯದಾಗಿ, ಪಂಚವಾರ್ಷಿಕ ಯೋಜನೆಗಳಲ್ಲಿ ಅಭಿವೃದ್ಧಿಗೆ ಸಂಪನ್ಮೂಲಗಳನ್ನು ಕ್ರೋಢೀಕರಿಸುವಾಗ ಸಾಲವನ್ನು ಹೆಚ್ಚಾಗಿ ಅವಲಂಬಿಸಲು ಪ್ರೋತ್ಸಾಹ ದೊರಕಿತು. ಯೋಜನೆಯಿಂದ ಯೋಜನೆಗೆ ಸಾಲರೂಪದಲ್ಲಿ ಸಂಪನ್ಮೂಲ ಕ್ರೋಢೀಕರಿಸುವುದು ಹೆಚ್ಚುತ್ತಾ ಹೋಯಿತು. ಉದಾಹರಣೆಗೆ, ೧೯೯೦-೯೧ರಲ್ಲಿ ಸಾರ್ವಜನಿಕ ವಲಯದ ಒಟ್ಟು ಯೋಜನಾ ಸಂಪನ್ಮೂಲವಾದ ರೂ.೫೯,೫೪೮ ಕೋಟಿಯ ಪೈಕಿ ಸರ್ಕಾರದ ಸ್ವಂತ ಸಂಪನ್ಮೂಲ ಕೇವಲ ರೂ.೭೪೫ ಕೋಟಿಯಾಗಿದ್ದು, ದೇಶೀಯ ಸಾಲಗಳು ಮತ್ತು ಇತರ ಹೊಣೆಗಾರಿಕೆಗಳು ರೂ.೫೧,೪೪೪ ಕೋಟಿಯೂ, ವಿದೇಶಿ ಸಂಪನ್ಮೂಲ ರೂ.೭,೩೫೯

ಕೋಟಿಯೂ ಆಗಿತ್ತು. ೨೦೦೦-೦೧ರಲ್ಲಿ ಸಾರ್ವಜನಿಕ ವಲಯದ ಒಟ್ಟು ಯೋಜನಾ ಸಂಪನ್ಮೂಲವಾದ ರೂ.೧,೮೫,೧೨೫ ಕೋಟಿಯ ಪೈಕಿ ಸರ್ಕಾರದ ಸ್ವಂತ ಸಂಪನ್ಮೂಲ ರೂ.೩೮,೫೪೨ ಕೋಟಿಯಾಗಿದ್ದು, ದೇಶೀಯ ಸಾಲಗಳು ಮತ್ತು ಇತರ ಹೊಣೆಗಾರಿಕೆಗಳು ರೂ.೨,೧೮,೯೭೨ ಕೋಟಿಯೂ, ವಿದೇಶೀ ಸಂಪನ್ಮೂಲಗಳು ರೂ.೫,೫೭೫ ಕೋಟಿಯೂ ಆಗಿತ್ತು. ಯೋಜನಾ ವೆಚ್ಚಕ್ಕೆ ಸಂಪನ್ಮೂಲ ಕ್ರೋಢೀಕರಿಸಲು ಯಾವ ಪ್ರಮಾಣದಲ್ಲಿ ಸಾಲವನ್ನು ಅವಲಂಬಿಸಲಾಗಿದೆ ಎಂಬುದು ಇದರಿಂದ ವ್ಯಕ್ತವಾಗುತ್ತದೆ.

ಎರಡನೆಯದಾಗಿ, ರಾಜ್ಯವೆಚ್ಚ ಆಗಾಧವಾಗಿ ಬೆಳೆಯುತ್ತಿದ್ದು, ಈ ವೆಚ್ಚವನ್ನು ಭರಿಸಲು ರಾಜಸ್ವ ಸಂದಾಯ ಸಾಕಾಗುತ್ತಿಲ್ಲ. ಸರ್ಕಾರಿ ನೌಕರರ ವೇತನ ವಿಶ್ರಾಂತಿ ವೇತನ, ರಕ್ಷಣಾ ವೆಚ್ಚ, ಬಡ್ಡಿ ಪಾವತಿ, ಸಹಾಯಧನ ಮುಂತಾದ ಪ್ರಸಕ್ತ ವೆಚ್ಚಗಳು ಅಧಿಕವಾಗಿ ಬೆಳೆದಿದೆ. ಈ ವೆಚ್ಚದ ಬಹುಪಾಲನ್ನು ಈಗ ಸಾಲದಿಂದ ಭರಿಸುವ ಪರಿಸ್ಥಿತಿ ಉಂಟಾಗಿರುವುದರಿಂದ ಸಾರ್ವಜನಿಕ ಸಾಲ ಮಿತಿಮೀರಿ ಬೆಳೆಯುತ್ತಿದೆ.

ಮೂರನೆಯದಾಗಿ, ಸರ್ಕಾರಕ್ಕೆ ತೆರಿಗೆ ಮತ್ತು ತೆರಿಗೆಯೇತರ ಮೂಲಗಳಿಂದ ಯಾವ ಪ್ರಮಾಣದಲ್ಲಿ ಆದಾಯ ಬರುವ ಅವಕಾಶವಿದೆಯೋ ಆ ಪ್ರಮಾಣದಲ್ಲಿ ಆದಾಯ ಬೆಳೆಯುತ್ತಿಲ್ಲ. ತೆರಿಗೆ ಆದಾಯದ ಮೊತ್ತ ವರ್ಷದಿಂದ ವರ್ಷಕ್ಕೆ ಹೆಚ್ಚಿರುವುದು ನಿಜ. ಆದರೆ ಇನ್ನೂ ಹೆಚ್ಚಿನ ಮೊತ್ತ ದೊರಕಲು ಇರುವ ಅವಕಾಶವನ್ನು ಪೂರ್ಣವಾಗಿ ಉಪಯೋಗಿಸಿಕೊಳ್ಳಲು ಸಾಧ್ಯವಾಗಿಲ್ಲ. ೧೯೯೦-೯೧ರಲ್ಲಿ ಕೇಂದ್ರದ ತೆರಿಗೆ ಆದಾಯ ಜಿ.ಡಿ.ಪಿ.ಯ ಶೇ.೧೦.೧ ಇದ್ದದ್ದು ೨೦೦೨-೦೩ರಲ್ಲಿ ಜಿ.ಡಿ.ಪಿ.ಯು ಶೇ. ೮.೮ಕ್ಕೆ ಇಳಿಯಿತು. ರಾಜ್ಯಗಳ ತೆರಿಗೆ ಆದಾಯ ಜಿ.ಡಿ.ಪಿ.ಯ ಶೇ.೫ರ ಆಸುಕಾಸಿನಲ್ಲಿ ಸ್ಥಗಿತಗೊಂಡಿದೆ. ತೆರಿಗೇತರ ಆದಾಯದಲ್ಲೂ ತೃಪ್ತಿಕರ ಹೆಚ್ಚಳ ಕಂಡುಬರುತ್ತಿಲ್ಲ. ಸಾರ್ವಜನಿಕ ಉದ್ಯಮಗಳಲ್ಲಿ ಹೂಡುವ ಬಂಡವಾಳದ ಮೇಲಿನ ಪ್ರತಿಫಲ ಕೂಡ ತೃಪ್ತಿಕರವಾಗಿಲ್ಲ. ಈ ಕಾರಣಗಳಿಂದಾಗಿ ಸಾಲದ ಮೇಲಿನ ಅವಲಂಬನೆ ಜಾಸ್ತಿಯಾಗಿದೆ.

ನಾಲ್ಕನೆಯದಾಗಿ, ರಾಷ್ಟ್ರದಲ್ಲಿನ ಒಟ್ಟು ಬಂಡವಾಳ ಹೂಡಿಕೆಗೆ ಅಗತ್ಯವಾದ ಮೊತ್ತಕ್ಕೆ ಆಂತರಿಕ ಉಳಿತಾಯ ವಿಲ್ಲದಿರುವುದರಿಂದ ವಿದೇಶಿ ಮೂಲಗಳನ್ನು ಅವಲಂಬಿಸುವುದು ಅನಿವಾರ್ಯ. ಹಿಂದಿನ ಯೋಜನೆಗಳಲ್ಲಿ ವಿದೇಶಿ ವಿನಿಮಯದ ಕೊರತೆ ಇದ್ದಾಗ ವಿದೇಶಿ ಸಾಲವನ್ನು ಅವಲಂಬಿಸಲಾಯಿತು. ಆದ್ದರಿಂದ ವಿದೇಶೀ ಸಾಲ ಬೆಳೆಯಿತು. ಇತ್ತೀಚಿನ ವರ್ಷಗಳಲ್ಲಿ ವಿದೇಶಿ ವಿನಿಮಯದ ಪರಿಸ್ಥಿತಿ ಬಹಳವಾಗಿ ಸುಧಾರಿಸಿರುವುದರಿಂದ ಮತ್ತು ವಿದೇಶಿ ಸಂಪನ್ಮೂಲಗಳು ಹೆಚ್ಚಿನ ಪ್ರಮಾಣದಲ್ಲಿ ಖಾಸಗಿ ಬಂಡವಾಳದ ರೂಪದಲ್ಲಿ ಬರುತ್ತಿರುವುದರಿಂದ ಸರ್ಕಾರದ ಬಾಹ್ಯ ಸಾಲದ ಪರಿಸ್ಥಿತಿ ಸುಧಾರಿಸಿದೆ.

**ಸಾರ್ವಜನಿಕ ಸಾಲದ ಪರಿಣಾಮಗಳು**

ಸಾರ್ವಜನಿಕ ಸಾಲ ಬೆಳೆದಿರುವುದರಿಂದ ಅಭಿವೃದ್ಧಿಗೆ ಸಂಪನ್ಮೂಲ ದೊರಕಿದೆ

ಎಂಬುದು ಹಾಗೂ ಬಂಡವಾಳ ಹೂಡುವವರಿಗೆ ನಷ್ಟ ಸಂಭವವಿಲ್ಲದ ಬಂಡವಾಳ ಹೂಡಿಕೆಯ ಮಾರ್ಗವನ್ನು ದೊರಕಿಸಿ ಎಂಬುದು ನಿಜವಾದರೂ, ಕೆಲವು ಪ್ರತಿಕೂಲ ಪರಿಣಾಮಗಳು ಉಂಟಾಗಿರುವುದನ್ನು ಗಮನಿಸಬೇಕು. ಮೊದಲನೆದಾಗಿ, ಸಾಲದ ಮೇಲಿನ ಅವಲಂಬನೆ ಜಾಸ್ತಿಯಾದಂತೆ ಬಡ್ಡಿಯು ಹೊರೆ ಜಾಸ್ತಿಯಾಗುತ್ತಿದೆ. ಆಂತರಿಕ ಹೊಣೆಗಾರಿಕೆಗಳ ಮೇಲೆ ಪಾವತಿಸುತ್ತಿದ್ದ ಬಡ್ಡಿಯ ಮೊತ್ತ ೧೯೯೦-೯೧ರಲ್ಲಿ ರೂ.೧೯,೬೬೪ ಕೋಟಿ ಇದ್ದುದು ೨೦೦೩-೦೪ರಲ್ಲಿ ರೂ.೧,೧೭,೩೩೨ ಕೋಟಿಗೆ ಏರಿತು. ಇದು ೧೯೯೦-೯೧ರಲ್ಲಿ ಜಿ.ಡಿ.ಪಿ.ಯ ಶೇ.೩.೮ ಇದ್ದುದು ೨೦೦೩ ೦೪ರಲ್ಲಿ ಶೇ.೪.೫ಕ್ಕೆ ಏರಿತು. ೧೯೯೦-೯೧ರಲ್ಲಿ ರಾಜಸ್ವ ಸಂದಾಯದ ಶೇ.೩೯.೧ ಬಡ್ಡಿಗಾಗಿ ವೆಚ್ಚವಾಗುತ್ತಿದ್ದುದು ೨೦೦೪-೦೫ರ ಬಜೆಟ್ ಅಂದಾಜಿನ ಪ್ರಕಾರ ಶೇ.೪೧.೯ಕ್ಕೆ ಏರಿತು ಮತ್ತು ರಾಜಸ್ವ ವೆಚ್ಚದ ಶೇ.೩೫ ಬಡ್ಡಿಗೆ ವಿನಯೋಗವಾಗುತ್ತಿತ್ತು. ರಾಜ್ಯ ಸರ್ಕಾರಗಳ ಬಡ್ಡಿಪಾವತಿಯ ಮೊತ್ತ ೧೯೯೦-೯೧ರಲ್ಲಿ ರಾಜಸ್ವ ಸಂದಾಯದ ಶೇ.೧೩ ಇದ್ದುದು ೨೦೦೧-೦೨ರಲ್ಲಿ ಶೇ.೨೪.೪ಕ್ಕೆ ಏರಿತು. ಬಡ್ಡಿ ಪಾವತಿ ಈ ಪ್ರಮಾಣದಲ್ಲಿರುವಾಗ ಸರ್ಕಾರ ಇತರ ಉಪಯುಕ್ತ ಚಟುವಟಿಕೆಗಳ ಮೇಲೆ ವೆಚ್ಚ ಮಾಡಲು ಅಶಕ್ತವಾಗುವುದರಿಂದ ಒಟ್ಟಾರೆ ಅಭಿವೃದ್ಧಿಯ ಮೇಲೆ ಇದು ಪ್ರತಿಕೂಲ ಪರಿಣಾಮ ಬೀರುತ್ತದೆ.

ಎರಡನೆಯದಾಗಿ, ಸಾರ್ವಜನಿಕ ಸಾಲವು ಮಿತಿ ಮೀರಿ ಬೆಳೆಯುತ್ತಾ ಹೋದಾಗ ಹೆಚ್ಚಿನ ಪ್ರಮಾಣದ ಸಂಪನ್ಮೂಲಗಳು ಸರ್ಕಾರಕ್ಕೆ ವರ್ಗವಾಗಿ ಖಾಸಗಿ ವಲಯದ ಬೆಳವಣಿಗೆಗೆ ಅಗತ್ಯವಾದ ಸಂಪನ್ಮೂಲದ ಕೊರತೆಯುಂಟಾಗುತ್ತದೆ. ಹೆಚ್ಚು ಉತ್ಪನ್ನಕಾರಕವಾದ ಖಾಸಗಿ ವಲಯದ ಬೆಳವಣಿಗೆಗೆ ಅಡ್ಡಿಯಾಗುವುದರಿಂದ ಆರ್ಥಿಕ ಬೆಳವಣಿಗೆಗೆ ಕುಂಠಿತವಾಗುತ್ತದೆ.

ಮೂರನೆಯದಾಗಿ, ಸಾರ್ವಜನಿಕ ಸಾಲವು ಬೆಳೆಯುತ್ತಿರುವ ಸಂದರ್ಭದಲ್ಲಿ ಬ್ಯಾಂಕುಗಳು ನಷ್ಟಸಂಭವವನ್ನು ಕಡಿಮೆ ಮಾಡಿಕೊಳ್ಳಲು ಸರ್ಕಾರದ ಸಾಲಪತ್ರಗಳಲ್ಲಿ ಹೆಚ್ಚು ಹೆಚ್ಚು ಬಂಡವಾಳ ಹೂಡುತ್ತವೆ. ಬ್ಯಾಂಕುಗಳ ಮುಖ್ಯ ಕರ್ತವ್ಯ ಕೈಗಾರಿಕೆ ಮತ್ತು ವಾಣಿಜ್ಯೋದ್ಯಮಗಳಿಗೆ ಸಾಲ ಒದಗಿಸುವುದೇ ಹೊರತು ಸರ್ಕಾರಕ್ಕೆ ಸಾಲ ಒದಗಿಸುವುದಿಲ್ಲ. ಸರ್ಕಾರಕ್ಕೆ ಹೆಚ್ಚು ಸಾಲ ಒದಗಿಸುವುದರಿಂದ ಕೈಗಾರಿಕೆ ಮತ್ತು ವಾಣಿಜ್ಯೋದ್ಯಮಗಳಿಗೆ ಬ್ಯಾಂಕುಗಳು ಸಾಕಷ್ಟು ಸಾಲ ಒದಗಿಸದಂತಾಗಿ ಇದರಿಂದ ಆರ್ಥಿಕತೆಯ ಮೇಲೆ ಪ್ರತಿಕೂಲ ಪರಿಣಾಮ ಉಂಟಾಗುತ್ತದೆ.

ನಾಲ್ಕನೆಯದಾಗಿ, ಸರ್ಕಾರ ಪಡೆದ ಸಾಲದ ಬಹುಪಾಲು ಆಸ್ತಿ ಸೃಷ್ಟಿಮಾಡುವ ಚಟುವಟಿಕೆಗಳಿಗೆ ವಿನಿಯೋಗವಾಗದಿರುವುದರಿಂದ ಸಾಲದ ಹೊರೆ ಮುಂದಿನ ಪೀಳಿಗೆಗೆ ವರ್ಗವಾಗುತ್ತದೆ. ಸಾಲದಿಂದ ಆಸ್ತಿ ಸೃಷ್ಟಿಯಾಗಿ ಅದ್ದರಿಂದ ಆದಾಯ ಬರುವುದಾದರೆ ಮುಂದಿನ ಪೀಳಿಗೆ ಸಾಲವನ್ನಷ್ಟೇ ಅಲ್ಲದೆ ಆಸ್ತಿಯನ್ನೂ ಪಡೆಯುವುದರಿಂದ ಸಾಲದ ಹೊರೆ ವರ್ಗಾವಣೆಯಾದಂತಾಗುವುದಿಲ್ಲ. ಅನುತ್ಪಾದಕ ವೆಚ್ಚದಲ್ಲಿ ಸಾಲದ ಹಣವನ್ನು ತೊಡಗಿಸಿದಾಗ ಬಹಳ ಹಿಂದೆಯೇ ಡೇವಿಡ್‌ರಿಕಾರ್ಡೋ ಎಂಬ ಅರ್ಥಶಾಸ್ತ್ರಜ್ಞ ಹೇಳಿದಂತೆ

ಇಂದಿನ ಸಾಲ ಮುಂದಿನ ತೆರಿಗೆಯಾಗುವುದರಿಂದ ಸಾಲದ ಭಾರವನ್ನು ಮುಂದಿನ ಪೀಳಿಗೆ ಹೊರಬೇಕಾಗುತ್ತದೆ.

ಮೇಲೆ ಹೇಳಿರುವ ಸಾರ್ವಜನಿಕ ಸಾಲದ ಮಿತಿ ಮೀರಿದ ಬೆಳವಣಿಗೆಯಿಂದುಂಟಾಗುವ ಪ್ರತಿಕೂಲ ಪರಿಣಾಮಗಳನ್ನು ಪರಿಗಣಿಸಿ ಇದೇ ಪರಿಸ್ಥಿತಿ ಮುಂದುವರಿಯದಂತೆ ಮಾಡುವುದು ಹೇಗೆಂಬುದುರ ಬಗ್ಗೆ ಇತ್ತೀಚಿನ ದಿನಗಳಲ್ಲಿ ವಿಶೇಷ ಚಿಂತನೆ ನಡೆದಿದೆ. ಇದರ ಬಗ್ಗೆ ಮುಂದಿನ ಭಾಗದಲ್ಲಿ ತಿಳಿಯಬಹುದು.

## ೮.೫. ಕೊರತೆ ಹಣಕಾಸು

ಸಾರ್ವಜನಿಕ ಹಣಕಾಸಿನ ಅಧ್ಯಯನದಲ್ಲಿ ಕೊರತೆ ಹಣಕಾಸಿನ ಬಗ್ಗೆ ವಿಶೇಷ ಗಮನ ನೀಡುವುದು ಅಗತ್ಯ. ಕೊರತೆಯ ಸಮಸ್ಯೆ ಬೆಳೆಯುತ್ತಿರುವ ಇಂದಿನ ದಿನಗಳಲ್ಲಿ ಇದರ ಸ್ವರೂಪವನ್ನು ಸರಿಯಾಗಿ ಅರ್ಥಮಾಡಿಕೊಳ್ಳಬೇಕು. ಆದ್ದರಿಂದ ಕೊರತೆ ಹಣಕಾಸಿನ ಬಗ್ಗೆ ಇರುವ ಪರಿಕಲ್ಪನೆಗಳ ಪೈಕಿ ಮುಖ್ಯವಾದ ನಾಲ್ಕರ ಬಗ್ಗೆ ತಿಳಿಯೋಣ.

**೧. ಬಜೆಟ್ ಕೊರತೆ**

ಸರ್ಕಾರದ ಒಟ್ಟು ವೆಚ್ಚ (ರಾಜಸ್ವ ವೆಚ್ಚ ಮತ್ತು ಬಂಡವಾಳ ವೆಚ್ಚ) ಸರ್ಕಾರದ ಒಟ್ಟು ಆದಾಯಕ್ಕಿಂತ (ರಾಜಸ್ವ ಸಂದಾಯ ಮತ್ತು ಬಂಡವಾಳ ಸಂದಾಯ) ಹೆಚ್ಚಾಗಿದ್ದರೆ ಇದು ಬಜೆಟ್ ಕೊರತೆ ಎಂದಾಗುತ್ತದೆ. ಇಲ್ಲಿ ಒಟ್ಟು ಆದಾಯದಲ್ಲಿ ಸಾಲದಿಂದ ಪಡೆದ ಹಣವೂ ಸೇರಿ ಕೊಂಡಿರುತ್ತದೆ. ಇತ್ತೀಚಿನವರೆಗೆ ಅನುಸರಿಸುತ್ತಿದ್ದ ಕ್ರಮದ ಪ್ರಕಾರ ಒಟ್ಟು ಆದಾಯಕ್ಕಿಂತ ಮೇಲ್ಪಟ್ಟ ವೆಚ್ಚದ ಭಾಗವನ್ನು ಒದಗಿಸುವುದು ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾದ ಜವಾಬ್ದಾರಿಯಾಗಿತ್ತು. ೯೧ ದಿನಗಳ ಟ್ರೆಷರಿ ಬಿಲ್‌ಗಳ ಮೂಲಕ ಮತ್ತು ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾದಲ್ಲಿರುವ ಸರ್ಕಾರದ ನಗದು ಶಿಲ್ಕನ್ನು ಉಪಯೋಗಿಸಿ ಕೊರತೆಯನ್ನು ತುಂಬಲಾಗುತ್ತಿತ್ತು. ೧೯೯೭-೯೮ ರಿಂದೀಚೆಗೆ ೯೧ ದಿನಗಳ ಟ್ರೆಷರಿ ಬಿಲ್ ಮೂಲಕ ಕೊರತೆಯನ್ನು ತುಂಬುವ ಕ್ರಮವನ್ನು ಕೈಬಿಡಲಾಗಿದ್ದು ಬಜೆಟ್ ಕೊರತೆಯ ಪರಿಭಾವನೆ ತನ್ನ ಪ್ರಾಮುಖ್ಯವನ್ನು ಕಳೆದುಕೊಂಡಿದೆ. ಈಗ ಮುಂಗಡ ಪತ್ರದಲ್ಲಿ ನಮೂದಿತವಾಗುವುದೇನಿದ್ದರೂ ರಾಜಸ್ವ ಕೊರತೆ. ಕೋಶೀಯ ಕೊರತೆ ಮತ್ತು ಪ್ರಾಥಮಿಕ ಕೊರತೆ.

**೨. ರಾಜಸ್ವ ಕೊರತೆ**

ರಾಜಸ್ವ ವೆಚ್ಚವು ರಾಜಸ್ವ ಸಂದಾಯಗಳಿಗಿಂತ ಹೆಚ್ಚಾಗಿದ್ದರೆ ಅದು ರಾಜಸ್ವ ಕೊರತೆ ಎನಿಸಿಕೊಳ್ಳುತ್ತದೆ. ಅಂದರೆ ರಾಜಸ್ವ ಕೊರತೆ ರಾಜಸ್ವ ವೆಚ್ಚ ರಾಜಸ್ವ ಸಂದಾಯಗಳು. ಉದಾಹರಣೆಗೆ,

೨೦೦೩-೦೪ರಲ್ಲಿ ರಾಜಸ್ವ ವೆಚ್ಚ          ರೂ.೩,೬೨,೮೮೭ ಕೋಟಿ
೨೦೦೩-೦೪ರಲ್ಲಿ ರಾಜಸ್ವ ಸಂದಾಯ    ರೂ.೨,೬೩,೦೨೭ ಕೋಟಿ
೨೦೦೩-೦೪ರಲ್ಲಿ ರಾಜಸ್ವ ಕೊರತೆ       ರೂ.೯೯,೮೬೦ ಕೋಟಿ

### ೩. ಕೋಶೀಯ ಕೊರತೆ

ಕೋಶೀಯ ಕೊರತೆ ಎಂದರೆ ಸರ್ಕಾರದ ಒಟ್ಟು ವೆಚ್ಚ ಮತ್ತು ರಾಜಸ್ವ ಸಂದಾಯಗಳ ನಡುವಣ ವ್ಯತ್ಯಾಸ. ಅಂದರೆ ಸರ್ಕಾರದ ಒಟ್ಟು ವೆಚ್ಚದಲ್ಲಿ ರಾಜಸ್ವ ಸಂದಾಯಗಳನ್ನು ಕಳೆದರೆ ಕೋಶೀಯ ಕೊರತೆ ತಿಳಿಯುತ್ತದೆ. ಇಲ್ಲಿ ಒಟ್ಟು ವೆಚ್ಚವೆಂದರೆ ರಾಜಸ್ವ ವೆಚ್ಚ - ಬಂಡವಾಳ ವೆಚ್ಚ ಮತ್ತು ಸಾಲ-ಮುಂಗಡಗಳು ಸಾಲ ಮರುಪಾವತಿ. ರಾಜಸ್ವ ಸಂದಾಯಗಳೆಂದರೆ, ರಾಜಸ್ವ ಸಂದಾಯಗಳು ಬಂಡವಾಳ ಹಿಂತೆಗೆತ. ಉದಾಹರಣೆ

೨೦೦೩-೦೪ರಲ್ಲಿ ಒಟ್ಟು ವೆಚ್ಚ                ರೂ.೪,೦೯,೬೩೦ ಕೋಟಿ
೨೦೦೩-೦೪ರಲ್ಲಿ ರಾಜಸ್ವ ಸಂದಾಯಗಳು   ರೂ.೨,೭೭,೫೨೭ ಕೋಟಿ
೨೦೦೩-೦೪ರಲ್ಲಿ ಕೋಶೀಯ ಕೊರತೆ         ರೂ.೧,೩೨,೧೦೩ ಕೋಟಿ

### ೪. ಪ್ರಾಥಮಿಕ ಕೊರತೆ

ಪ್ರಾಥಮಿಕ ಕೊರತೆ ಎಂದರೆ ಬಡ್ಡಿ ಪಾವತಿಯನ್ನು ಹೊರತುಪಡಿಸಿದ ಕೋಶೀಯ ಕೊರತೆ. ಅಂದರೆ ಪ್ರಾಥಮಿಕ ಕೊರತೆ ಕೋಶೀಯ ಕೊರತೆ ಬಡ್ಡಿಪಾವತಿಯ ಮೊತ್ತ. ಇದು ಕೋಶೀಯ ಕೊರತೆಯ ಉಪ ಪರಿಭಾವನೆಯಾಗಿದೆ. ಉದಾಹರಣೆಗೆ,

೨೦೦೩-೦೪ರಲ್ಲಿ ಕೋಶೀಯ ಕೊರತೆ        ರೂ.೧,೩೨,೧೦೩ ಕೋಟಿ
೨೦೦೩-೦೪ರಲ್ಲಿ ಬಡ್ಡಿ ಪಾವತಿ ಮೊತ್ತ      ರೂ.೧,೨೪,೫೫೫ ಕೋಟಿ
೨೦೦೩-೦೪ರಲ್ಲಿ ಪ್ರಾಥಮಿಕ ಕೊರತೆ        ರೂ.೭೫೪೮ ಕೋಟಿ

### ಕೊರತೆ ಒಲವುಗಳು

೧. ರಾಜಸ್ವ ಕೊರತೆ ರಾಷ್ಟ್ರ ಎದುರಿಸುತ್ತಿರುವ ಪ್ರಮುಖ ವಿತ್ತೀಯ ಸಮಸ್ಯೆಯಾಗಿದೆ. ಸರ್ಕಾರದ ಹಣಕಾಸು ಸುಸ್ಥಿತಿಯಲ್ಲಿರುವಾಗ ರಾಜಸ್ವ ಸಂದಾಯಗಳು ರಾಜಸ್ವ ವೆಚ್ಚಕ್ಕಿಂತ ಅಧಿಕವಾಗಿದ್ದು, ರಾಜಸ್ವ ಲೆಕ್ಕದಲ್ಲಿ ಏನು ಮಿಗುತ್ತದೆಯೋ ಅದನ್ನು ಅಭಿವೃದ್ಧಿ ವೆಚ್ಚಕ್ಕಾಗಿ ಬಳಸಲಾಗುತ್ತದೆ. ಇಂತಹ ಅನುಕೂಲಕರ ಪರಿಸ್ಥಿತಿ ಈಗ ಇಲ್ಲವಾಗಿದೆ. ಪ್ರಸಕ್ತ ವೆಚ್ಚಗಳಾದ ಸರ್ಕಾರಿ ಉದ್ಯೋಗಿಗಳ ವೇತನ, ನಿವೃತ್ತಿ ವೇತನ, ಬಡ್ಡಿಪಾವತಿ, ಧನ ಸಹಾಯ ಮುಂತಾದವು ಗಳಿಗೆ ರಾಜಸ್ವ ಸಂದಾಯಗಳು ಸಾಲದಾಗಿದ್ದು, ಈ ವೆಚ್ಚಗಳ ಬಹು ಭಾಗವನ್ನು ಸಾಲದಿಂದ ಭರಿಸಬೇಕಾದ ಪರಿಸ್ಥಿತಿ ಉಂಟಾಗಿದೆ. ಸರ್ಕಾರದ ಹಣಕಾಸು ಯಾವ ದುಸ್ಥಿತಿಯಲ್ಲಿದೆ ಎಂಬುದನ್ನು ಇದು ಸೂಚಿಸುತ್ತದೆ.

೧೯೭೦-೭೧ರಲ್ಲಿ ಕೇಂದ್ರ ಸರ್ಕಾರದ ರಾಜಸ್ವ ಲೆಕ್ಕದಲ್ಲಿ ರೂ.೧೬೩ ಕೋಟಿ ಮಿಗುತಾಯವಿತ್ತು. ೧೯೮೦-೮೧ರಲ್ಲಿ ರೂ.೬೯೪ ಕೋಟಿ ರಾಜಸ್ವ ಕೊರತೆ ಉಂಟಾಗಿತ್ತು.

ಇದು ಕ್ರಮೇಣ ಹೆಚ್ಚಾಗುತ್ತಾ ಹೋಗಿ ೨೦೦೩-೦೪ರಲ್ಲಿ ರೂ.೯೯,೮೬೦ ಕೋಟಿಯಾಯಿತು. ೧೯೯೪-೯೫ರಲ್ಲಿ ಕೇಂದ್ರ ಸರ್ಕಾರದ ಕೋಶೀಯ ಕೊರತೆಯ ಶೇ.೫೩.೮ ರಾಜಸ್ವ ಕೊರತೆಯಾಗಿತ್ತು. ೨೦೦೩-೦೪ರಲ್ಲಿ ಇದು ಶೇ.೭೩.೧ರ ಮಟ್ಟವನ್ನು ತಲುಪಿತು. ಅಂದರೆ ಸಾಲರೂಪದಲ್ಲಿ ಸರ್ಕಾರ ಪಡೆದ ಹಣದ ಶೇ.೭೩.೧ರಷ್ಟು ಸರ್ಕಾರದ ಅನುಭೋಗಿ ವೆಚ್ಚಕ್ಕೆ ವಿನಿಯೋಗವಾಗುತ್ತಿದ್ದ ಕೋಶೀಯ ಶಿಸ್ತಿಗೆ ಪೆಟ್ಟು ಕೊಟ್ಟಿದೆ. ಕೇಂದ್ರ ಸರ್ಕಾರದ ತಿದ್ದುಪಡಿಯಾದ ಕೋಶೀಯ ಜವಾಬ್ದಾರಿ ಮತ್ತು ಬಜೆಟ್ ನಿರ್ವಹಣೆ ಕಾಯಿದೆ ಪ್ರಕಾರ ಮಾರ್ಚ್ ೨೦೦೯ರ ವೇಳೆಗೆ ಕೇಂದ್ರ ಸರ್ಕಾರದ ರಾಜಸ್ವ ಕೊರತೆಯನ್ನು ಸಂಪೂರ್ಣವಾಗಿ ಹೋಗಲಾಡಿಸಿ ಅಲ್ಲಿಂದ ಮಂದೆ ರಾಜಸ್ವ ಲೆಕ್ಕದಲ್ಲಿ ಮಿಗುತಾಯವನ್ನು ಸಾಧಿಸಬೇಕಾಗಿದೆ.

ರಾಜ್ಯ ಸರ್ಕಾರಗಳೂ ರಾಜಸ್ವ ಕೊರತೆಯ ಸಮಸ್ಯೆಯನ್ನು ಎದುರಿಸುತ್ತಿವೆ. ೧೯೮೬-೮೭ರ ವರೆಗೆ ಸಾಮಾನ್ಯವಾಗಿ ರಾಜ್ಯ ಸರ್ಕಾರಗಳು ರಾಜಸ್ವ ಲೆಕ್ಕದಲ್ಲಿ ಮಿಗುತಾಯ ಹೊಂದಿದ್ದುವು. ೧೯೮೭-೮೮ ರಿಂದ ಪ್ರಾರಂಭವಾಗಿ ರಾಜ್ಯ ಸರ್ಕಾರಗಳ ರಾಜಸ್ವ ಕೊರತೆ ಏರುತ್ತಾ ಹೋಗಿದೆ. ಈ ಕೊರತೆ ೧೯೯೦-೯೧ರಲ್ಲಿ ರೂ.೫೩೦೯ ಕೋಟಿ ಇದ್ದುದು ೨೦೦೩-೦೪ರಲ್ಲಿ ರೂ.೫೬,೬೮೨ ಕೋಟಿಗೆ ಏರಿತು. ಇದನ್ನು ಸಂಪೂರ್ಣವಾಗಿ ಹೋಗಲಾಡಿಸುವ ಜವಾಬ್ದಾರಿ ರಾಜ್ಯ ಸರ್ಕಾರಗಳ ಮೇಲಿದೆ. ಕೇಂದ್ರದಂತೆಯೇ ಕೆಲವು ರಾಜ್ಯ ಸರ್ಕಾರಗಳೂ ಸಹ ಈಗಾಗಲೇ ಕೋಶೀಯ ಜವಾಬ್ದಾರಿ ಮತ್ತು ಬಜೆಟ್ ನಿರ್ವಹಣೆ ಕಾಯಿದೆಯನ್ನು ರೂಪಿಸಿವೆ. ಉಳಿದ ರಾಜ್ಯಗಳು ಇದನ್ನು ಅನುಸರಿಸಲಿವೆ.

೨. ಕೇಂದ್ರ ಸರ್ಕಾರದ ಕೋಶೀಯ ಕೊರತೆ ೧೯೯೦-೯೧ರಲ್ಲಿ ರೂ.೩೭,೬೦೬ ಕೋಟಿಯಾಗಿದ್ದುದು ೨೦೦೦-೦೧ರಲ್ಲಿ ರೂ.೧,೧೮,೮೧೬ ಕೋಟಿಗೂ ೨೦೦೩-೦೪ರಲ್ಲಿ ೧,೩೨,೧೦೩ ಕೋಟಿಗೂ ಏರಿತು. ಇದು ೧೯೯೦-೯೧ರಲ್ಲಿ ಜಿ.ಡಿ.ಪಿಯ ಶೇ.೬.೬ ಆಗಿದ್ದುದು ಸುಧಾರಣೆಯ ಮೊದಲ ಕೆಲವು ವರ್ಷಗಳಲ್ಲಿ ಇಳಿಮುಖವಾಗಿತ್ತು. ಆದರೆ ೨೦೦೧-೦೨ರಲ್ಲಿ ಮತ್ತೆ ಶೇ.೪.೮ ಆಗಿತ್ತು. ಕೋಶೀಯ ಕೊರತೆಯನ್ನು ತುಂಬುದೇನಿದ್ದರೂ ಸಾಲ ಮಾಡುವುದರಿಂದ ಸಾಲದ ಬೆಳವಣಿಗೆ ಪ್ರತಿಕೂಲ ಪರಿಣಾಮಗಳನ್ನು ಬೀರುವುದರಿಂದ ಕೋಶೀಯ ಕೊರತೆಯನ್ನು ನಿಯಂತ್ರಿಸುವುದು ಅವಶ್ಯಕ. ಕೋಶೀಯ ಜವಾಬ್ದಾರಿ ಮತ್ತು ಬಜೆಟ್ ನಿರ್ವಹಣೆ ಕಾಯಿದೆ ಪ್ರಕಾರ ಮಾರ್ಚ್ ೨೦೦೯ರ ವೇಳೆಗೆ ಕೋಶೀಯ ಕೊರತೆಯನ್ನು ಜಿ.ಡಿ.ಪಿ.ಯ ಶೇ.೩ಕ್ಕೆ ಇಳಿಸುವ ಗುರಿಯನ್ನು ಸರ್ಕಾರ ಇಟ್ಟುಕೊಂಡಿದೆ.

ರಾಜ್ಯ ಸರ್ಕಾರಗಳ ಕೋಶೀಯ ಕೊರತೆ ಸಹ ಇತ್ತೀಚಿನ ವರ್ಷಗಳಲ್ಲಿ ಒಂದೇ ಸಮನೆ ಬೆಳೆಯುತ್ತಾ ಹೋಗಿದೆ. ೧೯೯೦-೯೧ರಲ್ಲಿ ಎಲ್ಲಾ ರಾಜ್ಯಗಳ ಒಟ್ಟು ಕೋಶೀಯ ಕೊರತೆ ರೂ.೧೮,೭೮೭ ಕೋಟಿ ಆಗಿದ್ದುದು ೨೦೦೦-೦೧ರಲ್ಲಿ ರೂ.೮೯,೫೩೨ ಕೋಟಿಗೂ, ೨೦೦೩-೦೪ರಲ್ಲಿ ರೂ.೧,೪೦,೪೦೭ಕೋಟಿಗೂ ಏರಿತು. ಇದು ೧೯೯೦-೯೧ರಲ್ಲಿ ಜಿ.ಡಿ.ಪಿ.ಯ ಶೇ.೩.೩ ಇದ್ದುದು ೨೦೦೩-೦೪ರಲ್ಲಿ ಶೇ.೫.೧ಕ್ಕೆ ಏರಿತು. ರಾಜ್ಯ ಸರ್ಕಾರಗಳೂ ಕೇಂದ್ರ ಸರ್ಕಾರದಂತೆಯೇ ಕೋಶೀಯ ಕೊರತೆಯ ಪ್ರಮಾಣವನ್ನು ಇಳಿಸಲು ಪ್ರಯತ್ನಿಸುತ್ತಿವೆ.

## ಕೋಶೀಯ ಸುಧಾರಣೆಗಳು

ಸರ್ಕಾರದ ಹಣಕಾಸನ್ನು ಸುಸ್ಥಿಗೆ ತರಲು ಕೋಶೀಯ ಸುಧಾರಣೆಗಳು ಬಹಳ ಅಗತ್ಯ ಒಂದು ರೀತಿಯಲ್ಲಿ ಇದು ನಿರಂತರ ಪ್ರಕ್ರಿಯೆ. ೧೯೯೦ರ ದಶಕದ ಆದಿ ಭಾಗದಲ್ಲಿ ಭಾರತದಲ್ಲಿ ಪ್ರಾರಂಭವಾದ ಆರ್ಥಿಕ ಸುಧಾರಣೆಯ ಅಂಗವಾಗಿ ಕೈಗೊಂಡಿರುವ ಕೋಶೀಯ ಸುಧಾರಣೆ ಬಹಳ ಮಹತ್ವವನ್ನು ಪಡೆದುಕೊಂಡಿದೆ. ಏಕೆಂದರೆ ಅಲ್ಲಿಯವರೆಗೆ ಅನುಸರಿಸುತ್ತಿದ್ದ ನೀತಿಯಿಂದ ಭಿನ್ನವಾದ ನೀತಿಯನ್ನು ಅಳವಡಿಸಿಕೊಳ್ಳಲಾಗಿದೆ. ಕೋಶೀಯ ಸುಧಾರಣೆ ಪ್ರಮುಖವಾಗಿ ತೆರಿಗೆ, ವೆಚ್ಚ, ಸಾಲ ಇವುಗಳಿಗೆ ಸಂಬಂಧಿಸಿದ ಬದಲಾವಣೆಗಳನ್ನು ಒಳಗೊಂಡಿದೆ. ಇವುಗಳ ಒಂದು ಸ್ಥೂಲ ಪರಿಚಯವನ್ನು ಮುಂದೆ ಕೊಡಲಾಗಿದೆ.

### ೧. ತೆರಿಗೆ ಸುಧಾರಣೆ

ಸರ್ಕಾರಕ್ಕೆ ಹೆಚ್ಚಿನ ಆದಾಯ ಪಡೆಯುವುದು ಮತ್ತು ಆರ್ಥಿಕ ಅಸಮಾನತೆಯನ್ನು ಕಡಿಮೆ ಮಾಡುವುದು ತೆರಿಗೆ ನೀತಿಯ ಪ್ರಮುಖ ಉದ್ದೇಶ, ತೆರಿಗೆ ದರ ಹೆಚ್ಚಾಗಿದ್ದಷ್ಟೂ ಈ ಉದ್ದೇಶ ಈಡೇರಿಕೆಗೆ ಅನುಕೂಲವೆಂಬ ಭಾವನೆ ೧೯೫೦ರ ದಶಕದಿಂದ ೧೯೭೦ರ ದಶಕದ ಮಧ್ಯಭಾಗದವರೆಗೂ ಪ್ರಚಲಿತವಿತ್ತು. ೧೯೭೦-೭೧ರಲ್ಲಿ ಸರ್ ಚಾರ್ಜ್‌ಯೂ ಸೇರಿದಂತೆ ರೂ.೨ ಲಕ್ಷಕ್ಕೆ ಮೇಲ್ಪಟ್ಟ ಆದಾಯಕ್ಕೆ ಶೇ.೯೭.೫ ತೆರಿಗೆ ದರ ಇದ್ದುದನ್ನು ಈಗ ನಂಬುವುದು ಕಷ್ಟ. ಇಂತಹ ತೆರಿಗೆ ದರದಿಂದಾಗಿ ತೆರಿಗೆ ತಪ್ಪಿಸುವುದಕ್ಕೆ ಪ್ರೋತ್ಸಾಹ ದೊರಕಿ ಕಪ್ಪು ಹಣ ಬೆಳುಯವಂತಾಯಿತೇ ಹೊರತು ಸರ್ಕಾರದ ಆದಾಯ ಹೆಚ್ಚುವುದಾಗಲೀ, ಆರ್ಥಿಕ ಅಸಮಾನತೆ ಕಡಿಮೆಯಾವುದಾಗಲೀ ಆಗಲಿಲ್ಲ. ಆನಂತರ ಈ ದರವನ್ನು ಕಡಿಮೆ ಮಾಡುವ ಪ್ರಯತ್ನ ನಡೆಸಿದರೂ ೧೯೭೪-೭೫ರಲ್ಲಿ ಕೂಡಾ ಆದಾಯ ತೆರಿಗೆಯ ಆಗ ದರ ಶೇ.೬೨ ಆಗಿತ್ತು. ೧೯೭೫-೭೬ರಲ್ಲಿ ಇದನ್ನು ಶೇ.೫೦ಕ್ಕೆ ಇಳಿಸಿದ್ದೇ ದೊಡ್ಡ ಬದಾಲವಣೆ ಎನಿಸಿತ್ತು. ೧೯೯೦ರ ದಶಕದ ಆದಿ ಭಾಗದಲ್ಲಿ ತೆರಿಗೆ ಸುಧಾರಣೆಗೆ ಹೆಚ್ಚಿನ ಮಹತ್ವ ಕೊಟ್ಟಮೇಲೆ ತೆರಿಗೆ ದರಗಳನ್ನು ಮತ್ತಷ್ಟು ಇಳಿಸುವುದು ಅಗತ್ಯವೆಂದು ಮನಗಾಣಲಾಯಿತು. ಈ ಅಭಿಪ್ರಾಯಕ್ಕೆ ಚಾಲನೆ ದೊರೆತದ್ದು ಚಲ್ಲಯ್ಯ ನೇತೃತ್ವದ ತೆರಿಗೆ ಸುಧಾರಣಾ ಸಮಿತಿಯ ವರದಿಯಿಂದ ೧೯೯೨-೯೩ರ ಬಜೆಟ್‌ನಲ್ಲಿ ಆದಾಯ ತೆರಿಗೆಯ ಅಗ್ರ ದರವನ್ನು ಶೇ.೪೦ಕ್ಕೆ ಇಳಿಸಲಾಯಿತು ಮತ್ತು ೧೯೯೭-೯೮ರಲ್ಲಿ ಶೇ.೩೦ಕ್ಕೆ ಇಳಿಸಲಾಯಿತು. ೨೦೦೫-೦೬ರ ಬಜೆಟ್ ಪ್ರಕಾರ ಆದಾಯ ತೆರಿಗೆಯ ವಿನಾಯಿತಿ ಮಿತಿಯನ್ನು ರೂ.೧ ಲಕ್ಷಕ್ಕೆ ಏರಿಸಿ, ರೂ.೧.೫ಲಕ್ಷದ ವರೆಗಿನ ಆದಾಯಕ್ಕೆ ಶೇ.೧೦, ರೂ.೧.೫ ಲಕ್ಷದಿಂದ ರೂ.೨.೫ ಲಕ್ಷದವರೆಗಿನ ಆದಾಯಕ್ಕೆ ಶೇ.೨೦ ಮತ್ತು ರೂ.೨.೫ ಲಕ್ಷಕ್ಕಿಂತ ಹೆಚ್ಚಿನ ಆದಾಯಕ್ಕೆ ಶೇ.೩೦ ತೆರಿಗೆ ವಿಧಿಸಲಾಗುತ್ತಿದೆ. ಅಂತೆಯೇ ಕಂಪನಿಗಳ ಆದಾಯದ ಮೇಲಿನ ತೆರಿಗೆ (ಕಾರ್ಪೋರೇಷನ್ ತೆರಿಗೆ) ದರವನ್ನೂ ಇಳಿಸಲಾಗಿದೆ. ೨೦೦೫-೦೬ರ ಬಜೆಟ್ ಪ್ರಕಾರ ದೇಶೀಯ ಕಂಪೆನಿಗಳ ಆದಾಯದ ಮೇಲೆ ಶೇ.೩೦ರ ದರದಲ್ಲಿ

ಮತ್ತು ವಿದೇಶೀ ಕಂಪೆನಿಗಳ ಆದಾಯದ ಮೇಲೆ ಶೇ.೪೮ರ ದರದಲ್ಲಿ ತೆರಿಗೆ ವಿಧಿಸಲಾಗುತ್ತಿದೆ. ಆಸ್ತಿ ತೆರಿಗೆಯನ್ನು ಅನುತ್ಪಾದಕ ಆಸ್ತಿಗಳಿಗೆ ಮಾತ್ರ ಅನ್ವಯಿಸುತ್ತಿದ್ದು ರೂ.೧೫ ಲಕ್ಷಕ್ಕೆ ಮೀರಿದ ಆಸ್ತಿಗೆ ಶೇ.೧ರ ದರದಲ್ಲಿ ತೆರಿಗೆ ವಿಧಿಸಲಾಗುತ್ತಿದೆ. ಆಮದು ಸುಂಕವನ್ನೂ ಸಹ ಇತ್ತೀಚಿನ ವರ್ಷಗಳಲ್ಲಿ ಗಣನೀಯವಾಗಿ ಇಳಿಸಲಾಗಿದೆ. ಸ್ವತಂತ್ರ ಭಾರತದಲ್ಲಿ ೧೯೯೦ರ ದಶಕದ ಆದಿಭಾಗದಲ್ಲಿ ಆಮದು ಸುಂಕವನ್ನು ಇಳಿಸುವ ಪ್ರಕ್ರಿಯೆ ಪ್ರಥಮ ಬಾರಿಗೆ ಆರಂಭವಾಯಿತು. ೧೯೯೨-೯೩ ರಲ್ಲಿ ಶೇ.೧೧೦ಕ್ಕೆ ಇಳಿಸಿದ ನಂತರ ಈ ಪ್ರಕ್ರಿಯೆ ಮುಂದುವರಿದು ೨೦೦೦೫-೦೬ ರ ಬಜೆಟ್‌ನಲ್ಲಿ ಶೃಂಗ ದರವನ್ನು ಶೇ.೧೫ಕ್ಕೆ ಇಳಿಸಲಾಯಿತು. ಕೇಂದ್ರ ಅಬ್ಕಾರಿಸುಂಕ ಅಥವಾ ಕೇಂದ್ರ ಮೌಲ್ಯ ವರ್ಧಿತ ತೆರಿಗೆ ೧೯೮೫-೮೬ರಲ್ಲಿ ಜಾರಿಗೊಳಿಸಲ್ಪಟ್ಟು, ವರ್ಷದಿಂದ ವರ್ಷಕ್ಕೆ ಉತ್ತಮಗೊಳ್ಳುತ್ತಾಬಂದು ಈಗ ದರಗಳ ಸಂಖ್ಯೆ ಇಳಿದು, ಶೇ.೧೬ರ ಒಂದೇ ದರ ಬಹುತೇಕ ವ್ಯವಸ್ಥೆಯಾಗಿದೆ. ಹೀಗೆ ಕೇಂದ್ರ ಮೌಲ್ಯವರ್ಧಿತ ತೆರಿಗೆ, ಆ ತೆರಿಗೆಯ ವಸ್ತುಗಳಿಗೆ ಅನ್ವಯವಾಗುವ ಎಲ್ಲಾ ಮೂಲ ತತ್ವಗಳಿಗೆ ಅನುಗುಣವಾಗಿರುವಷ್ಟರ ಮಟ್ಟಿಗೆ ಸುಧಾರಣೆಗೊಂಡಿದೆ. ಒಟ್ಟಿನಲ್ಲಿ ತೆರಿಗೆ ದರ ಕಡಿಮೆ ಮಟ್ಟದಲ್ಲಿರಬೇಕೆಂಬ ತತ್ವವನ್ನು ಒಪ್ಪಿಕೊಂಡು ಅದನ್ನು ಅನುಷ್ಠಾನಕ್ಕೆ ತರಲಾಗಿದೆ.

ತೆರಿಗೆ ದರಗಳನ್ನು ಇಳಿಸುವುದರ ಜೊತೆಯಲ್ಲಿಯೇ ತೆರಿಗೆಯ ಮೂಲವನ್ನು ವಿಸ್ತರಿಸುವುದು ಅಗತ್ಯವೆಂಬುದು ಇಂದಿನ ತೆರಿಗೆ ಸುಧಾರಣೆಯ ಪ್ರಧಾನ ಅಂಶ. ನಿಗದಿಪಡಿಸಿರುವ ಮಿತಿಗಿಂತ ಹೆಚ್ಚಿನ ಆದಾಯವಿರುವವರೆಲ್ಲರೂ ತೆರಿಗೆ ಕೊಡಬೇಕೆಂದು ನಿರೀಕ್ಷಿಸುವುದು ಸಹಜ. ಆದರೆ ವಾಸ್ತವವಾಗಿ ವಿನಾಯಿತಿಗೆ ಮೇಲ್ಪಟ್ಟ ಆದಾಯ ವಿರುವವರಲ್ಲಿ ಅನೇಕರು ತೆರಿಗೆಯನ್ನು ನೀಡುತ್ತಿಲ್ಲ. ಹೀಗೆ ಅನೇಕರು ತೆರಿಗೆಯ ವ್ಯಾಪ್ತಿ ಯಿಂದ ಹೊರಗೆ ಉಳಿದಿರುವುದರಿಂದ ಸರ್ಕಾರಕ್ಕೆ ನ್ಯಾಯಯುತವಾಗಿ ಬರಬೇಕಾದ ಆದಾಯ ಬರುತ್ತಿಲ್ಲ. ತೆರಿಗೆ ತಪ್ಪಿಸುತ್ತಿರುವವರಲ್ಲಿ ಬಹುತೇಕ ಸ್ವ ಉದ್ಯೋಗಗಳಲ್ಲಿ ತೊಡಗಿರು ವವರು. ತೆರಿಗೆ ಮೂಲವನ್ನು ವಿಸ್ತರಿಸಬೇಕಾದರೆ ಅವರೆಲ್ಲರನ್ನೂ ತೆರಿಗೆ ಜಾಲದೊಳಕ್ಕೆ ತರಬೇಕು. ಹಾಗೆ ಮಾಡಲು ಇತ್ತೀಚಿನ ದಿನಗಳಲ್ಲಿ ಕೆಲವು ಕ್ರಮಗಳನ್ನು ಕೈಗೊಳ್ಳಲಾಗಿದೆ. ಮೊದಲನೆಯದಾಗಿ, ಸರ್ಕಾರ ಆರು ನಿರ್ಧಾರಗಳನ್ನು ಗೊತ್ತುಪಡಿಸಿ ಅವುಗಳಲ್ಲಿ ಯಾವುದೊಂದಾದರೂ ಒಬ್ಬ ವ್ಯಕ್ತಿಗೆ ಅನ್ವಯವಾಗುವಂತಿದ್ದರೆ. ಅಂತಹ ವ್ಯಕ್ತಿ ಕಡ್ಡಾಯ ವಾಗಿ ಆದಾಯ ತೆರಿಗೆ ವರದಿ ರಿಟರ್ನ್ಸ್ ಸಲ್ಲಿಸಬೇಕೆಂಬ ನಿಯಮ ಜಾರಿಯಲ್ಲಿದೆ. ಆ ಆರು ಅಂಶಗಳು ಯಾವುವೆಂದರೆ, ೧. ನಾಲ್ಕು ಚಕ್ರಗಳ ವಾಹನಗಳನ್ನು ಹೊಂದಿರುವುದು, ೨. ಕೆಲವು ಗೊತ್ತುಪಡಿಸಲ್ಪಟ್ಟ ನಿರ್ಧಾರಗಳನ್ನು ತೃಪ್ತಿಪಡಿಸುವ ಸ್ಥಿರಾಸ್ತಿಯಲ್ಲಿ ನೆಲೆಸಿರುವುದು, ೩. ಹಿಂದಿನ ವರ್ಷದಲ್ಲಿ ವಿದೇಶಿ ಯಾತ್ರೆ ಮಾಡಿರುವುದು, ೪. ಕ್ರೆಡಿಟ್ ಕಾರ್ಡ್ ಹೊಂದಿರುವುದು, ೫. ದುಬಾರಿಯಾದ ಕ್ಲಬ್‌ಗಳ ಸದಸ್ಯತ್ವ ಹೊಂದಿರುವುದು ಮತ್ತು ೬. ವರ್ಷದಲ್ಲಿ ರೂ.೫೦,೦೦೦ಕ್ಕಿಂತ ಹೆಚ್ಚು ವಿದ್ಯುತ್ ಬಿಲ್ ಪಾವತಿ

ಮಾಡಿರುವುದು. ಈ ಕ್ರಮದಿಂದಾಗಿ, ಆದಾಯ ತೆರಿಗೆಯ ವರದಿ ಸಲ್ಲಿಸುವವರ ಸಂಖ್ಯೆ ಗಣನೀಯವಾಗಿ ಹೆಚ್ಚಿದೆ, ತೆರಿಗೆ ಕೊಡುವವರ ಸಂಖ್ಯೆ ಸ್ವಲ್ಪ ಮಟ್ಟಿಗಾದರೂ ಹೆಚ್ಚಲು ಸಾಧ್ಯವಾಗಿದೆ.

ಎರಡನೆಯಾಗಿ, ಒಂದು ನಿರ್ದಿಷ್ಟ ಮಟ್ಟಕ್ಕಿಂತ ಹೆಚ್ಚಿನ ಬಡ್ಡಿಯ ಮೊತ್ತವನ್ನು ಬ್ಯಾಂಕುಗಳ ನಿಶ್ಚಿತ ಠೇವಣಿಯಿಂದ ಪಡೆದರೆ, ಅದರ ಒಂದು ನಿರ್ದಿಷ್ಟ ಭಾಗವನ್ನು ಆದಾಯ ತೆರಿಗೆಯ ಬಾಬ್ತು ಮೂಲದಲ್ಲೇ ಹಿಡಿದುಕೊಳ್ಳಬೇಕೆಂಬ ನಿಯಮವಿದೆ. ಒಬ್ಬ ಠೇವಣಿದಾರ ಒಂದು ಬ್ಯಾಂಕ್ ಆಫೀಸ್‌ನಲ್ಲಿ ಒಂದು ವರ್ಷದಲ್ಲಿ ರೂ.೫ ಸಾವಿರ ಮತ್ತುಅದಕ್ಕೆ ಮೇಲ್ಪಟ್ಟ ಹಣವನ್ನು ಬಡ್ಡಿಯಾಗಿ ಪಡೆದರೆ ಶೇ.೧೦ ರಷ್ಟು ಮೊಬಲಗನ್ನು ತೆರಿಗೆಯ ಸಲುವಾಗಿ ಬ್ಯಾಂಕ್ ಮುರಿದುಕೊಂಡು ತೆರಿಗೆ ಇಲಾಖೆಗೆ ಒಪ್ಪಿಸುತ್ತದೆ. ಇನದ್ನು ಠೇವಣಿದಾರನು ತನ್ನ ಆದಾಯ ತೆರಿಗೆಯ ವರದಿಯಲ್ಲಿ ನಮೂದಿಸಿ ಬಾಕಿ ಇರುವ ತೆರಿಗೆಯನ್ನು ಸಲ್ಲಿಸಬೇಕು.

ಮೂರನೆಯದಾಗಿ, ಸ್ವ ಉದ್ಯೋಗಿಗಳಾಗಿರುವವರ ಆದಾಯವನ್ನು ಕರಾರುವಕ್ಕಾಗಿ ತಿಳಿಯುವಲ್ಲಿ ತೊಡಕುಗಳಿರುವುದರಿಂದ ಅವರು ತೆರಿಗೆಯಿಂದ ತಪ್ಪಿಸಿಕೊಳ್ಳುತ್ತಿದ್ದಾರೆ. ಆದಾಯ ಎಷ್ಟೆಂಬುದನ್ನು ಕರಾರುವಕ್ಕಾಗಿ ತಿಳಿಯಲು ಸಾಧ್ಯವಿಲ್ಲದ ಸಂದರ್ಭಗಳಲ್ಲಿ ಸಂಭಾವ್ಯ ಆದಾಯವನ್ನು ಲೆಕ್ಕಹಾಕಿ ಅದರ ಮೇಲೆ ತೆರಿಗೆ ವಿಧಿಸಬಹುದು. ಈ ಒಂದು ಕ್ರಮವನ್ನು ಸಹ ಈಗ ಅನುಸರಿಸಲಾಗುತ್ತಿದೆ. ಉದಾಹರಣೆಗೆ ಎರಡು ಟ್ರಕ್‌ಗಳನ್ನು ಹೊಂದಿರುವ ವ್ಯಕ್ತಿಯ ಸಂಭಾವ್ಯ ಆದಾಯವನ್ನು ಲೆಕ್ಕಹಾಕಬಹುದು. ಹಾಗೆಯೇ ಒಬ್ಬ ವ್ಯಾಪಾರಿಯ ವಹಿವಾಟಿನ ಮೊತ್ತದ ಮೇಲೆ ಅವನ ಸಂಭಾವ್ಯ ಆದಾಯವನ್ನು ಲೆಕ್ಕಹಾಕಬಹುದು.

ನಾಲ್ಕನೆಯದಾಗಿ, ತೆರಿಗೆ ಮೂಲವನ್ನು ವಿಸ್ತರಿಸಲು ಕೈಗೊಂಡಿರುವ ಮತ್ತೊಂದು ಪ್ರಮುಖ ಕ್ರಮವೆಂದರೆ, ಸೇವೆಗಳ ಮೇಲೆ ತೆರಿಗೆ ವಿಧಿಸಿ, ತೆರಿಗೆಗೆ ಒಳಪಡುವ ಸೇವೆಗಳ ಸಂಖ್ಯೆಯನ್ನು ಹೆಚ್ಚಿಸಿರುವುದು. ೧೯೯೪ರಲ್ಲಿ ಮೂರು ಸೇವೆಗಳ ಮೇಲೆ ತೆರಿಗೆ ವಿಧಿಸುವುದರೊಂದಿಗೆ ಸೇವೆಗಳ ಮೇಲೆ ತೆರಿಗೆ ವಿಧಿಸುವುದು ಪ್ರಾರಂಭವಾಗಿ ೨೦೦೪-೦೫ರ ವೇಳೆಗೆ ತೆರಿಗೆಗೆ ಒಳಪಡುವ ಸೇವೆಗಳ ಒಟ್ಟು ಸಂಖ್ಯೆ ೭೦ಕ್ಕೆ ಏರಿತು. ಕೇಂದ್ರ ಸರ್ಕಾರದ ತೆರಿಗೆ ಸುಧಾರಣೆ ಹಲವಾರು ಅಂಶಗಳನ್ನೊಳಗೊಂಡಿದೆ. ಅವುಗಳಲ್ಲಿ ಪ್ರಮುಖವಾದುದು ಮೇಲೆ ವಿವರಿಸಿರುವ ತೆರಿಗೆ ದರಗಳನ್ನು ಇಳಿಸುವ ಮತ್ತು ತೆರಿಗೆಯ ಮೂಲವನ್ನು ವಿಸ್ತರಿಸುವ ಕ್ರಮಗಳು.

ರಾಜ್ಯ ಸರ್ಕಾರಗಳ ತೆರಿಗೆ ಸುಧಾರಣೆಯ ಅತ್ಯಂತ ಪ್ರಮುಖ ಕ್ರಮವೆಂದರೆ, ರಾಜ್ಯ ಮಟ್ಟದ ಮೌಲ್ಯವರ್ಧಿತ ತೆರಿಗೆಯನ್ನು ಏಪ್ರಿಲ್ ೧, ೨೦೦೫ ರಿಂದ ೨೧ ರಾಜ್ಯಗಳು ಜಾರಿಗೊಳಿಸಿರುವುದು. ಮೌಲ್ಯವರ್ಧಿತ ತೆರಿಗೆ ಒಂದು ಸುಧಾರಿತ ಮಾರಾಟ ತೆರಿಗೆ. ಮಾರಾಟ ತೆರಿಗೆ ಪದ್ಧತಿ ದೋಷ ಪೂರ್ಣವಾಗಿದ್ದುದರಿಂದ ಅದರ ಸುಧಾರಣೆ ಅಗತ್ಯವಾಯಿತು. ಮೌಲ್ಯ ವರ್ಧಿತ ತೆರಿಗೆಯ ಮುಖ್ಯ ಲಕ್ಷಣವೆಂದರೆ ಒಂದು ವಸ್ತು ಉತ್ಪಾದನೆಯಿಂದ

ಪ್ರಾರಂಭಗೊಂಡು ಗ್ರಾಹಕನ ಕೈಸೇರುವವರೆಗೆ ಹಲವಾರು ಘಟ್ಟಗಳನ್ನು ದಾಟಿಬರುವಾಗ ಪ್ರತಿಘಟ್ಟದಲ್ಲೂ ತೆರಿಗೆ ವಿಧಿಸಿ, ಹಿಂದಿನ ಘಟ್ಟದಲ್ಲಿ ವಿಧಿಸಿರುವ ತೆರಿಗೆಯನ್ನು ಕಳೆಯಲಾಗುತ್ತದೆ. ಹೀಗೆ ಮಾಡುವುದರಿಂದ 'ತೆರಿಗೆಯ ಮೇಲೆ ತೆರಿಗೆ' ಬೀಳುವುದು ತಪ್ಪುತ್ತದೆ. ಒಂದು ವಸ್ತುವಿನ ಉತ್ಪಾದನೆಗೆ ಉಪಯೋಗಿಸುವ ವಸ್ತುಗಳ ಮೇಲೆ ಮತ್ತೆ ಮತ್ತೆ ತೆರಿಗೆ ಬೀಳುವುದು ತಪ್ಪುತ್ತದೆ. ಬೇರೆ ತರಿಗೆಗಳಾದ ವಹಿವಾಟು ತೆರಿಗೆ, ಮೇಲ್ತೆರಿಗೆ(ಸರ್ ಚಾರ್ಜ್) ಮುಂತಾದವು ಈ ಪದ್ಧತಿಯಲ್ಲಿ ಇರುವುದಿಲ್ಲ. ಗ್ರಾಹಕರಿಗೆ ತೆರಿಗೆ ಹೊರೆ ಕಡಿಮೆಯಾಗಿ ಬೆಲೆ ಇಳಿಯುತ್ತದೆ. ಈ ಪದ್ಧತಿ ಸರಿಯಾದ ರೀತಿಯಲ್ಲಿ ಪೂರ್ಣವಾಗಿ ಅನುಷ್ಠಾನಕ್ಕೆ ಬಂದ ಮೇಲೆ ಸರ್ಕಾರದ ಆದಾಯವೂ ಹೆಚ್ಚುತ್ತದೆ. ರಾಜ್ಯ ಮಟ್ಟದ ಮೌಲ್ಯ ವರ್ಧಿತ ತೆರಿಗೆಯನ್ನು ಜಾರಿಗೊಳಿಸಿರುವುದು ಭಾರತದ ಅತ್ಯಂತ ಮಹತ್ವಪೂರ್ಣ ತೆರಿಗೆ ಸುಧಾರಣಾ ಕ್ರಮವಾಗಿದೆ.

**೨. ವೆಚ್ಚ ಸುಧಾರಣೆ**

ಸರ್ಕಾರದ ಹಣಕಾಸನ್ನು ಸುಸ್ಥಿತಿಗೆ ತರುವಲ್ಲಿ ಸಾರ್ವಜನಿಕ ವೆಚ್ಚವನ್ನು ನಿಯಂತ್ರಣದಲ್ಲಿಡುವುದು ಅತ್ಯಂತ ಅವಶ್ಯಕ. ಹತೋಟಿ ಮೀರಿದ ವೆಚ್ಚದ ಬೆಳವಣಿಗೆ, ಅದರಲ್ಲೂ ಮುಖ್ಯವಾಗಿ ರಾಜಸ್ವ ವೆಚ್ಚದ ಬೆಳವಣಿಗೆ ಸರ್ಕಾರದ ಹಣಕಾಸು ದುಸ್ಥಿತಿಯನ್ನು ತಲುಪಲು ಕಾರಣವಾಗಿರುವುದರಿಂದ ಅದನ್ನು ನಿಯಂತ್ರಣಗೊಳಿಸಲು ೧೯೯೦ರ ದಶಕದ ಆದಿ ಭಾಗದಿಂದ ಸರ್ಕಾರ ಕೆಲವು ಪ್ರಮುಖ ಕ್ರಮಗಳನ್ನು ಕೈಗೊಂಡಿದೆ. ಮೊದಲನೆಯದಾಗಿ, ಸಾರ್ವಜನಿಕ ವೆಚ್ಚ ನಿಯಂತ್ರಣಕ್ಕೆ ಒಳಗಾಗಬೇಕಾದರೆ ಸರ್ಕಾರದ ಗಾತ್ರವನ್ನು ಕಡಿಮೆ ಮಾಡಬೇಕೆಂಬುದನ್ನು ಮನಗಾಣಲಾಗಿದೆ. ಸರ್ಕಾರದ ಚಟುವಟಿಕೆಗಳು ಯಾವ ಕ್ಷೇತ್ರಗಳಲ್ಲಿ ಅತ್ಯಂತ ಅಗತ್ಯ ಮತ್ತು ಯಾವ ಕ್ಷೇತ್ರಗಳಲ್ಲಿ ಖಾಸಗಿ ವಲಯದ ಪಾತ್ರ ಹೆಚ್ಚಬೇಕೆಂಬುದರ ಬಗ್ಗೆ ಚಿಂತನೆ ನಡೆದಿದೆ ಖಾಸಗಿ ವಲಯದ ಸಹಭಾಗಿತ್ವವನ್ನು ಕೆಲವು ಕ್ಷೇತ್ರಗಳಲ್ಲಿ ಪ್ರೋತ್ಸಾಹಿಸಲಾಗಿದೆ. ಎರಡನೆಯದಾಗಿ, ವೆಚ್ಚ ಆಯೋಗವನ್ನು ನೇಮಿಸಿ ಅದರ ಶಿಫಾರಸ್ಸುಗಳನ್ನು ಸ್ವಲ್ಪ ಮಟ್ಟಿಗೆ ಅನುಷ್ಠಾನಕ್ಕೆ ತರುವ ಪ್ರಯತ್ನ ನಡೆದಿದೆ. ಮೂರನೆಯದಾಗಿ ನಿವೃತ್ತಿ ನಿಧಿಗೆ ನಿರ್ದಿಷ್ಟ ಕೊಡುಗೆಯನ್ನು ನೀಡಬೇಕೆಂಬ ನಿಯಮವನ್ನು ಜನವರಿ ೨೦೦೪ ರಿಂದೀಚೆಗೆ ನೇಮಕಗೊಂಡಿರುವವರಿಗೆ ಅನ್ವಯಿಸಲಾಗಿದೆ. ಇದರಿಂದ ಸಧ್ಯಕ್ಕಲ್ಲದಿದ್ದರೂ ದೀರ್ಘಾವಧಿಯಲ್ಲಿ ಸರ್ಕಾರದ ಮೇಲೆ ಬೀಳುವ ನಿವೃತ್ತಿ ವೇತನದ ಹೊರೆ ಕಡಿಮೆಯಾಗುತ್ತದೆ.

ನಾಲ್ಕನೆಯದಾಗಿ, ಸರ್ಕಾರ ನೀಡುವ ಸಹಾಯಧನ ಸಾರ್ವಜನಿಕ ವೆಚ್ಚ ಹೆಚ್ಚುವುದಕ್ಕೆ ಕಾರಣವಾಗಿದೆ. ಸಾರ್ವಜನಿಕ ವಿತರಣಾ ವ್ಯವಸ್ಥೆಯ ಮುಖಾಂತರ ಒದಗಿಸುವ ಆಹಾರ ಧಾನ್ಯಗಳ ಮೇಲಿನ ಸಹಾಯಧನ, ರಸಗೊಬ್ಬರ ಅಡುಗೆ ಅನಿಲ ಮತ್ತು ಸೀಮೆ ಎಣ್ಣೆ ಇವುಗಳ ಮೇಲಿನ ಸಹಾಯಧನ ದೊಡ್ಡ ಪ್ರಮಾಣದಲ್ಲಿದೆ. ಸರ್ಕಾರ ಅವುಗಳನ್ನು

ಒದಗಿಸಲು ಏನು ವೆಚ್ಚ ಮಾಡುತ್ತದೆಯೋ ಅದನ್ನು ಪೂರ್ಣವಾಗಿ ಗ್ರಾಹಕರಿಂದ ಹಿಂದಕ್ಕೆ ಪಡೆಯುತ್ತಿಲ್ಲದಿರುವುದರಿಂದಲೂ ಸರ್ಕಾರದಕ ಮೇಲೆ ಹೊರಜಾಸ್ತಿಯಾಗುತ್ತಿದೆ. ೧೯೯೦ರ ದಶಕದ ಆದಿಭಾಗದಿಂದಲೂ ಸಹಾಯಧನದ ಸುಧಾರಣೆಗೆ ಗಮನ ನೀಡಿದ್ದರೂ, ಸಹಾಯ ಧನಕ್ಕಾಗಿ ವೆಚ್ಚವಾಗುವ ಒಟ್ಟು ಮೊತ್ತ ಹೆಚ್ಚುತ್ತಲೇ ಇದೆ. ಆದರೆ ಜಿ.ಡಿ.ಪಿ.ಯ ಶೇಕಡಾವರು ಮತ್ತು ಕೇಂದ್ರದ ರಾಜಸ್ವದ ಶೇಕಡಾವಾರು ಇಳಿತಾಯ ಕಂಡುಬರುತ್ತಿದೆ. ಸಹಾಯಧನದ ಮೇಲಿನ ಕೇಂದ್ರ ಸರ್ಕಾರದ ವೆಚ್ಚ ೧೯೯೦-೯೧ರಲ್ಲಿ ಜಿ.ಡಿ.ಪಿ.ಯ ಶೇ.೨.೪ ಆಗಿದ್ದುದು ೨೦೦೩-೦೪ರಲ್ಲಿ ಶೇ.೧.೬೧ಕ್ಕೆ ಇಳಿಯಿತು ಹಾಗೂ ೧೯೯೦-೯೧ರಲ್ಲಿ ಕೇಂದ್ರ ಸರ್ಕಾರದ ರಾಜಸ್ವ ಸಂದಾಯ ಶೇ.೨೨.೧ ಇದ್ದುದು ೨೦೦೩ ೦೪ರಲ್ಲಿ ಶೇ.೧೭ ಇಳಿಯಿತು.

### ೩. ಬಂಡವಾಳ ಹಿಂತೆಗೆತ

ಕೇಂದ್ರ ಹಾಗೂ ಸರ್ಕಾರಗಳು ಸಾರ್ವಜನಿಕ ಉದ್ದಿಮೆಗಳಲ್ಲಿ ಅಪಾರವಾಗಿ ಬಂಡಾವಳ ಹೂಡಿವೆ. ಆದರೆ ಅವುಗಳಲ್ಲಿ ಬಹುತೇಕ ಉದ್ಯಮಗಳು ನಷ್ಟವನ್ನು ಅನುಭವಿಸುತ್ತಿವೆ. ಹನ್ನೆರಡನೆ ಹಣಕಾಸು ಆಯೋಗದ ವರದಿ ತಿಳಿಸುವಂತೆ ೧೧೯ ಕೇಂದ್ರ ಸರ್ಕಾರದ ಉದ್ಯಮಗಳು ಹಾಗೂ ೫೫೯ ರಾಜ್ಯ ಸರ್ಕಾರದ ಉದ್ಯಮಗಳು ಕೆಲಸ ಮಾಡುತ್ತಿಲ್ಲ ಇಲ್ಲವೇ ನಷ್ಟ ಅನುಭವಿಸುತ್ತಿವೆ. ಸರ್ಕಾರದ ಹಣಕಾಸು ಸುಸ್ಥಿತಿಗೆ ಬರಬೇಕಾದರೆ ಸಾರ್ವಜನಿಕ ಉದ್ಯಮಗಳ ಸುಧಾರಣೆಯಾಗಬೇಕೆಂಬುದನ್ನು ಮನಗಂಡು ೧೯೯೧ರ ಕೇಂದ್ರ ಸರ್ಕಾರದ ಕೈಗಾರಿಕಾ ನೀತಿಯಲ್ಲಿ ಬಂಡವಾಳ ಹಿಂತೆಗೆತವನ್ನು ಪ್ರತಿಪಾದಿಸಲಾಯಿತು. ರಾಜ್ಯ ಸರ್ಕಾರಗಳ ಹೊಸ ಕೈಗಾರಿಕಾ ನೀತಿಯಲ್ಲೂ ಇದನ್ನು ಒತ್ತಿಹೇಳಲಾಗಿದೆ. ಸರ್ಕಾರವು ಸಾರ್ವಜನಿಕ ಉದ್ಯಮಗಳಿಗೆ ಹೂಡಿರುವ ಷೇರುಗಳ ಒಂದು ಭಾಗವನ್ನು ಖಾಸಗಿಯವರಿಗೆ ಮಾರಾಟ ಮಾಡುವುದರ ಮೂಲಕ ಸರ್ಕಾರ ಹೂಡಿರುವ ಹಣವನ್ನು ಹಿಂದಕ್ಕೆ ಪಡೆಯುವುದು ಇದರ ಉದ್ದೇಶ. ಬಂಡವಾಳ ಹಿಂತೆಗೆತ ಆಯೋಗವನ್ನು ರಚಿಸಿ ಅದರ ಶಿಫಾರಸ್ಸಿಗನುಗುಣವಾಗಿ ಬಂಡವಾಳ ಹಿಂತೆಗೆತ ನೀತಿಯನ್ನು ಜಾರಿಗೊಳಿಸಲು ಕೇಂದ್ರ ಸರ್ಕಾರ ಪ್ರಯತ್ನಿಸಿದೆ. ಆನಂತರ ಎನ್.ಡಿ.ಎ. ಸರ್ಕಾರ ಬಂಡವಾಳ ಹಿಂತೆಗೆತಕ್ಕಾಗಿಯೇ ಪ್ರತ್ಯೇಕ ಮಂತ್ರಾಲಯವನ್ನು ಸ್ಥಾಪಿಸಿ ಅದರ ಮೂಲಕ ಬಂಡವಾಳ ಹಿಂತೆಗೆತಕ್ಕೆ ಪ್ರಯತ್ನಿಸಿತು. ಬಂಡವಾಳ ಹಿಂತೆಗೆತಕ್ಕೆ ಸಂಬಂಧಿಸಿದಂತೆ ಕ್ಲಿಷ್ಟ ಸಮಸ್ಯೆಗಳನ್ನು ಎದುರಿಸಬೇಕಾದುದರಿಂದ ಇದರಲ್ಲಿ ದೊಡ್ಡ ಪ್ರಗತಿ ಏನು ಆಗಲಿಲ್ಲ. ಈಗಿನ ಯು.ಪಿ.ಎ. ಸರ್ಕಾರ, ಎಡಪಂಥೀಯರ ವಿರೋಧವಿರುವುದರಿಂದ ಬಂಡವಾಳ ಹಿಂತೆಗೆತಕ್ಕೆ ಹೆಚ್ಚಿನ ಗಮನನೀಡಿಲ್ಲ.

### ೪. ಸಾಲ ಮತ್ತು ಕೊರತೆಗೆ ಸಂಬಂಧಿಸಿದ ಸುಧಾರಣೆಗಳು

ಸಾಲ ಮತ್ತು ಕೊರತೆಗೆ ಸಂಬಂಧಿಸಿದಂತೆಯೂ ಇತ್ತೀಚಿನ ದಿನಗಳಲ್ಲಿ ಮಹತ್ವದ ಸುಧಾರಣೆಗಳಾಗಿವೆ. ಕೊರತೆ ಹೆಚ್ಚುತ್ತಿದೆ ಎಂದರೆ ಸಾಲ ಹೆಚ್ಚುತಿದೆ ಎಂದೇ ಅರ್ಥ. ಕೊರತೆಯನ್ನು ನಿಯಂತ್ರಿಸಿದರೆ ಸಾಲದ ಬೆಳವಣಿಗೆಯನ್ನು ನಿಯಂತ್ರಿಸಿದಂತೆಯೇ. ಈ

ಉದ್ದೇಶಕ್ಕಾಗಿಯೇ ಕೇಂದ್ರ ಸರ್ಕಾರ ಮತ್ತು ಕೆಲವು ರಾಜ್ಯ ಸರ್ಕಾರಗಳು ಕೋಶೀಯ ಜವಾಬ್ದಾರಿ ಮತ್ತು ಬಜೆಟ್ ನಿರ್ವಹಣೆ ಕಾಯಿದೆಯನ್ನು ರೂಪಿಸಿ ಕೊರತೆ ಇಳಿಸಲು ನಿರ್ದಿಷ್ಟ ಗುರಿಗಳನ್ನು ನಿಗದಿಪಡಿಸಿರುವುದು. ಈ ವಿಷಯುವನ್ನು ಹಿಂದಿನ ಭಾಗದಲ್ಲಿಯೇ ವಿವರಿಸಲಾಗಿದೆ. ನಿಗದಿಗೊಳಿಸಿರುವ ಗುರಿಗಳನ್ನು ಬದಲಾಯಿಸದೆ ಮುಂಬರುವ ಐದು ವರ್ಷಗಳಲ್ಲಿ ಅವುಗಳನ್ನು ಮುಟ್ಟುವ ಪ್ರಯತ್ನ ನಡೆಯಬೇಕಾಗಿದೆ.

ಸಾರ್ವಜನಿಕ ಸಾಲದ ಮೇಲಿನ ಬಡ್ಡಿದರಗಳನ್ನು ಗಣನೀಯವಾಗಿ ಇಳಿಸಿರುವುದು ಇನ್ನೊಂದು ಪ್ರಮುಖ ಸುಧಾರಣೆ. ಸಾಲದ ಹೊರೆ ಮಿತಿ ಮೀರದಂತೆ ಮಾಡುವುದಕ್ಕೆ ಇದು ಸಹಾಯಕವಾಗುತ್ತದೆ. ಕೇಂದ್ರ ಸರ್ಕಾರವು ಅವಧಿ ಮುಗಿದು ಮರುಪಾವತಿ ಯಾಗಬೇಕಾಗಿರುವ ಹೆಚ್ಚಿನ ಬಡ್ಡಿದರದ ಸಾಲಗಳ ಜಾಗದಲ್ಲಿ ಕಡಿಮೆ ಬಡ್ಡಿರದ ಸಾಲವನ್ನು ಎತ್ತುತ್ತಿದೆ. ರಾಜ್ಯ ಸರ್ಕಾರಗಳು ಕಡಿಮೆ ಬಡ್ಡಿದರದಲ್ಲಿ ಹೊಸ ಸಾಲಗಳನ್ನು ಎತ್ತಿ ಹೆಚ್ಚಿನ ಬಡ್ಡಿದರದ ಹಿಂದಿನ ಸಾಲಗಳನ್ನು ತೀರಿಸುತ್ತಿವೆ. ೨೦೦೩-೦೪ರ ವರೆಗೆ ಒಟ್ಟು ಎಲ್ಲಾ ರಾಜ್ಯಗಳು ಶೇ.೧೩ಕ್ಕಿಂತ ಹೆಚ್ಚಿನ ಬಡ್ಡಿದರದಲ್ಲಿ ಮಾಡಿದ್ದ ರೂ.೬೦,೪೦೦ ಕೋಟಿ ಸಾಲವನ್ನು ೬.೫ಕ್ಕಿಂತ ಕಡಿಮೆ ದರದಲ್ಲಿ ಮಾರುಕಟ್ಟೆಯಲ್ಲಿ ಎತ್ತಿದ ಸಾಲ ಮತ್ತು ರಾಷ್ಟ್ರೀಯ ಸಣ್ಣ ಉಳಿತಾಯ ನಿಧಿಯಿಂದ ಶೇ.೯.೫ರ ದರದಲ್ಲಿ ಎತ್ತಿದ ಸಾಲದಿಂದ ಬಂದ ಹಣದಿಂದ ತೀರಿಸಿವೆ. ಇದರಿಂದ ಮುಂದಿನ ವರ್ಷಗಳಲ್ಲಿ ಸಾಲದ ಹೊರೆ ಕಡಿಮೆಯಾಗುತ್ತದೆ.

ಕೊರತೆಯಿಂದ ಹಣದುಬ್ಬರದ ಮೇಲೆ ಆಗುತ್ತಿದ್ದ ಪರಿಣಾಮವನ್ನು ನಿಯಂತ್ರಿಸುವ ಸಲುವಾಗಿ ಜಾರಿಗೆ ತಂದ ಮತ್ತೊಂದು ಸುಧಾರಣೆಯನ್ನು ಗಮನಿಸಬೇಕು. ೧೯೩೭ ರಿಂದಲೂ ಜಾರಿಯಲ್ಲಿದ್ದ ಪದ್ಧತಿಯ ಪ್ರಕಾರ ಕೇಂದ್ರಸರ್ಕಾರದ ಬಜೆಟ್‌ನಲ್ಲಿ ಕೊರತೆ ಇದ್ದಾಗ ಇದು ರಿಸರ್ವ್‌ಬ್ಯಾಂಕ್ ಆಫ್ ಇಂಡಿಯದಿಂದ ಅಪ್ರಯತ್ನ ಪೂರ್ವದ ಹಣೀಕರಣದಿಂದ ಭರಿಸಲ್ಪಡುತ್ತಿತ್ತು. ಅಂದರೆ ರಿಸರ್ವ್‌ಬ್ಯಾಂಕು ಆ್ಯಡ್ ಹಾಕ್ ಟ್ರೆಷರಿ ಬಿಲ್‌ಗಳನ್ನು ಸೃಷ್ಟಿಸುವುದರ ಮೂಲಕ ಸರ್ಕಾರದ ನಗದು ಶಿಲ್ಕನ್ನು ಮತ್ತೆ ಭರ್ತಿ ಮಾಡುತ್ತಿತ್ತು. ಇದು ಹಣಸೃಷ್ಟಿಯೇ ಆಗಿತ್ತು. ಇದರಿಂದ ಹಣದುಬ್ಬರ ಉಂಟಾಗುತ್ತಿತ್ತು. ಇದರ ಮೇಲೆ ನಿಯಂತ್ರಣವನ್ನು ಹೇರದೆ ಹಣದುಬ್ಬರವನ್ನು ನಿಯಂತ್ರಿಸಲು ಸಾಧ್ಯವಾಗುತ್ತಿರಲಿಲ್ಲ. ಆದ್ದರಿಂದ ಈ ಪದ್ಧತಿಯನ್ನು ೧೯೯೭ರಲ್ಲಿ ನಿಲ್ಲಿಸಲಾಯಿತು. ಆ್ಯಡ್ ಹಾಕ್ ಟ್ರೆಷರಿ ಬಿಲ್‌ಗಳ ಮೂಲಕ ಸರ್ಕಾರಕ್ಕೆ ಹಣ ಒದಗಿಸುವ ಬದಲು ಅದರ ಜಾಗದಲ್ಲಿ ಮಾರ್ಗೋಪಾಯ ಮುಂಗಡ ನೀಡುವ ಒಂದು ಕ್ರಮವನ್ನು ಜಾರಿಗೊಳಿಸಲಾಯಿತು. ಇದರ ಪ್ರಕಾರ ವೆಚ್ಚ ಮತ್ತು ರಾಜಸ್ವ ಸಂದಾಯಗಳ ನಡುವೆ ತಾತ್ಕಾಲಿಕವಾಗಿ ಸಾಮ್ಯವಿಲ್ಲದಿದ್ದಾಗ ಇದನ್ನು ರಿಸರ್ವ್ ಬ್ಯಾಂಕಿನ ಮುಂಗಡಗಳಿಂದ ಸರಿದೂಗಿಸಬಹುದು. ಮೂರು ತಿಂಗಳ ಒಳಗಾಗಿ ಈ ಮುಂಗಡವನ್ನು ಹಿಂದಿರುಗಿಸಬೇಕು. ಈ ಮುಂಗಡದ ಮಿತಿಯನ್ನು ಮೊದಲೇ ಸರ್ಕಾರ ಮತ್ತು ರಿಸರ್ವ್ ಬ್ಯಾಂಕಿನ ನಡುವಣ ಒಪ್ಪಂದದ ಮೂಲಕ ನಿರ್ಧರಿಸಲಾಗಿರುತ್ತದೆ. ಈ ಮಿತಿಯ ಶೇ.೭೫ರಷ್ಟನ್ನು ಉಪಯೋಗಿಸಿಕೊಂಡ ಕೂಡಲೇ ಸರ್ಕಾರ ಮಾರುಕಟ್ಟೆಯಲ್ಲಿ

ಹೊಸ ಸಾಲ ಪತ್ರಗಳ ಮೂಲಕ ಸಾಲ ಎತ್ತಬೇಕು. ಹಣದುಬ್ಬರಕ್ಕೆ ಕಾರಣವಾಗುವ ಅಪ್ರಯತ್ನಪೂರ್ವಕ ಹಣೀಕರಣವನ್ನು ಇದು ತಪ್ಪಿಸಿರುವುದರಿಂದ ಇದೊಂದು ಐತಿಹಾಸಿಕ ಸುಧಾರಣೆ ಎಂದು ಪರಿಗಣಿಸಲ್ಪಟ್ಟಿದೆ.

**ಸಾರಾಂಶ**

ಸಾರ್ವಜನಿಕ ಹಣಕಾಸು ಹೆಚ್ಚುತ್ತಿರುವ ಸರ್ಕಾರದ ಜವಾಬ್ದಾರಿಯಿಂದ ಹೆಚ್ಚು ಪ್ರಾಮುಖ್ಯತೆಯನ್ನು ಪಡೆದುಕೊಳ್ಳುತ್ತಿದೆ. ಸಾರ್ವಜನಿಕ ಹಣಕಾಸಿನಲ್ಲಿ ಸರ್ಕಾರದ ವರಮಾನ ಮತ್ತು ವೆಚ್ಚವನ್ನು ವಿಶ್ಲೇಷಣೆ ಮಾಡಲಾಗುತ್ತದೆ. ಇತ್ತೀಚೆಗೆ ರಾಜ್ಯಕೋಶ ನೀತಿ, ಆಯವ್ಯಯ ಪಟ್ಟಿ, ಸಾರ್ವಜನಿಕ ಸಾಲ, ಕೊರತೆ ಹಣಕಾಸು ಸಾರ್ವಜನಿಕ ಹಣಕಾಸಿನಲ್ಲಿ ತಮ್ಮ ವ್ಯಾಪ್ತಿಯನ್ನು ಹೆಚ್ಚಿಸಿಕೊಂಡು ಸಾರ್ವಜನಿಕ ಹಣಕಾಸನ್ನು ಸಾರ್ವಜನಿಕ ಅರ್ಥಶಾಸ್ತ್ರವೆಂದು ಕರೆಯಲಾಗುತ್ತಿದೆ. ಈ ಅಧ್ಯಾಯದಲ್ಲಿ ಕೇಂದ್ರ ಸರ್ಕಾರಕ್ಕೆ ಸಂಬಂಧಪಟ್ಟಂತೆ ರಾಜ್ಯ ಕೋಶ ನೀತಿ ಮತ್ತು ಮುಂಗಡ ಪತ್ರ, ವರಮಾನದ ಮೂಲಗಳು, ವೆಚ್ಚದ ಬಾಬುಗಳು, ಸಾರ್ವಜನಿಕ ಸಾಲ ಮತ್ತು ಆಯ ವ್ಯಯ ಪಟ್ಟಿಯ ಕೊರತೆಯನ್ನು ವಿಶ್ಲೇಷಣೆ ಮಾಡಿ ಪರಿಚಯಿಸಲಾಗಿದೆ.

ಅಧ್ಯಾಯ ೮.೧ರಲ್ಲಿ ಕೇಂದ್ರ ಸರ್ಕಾರದ ರಾಜ್ಯ ಕೋಶ ನೀತಿ ಮತ್ತು ಮುಂಗಡ ಪತ್ರದ ಬಗ್ಗೆ ವಿವರಣೆಯನ್ನು ನೀಡುತ್ತದೆ. ಆರ್ಥಿಕ ಚಟುವಟಿಕೆಗಳಲ್ಲಿ ನಿರೀಕ್ಷಿಸಿದ ಪ್ರಗತಿ ಸಾಧಿಸಲು ರಾಜ್ಯಕೋಶ ನೀತಿ ಸಹಾಯಕವಾಗಿದೆ. ಸರ್ಕಾರ ರಾಜ್ಯಕೋಶ ನೀತಿಯಲ್ಲಿ ತೆರಿಗೆ, ಸಾರ್ವಜನಿಕ ವೆಚ್ಚ, ಸಾರ್ವಜನಿಕ ಸಾಲ, ಕೊರತೆ ಹಣಕಾಸು ಹಾಗೂ ಮುಂಗಡ ಪತ್ರವನ್ನು ಪರಿಕರಗಳಾಗಿ ಬಳಸುತ್ತದೆ. ಬಡ್ಜೆಟ್ ಮುಂಬರುವ ಹಣಕಾಸಿನ ವರ್ಷಕ್ಕೆ ಸರ್ಕಾರದ ವರಮಾನ ಮತ್ತು ವೆಚ್ಚವನ್ನು ತೋರಿಸುವ ಪಟ್ಟಿಯಾಗಿದ್ದು ಸಂಪನ್ಮೂಲಗಳ ಸಂಗ್ರಹಣೆ, ಹಂಚಿಕೆ ಮತ್ತು ಪ್ರಗತಿಯ ಅಸ್ತ್ರವಾಗಿದೆ. ಇಲ್ಲಿ ಸಮತೋಲನ ಬಡ್ಜೆಟ್, ಹೆಚ್ಚುವರಿ ಬಡ್ಜೆಟ್ ಮತ್ತು ಕೊರತೆ ಬಡ್ಜೆಟ್‌ನ್ನು ವಿವರಿಸಲಾಗಿದೆ.

ಅಧ್ಯಾಯ ೮.೨ರಲ್ಲಿ ಕೇಂದ್ರ ಸರ್ಕಾರದ ರಾಜಸ್ವ ಮೂಲಗಳನ್ನು ವಿಶ್ಲೇಷಣೆ ಮಾಡಲಾಗಿದೆ. ಕೇಂದ್ರ ಸರ್ಕಾರವು ವರಮಾನ, ಆಸ್ತಿಗಳು ಹಾಗೂ ಸರಕುಗಳ ಮೇಲೆ ವಿಧಿಸುತ್ತಿರುವ ತೆರಿಗೆಗಳನ್ನು ವಿವರಿಸಲಾಗಿದೆ. ತೆರಿಗೆ ಮತ್ತು ತೆರಿಗೇತರ ವರಮಾನಗಳನ್ನು ಅಂಕಿ-ಅಂಶಗಳ ಸಹಾಯದಿಂದ ವಿಶ್ಲೇಷಣೆ ಮಾಡಲಾಗಿದೆ. ಈ ಅಧ್ಯಾಯದಲ್ಲಿ ದೇಶೀಯ ಮತ್ತು ವಿದೇಶಿ ಮೂಲಗಳಿಂದ ಬಂಡವಾಳ ವರಮಾನವನ್ನು ಅಭಿವೃದ್ಧಿ ಕಾರ್ಯಕ್ರಮಗಳಿಗೆ ಹೇಗೆ ಪಡೆದುಕೊಳ್ಳಲಾಗುತ್ತಿದೆ ಎಂಬುದನ್ನು ತಿಳಿಸಿದೆ. ತೆರಿಗೆ ಪದ್ಧತಿಯಲ್ಲಿ ಸುಧಾರಣೆ ಮಾಡಿ ಮೌಲ್ಯಾಧರಿತ ತೆರಿಗೆಯನ್ನು ಜಾರಿಗೆ ತಂದಿರುವುದರ ಬಗ್ಗೆ ಚಿತ್ರಣವನ್ನು ನೀಡಲಾಗಿದೆ. ಇಲ್ಲಿ ಮೌಲ್ಯಾಧರಿತ ತೆರಿಗೆಯ ಅನುಕೂಲಗಳು ಮತ್ತು ಅನಾನುಕೂಲಗಳನ್ನು ವಿವರಿಸಲಾಗಿದೆ.

ಅಧ್ಯಾಯ ೮.೩ರಲ್ಲಿ ಕೇಂದ್ರ ಸರ್ಕಾರದ ವೆಚ್ಚದ ವಿವರಗಳನ್ನು ಅಂಕಿ ಅಂಶಗಳ ಸಹಿತ ನೀಡಲಾಗಿದೆ. ರಾಜಸ್ವ ವೆಚ್ಚ ಮತ್ತು ಬಂಡವಾಳ ವೆಚ್ಚದ ಅರ್ಥವಿವರಣೆ ಮತ್ತು ವ್ಯತ್ಯಾಸವನ್ನು ತಿಳಿಸಲಾಗಿದೆ. ಅಭಿವೃದ್ಧಿ ಮತ್ತು ಅಭಿವೃದ್ಧಿಯೇತರ ವೆಚ್ಚಗಳನ್ನು ಅಂಕಿ ಅಂಶಗಳ ಸಹಾಯದಿಂದ ವಿಶ್ಲೇಷಿಸಲಾಗಿದೆ.

ಅಧ್ಯಾಯ ೮.೪ರಲ್ಲಿ ಸಾರ್ವಜನಿಕ ಸಾಲದ ಅರ್ಥ ವಿವರಣೆ ಹಾಗೂ ಪ್ರಾಮುಖ್ಯತೆಯನ್ನು ನೀಡಲಾಗಿದೆ. ಆಂತರಿಕ ಮತ್ತು ಬಾಹ್ಯ ಸಾಲವನ್ನು ಸಹ ಇತರ ಸಾಲದ ಪರಿಕರಗಳೊಂದಿಗೆ ವಿವರಿಸಲಾಗಿದೆ. ಬಾಹ್ಯ ಸಾಲದ ಚಿತ್ರಣವನ್ನು ಅಂಕಿ ಅಂಶಗಳ ಸಹಾಯದಿಂದ ನೀಡಲಾಗಿದೆ.

ಕೊನೆಯದಾಗಿ ಅಧ್ಯಾಯ ೮.೫ರಲ್ಲಿ ಕೊರತೆಯ ಬಜ್ಜೆಟ್ ಅರ್ಥವಿವರಣೆ ಮತ್ತು ಪ್ರಾಮುಖ್ಯತೆಯನ್ನು ವಿವರಿಸಲಾಗಿದೆ. ಕೊರತೆಯ ಬಜ್ಜೆಟ್‌ನ ವಿಧಗಳನ್ನು ಸಹ ವಿಶ್ಲೇಷಿಸಲಾಗಿದೆ. ರಾಜಸ್ವ ಕೊರತೆ, ವಿತ್ತೀಯ ಕೊರತೆ ಮತ್ತು ಪ್ರಾಥಮಿಕ ಕೊರತೆ ಬಜ್ಜೆಟ್‌ನಲ್ಲಿ ಹೇಗೆ ಕಂಡುಬರುತ್ತದೆ ಎಂಬುದನ್ನು ತಿಳಿಸಲಾಗಿದೆ. ಭಾರತದಲ್ಲಿ ವಿತ್ತೀಯ ಕ್ಷೇತ್ರದ ಸುಧಾರಣೆಗೆ ತೆಗೆದುಕೊಂಡ ಕ್ರಮಗಳನ್ನು ಪರಿಶೀಲಿಸಲಾಗಿದೆ.

## ೮.೭. ಪಾರಿಭಾಷಿಕ ಕೋಶ

ಸಾರ್ವಜನಿಕ ಹಣಕಾಸು : ಸರ್ಕಾರದ ವರಮಾನ, ವೆಚ್ಚ ಹಾಗೂ ಇತರೆ ಹಣಕಾಸಿನ ವ್ಯವಹಾರಗಳ ಅಧ್ಯಯನ.

ಸಂಯುಕ್ತ ಹಣಕಾಸು ವ್ಯವಸ್ಥೆ : ಕೇಂದ್ರ ಮತ್ತು ರಾಜ್ಯ ಸರ್ಕಾರಗಳಿಗೆ ಹೊಂದಿಕೊಂಡಿರುವ ಹಣಕಾಸು ವ್ಯವಸ್ಥೆ.

ಲಂಬ ಅಸಮಾನತೆ : ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ನಡುವೆ ಕಂಡುಬರುವ ವಿತ್ತೀಯ ಅಸಮಾನತೆ

ಸಮತಲನ ಅಸಮಾನತೆ : ಬೇರೆ ಬೇರೆ ರಾಜ್ಯಗಳ ನಡುವೆ ಕಂಡುಬರುವ ವಿತ್ತೀಯ ಅಸಮಾನತೆ.

ವಿತ್ತೀಯ ನೀತಿ : ಸರ್ಕಾರ ತೆರಿಗೆ, ವೆಚ್ಚ, ಸಾಲ, ಕೊರತೆ ಹಣಕಾಸು ಮತ್ತು ಮುಂಗಡ ಪತ್ರದ ಬಗ್ಗೆ ಅನುಸರಿಸುವ ನೀತಿ.

ಮುಂಗಡ ಪತ್ರ ಬಡ್ಜೆಟ್ : ಸರ್ಕಾರದ ವರಮಾನ ಮತ್ತು ವೆಚ್ಚವನ್ನು ಮುಂದಿನ ಹಣಕಾಸಿನ ವರ್ಷಕ್ಕೆ ತೋರಿಸುವ ಪಟ್ಟಿ

ರಾಜಸ್ವ ಮೂಲ : ವರಮಾನದ ಮೂಲ.

ಸಮತೋಲನ ಬಡ್ಜೆಟ್ : ಸರ್ಕಾರದ ವರಮಾನ ಮತ್ತು ವೆಚ್ಚ ಸಮಾನವಾಗಿರುವ ಮುಂಗಡ ಪತ್ರ

ಹೆಚ್ಚುವರಿ ಬಡ್ಜೆಟ್ : ಸರ್ಕಾರದ ವರಮಾನ ವೆಚ್ಚಕ್ಕಿಂತ ಹೆಚ್ಚಾಗಿರುವ ಬಡ್ಜೆಟ್

ಕೊರತೆ ಬಡ್ಜೆಟ್ : ಸರ್ಕಾರದ ವರಮಾನ ವೆಚ್ಚಕ್ಕಿಂತ ಕಡಿಮೆ ಇರುವ ಬಡ್ಜೆಟ್

ರಾಜಸ್ವ ಕೊರತೆ : ತೆರಿಗೆ ಮತ್ತು ತೆರಿಗೆಯೇತರ ವರಮಾನ ಸರ್ಕಾರದ ವೆಚ್ಚಕ್ಕಿಂತ ಕಡಿಮೆಯಾಗಿರುವುದು.

ರಾಜಸ್ವ ಸ್ವೀಕೃತಿ : ತೆರಿಗೆ ಮತ್ತು ತೆರಿಗೆಯೇತರ ಮೂಲದಿಂದ ಪಡೆದುಕೊಳ್ಳುವ ವರಮಾನ

ಬಂಡವಾಳ ಸ್ವೀಕೃತಿ : ಆಂತರಿಕ ಮತ್ತು ಬಾಹ್ಯ ಮೂಲಗಳಿಂದ ಅಭಿವೃದ್ಧಿ ಕಾರ್ಯಗಳಿಗೆ ಪಡೆದುಕೊಳ್ಳುವ ಸಾಲ ರೂಪದ ವರಮಾನ.

ಮೌಲ್ಯ ವರ್ಧಿತ ತೆರಿಗೆ (VAT) : ಉತ್ಪಾದನೆ ಮತ್ತು ವಿತರಣೆಯ ವಿವಿಧ ಹಂತಗಳಲ್ಲಿ ಸರಕಿನ ಮೇಲೆ ಸೇರಿಸಲ್ಪಟ್ಟ

| | | |
|---|---|---|
| | | ಮೌಲ್ಯಕ್ಕೆ ಅನುಗುಣವಾಗಿ ವಿಧಿಸುವ ತೆರಿಗೆ. |
| ರಾಜಸ್ವ ವೆಚ್ಚ | : | ಯೋಜನೇತರ ಮತ್ತು ಅಭಿವೃದ್ಧಿಯೇತರ ಕಾರ್ಯಕ್ರಮಗಳ ಮೇಲೆ ಸರ್ಕಾರದ ವೆಚ್ಚ |
| ಬಂಡವಾಳ ವೆಚ್ಚ | : | ಅಭಿವೃದ್ಧಿ ಮತ್ತು ಯೋಜನಾ ಕಾರ್ಯಕ್ರಮಗಳ ಮೇಲೆ ಸರ್ಕಾರವು ಮಾಡುವ ವೆಚ್ಚ. |
| ಯೋಜನಾ ವೆಚ್ಚ | : | ಆರ್ಥಿಕ ಯೋಜನೆಯಲ್ಲಿ ಸೇರಿಸಲ್ಪಟ್ಟಿರುವ ಕಾರ್ಯಕ್ರಮಗಳ ಮೇಲಿನ ವೆಚ್ಚ. |
| ಯೋಜನೇತರ ವೆಚ್ಚ | : | ಅಭಿವೃದ್ಧಿಯೇತರ ಆರ್ಥಿಕ ಮತ್ತು ಸಾಮಾಜಿಕ ಕಾರ್ಯಕ್ರಮಗಳ ಮೇಲೆ ಮಾಡುವ ವೆಚ್ಚ. |
| ಸಾರ್ವಜನಿಕ ಸಾಲ | = | Public debt |
| ಆಂತರಿಕ ಸಾಲ | = | Internal debt |
| ಬಾಹ್ಯ ಸಾಲ | = | External debt |
| ಭವಿಷ್ಯ ನಿಧಿ | = | Provides fund |
| ಹೊಣೆಗಾರಿಕೆಗಳು | = | Liabilities |
| ರಾಜಸ್ವ ಸಂದಾಯಗಳು | = | Revenue reciepts |
| ರಾಜಸ್ವ ವೆಚ್ಚ | = | Revenue expendeture |
| ಬಜೆಟ್ ಕೊರತೆ | = | Budget defier |
| ರಾಜಸ್ವ ಕೊರತೆ | = | Revenue Defier |
| ಕೋಶೀಯ ಕೊರತೆ | = | Fiscal defieir |
| ಪ್ರಾಥಮಿಕ ಕೊರತೆ | = | Primary deieir |
| ಮೇಲ್ತೆರಿಗೆ | = | Surchargy |
| ಶೃಂಗದರ | = | Peak rate |
| ಅಗ್ರ ದರ | = | Top rate |
| ಸೇವೆಗಳ ಮೇಲಿನ ತೆರಿಗೆ | = | Service tax |
| ಮೌಲ್ಯ ವರ್ಧಿತ ತೆರಿಗೆ | = | Value added tax |
| ಬಂಡವಾಳ ಹಿಂತೆಗೆತ | = | Disin vestment |
| ಕೊರತೆಯ ಹಣೀಕರಣ | = | Monetization of defieir |
| ಅಪ್ರಯತ್ನ ಪೂರ್ವಕ ಹಣೀಕರಣ | = | Automatic monotization |

## ೮.೮ ಪ್ರಶ್ನೆಗಳು

ಒಂದು ವಾಕ್ಯದಲ್ಲಿ ಉತ್ತರಿಸಿ. ೧ ಅಂಕ

೧. ಸಂಯುಕ್ತ ವಿತ್ತೀಯ ವ್ಯವಸ್ಥೆ ಎಂದರೇನು?
೨. ಸಾರ್ವಜನಿಕ ಹಣಕಾಸು ಎಂದರೇನು?
೩. ವೈಯಕ್ತಿಕ ವರಮಾನ ತೆರಿಗೆ ಮತ್ತು ಕಾರ್ಪೋರೇಷನ್ ತೆರಿಗೆಯ ವ್ಯತ್ಯಾಸ ತಿಳಿಸಿರಿ.
೪. ಭಾರತದ ಸಂವಿಧಾನ ಅನುಸೂಚಿ ಯಾವ ವಿಚಾರವನ್ನು ತಿಳಿಸುತ್ತದೆ.
೫. ವಿತ್ತೀಯ ನೀತಿ ಎಂದರೇನು?
೬. ಬಡ್ಜೆಟ್ ಎಂದರೇನು?
೭. ಕೇಂದ್ರದ ತೆರಿಗೆಯೇತರ ವರಮಾನಕ್ಕೆ ಎರಡು ಉದಾಹರಣೆ ನೀಡಿ.
೮. ಮೌಲ್ಯ ವರ್ಧಿತ ತೆರಿಗೆಯನ್ನು ವ್ಯಾಖ್ಯಾನಿಸಿ.
೯. ರಾಜಸ್ವ ವೆಚ್ಚ ಎಂದರೇನು?
೧೦. ಬಂಡವಾಳ ವೆಚ್ಚ ಎಂದರೇನು?
೧೧. ರಾಜಸ್ವ ಕೊರತೆ ಎಂದರೇನು?
೧೨. ರಾಜ್ಯ ಕೋಶೀಯ ಕೊರತೆ ಎಂದರೇನು?
೧೩. ಪ್ರಾಥಮಿಕ ಕೊರತೆಯನ್ನು ವ್ಯಾಖ್ಯಾನಿಸಿ.
೧೪. ಕೊರತೆ ಮತ್ತು ಹೆಚ್ಚುವರಿ ಬಡ್ಜೆಟ್‌ಗಿರುವ ವ್ಯತ್ಯಾಸ ತಿಳಿಸಿ.

ಪ್ರತಿಯೊಂದಕ್ಕೆ ನಾಲ್ಕು ವಾಕ್ಯಗಳಲ್ಲಿ ಉತ್ತರಿಸಿ. ೨ ಅಂಕಗಳು

೧. ವೈಯಕ್ತಿಕ ವರಮಾನ ತೆರಿಗೆ ಬಗ್ಗೆ ವಿವರಿಸಿ.
೨. ಆಂತರಿಕ ಮತ್ತು ಬಾಹ್ಯ ವರಮಾನದ ಮೂಲಗಳನ್ನು ತಿಳಿಸಿ.
೩. ಕೇಂದ್ರದ ಅಭಿವೃದ್ಧಿ ಮತ್ತು ಅಭಿವೃದ್ಧಿಯೇತರ ವೆಚ್ಚಗಳಿರುವ ವ್ಯತ್ಯಾಸ ತಿಳಿಸಿ.
೪. ಸಾರ್ವಜನಿಕ ವಿಧಗಳಾವುವು?
೫. ಪ್ರಾಥಮಿಕ ಕೊರತೆ ಮತ್ತು ವಿತ್ತೀಯ ಕೊರತೆಗಿರುವ ವ್ಯತ್ಯಾಸ ತಿಳಿಸಿ.
೬. ವಿತ್ತೀಯ ನೀತಿಯ ಪರಿಕರಗಳಾವುವು?

ಪ್ರತಿಯೊಂದಕ್ಕೆ ೧೫ ರಿಂದ ೨೦ ವಾಕ್ಯಗಳಲ್ಲಿ. ಉತ್ತರಿಸಿ ೫ ಅಂಕಗಳು

೧. ವಿತ್ತೀಯ ಗುರಿಗಳನ್ನು ವಿವರಿಸಿ.
೨. ಕೇಂದ್ರ ಸರ್ಕಾರದ ವರಮಾನದ ಮೂಲಗಳನ್ನು ತಿಳಿಸಿ.
೩. ಕೇಂದ್ರ ಸರ್ಕಾರದ ರಾಜಸ್ವ ಮತ್ತು ಬಂಡವಾಳ ವೆಚ್ಚವನ್ನು ವಿವರಿಸಿ.
೪. ಭಾರತದ ವಿತ್ತೀಯ ಸಂಯುಕ್ತತೆಯ ಲಕ್ಷಣಗಳನ್ನು ತಿಳಿಸಿ.
೫. ರಾಜ್ಯ ಸರ್ಕಾರಗಳ ರಾಜಸ್ವ ಮೂಲಗಳ ಬಗ್ಗೆ ಬರೆಯಿರಿ.
೬. ರಾಜ್ಯಕೋಶ ಖೋತಾ ಮತ್ತು ಮುಂಗಡ ಪತ್ರ ಖೋತಾಗಳಿರುವ ವ್ಯತ್ಯಾಸ ತಿಳಿಸಿ.

೭. ೨೦೦೪-೦೫ ಬಡ್ಜೆಟ್‌ನಲ್ಲಿ ವೈಯಕ್ತಿಕ ವರಮಾನ ತೆರಿಗೆಯ ಸುಧಾರಣೆ ತಿಳಿಸಿ.

೮. ಕೇಂದ್ರ ಸರ್ಕಾರದ ಅಭಿವೃದ್ಧಿ ಮತ್ತು ಅಭಿವೃದ್ಧಿಯೇತರ ವೆಚ್ಚಗಳನ್ನು ತಿಳಿಸಿ.

**ಪ್ರತಿಯೊಂದಕ್ಕೆ ೪೦ ವಾಕ್ಯಗಳಲ್ಲಿ ಉತ್ತರಿಸಿ.** **೧೦ ಅಂಕಗಳು**

೧. ಕೆಂದ್ರ ಸರ್ಕಾರದ ತೆರಿಗೆ ಮತ್ತು ತೆರಿಗೆಯೇತರ ವರಮಾನದ ಮೂಲಗಳನ್ನು ತಿಳಿಸಿ.

೨. ಕೇಂದ್ರ ಸರ್ಕಾರದ ವೆಚ್ಚದ ಬಾಬುಗಳನ್ನು ವಿವರಿಸಿ.

೩. ರಾಜ್ಯ ಸರ್ಕಾರಗಳ ವರಮಾನ ಮತ್ತು ವೆಚ್ಚದ ಮೂಲಗಳನ್ನು ಪರಿಶೀಲಿಸಿ.

೪. ಮೌಲ್ಯಾಧರಿತ ತೆರಿಗೆ ಎಂದರೇನು? ಈ ತೆರಿಗೆಯ ಅನುಕೂಲ ಮತ್ತು ಅನಾನುಕೂಲಗಳನ್ನು ತಿಳಿಸಿ.

೫. ಕೇಂದ್ರ ಸರ್ಕಾರದ ಆಂತರಿಕ ಮತ್ತು ಬಾಹ್ಯ ಸಾಲದ ಗಾತ್ರವನ್ನು ತಿಳಿಸಿ.

೬. ಬಡ್ಜೆಟ್ ಕೊರತೆ ಎಂದರೇನು? ಬಡ್ಜೆಟ್ ಕೊರತೆಯ ವಿಧಗಳನ್ನು ತಿಳಿಸಿ.

೭. ವಿತ್ತೀಯ ನೀತಿ ಎಂದರೇನು? ವಿತ್ತೀಯ ನೀತಿಯ ಗುರಿಗಳನ್ನು ತಿಳಿಸಿ.

೮. ಸಾರ್ವಜನಿಕ ಸಾಲ ಎಂದರೇನು? ಸಾರ್ವಜನಿಕ ವಿಧಗಳನ್ನು ತಿಳಿಸಿ.

# ಅಧ್ಯಾಯ ೯

## ಆರ್ಥಿಕ ಯೋಜನೆ

ಆರ್ಥಿಕ ಯೋಜನೆಗಳು ಅರ್ಥ ಹಾಗೂ ಗುರಿಗಳು
ಯೋಜನೆಗಳ ಐತಿಹಾಸಿಕ ಹೆಜ್ಜೆಗಳು
ಯೋಜನೆಗಳ ಪಕ್ಷಿನೋಟ
ಯೋಜನೆಗಳ ಯಾಂತ್ರಿಕ ವ್ಯವಸ್ಥೆ ರಾಷ್ಟ್ರೀಯ ಯೋಜನಾ ಆಯೋಗ
ರಾಷ್ಟ್ರೀಯ ಅಭಿವೃದ್ಧಿ ಮಂಡಳಿ
ಕರ್ನಾಟಕದಲ್ಲಿ ಯೋಜನಾ ಯಂತ್ರ
ಒಂಬತ್ತನೆ ಪಂಚವಾರ್ಷಿಕ ಯೋಜನೆ
ಹತ್ತನೆಯ ಪಂಚವಾರ್ಷಿಕ ಯೋಜನೆ
ಮಾದರಿಯ ಪ್ರಶ್ನೆಗಳು

**ಆರ್ಥಿಕ ಯೋಜನೆಗಳು**

ಆರ್ಥಿಕ ಯೋಜನೆಗಳು, ಒಂದು ರಾಷ್ಟ್ರದ ನೈಸರ್ಗಿಕ ಹಾಗೂ ಮಾನವ ಸಂಪತ್ತನ್ನು ಯೋಗ್ಯ ರೀತಿಯಲ್ಲಿ ಬಳಸಿಕೊಂಡು, ಪೂರ್ವನಿರ್ಣಯಿತ ಗುರಿಗಳನ್ನು, ನಿರ್ದಿಷ್ಟ ಅವಧಿಯಲ್ಲಿ ಸಾಧಿಸಲು ಸರ್ಕಾರ ಸಿದ್ಧಪಡಿಸಿದ ಒಂದು ವ್ಯವಸ್ಥಿತ ಶ್ರಮವಾಗಿದೆ.

ಆರ್ಥಿಕ ಯೋಜನೆಗಳು ರಾಷ್ಟ್ರದ ಉಪಭೋಗ, ಉತ್ಪಾದನೆ, ಹಂಚಿಕೆ ಮೇಲೆ ಗಾಢವಾದ ಪರಿಣಾಮ ಬೀರುತ್ತವೆ. ಆರ್ಥಿಕ ಚಟುವಟಿಕೆಗಳನ್ನು ಒಂದು ಆರೋಗ್ಯಕರ ಮಾರ್ಗದಲ್ಲಿ ಸಾಗಿಸಲು ಅವುಗಳು ಸಹಾಯಕಾರಿಯಾಗಿವೆ. ದೇಶದಲ್ಲಿ ಏನನ್ನು ಉತ್ಪಾದಿಸಬೇಕು ಎಷ್ಟು ಉತ್ಪಾದಿಸಬೇಕು ಎಷ್ಟು ಉತ್ಪಾದಿಸಬೇಕು. ಹೇಗೆ ಉತ್ಪಾದಿಸಬೇಕು? ಎಲ್ಲಿ ಉತ್ಪಾದಿಸಬೇಕು? ಯಾರಿಗಾಗಿ ಉತ್ಪಾದಿಸಬೇಕು ಹೇಗೆ ವಿತರಿಸಬೇಕು? ಎಂಬ ಬಗ್ಗೆ ಆರ್ಥಿಕ ಚಿಂತನೆ ಮಾಡಿ, ಶ್ರಮ ಕೈಗೊಳ್ಳುವ ವ್ಯವಸ್ಥೆಯಾಗಿದೆ. ಆರ್ಥಿಕ ಯೋಜನೆಗಳು, ನಿರ್ದಿಷ್ಟ ಗುರಿಗಳನ್ನು ಹೊಂದಿರುತ್ತದೆ. ಅವು ರಾಷ್ಟ್ರದ ಸಮರ್ಹ ಆರ್ಥಿಕ ವ್ಯವಸ್ಥೆಗಳ ವಿವಿಧ ರಂಗಗಳಿಗೆ ಅನ್ವಯಿಸುತ್ತವೆ. ಯೋಜನೆಗಳನ್ನು ಒಂದು ನಿರ್ದಿಷ್ಟ ಅವಧಿಯನ್ನು ಹೊಂದಿದ್ದು, ಯೋಜನಾ ಕರಡನ್ನು ಸಿದ್ಧಪಡಿಸಲು, ಕೇಂದ್ರಿಯ ಪ್ರಾರಿಶಾಹವನ್ನು ಹೊಂದಿರುತ್ತದೆ.

ಭಾರತದಲ್ಲಿ ಯೋಜನಾ ಅವಧಿಯು ಪ್ರತಿ ಐದು ವರ್ಷಗಳಿಗೊಮ್ಮೆ ಏಪ್ರಿಲ್‌ನಿಂದ ಪ್ರಾರಂಭಿಸಿ ೩೧ನೇ ಮಾರ್ಚ್‌ಗೆ ಕೊನೆಗೊಳ್ಳುತ್ತವೆ.

ಭಾರತದ ೫ ದಶಕಗಳ ಯೋಜನಾ ಅವಧಿಯಲ್ಲಿ ದೇಶವು ಆಹಾರದ ಪರಾವಲಂಬನೆಯಿಂದ, ಸ್ವಾವಲಂಬನೆಗೆ, ಬಡತನದಿಂದ ಸಮೃದ್ಧಿಯೆಡೆಗೆ, ಅನಕ್ಷರತೆಯಿಂದ ಸಾಕ್ಷರತೆಯೆಡೆಗೆ ಸಾಗುತ್ತಿದೆ. ಸಕ್ಕರೆ, ಹಣ್ಣುಗಳ ದ್ವಿದಳ ಧಾನ್ಯಗಳ ಉತ್ಪಾದನೆಯಲ್ಲಿ ಅಂತಾರಾಷ್ಟ್ರೀಯ ಸ್ಥಾನಗಳನ್ನು ಸಾಧಿಸಿದೆ. ಮಾಹಿತಿ ತಂತ್ರಜ್ಞಾನದಲ್ಲಿ ಶಾಂತಿಯನ್ನು ಸಾರಿಸುತ್ತಿದೆ. ಮಾನವ ಅಭಿವೃದ್ಧಿ ಸೂಚಕ, ಭೌತಿಕ ಗುಣಮಟ್ಟ ಜೀವನ ಸೂಚಕಗಳಲ್ಲಿ ಸುಧಾರಣೆಯಾಗುತ್ತಿದೆ. ಭಾರತವು ಜೈವಿಕ ತಂತ್ರಜ್ಞಾನ, ಸಂಪರ್ಕ ಸೇವೆ, ಅನುವಂಶಿಕ ತಂತ್ರಜ್ಞಾನ ಸೇರಿದಂತೆ ಮುಂತಾದ ಕ್ಷೇತ್ರಗಳಲ್ಲಿ ಸಾಕಷ್ಟು ಪ್ರಗತಿಯನ್ನು ಸಾಧಿಸುತ್ತಿದೆ. ಭಾರತೀಯರ ಮೆದುಳುಗಳು ವಿವಿಧ ಸೇವಾ ಕ್ಷೇತ್ರಗಳಲ್ಲಿ ಸಾಧನೆ ಮಾಡಿ, ಜಗತ್ತಿಗೆ ಮಾದರಿಯಾಗುತ್ತಿದೆ.

### ಆರ್ಥಿಕ ಯೋಜನೆಯ ಅರ್ಥ

ಆರ್ಥಿಕ ಯೋಜನೆ ಎಂದು ಒಂದು ದೇಶದ ಸಮಗ್ರ ಆರ್ಥಿಕ ಚಟುವಟಿಕೆಗಳನ್ನು ವೈಜ್ಞಾನಿಕವಾಗಿ ಯೋಜಿಸಿ, ದೇಶದ ಉತ್ಪಾದನೆಯನ್ನು ಹೆಚ್ಚಿಸಿ, ಜನರ ಜೀವನಮಟ್ಟವನ್ನು ಸುಧಾರಿಸುವ ಒಂದು ಕಾರ್ಯತಂತ್ರವಾಗಿದೆ.

ಎಡ್.ಡಿ.ಡಿಕೆನ್ಸ್‌ರ ಪ್ರಕಾರ, "ಆರ್ಥಿಕ ಯೋಜನೆ ಎಂದರೆ ಪ್ರಮುಖ ಆರ್ಥಿಕ ತೀರ್ಮಾನಗಳಾದ ಏನನ್ನು ಮತ್ತು ಎಷ್ಟನ್ನು ಉತ್ಪಾದಿಸಬೇಕು, ಹೇಗೆ, ಯಾವಾಗ ಮತ್ತು ಎಲ್ಲಿ ಉತ್ಪಾದಿಸಬೇಕು ಮತ್ತು ಯಾರಿಗೆ ವಿತರಿಸಬೇಕು ಆರ್ಥಿಕ ವ್ಯವಸ್ಥೆಯ ಸಮಗ್ರ ಸಮೀಕ್ಷೆಯ ಆಧಾರದ ಮೇಲೆ ಒಂದು ನಿರ್ದಿಷ್ಟ ಸಂಘಟನೆಯು, ಪ್ರಜ್ಞಾಪೂರ್ಣವಾಗಿ ನಿರ್ಣಯಕ್ಕನುಸಾರವಾಗಿ ಕೈಗೊಳ್ಳುವ ಪದ್ಧತಿ."

### ಆರ್ಥಿಕ ಯೋಜನೆಯ ಗುರಿಗಳು

ಭಾರತದ ಆರ್ಥಿಕ ಯೋಜನೆಯ ಪ್ರಮುಖ ಗುರಿಗಳು ಈ ಕೆಳಗಿನಂತಿವೆ.

೧. ದೇಶದ ಆರ್ಥಿಕ ಅಭಿವೃದ್ಧಿಯನ್ನು ಸಾಧಿಸುವುದು.
೨. ಆರ್ಥಿಕ ಸ್ವಾವಲಂಬನೆಯನ್ನು ಸಾಧಿಸುವುದು.
೩. ಬಡತನ ನಿರ್ಮೂಲನೆಗೊಳಿಸುವುದು.
೪. ಉದ್ಯೋಗಾವಕಾಶಗಳನ್ನು ಸೃಷ್ಟಿಸುವುದು.
೫. ದೇಶದ ನೈಸರ್ಗಿಕ ಹಾಗೂ ಮಾನವ ಸಂಪನ್ಮೂಲಗಳನ್ನು ಯೋಗ್ಯರೀತಿಯಲ್ಲಿ ಬಳಸುವುದು.
೬. ಕೈಗಾರಿಕಾ ಅಭಿವೃದ್ಧಿಯನ್ನು ಸಾಧಿಸುವುದು.
೭. ಆದಾಯ ಹಾಗೂ ಸಂಪತ್ತಿನ ಅಸಮತೋಲನವನ್ನು ನಿವಾರಿಸುವುದು.

೮. ಪ್ರಾದೇಶಿಕ ಸಮಾನತೆಯನ್ನು ಸಾಧಿಸುವುದು.

೯. ಆರ್ಥಿಕ ಸ್ಥಿರತೆಯನ್ನು ಸಾಧಿಸುವುದು.

೧೦. ಸಾಮಾಜಿಕ ನ್ಯಾಯವನ್ನು ನೀಡುವುದು.

**ಯೋಜನೆಗಳ ಐತಿಹಾಸಿಕ ಹೆಜ್ಜೆಗಳು**

ಕ್ರಿ.ಪೂ.೩೪೭ ಗ್ರೀಕ್ ತತ್ವಜ್ಞಾನಿ ಪ್ಲಾಟೋ (ಕ್ರಿ.ಪೂ.೪೨೮-೩೪೭) "ಯೋಜನೆ" ಎಂಬ ಶಬ್ದವನು ತನ್ನ ತತ್ವಗಳಲ್ಲಿ ಬಳಸಿದನು.

ಕ್ರಿ.ಶ.೧೯೨೮ ರಷ್ಯಾ ದೇಶದಲ್ಲಿ ಯೋಜನೆಗಳ ಪ್ರಾರಂಭ.

ಕ್ರಿ.ಶ.೧೯೩೪ ಕರ್ನಾಟಕ ಹೆಮ್ಮೆಯ ಪುತ್ರ, ವಿಶ್ವಪ್ರಸಿದ್ಧ ಅಭಿಯಂತರಾಗಿದ್ದ ಸರ್.ಎಂ.ವಿಶ್ವೇಶ್ವರಯ್ಯರವರು ತಾವು ಬರೆದ ಪುಸ್ತಕವಾದ "ಪ್ಲಾನ್ಡ್ ಎಕಾನಮಿ ಫಾರ್ ಇಂಡಿಯಾ" ಎಂಬ ಪುಸ್ತಕದಲ್ಲಿ "ಯೋಜಿಸಿರಿ ಇಲ್ಲವೆ ಹಾಳಾಗಿರಿ" ಎಂದು ಘೋಷಿಸಿದರು.

ಕ್ರಿ.ಶ.೧೯೩೮ ಜವಾಹರಲಾಲ ನೆಹರು ಹಾಗೂ ಸುಭಾಶ್‌ಚಂದ್ರ ಭೋಸರ ಅಧ್ಯಕ್ಷತೆ ಹಾಗೂ ಕಾರ್ಯದರ್ಶಿಯ ನೇತೃತ್ವದಲ್ಲಿ "ರಾಷ್ಟ್ರೀಯ ಯೋಜನಾ ಮಂಡಳಿ" ಅಸ್ತಿತ್ವಕ್ಕೆ ಬಂದಿತು.

ಕ್ರಿ.ಶ.೧೯೪೩ ಬಾಂಬೆಯ ಕೈಗಾರಿಕೋದ್ಯಮಿಗಳಾದ, ಜೆ.ಆರ್.ಡಿ.ಟಾಟಾ, ಘನಶ್ಯಾಮದಾಸ ಬಿರ್ಲಾ, ಪುರುಶೋತ್ತಮ ಟಾಕೂರದಾಸ, ಎ.ಡಿ.ಶ್ರಾಫ, ಕಸ್ತೂರಬಾಯಿ, ಲಾಲಭಾಯಿ, ಡಾ.ಜಾನಮಿಥಾಯಿ ಮುಂತಾದವರು, ೧೫ ವರ್ಷದ, ರೂ.೧೦,೦೦೦ ಕೋಟಿಯ ಬಾಂಬೆ ಯೋಜನೆಯನ್ನು ಸಿದ್ಧಪಡಿಸಿದ್ದರು. ಈ ಯೋಜನೆ ಕಾರ್ಯರೂಪದಲ್ಲಿ ಬರಲಿಲ್ಲ.

ಕ್ರಿ.ಶ.೧೯೪೪ ಸಮಾಜವಾದಿ ಮುಖಂಡ, ಶ್ರೀ.ಎಂ.ಎನ್.ರಾಯರವರು ೧೦ ವರ್ಷದ "ಜನಸಾಮಾನ್ಯರ ಯೋಜನೆ"ಯನ್ನು ರೂ.೧೫,೦೦೦ ಕೋಟಿ ಒಟ್ಟು ಮೊತ್ತದ ಯೋಜನೆಯನ್ನು ಸಿದ್ಧಪಡಿಸಿದರು. ಈ ಯೋಜನೆ ಕಾರ್ಯರೂಪದಲ್ಲಿ ಬರಲಿಲ್ಲ.

ಕ್ರಿ.ಶ.೧೯೪೪ ಶ್ರೀಮನ್ ನಾರಾಯಣನ್ ಹಾಗೂ ನಂತರ ಯೋಜನಾ ಆಯೋಗದ ಮಾಜಿ ಸದಸ್ಯರಾದ ಪ್ರಚಾರ್ಯ, ಶ್ರೀ.ಎಸ್.ಎನ್.ಅಗರವಾಲರು ರೂ.೩,೫೦೦ ಕೋಟಿಯ 'ಗಾಂಧಿ ಯೋಜನೆ'ಯನ್ನು ಸಿದ್ಧಪಡಿಸಿದರು. ಈ ಯೋಜನೆಯೂ ಸಹ ಕಾರ್ಯರೂಪದಲ್ಲಿ ಬರಲಿಲ್ಲ.

ಕ್ರಿ.ಶ.೧೯೪೪ ಎರಡನೆ ಮಹಾಯುದ್ಧದ ನಂತರ ಪುನರ್ ನಿರ್ಮಾಣ ಕಾರ್ಯಕ್ಕಾಗಿ ಬ್ರಿಟಿಷ್ ಭಾರತದ ಸರ್ಕಾರ ಸರ್. ಎಂ. ದೇಸಾಯಿರವರ

ಅಧ್ಯಕ್ಷತೆಯಲ್ಲಿ "ಯೋಜನಾ ಮತ್ತು ಅಭಿವೃದ್ಧಿ ಇಲಾಖೆ" ಅಸ್ತಿತ್ವದಲ್ಲಿ ಬಂದಿತು.

ಕ್ರಿ.ಶ.೧೯೫೦ ಆಗಿನ ಪ್ರಧಾನ ಮಂತ್ರಿಗಳಾದ ಜವಾಹರಲಾಲ ನೆಹರೂರವರ ಅಧ್ಯಕ್ಷತೆಯಲ್ಲಿ "ರಾಷ್ಟ್ರೀಯ ಯೋಜನಾ ಆಯೋಗ" ಅಸ್ಥಿತ್ವದಲ್ಲಿ ಬಂದಿತು.

ಕ್ರಿ.ಶ.೧೯೫೧ ಪ್ರಥಮ ಯೋಜನೆ ಪ್ರಾರಂಭ.

## ಭಾರತದ ಪಂಚವಾರ್ಷಿಕ ಯೋಜನೆಗಳ ಪಕ್ಷಿನೋಟ

| ಯೋಜನೆಗಳು | ಅವಧಿ | ಯೋಜನಾ ವೆಚ್ಚ (ಕೋಟಿ ರೂ.) | ಯೋಜನಾವೆಚ್ಚ ಕ್ಷೇತ್ರವಾರು ವಿಂಗಡಣೆ | | | | | |
|---|---|---|---|---|---|---|---|---|
| | | | ಕೃಷಿ% | ಇಂಧನ | ಕೈಗಾರಿಕೆ | ಸಾರಿಗೆ ಸಂಪರ್ಕ | ಸಾಮಾಜಿಕ ಸೇವೆ | ವಾರ್ಷಿಕ ಬೆಳವಣಿಗೆ |
| ಪ್ರಥಮ | ೧೯೫೧-೫೬ | ೩,೮೭೦ | ೩೧% | ೧೩% | ೬%% | ೨೭% | ೨೨% | ೩.೬% |
| ದ್ವಿತೀಯ | ೧೯೫೬-೫೭ | ೭,೯೦೦ | ೨೦% | ೧೦% | ೨೪% | ೨೮% | ೧೮% | ೪.೩% |
| ತೃತೀಯ | ೧೯೬೧-೬೬ | ೧೧,೬೦೦ | ೨೧% | ೧೪% | ೨೩% | ೨೫% | ೧೭% | ೨.೮% |
| ನಾಲ್ಕನೆಯ | ೧೯೬೯-೭೪ | ೨೪,೮೮೦ | ೨೪% | ೧೫% | ೨೩% | ೨೦% | ೧೮% | ೩.೩% |
| ಐದನೆಯ | ೧೯೭೪-೭೮ | ೫೩,೪೧೦ | ೨೨% | ೧೯% | ೨೬% | ೧೮% | ೧೭% | ೪.೮% |
| ಆರನೆಯ | ೧೯೮೦-೮೫ | ೧,೫೮,೭೧೦ | ೨೪% | ೨೮% | ೧೬% | ೧೬% | ೧೬% | ೫.೭% |
| ಏಳನೆಯ | ೧೯೮೫-೯೦ | ೩,೪೮,೧೫೦ | ೨೨% | ೨೮.೨% | ೧೩.೪% | ೧೮.೭% | ೧೭.೭% | ೬.೦% |
| ಎಂಟನೆಯ | ೧೯೯೨-೯೭ | ೮,೭೧,೦೦೦ | ೨೦.೭% | ೨೬.೫% | ೯.೭% | ೨೨.೬% | ೨೦.೫% | ೬.೮% |
| ಒಂಬತ್ತನೆಯ | ೧೯೯೭-೦೨ | ೮,೫೯,೨೦೦ | ೧೯.೫% | ೨೫.೧% | ೮.೧% | ೧೯.೬% | ೨೧.೨% | ೬.೫% |
| ಹತ್ತನೆಯ | ೨೦೦೨-೦೭ | ೧೫,೯೨,೩೦೦ | ೧೮.೭% | ೨೬.೫% | ೩.೯% | ೮.೫% | ೨೨.೮% | ೮.೦% |

## ಯೋಜನಾ ವೆಚ್ಚ (ಸಾರ್ವಜನಿಕ ಕ್ಷೇತ್ರ)ದ ಹಣಕಾಸಿನ ಮೂಲಗಳು

ಭಾರತದ ಸಾರ್ವಜನಿಕ ಕ್ಷೇತ್ರದ ಯೋಜನಾವೆಚ್ಚದ ಹಣಕಾಸಿನ ಮೂಲ ಕೆಳಗಿನಂತಿರುತ್ತದೆ. ಪೈ.ಚಿತ್ರ ನೋಡಿರಿ.




## ಯೋಜನೆಗಳ ಯಾಂತ್ರಿಕ ವ್ಯವಸ್ಥೆ

## ಯೋಜನೆಗಳನ್ನು ಸಿದ್ಧಪಡಿಸುವ ಯಾಂತ್ರಿಕ ವ್ಯವಸ್ಥೆ

ಒಂದು ರಾಷ್ಟ್ರದ ಆರ್ಥಿಕ ಯೋಜನೆಗಳನ್ನು ಸಿದ್ಧಪಡಿಸುವ ಯಾಂತ್ರಿಕ ವ್ಯವಸ್ಥೆ ಆ ದೇಶದ ರಾಜಕೀಯ, ಪರಿಸ್ಥಿತಿಯನ್ನು ಅವಲಂಬಿಸಿರುತ್ತದೆ. ವಿವಿಧ ದೇಶಗಳಲ್ಲಿ ವಿವಿಧ ಪ್ರಕಾರದ ಯೋಜನಾ ಆಡಳಿತಾತ್ಮಕ ವ್ಯವಸ್ಥೆ ಇರುತ್ತದೆ. ಭಾರತದಲ್ಲಿ ಯೋಜನೆ ಹರಡನ್ನು ಸಿದ್ದಪಡಿಸುವ ಹೊಣೆಗಾರಿಕೆಯನ್ನು ರಾಷ್ಟ್ರೀಯ ಯೋಜನಾ ಆರೋಗ್ಯಕ್ಕೆ ಹಾಗೂ ಆ ಯೋಜನಾ ಕರಡನ್ನು ತಿದ್ದುಪಡಿಸುವ, ಪರೀಕ್ಷಿಸುವ ಹೊಣೆಗಾರಿಕೆಯನ್ನು ರಾಷ್ಟ್ರೀಯ ಅಭಿವೃದ್ಧಿ ಮಂಡಳಿಗೆ, ಯೋಜನೆಯನ್ನು ಅನುಮೋದಿಸುವ, ಅನುಷ್ಠಾನಗೊಳಿಸುವ ಹೊಣೆಗಾರಿಕೆಯನ್ನು ಮಂತ್ರಿಮಂಡಳ ಹಾಗೂ ಶಾಸನಾಂಗಕ್ಕೆ ನೀಡಲಾಗಿದೆ.

### ಯೋಜನೆಗಳ ವಿವಿಧ ಹಂತಗಳು

ರಾಷ್ಟ್ರೀಯ ಯೋಜನಾ ಆಯೋಗದ ಯೋಜನಾ ಕರಡನ್ನು ಸಿದ್ಧಪಡಿಸುತ್ತದೆ



ರಾಷ್ಟ್ರೀಯ ಅಭಿವೃದ್ಧಿ ಮಂಡಳಿ ಯೋಜನಾ ಕರಡನ್ನು ತಿದ್ದುಪಡಿ ಮಾಡುವುದು



ಮಂತ್ರಿಮಂಡಲ ಯೋಜನೆಗಳಿಗೆ ಅನುಮೋದನೆ ನೀಡುವುದು



ಶಾಸಕಾಂಗವು ಯೋಜನೆಗಳನ್ನು ಅನುಷ್ಠಾನಗೊಳಿಸಲು ಶಿಫಾರಸ್ಸು ಮಾಡುವುದು



ಯೋಜನೆಗಳು ಕಾರ್ಯರೂಪಕ್ಕೆ ಬರುವುದು ಪ್ರಾರಂಭ



ಕೇಂದ್ರ ಸರ್ಕಾರ ಯೋಜನೆಗಳು ಕಾರ್ಯರೂಪಕ್ಕೆ ತರುವುದು



ರಾಜ್ಯ ಹಾಗೂ ಕೇಂದ್ರಾಡಳಿತ ಸರ್ಕಾರಗಳು ಯೋಜನೆಗಳು ಕಾರ್ಯರೂಪಕ್ಕೆ ತರುವುದು



ಜಿಲ್ಲಾ ಪರಿಷತ್‌ಗಳು ಯೋಜನೆಗಳು ಕಾರ್ಯರೂಪಕ್ಕೆ ತರುವುದು.

### ರಾಷ್ಟ್ರೀಯ ಯೋಜನಾ ಆಯೋಗ

ರಾಷ್ಟ್ರೀಯ ಯೋಜನಾ ಆಯೋಗವು, ಮಾರ್ಚ್ ೧೯೫೦ರಲ್ಲಿ ಭಾರತೀಯ ಸಂವಿಧಾನದ Directive Principlesದ Article - ೩೯ರ ಪ್ರಕಾರ ಅಸ್ತಿತ್ವಕ್ಕೆ ಬಂದಿತು. ಭಾರತದ ಪ್ರಥಮ ಪ್ರಧಾನಿಯಾಗಿದ್ದ, ಪಂಡಿತ ನೆಹರೂವರು ರಾಷ್ಟ್ರೀಯ ಯೋಜನಾ ಆಯೋಗದ ಪ್ರಥಮ ಅಧ್ಯಕ್ಷರಾಗಿದ್ದರು. ಭಾರತದ ಪ್ರಧಾನಮಂತ್ರಿ ಆಯೋಗದ ಅಧ್ಯಕ್ಷರಾಗಿರುತ್ತಾರೆ. ಒಬ್ಬ ತಜ್ಞ ಅಥವಾ ಅರ್ಥಶಾಸ್ತ್ರಜ್ಞರು ರಾಷ್ಟ್ರೀಯ ಯೋಜನಾ ಆಯೋಗದ ಉಪಾಧ್ಯಕ್ಷರಾಗಿರುತ್ತಾರೆ. ಉಪಾಧ್ಯಕ್ಷರನ್ನು ಕೇಂದ್ರ ಸರ್ಕಾರ ನೇಮಿಸುತ್ತದೆ. ಉಪಾಧ್ಯಕ್ಷರು ಕ್ಯಾಬಿನೆಟ್ ದರ್ಜೆಯ ಮಂತ್ರಿಯ ಸ್ಥಾನ ಮಾನ ಹೊಂದಿರುತ್ತಾರೆ. ಅವರು ಸ್ವತಂತ್ರ ಜವಾಬ್ದಾರಿಯನ್ನು ಹೊಂದಿದ್ದು. ರಾಷ್ಟ್ರೀಯ ಯೋಜನಾ ಆಯೋಗದ ದೈನಂದಿನ ವ್ಯವಹಾರಗಳನ್ನು ನೋಡಿಕೊಳ್ಳುತ್ತಾರೆ. ರಾಷ್ಟ್ರೀಯ ಯೋಜನಾ ಆಯೋಗವು, ಆರ್ಥಿಕ ಯೋಜನೆಗಳ ಕರಡನ್ನು ಸಿದ್ಧಪಡಿಸುತ್ತದೆ.

### ರಾಷ್ಟ್ರೀಯ ಯೋಜನಾ ಆಯೋಗದ ಕಾರ್ಯಗಳು

ರಾಷ್ಟ್ರೀಯ ಯೋಜನಾ ಆಯೋಗವು ಈ ಕೆಳಗಿನ ಕಾರ್ಯಗಳನ್ನು ನಿರ್ವಹಿಸುತ್ತದೆ.

೧. **ರಾಷ್ಟ್ರದ ಸಂಪನ್ಮೂಲಗಳನ್ನು ಸಮೀಕ್ಷೆ ಮಾಡುವುದು:** ರಾಷ್ಟ್ರದ ನೈಸರ್ಗಿಕ, ಮಾನವ ಹಾಗೂ ಬಂಡವಾಳ ಸಂಪತ್ತನ್ನು ಅಲ್ಲದೆ ವಿಶೇಷವಾಗಿ ತಾಂತ್ರಿಕ ತಂತ್ರಜ್ಞರನ್ನು ಸಮೀಕ್ಷೆಮಾಡುವುದು. ಈ ಸಂಪತ್ತನ್ನು ಪರಿಣಾಮಕಾರಿ ಹಾಗೂ ಸಮತೋಲನವಾಗಿ ಸದುಪಯೋಗಿಸಲು ಯೋಜನೆಗಳನ್ನು ರೂಪಿಸುವುದು.

೨. **ಯೋಜನೆಗಳನ್ನು ಸಿದ್ಧಪಡಿಸುವುದು :** ಯೋಜನೆಗಳನ್ನು ಕಾರ್ಯರೂಪದಲ್ಲಿ ತರಲು ವಿವಿಧ ಹಂತಗಳನ್ನು ಹಾಗೂ ಆದ್ಯತೆಗಳನ್ನು ರೂಪಿಸುವುದು. ಯೋಜನೆಯ ತಕ್ಕಂತೆ ಕಾರ್ಯ ರೂಪಗಳನ್ನು ರೂಪಿಸಿ, ಸಲಹೆಗಳನ್ನು ನೀಡುವುದು. ಆಯೋಗಕ್ಕೆ ಯೋಜನಾ ಅನುಷ್ಠಾನ ಗೊಳಿಸುವ, ಕಾರ್ಯ ನಿರ್ವಹಿಸುವ ಜವಾಬ್ದಾರಿ ಇರುವುದಿಲ್ಲ.

೩. **ಯೋಜನಾ ಕಾರ್ಯತಂತ್ರ ರೂಪಿಸುವುದು :** ಯೋಜನೆಗಳನ್ನು ಅನುಷ್ಠಾನಗೊಳಿಸಲು ಯೋಗ್ಯಯೋಜನಾ ಕಾರ್ಯ ತಂತ್ರವನ್ನು ನಿರ್ಧರಿಸುವುದು. ಆಯೋಗ ರೂಪಿಸಿದ ಯೋಜನೆಗಳನ್ನು ಅನುಷ್ಠಾನಗೊಳಿಸುವುದು ಸರ್ಕಾರದ ಕರ್ತವ್ಯವಾಗಿದೆ.

೪. **ಯೋಜನಾ ಸಮಸ್ಯೆಗಳಿಗೆ ಪರಿಹಾರ ಸೂಚಿಸುವುದು :** ಯೋಜನೆಗಳನ್ನು ಕಾರ್ಯದಲ್ಲಿ, ಅನುಷ್ಠಾನದಲ್ಲಿ ಉದ್ಭವಿಸುವ ಸಮಸ್ಯೆಗಳನ್ನು, ಅಡಚಣೆಗಳನ್ನು ನಿವಾರಿಸಲು ಪರಿಹಾರೋಪಾಯಗಳನ್ನು ಸೂಚಿಸುವುದು.

೫. **ಯೋಜನೆಗಳನ್ನು ವಿಮರ್ಶಿಸುವುದು :** ಕಾಲ-ಕಾಲಕ್ಕೆ ಯೋಜನೆಯ ಪ್ರಗತಿಯನ್ನು ವಿಮರ್ಶಿಸುವುದು, ಸೂಕ್ತ ಶಿಫಾರಸ್ಸು, ಸಲಹೆ ಸೂಚನೆಗಳನ್ನು ನೀಡುವುದು.

೬. **ಸಾರ್ವಜನಿಕರ ಸಹಕಾರ ಸಾಧಿಸುವುದು :** ರಾಷ್ಟ್ರದ ಆರ್ಥಿಕ ಅಭಿವೃದ್ಧಿ ಸಾಧಿಸಲು ಸಾರ್ವಜನಿಕ ಸಹಕಾರ ಪಡೆಯಲು ಪ್ರಯತ್ನಿಸುವುದು.

## ರಾಷ್ಟ್ರೀಯ ಯೋಜನಾ ಆಯೋಗದ ವಿಭಾಗಗಳು

ರಾಷ್ಟ್ರೀಯ ಯೋಜನಾ ಆಯೋಗವು ಪ್ರಮುಖವಾಗಿ ಎರಡು ವಿಭಾಗಗಳನ್ನು ಹೊಂದಿರುತ್ತದೆ.

**೧. ತಾಂತ್ರಿಕ ವಿಭಾಗ**

ಅ. **ಸಾಮಾನ್ಯ ವಿಭಾಗ :** ಇದರಲ್ಲಿ ಸಂಘಟನೆ, ಆಡಳಿತ, ಸಂಶೋಧನೆ, ಸಮೀಕ್ಷೆ, ಸಾರ್ವಜನಿಕ ಸಹಕಾರ, ಉದ್ಯೋಗ, ಅಂತರಾಷ್ಟ್ರೀಯ ವ್ಯಾಪಾರ, ವಾರ್ತಾ ಮತ್ತು ಪ್ರಸಾರ, ಪ್ರಕಟಣೆ ಇತ್ಯಾದಿಗಳು.

ಬ. **ವಿಷಯಾನುಗಣ ವಿಭಾಗ :** ಈ ಭಾಗದಲ್ಲಿ ಕೃಷಿ, ಸಮಾಜಾಭಿವೃದ್ಧಿ, ನೀರಾವರಿ, ವಿದ್ಯುತ್‌ಶಕ್ತಿ, ಖನಿಜಗಳು ಮತ್ತು ತೈಲ, ಬೃಹತ್ ಕೈಗಾರಿಕೆಗಳು, ಸಾರಿಗೆ ಸಂಪರ್ಕ, ವಿದ್ಯಾಭ್ಯಾಸ, ಆರೋಗ್ಯ, ಕುಟುಂಬ ಯೋಜನೆ ವಸತಿ ಹಾಗೂ ಸಮಾಜ ಕಲ್ಯಾಣ ಇತ್ಯಾದಿಗಳು.

ಕ. **ಗೃಹಕಾರ್ಯ ವಿಭಾಗಗಳು :** ಈ ವಿಭಾಗ ದೈನಂದಿನ ಕಾರ್ಯಗಳನ್ನು ನಿರ್ವಹಿಸುತ್ತದೆ

ಹಾಗೂ ಸಮನ್ವಯ ವಿಭಾಗ, ವಿಶೇಷ ಅಭಿವೃದ್ಧಿ ಕಾರ್ಯಕ್ರಮ ಹಾಗೂ ವಿಮರ್ಶಾ ವಿಭಾಗ ಒಳಗೊಂಡಿದೆ.

**ರಾಷ್ಟ್ರೀಯ ಯೋಜನಾ ಆಯೋಗದ ಆಡಳಿತ ವ್ಯವಸ್ಥೆ (ಸಂಘಟನೆ)**

ಭಾರತದಲ್ಲಿ, ಯೋಜನೆಗಳನ್ನು ರೂಪಿಸಲಾಗಿದೆ. ಅಧಿಕಾರವನ್ನು ಹೊಂದಿದ ರಾಷ್ಟ್ರೀಯ ಯೋಜನಾ ಆಯೋಗದ ಹಲವು ಆಡಳಿತಗಾರರು ತಜ್ಞರು, ಹಾಗೂ ಅಧಿಕಾರಿಗಳಿಂದ ಕೂಡದ ಒಂದು ಸಂಘಟನೆಯಾಗಿದೆ. ಅದರ ಆಡಳಿತ ವ್ಯವಸ್ಥೆ ಈ ರೀತಿಯಾಗಿದೆ.

ರಾಷ್ಟ್ರೀಯ ಯೋಜನಾ ಆಯೋಗ



ಅಧ್ಯಕ್ಷರು



ಉಪಾಧ್ಯಕ್ಷರು



ಕಾರ್ಯದರ್ಶಿಗಳು



ಸಲಹಾ ಸಮಿತಿ



ಸದಸ್ಯರು



ಸಿಬ್ಬಂದಿವರ್ಗ

### ಅಧ್ಯಕ್ಷರು

ಭಾರತದ ಪ್ರಧಾನ ಮಂತ್ರಿಗಳು, ರಾಷ್ಟ್ರೀಯ ಯೋಜನಾ ಆಯೋಗದ ಅಧ್ಯಕ್ಷ ರಾಗಿರುತ್ತಾರೆ. ಪಂಡಿತ ನೆಹರೂರವರು ರಾಷ್ಟ್ರೀಯ ಯೋಜನಾ ಆಯೋಗದ ಪ್ರಥಮ ಅಧ್ಯಕ್ಷರಾಗಿದ್ದರು. ಹೊಸ ಆರ್ಥಿಕ ನೀತಿಯ ಹರಿಕಾರ ಹಾಗೂ ಪ್ರಧಾನಮಂತ್ರಿಗಳಾದ ಡಾ. ಮನಮೋಹನ್ ಸಿಂಗ್‌ರೂ ಪ್ರಚಲಿತ ಆಯೋಗದ ಅಧ್ಯಕ್ಷರಾಗಿರುತ್ತಾರೆ: ಅಧ್ಯಕ್ಷರು, ಆಯೋಗದ ಕೆಲವು ಪ್ರಮುಖ ಸಭೆಗಳಲ್ಲಿ ಮಾತ್ರ ಭಾಗವಹಿಸುತ್ತಾರೆ.

### ಉಪಾಧ್ಯಕ್ಷರು

ರಾಷ್ಟ್ರೀಯ ಯೋಜನಾ ಆಯೋಗದ ಉಪಾಧ್ಯಕ್ಷರು, ಪರಿಣಿತರು, ವಿಶೇಷವಾಗಿ ಆರ್ಥಿಕ ಮತ್ತು ಸಂಖ್ಯೆಶಾಸ್ತ್ರ ತಜ್ಞರಾಗಿರುತ್ತಾರೆ. ಉಪಾಧ್ಯಕ್ಷರನ್ನು ಕೇಂದ್ರ ಸರ್ಕಾರ ನೇಮಿಸುವುದು. ಇವರು ಕ್ಯಾಬಿನೆಟ್ ದರ್ಜೆ ಸ್ಥಾನಮಾನ ಹೊಂದಿರುತ್ತಾರೆ. ಆಯೋಗದ ದೈನಂದಿನ ವ್ಯವಹಾರ, ಸಮಗ್ರ ಕಾರ್ಯಗಳನ್ನು ನಿರ್ವಹಿಸುವ ಸ್ವತಂತ್ರ ಜವಾಬ್ದಾರಿಯನ್ನು

ರಾಷ್ಟ್ರೀಯ ಯೋಜನಾ ಆಯೋಗ ಹೊಂದಿರುತ್ತದೆ. ಪ್ರೊ.ಪಿ.ಸಿ.ಮಹಾಲನೋಬಿಸ, ಅಶೋಕ ಮೆಹತಾ, ಸಿ.ಸುಬ್ರಮಣ್ಯಂ, ಡಿ.ಪಿ.ಧಾರ, ಪ್ರೊ.ಮಧುದಂಡವತೆ, ಕೆ.ಸಿ.ಪಂತ, ಮುಂತಾದವರು, ರಾಷ್ಟ್ರೀಯ ಯೋಜನಾ ಆಯೋಗದ ಉಪಾಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದ ಪ್ರಮುಖರು. ಈಗಿನ ಆಯೋಗದ ಉಪಾಧ್ಯಕ್ಷರು ಡಾ.ಮಂಟೆಕಸಿಂಗ ಅಹಲು ವಾಲಿಯಾಗಿದ್ದಾರೆ.

**ಕಾರ್ಯದರ್ಶಿಗಳು**

ಭಾರತ ಸರ್ಕಾರದ ಕಾರ್ಯದರ್ಶಿಗಳು, ರಾಷ್ಟ್ರೀಯ ಯೋಜನಾ ಆಯೋಗದ ಗೌರವ ಕಾರ್ಯದರ್ಶಿಗಳಾಗಿರುವರು. ಕಾರ್ಯದರ್ಶಿಗಳು ಸರ್ಕಾರ ಹಾಗೂ ಆಯೋಗದ ಮಧ್ಯದ ಸಂಪರ್ಕ ಸೇತುವೆಯಾಗಿ ಕಾರ್ಯನಿರ್ವಹಿಸುವರು. ಇವರೆಗೆ ಸಹಾಯ ಮಾಡಲು ಎರಡು ಜನ ಉಪ ಕಾರ್ಯದರ್ಶಿಗಳಿರುತ್ತಾರೆ.

**ಸಲಹಾ ಸಮಿತಿ**

ರಾಷ್ಟ್ರೀಯ ಯೋಜನಾ ಆಯೋಗವು ಮೂರು ಜನ ಅಧಿಕಾರಿಗಳು ಒಳಗೊಂಡ ಸಲಹಾ ಸಮಿತಿ ಹೊಂದಿರುತ್ತದೆ. ಒಬ್ಬೊಬ್ಬ ಸಲಹಗಾರರಿಗೆ ಅನೇಕ ರಾಜ್ಯಗಳ ಜವಾಬ್ದಾರಿಯನ್ನು ನೀಡಿರುತ್ತಾರೆ. ಇವರು ತಮ್ಮ ಅಧಿಕಾರ ಕಕ್ಷೆಯಲ್ಲಿ ಬರುವ ರಾಜ್ಯದ ಸಂಬಂಧಿಸಿದ ಅಧಿಕಾರಿಗಳಿಗೆ, ಯೋಜನೆಯನ್ನು ಅನುಷ್ಠಾನಗೊಳಿಸಲು ಸೂಕ್ತ ಸಲಹೆ ಹಾಗೂ ಮಾರ್ಗ ದರ್ಶನ ನೀಡುವ ಇವರು ತಮಗೆ ಸಂಬಂಧಿಸಿದ ರಾಜ್ಯಗಳಲ್ಲಿ ಯೋಜನೆಗಳ ಪ್ರಗತಿಯ ಬಗ್ಗೆ ಜವಾಬ್ದಾರಿ ಹೊಂದಿರುತ್ತಾರೆ. ಈ ಸಮಿತಿಯಲ್ಲಿ ವಿವಿಧ ಕ್ಷೇತ್ರಗಳ ತಜ್ಞರನ್ನು ಒಳಗೊಂಡಿರುತ್ತಾರೆ.

**ಸದಸ್ಯರು**

ರಾಷ್ಟ್ರೀಯ ಯೋಜನಾ ಆಯೋಗವು ಹಲವು ಸದಸ್ಯರನ್ನು ಹೊಂದಿರುತ್ತದೆ. ಆಯೋಗವು ಕನಿಷ್ಠ ಏಳು ಸದಸ್ಯರನ್ನು ಒಳಗೊಂಡಿರುತ್ತದೆ. ಇವರಲ್ಲಿ ನಾಲ್ಕು ಜನ ಪೂರ್ಣ ವಲಯ ಸದಸ್ಯರಾಗಿರುತ್ತಾರೆ. ಸದಸ್ಯರಲ್ಲಿ ಪ್ರಮುಖ ಅರ್ಥಶಾಸ್ತ್ರಜ್ಞರು, ಸಂಖ್ಯಾಶಾಸ್ತ್ರಜ್ಞರು, ವಿಜ್ಞಾನಿಗಳು, ಸರ್ಕಾರದ ಪ್ರತಿನಿಧಿಗಳು ಒಳಗೊಂಡಿರುತ್ತಾರೆ.

**ಸಿಬ್ಬಂದಿ ವರ್ಗ**

ರಾಷ್ಟ್ರೀಯ ಯೋಜನಾ ಆಯೋಗವು ತನ್ನ ಸಿಬ್ಬಂದಿ ವರ್ಗದಲ್ಲಿ ೧೨ ಜನ ಅಧಿಕಾರಿಗಳನ್ನು ಹಾಗೂ ೧೬೦ ಜನ ತಾಂತ್ರಿಕ ಅಧಿಕಾರಿಗಳನ್ನು ಹೊಂದಿರುತ್ತದೆ. ಇದರಲ್ಲಿ ಅರ್ಥಶಾಸ್ತ್ರಜ್ಞರು, ಸಂಖ್ಯಾಶಾಸ್ತ್ರತಜ್ಞರು, ಕೃಷಿ ತಜ್ಞರು, ವೈದ್ಯರು, ಶಿಕ್ಷಣ ತಜ್ಞರು ಇರುತ್ತಾರೆ. ಸಿಬ್ಬಂದಿ ವರ್ಗದವರು ದೈನಂದಿನ ಕಾರ್ಯಗಳನ್ನು ನಿರ್ವಹಿಸುತ್ತಾರೆ.

### ರಾಷ್ಟ್ರೀಯ ಅಭಿವೃದ್ಧಿ ಮಂಡಳಿ

ರಾಷ್ಟ್ರೀಯ ಅಭಿವೃದ್ಧಿ ಮಂಡಳಿ(N.D.C)ಯು, ರಾಷ್ಟ್ರೀಯ ಯೋಜನಾ ಆಯೋಗ (N.P.C) ಸಿದ್ಧಪಡಿಸಿದ ಯೋಜನಾ ಕರಡನ್ನು ವಿಮರ್ಷಿಸುವ ಹಾಗೂ ತಿದ್ದುಪಡಿಮಾಡುವ ಹಕ್ಕನ್ನು ಹೊಂದಿರುತ್ತದೆ. ಈ ಮಂಡಳಿ ಯೋಜನಾ ಕರಡು ಪ್ರತಿಯನ್ನು ಚರ್ಚಿಸಿ, ವಿಮರ್ಶಿಸಿ ತಿದ್ದುಪಡಿ ಮಾಡಿದ ನಂತರ ತನ್ನ ಒಪ್ಪಿಗೆಯನ್ನು ನೀಡುತ್ತದೆ. ನಂತರ ಕರಡು ಪ್ರತಿಯನ್ನು ಮಂತ್ರಿಮಂಡಲಕ್ಕೆ (ಕ್ಯಾಬಿನೆಟ್)ಗೆ ಒಪ್ಪಿಸಲಾಗುವುದು. ರಾಷ್ಟ್ರೀಯ ಆಯೋಗ ಮಂಡಳಿ ತಿದ್ದುಪಡಿ ಮಾಡಿದ ಕರಡು ಪ್ರತಿಯನ್ನು ಅನುಮೋದಿಸುವ ಹಾಗೂ ಅನುಷ್ಠಾನಗೊಳಿಸುವ ನಿರ್ಣಯವನ್ನು ತೆಗೆದುಕೊಳ್ಳುವ ಅಧಿಕಾರ ಮಂತ್ರಿಮಂಡಲಕ್ಕೆ ಇರುತ್ತದೆ. ಮಂತ್ರಿಮಂಡಲದ ನಿರ್ಣಯಗಳಿಗೆ ಶಾಸಕಾಂಗ ಮನ್ನಣೆ ನೀಡಿದ ನಂತರ, ಯೋಜನೆಯು ಕಾರ್ಯರೂಪಕ್ಕೆ ಬರುವುದು. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಅದನ್ನು ಅನುಷ್ಠಾನಗೊಳಿಸುತ್ತವೆ.

ರಾಷ್ಟ್ರೀಯ ಅಭಿವೃದ್ಧಿ ಮಂಡಳಿಯು, ಪ್ರಧಾನಮಂತ್ರಿ ರಾಜ್ಯಗಳ ಮುಖ್ಯ ಮಂತ್ರಿಗಳು ಹಾಗೂ ರಾಷ್ಟ್ರೀಯ ಯೋಜನಾ ಆಯೋಗದ ಸದಸ್ಯರನ್ನು ಒಳಗೊಂಡಿರುತ್ತದೆ. ಪ್ರಧಾನ ಮಂತ್ರಿಗಳು, ರಾಷ್ಟ್ರೀಯ ಆಯೋಗ ಮಂಡಳಿಯ ಅಧ್ಯಕ್ಷತೆಯನ್ನು ವಹಿಸುವರು. ಯೋಜನಾ ಆಯೋಗದ ಕರಡು ಪ್ರತಿಯನ್ನು ರಾಷ್ಟ್ರೀಯ ಆಯೋಗ ಮಂಡಳಿ ತನ್ನ ಒಪ್ಪಿಗೆಯನ್ನು ನೀಡಲು ನಿರಾಕರಿಸಬಹುದು. ಉದಾಹರಣೆಗಾಗಿ, ಯೋಜನಾ ಆಯೋಗ ಸಿದ್ಧಪಡಿಸಿದ ೧೯೭೮ರ ರೋಲಿಂಗ್ ಯೋಜನೆಯನ್ನು, ರಾಷ್ಟ್ರೀಯ ಅಭಿವೃದ್ಧಿ ಮಂಡಳಿ ತನ್ನ ಒಪ್ಪಿಗೆಯನ್ನು ನೀಡಲಿಲ್ಲ.

### ಕಾರ್ಯಗಳು

ರಾಷ್ಟ್ರೀಯ ಆಯೋಗ ಮಂಡಳಿ ನಿರ್ವಹಿಸುವ ಕಾರ್ಯಗಳು ಈ ಕೆಳಗಿನಂತಿವೆ

೧. ರಾಷ್ಟ್ರೀಯ ಯೋಜನಾ ಆಯೋಗ ಸಿದ್ಧಪಡಿಸಿದ, ಕರಡು ಪ್ರತಿಯನ್ನು ಚರ್ಚಿಸುವುದು, ವಿಮರ್ಶಿಸುವುದು, ತಿದ್ದುಪಡಿ ಮಾಡಿ, ಯೋಜನಾ ಕರಡು ಪ್ರತಿಯನ್ನು ಮಂತ್ರಿಮಂಡಲಕ್ಕೆ ಒಪ್ಪಿಸುವುದು.

೨. ಯೋಜನಾ ಆಯೋಗದ ಕಾರ್ಯವನ್ನು ವಿಮರ್ಶಿಸುವುದು.

೩. ಯೋಜನೆಯನ್ನು ಯಶಸ್ವಿಯಾಗಿ ಕಾರ್ಯರೂಪಕ್ಕೆ ತರಲು ಸೂಕ್ತ ಕ್ರಮಗಳನ್ನು ಸೂಚಿಸುವುದು.
   ರಾಷ್ಟ್ರೀಯ ಆಯೋಗ ಮಂಡಳಿಯು ಉಚ್ಚ ಅಧಿಕಾರವನ್ನು ಹೊಂದಿದ್ದು, ನಿಜರೂಪದಲ್ಲಿ ಆರ್ಥಿಕ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ.

೪. ಸಾರ್ವಜನಿಕರ ಸಹಕಾರ ಪಡೆಯಲು ಪ್ರಯತ್ನಿಸುವುದು.

೫. ಆಡಳಿತ ವ್ಯವಸ್ಥೆಯ ದಕ್ಷತೆಯನ್ನು ಹೆಚ್ಚಿಸಲು ಪ್ರಯತ್ನಿಸುವುದು.
ರಾಷ್ಟ್ರೀಯ ಆಡಳಿತ ಮಂಡಳಿಯು ಯೋಜನೆಗಳನ್ನು ಯಶಸ್ವಿಯಾಗಿಸಲು ಪ್ರಯತ್ನಿಸುತ್ತದೆ.

**ಕರ್ನಾಟಕದಲ್ಲಿ ಯೋಜನಾ ಯಂತ್ರ**

ಕರ್ನಾಟಕ ರಾಜ್ಯದ ಹೆಮ್ಮೆಯ ಸುಪುತ್ರರಾದ ಸರ್.ಎಂ.ವಿ.ವಿಶ್ವೇಶ್ವರಯ್ಯನವರು ಪ್ರಥಮವಾಗಿ ಯೋಜನೆಯ ಮಹತ್ವವನ್ನು ತಮ್ಮ ಪುಸ್ತಕದಲ್ಲಿ ಹೇಳುತ್ತಾ "ಯೋಚಿಸಿರಿ ಇಲ್ಲವೇ ಹಾಳಾಗಿರಿ" ಎಂದು ಹೇಳಿದರು.

ಭಾರತದಂತಹ ಬೃಹತ್‌ರಾಷ್ಟ್ರಕ್ಕೆ, ಕೇವಲ ಕೇಂದ್ರಿಯ ರಾಷ್ಟ್ರೀಯ ಯೋಜನಾ ಆಯೋಗದಿಂದ ಮಾತ್ರ ಯೋಜನೆಯನ್ನು ಯಶಸ್ವಿಗೊಳಿಸುವುದು ಕಷ್ಟಕರವಾದ ಕೆಲಸ. ಆದ್ದರಿಂದ ರಾಷ್ಟ್ರೀಯ ಯೋಜನಾ ಆಯೋಗವು ೧೯೦೨ರಲ್ಲಿ ಎಲ್ಲಾ ರಾಜ್ಯಗಳಿಗೆ, ತಮ್ಮದೇ ಆದ ರಾಜ್ಯ ಯೋಜನಾ ಮಂಡಳಿಗಳನ್ನು ಅಸ್ತಿತ್ವದಲ್ಲಿ ತರಲು ಮನವಿ ಮಾಡಿತು. ರಾಷ್ಟ್ರೀಯ ಯೋಜನಾ ಆಯೋಗದ ಮನವಿ ಪ್ರಕಾರ ರಾಜ್ಯ ಯೋಜನಾ ಮಡಳಿಗಳು ಅಸ್ತಿತ್ವದಲ್ಲಿ ಬಂದವು. ಈ ಮಂಡಳಿಗಳು ತಮ್ಮ ರಾಜ್ಯದ ಯೋಜನೆಗಳನ್ನು ಸಿದ್ಧಪಡಿಸುತ್ತದೆ.

**ಕರ್ನಾಟಕ ರಾಜ್ಯ ಯೋಜನಾ ಮಂಡಳಿ**

ಭಾರತದ ಎಲ್ಲ ರಾಜ್ಯಗಳಂತೆ, ಕರ್ನಾಟಕ ರಾಜ್ಯವು ತನ್ನ ರಾಜ್ಯ ಯೋಜನಾ ಮಂಡಳಿಯನ್ನು ಸ್ಥಾಪಿಸಿತು. ಈ ಮಂಡಳಿಯಲ್ಲಿ ಅಧ್ಯಕ್ಷರು, ಉಪಾಧ್ಯಕ್ಷರು, ಕಾರ್ಯದರ್ಶಿಗಳು ಹಾಗೂ ಸದಸ್ಯರನ್ನು ಒಳಗೊಂಡಿರುತ್ತದೆ. ರಾಜ್ಯದ ಮುಖ್ಯ ಮಂತ್ರಿಗಳು, ಮಂಡಳಿಯ ಅದ್ಯಕ್ಷರಾಗಿರುತ್ತಾರೆ. ರಾಜ್ಯ ಹಣಕಾಸಿನ ಮಂತ್ರಿಗಳು ಅಥವಾ ಒಬ್ಬ ತಜ್ಞರು ಮಂಡಳಿಯ ಉಪಾಧ್ಯಕ್ಷರಾಗಿರುತ್ತಾರೆ. ವಿವಿಧ ಕ್ಷೇತ್ರದ ಪರಿಣಿತರನ್ನು ಸದಸ್ಯರೆಂದು ನೇಮಿಸಲಾಗುತ್ತದೆ. ರಾಜ್ಯ ಯೋಜನಾ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳು, ಈ ಮಂಡಳಿಯ ಸದಸ್ಯ ಕಾರ್ಯದರ್ಶಿಗಳಾಗಿರುತ್ತಾರೆ. ಈ ಮಂಡಳಿಯಲ್ಲಿ ಉಪಾಧ್ಯಕ್ಷರಾಗಿ ಪ್ರೊ.ನಂಜುಂಡಪ್ಪ, ವೀರಪ್ಪಮೌಳಿರಂತರವರು ಕಾರ್ಯ ನಿರ್ವಹಿಸಿದ್ದಾರೆ.

ರಾಜ್ಯ ಯೋಜನಾ ಮಂಡಳಿಯು ಮೂರು ಹಂತಗಳಲ್ಲಿ ಕಾರ್ಯ ನಿರ್ವಹಿಸುತ್ತದೆ.

ರಾಷ್ಟ್ರೀಯ ಯೋಜನಾ ಆಯೋಗ



ರಾಜ್ಯ ಯೋಜನಾ ಮಂಡಳಿ



ರಾಜ್ಯ ಯೋಜನಾ ಇಲಾಖೆ



ಜಿಲ್ಲಾ ಯೋಜನಾ ಇಲಾಖೆಗಳು





ಜಿಲ್ಲಾ ಪರಿಷತ್ | ತಾಲೂಕು ಪಂಚಾಯಿತಿಗಳು | ಗ್ರಾಮ ಪಂಚಾಯಿತಿಗಳು



ವಿವಿಧ ಇಲಾಖೆಗಳು



೨೦ % ಯೋಜನಾ ಮೊತ್ತ | ೩೦ % ಯೋಜನಾ ಮೊತ್ತ | ೫೦ % ಯೋಜನಾ ಮೊತ್ತ

ರಾಜ್ಯ ಯೋಜನಾ ಇಲಾಖೆಯು ಮಂತ್ರಿಗಳು, ಪ್ರಧಾನ ಕಾರ್ಯದರ್ಶಿಗಳು, ಕಾರ್ಯದರ್ಶಿಗಳನ್ನು ಹೊಂದಿರುತ್ತದೆ. ಜಿಲ್ಲಾ ಯೋಜನಾ ಘಟಕಗಳನ್ನು ಮತ್ತೆ ಮೂರು ವಿಭಾಗಗಳಾಗಿ ವಿಂಗಡಿಸಿದ್ದು ಜಿಲ್ಲಾ ಪಂಚಾಯತ್, ತಾಲ್ಲೂಕು ಪಂಚಾಯತ್‌ಗಳು, ಗ್ರಾಮಪಂಚಾಯಿತಿಗಳು, ಜಿಲ್ಲಾ ಪಂಚಾಯತ್‌ನಲ್ಲಿ ಅನೇಕ ಉಪ ಯೋಜನಾ ಇಲಾಖೆಗಳು ಕಾರ್ಯನಿರ್ವಹಿಸುತ್ತವೆ.

ರಾಜ್ಯ ಯೋಜನಾ ಮೊತ್ತವನ್ನು ರಾಜ್ಯಯೋಜನಾ ಇಲಾಖೆಯು ಶೇ.೨೦ರಷ್ಟು ಜಿಲ್ಲಾ ಪರಿಷತ್‌ಗೆ, ಶೇ.೩೦ರಷ್ಟು ತಾಲೂಕು ಪಂಚಾಯತಿಗಳಿಗೆ, ಶೇ.೫೦ರಷ್ಟು ಗ್ರಾಮ ಪಂಚಾಯಿತಿಗಳಿಗೆ ನೀಡುತ್ತದೆ.

**ಕಾರ್ಯಗಳು**

ರಾಜ್ಯ ಯೋಜನಾ ಮಂಡಳಿಯು ಈ ಕೆಳಗಿನ ಕಾರ್ಯಗಳನ್ನು ನಿರ್ವಹಿಸುತ್ತದೆ.

೧. ರಾಜ್ಯದ ಯೋಜನಾ ಮಂಡಳಿಯು ರಾಜ್ಯ ಸರ್ಕಾರಕ್ಕೆ ಯೋಜನೆಗಳನ್ನು ತಯಾರಿಸಲು ಹಾಗೂ ಯಶಸ್ವಿಗೊಳಿಸಲು ಸಲಹೆಗಳನ್ನು ನೀಡುತ್ತದೆ.

೨. ರಾಜ್ಯದಲ್ಲಿರುವ ನೈಸರ್ಗಿಕ ಹಾಗೂ ಮಾನವ ಸಂಪತ್ತಿನ ಸಮೀಕ್ಷೆ ಮಾಡುತ್ತದೆ.

೩. ರಾಜ್ಯದ ಸಂಪನ್ಮೂಲಗಳನ್ನು ಯೋಗ್ಯವಾಗಿ ಬಳಸಿ, ಅಭಿವೃದ್ಧಿ ಸಾಧಿಸಲು ಯೋಜನೆಗಳನ್ನು ಸಿದ್ಧಪಡಿಸುತ್ತದೆ.

೪. ರಾಷ್ಟ್ರೀಯ ಯೋಜನೆಗಳಿಗೆ ಸರಿಹೊಂದುವಂತೆ, ರಾಜ್ಯ ಯೋಜನಾ ಪ್ರಶಸ್ತಿಗಳನ್ನು ಗೊತ್ತು ಪಡಿಸುವುದು.

೫. ರಾಜ್ಯ ಹಾಗೂ ಜಿಲ್ಲಾ ಯೋಜನಾ ಇಲಾಖೆಗಳಿಗೆ, ತಮ್ಮ ಯೋಜನೆಗಳನ್ನು ಸಿದ್ಧಪಡಿಸಲು ಸಹಾಯ ಮಾಡುತ್ತದೆ.

೬. ಸಾಮಾಜಿಕ ಹಾಗೂ ಆರ್ಥಿಕ ಅಭಿವೃದ್ಧಿಗೆ ಮಾರಕವಾಗಿರುವ ಅಂಶಗಳನ್ನು ಗುರುತಿಸಿ, ಅವುಗಳಿಗೆ ಪರಿಹಾರ ಸೂಚಿಸುತ್ತದೆ.

೭. ರಾಜ್ಯ ಯೋಜನೆಗಳ ಪ್ರಗತಿಯನ್ನು ಪರಿಶೀಲಿಸುತ್ತದೆ.

## ಒಂಬತ್ತನೆಯ ಪಂಚವಾರ್ಷಿಕ ಯೋಜನೆ (೧೯೯೭-೨೦೦೨)

ಒಂಬತ್ತನೆ ಪಂಚವಾರ್ಷಿಕ ಯೋಜನೆಯ ಪ್ರಮುಖ ಗುರಿಯು "ಸಾಮಾಜಿಕ ನ್ಯಾಯ ಹಾಗೂ ಸಮಾನತೆಯೊಂದಿಗೆ ಅಭಿವೃದ್ಧಿ", ಎಂದು ಸಾರಲಾಯಿತು. ರಾಜಕೀಯ ಅಸ್ಥಿರತೆಯು, ಈ ಯೋಜನೆಯ ಕರಡು ಪ್ರತಿ ಅನುಮೋದನೆಯಲ್ಲಿ ವಿಳಂಬ ತಂದಿತು. ಪ್ರೊ.ಮಧುದಂಡವತೆ, ಜಸವಂತ್‌ಸಿಂಗ, ನಂತರ ಕೆ.ಸಿ.ಪಂತ್ ಈ ಯೋಜನೆಯ ಕರಡು ಪ್ರತಿಯನ್ನು ಸಿದ್ಧಪಡಿಸಿದರು. ಕೊನೆಯಲ್ಲಿ ಫೆಬ್ರುವರಿ ೧೯೯೯ರಲ್ಲಿ, ಎಂದರೆ, ಯೋಜನೆ ಪ್ರಾರಂಭಿಸಿದ, ಎರಡು ವರ್ಷ ನಂತರ, ಕೆ.ಸಿ.ಪಂತರು ತಯಾರಿಸಿದ ಕರಡು ಪ್ರತಿಯನ್ನು ರಾಷ್ಟ್ರೀಯ ಅಭಿವೃದ್ಧಿ ಮಂಡಳಿಯ, ಯೋಜನೆಯ ಕರಡನ್ನು ತಿದ್ದುಪಡಿಸಿ, ತನ್ನ ಅನುಮೋದನೆಯನ್ನು ನೀಡಿತು.

ಈ ಯೋಜನೆಯ ನಾಲ್ಕು ಪ್ರಮುಖ ಅಭಿವೃದ್ಧಿಯ ದೀಶೆಗಳೆಂದರೆ, ಭೌತಿಕ ಗುಣಮಟ್ಟದ ಜೀವನ, ಉತ್ಪಾದನೆಯುಕ್ತ ಉದ್ಯೋಗಾವಕಾಶಗಳ ಸೃಷ್ಟಿ, ಪ್ರಾದೇಶಿಕ ಸಮಾನತೆ, ಆರ್ಥಿಕ ಸ್ವಾವಲಂಬನೆ.

## ಯೋಜನೆಯ ಗುರಿಗಳು

೧. ಈ ಯೋಜನೆಯು, ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿಗೆ ಆದ್ಯತೆ ನೀಡಿ, ಬಡತನ ನಿರ್ಮೂಲನೆ, ಹಾಗೂ ಉದ್ಯೋಗಾವಕಾಶಗಳನ್ನು ಸಾಕಷ್ಟು ಸೃಷ್ಟಿಸಲು ಪ್ರಾಮುಖ್ಯತೆ ನೀಡಿತು.

೨. ಬೆಲೆಗಳ ಮಟ್ಟದಲ್ಲಿ ಸ್ಥಿರತೆಯನ್ನು ಹೊಂದಿ ಆರ್ಥಿಕ ಅಭಿವೃದ್ಧಿಯನ್ನು ತೀವ್ರಗೊಳಿಸುವುದು. ಯೋಜನಾ ಅವಧಿಯಲ್ಲಿ ಒಟ್ಟು ದೇಶೀಯ ಉತ್ಪನ್ನದ ಸುಮಾರು ಶೇ.೬.೫ರಷ್ಟು ವಾರ್ಷಿಕ ಬೆಳವಣಿಗೆ ಸಾಧಿಸಲು ಗುರಿ ಹಾಕಿಕೊಳ್ಳಲಾಯಿತು.

೩. ಆಹಾರ ಮತ್ತು ಪೌಷ್ಟಿಕಾಂಶಗಳಲ್ಲಿ ಭದ್ರತೆಯನ್ನು ಒದಗಿಸುವಂತೆ ಆಹಾರ ಉತ್ಪಾದನೆಯನ್ನು ೧೯೯.೩೨ ಮಿ.ಟ. ನಿಂದ ೨೩೪ ಮಿ.ಟ.ಗೆ ಹೆಚ್ಚಿಸುವುದು. ೧೫ ಮೀ. ಹೆಚ್ಚುವರಿ ಜಮೀನನ್ನು ನೀರಾವರಿಗೆ ಒಳಪಡಿಸುವುದು.

೪. ಸಾರ್ವಜನಿಕರಿಗೆ ಕನಿಷ್ಠ ಅವಶ್ಯಕತೆಗಳಾದ ಶುದ್ಧಕುಡಿಯುವ ನೀರು, ಪ್ರಾಥಮಿಕ

ಆರೋಗ್ಯ ಸೌಲಭ್ಯಗಳು, ಸಾರ್ವಜನಿಕ ಪ್ರಾಥಮಿಕ ಶಿಕ್ಷಣವನ್ನು ನಿರ್ದಿಷ್ಟ ಅವಧಿಯಲ್ಲಿ ಒದಗಿಸುವುದು.

೫. ಜನಸಂಖ್ಯೆ ಬೆಳವಣಿಗೆಯನ್ನು ನಿಯಂತ್ರಿಸುವುದು.

೬. ಮಹಿಳೆಯರ ಹಾಗೂ ಸಾಮಾಜಿಕ ಹಿಂದುಳಿದವರ ಸಶಸ್ತ್ರೀಕರಣಗೊಳಿಸುವುದು.

೭. ಸಾರ್ವಜನಿಕರು ಭಾಗವಹಿಸುವ ಸಂಸ್ಥೆಗಳಾದ ಪಂಚಾಯತ್‌ರಾಜ್ಯ ಸಂಸ್ಥೆಗಳನ್ನು, ಸಹಕಾರ ಸಂಘಗಳನ್ನು ಹಾಗೂ ಸ್ವಸಹಾಯ ಗುಂಪುಗಳನ್ನು ಅಭಿವೃದ್ಧಿಗೊಳಿಸುವುದು.

೮. ಒಟ್ಟು ರಾಷ್ಟ್ರೀಯ ಉತ್ಪನ್ನದ ಸುಮಾರು ಶೇ. ೨೬.೧ರಷ್ಟು ಉಳಿತಾಯ ಮಟ್ಟ ಸಾಧಿಸಲು ಗುರಿಯನ್ನು ನಿರ್ಧರಿಸಲಾಯಿತು. ಅದೇ ರೀತಿ ಪ್ರತಿಶತ ೧೧.೮ರಷ್ಟು ರಫ್ತುಗಳನ್ನು ಹೆಚ್ಚಿಸಲು ನಿರ್ಧರಿಸಲಾಯಿತು.

೯. ಪರಿಸರವನ್ನು ಸಂರಕ್ಷಿಸುವುದು ಹಾಗೂ ಅಭಿವೃದ್ಧಿಗೊಳಿಸುವುದು.

೧೦. ಆರ್ಥಿಕ ಸ್ವಾವಲಂಬನೆ ಸಾಧಿಸುವ ಪ್ರಯತ್ನಗಳನ್ನು ಬಲಗೊಳಿಸುವುದು.

**೯ನೇ ಯೋಜನೆಯ ಸಾರ್ವಜನಿಕ ಕ್ಷೇತ್ರದ ಹಣಕಾಸಿನ ಮೂಲಗಳು**

| ಕ್ರ.ಸಂ. | ಹಣಕಾಸಿನ ಮೂಲಗಳು | ಕೇಂದ್ರಸರ್ಕಾರ (ಕೋಟಿ.ರೂ.) | ರಾಜ್ಯಗಳು (ಕೋಟಿ.ರೂ.) | ಒಟ್ಟು (ಕೋಟಿ.ರೂ.) | ಪ್ರತಿಶತ (ಕೋಟಿ.ರೂ.) |
|---|---|---|---|---|---|
| ೧. | ಸಾರ್ವಜನಿಕ ಕ್ಷೇತ್ರಗಳಿಂದ ಹಣಕಾಸು | ೨,೮೫,೩೭೯ | ೫೫,೦೩೦ | ೩,೪೦,೦೪೯ | ೩೯.೬ |
| ೨. | ಮುಂಗಡ ಸಾಲುಗಳು | ೩,೧೬,೭೬೦ | ೧,೪೩,೪೧೯ | ೪,೬೦,೧೭೯ | ೫೩.೪ |
| ೩. | ವಿದೇಶಿ ಬಂಡವಾಳ ಹೂಡಿಕೆ | | ೬೦,೦೧೮ | ೬೦,೦೧೮ | ೭.೦ |
| ೪. | ಕೊರತೆಯ ಹಣಕಾಸು | ...... | ...... | ....... | ..... |
| ೫. | ಯೋಜನೆಗಳಿಗೆ ಸಹಾಯ | ...... | ೧,೬೭,೧೫೮ | ....... | ..... |
| | ಒಟ್ಟು | ೪,೯೨,೨೨೧ | ೩,೬೬,೯೭೬ | ೮,೫೯,೨೦೦ | ೧೦೦ |

೯ನೆ ಯೋಜನೆಯು, ಕೊರತೆಯ ಹಣಕಾಸು ಪದ್ಧತಿಯನ್ನು ಕೊನೆಗೊಳಿಸಿ, ಮುಂಗಡ ಸಾಲಗಳಿಂದ ೫೩.೪, ಸಾರ್ವಜನಿಕ ಕ್ಷೇತ್ರದಿಂದ ೩೯.೬, ಹಾಗೂ ವಿದೇಶಿ ಬಂಡವಾಳ ಹೂಡುವಿಕೆಯಿಂದ ಶೇ. ೭ರಷ್ಟು ಹಣಕಾಸನ್ನು ಸಂಗ್ರಹಿಸಿತು.




## ೯ನೇ ಯೋಜನಾ ವೆಚ್ಚದ ಕ್ಷೇತ್ರವಾರು ವಿಂಗಡಣೆ

೯ನೇ ಯೋಜನೆಯ ಕ್ಷೇತ್ರವಾರು ಯೋಜನಾ ವೆಚ್ಚದ ವಿಂಗಡಣೆ ಈ ಕೆಳಗಿನಂತಿದೆ.

| ಕ್ರ.ಸಂ. | ಕ್ಷೇತ್ರಗಳು | ಒಟ್ಟು ವೆಚ್ಚ ಕೋಟಿ.ರೂ. | ಪ್ರತಿಶತ ಪ್ರಮಾಣ |
|---|---|---|---|
| ೧. | ಕೃಷಿ ಮತ್ತು ಇತರ | ೩೭,೫೪೬ | ೪.೪ |
| ೨. | ನೀರಾವರಿ ಹಾಗೂ ಮಹಾಪೂರ ನಿಯಂತ್ರಣ | ೫೫,೫೨೮ | ೬.೫ |
| ೩. | ಗ್ರಾಮೀಣ ಅಭಿವೃದ್ಧಿ | ೭೩,೪೩೯ | ೮.೫ |
| ೪. | ವಿಶೇಷ ಯೋಜನೆಗಳು | ೩,೬೪೯ | ೦.೪ |
| ೫. | ವಿದ್ಯುತ್‌ಶಕ್ತಿ | ೨,೧೫,೫೪೫ | ೨೫.೧ |
| ೬. | ಕೈಗಾರಿಕೆ ಹಾಗೂ ಖನಿಜ | ೬೯,೯೭೨ | ೮.೧ |
| ೭. | ಸಾರಿಗೆ | ೧,೨೧,೩೨೪ | ೧೪.೧ |
| ೮. | ಸಂಪರ್ಕ | ೪೭,೬೧೬ | ೫.೫ |
| ೯. | ವಿಜ್ಞಾನ, ತಂತ್ರಜ್ಞಾನ ಮತ್ತು ಪರಿಸರ | ೨೫,೫೨೯ | ೩.೦ |

| | | | |
|---|---|---|---|
| ೧೦. | ಸಾಮಾನ್ಯ ಮತ್ತು ಆರ್ಥಿಕ ಸೇವೆಗಳು | ೨೬,೯೭೮ | ೩.೧ |
| ೧೧. | ಸಾಮಾಜಿಕ ಸೇವೆಗಳು | ೧,೮೨,೦೦೫ | ೨೧.೨ |
| | ಒಟ್ಟು | ೮,೫೯,೨೦೦ | ೧೦೦ |

೯ನೇ ಯೋಜನೆಯಲ್ಲಿ ಪ್ರಥಮ ಪ್ರಾಶಸ್ತ್ಯ, ವಿದ್ಯುತ್ ಶಕ್ತಿಗೆ, ದ್ವಿತೀಯ ಪ್ರಾಶಸ್ತ್ಯ ಸಾಮಾಜಿಕ ಸೇವೆಗಳಿಗೆ ಹಾಗೂ ತೃತೀಯ ಪ್ರಾಶಸ್ತ್ಯ ಸಾರಿಗೆಗೆ ನೀಡಲಾಯಿತು.

**೯ನೇ ಯೋಜನೆಯ ಸಾಧನೆಗಳು**

ಈ ಯೋಜನಾ ಅವಧಿಯಲ್ಲಿ ಹೊಸ ಆರ್ಥಿಕ ನೀತಿಗಳು, ಜಾಗತೀಕರಣ, ಖಾಸಗೀಕರಣ ಬಂಡವಾಳ ಹಿಂತೆಗೆತ ಹಾಗೂ ಉದಾರೀಕರಣಗಳ ಪ್ರಭಾವ ರಾಷ್ಟ್ರದ ಆರ್ಥಿಕ ಅಭಿವೃದ್ಧಿಯ ಚಟುವಟಿಕೆಯಲ್ಲಿ ಕಂಡುಬಂದಿತು.

೧. ಈ ಯೋಜನಾ ಅವಧಿಯಲ್ಲಿ, ಸೇವಾಕ್ಷೇತ್ರವು (ತೃತೀಯ ರಂಗ), ಪ್ರಾಥಮಿಕ ರಂಗ, ಹಾಗೂ ದ್ವಿತೀಯ ರಂಗಗಳನ್ನು ಹಿಂದೆ ಹಾಕಿ, ಒಟ್ಟು ರಾಷ್ಟ್ರೀಯ ಆದಾಯದಲ್ಲಿ ಸುಮಾರು ೪೮.೪ರಷ್ಟು ಪಾಲು ಪಡೆದು, ಭವಿಷ್ಯದ ಮತ್ತು ೨೧ನೇ ಶತಮಾನದ ರಂಗವಾಗಿ ಏರ್ಪಟ್ಟಿತು. ಈ ರಂಗದಲ್ಲಿ, ಸಾರಿಗೆ, ಸಂಪರ್ಕ, ಮಾಹಿತಿ ತಂತ್ರಜ್ಞಾನ, ಹಣಕಾಸು, ವ್ಯಾಪಾರ, ಹೋಟೆಲ್ ಉದ್ದಿಮೆ, ವಿಮೆ, ಕಟ್ಟಡ ನಿರ್ಮಾಣ, ಸೇವೆಗಳು, ಮುಂತಾದ ಕ್ಷೇತ್ರಗಳು ಕ್ರಾಂತಿಯನ್ನುಂಟು ಮಾಡಿದವು. ತೃತೀಯ ರಂಗವು ವಾರ್ಷಿಕವಾಗಿ ಪ್ರತಿಶತ ೮.೧೨ರಷ್ಟು ಬೆಳವಣಿಗೆ ಕಂಡಿತು. ಮಾಹಿತಿ ತಂತ್ರಜ್ಞಾನ ಕ್ಷೇತ್ರವು ಜಾಗತೀಕ ಮಟ್ಟದಲ್ಲಿ ಬೆಳೆಯಿತು. ಉದಾರೀಕರಣ ನೀತಿಯಿಂದ, ಹಣಕಾಸು ಹಾಗೂ ಬ್ಯಾಂಕಿಂಗ್ ಕ್ಷೇತ್ರ ಲಾಭದಾಯಕವಾಗಿ ಬೆಳೆದವು. ತೆರಿಗೆ ವಿನಾಯಿತಿ ಹಾಗೂ ಗೃಹ ನಿರ್ಮಾಣ ಸಾಲಗಳ ನೀತಿಯಿಂದ ಕಟ್ಟಡ ನಿರ್ಮಾಣದಲ್ಲಿ ಸಾಕಷ್ಟು ಪ್ರಗತಿ ಸಾಧಿಸಿತು. ಸಂಪರ್ಕ ಕ್ಷೇತ್ರವು ಸಾಕಷ್ಟು ಲಾಭದಾಯಕವಾಗಿ ಬೆಳೆಯಿತು. ಟೆಲಿಫೋನ್ ಜನಸಾಂದ್ರತೆಯು ಶೇ.೬ (೧೦೦ಕ್ಕೆ ೬ ಜನ) ಮಟ್ಟ ತಲುಪಿತು. ಪ್ರಾಮಾಣಿಕರ ಕಾರುಗಳ ಉತ್ಪಾದನೆ ೨೦೦೨ರಲ್ಲಿ ೫,೭೩,೧೪೬ಕ್ಕೆ ಏರಿತು. ಒಟ್ಟಿನಲ್ಲಿ ಸೇವಾ ಕ್ಷೇತ್ರವು ಹೊಸ ಆರ್ಥಿಕ ನೀತಿಯ ಲಾಭ ಪಡೆದು ಅಭಿವೃದ್ಧಿ ಸಾಧಿಸಿ, ಅಧಿಕ ಉದ್ಯೋಗಾವಕಾಶಗಳನ್ನು ಸೃಷ್ಟಿಸಿತು ಹಾಗೂ ಸರ್ಕಾರಕ್ಕೆ ತೆರಿಗೆ ಪ್ರಮಾಣವನ್ನು ಹೆಚ್ಚಿಸಿತು.

೨. ಪ್ರಾಥಮಿಕ ರಂಗದಲ್ಲಿ, ಕೃಷಿ ಉತ್ಪಾದನೆ (ಆಹಾರದ ಉತ್ಪಾದನೆ)ಯು ೧೯೯೭-೯೮ರಲ್ಲಿ ರೂ.೨,೪೬,೫೯೯ ಕೋಟಿಯಿಂದ ೨೦೦೧-೦೨ರಲ್ಲಿ ೨,೭೯,೮೭೧ ಕೋಟಿಗೆ ಹೆಚ್ಚಿತು. ಒಟ್ಟು ದೇಶೀಯ ಉತ್ಪಾದನೆಯಲ್ಲಿ ಕೃಷಿಯ ಪಾಲು ಇಳಿಮುಖವಾಗುತ್ತಾ ೧೯೯೭ ೯೮ರಲ್ಲಿ ಶೇ. ೨೪.೩ ಇದ್ದದ್ದು, ೨೦೦೧-೦೨ರಲ್ಲಿ ಶೇ. ೨೨.೧ಕ್ಕೆ ಇಳಿಯಿತು.

೩. ಒಟ್ಟು ದೇಶಿಯ ಉತ್ಪನ್ನದ ಪ್ರಮಾಣವು ರೂ.೧೦,೮೨,೭೪೮ ಕೋಟಿಯಿಂದ ರೂ.೧೨,೬೭,೮೩೩ ಕೋಟಿಗೆ ಹೆಚ್ಚಿತು. (೧೯೯೩-೯೪ರ ಸ್ಥಿತಿ ಬೆಲೆಗಳ ಮಟ್ಟದಲ್ಲಿ). ಸುಮಾರು ೬ ೫ರಷ್ಟು ವಾರ್ಷಿಕ ಬೆಳೆವಣಿಗೆಯಲ್ಲಿ ಜಿ.ಡಿ.ಪಿ.ಯು ಹೆಚ್ಚಿತು. ತಲಾ ವರಮಾನವು ಶೇ. ೨.೧ರಷ್ಟು ವಾರ್ಷಿಕ ಬೆಳವಣಿಗೆಯಲ್ಲಿ ಹೆಚ್ಚಿತು.

೪. ಮೂಲಭೂತ ಸೌಕರ್ಯಗಳಲ್ಲಿ, ವಿದ್ಯುತ್‌ಶಕ್ತಿ ಉತ್ಪಾದನೆ ೨೦೦೧-೦೨ ೪೯೬ Bkwh (೫,೧೫,೨೪೭ Million Kwh)ಗೆ ಹೆಚ್ಚಿತು. ಕಲ್ಲಿದ್ದಲು ಉತ್ಪಾದನೆ ೨೦೦೧-೦೨ರಲ್ಲಿ ೩೭೦ ಮಿ.ಟನ್ ಇದ್ದಿತು.

೫. ಜನಸಂಖ್ಯಾ ಬೆಳವಣಿಗೆ ದರವು ಶೇ.೨ಕ್ಕಿಂತ ಕಡಿಮೆ ಪ್ರಮಾಣಕ್ಕೆ ಇಳಿಯಿತು.

೬. ಸಾಕ್ಷರತಾ ಪ್ರಮಾಣವು ಶೇ.೬೫ಕ್ಕೆ ಹೆಚ್ಚಿತು.

೭. ವಾಣಿಜ್ಯ ಬ್ಯಾಂಕುಗಳ ಶಾಖೆಗಳ ಒಟ್ಟು ಸಂಖ್ಯೆ ೬೭,೪೯೯ಕ್ಕೆ ಏರಿತು. ಬ್ಯಾಕುಗಳ ಒಟ್ಟು NP. 4s (Non-Performing Assets) ಆರ್ಥಿಕ ಕೆಟ್ಟ ಸಾಲದ ಒಟ್ಟು ಮೊತ್ತವು ೨೦೦೧-೦೨ರಲ್ಲಿ ರೂ.೭೦,೮೬೧ ಕೋಟಿಗೆ ಹೆಚ್ಚಿತು. ಒಟ್ಟು ಸಾಲದ ಶೇ.೧೦.೪ ರಷ್ಟು ಮೊತ್ತವು ಕೆಟ್ಟ ಸಾಲಗಳಾಗಿ ಪರಿಣಮಿಸಿದವು.

೮. ಕೈಗಾರಿಕಾ ಕ್ಷೇತ್ರವು ಶೇ.೫ರಷ್ಟು ವಾರ್ಷಿಕ ಬೆಳವಣಿಗೆ ದರದಲ್ಲಿ ಅಭಿವೃದ್ಧಿ ಹೊಂದಿತು. ಅದು ಕೃಷಿ ವಾರ್ಷಿಕ ಬೆಳವಣಿಗೆ ದರ ೩.೦%ಕ್ಕಿಂತ ಅಧಿಕವಾಗಿತ್ತು. ದ್ವಿತೀಯ ರಂಗದ ರಾಷ್ಟ್ರೀಯ ವರಮಾನದಲ್ಲಿ ಪಾಲು ೨೫.೦%ರಷ್ಟು ಮಟ್ಟಕ್ಕೆ ಹೆಚ್ಚಿತು.

೯. ಆಹಾರದ ಉತ್ಪಾದನೆಯಲ್ಲಿ ದೇಶವು ಸ್ವಾವಲಂಬನೆ ಸಾಧಿಸಿ, ಸುಮಾರು ೫೦ ಟನ್ ಆಹಾರಧಾನ್ಯಗಳ ಸಂಗ್ರಹಣೆಯನ್ನು ದಾಸ್ತಾನು ಮಳಿಗೆಯಲ್ಲಿ ಸಂಗ್ರಹಿಸಿತು.

೧೦. ತಲಾವರಮಾನವು ಯೋಜನಾ ಅವಧಿಯಲ್ಲಿ ಸ್ಥಿರಬೆಲೆಗಳಲ್ಲಿ ರೂ.೧೧,೫೬೭ ರಿಂದ ರೂ.೧೩,೩೪೭ಕ್ಕೆ ಏರಿತು. ಅದೇ ರೀತಿ ಚಾಲ್ತಿ ಬೆಲೆಗಳಲ್ಲಿ ಅದು ರೂ.೧೫,೭೯೪ ದಿಂದ ರೂ.೨೨,೧೪೧ಗೆ ಏರಿತು.

### ೯ನೇ ಯೋಜನೆಯ ವಿಮರ್ಶೆ

೯ನೇ ಯೋಜನಾ ಅವಧಿ (೧೯೯೭-೦೨)ಯಲ್ಲಿ, ರಾಜಕೀಯ ಅಸ್ಥಿರತೆಯಿಂದ, ಆರ್ಥಿಕ ಅಭಿವೃದ್ಧಿ ಕುಂಠಿತಗೊಂಡಿತು. ಈ ಅವಧಿಯಲ್ಲಿ ಅನೇಕ ಚುನಾವಣೆಗಳು ಜರುಗಿ, ಮಾವದಿನಗಳು ನಾಶವಾದವು, ಗುಜರಾತಿನ ಭೂಕಂಪ, ರಾಜ್ಯದ ಆರ್ಥಿಕ ಪರಿಸ್ಥಿತಿಯನ್ನು ಕುಂಠಿತಗೊಳಿಸಿತು. ಜಾಗತೀಕರಣದ ಕಾರಣದಿಂದ, ಭಾರತದ, ಹತ್ತಿ ಬಟ್ಟೆ ಕಾರ್ಖಾನೆಗಳ ಮೇಲೆ ಕೆಟ್ಟ ಪರಿಣಾಮ ಬೀರಿತು. ಸುಮಾರು ೧೧೩ ಹತ್ತಿ ಬಟ್ಟೆ ಕಾರ್ಖಾನೆಗಳು ಮುಚ್ಚಿದವು ಹಾಗೂ ಸುಮಾರು ೫೦,೦೦೦ ಕಾರ್ಮಿಕರು ಉದ್ಯೋಗ ಕಳೆದುಕೊಂಡರು.

ಈ ಯೋಜನಾ ಅವಧಿಯಲ್ಲಿ, ಖಾಸಗೀಕರಣ ಹಾಗೂ ಬಂಡವಾಳ ಹಿಂದೆಗೆತದ ಕಾರಣದಿಂದ ಸಾರ್ವಜನಿಕ ಕ್ಷೇತ್ರದಲ್ಲಿ ಹಾಗೂ ಸಂಘಟಿತ ಕ್ಷೇತ್ರಗಳಲ್ಲಿ ಉದ್ಯೋಗವಕಾಶಗಳು ಕೇವಲ ೦.೧೭% ಪ್ರಮಾಣಕ್ಕೆ ಇಳಿಯಿತು. ರಾಷ್ಟ್ರದಲ್ಲಿ ಒಟ್ಟು ಎಲ್ಲಾ ಕ್ಷೇತ್ರಗಳಲ್ಲಿ ಉದ್ಯೋಗಾವಕಾಶಗಳ ಮಟ್ಟ ಕೇವಲ ೧.೧%ರಷ್ಟು ಮಾತ್ರವಿತ್ತು.

ಹೊಸ ಆರ್ಥಿಕ ನೀತಿಯನ್ನು ರಾಜ್ಯಗಳು ಗಂಭೀರವಾಗಿ ಪರಿಗಣಿಸದಿರುವುದರಿಂದ, ಅಭಿವೃದ್ಧಿಯ ಕಾರ್ಯ ಚಟುವಟಿಕೆಗಳು ಕುಂಠಿತವಾಗಿ ಸಾಗಿದವು.

ಮೂಲಭೂತ ಸೌಕರ್ಯಗಳಾದ, ವಿದ್ಯುತ್‌ಶಕ್ತಿ, ಇಂಧನ, ಸಾರಿಗೆ ವ್ಯವಸ್ಥೆ, ನೀರಾವರಿ ಸೌಕರ್ಯಗಳ ಕೊರತೆಯಿಂದ ಯೋಜನಾ ಕಾರ್ಯ ಚಟುವಟಿಕೆಗಳು ಮಂದಗತಿಯಲ್ಲಿ ಸಾಗಿದವು.

ಆದರೂ, ಈ ಯೋಜನೆಯು, ಮೂಲಭೂತ ಸೌಕರ್ಯಗಳಿಗಾಗಿ ಸುಮಾರು ೭೨.೪ರಷ್ಟು ಯೋಜನಾ ವೆಚ್ಚವನ್ನು ವಿದ್ಯುತ್‌ಶಕ್ತಿ, ನೀರಾವರಿ, ಸಾರಿಗೆ ಸಂಪರ್ಕ, ಸಾಮಾಜಿಕ ಸೇವೆಗಳಿಗಾಗಿ ಮೀಸಲಿಟ್ಟು, ಆರ್ಥಿಕ ಅಭಿವೃದ್ಧಿಗೆ ಬದ್ರಬುನಾದಿ ಹಾಕಿತು.

## ಹತ್ತನೆಯ ಪಂಚವಾರ್ಷಿಕ ಯೋಜನೆ (೨೦೦೭)

ಹತ್ತನೆ ಪಂಚವಾರ್ಷಿಕ ಯೋಜನೆಯು, ಹೊಸಶತಮಾನದ ಪ್ರಥಮ ಯೋಜನೆಯಾಗಿ, ಹೊಸ ದೇಶಗಳೊಂದಿಗೆ, ಸರಿಯಾಗಿ ೧ನೇ ಏಪ್ರಿಲ್ ೨೦೦೨ ರಿಂದ ಅನುಷ್ಠಾನಕ್ಕೆ ಬಂದಿತು. ಈ ಯೋಜನೆಯು ಭೌತಿಕ ಗುಣಮಟ್ಟದ ಜೀವನ ಸೂಚಿ, ಮಾನವ ಅಭಿವೃದ್ಧಿ ಸೂಚಿ, ಹಾಗೂ ಪರಿಸರ ಸಂರಕ್ಷಣಾ ಸೂಚಿಗಳ ಸುಧಾರಣೆಗೆ ಮಹತ್ವ ನೀಡಿತು. ಭಾರತವು ಶೀಘ್ರ ಅಭಿವೃದ್ಧಿ ಹೊಂದುತ್ತಿರುವ ಹತ್ತು ರಾಷ್ಟ್ರಗಳಲ್ಲಿ ಒಂದಾಗಿದ್ದರೂ ಬಡತನ, ನಿರುದ್ಯೋಗ, ಪ್ರಾದೇಶಿಕ ಅಸಮಾನತೆ, ಆಡಳಿತ ವೈಫಲ್ಯತೆಗಳು, ನೈಸರ್ಗಿಕ ವಿಕೋಪಗಳು, ಯೋಗ್ಯ ಮಾಹಿತಿಯು ಕೊರತೆ, ಇತ್ಯಾದಿ ಸಮಸ್ಯೆಗಳನ್ನು ಎದುರಿಸುತ್ತಿದೆ ಎಂದು ವಿಶಿಷ್ಟವಾಗಿ ಗುರುತಿಸಲಾಯಿತು. ಇವು ಈ ಯೋಜನೆಯ ಪ್ರಮುಖ ವೈಶಿಷ್ಟ್ಯಗಳಾದವು.

## ೧೦ನೇ ಯೋಜನೆಯ ವೈಶಿಷ್ಟ್ಯಗಳು

೧. ಆರ್ಥಿಕ ಅಭಿವೃದ್ಧಿ, ಉದ್ಯೋಗರಹಿತ ಅಭಿವೃದ್ಧಿಯಾಗದೆ ಅಭಿವೃದ್ಧಿ ಚಟುವಟಿಕೆಗಳು ಉದ್ಯೋಗವನ್ನು ಸೃಷ್ಟಿಸುವಂತಾಗಬೇಕು.

೨. ಪ್ರಾದೇಶಿಕ ಸಮಾನತೆ ಸಾಧಿಸಲು ಕೇಂದ್ರ ಸರ್ಕಾರದ ಸಂಗಡ ರಾಜ್ಯಸರ್ಕಾರಗಳೂ ಸಹ ಪ್ರಮುಖ ಪಾತ್ರವಹಿಸಬೇಕು.

೩. ಯೋಜನೆಗಳ ಯಶಸ್ಸು, ಆಡಳಿತ ಯಂತ್ರಗಳ ಗುಣಮಟ್ಟ, ದಕ್ಷತೆ, ಪ್ರಾಮಾಣಿಕತೆಯನ್ನು ಅವಲಂಬಿಸಿವೆ. ಒಳ್ಳೆಯ ಯೋಜನೆಗಳು, ಕಳಪೆ ಗುಣಮಟ್ಟ ಆಡಳಿತ ವ್ಯವಸ್ಥೆಯಿಂದ ವಿಫಲವಾಗುತ್ತದೆ. ಆದ್ದರಿಂದ ಆಡಳಿತ ಗುಣಮಟ್ಟವನ್ನು ಸುಧಾರಿಸಬೇಕು.

೪. ನೈಸರ್ಗಿಕ ವಿಕೋಪಗಳು ಯೋಜನಾ ಅಭಿವೃದ್ಧಿಗೆ ಮಾರಕವಾಗಿದೆ. ಆದ್ದರಿಂದ ನೈಸರ್ಗಿಕ ವಿಕೋಪಗಳ ನಿರ್ವಹಣೆಯನ್ನು ಯೋಜನೆಗಳ ಭಾಗವಾಗಿಸಬೇಕು. ಹತ್ತನೆಯ ಯೋಜನೆಯಲ್ಲಿ, ನೈಸರ್ಗಿಕ ವಿಕೋಪಗಳ ನಿರ್ವಹಣೆ, ಒಂದು ಅಧ್ಯಾಯ ವಾಗಿ ಪ್ರಾರಂಭವಾಗಿದೆ.

೫. ಕೇಂದ್ರ ಸರ್ಕಾರ ಹಾಕಿಕೊಂಡ ಅನೇಕ ಯೋಜನೆಗಳ ಪೂರ್ಣ ಮಾಹಿತಿ, ರಾಜ್ಯ ಸರ್ಕಾರಗಳಿಗೆ ಸೂಕ್ತ ವೇಳೆಯಲ್ಲಿ ತಲುಪದೆ, ಯೋಜನಾ ವೈಫಲ್ಯತೆಗೆ ಕಾರಣವಾಗಿದೆ. ಆದ್ದರಿಂದ ಯೋಜನಾ ಕಾರ್ಯಕ್ರಮಗಳ ಆನ್ ಲೈನ್ ಸೇವಾ ವ್ಯವಸ್ಥೆ ಇರಬೇಕು. ಈಗಲೇ ಡಾ.ಮನಮೋಹನ ಸಿಂಗ್‌ರ ಸರ್ಕಾರ ಮಾಹಿತಿ ಹಕ್ಕು ಕಾನೂನು ಪಾಸು ಮಾಡಿದೆ. ಇದು ಅಭಿವೃದ್ಧಿ ಕಾರ್ಯಕ್ರಮದ ಪಾಲುಗಾರರಿಗೆ ಸಹಾಯಕಾರಿ ಯಾಗಿರುವುದು.

೬. ನಿರ್ದಿಷ್ಟ ಅವಧಿಯಲ್ಲಿ, ಎಲ್ಲಾ ಕ್ಷೇತ್ರಗಳು, ತಮಗೆ ದೊರೆತ ಯೋಜನಾ ವೆಚ್ಚದಲ್ಲಿ, ಗುರಿ ಸಾಧಿಸಬೇಕು, ತಮ್ಮ ಕ್ಷೇತ್ರಗಳಿಗೆ ಸಂಬಂಧಿತ ಸಂಸ್ಥೆಗಳು ಹೊಸ ಆರ್ಥಿಕ ಬದಲಾವಣೆಗೆ ಒಳಪಡಿಸಬೇಕು. ಒಟ್ಟಿನಲ್ಲಿ ೧೦ನೇ ಯೋಜನಾ ಅವಧಿಯಲ್ಲಿ ಒಟ್ಟು ದೇಶೀಯ ಉನ್ನತದ ವಾರ್ಷಿಕ ಬೆಳವಣಿಗೆ ದರವು ಶೇ.೮ರಷ್ಟು ಸಾಧಿಸಲು ಗುರಿ ಹೊಂದಲಾಯಿತು.

### ೧೦ನೇ ಯೋಜನೆಯ ಗುರಿಗಳು

೧೦ನೇ ಯೋಜನೆಯ ಗುರಿಗಳು ಈ ಕೆಳಗಿನಂತಿವೆ.

೧. ಬಡತನ ಪ್ರಮಾಣವನ್ನು ೨೦೦೭ರಲ್ಲಿ ೨೧% ರಷ್ಟು ಹಾಗೂ ೨೦೧೨ರಲ್ಲಿ ೧೧%ರಷ್ಟು ಮಟ್ಟಕ್ಕೆ ಇಳಿಸುವುದು.

೨. ಯೋಜನಾ ಅವಧಿಯಲ್ಲಿ ಹೆಚ್ಚುವರಿ ಸೇರಿಸಲ್ಪಡುವ ಕಾರ್ಮಿಕ ವರ್ಗಕ್ಕೆ ಸರಿಹೊಂದುವಂತೆ ಉದ್ಯೋಗಾವಕಾಶಗಳನ್ನು ಸೃಷ್ಟಿಸುವುದು.

೩. ೨೦೦೭ರಲ್ಲಿ ಐದು ವರ್ಷಗಳ ಎಲ್ಲಾ ಮಕ್ಕಳು ಶಾಲೆಗೆ ಕಲಿಯಲು ಬರುವಂತೆ ಕಾರ್ಯಕ್ರಮ ಹಾಕಿಕೊಳ್ಳುವುದು.

೪. ಸಾಕ್ಷರತಾ ಪ್ರಮಾಣ ಹಾಗೂ ಕೂಲಿಮಟ್ಟದಲ್ಲಿ ಲಿಂಗಭೇದವನ್ನು ಕಡಿಮೆಮಾಡಿ, ಸುಮಾರು ಶೇ.೫೦ರಷ್ಟು ಇಳಿಸುವುದು.

೫. ಸಾಕ್ಷರತಾ ಪ್ರಮಾಣವನ್ನು ೬೫% ರಿಂದ ೭೫%ಕ್ಕೆ ಹೆಚ್ಚಿಸುವುದು.

೬. ಜನಸಂಖ್ಯೆ ಬೆಳವಣಿಗೆ ದಶಕ ದರವನ್ನು ೨೦೦೧-೨೦೧೧ಕ್ಕೆ ಶೇ.೧೬.೨೧ಕ್ಕೆ ಇಳಿಸುವುದು.

೭. ಎಲ್ಲಾ ಗ್ರಾಮೀಣ ಪ್ರದೇಶಗಳಲ್ಲಿ ಶುದ್ಧ ಕುಡಿಯುವ ನೀರು ಪೂರೈಸುವುದು.

೮. ಶಿಶುಮರಣ ಪ್ರಮಾಣವನ್ನು ೨೦೦೭ ವರೆಗೆ ೧೦೦೦ಕ್ಕೆ ೪೫ಕ್ಕೆ ಇಳಿಸಲಾಗಿದೆ ಹಾಗೂ ೨೦೧೨ಕ್ಕೆ ೧೦೦೦ಗೆ ೨೮ರಷ್ಟು ಮಟ್ಟಕ್ಕೆ ತಗ್ಗಿಸುವುದು.

೯. ಮಾತೃ ಮರಣ ಪ್ರಮಾಣವನ್ನು ೨೦೦೭ರಲ್ಲಿ ೧೦೦೦ಕ್ಕೆ ೨ ಹಾಗೂ ೨೦೧೨ರಲ್ಲಿ ೧೦೦೦ಕ್ಕೆ ೧ರಷ್ಟು ಇಳಿಸುವುದು.

೧೦. ೨೦೦೭ರ ವರೆಗೆ ಮಾಲಿನ್ಯದಿಂದ ಬಳಲುವ ಎಲ್ಲಾ ಪ್ರಮುಖ ನದಿಗಳನ್ನು, ಹಾಗೂ ೨೦೧೨ರ ವರೆಗೆ ಉಳಿದ ನದಿಗಳನ್ನು ಸ್ವಚ್ಛಗೊಳಿಸುವುದು.

೧೦ನೆ ಯೋಜನೆಯು ಈ ರೀತಿಯಾದ ನಿರ್ದಿಷ್ಟ ಪ್ರಮಾಣದ ಗುರಿಗಳನ್ನು ಗೊತ್ತುಪಡಿಸಿತ್ತು. ಒಟ್ಟು ದೇಶೀಯ ರಾಷ್ಟ್ರೀಯ ವರಮಾನದ ವಾರ್ಷಿಕ ಬೆಳವಣಿಗೆ ದರವನ್ನು ಶೇ. ೮ಕ್ಕೆ ಸಾಧಿಸಬೇಕೆಂದು ನಿರ್ಧರಿಸಲಾಯಿತು.

## ಯೋಜನಾ ಹಣಕಾಸಿನ ಮೂಲಗಳು

೧೦ನೆ ಯೋಜನೆಯ ಹಣಕಾಸಿನ ಮೂಲಗಳು ಈ ಕೆಳಗಿನಂತಿವೆ.

| ಕ್ರ.ಸಂ. | ಹಣಕಾಸಿನ ಮೂಲಗಳು | ಕೇಂದ್ರ ಸರ್ಕಾರ ಕೋಟಿ.ರೂ. | ರಾಜ್ಯ ಸರ್ಕಾರಗಳು ಕೋಟಿ.ರೂ. | ಒಟ್ಟು ಕೋಟಿ.ರೂ. | ಪ್ರತಿಶತ ಪ್ರಮಾಣ |
|---|---|---|---|---|---|
| ೧. | ಪ್ರಚಲಿತ ಆದಾಯದಲ್ಲಿ ಉಳಿತಾಯ (B.C.R.) | ೬,೩೮೫ | ೨೬,೫೭೮ | ೨೦,೧೯೩ | ೧.೨೬ |
| ೨. | ಸಾರ್ವಜನಿಕ ಕ್ಷೇತ್ರದಿಂದ ಹಣಕಾಸು | ೫,೧೫,೫೫೬ | ೮೨,೬೮೪ | ೫,೯೮,೨೪೦ | ೩೭.೫೭ |
| ೩. | ಕೈಗಡ ಸಾಲಗಳು (M.C.R.) | ೬,೮೫,೧೮೫ | ೨,೬೧,೪೮೨ | ೯,೪೬,೬೬೭ | ೫೯.೪೫ |
| ೪. | ಒಟ್ಟು ವಿದೇಶಿ ಬಂಡವಾಳ ಹೂಡುವಿಕೆ | ೨೭,೨೦೦ | -- | ೨೭,೨೦೦ | ೧.೭೦ |
| ೫. | ಕೊರತೆಯ ಹಣಕಾಸು | | | | |
| ೬. | ಒಟ್ಟು ಹಣಕಾಸು | ೧೨,೨೧,೫೫೬ | ೩,೭೦,೭೪೪ | ೧೫,೯೨,೩೦೦ | ೧೦೦ |
| ೭. | ರಾಜ್ಯ ಹಾಗೂ ಕೇಂದ್ರಾಡಳಿತ ಪ್ರದೇಶಗಳಿಗೆ ಸಹಾಯಧನ | ೩,೦೦,೨೬೫ | ೩,೦೦,೨೬೫ | -- | -- |
| ೮. | ಸಾರ್ವಜನಿಕ ಕ್ಷೇತ್ರದ ಒಟ್ಟು ಹಣಕಾಸು | ೯,೨೧,೨೯೧ | ೬,೭೧,೦೦೯ | ೧೫,೯೨,೩೦೦ | ೧೦೦ |

## ಯೋಜನಾ ಕಾರ್ಯತಂತ್ರ

೧೦ನೆ ಯೋಜನೆಯ ಪ್ರಮುಖ ಹಾಗೂ ಪ್ರಾಶಸ್ತ್ಯ ಭಾಗದ ಯೋಜನಾ ಕಾರ್ಯತಂತ್ರವು ಈ ಕೆಳಗಿನಂತಿದೆ.

ಯೋಜನೆಗಳು ಯಶಸ್ವಿಯಾಗಬೇಕಾದರೆ, ಪ್ರಚಲಿತ ರೀತಿಯ ಆಡಳಿತ ಕಾರ್ಯವೈಖರಿಯನ್ನು ಬದಲಿಸಿ, ಹೊಸ ಆಡಳಿತ ನೀತಿಯನ್ನು ಅನುಷ್ಠಾನಗೊಳಿಸಲು ಸಿದ್ಧಪಡಿಸಲಾಯಿತು. ಖಾಸಗಿ ಕ್ಷೇತ್ರಗಳನ್ನು ಉತ್ತೇಜಿಸಲು, ಸರ್ಕಾರದ ಎಲ್ಲ ಆಡಳಿತ ವಿಭಾಗಗಳು ನೆರವಾಗಲೇಬೇಕು. ಅದರ ಆಡಳಿತ, ಖಾಸಗಿರಂಗದ ಅಭಿವೃದ್ಧಿಗೆ ಮಾರಕವಾಗದೇ ಪೂರಕವಾಗಿರಬೇಕೆಂದು ತಿಳಿಸಲಾಯಿತು.

ರಾಜ್ಯಸರ್ಕಾರಗಳಿಗೆ ನಗರ ಭೂ ಮಿತಿ ಕಾಯ್ದೆಯನ್ನು ರದ್ದು ಪಡಿಸಲು ತಿಳಿಸಲಾಯಿತು. ಬಂಡವಾಳ ಹೂಡುವಿಕೆಗೆ, ನಗರ ಬಾಡಿಗೆ ನಿಯಂತ್ರಣ ಕಾಯ್ದೆ ಮಾರಕವಾಗದಂತೆ ತಿದ್ದುಪಡಿಸಲು ರಾಜ್ಯಗಳಿಗೆ ತಿಳಿಸಲಾಯಿತು.

ಭ್ರಷ್ಟಾಚಾರಕ್ಕೆ ಯಾವುದೇ ರೀತಿಯ ಆಸ್ಪದ ನೀಡದೆ ಆಡಳಿತ ಯಂತ್ರವನ್ನು ಚುರುಕುಗೊಳಿಸಲು ಕ್ರಮ ಕೈಗೊಳ್ಳಲಾಯಿತು. ಆಡಳಿತ ಯಂತ್ರದ ಖರ್ಚುವೆಚ್ಚಗಳನ್ನು ಕಡಿತಗೊಳಿಸಬೇಕೆಂದು ನಿರ್ಧರಿಸಲಾಯಿತು. ಕೇಂದ್ರ ಸರ್ಕಾರದ ನೌಕರರ ಸಂಖ್ಯೆ ಕಡಿತಗೊಳಿಸುವುದು. ನ್ಯಾಯಾಂಗ ಪದ್ಧತಿಯನ್ನು ಚುರುಕುಗೊಳಿಸಿ, ವ್ಯಾಜ್ಯಗಳನ್ನು ಶೀಘ್ರ ರೀತಿಯಲ್ಲಿ ಬಗೆಹರಿಸಲು ಕ್ರಮ ಕೈಗೊಳ್ಳಲು ಸೂಚಿಸಲಾಯಿತು.

ರಾಜ್ಯ ಸರ್ಕಾರಗಳೂ, ಸಹ ರಾಷ್ಟ್ರದ ಮಾದರಿಯಲ್ಲಿ ಯೋಜನಾ ಗುರಿಗಳನ್ನು ಹಾಕಿಕೊಂಡು, ತಮ್ಮ ರಾಜ್ಯಗಳ ಅಭಿವೃದ್ಧಿಗೆ ಪ್ರಯತ್ನಿಸಬೇಕೆಂದು ತಿಳಿಸಲಾಯಿತು. ರಾಜ್ಯ ಸರ್ಕಾರಗಳಿಗೂ ಯೋಜನಾ ಗುರಿಗಳನ್ನು ೧೦ನೆ ಯೋಜನೆಯಲ್ಲಿ, ಸಿದ್ಧಪಡಿಸಲಾಯಿತು.

ಹೆಣ್ಣು ಮಕ್ಕಳ ಪ್ರಾಥಮಿಕ ಶಿಕ್ಷಣ ಹಾಗೂ ಮಹಿಳೆಯರ ಪ್ರಾಥಮಿಕ ಆರೋಗ್ಯಕ್ಕೆ ಹೆಚ್ಚಿನ ಗಮನ ನೀಡಲಾಯಿತು.

ಕಾರ್ಮಿಕರ ಕಾನೂನುಗಳನ್ನು ಘನೀಕರಿಸುವುದು ಹಾಗೂ ಸಡಿಲಿಸುವ ಕ್ರಮಗಳಿಂದ, ಉದ್ಯೋಗಾವಕಾಶಗಳನ್ನು ಹೆಚ್ಚಿಸುವ ಕ್ರಮಗಳನ್ನು ಕೈಗೊಳ್ಳಲಾಯಿತು. ಈ ದಿಶೆಯಲ್ಲಿ ವಿಜಯ ಕೇಳ್ಕರ್‌ರವರ ಆಡಳಿತ ಪರಿವೀಕ್ಷಣಾ ವರದಿ ಜಾರಿಗೆ ಬಂದಿತು.

## ೧೦ನೇ ಯೋಜನಾ ವೆಚ್ಚದ ಕ್ಷೇತ್ರವಾರು ವಿಂಗಡಣೆ

೧೦ನೇ ಯೋಜನಾ ವೆಚ್ಚದ ಪ್ರಮುಖ ಕ್ಷೇತ್ರಗಳ ವಿಂಗಡಣೆ ಈ ರೀತಿ ಇರುತ್ತದೆ.

| ಕ್ರ.ಸಂ. | ಕ್ಷೇತ್ರ | ಯೋಜನಾ ವೆಚ್ಚ ಕೋಟಿ ರೂ. | ಪ್ರತಿಶತ ಪ್ರಮಾಣ |
|---|---|---|---|
| ೧. | ಕೃಷಿ ಮತ್ತು ಇತರ ಚಟುವಟಿಕೆಗಳು | ೫೮,೯೩೩ | ೩.೯ |
| ೨. | ನೀರಾವರಿ ಮತ್ತು ಪ್ರವಾಹ ನಿಯಂತ್ರಣ | ೧,೦೩,೩೧೫ | ೬.೮ |
| ೩. | ಗ್ರಾಮೀಣ ಅಭಿವೃದ್ಧಿ | ೧,೨೧,೯೨೮ | ೮.೦ |
| ೪. | ವಿಶೇಷ ಪ್ರದೇಶ ಯೋಜನೆಗಳು | ೨೦,೮೭೯ | ೧.೪ |
| ೫. | ವಿದ್ಯುತ್‌ಶಕ್ತಿ | ೪,೦೩,೯೨೭ | ೨೬.೫ |
| ೬. | ಕೈಗಾರಿಕೆ ಮತ್ತು ಖನಿಜಗಳು | ೫೮,೯೩೯ | ೩.೯ |
| ೭. | ಸಾರಿಗೆ | ೨,೨೫,೯೭೭ | ೧೪.೮ |
| ೮. | ಸಂಪರ್ಕ | ೯೮,೯೬೮ | ೬.೫ |
| ೯. | ವಿಜ್ಞಾನ, ತಂತ್ರಜ್ಞಾನ ಮತ್ತು ಪರಿಸರ | ೩೦,೪೨೪ | ೨.೦ |
| ೧೦. | ಸಾಮಾನ್ಯ ಆರ್ಥಿಕ ಸೇವೆಗಳು | ೩೮,೬೩೦ | ೨.೫ |
| ೧೧. | ಸಾಮಾಜಿಕ ಸೇವೆಗಳು | ೩,೪೭,೩೯೧ | ೨೨.೮ |
| ೧೨. | ಸಾಮಾನ್ಯ ಸೇವೆಗಳು | ೧೬,೩೨೮ | ೧.೧ |
| | ಒಟ್ಟು | ೧೫,೨೫,೬೩೯ | ೧೦೦ |

ಈ ಯೋಜನೆಯೂ ಸಹ ಮೂಲಭೂತ ಸೌಕರ್ಯಗಳಾದ ವಿದ್ಯುತ್‌ಶಕ್ತಿ, ನೀರಾವರಿ, ಸಾರಿಗೆ, ಸಂಪರ್ಕಗಳಿಗೆ ಹೆಚ್ಚಿನ ಮಹತ್ವ ನೀಡಿತು.

ಹತ್ತನೆಯ ಯೋಜನೆಯು ಹಾಕಿಕೊಂಡ ಪ್ರಮುಖ ಆರ್ಥಿಕ ಗುರಿಗಳ ಸಾರಾಂಶ ಈ ರೀತಿಯಾಗಿದೆ.

| ಕ್ರ.ಸಂ. | ಆರ್ಥಿಕ ಅಂಶಗಳು | ೧೦ನೇ ಯೋಜನೆ | ಯೋಜನೆಯ ನಂತರ |
|---|---|---|---|
| ೧. | ದೇಶೀಯ ಉಳಿತಾಯ ದರ (%ಜಿ.ಡಿ.ಪಿ.ಯ ಮಾರುಕಟ್ಟೆ ದರದಲ್ಲಿ) | ೨೬.೮ | ೩೩.೦ |
| ೨. | ಚಾಲ್ತಿ ಖಾತೆಯ ಕೊರತೆ ಪ್ರಮಾಣ (%ಜೆ.ಡಿ.ಪಿ.ಯ ಮಾರುಕಟ್ಟೆ ದರದಲ್ಲಿ) | ೧.೬ | ೩.೧ |
| ೩. | ಬಂಡವಾಳ ಹೂಡುವಿಕೆಯ ದರ | ೨೮.೪ | ೩೬.೧ |
| ೪. | ಬಂಡವಾಳ ಪ್ರತಿಫಲದ ಹೆಚ್ಚುವರಿ ದರ | ೩.೫೮ | ೩.೮೪ |
| ೫. | ಒಟ್ಟು ದೇಶೀಯ ಉತ್ಪನ್ನ (ವಾರ್ಷಿಕ%) | ೮.೦೦ | ೯.೪ |
| ೬. | ರಫ್ತು ಬೆಳವಣಿಗೆ ದರ (ವಾರ್ಷಿಕ%) | ೧೨.೪ | .... |
| ೭. | ಆಮದು ಬೆಳವಣಿಗೆ ದರ (ವಾರ್ಷಿಕ%) | ೧೭.೧ | .... |

## ಹತ್ತನೆ ಯೋಜನೆಯ ಪ್ರಥಮ ಮೂರು ವರ್ಷಗಳ ಸಾಧನೆ

ಹತ್ತನೆಯ ಯೋಜನೆಯು, ಭಾರತ ದೇಶದ ಪ್ರಗತಿಯಲ್ಲಿ ಹೊಸ ಮೈಲುಗಲ್ಲನ್ನು ಸ್ಥಾಪಿಸುತ್ತಾ ಸಾಗಿದೆ. ಹಣಕಾಸು ಸಂಸ್ಥೆಗಳು, ವ್ಯಾಪಾರ, ಸಂಪರ್ಕ, ನಿರ್ಮಾಣ, ಮಾಹಿತಿ ತಂತ್ರಜ್ಞಾನ, ಹೋಟೆಲ್ ಉದ್ದಿಮೆ, ವಿಮೆ, ಸಾರಿಗೆ, ಮುಂತಾದ ಕ್ಷೇತ್ರಗಳಲ್ಲಿ ಉತ್ತಮ ಸಾಧನೆ ಕಂಡುಬರುತ್ತಿದೆ. ಸಂಪರ್ಕ ಸೇವೆಗಳಲ್ಲಿ, ಒಟ್ಟು ಟೆಲಿಫೋನ್‌ಗಳ ಸಂಖ್ಯೆ ಏಪ್ರಿಲ್, ೧೩, ೨೦೦೫ ದಿನದಂದು, ೧೦೦ ಮಿಲಿಯನ್ ದಾಟಿತು. ಟೆಲಿಫೋನ್ ಸಂಖ್ಯೆಯಲ್ಲಿ ಭಾರತವು ಐದನೆಯ ಸ್ಥಾನ ಹೊಂದಿದೆ. ವಿದೇಶಿ ವಿನಿಮಯದ ಸಂಗ್ರಹ ೨೦೦೪-೦೫ರಲ್ಲಿ ಯು.ಎಸ್. ೨೮.೯೧ ಮಟ್ಟವನ್ನು ತಲುಪಿತು.

| ಕ್ರ.ಸಂ. | ಆರ್ಥಿಕ ಕ್ಷೇತ್ರ | ೨೦೦೨-೦೩ ೧೯೯೩-೯೪ ಬೆಲೆಗಳಲ್ಲಿ | ೨೦೦೩-೦೪ | ೨೦೦೪-೦೫ |
|---|---|---|---|---|
| ೧. | ಒಟ್ಟು ದೇಶೀಯ ಉತ್ಪನ್ನ(ಜಿ.ಡಿ.ಪಿ.) (Factoracost) | ೯,೬೧,೪೯೭ (೪.೦%) | ೧೦,೪೩,೭೬೪ (೮.೬%) | ೧೧,೧೩,೯೫೬ (೬.೯%) |
| ೨. | ವಿದ್ಯುತ್‌ಶಕ್ತಿ ಉತ್ಪಾದನೆ | ೫,೩೧,೫೯೪ M.K.W. | ೫೫೮೩೩೬ M.K.W. (೪.೫%) | ೫೮೭೩೬೬ M.K.W (೫.೨%) |
| ೩. | ಕಲ್ಲಿದ್ದಲು ಉತ್ಪಾದನೆ % ವಾರ್ಷಿಕ ಬೆಳವಣಿಗೆ ದರ | ..... | ೪.೯% | ೬.೦% |
| ೪. | ಉಕ್ಕು ಉತ್ಪಾದನೆ (% ವಾರ್ಷಿಕ ಬೆಳವಣಿಗೆ ದರ) | ..... | ೧೨.೦% | ೩.೨% |
| ೫. | ಸಿಮೆಂಟ್ ಉತ್ಪಾದನೆ (%ವಾ.ಬೆ.ದರ) | ..... | ೬.೩% | ೬.೬% |
| ೬. | ಕೃಷಿ ಮತ್ತು ಇತರ ಚಟುವಟಿಕೆಗಳು (% ವಾ.ಬೆ.ದರ) | ೭.೦% | ೯.೬% | ೧.೧% |
| ೭. | ಕೈಗಾರಿಕಾ ಉತ್ಪಾದನೆ (%ವಾ.ಬೆ.ದರ) | ೫.೮% | ೭.೦% | ೮.೪% |
| ೮. | ಸೇವೆಗಳು (ರಾ.ದೇ.ಉ.ದ.% ವಾ.ಬೆ.ದರ) | ೭.೯% | ೯.೧% | ೮.೯% |
| ೯. | ಟೆಲಿಫೋನ್ ಜನಸಾಂದ್ರತೆ (%) | ೬.೯% | ೮.೫೯% | ೯.೧೩% |
| ೧೦. | ಆಹಾರದಾನ್ಯದ ಉತ್ಪಾದನೆ | ೧೭೪.೧೯M.T | ೨೧೨.೦೬M.T | ೨೧೦.೪೪M.T |
| ೧೧. | ಒಟ್ಟು ಟೆಲಿಫೋನ್‌ಗಳ ಸಂಖ್ಯೆ (ಮೊಬೈಲ್ ಸಹಿತ) | ೫೪.೬೨M.I | ೭೬.೫೪M.I | ೧೦೦.೨೭M.I |
| ೧೨. | ವಿದೇಶಿ ವಿನಿಮಯ ಸಂಗ್ರಹ U.S. | ೭೧.೮೯B.L | ೧೦೭.೪೫B.L | ೧೨೩.೬೫B.L |

ಒಟ್ಟು ದೇಶೀಯ ಉತ್ಪನ್ನದಲ್ಲಿ ಕ್ಷೇತ್ರವಾರು ಪಾಲು (೨೦೦೨-೦೩)




## ಮಾದರಿ ಪ್ರಶ್ನೆಗಳು

**I.** ಈ ಕೆಳಗಿನ ಪ್ರತಿ ಪ್ರಶ್ನೆಗಳನ್ನು ಒಂದು ಅಂಕದಲ್ಲಿ ಉತ್ತರಿಸಿರಿ. ಒಂದು ಅಂಕದ ಪ್ರಶ್ನೆಗಳು

೧. ಭಾರತದ ಆರ್ಥಿಕ ಯೋಜನೆಗಳು ಯಾವ ವರ್ಷ ಪ್ರಾರಂಭವಾದವು?

೨. ಭಾರತದ ಯೋಜನಾ ಅವಧಿಯನ್ನು ತಿಳಿಸಿರಿ.

೩. "ಪ್ಲಾನಡ ಎಕನಾಮಿ ಫಾರ್ ಇಂಡಿಯಾ" ಎಂಬ ಪುಸ್ತಕವನ್ನು ಯಾರು ಬರೆದರು?

೪. "ಯೋಚಿಸಿರಿ ಇಲ್ಲವೆ ಹಾಳಾಗಿರಿ" ಎಂದು ಯಾರು ಘೋಷಿಸಿದರು?

೫. ಜನಸಾಮಾನ್ಯರ ಯೋಜನೆಯನ್ನು ಯಾರು ಸಿದ್ಧಪಡಿಸಿದ್ದರು?

೬. ಬಾಂಬೆ ಯೋಜನೆಯನ್ನು ಯಾವ ವರ್ಷ ಸಿದ್ಧಪಡಿಸಿದ್ದರು?

೭. ರಾಷ್ಟ್ರೀಯ ಯೋಜನಾ ಆಯೋಗದ ಪ್ರಥಮ ಅಧ್ಯಕ್ಷರ ಹೆಸರು ತಿಳಿಸಿರಿ.

೮. ಯಾವ ವರ್ಷ ರಾಷ್ಟ್ರೀಯ ಯೋಜನಾ ಆಯೋಗ ಅಸ್ತಿತ್ವಕ್ಕೆ ಬಂದಿತು?

೯. ರಾಷ್ಟ್ರೀಯ ಯೋಜನಾ ಆಯೋಗದ ಅಧ್ಯಕ್ಷರು ಯಾರಿರುತ್ತಾರೆ?

೧೦. ರಾಷ್ಟ್ರೀಯ ಯೋಜನಾ ಆಯೋಗದ ಈಗಿನ ಉಪಾಧ್ಯಕ್ಷರ ಹೆಸರು ತಿಳಿಸಿರಿ.
೧೧. ಒಂಬತ್ತನೆ ಯೋಜನಾ ವೆಚ್ಚದ ಒಟ್ಟು ಹಣವೆಷ್ಟು?
೧೨. ಹತ್ತನೆಯ ಯೋಜನಾ ಅವಧಿ ತಿಳಿಸಿರಿ.

**II. ಈ ಕೆಳಗಿನ ಪ್ರತಿ ಪ್ರಶ್ನೆಗಳನ್ನು ನಾಲ್ಕು ವಾಕ್ಯಗಳಲ್ಲಿ ಬರೆಯಿರಿ.** ೨ ಅಂಕ

೧. ಆರ್ಥಿಕ ಯೋಜನೆಗಳು ಎಂದರೇನು?
೨. ಬಾಂಬೆ ಯೋಜನೆಯ ಬಗ್ಗೆ ತಿಳಿಸಿರಿ.
೩. ರಾಷ್ಟ್ರೀಯ ಯೋಜನಾ ಆಯೋಗದ ಎರಡು ಕಾರ್ಯಗಳನ್ನು ತಿಳಿಸಿರಿ.
೪. ರಾಷ್ಟ್ರೀಯ ಅಭಿವೃದ್ಧಿ ಮಂಡಳಿಯ ಎರಡು ಕಾರ್ಯಗಳನ್ನು ಬರೆಯಿರಿ.

**III. ಈ ಕೆಳಗಿನ ಪ್ರತಿ ಪ್ರಶ್ನೆಗಳಿಗೆ ೧೫ ವಾಕ್ಯಗಳಲ್ಲಿ ಉತ್ತರಿಸಿರಿ.** ೫ ಅಂಕ

೧. ರಾಷ್ಟ್ರೀಯ ಯೋಜನಾ ಆಯೋಗದ ಕಾರ್ಯಗಳನ್ನು ಹಾಗೂ ಸಂಘಟನೆಯನ್ನು ವಿವರಿಸಿರಿ.
೨. ರಾಷ್ಟ್ರೀಯ ಅಭಿವೃದ್ಧಿ ಮಂಡಳಿಯ ಬಗ್ಗೆ ಟಿಪ್ಪಣಿ ಬರೆಯಿರಿ.

**IV. ಈ ಕೆಳಗಿನ ಪ್ರಶ್ನೆಗಳನ್ನು ೪೦ ವಾಕ್ಯಗಳಲ್ಲಿ ಉತ್ತರಿಸಿರಿ.** ೧೦ ಅಂಕ

೧. ಒಂಬತ್ತನೆ ಯೋಜನೆಯ ಗುರಿಗಳು, ಹಾಗೂ ಸಾಧನೆಗಳನ್ನು ವಿವರಿಸಿರಿ.
೨. ಹತ್ತನೆಯ ಯೋಜನೆಯ ಬಗ್ಗೆ ಟಿಪ್ಪಣಿ ಬರೆಯಿರಿ.
೧. ಒಂಬತ್ತನೆ ಯೋಜನೆಯ ವೆಚ್ಚದ ಕ್ಷೇತ್ರವಾರು ವಿಂಗಡಣೆಯ ಪಟ್ಟಿಯನ್ನು ಪೈ ಚಿತ್ರ ಮುಖಾಂತರ ತಯಾರಿಸಿ.

**V. ಮುಖ್ಯಾಂಶಗಳು**

೧. ಯೋಜನೆ ಅರ್ಥ ರಾಷ್ಟ್ರದ ಆರ್ಥಿಕ ಅಭಿವೃದ್ಧಿಯನ್ನು, ನಿರ್ದಿಷ್ಟ ಅವಧಿಯಲ್ಲಿ, ಗೊತ್ತುಪಡಿಸಿದ ಗುರಿಗಳನ್ನು ಸಾಧಿಸಲು ಸರ್ಕಾರ ಹಾಕಿಕೊಂಡ ಕಾರ್ಯಕ್ರಮಗಳು.
೨. ರಾಷ್ಟ್ರೀಯ ಯೋಜನಾ ಆಯೋಗ ಯೋಜನೆಗಳ ಕರಡನ್ನು ಸಿದ್ದಪಡಿಸುವ ಒಂದು ಸಂಘಟನೆ.

**ಕಾರ್ಯಗಳು**

೧. ರಾಷ್ಟ್ರದ ಸಂಪನ್ಮೂಲಗಳನ್ನು ಸಮೀಕ್ಷೆ ಮಾಡುವುದು.
೨. ಯೋಜನೆಗಳನ್ನು ಸಿದ್ದಪಡಿಸುವುದು.
೩. ಯೋಜನಾ ಕಾರ್ಯತಂತ್ರ ರೂಪಿಸುವುದು.
೪. ಯೋಜನಾ ಸಮಸ್ಯೆಗಳಿಗೆ ಪರಿಹಾರ ಸೂಚಿಸುವುದು.
೫. ಯೋಜನೆಗಳನ್ನು ವಿಮರ್ಶಿಸುವುದು.
೬. ಸಾರ್ವಜನಿಕ ಸಹಕಾರ ಸಾಧಿಸುವುದು.

೩. ರಾಷ್ಟ್ರೀಯ ಅಭಿವೃದ್ಧಿ ಮಂಡಳಿ ರಾಷ್ಟ್ರೀಯ ಯೋಜನಾ ಆಯೋಗ ಸಿದ್ಧಪಡಿಸಿದ ಕರಡು ಪ್ರತಿಯನ್ನು ವಿಮರ್ಶಿಸಿ, ಮಂತ್ರಿ ಮಂಡಲಕ್ಕೆ ಒಪ್ಪಿಸುವುದು.

೪. ರಾಜ್ಯ ಯೋಜನಾ ಮಂಡಳಿ ರಾಜ್ಯ ಆರ್ಥಿಕ ಯೋಜನೆಗಳು ಸಿದ್ದಪಡಿಸುತ್ತದೆ.

೫. ಒಂಬತ್ತನೆ ಯೋಜನೆ ೧೯೯೭-೦೨ ಒಟ್ಟು ಮೊತ್ತ ರೂ.೮,೫೯,೨೦೦ ಕೋಟಿ.

೬. ಹತ್ತನೆಯ ಯೋಜನೆ ೨೦೦೨-೦೭ ಒಟ್ಟು ಮೊತ್ತ ರೂ.೧೫,೯೨,೩೦೦ ಕೋಟಿ.

## ಗ್ರಂಥ ಋಣ

೧. ಇಂಡಿಯನ್ ಎಕಾನಾಮಿ ರುದ್ರದತ್ತ ಮತ್ತು ಕೆ.ಪಿ.ಎಂ.ಸುಂದರಂ.

೨. ಯೋಜನಾ ಮಾಸಿಕ ಪತ್ರಿಕೆಗಳು.

೩. ಪಿಯರಸನ್ ಜನರಲ್ ಸ್ಟ್ರಾಟಿಕ ಮೆನೂವಲ್ ೨೦೦೪

೪. CRS ಮಾಸಿಕ ಪತ್ರಿಕೆಗಳು.

೫. ದಿನಪತ್ರಿಕೆಗಳು

# ಅನುಬಂಧಗಳು

## ಅನುಬಂಧ ೧

## ಎರಡನೆಯ ಪದವಿಪೂರ್ವ ಅರ್ಥಶಾಸ್ತ್ರದ ಪಠ್ಯಕ್ರಮ ಬೋಧಿಸುವ ಉದ್ದೇಶಗಳು

### ಒಟ್ಟಾರೆ ಗುರಿ

ವಿದ್ಯಾರ್ಥಿಗಳಿಗೆ ೧೯೪೭ರ ನಂತರ ಭಾರತದ ಆರ್ಥಿಕ ಅಭಿವೃದ್ಧಿಯನ್ನು ಪರಿಚಯಿಸುವುದು. ಇಲ್ಲಿ ಮುಖ್ಯವಾಗಿ ಗಮನವನ್ನು ಕೆಳಕಂಡ ಸಂಗತಿಗಳಿಗೆ ನೀಡಬೇಕು.

- ಆರ್ಥಿಕ ಬೆಳವಣಿಗೆ ಮಾಪನದ ಸೂಚ್ಯಂಕಗಳು ಹಾಗೂ ಆರ್ಥಿಕ ಅಭಿವೃದ್ಧಿಯ ಪರಿಣಾಮಗಳು.
- ಅಭಿವೃದ್ಧಿಶೀಲ ದೇಶಗಳ ಸಂದರ್ಭದಲ್ಲಿ ಭಾರತ ಸ್ಥಾನ ಮತ್ತು ಲಕ್ಷಣಗಳು
- ಜುಲೈ ೧೯೯೧ರ ನಂತರದ ಭಾರತದ ರಾಷ್ಟ್ರೀಯ ಆರ್ಥಿಕ ಸುಧಾರಣಾ ಕಾರ್ಯಕ್ರಮದ ಒಳರಚನೆ ಮತ್ತು ರಚನೆ
- ಮಾನವ ಸಂಪನ್ಮೂಲ ಅಭಿವೃದ್ಧಿ, ಕೃಷಿ, ಕೈಗಾರಿಕೆ, ಶ್ರಮ, ಆರ್ಥಿಕ ಮೂಲ ಸೌಲಭ್ಯ, ವಿದೇಶಿ ವ್ಯಾಪಾರ ಮತ್ತು ಸಾರ್ವಜನಿಕ ಹಣಕಾಸುಗಳಿಗೆ ಸಂಬಂಧಿಸಿದ ನೀತಿಯ ವಿಶ್ಲೇಷಣೆ ಹಾಗೂ ಅವುಗಳ ಸ್ಯಾಂಖ್ಯಿತ ಮಾಹಿತಿಯ ವಿವರಣೆ.
- ರಾಷ್ಟ್ರೀಯ ಮಟ್ಟದಲ್ಲಿ ಆರ್ಥಿಕ ಯೋಜನೆಯ ಗುರಿಗಳು ಮತ್ತು ಕಾರ್ಯಸಾಧನೆ.

### ನಿರ್ದಿಷ್ಟ ಗುರಿಗಳು

#### ಅ. ಜ್ಞಾನ

ಭಾರತದ ಆರ್ಥಿಕ ಅಭಿವೃದ್ಧಿಗೆ ಸಂಬಂಧಿಸಿದ ಪ್ರಧಾನ ವಿಷಯ ಹಾಗೂ ಉಪಭಾಗಗಳನ್ನು ವಿಸ್ತೃತವಾಗಿ ಬೋಧಿಸುವುದು. ಹೀಗೆ ಬೋಧಿಸುವಾಗ ಗಮನವನ್ನು ದತ್ತಾಂಶದ ವಿವರಣೆ, ಇತ್ತೀಚಿನ ನೀತಿ ಮತ್ತು ಕಾರ್ಯಕ್ರಮಗಳ ವಿಶ್ಲೇಷಣೆ ಮತ್ತು ಪ್ರಾಯೋಗಿಕ ಅಧ್ಯಯನಗಳಿಗೆ ನೀಡುವುದು. ವರ್ಷದ ಕೊನೆಯೊಳಗೆ ವಿದ್ಯಾರ್ಥಿಯು ಭಾರತದ ಆರ್ಥಿಕತೆ ಕುರಿತಂತೆ ವಿಸ್ತೃತವಾದ ಜ್ಞಾನವನ್ನು ಸಂಪಾದಿಸುವಂತಾಗಬೇಕು.

ಆ. ಮನನ

ಬೆಳವಣಿಗೆ ಪ್ರಮಾಣ ಹಾಗೂ ಅಭಿವೃದ್ಧಿ ಸೂಚಿಗಳನ್ನು ರಚಿಸುವ ಕುಶಲತೆಯನ್ನು ತಿಳಿಸುವುದು. ಇದಕ್ಕಾಗಿ ಆನುಷಂಗಿಕ ಮೂಲದ ದತ್ತಾಂಶಗಳನ್ನು ಬಳಸುವುದು. ಇದಕ್ಕಾಗಿ ಚಿಕ್ಕ ಗಣಕಯಂತ್ರ ಬಳಸುವುದು. ಇಂಟರ್‌ನೆಟ್ ಮೂಲಕ ರಾಷ್ಟ್ರೀಯ ಹಾಗೂ ಜಾಗತಿಕ ಮಟ್ಟದ ಮಾಹಿತಿಯನ್ನು ಸಂಗ್ರಹಿಸುವ ಕುಶಲತೆಯನ್ನು ವಿದ್ಯಾರ್ಥಿಗಳಲ್ಲಿ ಬೆಳೆಸುವುದು.

ಇ. ಅನ್ವಯಿಕತೆ

ಅಧ್ಯಯನ ಯೋಜನೆ ಮತ್ತು ಹೊಣೆಗಳ ಮೂಲಕ ಅಭಿವೃದ್ಧಿಗೆ ಸಂಬಂಧಿಸಿದ ಪರಿಭಾವನೆಗಳನ್ನು ಸ್ಥಳೀಯ ಸಂದರ್ಭಕ್ಕೆ ಅನ್ವಯಿಸುವ ತರಬೇತಿ ನೀಡುವುದು. ಕಾಲೇಜುಗಳಲ್ಲಿ ಬೋಧನೆಯ ಸಂದರ್ಭದಲ್ಲಿ ಮಾಹಿತಿ ತಂತ್ರಜ್ಞಾನವನ್ನು ಪರಿಣಾಮಕಾರಿಯಾಗಿ ಬಳಸುವುದು.

ಈ. ಸಮಾಜ ಮತ್ತು ಜ್ಞಾನಶಿಸ್ತುವಿನ ಬಗ್ಗೆ ದೃಷ್ಟಿಕೋನ

ಭಾರತದ ಆರ್ಥಿಕತೆಯ ಬಗ್ಗೆ ವಿಸ್ತೃತ ತಿಳುವಳಿಕೆ ಮೂಡಿಸುವುದು. ಆ ಮೂಲಕ ವಿದ್ಯಾರ್ಥಿಗಳು ಆರ್ಥಿಕತೆಯಲ್ಲಿ ಉಂಟಾಗುತ್ತಿರುವ ದೈನಂದಿನ ಬದಲಾವಣೆಗಳನ್ನು ಅರ್ಥ ಮಾಡಿಕೊಳ್ಳುವಂತಾಗಬೇಕು. ಈ ಕ್ರಮಗಳ ಮೂಲಕ ವಿದ್ಯಾರ್ಥಿಗಳು ಜವಾಬ್ದಾರಿಯುತ ಹಾಗೂ ತಿಳುವಳಿಕೆಯುಳ್ಳ ನಾಗರಿಕರಾಗಿ ಬೆಳೆಯುವಂತೆ ಮಾಡುವುದು ಮತ್ತು ಉನ್ನತ ಶಿಕ್ಷಣವನ್ನು ಪ್ರವೇಶಿಸಲು ಸಿದ್ಧವಾಗುವಂತೆ ಮಾಡುವುದು.

# ಅನುಬಂಧ ೨

## ಪ್ರಾಯೋಗಿಕ ಅಧ್ಯಯನ ಯೋಜನೆಗಳು ಮತ್ತು ಹೊಣೆಗಳು

ಕರ್ನಾಟಕದ ಪದವಿಪೂರ್ವ ಶಿಕ್ಷಣ ಇಲಾಖೆಯು ೨೦೦೪-೦೫ನೆಯ ಸಾಲಿಗೆ ನಿಯಮಿಸಿರುವ ಅರ್ಥಶಾಸ್ತ್ರದ ಪಠ್ಯಕ್ರಮದಲ್ಲಿ ಎರಡು ಭಾಗಗಳಿವೆ. ಮೊದಲನೆಯದು ಸೈದ್ಧಾಂತಿಕ ಭಾಗ ಅಥವಾ ತಾತ್ವಿಕ ಭಾಗ. ಎರಡನೆಯದು ಪ್ರಾಯೋಗಿಕ ಭಾಗ ಅಥವಾ ಎಂಫೆರಿಕಲ್ ಭಾಗ. ಸೈದ್ಧಾಂತಿಕ ಭಾಗಕ್ಕೆ ೯೦ ಅಂಕಗಳನ್ನು ಮತ್ತು ಪ್ರಾಯೋಗಿಕ ಭಾಗಕ್ಕೆ ೧೦ ಅಂಕಗಳನ್ನು ನಿಗದಿಪಡಿಸಲಾಗಿದೆ. ಹಿಂದಿನ ಪಠ್ಯಕ್ರಮದಲ್ಲಿ ಇಂತಹ ಪ್ರಾಯೋಗಿಕ ಭಾಗವಿರಲಿಲ್ಲ. ಪ್ರಾಯೋಗಿಕ ಭಾಗವನ್ನು ಅರ್ಥಶಾಸ್ತ್ರಕ್ಕೆ ನಿಯಮಿಸಿ ಪದವಿಪೂರ್ವ ಶಿಕ್ಷಣ ಇಲಾಖೆಯ ಕ್ರಮವು ಶ್ಲಾಘನೀಯವಾದುದಾಗಿದೆ. ಬೋಧನೆ ಮತ್ತು ಕಲಿಕೆಗೆ ಇದು ಹೊಸ ಆಯಾಮವೊಂದನ್ನು ನೀಡಿದೆ. ಕಲಾ ವಿದ್ಯಾರ್ಥಿಗಳಿಗೆ ಪ್ರಾಯೋಗಿಕ ಭಾಗವನ್ನು ನಿಯಮಿಸಿರುವುದು ಕರ್ನಾಟಕಕ್ಕೆ ಸಂಬಂಧಿಸಿದಂತೆ ಅತ್ಯಂತ ವಿನೂತನ ಕ್ರಮವಾಗಿದೆ.

ಈ ಪ್ರಾಯೋಗಿಕ ಭಾಗವನ್ನು ವಿದ್ಯಾರ್ಥಿಗಳು ಹೇಗೆ ನಿರ್ವಹಿಸಬೇಕು ಮತ್ತು ಅಧ್ಯಾಪಕರಿಂದ ಯಾವ ಬಗೆಯ ನಿರ್ದೇಶಕ ಮತ್ತು ಮಾರ್ಗದರ್ಶನ ಪಡೆಯಬೇಕು ಎಂಬುದರ ಸ್ಥೂಲ ವಿವರಣೆಯನ್ನು ಇಲ್ಲಿ ನೀಡಲಾಗಿದೆ. ಪ್ರತಿ ಅಧ್ಯಾಯಕ್ಕೆ ಸಂಬಂಧಿಸಿ ದಂತೆ ಯಾವ ಪ್ರಾಯೋಗಿಕ ಅಧ್ಯಯನ ಯೋಜನೆಗಳನ್ನು ಕೈಗೊಳ್ಳಬಹುದು ಎಂಬ ಒಂದು ಪಟ್ಟಿಯನ್ನು ಇಲ್ಲಿ ನೀಡಲಾಗಿದೆ. ಇದು ವಿದ್ಯಾರ್ಥಿ ಸಮುದಾಯಕ್ಕೆ ಉಪಯೋಗವಾಗುತ್ತದೆ ಎಂದು ನಂಬಲಾಗಿದೆ. ಇಲ್ಲಿ ನೀಡಿರುವ ಪಟ್ಟಿಯು ಅಂತಿಮ ವಾದುದೇನಲ್ಲ. ಇದೊಂದು ಸೂಚಿಫಲಕವೆಂದು ತಿಳಿದರೆ ಸಾಕು. ಸೃಜನಶೀಲವಾದ ವಿದ್ಯಾರ್ಥಿಗಳು ಮತ್ತು ಅಧ್ಯಾಪಕರು ಬೇರೆ ರೀತಿಯಲ್ಲಿ ಪ್ರಾಯೋಗಿಕ ಅಧ್ಯಯನ ಯೋಜನೆಗಳನ್ನು ರೂಪಿಸಿಕೊಳ್ಳಬಹುದು.

ಸೈದ್ಧಾಂತಿಕ/ತಾತ್ವಿಕವಾದ ಸಂಗತಿಗಳು ಮತ್ತು ಅವುಗಳನ್ನು ಕುರಿತ ಚರ್ಚೆ ಮೂಲತಃ ಅಮೂರ್ತವಾಗಿರುತ್ತವೆ. ಪ್ರತಿಯೊಂದು ಜ್ಞಾನಶಿಸ್ತುವಿನಲ್ಲಿ ಸಿದ್ಧಾಂತಗಳಿರುತ್ತವೆ, ನಿಯಮ ಗಳಿರುತ್ತವೆ, ತತ್ವಗಳಿರುತ್ತವೆ. ಈ ನಿಯಮ, ತತ್ವ ಸಿದ್ಧಾಂತಗಳು ಆಚರಣೆಯಲ್ಲಿ ಹೇಗಿರುತ್ತವೆ ಎಂಬುದನ್ನು ತಿಳಿಯುವುದು ತುಂಬಾ ರೋಚಕವಾಗಿರುತ್ತದೆ. ಇಂತಹ

ಕ್ರಮದಿಂದ ಅಮೂರ್ತವಾದ ತತ್ವ-ನಿಯಮ-ಸಿದ್ಧಾಂತಗಳನ್ನು ವಿದ್ಯಾರ್ಥಿಗಳು ಸುಲಭವಾಗಿ ಅರ್ಥಮಾಡಿಕೊಳ್ಳಬಹುದು ಮತ್ತು ಮನನ ಮಾಡಿಕೊಳ್ಳಬಹುದು.

ಸಿದ್ಧಾಂತಗಳು ಆಚರಣೆಯಲ್ಲಿ ಯಾವ ಸ್ವರೂಪ ತಳೆಯುತ್ತವೆ ಎಂಬುದು ತುಂಬಾ ಕುತೂಹಲಕಾರಿಯಾದ ಸಂಗತಿಯಾಗಿದೆ. ಇಂತಹ ಕ್ರಮದಿಂದ ಸೈದ್ಧಾಂತಿಕತೆ ಹಾಗೂ ಪ್ರಾಯೋಗಿಕತೆಗಳು ನಡುವೆ ಅನುಸಂಧಾನ ಸಾಧ್ಯವಾಗುತ್ತದೆ. ಸಿದ್ಧಾಂತಗಳನ್ನು ಕುರಿತಂತೆ ವಿದ್ಯಾರ್ಥಿಗಳು ಯೋಚಿಸುವುದು-ಚಿಂತಿಸುವುದು ಇದರಿಂದ ಸಾಧ್ಯವಾಗುತ್ತದೆ. ಇದು ವಿದ್ಯಾರ್ಥಿಗಳಲ್ಲಿ ವಿಶ್ಲೇಷಣಾ ಕೌಶಲ್ಯವನ್ನು ಬೆಳೆಸುತ್ತದೆ. ಅರ್ಥಶಾಸ್ತ್ರದ ಪಠ್ಯಕ್ರಮದ ಮೂಲ ಉದ್ದೇಶ ಕೇವಲ ಜ್ಞಾನ ಸಂಪಾದನೆಯಷ್ಟೇ ಅಲ್ಲ. ಆರ್ಥಿಕ ಸಿದ್ಧಾಂತಗಳ ಅನ್ವಯಿಕ ಸ್ವರೂಪವನ್ನು ತಿಳಿದುಕೊಳ್ಳಬೇಕಾಗುತ್ತದೆ. ಈ ಎಲ್ಲ ಉದ್ದೇಶದಿಂದ ಪ್ರಾಯೋಗಿಕ ಯೋಜನೆ ಭಾಗವನ್ನು ಪಠ್ಯಕ್ರಮದಲ್ಲಿ ಸೇರಿಸಲಾಗಿದೆ. ಪ್ರಾಯೋಗಿಕ ಅಧ್ಯಯನ ಯೋಜನೆಯಲ್ಲಿ ಭಾಗವಹಿಸುವುದರಿಂದ ಅಧ್ಯಯನದಲ್ಲಿ ಒಂದು ಬಗೆಯ ಶಿಸ್ತು ಅಥವಾ ಕಟ್ಟುಪಾಡು ವಿದ್ಯಾರ್ಥಿಗಳಿಗೆ ಪ್ರಾಪ್ತವಾಗುತ್ತದೆ. ಈ ಬಗೆಯ ಕಾರ್ಯದಿಂದ ವಿದ್ಯಾರ್ಥಿಗಳು ಮತ್ತು ಅಧ್ಯಾಪಕರ ನಡುವೆ ಚರ್ಚೆ, ವಿಚಾರ ವಿನಿಮಯ ಅನಿವಾರ್ಯವಾಗುತ್ತದೆ. ಇಲ್ಲಿ ಅಧ್ಯಯನವು ಏಕಮುಖಿಯಾಗುವುದಿಲ್ಲ. ಇಲ್ಲಿ ವಿದ್ಯಾರ್ಥಿಗಳು ಕೇವಲ ಕೇಳುವ ಶ್ರೋತೃಗಳಲ್ಲ. ಕೇಳಿದ್ದನ್ನು, ತಿಳಿದುಕೊಂಡಿದ್ದನ್ನು ಪ್ರಮಾಣಿಸಿ ನೋಡುವ ಪ್ರಯೋಗಶೀಲರೂ ಹೌದು. ಪ್ರಾಯೋಗಿಕ ಯೋಜನೆಗಳಿಗೆ ಸಂಬಂಧಿಸಿದಂತೆ ವಿದ್ಯಾರ್ಥಿಗಳು ಅಧ್ಯಯನ ವರದಿಯನ್ನು ಸಿದ್ಧಪಡಿಸಬೇಕಾಗುತ್ತದೆ. ಇದರಿಂದ ವಿದ್ಯಾರ್ಥಿಗಳಿಗೆ ಪ್ರಬಂಧ ಕಲೆಯನ್ನು ರೂಢಿಸಿಕೊಳ್ಳಲು ಅನುಕೂಲವಾಗುತ್ತದೆ.

ಪ್ರತಿ ಅಧ್ಯಯನಕ್ಕೆ ಸಂಬಂಧಿಸಿದಂತೆ ಯಾವ ಯಾವ ಪ್ರಾಯೋಗಿಕ ಅಧ್ಯಯನ ಯೋಜನೆಗಳನ್ನು ಕೈಗೊಳ್ಳಬಹುದು ಎಂಬುದರ ಪಟ್ಟಿಯನ್ನು ಇಲ್ಲಿ ನೀಡಲಾಗಿದೆ. ಈಗಾಗಲೆ ಹೇಳಿರುವಂತೆ ಇದೊಂದು ಪ್ರಾಥಮಿಕವಾದಂತಹ ಮಾರ್ಗಸೂಚಿ. ಹೀಗೆ ಮಾಡಬೇಕು ಎನ್ನುವ ಕಡ್ಡಾಯ ಇಲ್ಲಿಲ್ಲ. ಪ್ರಾಯೋಗಿಕ ಅಧ್ಯಯನ ಯೋಜನೆ ಕುರಿತಂತೆ ಒಂದು ಸ್ಥೂಲ ಚಿತ್ರವನ್ನು ವಿದ್ಯಾರ್ಥಿಗಳಿಗೆ ನೀಡುವುದು ಇಲ್ಲಿನ ಉದ್ದೇಶವಾಗಿದೆ.

## ಅಧ್ಯಯನ ಯೋಜನೆಗಳು

ಪ್ರತಿ ಅಧ್ಯಾಯಕ್ಕೆ ಸಂಬಂಧಿಸಿದಂತೆ ಅಧ್ಯಯನ ಯೋಜನೆಗಳು, ಅವುಗಳನ್ನು ಕೈಗೊಳ್ಳಬೇಕಾದ ವಿಧಾನ, ಅನುಸರಿಸಬೇಕಾದ ಕ್ರಮ ಮತ್ತು ವರದಿಯನ್ನು ಸಿದ್ಧಪಡಿಸುವ ಬಗೆ ಮುಂತಾದ ವಿವರಗಳನ್ನು ಇಲ್ಲಿ ನೀಡಲಾಗಿದೆ.

### ಅಧ್ಯಾಯ ೧

೧. ಸಂಖ್ಯಾಶಾಸ್ತ್ರಕ್ಕೆ ಸಂಬಂಧಿಸಿದ ಸೂಚ್ಯಂಕಗಳನ್ನು ಸೂತ್ರಗಳ ಆಧಾರದ ಮೇಲೆ ರಚಿಸುವುದು ಮತ್ತು ಅವುಗಳ ಉಪಯುಕ್ತತೆಯನ್ನು ವಿವರಿಸುವುದು.

೨. ಸರಳವಾದ ಪರಿಮಾಣಾತ್ಮಕ ಉದಾಹರಣೆಗಳನ್ನು ಬಳಸಿಕೊಂಡು ಮಾನವ ಅಭಿವೃದ್ಧಿ ಸೂಚ್ಯಂಕ ಮತ್ತು ಭೌತಿಕ ಜೀವನ ಗುಣಮಟ್ಟ ಸೂಚ್ಯಂಕವನ್ನು ರಚಿಸುವುದು.

೩. ರಾಷ್ಟ್ರೀಯ ವರಮಾನದ ವಿವರಗಳನ್ನು ಬಳಸಿಕೊಂಡು ಅದರ ಮಾಪನದ ವಿಧಾನವನ್ನು ಉದಾಹರಣೆ ಮೂಲಕ ವಿವರಿಸುವುದು.

**ಅಧ್ಯಾಯ ೨**

೧. ಜನಸಂಖ್ಯೆಯ ಬೆಳವಣಿಗೆ ಪ್ರಮಾಣ ಹಾಗೂ ಅದರ ವಯೋಮಾನ ರಚನೆ ಹಾಗೂ ಲಿಂಗ ಪರಿಮಾಣ ಕುರಿತಂತೆ ಚಾರ್ಟುಗಳನ್ನು ಸಿದ್ಧಪಡಿಸುವುದು, ಭಾರತಕ್ಕೆ ಅಥವಾ ಕರ್ನಾಟಕಕ್ಕೆ ಸಂಬಂಧಿಸಿದಂತೆ ಮಕ್ಕಳ ಮತ್ತು ತಾಯಂದಿರ ಆರೋಗ್ಯ ಸೇವಾ ವ್ಯವಸ್ಥೆ ಬಗ್ಗೆ ವಿದ್ಯಾರ್ಥಿಗಳಿಗೆ ಜಾಗೃತಿ ಶಿಬಿರ ಏರ್ಪಡಿಸುವುದು ಮತ್ತು ಅದನ್ನು ಕುರಿತಂತೆ ವರದಿ ಸಿದ್ಧಪಡಿಸುವುದು.

೨. ಪದವಿಪೂರ್ವ ಶಿಕ್ಷಣದ ನಂತರ ವಿದ್ಯಾರ್ಥಿಗಳಿಗೆ ಲಭ್ಯವಿರುವ ಉನ್ನತ ಶಿಕ್ಷಣದ ಅವಕಾಶಗಳು ಹಾಗೂ ಸ್ವಯಂ ಉದ್ಯೋಗದ ಯೋಜನೆಗಳ ಬಗ್ಗೆ ಪುನರ್ಮನನ ಕಮ್ಮಟವನ್ನು ಏರ್ಪಡಿಸುವುದು ಮತ್ತು ಅದನ್ನು ಕುರಿತಂತೆ ವರದಿ ಸಿದ್ಧಪಡಿಸುವುದು.

೪. ಪ್ರಚಲಿತದಲ್ಲಿರುವ ಬಡತನ ನಿವಾರಣಾ ಕಾರ್ಯಕ್ರಮಗಳು ಹಾಗೂ ಉದ್ಯೋಗ ಒದಗಿಸುವ ಕಾರ್ಯಕ್ರಮಗಳ ವಿವರವನ್ನು ಕುರಿತಂತೆ ವರದಿಯನ್ನು ತಯಾರಿಸುವುದು.

**ಅಧ್ಯಾಯ ೩**

೧. ಭಾರಿ ಹಾಗೂ ವಿವಿದ್ಧೋದ್ದೇಶ ನೀರಾವರಿ ಯೋಜನೆಗಳು ನಿರ್ಮಾಣಗೊಂಡಿರುವ ಸ್ಥಳ, ನೀರಾವರಿ ಪ್ರದೇಶ ಮತ್ತು ಒಣಭೂಮಿ ಬೇಸಾಯದ ಭೂಪ್ರದೇಶ ಕುರಿತಂತೆ ವರದಿ.

೨. ಸ್ಥಳೀಯ ನೀರಾವರಿ ಯೋಜನೆಗೆ ಭೇಟಿ ನೀಡುವುದು ಮತ್ತು ಅದರ ಬಗ್ಗೆ ವರದಿ ಸಿದ್ಧಪಡಿಸುವುದು.

೩. ಸಾರ್ವಜನಿಕ ವಿತರಣಾ ವ್ಯವಸ್ಥೆ ಕಾರ್ಯವನ್ನು ಪರಿಚಯಿಸಿಕೊಳ್ಳಲು ಸ್ಥಳೀಯ ನ್ಯಾಯಬೆಲೆ ಅಂಗಡಿಗೆ ಭೇಟಿ ಕೊಡುವುದು ಮತ್ತು ಅದರ ಕಾರ್ಯವೈಖರಿ ಬಗ್ಗೆ ವರದಿ ಸಿದ್ಧಪಡಿಸುವುದು.

೪. ವಿಜ್ಞಾನ ಮತ್ತು ತಂತ್ರಜ್ಞಾನವನ್ನು ಅಳವಡಿಸಿಕೊಳ್ಳುವ ಬಗೆಯನ್ನು ಪರಿಚಯಿಸಿಕೊಳ್ಳಲು ಕೃಷಿ ವಿಶ್ವವಿದ್ಯಾಲಯಕ್ಕೆ ಭೇಟಿ ನೀಡುವುದು ಮತ್ತು ಅದರ ಬಗ್ಗೆ ವರದಿ ಸಿದ್ಧಪಡಿಸುವುದು.

ಅಧ್ಯಾಯ ೪

೧. ಸಣ್ಣ ಪ್ರಮಾಣದ ಉದ್ದಿಮೆಗೆ ಭೇಟಿ ನೀಡುವುದು ಹಾಗೂ ಅದರ ಕಾರ್ಯವಿಧಾನ ಮತ್ತು ಸಮಸ್ಯೆಗಳನ್ನು ಅಧ್ಯಯನ ಮಾಡುವುದು.
೨. ಸ್ಥಳೀಯವಾಗಿ ನೆಲೆಗೊಂಡಿರುವ ಸಣ್ಣ ಪ್ರಮಾಣದ ಉದ್ದಿಮೆಗಳ ಒಂದು ಪಟ್ಟಿಯನ್ನು ಸಿದ್ಧಪಡಿಸುವುದು.
೩. ರಾಜ್ಯದ ಕೈಗಾರಿಕಾ ನೀತಿ ಹಾಗೂ ಕೈಗಾರಿಕಾ ಕಾರ್ಯಕ್ರಮಗಳನ್ನು ತಿಳಿದುಕೊಳ್ಳಲು ಅನುಕೂಲವಾಗುವಂತೆ ಜಿಲ್ಲಾ ಕೈಗಾರಿಕಾ ಕೇಂದ್ರದಲ್ಲಿ ಸಂವಾದ ಕಾರ್ಯಕ್ರಮ ಏರ್ಪಡಿಸುವುದು.
೪. ಭಾರತದಲ್ಲಿ ಬೃಹತ್ ಕೈಗಾರಿಕೆಗಳು ನೆಲೆಗೊಂಡಿರುವ ಸ್ಥಳಗಳ ಒಂದು ಚಿತ್ರವನ್ನು ರಚಿಸುವುದು.

ಅಧ್ಯಾಯ ೫

೧. ಸ್ಥಳೀಯವಾಗಿ ಮಹಿಳಾ ಮತ್ತು ಪುರುಷ ಕೃಷಿ ಕಾರ್ಮಿಕರ ಕೂಲಿ ಪ್ರಮಾಣದ ಮಾಹಿತಿಯನ್ನು ಸಂಗ್ರಹಿಸುವುದು.
೨. ಸ್ಥಳೀಯವಾಗಿ ಪ್ರಚಲಿತದಲ್ಲಿರುವ ಗುತ್ತಿಗೆ ಕಾರ್ಮಿಕ ಪದ್ಧತಿಯ ವಿವರವನ್ನು ಸಂಗ್ರಹಿಸುವುದು.
೩. ಮಹಿಳಾ ಸ್ವಸಹಾಯ ಗುಂಪು ಹೇಗೆ ಕೆಲಸ ಮಾಡುತ್ತದೆ ಎಂಬುದನ್ನು ತಿಳಿದುಕೊಳ್ಳಲು ಸ್ಥಳೀಯವಾದ ಒಂದು ಗುಂಪಿಗೆ ಭೇಟಿ ಕೊಡುವುದು.
೪. ಸ್ಥಳೀಯವಾಗಿ ಕಂಡುಬರುವ ಬಾಲಕಾರ್ಮಿಕರ ಸಮಸ್ಯೆಗಳನ್ನು ಕುರಿತಂತೆ ಅಧ್ಯಯನ ವರದಿ ಸಿದ್ಧಪಡಿಸುವುದು.

ಅಧ್ಯಾಯ ೬

೧. ಸ್ಥಳೀಯ ದೂರ ಸಂಪರ್ಕ ಕೇಂದ್ರ, ಅಂಚೆ ಕಚೇರಿ, ದೂರ ಸಂಪರ್ಕ ವಿನಿಮಯ ಕೇಂದ್ರಕ್ಕೆ ಭೇಟಿ ನೀಡುವುದು, ಅವುಗಳ ಕಾರ್ಯವಿಧಾನವನ್ನು ಪರಿಶೀಲಿಸುವುದು.
೨. ಸ್ಥಳೀಯವಾಗಿ ಕೃಷಿ, ಕೈಗಾರಿಕೆ ಮತ್ತು ಸೇವಾಕ್ಷೇತ್ರಗಳಲ್ಲಿ ವಿದ್ಯುತ್ ಬಳಕೆಯಾಗುತ್ತಿರುವ ರೀತಿಯನ್ನು ಕುರಿತಂತೆ ಅಧ್ಯಯನ ವರದಿ ಸಿದ್ಧಪಡಿಸುವುದು.
೩. ವಾಣಿಜ್ಯ ಬ್ಯಾಂಕು ಹೇಗೆ ಕೆಲಸ ಮಾಡುತ್ತದೆ ಎಂಬುದನ್ನು ತಿಳಿದುಕೊಂಡು, ಅದರ ಬಗ್ಗೆ ಅಧ್ಯಯನ ಯೋಜನೆ ಸಿದ್ಧಪಡಸಲು ಅನುಕೂಲವಾಗುವಂತೆ ವಿದ್ಯಾರ್ಥಿಗಳು ಮತ್ತು ಬ್ಯಾಂಕ್ ಅಧಿಕಾರಿಗಳ ನಡುವೆ ಸಂವಾದ ಕಾರ್ಯಕ್ರಮ ಏರ್ಪಡಿಸುವುದು.
೪. ಭಾರತದ ಬಂದರುಗಳು ಹಾಗೂ ರೈಲು ವಲಯಗಳನ್ನು ಕುರಿತಂತೆ ನಕ್ಷೆಯನ್ನು ಸಿದ್ಧಪಡಿಸುವುದು.

ಅಧ್ಯಾಯ ೭

೧. ಮುಕ್ತ ವ್ಯಾಪಾರದ ಸ್ವರೂಪ, ವ್ಯಾಪಾರಿ ಶಿಲ್ಕು ಕೊರತೆ ಮತ್ತು ಚಾಲ್ತಿ ಖಾತೆ ಕೊರತೆ ಕುರಿತಂತೆ ವಿವರಗಳನ್ನು ಸಂಗ್ರಹಿಸುವುದು.

೨. ಭಾರತದ ರಫ್ತು ಮತ್ತು ಆಮದು ವ್ಯಾಪಾರದ ಬೆಳವಣಿಗೆ ಪ್ರಮಾಣ, ಅವುಗಳ ಒಳರಚನೆ ಹಾಗೂ ಅವು ತಲುಪುವ ದೇಶಗಳನ್ನು ಕುರಿತಂತೆ ವರದಿ ತಯಾರಿಸುವುದು.

ಅಧ್ಯಾಯ ೮

೧. ಭಾರತ ಸರ್ಕಾರದ ರೆವಿನ್ಯೂ ಕೊರತೆ, ಕೊಶೀಯ ಕೊರತೆ ಮತ್ತು ಪ್ರಾಥಮಿಕ ಕೊರತೆಗಳನ್ನು ಲೆಕ್ಕ ಹಾಕುವುದು.

೨. ಇತ್ತೀಚಿನ ಕೇಂದ್ರ ಬಜೆಟ್ ಕುರಿತಂತೆ ಚರ್ಚೆಯೊಂದನ್ನು ಏರ್ಪಡಿಸುವುದು.

೩. ಇತ್ತೀಚಿನ ಕೇಂದ್ರ ಬಜೆಟ್‌ನ ರೆವಿನ್ಯೂ ಮೂಲಗಳು ಹಾಗೂ ವೆಚ್ಚದ ಬಾಬ್ತುಗಳು ಕುರಿತಂತೆ ಪೈ ನಕ್ಷೆಯನ್ನು ಸಿದ್ಧಪಡಿಸುವುದು.

೪. ಸ್ಥಳೀಯ ಪಂಚಾಯತಿ ಅಥವಾ ಪುರಸಭೆಗೆ ಭೇಟಿ ನೀಡುವುದು ಮತ್ತು ಅದರ ಕಾರ್ಯ ಸ್ವರೂಪದ ಬಗ್ಗೆ ವರದಿ ರಚಿಸುವುದು.

ಅಧ್ಯಾಯ ೯

೧. ಒಂಭತ್ತನೆಯ ಪಂಚವಾರ್ಷಿಕ ಯೋಜನೆಯ ಕಾರ್ಯಸಾಧನೆ ಬಗ್ಗೆ ಪ್ರಬಂಧ ರಚಿಸುವುದು.

೨. ಹತ್ತನೆಯ ಪಂಚವಾರ್ಷಿಕ ಯೋಜನೆಯ ಉದ್ದೇಶ ಕುರಿತಂತೆ ಚರ್ಚೆ ನಡೆಸಿ ಪ್ರಬಂಧ ರಚಿಸುವುದು.

## ಅನುಬಂಧ ೩

# ಎರಡನೆಯ ಪದವಿಪೂರ್ವ ತರಗತಿ ಅರ್ಥಶಾಸ್ತ್ರ
# ಮಾದರಿ ಪ್ರಶ್ನೆಪತ್ರಿಕೆ

ಸಮಯ : ೩ ಗಂಟೆಗಳು ಗರಿಷ್ಠ ಅಂಕಗಳು: ೯೦

**ಸೂಚನೆಗಳು**

೧. ಕಾಗದ ಒಂದು ಮಗ್ಗುಲಲ್ಲಿ ಪ್ರಶ್ನೆಗಳ ಕ್ರಮಸಂಖ್ಯೆಯನ್ನು ಸ್ಪಷ್ಟವಾಗಿ ಬರೆಯಿರಿ. ಉತ್ತರಗಳು ಅನುಕ್ರಮವಾಗಿರಬೇಕು.

### ಭಾಗ - ಅ

**ಕೆಳಗಿನ ಪ್ರಶ್ನೆಗಳಲ್ಲಿ ಪ್ರತಿಯೊಂದಕ್ಕೂ ಒಂದು ವಾಕ್ಯದಲ್ಲಿ ಉತ್ತರಿಸಿ. ೧ x ೧೦ = ೧೦**

೧. ಭೌತಿಕ ಜೀವನ ಗುಣಮಟ್ಟ ಸೂಚ್ಯಂಕದ ವ್ಯಾಖ್ಯೆ ಬರೆಯಿರಿ.

೨. ಜನಗಣತಿ ೨೦೦೧ರ ಪ್ರಕಾರ ಭಾರತದ ಜನಸಂಖ್ಯೆಯ ಎಷ್ಟು ಭಾಗ ಶೇಕಡವಾರು ಕೃಷಿಯನ್ನು ಅವಲಂಬಿಸಿಕೊಂಡಿದ್ದಾರೆ?

೩. ಒಣಭೂಮಿ ಬೇಸಾಯವೆಂದರೇನು?

೪. ಭಾರತದ ಎರಡು ದೊಡ್ಡ ಪ್ರಮಾಣದ ಉದ್ದಿಮೆಗಳ ಹೆಸರು ಬರೆಯಿರಿ.

೫. ಸ್ವಸಹಾಯ ಗುಂಪುಗಳೆಂದರೇನು?

೬. ಕರೆ ಹಣ ಮಾರುಕಟ್ಟೆಯ ಅರ್ಥವನ್ನು ನೀಡಿ.

೭. ಜೈವಿಕ ಅನಿಲವೆಂದರೇನು?

೮. ಭಾರತದ ಪಾವತಿ ಶಿಲ್ಕುವಿನ ಚಾಲ್ತಿ ಖಾತೆಯಲ್ಲಿನ ಪ್ರಮುಖ ಬಾಬ್ತುಗಳನ್ನು ಬರೆಯಿರಿ.

೯. ಭಾರತ ಸರ್ಕಾರದ ಕೊಶೀಯ ಕೊರತೆಯ ಅರ್ಥ ನೀಡಿ.

೧೦. ಭಾರತದಲ್ಲಿ ರಾಷ್ಟ್ರೀಯ ಯೋಜನೆ ಸಿದ್ಧಪಡಿಸುವ ಸಂಸ್ಥೆಯು ಯಾವುದು?

### ಭಾಗ - ಆ

**ಕೆಳಗಿನ ಪ್ರಶ್ನೆಗಳಲ್ಲಿ ಪ್ರತಿಯೊಂದಕ್ಕೆ ನಾಲ್ಕು ವಾಕ್ಯಗಳಲ್ಲಿ ಉತ್ತರ ಬರೆಯಿರಿ. ೨x೧೦=೨೦**

೧೧. ಆರ್ಥಿಕ ಬೆಳವಣಿಗೆ ಮತ್ತು ಆರ್ಥಿಕ ಅಭಿವೃದ್ಧಿ ನಡುವಣ ವ್ಯತ್ಯಾಸಗಳನ್ನು ತಿಳಿಸಿ.

೧೨. ಪೈ ನಕ್ಷೆ ಮತ್ತು ಬಾರ್ ನಕ್ಷೆಗಳ ನಡುವಿನ ವ್ಯತ್ಯಾಸ ತಿಳಿಸಿ.

೧೩. ಮುಕ್ತ ನಿರುದ್ಯೋಗ ಮತ್ತು ಮುಚ್ಚಿದ ನಿರುದ್ಯೋಗಗಳ ನಡುವಣ ಭಿನ್ನತೆಗಳಾವುವು?

೧೪. ಭಾರತದಲ್ಲಿ ಭೂಸವಕಳಿಗೆ ನಾಲ್ಕು ಕಾರಣಗಳನ್ನು ಬರೆಯಿರಿ.

೧೫. ಭಾರತದ ಸಣ್ಣ ಪ್ರಮಾಣದ ಉದ್ದಿಮೆಗಳ ನಾಲ್ಕು ಸಮಸ್ಯೆಗಳನ್ನು ಗುರುತಿಸಿ.

೧೬. ಭಾರತದಲ್ಲಿ ಸಂಘಟಿತ ಮತ್ತು ಅಸಂಘಟಿತ ಕೈಗಾರಿಕಾ ಕಾರ್ಮಿಕರ ನಡುವಿನ ಭಿನ್ನತೆಗಳನ್ನು ತಿಳಿಸಿ.

೧೭. ಭಾರತೀಯ ವಾಣಿಜ್ಯ ಬ್ಯಾಂಕುಗಳಲ್ಲಿ ಎರಡು ಪ್ರಧಾನ ಆದ್ಯತಾ ವಲಯಗಳಾವುವು ತಿಳಿಸಿ.

೧೮. ನಗದು ಮೀಸಲು ಪರಿಮಾಣವೆಂದರೇನು?

೧೯. ಭಾರತದ ರಫ್ತು ವ್ಯಾಪಾರದಲ್ಲಿನ ಪ್ರಾಥಮಿಕ ಸರಕುಗಳ ಒಳರಚನೆಯನ್ನು ವಿವರಿಸಿ.

೨೦. ಟಿಆರ್‌ಐಪಿಎಸ್ ಮತ್ತು ಟಿಆರ್‌ಐಎಮ್‌ಎಸ್ ಇವುಗಳ ವಿಸ್ತೃತ ರೂಪ ಬರೆಯಿರಿ.

೨೧. ಭಾರತ ಸರ್ಕಾರದ ರೆವಿನ್ಯೂ ವೆಚ್ಚ ಮತ್ತು ಬಂಡವಾಳ ವೆಚ್ಚಗಳ ನಡುವಣ ಭಿನ್ನತೆಗಳನ್ನು ತಿಳಿಸಿ.

೨೨. ಭಾರತ ವಾಯುಸಾರಿಗೆ ಕುರಿತಂತೆ ಸುಧಾರಣಾ ಕಾರ್ಯಕ್ರಮಗಳನ್ನು ವಿವರಿಸಿ.

## ಭಾಗ - ಇ

**ಕೆಳಗಿನವುಗಳಲ್ಲಿ ಎಂಟಕ್ಕೆ ಉತ್ತರಿಸಿ. ಪ್ರತಿಯೊಂದು ಪ್ರಶ್ನೆಗೆ ಉತ್ತರ ಹದಿನೈದು ವಾಕ್ಯಗಳಲ್ಲಿರಲಿ.** **೮ x ೫ = ೪೦**

೨೩. ಸುಸ್ಥಿರ ಗತಿ ಅಭಿವೃದ್ಧಿ ಎಂದರೇನು? ಅದರ ಲಕ್ಷಣಗಳಾವುವು?

೨೪. ಭಾರತದ ರಾಷ್ಟ್ರೀಯ ವರಮಾನದಲ್ಲಿ ಪ್ರಾಥಮಿಕ ವಲಯ, ದ್ವಿತೀಯ ವಲಯ ಹಾಗೂ ತೃತೀಯ ವಲಯಗಳ ಪ್ರಮಾಣವನ್ನು ವಿಶ್ಲೇಷಣೆ ಮಾಡಿ.

೨೫. ಭಾರತದಲ್ಲಿ ಪ್ರಸ್ತುತ ಮಹಿಳೆಯರ ಮತ್ತು ಪುರುಷರ ಸಾಕ್ಷರತಾ ಪ್ರಮಾಣ ಎಷ್ಟು ತಿಳಿಸಿ. ಗ್ರಾಮೀಣ ಪ್ರದೇಶದಲ್ಲಿ ಸಾಕ್ಷರತೆ ಪ್ರಮಾಣ ಕೆಳಮಟ್ಟದಲ್ಲಿರುವುದಕ್ಕೆ ಕಾರಣಗಳನ್ನು ವಿವರಿಸಿ.

೨೬. ಭಾರತದ ಆಹಾರ ಸಮಸ್ಯೆಯನ್ನು ಪರಿಹರಿಸುವಲ್ಲಿ ಸಾರ್ವಜನಿಕ ವಿತರಣಾ ವ್ಯವಸ್ಥೆ ಯಾವ ರೀತಿಯಲ್ಲಿ ನೆರವಾಗುತ್ತಿದೆ ವಿವರಿಸಿ.

೨೭. ಹಸಿರುಕ್ರಾಂತಿಗೆ ಕಾರಣವಾದ ಸುಗ್ಗಿಪೂರ್ವ ಮತ್ತು ಸುಗ್ಗಿನಂತರದ ತಂತ್ರಜ್ಞಾನವನ್ನು ವಿವರಿಸಿ.

೨೮. ಕೈಗಾರಿಕಾ ವಲಯದ ಸುಧಾರಣೆ ಕುರಿತು ಚರ್ಚಿಸಿರಿ.

೨೯. ಸಣ್ಣಪ್ರಮಾಣದ ಕೈಗಾರಿಕೆಗಳಿಗೆ ಸರ್ಕಾರವು ಯಾವ ರೀತಿಯಲ್ಲಿ ಹಣಕಾಸು ಹಾಗೂ ಮಾರುಕಟ್ಟೆ ನೆರವನ್ನು ನೀಡುತ್ತಿದೆ?

೩೦. ಕೃಷಿಕಾರ್ಮಿಕರ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗತಿ ವಿವರಿಸಿ.

೩೧. ಆರ್ಥಿಕ ಅಭಿವೃದ್ಧಿಯಲ್ಲಿ ರಸ್ತೆ ಸಾರಿಗೆಯ ಮಹತ್ವವನ್ನು ವಿವರಿಸಿ.

೩೨. ಸಂಪರ್ಕವೆಂದರೇನು? ಭಾರತದಲ್ಲಿರುವ ವಿವಧ ಬಗೆಯ ಸಂಪರ್ಕ ಮಾಧ್ಯಮಗಳನ್ನು ವಿವರಿಸಿ.

೩೩. ಭಾರತ ಸರ್ಕಾರದ ತೆರಿಗೆ ಮೂಲಗಳಾವುವು ವಿವರಿಸಿ.

೩೪. ಭಾರತದ ಒಂಬತ್ತನೆ ಪಂಚವಾರ್ಷಿಕ ಯೋಜನೆಯ ಉದ್ದೇಶಗಳನ್ನು ವಿವರಿಸಿ.

### ಭಾಗ - ಈ

**ಕೆಳಗಿನವುಗಳನ್ನು ಎರಡಕ್ಕೆ ಉತ್ತರಿಸಿ. ಪ್ರತಿಯೊಂದು ಪ್ರಶ್ನೆಗೆ ಉತ್ತರ ನಲವತ್ತು ವಾಕ್ಯಗಳಲ್ಲಿರಲಿ.** **೨ x ೧೦ = ೨೦**

೩೫. ಭಾರತದಲ್ಲಿ ಉದ್ಯೋಗ ನಿರ್ಮಿಸುವ ಕಾರ್ಯಕ್ರಮಗಳು ಮತ್ತು ಬಡತನ ನಿವಾರಣಾ ಕಾರ್ಯಕ್ರಮಗಳನ್ನು ವಿವರಿಸಿ.

೩೬. ಭಾರತೀಯ ರಿಸರ್ವ್ ಬ್ಯಾಂಕಿನ ಕಾರ್ಯಗಳನ್ನು ವಿವರಿಸಿ.

೩೭. ಭಾರತದಲ್ಲಿ ರಫ್ತು ಪ್ರೋತ್ಸಾಹಕ್ಕೆ ತೆಗೆದುಕೊಂಡ ಕ್ರಮಗಳು ಹಾಗೂ ಆಮದು ಉದಾರೀಕರಣದ ಕ್ರಮಗಳನ್ನು ವಿವರಿಸಿ.

೩೮. ಭಾರತದ ಕೋಶೀಯ ನೀತಿಯ ಅರ್ಥ ಮತ್ತು ಉದ್ದೇಶಗಳನ್ನು ವಿವರಿಸಿ.

# ಅನುಬಂಧ ೪

## ಪರೀಕ್ಷೆಯ ವಿಧಾನ ಮತ್ತು ಪ್ರಶ್ನೆಪತ್ರಿಕೆಯ ನೀಲಿ ನಕಾಶೆ

ಪರೀಕ್ಷಾ ವಿಧಾನಕ್ಕೆ ಸಂಬಂಧಿಸಿದಂತೆ ಪದವಿಪೂರ್ವ ಶಿಕ್ಷಣ ಇಲಾಖೆಯು ಈ ಕೆಳಗಿನ ಮಾರ್ಗದರ್ಶಿಸೂತ್ರಗಳನ್ನು ನೀಡಿರುತ್ತದೆ.

* ವಾರ್ಷಿಕ ಪರೀಕ್ಷೆ : ೯೦ ಅಂಕಗಳು - ಸಿದ್ಧಾಂತ ಆಧಾರಿತ.

* ಆಂತರಿಕ ಮೌಲ್ಯಮಾಪನ : ೧೦ ಅಂಕಗಳು - ಪ್ರಾಯೋಗಿಕ ಕಾರ್ಯಯೋಜನೆಗಳು ಮತ್ತು ಹೊಣೆಗಳು.

ಸಿದ್ಧಾಂತ ಆಧಾರಿತ ಪರೀಕ್ಷೆಯ ರಚನಾ ವಿನ್ಯಾಸ : ಒಟ್ಟು ೯೦ ಅಂಕಗಳು

| ಭಾಗ | ನೀಡುವ ಪ್ರಶ್ನೆಗಳು | ಉತ್ತರಿಸಬೇಕಾದ ಪ್ರಶ್ನೆಗಳು | ಅಂಕಗಳು |
|---|---|---|---|
| ಅ | ೧೦ | ೧೦ | ೧ x ೧೦ = ೧೦ |
| ಆ | ೧೨ | ೧೦ | ೨ x ೧೦ = ೨೦ |
| ಇ | ೧೨ | ೮ | ೫ x ೧೦ = ೪೦ |
| ಈ | ೪ | ೨ | ೨ x ೧೦ = ೨೦ |

ಅಂತರಿಕ ಮೌಲ್ಯಮಾಪನದ ೧೦ ಅಂಕಗಳು ಪ್ರಾಯೋಗಿಕ ಕಾರ್ಯಯೋಜನೆಗಳನ್ನು ಮತ್ತು ಹೊಣೆಗಳನ್ನು ಆಧರಿಸಿರುತ್ತವೆ.

ಮಾದರಿ ಪ್ರಶ್ನೆ ಪತ್ರಿಕೆಯ ನೀಲಿ ನಕಾಶೆ - ಎರಡನೆಯ ಪಿ.ಯು.ಸಿ ಅರ್ಥಶಾಸ್ತ್ರ

## ಎರಡನೆಯ ವರ್ಷದ ಪದವಿಪೂರ್ವ ಅರ್ಥಶಾಸ್ತ್ರ ಮಾದರಿ ಪ್ರಶ್ನೆಪತ್ರಿಕೆ

## ನೀಲಿ ನಕಾಶೆ

ಅವಧಿ : ಮೂರು ಗಂಟೆಗಳು — ಗರಿಷ್ಟ ಅಂಕಗಳು : ೮೦

| ಅಧ್ಯಾಯಗಳು | ಬೋಧನೆಯ ಕಾಲಾವಧಿ | ಜ್ಞಾನ | | | | ಅರಿವು-ಮನನ | | | | ಅನ್ವಯಿಕತೆ | | | | ಕೌಶಲ್ಯ | | | | ಒಟ್ಟು |
|---|---|---|---|---|---|---|---|---|---|---|---|---|---|---|---|---|---|---|
| | ಗಂಟೆಗಳಲ್ಲಿ | ಅಸಪ್ರ | ಸಪ್ರ | ದೊಪ್ರ | ಪ್ರಪ್ರ | ಅಸಪ್ರ | ಸಪ್ರ | ದೊಪ್ರ | ಪ್ರಪ್ರ | ಅಸಪ್ರ | ಸಪ್ರ | ದೊಪ್ರ | ಪ್ರಪ್ರ | ಅಸಪ್ರ | ಸಪ್ರ | ದೊಪ್ರ | ಪ್ರಪ್ರ | |
| ೧ | ೧೬ | ೧ | -- | -- | -- | -- | -- | ೧ | -- | -- | ೧ | -- | -- | ೧ | ೧ | -- | -- | ೧೫ |
| ೨ | ೧೧ | ೧ | -- | -- | -- | -- | -- | ೧ | ೧ | -- | ೧ | -- | -- | -- | -- | -- | -- | ೧೮ |
| ೩ | ೧೦ | -- | -- | -- | -- | ೧ | ೧ | ೧ | -- | -- | -- | ೧ | -- | -- | -- | -- | -- | ೧೩ |
| ೪ | ೯ | ೧ | -- | -- | -- | -- | ೧ | ೧ | -- | -- | -- | ೧ | -- | -- | -- | -- | -- | ೧೩ |
| ೫ | ೧೧ | ೧ | -- | -- | -- | -- | -- | -- | -- | -- | ೧ | ೧ | -- | -- | -- | -- | -- | ೮ |
| ೬ | ೧೯ | ೧ | ೨ | ೧ | -- | ೧ | ೧ | ೧ | ೧ | -- | -- | -- | -- | -- | -- | -- | -- | ೨೮ |
| ೭ | ೧೨ | -- | ೨ | -- | -- | ೧ | -- | -- | -- | -- | -- | -- | ೧ | -- | -- | -- | -- | ೧೫ |

| | | | | | | | | | | | | | | | | | | |
|---|---|---|---|---|---|---|---|---|---|---|---|---|---|---|---|---|---|---|
| ೫ | ೧೦ | – | – | – | – | ೧ | – | ೧ | ೧ | – | ೧ | – | – | – | – | – | – | ೧೮ |
| ೬ | ೪ | ೧ | – | – | – | – | – | ೧ | – | – | – | – | – | – | – | – | – | ೬ |
| ಒಟ್ಟು | ೧೦೨ | ೬ | ೪ | ೧ | – | ೪ | ೩ | ೭ | ೩ | – | ೪ | ೩ | ೧ | – | ೧ | ೧ | – | ೧೩೪ |

ಟಿಪ್ಪಣಿ

ಅಸಪ್ರ = ಅತಿ ಸಣ್ಣ ಪ್ರಶ್ನೆಗಳು. ತಲಾ ಒಂದು ಅಂಕಗಳು.

ಸಪ್ರ = ಸಣ್ಣ ಪ್ರಶ್ನೆ. ತಲಾ ೨ ಅಂಕಗಳು.

ದೊಪ್ರ = ದೊಡ್ಡ ಪ್ರಶ್ನೆ. ತಲಾ ಐದು ಅಂಕಗಳು.

ಪ್ರ.ಪ್ರ = ಪ್ರಬಂಧ ಮಾದರಿ ಪ್ರಶ್ನೆ. ತಲಾ ಹತ್ತು ಅಂಕಗಳು.

# ಅನುಬಂಧ ೫

## ಆಕರ ಗ್ರಂಥಗಳು


**ಇಂಗ್ಲಿಷ್ ಮಾಧ್ಯಮದ ಕೃತಿಗಳು**

ವಿವೇಕ್ ಕೆ. ಅಗ್ನಿಹೊತ್ತಿ ಮತ್ತು ಎಚ್. ರಾಮಚಂದ್ರನ್, ಡೈಮೆನ್ಷನ್ಸ್ ಆಫ್ ಅದಿ ನ್ಯೂ ಎಕಾನಾಮಿಕ್ ಪಾಲಿಸಿ, ಸಂ. ೨, ಆರ್ಥಿಕ ವಲಯ, ಸಂ.೨, ಸಾಮಾಜಿಕ ವಲಯ, ಕಾನ್ಸೆಪ್ಟ್ ಪಬ್ಲಿಷಿಂಗ್ ಕಂಪನಿ, ನವದೆಹಲಿ

ಅಗರವಾಲ ಎ.ಎನ್., ಇಂಡಿಯನ್ ಎಕಾನಮಿ, ಇನ್‌ಟರ್ ನ್ಯಾಷನಲ್ ರಸ್ಮ ಬ್ಯೂಟರ್ಸ್, ನವದೆಹಲಿ

ಚೌಬೆ ಪಿ.ಕೆ., ಇಂಡಿಯನ್ ಎಕಾನಾಮಿಕ ಡೆವಲಪ್‌ಮೆಂಟ್, ಎನ್.ಸಿ.ಈ.ಆರ್.ಟಿ. ನವದೆಹಲಿ

ಜೀನ್ ಡ್ರೀಜ್ ಮತ್ತು ಅಮರ್ತ್ಯಸೇನ್, ಇಂಡಿಯಾ: ಡೆವಲಪ್‌ಮೆಂಟ್ ಆಂಡ್ ಪಾರ್ಟಿನಿಪೇಶನ್, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್, ನವದೆಹಲಿ

ಉಮಾ ಕಪಿಲ, ಅಂಡರ್ ಸ್ಟ್ಯಾಂಡಿಂಗ್ ದಿ ಪ್ರಾಬಲಮ್ಸ್ ಆಫ್ ಇಂಡಿಯನ್ ಎಕಾನಮಿ, ಅಕಾಡೆಮಿ ಫೌಂಡೇಶನ್, ನವದೆಹಲಿ

**ಕನ್ನಡ ಮಾಧ್ಯಮದ ಪುಸ್ತಕಗಳು**

ಎ.ಪಿ. ಶ್ರೀನಿವಾಸಮೂರ್ತಿ, ಸಹಕಾರ ತತ್ವಗಳು ಮತ್ತು ಸಮಸ್ಯೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

ಎ.ಪಿ. ಶ್ರೀನಿವಾಸಮೂರ್ತಿ, ಆರ್ಥಿಕಾಭಿವೃದ್ಧಿ - ಕೆಲವು ಸಮಸ್ಯೆಗಳು, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

ಟಿ.ಆರ್. ಚಂದ್ರಶೇಖರ (ಸಂ.), ಭಾರತದ ಆರ್ಥಿಕತೆಯ ಮೂಲಾಂಶಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

ಟಿ.ಆರ್. ಚಂದ್ರಶೇಖರ (ಸಂ.), ಬಜೆಟ್ ಅಧ್ಯಯನ: ೨೦೦೦-೨೦೦೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

ಆರ್‌ಎನ್ ಭಾರ್ಗವ, ಇಂಡಿಯಾ ದೇಶದ ಸಾರ್ವಜನಿಕ ಆಯುವ್ಯಯ, ಅನು. ಡಿ. ಕೃಷ್ಣಯ್ಯಂಗಾರ್, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ಮೈಸೂರು

**ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಪ್ರಮುಖ ಪ್ರಕಟಣೆಗಳು**

ಭಾರತ ಸರ್ಕಾರ, ಆರ್ಥಿಕ ಸಮೀಕ್ಷೆ (ವಾರ್ಷಿಕ)

ಯೋಜನಾ ಆಯೋಗ, ಮಾನವ ಅಭಿವೃದ್ಧಿ ವರದಿ, ೨೦೦೧ (ವಿಶೇಷ)

ಕರ್ನಾಟಕ ಸರ್ಕಾರ, ಆರ್ಥಿಕ ಸಮೀಕ್ಷೆ (ರಾಜ್ಯ-ವಾರ್ಷಿಕ), ಕರ್ನಾಟಕದಲ್ಲಿ ಮಾನವ ಅಭಿವೃದ್ಧಿ, ೧೯೯೯

ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ, ರಿಪೋರ್ಟ್ ಆನ್ ಕರೆನ್ಸಿ ಅಂಡ್ ಫೈನಾನ್ಸ್ (ವಾರ್ಷಿಕ), ರಿಪೋರ್ಟ್ ಆನ್ ಟ್ರೆಂಡ್ಸ್ ಅಂಡ್ ಪ್ರೊಗ್ರೆಸ್ ಆಫ್ ಬ್ಯಾಂಕಿಂಗ್ ಇನ್ ಇಂಡಿಯಾ

ಇಂದಿರಾಗಾಂಧಿ ಇನ್‌ಸ್ಟಿಟ್ಯೂಟ್ ಆಫ್ ಡೆವಲಪ್‌ಮೆಂಟ್ ರಿಸರ್ಚ್, ಇಂಡಿಯಾ ಡೆವಲಪ್‌ಮೆಂಟ್ ರಿಪೋರ್ಟ್ (ವಾರ್ಷಿಕ)

**ಪತ್ರಿಕೆ-ನಿಯತಕಾಲಿಕೆಗಳು**

೧. ಇಕಾನಾಮಿಕ್ ಆಂಡ್ ಪೊಲಿಟಿಕಲ್ ವೀಕ್ಲಿ

೨. ಅಭಿವೃದ್ಧಿ ಅಧ್ಯಯನ (ಅರೆವಾರ್ಷಿಕ) ಕನ್ನಡ ವಿಶ್ವವಿದ್ಯಾಲಯ, ಹಂಪಿ

# ಲೇಖಕರ ವಿವರ


೧. ಡಾ. ಸಿ.ಕೆ. ರೇಣುಕಾರ್ಯ, ವಿಶ್ರಾಂತ ಪ್ರಾಧ್ಯಾಪಕರು, ನಂ.೪ ಗಂಗೋತ್ರಿ ಬಡಾವಣೆ, ಸಾಹುಕಾರ್ ಚನ್ನಯ್ಯ ರಸ್ತೆ, ಸರಸ್ವತಿಪುರಂ, ಮೈಸೂರು ೫೭೦೦೦೭, ಕರ್ನಾಟಕ, ದೂರವಾಣಿ ೦೮೨೧ ೨೨೫೪೪೧೩೭

೨. ಪ್ರೊ. ಉದಯಶಂಕರ, ಪ್ರಾಚಾರ್ಯರು, ಬಾಲಕರ ಸರಕಾರಿ ಪ.ಪೂ.ಕಾಲೇಜು, ತುಮಕೂರು, ಕರ್ನಾಟಕ, ದೂರವಾಣಿ ೦೮೧೬ ೨೩೫೨೦೩೧೮

೩. ಡಾ. ಒಡೆಯರ್ ಡಿ. ಹೆಗ್ಗಡೆ, ಮುಖ್ಯಸ್ಥರು, ಅರ್ಥಶಾಸ್ತ್ರ ಅಧ್ಯಯನ ಸ್ನಾತಕೋತ್ತರ ವಿಭಾಗ, ತೂಬಿನಕೆರೆ, ಮಂಡ್ಯ, ಕರ್ನಾಟಕ, ದೂರವಾಣಿ ೦೮೨೧ ೨೩೫೨೦೩೧೮

೪. ಶ್ರೀಮತಿ ಎನ್. ಅನ್ನಪೂರ್ಣೇಶ್ವರಿ ಹೆಗ್ಗಡೆ, ಪ್ರಾಂಶುಪಾಲರು, ಶ್ರೀಮತಿ ಕೆಂಪದೇವಮ್ಮ ಸರ್ಕಾರಿ ಪದವಿಪೂರ್ವ ಕಾಲೇಜು, ಕಬ್ಬಹಳ್ಳಿ ಅಂಚೆ, ಗುಂಡ್ಲುಪೇಟೆ ತಾಲ್ಲೂಕು, ಚಾಮರಾಜನಗರ ಜಿಲ್ಲೆ, ದೂರವಾಣಿ ೦೮೨೧ ೨೪೬೩೩೪೪೮

೫. ಡಾ. ಬಿ.ಪಿ. ವೀರಭದ್ರಪ್ಪ, ಮುಖ್ಯಸ್ಥರು, ಅರ್ಥಶಾಸ್ತ್ರ ವಿಭಾಗ, ದಾವಣಗೆರೆ ಸ್ನಾತಕೋತ್ತರ ಕೇಂದ್ರ, ಕುವೆಂಪು ವಿಶ್ವವಿದ್ಯಾಲಯ, ದಾವಣಗೆರೆ, ದೂರವಾಣಿ ೦೮೧೯೨ ೨೨೪೯೩೫, ೯೮೪೫೭೮೨೯೨೯

೬. ಡಾ. ಬಿ. ಗೋಪಾಲ್‌ಸಿಂಗ್, ಪ್ರಾಧ್ಯಾಪಕರು, ಅರ್ಥಶಾಸ್ತ್ರ ವಿಭಾಗ, ಸರ್ಕಾರಿ ಪ್ರಥಮ ದರ್ಜೆ ಕಾಲೇಜ್, ಹುಣಸೂರು, ದೂರವಾಣಿ ೯೪೪೮೭೬೯೧೫೮

೭. ಡಾ. ಬಿ. ಪ್ರಭಾಕರ ಶಿಶಿಲ, ಅರ್ಥಶಾಸ್ತ್ರ ಪ್ರಾಧ್ಯಾಪಕರು, ನೆಹರೂ ಮೆಮೋರಿಯಲ್ ಕಾಲೇಜು, ಕುರುಂಜಿಭಾಗ್, ಸುಳ್ಯ, ದ.ಕ ೫೭೪೩೨೭, ಕರ್ನಾಟಕ, ದೂರವಾಣಿ ೦೮೨೫೭ ೬೦೦೬೬೩, ೯೪೪೮೭೨೫೮೧೮

೮. ಡಾ.ಟಿ.ಆರ್. ಚಂದ್ರಶೇಖರ, ಪ್ರವಾಚಕರು, ಅಭಿವೃದ್ಧಿ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, ಹಂಪಿ ೫೮೩೨೭೬, ಬಳ್ಳಾರಿ ಜಿಲ್ಲೆ, ಕರ್ನಾಟಕ, ದೂರವಾಣಿ ೦೮೩೯೪ ೨೯೩೧೧

೯. ಪ್ರೊ.ಎಸ್. ಎನ್. ನಾಯಕ್, ಹಿರಿಯ ಉಪನ್ಯಾಸಕರು, ಹೆಚ್.ಸಿ.ಇ.ಎಸ್. ಪ.ಪೂ. ಕಾಲೇಜು, ಗದಗ ೫೨೨೧೦೩, ಕರ್ನಾಟಕ, ದೂರವಾಣಿ ೫೭೭೬೧೧೫ / ೯೮೪೫೬ ೩೩೦೫೮

೧೦. ಡಾ. ಹೆಚ್.ಆರ್. ಕೃಷ್ಣಯ್ಯಗೌಡ, ಉಪನಿರ್ದೇಶಕರು, ಸಹಕಾರ ಇಲಾಖೆ, ಮಂಡ್ಯ, ದೂರವಾಣಿ ೨೩೦೨೫೫೬, ೯೮೮೦೨೨೬೧೦೨

೧೧. ಡಾ. ಎ.ಸಿ. ರಾಮಕೃಷ್ಣ, ನಿವೃತ್ತ ಪ್ರಾಧ್ಯಾಪಕರು, ಮಹಾರಾಣಿ ಪ್ರಥಮದರ್ಜೆ ಕಾಲೇಜು, ಮೈಸೂರು, ದೂರವಾಣಿ ೦೮೨೧ ೫೨೮೭೭೫೬

೧೨. ಡಾ. ಕೆ.ಸಿ. ರಾಜಶೇಖರ, ಪ್ರವಾಚಕರು, ಜೆ.ಎಸ್.ಎಸ್. ಸ್ನಾತಕೋತ್ತರ ಕೇಂದ್ರ, ಅರ್ಥಶಾಸ್ತ್ರ ವಿಭಾಗ, ಈಜುಕೊಳ ರಸ್ತೆ, ಸರಸ್ವತಿಪುರಂ, ಮೈಸೂರು, ದೂರವಾಣಿ ೦೮೨೧ ೨೩೪೧೦೩೦

೧೩. ಡಾ.ಬಿ.ಎಸ್. ಶ್ರೀಕಂಠಾರಾಧ್ಯರು, ನಿವೃತ್ತ ಅರ್ಥಶಾಸ್ತ್ರ ಪ್ರಾಧ್ಯಾಪಕರು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು, ದೂರವಾಣಿ ೦೮೨೧ ೨೫೪೩೦೩೫

೧೪. ಪ್ರೊ.ಜೆ.ಪಿ. ಪಿಂಜಾರ, ಹಿರಿಯ ಉಪನ್ಯಾಸಕರು, ಎಸ್.ಇ.ಸಿ.ಎ.ಬಿ. ಮಹಿಳಾ ಪ.ಪೂ.ಕಾಲೇಜು, ಬಿಜಾಪುರ, ಕರ್ನಾಟಕ, ದೂರವಾಣಿ ೦೮೩೫೨ ೨೨೯೪೧



ಕನ್ನಡ ವಿಶ್ವವಿದ್ಯಾಲಯದ ಪಠ್ಯಪುಸ್ತಕ ರಚನಾ ಕೇಂದ್ರವು ಸಿದ್ಧಪಡಿಸಿರುವ ಪದವಿಪೂರ್ವ ಶಿಕ್ಷಣದ ಎರಡನೇ ವರ್ಷದ ಅರ್ಥಶಾಸ್ತ್ರ ಪಠ್ಯವನ್ನು ತಮ್ಮ ಮುಂದಿಡಲು ನಮಗೆ ಸಂತೋಷವೆನಿಸುತ್ತದೆ. ಈಗ ಜಾರಿಗೆ ಬಂದಿರುವ ಹೊಸ ಪಠ್ಯಕ್ರಮಕ್ಕೆ ಅನುಗುಣವಾಗಿ ಇದನ್ನು ಸಿದ್ಧಪಡಿಸಲಾಗಿದೆ. ಈ ಪಠ್ಯವನ್ನು ಸಿದ್ಧಪಡಿಸುವ ಕಾರ್ಯದಲ್ಲಿ ನಾಡಿನ ಪ್ರಸಿದ್ಧ ವಿದ್ವಾಂಸರು ಪಾಲುದಾರರಾಗಿದ್ದಾರೆ.

ಈ ಪಠ್ಯವು ನಾಡಿನ ವಿದ್ಯಾರ್ಥಿಗಳಿಗೆ ಉಪಯುಕ್ತವಾಗುತ್ತದೆಂದು ನಾವು ಭಾವಿಸಿದ್ದೇವೆ. ಈ ಪಠ್ಯವನ್ನು ಉಪಯೋಗಿಸುವ ಸಹೃದಯಿಗಳು ಪಠ್ಯದ ಬಗ್ಗೆ ತಮ್ಮ ಅಭಿಪ್ರಾಯವನ್ನು ಕೇಂದ್ರಕ್ಕೆ ಬರೆದು ತಿಳಿಸಿದರೆ ತುಂಬಾ ಉಪಯೋಗವಾಗುತ್ತದೆ. ಮುಂದಿನ ಆವೃತ್ತಿಗಳಲ್ಲಿ ಪಠ್ಯದ ಗುಣಮಟ್ಟವನ್ನು ಇನ್ನೂ ಹೆಚ್ಚು ಉತ್ತಮಪಡಿಸಬಹುದು.

ನಾವು ಪ್ರಕಟಿಸುತ್ತಿರುವ ಪಠ್ಯಗಳಿಗೆ ಪದವಿಪೂರ್ವ ಶಿಕ್ಷಣ ಇಲಾಖೆಯು ಅಧಿಕೃತ ಮನ್ನಣೆ ನೀಡಿ ನಮ್ಮ ಪ್ರಯತ್ನದಲ್ಲಿ ಕೈ ಜೋಡಿಸಿದೆ. ಕರ್ನಾಟಕದ ವಿದ್ಯಾರ್ಥಿ ಬಳಗಕ್ಕೆ ಕನ್ನಡದಲ್ಲಿ ಜ್ಞಾನವು ಉತ್ತಮ ರೀತಿಯಲ್ಲಿ ದೊರೆಯಬೇಕೆಂಬುದು ನಮ್ಮ ಮುಖ್ಯ ಗುರಿಯಾಗಿದೆ. ಈ ದಿಶೆಯಲ್ಲಿ ನಮ್ಮ ಪ್ರಯತ್ನ ನಡೆದಿದೆ. ಇದಕ್ಕೆ ತಮ್ಮ ಆಶೀರ್ವಾದವಿದೆಯೆಂದು ಭಾವಿಸಿದ್ದೇವೆ.

ರೂ. ೧೬೦/-

# ಅರ್ಥಶಾಸ್ತ್ರ